ಕಲಾಗುರು, ಕಾವ್ಯಕರ್ಮಯೋಗಿ

ಜ್ಯೋತಿರ್ಲಿಂಗಾನುಭಾವಿ

ಶ್ರೀ ಸೂರ್ಯ ಸಿಂಹಾಸನಾಧೀಶ್ವರ

## ಶ್ರೀ ಶ್ರೀ ಜ. ಚ. ನಿ. ಅವರ

ಮಹಾಸನ್ನಿಧಿಯಲ್ಲಿ

ಸಮರ್ಪಣೆ!



ಶ್ರೀಮನ್ಮಹಾಮಹಿಮ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
೧೧೦೮ ಜಗದ್ಗುರು ಶ್ರೀ ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು



ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ

೧೧೦ಅ ಜಗದ್ಗುರು ಶ್ರೀ ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು

# ದಾ ಸೋ ಹ

ಸೂರ್ಯಸಿಂಹಾಸನಾಧೀಶ್ವರ
ಶ್ರೀ ಜ. ಚ. ನಿ. ರಜತ ಮಹೋತ್ಸವ
ಸಂಭಾವನಾ ಗ್ರಂಥ

ಬೆಂಗಳೂರು
೧೯೬೭

ಪ್ರಕಾಶಕರು:

ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
**ಶ್ರೀ ಜ. ಚ. ನಿ. ರಜತ ಮಹೋತ್ಸವ**
**ಸಂಭಾವನ ಗ್ರಂಥ ಪ್ರಕಟನಾ ಸಮಿತಿ**
**ಹ. ಬ. ಸಮಾಜ ರಸ್ತೆ-ಬಸವನಗುಡಿ**
ಬೆಂಗಳೂರು-೪





ಪ್ರತಿಗಳು-೧೦೦೦

**ಬೆಲೆ-ಸಾದಾಪ್ರತಿ : ೮-೦೦**
**ಉತ್ತಮ ಪ್ರತಿ : ೧೦-೦೦**



ಮುದ್ರಕರು;

ಎಸ್. ಶ್ರೀಕಂಠಪ್ಪ
ಲಿಬರ್ಟಿ ಪ್ರಿಂಟರ್ಸ್
ಅರಳೇಪೇಟೆ
ಬೆಂಗಳೂರು-೨

# ಸಂದೇಶ

ಅರಮನೆ
ಮೈಸೂರು

ಜಗತ್ತಿನಲ್ಲಿ ಧರ್ಮಗ್ಲಾನಿಯಾಗುವ ಸಮಯದಲ್ಲಿ ಭಗವಂತನು ಅವತರಿಸಿ ಧರ್ಮವನ್ನು ರಕ್ಷಿಸುವನೆಂಬುದು ಭಾರತೀಯರ ನಂಬಿಕೆ. ಈ ದೃಷ್ಟಿಯಿಂದ ಕಾಲ ಕಾಲಕ್ಕೆ ಅನೇಕ ವಿಭೂತಿ ಪುರುಷರು ಅವತರಿಸಿ ತಮ್ಮ ದಿವ್ಯೋಪದೇಶಗಳಿಂದ ಮಾನವರನ್ನು ಕತ್ತಲೆಯಿಂದ ಬೆಳಕಿನ ಕಡೆಗೆ ಒಯ್ದು ಉಪಕರಿಸಿದ್ದಾರೆ.

ವೀರಶೈವ ಮಠಾಚಾರ್ಯರಲ್ಲೊಬ್ಬರಾಗ ಶ್ರೀಶೈಲದ ಜಗದ್ಗುರು ಪಂಡಿತಾರಾಧ್ಯ ಪರಂಪರೆಯ ಸಿಡುಮಾಮಿಡಿ ಶ್ರೀಶೈಲ ಜಗದ್ಗುರು ಶ್ರೀ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಯವರ ರಜತೋತ್ಸವದ ಸುಸಮಯದಲ್ಲಿ ನಾಡಿನ ಗಣ್ಯ ವಿದ್ವಾಂಸರು ಸಾಹಿತ್ಯ, ಧರ್ಮ ಮತ್ತು ವೀರಶೈವ ಸಂಸ್ಕೃತಿಯನ್ನು ಕುರಿತು ಬಹುಮುಖವಾದ ಗ್ರಂಥರಚನೆ ಮಾಡಿ "ಜ್ಞಾನ ದಾಸೋಹಿ"ಗಳೆನಿಸಿರುವ ಪೂಜ್ಯ ಜಗದ್ಗುರುಗಳವರಿಗೆ "ದಾಸೋಹ" ಎಂಬ ಪವಿತ್ರಗ್ರಂಥ ಕಾಣಿಕೆಯನ್ನು ಸಮರ್ಪಿಸುತ್ತಿರುವುದು ಅಭಿನಂದನೀಯ.

ಜಗದ್ಗುರುಗಳವರ ವಿಸ್ತಾರವಾದ ಗ್ರಂಥರಾಶಿಯನ್ನು ಕುರಿತು ವಿಚಾರಪೂರಿತವಾದ ಲೇಖನಗಳ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ಹಾಗೂ ಸಾಹಿತ್ಯ ಪ್ರಕಾರಗಳನ್ನು ಕುರಿತ ವಿದ್ವಾಂಸರ ಬರಹಗಳ ಸಂಕಲನ ರೂಪವಾದ ಈ "ದಾಸೋಹವು" ಕನ್ನಡಿಗರಿಗೆ ಸಂಗ್ರಾಹ್ಯವಾದ ಅಪೂರ್ವ ನಿಧಿ. ಇದರ ಉಪಯೋಗವನ್ನು ಕನ್ನಡ ಲೋಕ ಪಡೆಯಲೆಂದು ಹಾರೈಸುತ್ತೇವೆ.

೧೨ ೨–೬೭ ಶ್ರೀ ಜಯಚಾಮರಾಜ ಒಡೆಯರ್

# ಮುನ್ನುಡಿ

ಸೂರ್ಯಸಿಂಹಾಸನಾಧೀಶ್ವರರಾದ ಶ್ರೀ ಜ. ಚ. ನಿ. ಅವರ ಸಾಹಿತ್ಯ ಸೇವೆಯನ್ನು ಕುರಿತು ದಾಸೋಹದ ರಜತ ಸಂಪುಟ ಈಗ ಪ್ರಕಟವಾಗಲಿದೆ. ಅವರ ಸಾಹಿತ್ಯದ ದರ್ಶನವನ್ನು ಮಾಡಿಸಲೆಂದು ನಿಯೋಜಿತವಾದ ಈ ಉದ್ಗ್ರಂಥಕ್ಕಾಗಿ ನಾನು ಸಂತೋಷದಿಂದ ಈ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ.

ಶ್ರೀ ಜ. ಚ ನಿ. ಅವರ ಸಾಹಿತ್ಯಸೇವೆ ಆಧುನಿಕ ಕನ್ನಡ ವಾಙ್ಮಯದಲ್ಲಿ ಒಂದು ವಿಶೇಷ ರೂಪವನ್ನು ತಾಳಿದೆ. ಬಹುಷಃ ಇಂದಿನ ಎಲ್ಲ ಮಠಗಳ ಪೀಠಾಧಿಕಾರಿಗಳಲ್ಲಿ ಇವರು ಸಲ್ಲಿಸಿದ ಸಾಹಿತ್ಯಸೇವೆ ಅನನ್ಯವಾಗಿದೆ. ಇದರ ಕಾರಣ ಮಠಗ್ರಂಥಗಳ ನಿಕಟ ಮನನದೊಂದಿಗೆ ಪುನೀತವಾದ ಒಂದು ಸಾಹಿತ್ಯ ಪ್ರಜ್ಞೆ ಅವರಲ್ಲಿ ಹುಟ್ಟು ಗುಣವಾಗಿ ಬಂದಿರುವುದೇ ಸರಿ. ಮಠಗ್ರಂಥಗಳ ತತ್ವಗಳೊಂದಿಗೆ ಅವುಗಳ ರಸಾನುಭವವನ್ನು ಅವರು ಪಡೆದಿದ್ದಾರೆ. ರಸಾನುಭವವು ತನ್ನ ರೀತಿಯಲ್ಲಿಯೇ ದಿವ್ಯಜೀವನದ ದರ್ಶನವನ್ನು ಮಾಡಿಸಬಲ್ಲದೆಂಬುದನ್ನು ಅವರು ಅರಿತಿದ್ದಾರೆ. ಅಲಂಕರಿಸಿದ ಪೀಠದ ತತ್ವಗೌರವವನ್ನು ಪೋಷಿಸುವುದು ಎಲ್ಲ ಪೀಠಾಧಿಕಾರಿಗಳ ಕರ್ತವ್ಯವಾಗಿದೆ ಆದರೆ ಪರಂಪರೆ ತನಗೆ ಹಾಕಿಕೊಟ್ಟ ದಾರಿಯಲ್ಲಿ ನಡೆಯುವಾಗ ಜೀವನದ ವಿಶಾಲದೃಷ್ಟಿ ಅಲ್ಲಿ ಹೇಗೆ ಅರಳಿದೆಯೆಂಬುದನ್ನು ನೈಜಸಾಹಿತಿ ಮಾತ್ರ ಕಂಡು ತೋರಿಸಬಲ್ಲ ಈ ಅನುಪಮ ಸೇವೆಯನ್ನು ಸಲ್ಲಿಸುವ ಪ್ರತಿಭೆ ಶ್ರೀ ಜ. ಚ. ನಿ. ಅವರಲ್ಲಿ ಉಜ್ವಲವಾಗಿ ಜಾಗೃತಗೊಂಡಿರುವುದನ್ನು ಅವರ ಸಾಹಿತ್ಯ ಕೃತಿಗಳಲ್ಲಿ ನಾವು ಅನುಭವಿಸುತ್ತೇವೆ.

ಹಾಗೆ ನೋಡಿದರೆ ಪರಂಪರೆ ಎಂದ ಮಾತ್ರಕ್ಕೆ ಎಲ್ಲವೂ ಹಳೆಯದು ಇಲ್ಲವೇ ಅನುಪಯುಕ್ತವಾದುದೆಂದು ಕಡೆಗಣಿಸಲಾಗುವುದಿಲ್ಲ. ಪ್ರತಿಯೊಂದು ಪರಂಪರೆಯ ಹಿಂದೆ ಒಂದೊಂದು ಜೀವನದರ್ಶನವಿರುತ್ತದೆ. ಅದು ಸಮ್ಮತವಾಗದ ಸಾಹಿತಿ ಆ ಪರಂಪರೆಯನ್ನು ತ್ಯಜಿಸುತ್ತಾನೆ ಜೀವನದ ಋತದರ್ಶನ ಅಲ್ಲಿರುವುದೆಂದು ಅವನಿಗೆನಿಸುವುದಿಲ್ಲ. ಪರಂಪರೆಯು ಅಭಿವ್ಯಕ್ತಿ ಹೊಂದಿದ ದರ್ಶನದೊಡನೆ ಸಮರಸನಾದ ಪ್ರತಿಭಾಶಾಲಿ ಆ ತತ್ವಗಳ ರಸಾನುಭವವನ್ನು ಹೊಂದುತ್ತಾನೆ. ಅಲ್ಲದೇ ಹಿಂದೊಮ್ಮೆ ಯಾವುದೊಂದು ಸೀಮೆಗೆ ಬಂದು ನಿಂತ ಪರಂಪರೆಯನ್ನು ಹಿಗ್ಗಿಸಿ ಸಮಕಾಲೀನ ಜೀವನದ ಸಮಸ್ಯೆಗಳಿಗೂ ಅದು ಅನ್ವಯಿಸುವಂತೆ ಮಾಡುತ್ತಾನೆ. ಮೊದಲು ಹೇಳಿದ ಸಾಹಿತಿ ಬಂಡುಗಾರನಾದರೆ ಎರಡನೆಯ ಸಾಹಿತಿ ಪರಂಪರೆಗೆ ಹೊಂದಿಕೊಂಡು ಸಹ ಅದರಿಂದ ಒಂದು ರೀತಿಯಲ್ಲಿ ಅಲಿಪ್ತನಾಗಿರುತ್ತಾನೆ. ಮೂರನೆಯ ಮಾದರಿಯ ಸಾಹಿತಿಯನ್ನು ಸಾಹಸಿಯೆಂದು ಕರೆಯಬಹುದು. ಯಾವ ತತ್ವವನ್ನೊ

ಗ್ರಹಿಸಿ ಅವನು ಮುಂದುವರಿಯುವುದಿಲ್ಲ. ಜೀವನಾನುಭವ ಬಂದು ಅದರಿಂದ ದರ್ಶನವು ಉಗಮಿಸಿದಂತೆ ಅವನು ತನ್ನ ತತ್ವಗಳನ್ನು ರೂಪಿಸುತ್ತ ಸಾಗುತ್ತಾನೆ. ಆಂಗ್ಲ ಕವಿಗಳಾದ ಶೆಲ್ಲಿ, ಕೀಟ್ಸ್ ಇವರು ಈ ಮೂರನೆಯ ಮಾದರಿಯವರು. ಜಾರ್ಜ್ ಹರ್ಬರ್ಟ್ ಎಂಬುವನು ಆಂಗ್ಲ ಕ್ರಿಸ್ತೀಯ ಮತದ ಪರಂಪರೆ ಪಡೆದ ಕವಿ. ಬೈರನ್ ಮೊದಲನೆಯ ಮಾದರಿಯವನು. ಶೆಲ್ಲಿಯೂ ಮೊದಲನೆಯ ಮಾದರಿಯವನಾಗಿ ಪ್ರಾರಂಭಿಸಿ ಮೂರನೆಯ ಗುಂಪನ್ನು ಸೇರಿದ. ಟಿ. ಎಸ್. ಎಲಿಯಟ್ ಮೊದಲನೆಯ ಗುಂಪಿನಲ್ಲಿ ನಿಂತುಕೊಂಡು ಎರಡನೆಯ ಮಾದರಿಯಲ್ಲಿ ತನ್ನ ಜೀವನದ ಸಫಲತೆಯನ್ನು ಕಂಡ. ಡಬ್ಲ್ಯು. ಬಿ. ಯೇಟ್ಸ್ ಮೊದಲಿನಿಂದ ಕೊನೆಯವರೆಗೆ ಮೂರನೆಯ ಮಾದರಿಯವನಾಗಿ ಬಾಳಿದ.

ಶ್ರೀ ಜ. ಚ. ನಿ. ಅವರನ್ನು ಎರಡನೆಯ ಮಾರ್ಗದ ಉಜ್ವಲ ಸಾಹಿತಿಗಳೆಂದು ನಾವು ಪರಿಗಣಿಸಬಹುದು. ಒಂದು ಪರಂಪರೆಯನ್ನು ಸ್ವೀಕರಿಸುವುದೆಂದರೆ ಸ್ವೀಕರಿಸಿದವನ ಪ್ರಜ್ಞಾ ಜೀವನ ಕೃತಕ ಇಲ್ಲವೇ ಕೃತ್ರಿಮವಾಗಿಬಿಡುವುವೆಂದು ಪ್ರತಿಪಾದಿಸುವವರಿದ್ದಾರೆ. ಇಂತಹ ಪ್ರತಿಪಾದನೆ ಸತ್ಯಕ್ಕೆ ಎಷ್ಟು ದೂರವಾಗಿದೆ ಎಂಬುದನ್ನು ಶ್ರೀ ಜ.ಚ.ನಿ ಅವರ ಸಾಹಿತ್ಯ ಕೃತಿಗಳಿಂದ ನಾವು ಕಣ್ಣಾರೆ ಕಂಡುಕೊಳ್ಳಬಹುದು. ಪರಂಪರೆಯೊಡನೆ ವ್ಯಕ್ತಿತ್ವ ಸಮರಸವಾದಾಗ ಪರಂಪರೆಗೇ ಒಂದು ವ್ಯಕ್ತಿತ್ವ ಬರುತ್ತದೆ. ವ್ಯಕ್ತಿತ್ವವನ್ನೇ ಪರಂಪರೆ ಶ್ರೀಮಂತವಾಗಿಸುತ್ತದೆ. ಈ ರಾಜಮಾರ್ಗದಲ್ಲಿ ಶ್ರೀ ಜ. ಚ. ನಿ. ಅವರ ಸಾಹಿತ್ಯ ಸಮೃದ್ಧವಾಗಿ ಬೆಳೆದಿದೆ. ವೀರಶೈವ ಮತದ ಉಜ್ವಲ ಪರಂಪರೆಗೆ ನವೀನ ಸಂಪಾದನೆಯನ್ನೂ ಧ್ವನಿಯನ್ನೂ ವಚನಕಾರರು ನೀಡಿದಂತೆ ಶ್ರೀ ಜ. ಚ. ನಿ. ಅವರು ತಮ್ಮದೇ ಆದ ರೀತಿಯಲ್ಲಿ ಅದನ್ನು ಸಾಧಿಸಿ ನಮ್ಮ ಶತಮಾನದ ಗಣ್ಯ ವಚನಕಾರರೂ ಸಾಹಿತಿಗಳೂ ಆಗಿದ್ದಾರೆ.

ಅವರ ಕೃತಿಗಳ ಪರಿಚಯವನ್ನು ಮಾಡಲೆಳಸಿದ ದಾಸೋಹದ ರಜತ ಸಂಪುಟ ಅವರ ಸಾಹಿತ್ಯದ ವೈವಿಧ್ಯವನ್ನೂ ಉತ್ಕಟತೆಯನ್ನೂ ಪರಿಣಾಮಕಾರಿಯಾಗಿ ನಿದರ್ಶಿಸುತ್ತದೆ. ಸಾಹಿತ್ಯ ಪ್ರಶಸ್ತಿಯಲ್ಲಿ ಒಂದೆರಡು ಅತಿಶಯೋಕ್ತಿಗಳಿರಬಹುದು. ಎಲ್ಲ ಪ್ರಶಸ್ತಿ ಲೇಖನಗಳಲ್ಲಿಯೂ ಅತಿಶಯತೆ ಅನಿವಾರ್ಯವಾಗಿ ತಲೆಯೆತ್ತುವುದನ್ನು ಬಹುದು. ಮೆಚ್ಚಿದ ಸಾಹಿತಿಯ ಬಗ್ಗೆ ಇಂತಹ ಅಭಿಮಾನವಿಲ್ಲದೆ ಆ ಸಾಹಿತ್ಯ ನೈಜ ಗುಣದ ಸಾಮೀಪ್ಯ ದೃಷ್ಟಿ ನಮಗೆ ದೊರೆಯಲಾರದು. ಶ್ರೀ ಜ. ಚ. ನಿ. ಅವರು ಉಪಯೋಗಿಸಿದ ಸಾಹಿತ್ಯ ಪ್ರಕಾರಗಳ ವೈವಿಧ್ಯ ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಅನುವಾದ, ತಾತ್ವಿಕ ಪ್ರಬಂಧ, ಚರಿತ್ರೆ, ಪತ್ರ ಪ್ರಪಂಚ, ವಿಮರ್ಶೆ, ನಾಟಕ, ಕವನ, ಈ ಎಲ್ಲ ದಾರಿಗಳಲ್ಲಿಯೂ ತಮ್ಮ ಪ್ರತಿಭೆಯ ಕುರುಹನ್ನು ಶ್ರೀ ಜ. ಚ. ನಿ. ಅವರು ತೋರಿಸಿದ್ದಾರೆ. ಶಿವಾಗಮ ಪರಿಜ್ಞಾನದ ಶ್ರೇಷ್ಠ ಗ್ರಂಥವಾದ ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯನ್ನು ಗದ್ಯ, ಕಾವ್ಯ ಹಾಗೂ ವಚನ ರೂಪದಲ್ಲಿ ಶ್ರೀ ಜ. ಚ. ನಿ. ಅವರು ಕನ್ನಡಿಗರಿಗೆ ಒದಗಿಸಿ ಕೊಟ್ಟಿದ್ದಾರೆ. ಕನ್ನಡಕ್ಕೆ ಇದೊಂದು

ಹಿರಿಯ ಕೊಡುಗೆಯಾಗಿದೆ. ತಾತ್ವಿಕ ಪ್ರಬಂಧದ ದಾರಿಯಲ್ಲಿ **ಕಾಯಕ ಕಲೆ** ಹಾಗೂ **ದೇವದೃಷ್ಟಿ** ಎಂಬ ಕೃತಿಗಳು ಉಜ್ವಲವಾಗಿವೆ. ಒಂದು ದೃಷ್ಟಿಯಿಂದ ಇವೆರಡು ಪ್ರಬಂಧಗಳನ್ನು ಅವರಿಂದ ಬಂದ ಉತ್ತಮ ಕೃತಿಗಳಲ್ಲಿ ಪರಿಗಣಿಸಬಹುದು. ಇಂದಿನ ಯುಗ ಧರ್ಮವನ್ನು ಅಳವಡಿಸಿಕೊಂಡು ಇಂದಿನ ಯಕ್ಷ ಪ್ರಶ್ನೆಗಳಿಗೂ ಪರಂಪರೆಯು ಹೇಗೆ ಉತ್ತರ ಕೊಡಲು ಸಮರ್ಥವಾಗಬಲ್ಲದೆಂಬುದನ್ನು ಈ ಎರಡು ಕೃತಿಗಳಲ್ಲಿ ನಾವು ಕಾಣುತ್ತೇವೆ.

**ಶಿವಾದ್ವೈತ ದರ್ಶನ** ಹಾಗೂ **ನವಲಿಂಗ ಸಾಹಿತ್ಯ** ಮೊದಲಾದ ಗದ್ಯ ಕೃತಿಗಳಲ್ಲಿ ತತ್ವಪರಂಪರೆಯನ್ನು ಕುರಿತು ಸಮರ್ಥವಾದ ಚಿಂತನೆಯಿದೆ. ಈ ಜೀವನ ದೃಷ್ಟಿಯೇ ಮುಂದುವರೆದು ಸಾಹಿತ್ಯ ವಿಮರ್ಶೆಯ ರೂಪವನ್ನು ತಾಳಿ ಬಸವಣ್ಣ, ಅಕ್ಕ ಮಹಾದೇವಿ, ಅಲ್ಲಮ ಪ್ರಭು ಮೊದಲಾದ ವಚನಕಾರರ ಹಾಗೂ ವೀರಶೈವ ಕವಿಗಳನ್ನು ಕುರಿತು ಅವರು ಬರೆದ ಪ್ರಬಂಧಗಳಲ್ಲಿ ಮೂಡಿದೆ. **ಕಾರುಣ್ಯ ಕಿರಣ** ಎಂಬ ಕೃತಿಯಲ್ಲಿ ಶ್ರೀ ಜ. ಚ. ನಿ. ಅವರು ಬರೆದ "**ಓಲೆದಬ್ಬ**" ಇಂಬುಗೊಂಡಿದೆ. ದೇವರ ದಾಸಿಮಯ್ಯ, ಕರಿಬಸವೇಂದ್ರ, ದುಗ್ಗಳೆ, ಮೊದಲಾದ ಪುಣ್ಯ ಪುರುಷ-ಸ್ತ್ರೀಯರನ್ನು ಕುರಿತು ಬರೆದ ಚರಿತ್ರೆಗಳು ತತ್ವಗಳನ್ನು ಕಥನದಲ್ಲಿ ತೇಲಿಸಿ ತೋರಿಸುತ್ತವೆ. ಸರ್ವಧರ್ಮ ಸಮನ್ವಯವನ್ನು ಕುರಿತು ಶ್ರೀ ಜ. ಚ. ನಿ. ಅವರ ವ್ಯಾಪಕ ದೃಷ್ಟಿಯನ್ನು ಸ್ಪಷ್ಟವಾಗಿ ನಿದರ್ಶಿಸುತ್ತದೆ.

> ಮಾನವ ಸಮಾಜವೆಂಬ ಮರಕ್ಕೆ
> ಮತ ಧರ್ಮಂಗಳೇ ರೆಂಬೆಗಳು ನೋಡಾ
> ಆವ ರೆಂಬೆಯಾದರೇನು ?
> ಮೂಲ ಒಂದೇ, ಫಲ ಒಂದೇ !
> ಮೇಲು ಕೀಳೆಂಬ ಮರುಳರನೇನೆಂಬೆ
> ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರಾ ?

ಶ್ರೀ ಜ. ಚ. ನಿ. ಅವರ ಕಾವ್ಯವನ್ನು ಮನನ ಮಾಡುವಾಗ ಅವರ ಶುದ್ಧ ಸಾಹಿತ್ಯ ಪ್ರಜ್ಞೆ ಇನ್ನೂ ಸ್ಪಷ್ಟವಾಗಿ ಕಣ್ಣೆದುರಿಗೆ ಬರುತ್ತದೆ.

"ಸಾಹಿತ್ಯಕ್ಕೆ ಭಿನ್ನ ಭೇಧಗಳುಂಟೇ ?

ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ ಗುಣಕ್ಕೆ ಮತ್ಸರವೇ ಎಂದು ಶ್ರೀ ಜ. ಚ. ನಿ. ಅವರು ಕೇಳುತ್ತಾರೆ. ನಾನು ಮೊದಲಿಗೆ ಸಾಹಿತಿಗಳಲ್ಲಿ ಮೂರು ವರ್ಗಗಳನ್ನು ಕಲ್ಪಿಸಿದೆ. ಇನ್ನೊಂದು ದೃಷ್ಟಿಯಿಂದ ನೋಡಿದರೆ ಈ ಮೂರು ವರ್ಗದ ಸಾಹಿತಿಗಳೂ ವರ್ಗರಹಿತ ಸಾಹಿತಿಗಳೇ ಸರಿ. ವರ್ಗಗಳನ್ನು ಕಲ್ಪಿಸುವುದು ಬುದ್ಧಿ ಗ್ರಹಣಕ್ಕೆ ಸುಲಭವಾಗಲೆಂದು ಮಾತ್ರ, ಆದರೆ ಸಾಹಿತ್ಯ ಗುಣ ಸಿದ್ಧ ಎಲ್ಲ ಬರವಣಿಗೆ ರಸಾನುಭವವನ್ನು ಪ್ರಧಾನವಾಗಿರಿಸಿಕೊಂಡಿರುತ್ತದೆ.

ಶ್ರೀ ಜ. ಚ. ನಿ. ಅವರ ಬಸವೇಶ್ವರನ ರೇಖಾ ಚಿತ್ರಗಳಲ್ಲಿ ಭಾವದ ಬಣ್ಣವನ್ನು ತುಂಬಿದ 'ನೀಳ್ಗವಿತೆ' ಎಂಬ ಕೃತಿಯಲ್ಲಿ ನಾವೀನ್ಯವಿದೆ, ಹೊನ್ನ ಹಕ್ಕಿ, ರನ್ನ ಚುಕ್ಕಿ ಮೊದಲಾದ ಕವನ ಸಂಗ್ರಹಗಳಲ್ಲಿ ಸೌಜನ್ಯ ಗುಣವಿದೆ, ಇದಕ್ಕೂ ಹೆಚ್ಚಾಗಿ ಅವರ ವಚನವಲ್ಲರಿ ಮೊದಲಾದ ಕೃತಿಗಳಲ್ಲಿ ವಚನಗಳ ಉಜ್ವಲ ಪರಂಪರೆಯನ್ನು ಜೀರ್ಣಿಸಿ ಆ ಶೈಲಿಗೆ ಒಂದು ಹೊಸ ಮೆರುಗನಿತ್ತ ಸೌಂದರ್ಯ ಕಂಡು ಬರುತ್ತದೆ.

"ಆಯ್ದಕ್ಕಿ ಮಾರಯ್ಯ," ಹಾಗು "ಗುರುವಿನ ಗೆಲುವು" ಎಂಬ ಅವರ ನಾಟಕಗಳು ಶ್ರೀ ಜ. ಚ. ನಿ. ಅವರ ಮೂಲ ದೃಷ್ಟಿಗೆ ಹೊಂದಿಕೊಂಡು ಇನ್ನೊಂದು ಸಾಹಿತ್ಯ ಪ್ರಕಾರದಲ್ಲಿ ಅದನ್ನು ಅರಳಿಸಿ ತೋರಿಸಿವೆ.

ಅನುಭಾವದ ದಾರಿಯನ್ನು ತುಳಿಯುವ ಸಾಹಿತಿಗೆ ಹಲವಾರು ಸಿಂಹೋಲ್ಲಂಘನಗಳು ಸಾಧ್ಯವಿಲ್ಲ. ವಿಸ್ತೃತ ಪ್ರಪಂಚದ ಅನುಭವ, ಕಲೆ ಕಲೆಯ ತಾರತಮ್ಯ, ನವರಸ ತಾಂಡವ,—ಒಂದು ದೃಷ್ಟಿಯಿಂದ ಅನುಭಾವಿಯಾದ ಕವಿ ಇವುಗಳಿಂದ ದೂರವಾಗಿರುತ್ತಾನೆ. ಆದರೆ ಶೇಕ್ಸ್‌ಪಿಯರ್‌ನಂತಹ ಸಾಹಿತಿಗಳು ಈ ಮಹಾಸಾಗರದಲ್ಲಿಯೇ ಮುಳುಗಿ ಏಳುತ್ತಾರೆ. ತೆರೆತೆರೆಯಾಗಿ ಅದರ ವಿರಾಟ ದರ್ಶನವನ್ನು ಮಾಡಿಸುತ್ತಾರೆ. ಪ್ರಪಂಚದ ಈ ಅನಂತತೆ ಹಾಗೂ ವಿವಿಧತೆ ಅವರ ಕಾವ್ಯವಸ್ತುವಾಗಿರುತ್ತದೆ.

ಅನುಭಾವಿಯಾದ ಸಾಹಿತಿ ಬೇರೊಂದು ದಾರಿಯನ್ನು ತುಳಿಯುತ್ತಾನೆ. ಅವನನ್ನು ಆಕರ್ಷಿಸುವುದು ವಿವಿಧತೆಯಲ್ಲ: ಆ ವಿವಿಧತೆಗಳನ್ನೆಲ್ಲಾ ಪವಣಿಸುವ ಏಕಸೂತ್ರ. ಅನಂತ ಅಭಿಧಾನಗಳೂ ಅವನ ಚಿತ್ತವನ್ನು ಸೆಳೆಯಬಹುದು, ಆದರೆ ಅವುಗಳಲ್ಲಿ ಏಕಮೇವವಾದ ಅನಂತವನ್ನೇ ಈ ಮಾದರಿಯ ಕವಿಯು ಅನುಭವಿಸುತ್ತಾನೆ. ಅವನ ಕೃತಿಗಳಲ್ಲಿ ವಿಸ್ತಾರಕ್ಕಿಂತ ಉತ್ಕಟತೆ ಹೆಚ್ಚು. "ಬಹುಧಾ"ದ ವಿಸ್ಮಯಕ್ಕಿಂತ ಏಕಮೇವದ ಘಂಭೀರತೆ ಅವನ ಒಲವನ್ನು ಸೂರೆಗೊಳ್ಳುತ್ತದೆ. ವ್ಯಾಸ ಮತ್ತು ಶೇಕ್ಸ್‌ಪಿಯರರು ವಿಶ್ವಕ್ಕೆ ಭಾಷ್ಯವನ್ನು ಬರೆದರು. ಅಲ್ಲಮ ಪ್ರಭು ಹಾಗು ಮೇಟರ್‌ಲಿಂಕ್ ಅವರು ವಿಶ್ವದಲ್ಲಡಗಿದ ಏಕಮೇವ ಸತ್ಯದ ಸಂಶೋಧಕರೂ ಭಾಷ್ಯಕಾರರೂ ಆದರು. ಸಾಹಿತ್ಯದ ಈ ಎರಡು ಮುಖಗಳು ನಮಗೆ ಯಾವಾಗಲೂ ಬೇಕು. ಒಂದನ್ನು ಮೆಚ್ಚಿ ಇನ್ನೊಂದನ್ನು ನಾವು ಅಲ್ಲಗಳೆಯಲಾರೆವು.

ಅನುಭಾವಿ ಸಾಹಿತಿಗಳಾದ ಶ್ರೀ ಜ. ಚ. ನಿ. ಅವರ ಲೇಖನಿಯಿಂದ ಇನ್ನೂ ಅನೇಕಾನೇಕ ಉಜ್ವಲ ಕೃತಿಗಳು ಕನ್ನಡತಾಯಿಗೆ ಸಲ್ಲುವುದರಲ್ಲಿ ಸಂಶಯವಿಲ್ಲ. ಅವರ ಏಕಾಗ್ರ ಸಿದ್ಧಿ ಹಾಗು ಸೇವೆ ಕನ್ನಡದ ಜನಮನವನ್ನು ರುಚಿಗೊಳಿಸಲಿ.

ಕಾರ್ಲಟನ್ ಹೌಸ್,
ಬೆಂಗಳೂರು-೧ ವಿ. ಕೃ. ಗೋಕಾಕ್
ತಾ. ೧೨-೪-೧೯೬೭

# ಕೃತಜ್ಞತೆ

ಧರ್ಮಪೀಠದ ಅಧಿಕಾರದೊಂದಿಗೆ ಸಾಹಿತ್ಯಸೇವೆಯನ್ನೂ ಕರ್ತವ್ಯವನ್ನಾಗಿ ಮಾಡಿಕೊಂಡ ಹಿರಿಯ ದಾರ್ಶನಿಕರು ಶ್ರೀ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಅವರು ಕನ್ನಡ ನುಡಿ ಚರಿತ್ರೆಯಲ್ಲಿ ನಿರಂತರ ಮಿನುಗುವ ತಾರೆಗಳು. ಅವರ ಕೃತಿಗಳು ಸಾಹಿತ್ಯ ಸರಸ್ವತಿಯ ತೌರುಮನೆಯಾಗಿವೆ. ಶ್ರೀ ಸನ್ನಿಧಿಯವರ ಧರ್ಮಪೀಠ.

ಕಳೆದ ಮುವ್ವತ್ತು ವರ್ಷಗಳಿಂದ ಸಾಹಿತ್ಯದ ನಾನಾ ಪ್ರಾಕಾರಗಳಿಗೆ ತಮ್ಮದೇ ಆದ ವಿಶಿಷ್ಟಪೂರ್ಣ ಕೊಡುಗೆಯನ್ನು ಕರುಣಿಸಿರುವ ಶ್ರೀ ಶ್ರೀ ಜ. ಚ. ನಿ. ಸನ್ನಿಧಿಯವರಿಗೆ ನಾಡು ಅನಂತ ಋಣಿಯಾಗಿದೆ. 'ಸಾವಿಲ್ಲದ ಕೇಡಿಲ್ಲದ ಜ್ಞಾನ ದಾಸೋಹ ಅವರು ಕೈಕೊಂಡ ಸತ್ಯಶೀಲ ಕಾಯಕ. ಆ ಅನುಪಮ ಕಾಯಕಕ್ಕೆ ಅಲ್ಪ ಕಾಣಿಕೆ ಈ 'ದಾಸೋಹ' ಸಂಭಾವನ ಗ್ರಂಥ. ನಾಡಿನ ಭಕ್ತ ಸಮೂಹವು ಅರ್ಪಿಸುವ ಈ ಕಾಣಿಕೆಯನ್ನು ವಾತ್ಸಲ್ಯವಿಟ್ಟು ಸ್ವೀಕರಿಸಬೇಕೆಂದು ಸನ್ನಿಧಿಯಲ್ಲಿ ಪ್ರಾರ್ಥನೆ.

ಪೂಜ್ಯ ಶ್ರೀ ಜ. ಚ. ನಿ. ಅವರ ಅಮೋಘವಾದ ಸಾಹಿತ್ಯ ಸೇವೆಯನ್ನು ನೆನೆದು ನಾಡಿನ ಅನೇಕ ಮಹನೀಯರು ತಮ್ಮ ಅನುಭವಪೂರ್ಣ ಲೇಖನಗಳನ್ನು ಇತ್ತಿದ್ದಾರೆ. ಅವರೆಲ್ಲರೂ ಶ್ರೀ ಸನ್ನಿಧಿಯವರ ಸಾಹಿತ್ಯದ ಸವಿಯನ್ನುಂಡವರು. ತಾವು ಉಂಡ ಊಟವನ್ನು ನಾಡಿಗೂ ಬಡಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಗ್ರಂಥಕ್ಕೆ ಧರ್ಮಮೂರ್ತಿಗಳೂ, ವಿದ್ವಾಂಸರೂ ಆದ ರಾಜರ್ಷಿ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಸಂದೇಶ ದೊರೆತುದೊಂದು ಭಾಗ್ಯ.

ಈ ಪ್ರಯತ್ನವನ್ನು ಮೆಚ್ಚಿ 'ದಾಸೋಹ'ಕ್ಕೆ ವಿಚಾರ ಪೂರ್ಣವಾದ ಮುನ್ನುಡಿಯಿತ್ತ ಔದಾರ್ಯಕ್ಕೆ ಬೆಂಗಳೂರು ವಿಶ್ವವಿದ್ಯಾಲಯದ ವೈಸ್ ಛಾನ್ಸಲರ್ ಶ್ರೀ ವಿ. ಕೆ. ಗೋಕಾಕ್ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಸಾಹಿತ್ಯದ ಕಾಣಿಕೆಯನ್ನಿತ್ತ ಲೇಖಕ ಮಹನೀಯರು, ಪ್ರಕಟನೆಗೆ ನೆರವಾದ ಸಮಾಜ ಬಂಧುಗಳು, ಸಲಹೆ-ಸಹಕಾರಗಳನ್ನಿತ್ತ ಹಿರಿಯರು ಮತ್ತು ಶ್ರಮವಹಿಸಿ ಮುದ್ರಣ ಮಾಡಿಕೊಟ್ಟ ಬೆಂಗಳೂರಿನ ಲಿಬರ್ಟಿ ಪ್ರಿಂಟರ್ಸ್ ಮಾಲಿಕರಾದ ಶ್ರೀ ಎಸ್. ಶ್ರೀಕಂಠಪ್ಪನವರನ್ನು ಹೃದಯಾರೆ ಸ್ಮರಿಸುತ್ತೇವೆ.

೧೪-೪-೬೭ ಸಂಪಾದಕ ಮಂಡಳಿ

ಬೆಂಗಳೂರು

## ಸಂಪಾದಕ ಸಮಿತಿ

# ಪರಿವಿಡಿ



## ಸಾಹಿತ್ಯ ದರ್ಶನ

ಪುಟ

## ಸಿದ್ಧಾಂತ ಸಾಹಿತ್ಯ



## ಪ್ರಬಂಧ ಸಾಹಿತ್ಯ



## ದಾರ್ಶನಿಕ ಸಾಹಿತ್ಯ

## ವಚನ ಸಾಹಿತ್ಯ



## ಕವನ ಸಾಹಿತ್ಯ

## ನಾಟಕ ಸಾಹಿತ್ಯ



## ಸಮೀಕ್ಷಾತ್ಮಕ ಸಾಹಿತ್ಯ

## ಪತ್ರ ಸಾಹಿತ್ಯ



## ಚಾರಿತ್ರಿಕ ಸಾಹಿತ್ಯ



## ಸಂಕೀರ್ಣ ಸಾಹಿತ್ಯ

# ಸಾಂಸ್ಕೃತಿಕ ದರ್ಶನ

## ಸಾಹಿತ್ಯ ದರ್ಶನ





# ಜ್ಯೋತಿರ್ಲಿಂಗಾನುಭಾವಿ ಶ್ರೀ ಜ. ಚ. ನಿ.

ಮೈ ವೆಂ ಸೀ ರಾಘವ (ಎಂ. ವಿ. ಸೀತಾರಾಮಯ್ಯ)

'ಜ. ಚ. ನಿ.'–ಎಂಬೀ ಮೂರಕ್ಷರಗಳು ಮುಕ್ಕಣ್ಣನ ಮೂರು ಕಣ್ಣುಗಳಂತೆ ಮೂಬಗೆಯ ದಿವ್ಯ ದೃಷ್ಟಿಗಳ ಪ್ರತೀಕಗಳು: ಜಡವನ್ನು ಭೇದಿಸಿ ಜಯಿಸಿ, ಅಧ್ಯಾತ್ಮದ ನೆಲೆಯಲ್ಲಿ ನಿಂತು, ಸತ್ಯವನ್ನು ಕಾಣುವ (ಸತ್ಯನಿಷ್ಠ) ಜ್ಞಾನದೃಷ್ಟಿಯೊಂದು; ಬಹಿರಂಗದ ಚೆಲುವಿನೊಂದಿಗೆ ಅಂತರಂಗದ ಚೆಲುವನ್ನು ಕಂಡುಂಡು, ಕಂಡುದನ್ನು ಇತರರಿಗೂ ಉಣಬಡಿಸುವ, ರಸಾನುಭೂತಿರತವಾದ (ಸೌಂದರ್ಯನಿಷ್ಠ) ಸಾಹಿತ್ಯ ದೃಷ್ಟಿ ಮತ್ತೊಂದು; ತಪಶ್ಚರಣೆಯಿಂದ ಪಡೆದ ಆತ್ಮ ಶಕ್ತಿಯನ್ನು ಸಮಾಜದ ಕಲ್ಯಾಣಕ್ಕಾಗಿ ವಿನಿಯೋಗಿಸಬೇಕೆಂಬ (ಶಿವನಿಷ್ಠ) ಶುಭದೃಷ್ಟಿ ಮಗುದೊಂದು. ಇಂತು, 'ಸತ್ಯಂ-ಶಿವಂ-ಸುಂದರಂ' ಈ ಮೂರೂ ಏಕತ್ರ ಕಲೆತಿರುವ ಮಹಿಮಾಪುರುಷರು 'ಜ. ಚ. ನಿ.'–ಜ್ಞಾನ ಭಕ್ತಿ ವೈರಾಗ್ಯಗಳೆಂಬ ತ್ರಿಕೂಟ ಲಕ್ಷಿತವಾದ ಶ್ರೀ ಶೈಲಪರ್ವತ ಸಿಂಹಾಸನಾಧೀಶ್ವರರಾದ 'ಸಿಡುಮೂಮಿಡಿ' ಜಗದ್ಗುರುಗಳ ಪರಂಪರೆಯಲ್ಲಿ ೩೧ನೆಯ ಪಟ್ಟಾಧ್ಯಕ್ಷರು ನಮ್ಮ ನಚ್ಚಿನ ಶ್ರೀ ಶ್ರೀ ಜ. ಚ. ನಿಡುಮಾಮಿಡಿಯವರು.

ಸ್ಥಲಪಾವಿತ್ರ್ಯದಿಂದ ಪೀಠಪಾವಿತ್ರ್ಯ; ಪೀಠಪಾವಿತ್ರ್ಯದಿಂದ ಪೀಠವನ್ನಲಂಕರಿಸಿದ ಗುರುವಿನ ಮಹಿಮೆ; ಗುರುವಿನ ಮಹಿಮೋತ್ಕರ್ಷದಿಂದ ಪೀಠದ ಮಹಿಮೋತ್ಕರ್ಷ; ಈ ಪ್ರಭಾವ ಪಾರಸ್ಪರ್ಯದಿಂದಾಗಿ, ಶ್ರೀಶೈಲಕ್ಷೇತ್ರ–ಅಲ್ಲಿನ ಪ್ರಥಮಾಚಾರ್ಯ ಪಂಡಿತಾರಾಧ್ಯರು ಸ್ಥಾಪಿಸಿದ ಗುರುಪೀಠ; ಈ ಪೀಠಮಹಿಮೆಯ ಪೀಠಿಕೆ ಅಗತ್ಯ, ಅದರ ಪ್ರಭಾ–ವಲಯದಲ್ಲಿ ತಮ್ಮದೇ ಆದ ಬೆಳಗಿನಿಂದ ಬೆಳಗುತ್ತಿರುವ ಶ್ರೀ ಶ್ರೀ ಜಗದ್ಗುರು ಚೆನ್ನಬಸವರಾಜ ದೇಶಿಕೇಂದ್ರ ನಿಡುಮಾಮಿಡಿಯವರ ನಿಡು ಮೊಬ್ಬೆ[1]ಯನ್ನು ಚೆನ್ನಾಗಿ ಅರಿಯುವ ಸಲುವಾಗಿ.

---

1. ನಿಡುಮೊಬ್ಬೆ (ನಿಡು + ಮೊಬ್ + ಎ) – ಉನ್ನತ ವ್ಯಕ್ತಿತ್ವ; ಎತ್ತರದ ಮಹಿಮೆ.

**ಪೀಠಪಾವಿತ್ರ್ಯ**

ಶ್ರೀಶೈಲಕ್ಷೇತ್ರ ಬಹುಪುರಾತನವಾದುದು, ಪವಿತ್ರತಮವಾದುದು. ವೀರಶೈವ ಮತ ಸಂಸ್ಥಾಪಕರೆಂದು ಪ್ರಕೀರ್ತಿತರಾದ ಪಂಚಾಚಾರ್ಯರುಗಳಲ್ಲಿ ಒಬ್ಬರಾದ ಶ್ರೀ ಪಂಡಿತಾರಾಧ್ಯರು ಸ್ಥಾಪಿಸಿದ ಧರ್ಮಪೀಠವು ಶ್ರೀಶೈಲದಲ್ಲಿ ನೆಲಸಿದೆ. ದುರ್ಗಮ ಸಿಬಿಡಾರಣ್ಯದ ನಡುವೆ ನೆತ್ತಿಯೆತ್ತಿ ನಿಂತ—

"ಶ್ರೀಕಾರ ಸಂಯುಕ್ತ ಶೈಲವಮದು ಶ್ರೀ ಶೈಲ
ಓಂಕಾರ ಮಂತ್ರಮಯ ರೂಪವದು ಶ್ರೀಶೈಲ
ಕಲಿಯುಗದೆ ಸುಕ್ಷೇತ್ರವೆನಿಸಿಹುದು ಶ್ರೀಶೈಲ
ಕಲಿಮಲವ ಕಳೆದಪುದು ಕಳೆವೆತ್ತ ಶ್ರೀಶೈಲ
ಗುರುಪಂಡಿತಾರಾಧ್ಯ ಪೀಠವದು ಶ್ರೀಶೈಲ
ವೀರ ಚತುರಾಚಾರ್ಯ ವಾಸವದು ಶ್ರೀಶೈಲ
ಶರಣ ಸಮುದಾಯಕಂ ಮೂಲವದು ಶ್ರೀಶೈಲ
ಶರಣ ಜನ ಮುಕ್ತಿಮಂದಿರವದು ಶ್ರೀಶೈಲ
ಶ್ರೀ ಮಲ್ಲಿಕಾರ್ಜುನನ ಮಂದಿರಂ ಶ್ರೀಶೈಲ
ಭ್ರಮರಾಂಬೆ ಬಯಸಿದ್ದ ಭವನವದು ಶ್ರೀಶೈಲ."[1]

ವೀರಶೈವಧರ್ಮದ ಚರಿತ್ರೆಯನ್ನು ಅರಿಯದವರಾದರೂ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬಲ್ಲವರೆಲ್ಲ ಬಲ್ಲರು ಶ್ರೀಶೈಲದ ಶ್ರೀಮೂರ್ತಿಯನ್ನು : ಕರ್ಮಯೋಗಿ ಸಿದ್ಧರಾಮನ ಮನವೊಲಿದು ನೋಡಿದ ಮಲ್ಲಯ್ಯನನ್ನು ; ವೈರಾಗ್ಯನಿಧಿ ಮಹಾದೇವಿಯಕ್ಕ ಒಲಿದ ಚೆಲುವ, ಮನದಾಣ್ಮ ಶ್ರೀ ಚೆನ್ನಮಲ್ಲಿಕಾರ್ಜುನನನ್ನು. ಪಂಚಾಚಾರ್ಯರಲ್ಲಿ ನಾಲ್ಕನೆಯವರಾದ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯರು ಮಲ್ಲಿಕಾರ್ಜುನನ ಸಾಕ್ಷಾದವತಾರವೆಂದೇ ಆಗಮೋಕ್ತಿ. "ಶ್ರೀಗಿರಿ ಮಲ್ಲಿಕಾರ್ಜುನ ಲಿಂಗರೂಪು ಕಳೆ ಮೂಡಿಬಂದ ಮೂರುತಿಯಣ್ಣಾ, ಭಾಷ್ಯಕೃತಿಕರ್ತನಾತನ ಧ್ಯಾನ ಸದಾ ಪಾವನವಣ್ಣ!" ಎಂದು ಜ. ಚ. ನಿ. ಅಡಕವಾಗಿ ನುಡಿದಿದ್ದಾರೆ.[2] ಶ್ರೀಶೈಲ ಗುರುಪೀಠದ ಪೂರ್ವ ಸಿಂಹಾಸನಾಧೀಶ್ವರರಲ್ಲಿ ಈ ಗುರುವರೇಣ್ಯರು ಆದ್ಯರು.[3]

**ಗುರುಪರಂಪರೆ**

ಈ ಗುರುಪರಂಪರೆಯಲ್ಲಿ ಎಲ್ಲರೂ ಜ್ಞಾನಭಕ್ತಿ ವೈರಾಗ್ಯ ಸಂಪನ್ನರು, ಮಹಿಮಾವಂತರಾದ ಪವಾಡಪುರುಷರು, ಲೋಕಕಲ್ಯಾಣ ಸಾಧನೆಗಾಗ ತಮ್ಮ ಬದು

---

೧ ಶ್ರೀ ಜ. ಚ. ನಿ. ಕೃತ 'ಹೂಗೊನೆ' ಪು. ೬೨.

೨ ,, —'ಗುರುಗೀತಾಂಜಲಿ' 'ಬಂದು ಹೂವು', ಪು. ೧೧

೩ ಶ್ರೀಗಳವರು ಪಂಚಾಚಾರ್ಯರನ್ನು ಕುರಿತು ಬರೆದಿರುವ ಗೀತೆಯನ್ನು ಅವರ 'ಹೊನ್ನ ಹಕ್ಕಿ' ಕವನ ಸಂಕಲನದಲ್ಲಿ ಓದಿ ತಿಳಿಯಬಹುದು.

ಕನ್ನು ಮಾಡಿಸಿಟ್ಟವರು. ಈ ಗುರುಪರಂಪರೆಯಲ್ಲಿ ತಮ್ಮ ಮನವನ್ನು ಸೆಳೆದ, ಹೃದಯವನ್ನು ತೊಳೆದ, ಆತ್ಮವನ್ನು ಮೇಲಕ್ಕೆಳೆದ ಹಲವು ಗುರುವರರನ್ನು, ಶ್ರೀ ಜ. ಚ. ನಿ. ಅವರು ತಮ್ಮ 'ಗುರುಗೀತಾಂಜಲಿ'ಯಲ್ಲಿ ತುಂಬು ಹೃದಯದಿಂದ ಹಾಡಿದ್ದಾರೆ. ಶ್ರೀ ಪಂಡಿತಾರಾಧ್ಯರು—"ಬ್ರಹ್ಮಾಂಡಗುರು, ಪಿಂಡಾಂಡ ಗುರು, ಬ್ರಹ್ಮಜ್ಞಾನವ ಕರುಣಿಸುವ ಪರಮಗುರು, ಕರ್ಮ ಕಗ್ಗತ್ತಲೆಯ ಕಳೆದು ಕಳೆಯ ಕೊಡುವ ದಿನಮಣಿ" ಇವರನ್ನು ಕುರಿತು, "ಪರವನೊಳಕೊಂಡ ಪಂಡಿತಾರಾಧ್ಯನೆ, ಪರಮಪೂಜ್ಯನೆ, ಪ್ರಥಮಾಚಾರ್ಯನೆ, ನಿನ್ನ ಅಡಿಗಳ್ಗೆ ಅಭಿವಂದಿಸುವೆನು, ಭಾಷ್ಯ ಬರೆವ ಭಾಗ್ಯವಿಧಾತನೆಂದು ಬಾಗಿ ಬೇಡುವೆನು, ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ, ನಿನ್ನ ಕರುಣ ಕಿರಣವ ತೋರಯ್ಯಾ !" ಎಂದು ಬೇಡಿಕೊಂಡಿದ್ದಾರೆ.

"ಗುರು ಪರಂಪರೆಯಲ್ಲಿ ಎರಡನೆಯವರಾದ ಶ್ರೀ ವಿರೂಪಾಕ್ಷ ದೇಶಿಕೇಂದ್ರರ ಮೂರ್ತಿಮಹಿಮೆಯನ್ನು—

"ವೀರಭಿಕ್ಷಾವರ್ತಿಯಂಗೆಲಿದ ವಿರೂಪಾಕ್ಷ ದೇಶಿಕೇಂದ್ರನೆ, ಚಂದಿರನ ಗುಂಡಾಗಿಸಿದ ಚೆನ್ನಿಗನೆ, ಶ್ರೀಪತಿಯ ಸೋಲಿಸಿ ಸಲಹಿದ ಶ್ರೀಗುರುವೆ, ಕಾಶೀ ವಿಶ್ವೇಶ್ವರನ ನುಡಿಸಿ ನಡಸಿದ ಕ್ರಿಯಾಸಿದ್ಧನೆ, ಕಾಶ್ಮೀರದರಸನಂ ಕರುಣಿಸಿದ ರಾಜಗುರುವೆ, ಕದಳೀವನವಂ ರಚಿಸಿದ ಕಳಾಗುರುವೆ, ನಿನ್ನ ವೀರಪಥದೆ ಎನ್ನಂ ನಡೆಸಯ್ಯ"*

—ಎಂದು ತಮ್ಮ 'ವಚನಸ್ತವನ'ದಲ್ಲಿ ಕೊಂಡಾಡಿದ್ದಾರೆ.

ಪರಂಪರೆಯಲ್ಲಿ ಮೂರನೆಯವರಾದ ಶ್ರೀ ಚಂದ್ರಗುಂಡ ದೇಶಿಕೇಂದ್ರ ಸ್ವಾಮಿಗಳ ಪರಿಚಯವನ್ನೂ ಶ್ರೀ ಜ. ಚ. ನಿ. ಯವರ ಕಾವ್ಯಭಾಷೆಯಲ್ಲಿಯೆ ಮಾಡಿಕೊಡುವುದೊಳ್ಳಿತು :

"ಹನ್ನೊಂದನೆಯ ಶತಮಾನದಲ್ಲಿ ಶ್ರೀ ಜಗದ್ಗುರು ಚಂದ್ರಗುಂಡಸ್ವಾಮಿ ಶಿವಾಚಾರ್ಯರು ಶ್ರೀ ಶೈಲ ಸೂರ್ಯಸಿಂಹಾಸನದಿ ಮಂಡಿಸುತ ಚಂದ್ರಕೀರ್ತಿಯಿಂ ತಾವು ಶೋಭಿಸಿಹರು.

"ಇತಿಹಾಸರಂಗದಲಿ ವಿಖ್ಯಾತನೆನಿಸಿರ್ದ ತವನಿಧಿಯ ದೇವರ ದಾಸಮಯ್ಯನಿಗೆ ಯತಿರಾಜ ಚಂದ್ರಗುಂಡ ಸ್ವಾಮಿಯು ದೀಕ್ಷೆಯನು ಕರುಣದಿಂ ಕೊಟ್ಟು ಮೆರೆದರಿಳೆಯೊಳಗೆ !

"ಪ್ರಖ್ಯಾತ ಶ್ರೀ ಚಂದ್ರಗುಂಡ ದೇಶಿಕೇಂದ್ರರು ದಕ್ಷಿಣದ ದೇಶವನು ಸುತ್ತುವರು; ಚೋಳಮಂಡಲಿ ದೇಶನೆಂವೆನುತ ಹೆಸರಾಂತ ಗೂಳೂರು ನಗರ ಬಳಿಗಾಗ ಮಿಸುವರು.

---

* ಶ್ರೀ ಜ. ಚ. ನಿ. ಕೃತ 'ಗುರುಗೀತಾಂಜಲಿ;' ಪು. ೧೦

ಚೋಳಪನದೊಳಗಿರುವ ತೆಂಗಿನಮರದ ಕೆಳಗೆ ಸಿದ್ಧಾಸನದಿ ಕುಳಿತು ಪೂಜಿಪರು;
ಏನು ಲಿಂಗದ ನೋಟ, ಏನು ಲಿಂಗದ ಕೂಟ, ಯಾವ ಪುಣ್ಯದ ಶುದ್ಧಿ, ಏನು ಸಿದ್ಧಿ !

"ಅಸಿತರೊಳು ತೀಡಿದ್ದ ಕರ್ಪೂರಾರತಿ ಹಚ್ಚಿ ಮಂಗಳಾರತಿ ಹೇಳಿ ಮುಗಿಸು ವರು; ನೈವೇದ್ಯವರ್ಪಿಸಲು ಬಳಿಯಲ್ಲಿ ಏನೇನು ಇಲ್ಲದಿರೆ ಮೇಲಿಕ್ಕೆ ನಿರುಕಿಸುವರು.

"ಅವರ ಆ ಸದ್ಭಾವವರಿದು ತೆಂಗಿನ ಮರವು ತಾನಾಗಿ ಬಾಗಿ ಫಲವೀಯು ವುದು; ಅವರ ತಪಸಿನ ಫಲವು ಏನಿದುವೆ ಸೋಜಿಗವು, ಏನು ಮಹಿತಾತ್ಮರಿವರೆಂದೆ ನುವರು.

ಇಷ್ಟುಮಾತ್ರವಲ್ಲ; ಚೋಳರಾಜನಿಗೆ ಸಂಪ್ರಾಪ್ತವಾಗಿದ್ದ ಬ್ರಹ್ಮಹತ್ಯಾ ದೋಷ ವನ್ನೂ ಅವರು ಪರಿಹರಿಸಿದರು :

"ಮರವು ಬಾಗಿತು. ಚೋಳರಸನ ರೋಗ ಹರಿಯಿತು, ಜನದಮನದೊಳು ಸಂತಸವುಕ್ಕಿತು; ವರಕೀರ್ತಿವುದಯಿಸಿತು ಶ್ರೀಶೈಲ ಹೆಸರಾಂತು, ವರಧರ್ಮದೊಸಗೆ ನಾಡೊಳು ಮೊಳಗಿತು.

"ಧರ್ಮಾರ್ಥದಿಂ ಕಟ್ಟಿಸಿತ್ತ ಗುಂಮಲೂರ್ ಮಠದ ಸ್ತಂಭದೊಳು ಚೋಳರಸ ಕೆತ್ತಿಸಿರುವ ತೆಂಗಿನ ಮರದ ಮೇಲ್ ಚಂದ್ರಗುಂಡರ ಚಿತ್ರ ಇಂದಿಗೂ ಉಸುರು ವುದೀ ಚರಿತ್ರವ !"[1]

## ನಿಡುಮಾಮಿಡಿ ನುಡಿವುಟ್ಟು

ಗುರು ಪೀಠಕ್ಕೆ ನೀಡು (ನಿಡು) ಮಾಮಿಡಿ ಎಂಬ ಹೆಸರು ಬಂದ ಸಂದರ್ಭವೂ ಸ್ವಾರಸ್ಯವಾಗಿದೆ; ಅದೂ ಒಂದು ಪವಾಡವೆ! ಪೀಠದ ನಾಲ್ಕನೆಯ ಗುರುಗಳಾದ ಶ್ರೀ ಕರಿಬಸವ ದೇಶಿಕೇಂದ್ರ ಸ್ವಾಮಿಗಳವರು "ದೇಶ ಸಂಚಾರಕ್ಕೆ ದಯಮಾಡಿಸಿ ಪೆನುಗೊಂಡೆ ಪ್ರಾಂತ್ಯದ ಅರಣ್ಯ ಮಾರ್ಗದಲ್ಲಿ ಮಧ್ಯಾಹ್ನದ ಶಿವಾರ್ಚನಾ ವೇಳೆ ಯಾದ್ದರಿಂದ ಅಲ್ಲಿ ಪ್ರವಹಿಸುತ್ತಿದ್ದ ಸುವರ್ಣಾವತಿಯಲ್ಲಿ ಸ್ನಾನಮಾಡಿ, ಶಿವಾರ್ಚನಾ ನಂತರ ಆರೋಗಣೆಗೆ ಆಹಾರ ಪದಾರ್ಥಗಳು ಒದಗದೆ ಸೇವಕಾಳಿಗಳು ಬಿಸಿಲಿನ ತಾಪ ದಿಂದ ಬಳಲುತ್ತಿರುವುದನ್ನು ಕಂಡು ಅಲ್ಲಿ ಒಣಗಿ ನಿಂತಿದ್ದ ಮಾವಿನ ವೃಕ್ಷದ ಮೇಲೆ ತಮ್ಮ ಕಮಂಡಲೋದಕವನ್ನು ಪ್ರೋಕ್ಷಿಸುತ್ತಲೇ ಆ ಮರವೆಲ್ಲಾ ಚಿಗುರಿ ಫಲಭರಿತ ವಾಗಲು ಆ ಮರವನ್ನೇ ನೀಡುಮಾಮಿಡಿ ಎಂಬುದಾಗಿ ಭಿಕ್ಷಬೇಡಿ ಆ ಫಲಗಳಿಂದಲೇ ತಮ್ಮ ಪರಿವಾರವನ್ನೆಲ್ಲಾ ತೃಪ್ತಿಪಡಿಸಿದರು. ಈ ಕಾರಣದಿಂದ 'ಗೂಳೂರು ನಿಡು ಮಾಮಿಡಿ ಸ್ವಾಮಿಗಳು' ಎಂಬ ಹೆಸರು ರೂಢಿಗೆ ಬಂದಿದೆ.[2]

---

೧. 'ಗುರು ಗೀತಾಂಜಲಿ' : ಪು. ೨೦–೨೧

೨. ಶ್ರೀ ನಿಡುಮಾಮಿಡಿ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ : ಪು. ೮
ಶ್ರೀ ಎಸ್. ಹಂಪಯ್ಯ ;

"ಒಣಗಿದ ಮಾವಿನ ಮರವನು ಫಲಿಸಿ
ಅಚ್ಯುತ ಭೂಪತಿಗಾಶೀರ್ವದಿಸಿ
ಶ್ರೀ ಘನಗಿರಿ ರವಿಪೀಠವಗಳಿಸಿ
ಜಗದೊಳ್ ಲೀಲೆಯು ಮೆರೆದಿಹೆ ಗುರುವೆ !"

ಎಂದು ಈ ಗುರುಮಹಿಮೆಯನ್ನು ಕೊಂಡಾಡಿರುವ ಶ್ರೀಗಳವರು 'ನಿಡುಮಾಮಿಡಿ'ಯ ನಿಸರ್ಗ ಸೌಂದರ್ಯಕ್ಕೆ ಹೀಗೆ ಮಾರುಹೋಗಿದ್ದಾರೆ :

"ಎಳೆಹಸುರಿನ ಇಳಿಬಿಸಿಲಿನ ಚೆಲು ಸಂಜೆಯು ಮುಂದೆ.
ಅಲೆಯುತ ಕೋಕಿಲಗಾನವ ಕೇಳುತಲೈತಂದೆ.
ನಿಡುಮಾಮಿಡಿ ನಡುಬಯಲಿನ ಪಡುಬೆಟ್ಟದ ಮೇಲೆ
ನಿಡುಗಾಲದ ಕೋಡ್ಗಲ್ಲಿನ ಮೃಡಶಾಸನ ಲೀಲೆ
ಕರಿಕಲ್ಲೊಳು ಮೆಯ್ವೆತ್ತಿಹ ಬೃಹದಕ್ಷರಶ್ರೇಣಿ, !
ಹೆರೆಹಿಂಗದೆ ಹಿರಿಹರುಷದೆ ನಿಂದೋದಿತು ವಾಣಿ! *

ಹೀಗೆ, 'ಗೂಳೂರು ನಿಡುಮಾಮಿಡಿ, ಸಂಸ್ಥಾನದ ಜಗದ್ಗುರು ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನಾಧೀಶ್ವರ ಗುರು ಪೀಠ ಪರಂಪರೆಯ ಗುರುಗಳೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಮಹಿಮಾವಂತರಾಗಿ ಮೆರೆದಿರುವರು. ಇವರೆಲ್ಲರೂ ಕನ್ನಡ ನಾಡಿನಲ್ಲೂ ನೆರೆನಾಡುಗಳಲ್ಲೂ ಉತ್ತರ ಭಾರತದಲ್ಲಿಯೂ ಸಂಚಾರ ಮಾಡಿ, ವೀರಶೈವ ಮತೋದ್ಧಾರ ಮತ ಪ್ರಸಾರ ಕಾರ್ಯಗಳನ್ನು ಮಾಡಿ, ಕೀರ್ತಿ ಭಾಜನರಾಗಿರುವರು. ಮೂಲ ಮಠದವರು ತಮ್ಮ ಸಂಚಾರಕಾಲದಲ್ಲಿ ಶಿಷ್ಯಕೋಟಿಯನ್ನು ಸಂಪಾದಿಸಿ, ಅವರ ಧಾರ್ಮಿಕ ಜಾಗೃತಿಗಾಗಿ ದೇಶಾದ್ಯಂತ ಸ್ಥಾಪನೆಮಾಡಿದ ಶಾಖಾಮಠಗಳು ನೂರಾರು ಇವೆ. ಮೂಲ ಪೀಠದ ಪ್ರತಿಯೊಬ್ಬ ಗುರುವಿನ ಬಗೆಗೂ ಅವರೆಸಗಿದ ಪವಾಡಗಳ ಐತಿಹ್ಯವುಂಟು, (ಇಂದಿನ ವಿಜ್ಞಾನ ಯುಗದಲ್ಲಿ ಇಂಥ ಪವಾಡಗಳನ್ನು ನಂಬಬಹುದೆ ಎಂಬ ಪ್ರಶ್ನೆಯ ಚರ್ಚೆಗೆ ಇಲ್ಲಿ ಅವಕಾಶವೂ ಇಲ್ಲ. ಅದು ಪ್ರಕೃತವೂ ಅಲ್ಲ) ಮಹಿಮಾಸ್ಪದವಾದ ಈ ನಿಡುಮಾಮಿಡಿ ಗುರುಪೀಠ ಪರಂಪರೆಯಲ್ಲಿ ಮೂವತ್ತೊಂದನೆಯವರು ನಮ್ಮ ನಚ್ಚಿನ ಮೆಚ್ಚಿನ ಶ್ರೀ ಶ್ರೀ ಜ.ಚ.ನಿ.

**ಪವಾಡ ಪುರುಷ ಶ್ರೀ ಜ. ಚ. ನಿ.**

ಪವಾಡಪುರುಷ ಪರಂಪರಾಪ್ರಾಪ್ತ ಶ್ರೀ ನಿಡುಮಾಮಿಡಿ ಸಂಸ್ಥಾನದ ಇಂದಿನ ಪೀಠಾಧ್ಯಕ್ಷರಾದ ಶ್ರೀ ಜ. ಚ. ನಿ. ಯವರ ಮಹಿಮೆಯೆಂತಹುದು ? ಅವರೂ ಪವಾಡಪುರುಷರೆ ? ಅವರ ಸಾಧನೆ ಸಿದ್ಧಿಗಳು ಅವೇನು ? ಎಂಬ ಪ್ರಶ್ನೆಗಳು ಮೇಲಿನ

* ಶ್ರೀ ಜ. ಚ. ನಿ. ಕೃತ 'ಗುರು ಗೀತಾಂಜಲಿ' : ಪು. ೪೧

ಸಂಗತಿಗಳನ್ನು ಓದಿದ ಯಾರ ಮನದಲ್ಲಿಯಾದರೂ ಸ್ಫುರಿಸದಿರವು. ನನ್ನ ಉತ್ತರ! ಅವರು ಪವಾಡಪುರುಷರೆಂಬುದೆ! ಹಾಗೆಂದಮೇಲೆ, ಅವರು ಸಾಧಿಸಿರುವ ಪವಾಡಗಳಾವುವು ?

‘ಸ್ವಧರ್ಮ’ದಲ್ಲಿ ಸುಪ್ರತಿಷ್ಠಿತರಾಗಿ, ಸಂಶಯಾತ್ಮರಾಗದೆ, ಪೂರ್ವಾಚಾರ್ಯರ ಪವಿತ್ರ ಗ್ರಂಥಗಳಲ್ಲಿ ಪ್ರತಿಪಾದಿತವಾದ ಬೋಧಾಮೃತವನ್ನು ಪಾನಮಾಡಿ ತುಷ್ಟಿ ಪುಷ್ಟಿ ಪಡೆದು, ಆ ಧರ್ಮದ ಮೂರ್ತಿ ಸ್ವರೂಪರೇ ಆಗಿರುವುದು ಮೊದಲನೆಯ ಪವಾಡ. ಪೂರ್ವಾಚಾರ್ಯ ಪ್ರೋಕ್ತವಾದ ವೀರಶೈವ ಸಿದ್ಧಾಂತದ ಅರಿವನ್ನು ಒರೆಗಿಟ್ಟು ನೋಡುವ ಸಲುವಾಗಿ ಪರಸಮಯ ಪರಪಂಥಗಳ ಶಾಸ್ತ್ರ ಗ್ರಂಥಗಳನ್ನು ಆಳವಾಗಿ ವ್ಯಾಸಂಗ ಮಾಡಿ, ಅವುಗಳ ಸಾರವನ್ನು ಸ್ವ-ಸಿದ್ಧಾಂತಕ್ಕೆ ಬಾಧೆ ತಗಲದ ರೀತಿಯಲ್ಲಿ ಅಳವಡಿಸಿಕೊಂಡು ಮೈಗೂಡಿಸಿಕೊಂಡು, ತತ್ಪರಿಣಾಮವಾಗಿ ವಿಶಾಲ ಹೃದಯವನ್ನೂ ವಿಶಾಲಮನೋಧರ್ಮವನ್ನೂ ಬೆಳಸಿಕೊಂಡಿರುವುದು ಎರಡನೆಯ ಪವಾಡ, ಪೂರ್ವಾಚಾರ್ಯರಲ್ಲಿ ಹಲವರು ಪರಧರ್ಮಗಳವರನ್ನು ಬುದ್ಧಿಶಕ್ತಿಯ ವಾದದ ಮೂಲಕ ಗೆದ್ದಿದ್ದರೆ, ಇವರು ‘ಹೃದಯ ಸಂವಾದ’ದ ಮೂಲಕ ಗೆದ್ದಿರುವುದು ಮೂರನೆಯ ಪವಾಡ. ಶಾಸ್ತ್ರಗ್ರಂಥಗಳ ನಿತ್ಯಾನುಸಂಧಾನದಲ್ಲಿ ತೊಡಗಿಯೂ ಶಾಸ್ತ್ರಜಡರಾಗದೆ, ಎಳವೆಯದಲ್ಲಿಯೆ ಅಂಕುರಿಸಿದ ಕವಿತಾಶಕ್ತಿಯನ್ನು ಒಣಗಬಿಡದೆ ಬೆಳೆಯಿಸಿಕೊಂಡ ಕಾವ್ಯಲತೆಯನ್ನು ಧರ್ಮದ ಹಂದರದ ಮೇಲೆ ಹಬ್ಬಿಸಿ, ಅದರಡಿಗೆ ಬಳಲಿಬಂದ ಭಕ್ತಕೋಟಿಗೆ ಧರ್ಮದ ತಂಪನ್ನೂ ಕಾವ್ಯದ ಕಂಪನ್ನೂ ನಿರಂತರವಾಗಿ ನೀಡುತ್ತ, ‘ನೀಡುಮಾನಿಡಿ’ ಎಂದು ಸಾರ್ಥನಾಮರಾಗಿರುವುದು ನಾಲ್ಕನೆಯ ಪವಾಡ. ಹುಟ್ಟಿನಿಂದಲೇ ಹೆಗಲಮೇಲೆ ಹೊತ್ತು ತಂದ ಅನಾರೋಗ್ಯದ ಮೂಟೆಯ ಭಾರವನ್ನು ಗಮನಿಸದೆ, ಗುರುಪೀಠಕ್ಕೆ ಅನಿವಾರ್ಯವಾಗಿ ಅಂಟಿಕೊಂಡುಬಂದ ಪ್ರವಚನ ಪ್ರವಾಸಾದಿ ಕರ್ತವ್ಯ ಕರ್ಮ ಬಾಹುಳ್ಯದ ನಡುವೆಯೂ ವಿರಾಮವನ್ನು ಅದು ಹೇಗೋ ದಕ್ಕಿಸಿಕೊಂಡು, ಸುಮಾರು ೬೦ ಕನ್ನಡ ಗ್ರಂಥಗಳನ್ನು ರಚಿಸಿ, ತಮ್ಮದೇ ಆದ ವಿಶಿಷ್ಟ ಕಾವ್ಯ ಕಾಣಿಕೆಯಿಂದ ಕನ್ನಡ ಸಾರಸ್ವತ ಭಂಡಾರವನ್ನು ಸಮೃದ್ಧಗೊಳಿಸಿರುವುದು ಐದನೆಯ ಪವಾಡ. ಇನ್ನೂ ಎನಿತನ್ನೊ ಗುರುತಿಸಬಹುದು. ಈ ಐದು ಪ್ರಮುಖ ಪಂಚ ಪವಾಡಗಳಿಂದ ಪಂಚಾಚಾರ್ಯ ಪ್ರತಿಷ್ಠಿತವಾದ ಗುರುಪೀಠದ ಪವಾಡ ಪ್ರಸಿದ್ಧಿಯನ್ನು ಶ್ರೀ ಜ. ಚ. ನಿ. ಅವರು ಕಾಲೋಚಿತವಾಗಿ ಕಾಯ್ದುಕೊಂಡಿರುವುದು ಪವಾಡಗಳಲ್ಲಿ ದೊಡ್ಡ ಪವಾಡ! ಇದು ಅವರ ಆತ್ಮ ಶಕ್ತಿಯ ದ್ಯೋತಕ, ನಗರ ಜೀವನದ ಪಂಕದ ನಡುವೆ ಆಧ್ಯಾತ್ಮಿಕ ಸೌರಭವನ್ನು ಸೂಸುವ ಕಾವ್ಯ ಕಮಲವು ನಿತ್ಯ ವಿಕಸಿತವಾಗಿರುವಂತೆ ಅನುಗ್ರಹಿಸುತ್ತಿರುವ ಸೂರ್ಯ ಸಿಂಹಾಸನಸ್ಥ ಶ್ರೀ ಜ. ಚ. ನಿ. ನಿಜವಾಗಿ ಪವಾಡ ಪುರುಷರು.

## ಪೂರ್ವಾಶ್ರಮದ ಚಂದ್ರಶೇಖರ ಅಡ್ನೂರು

ಗಂಡು ಸಂತಾನವನ್ನೆಲ್ಲಾ ಶಿವನ ಪಾದಕ್ಕೆ ಒಪ್ಪಿಸಿದ ತಾಯಿತಂದೆಗಳ ಶಿವ ಪೂಜೆಯ ವರ ಪ್ರಸಾದವೋ ಎಂಬಂತೆ ಜನಿಸಿತು ಒಂದು ಗಂಡುಕೂಸು, ಆನಂದ ಸಂವತ್ಸರದಲ್ಲಿ (೧೯೧೧). ಮಗುವೋ ತೀರ ಕೃಶ; ತಾಯಹಾಲಿಗೂ ಸೊನ್ನೆ. ಹುಯ್ಯ ಹಾಲಿನಲ್ಲಿಯೆ ಬೆಳೆದ ಕೂಸು ತನ್ನ ಐದನೆಯ ವರ್ಷದಲ್ಲಿಯೆ ತಾಯಿಯನ್ನು ಕಳೆದುಕೊಂಡ ತಬ್ಬಲಿಯಾಯಿತು. ಬಾಲಕ ಚಂದ್ರಶೇಖರನ ಶಾಲಾ ಶಿಕ್ಷಣ ಮೂರ ನೆಯ ವರ್ಷದಲ್ಲಿಯೆ ಮುಗ್ಗರಿಸಿತು. ಗೃಹಕೃತ್ಯದ ತೊಂದರೆಗಳಿಂದಾಗಿ ತಂದೆ ಮಗ ನನ್ನು ದನಕಾಯುವ ಕೆಲಸಕ್ಕೆ ನೇಮಿಸಿದರು. ದನಕಾಯುವ ಸಿದ್ಧರಾಮನನ್ನು 'ಪರ್ವತದ ಮಲ್ಲಯ್ಯ' ತಾನಾಗಿ ಹುಡುಕಿಕೊಂಡು ಬಂದಂತೆ, ಚಂದ್ರಶೇಖರನ ಭಾಗದ ದೈವ ಅಡ್ನೂರಿನ ಮಲ್ಲಿಕಾರ್ಜುನ ಗೌಡರನ್ನು ಆತನ ಊರಾದ ಅಂಬರಗಟ್ಟಿಯ ಹಟ್ಟಿಯ ಬಾಗಿಲಿಗೆ ಕಳಿಸಿತು. ಗೌಡರ ತಂದೆಯವರು ಅಡ್ನೂರಿನಲ್ಲಿ ಕಟ್ಟಿಸಿದ ಮಠಕ್ಕೆ ಸ್ವಾಮಿಯಾಗಲು ವಟುವಿನ ಅಗತ್ಯವಿದ್ದಿತು. ತಾವೇ ವಟುವನ್ನು ಓದಿಸಿ, ಮಠದ ಸ್ವಾಮಿಯ ಅಧಿಕಾರವನ್ನು ಗೌಡರು ಚಂದ್ರಶೇಖರನ ತಂದೆಯವರ ಮುಂದಿಟ್ಟರು. ಓದಿನಲ್ಲಿ ತೀವ್ರಾಭಿಲಾಷೆಯಿದ್ದ ಚಂದ್ರಶೇಖರನಿಗೆ ತಪ್ಪಿಹೋಗಿದ್ದ ರೈಲು ಸಿಕ್ಕಿದ ಹಾಗಾಯಿತು! ಗೃಹತ್ಯಾಗಮಾಡಿ ಮಠ ಪ್ರವೇಶ ಮಾಡಲು ಸಂತೋಷದಿಂದ ಒಪ್ಪಿ ಕೊಂಡ. ಮನಸ್ಸಿಲ್ಲದ ತಂದೆ ಮಗನನ್ನು ಬಿಟ್ಟುಕೊಟ್ಟರು. ಕುಲದೀಪಕ ಕನ್ನಡ ಕುಲದ ದೀಪಕನಾಗುತ್ತಾನೆಂದು ಅವರು ಅರಿಯರು. ಮಾರನೆಯದಿನವೆ ಚಂದ್ರ ಶೇಖರ ಮಲ್ಲಿಕಾರ್ಜುನ ಗೌಡರೊಂದಿಗೆ ಅಡ್ನೂರಿಗೆ ಪ್ರಯಾಣ ಮಾಡಿದನು. (ಅಡ್ನೂರು ನವಿಲುಗುಂದ ತಾಲ್ಲೂಕಿನ ಒಂದು ಚಿಕ್ಕಹಳ್ಳಿ.) ಮಲ್ಲಿಕಾರ್ಜುನಗೌಡರು ಅಡ್ನೂರಿನ ಶ್ರೀಮಂತರು. ಅವರ ಮನೆಯಲ್ಲಿಯೇ ಚಂದ್ರಶೇಖರನ ಬಿಡಾರ. ಅಲ್ಲಿ ಐದ ನೆಯ ದರ್ಜೆಯ ಓದು ಮುಗಿದಿದ್ದಾಗ, ಚಂದ್ರಶೇಖರನ ಭವ್ಯ ಭವಿಷ್ಯದ ಬಾಗಿಲು ತೆರೆಯಿತು. ಮಲ್ಲಿಕಾರ್ಜುನ ಗೌಡರು, ಕಾರ್ಯಾರ್ಥಿಗಳಾಗಿ ಅಣ್ಣಿಗೆರೆಗೆ ಹೋಗಿದ್ದರು. (೧೯೨೪) ಅದೇ ವೇಳೆಗೆ, ಹಾನಗಲ್ಲಿನ ಶ್ರೀ ಕುಮಾರಸ್ವಾಮಿಗಳು, ಅಣ್ಣಿಗೆರೆಗೆ ದಯ ಮಾಡಿಸಿದ್ದರು. ಶ್ರೀಗಳವರ ದರ್ಶನ ಪಡೆದ ಗೌಡರು, ಶ್ರೀಗಳವರು ಸ್ಥಾಪನೆ ಮಾಡಿ ನಡಸುತ್ತಿದ್ದ ಶಿವಯೋಗ ಮಂದಿರದಲ್ಲಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ವಟುವನ್ನು ಒಪ್ಪಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಶ್ರೀಗಳವರು ಗೌಡರ ಪ್ರಾರ್ಥನೆಗೆ ಅಸ್ತು ಎಂದರು. ಚಂದ್ರಶೇಖರನು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಶಿವಯೋಗ ಮಂದಿರವನ್ನು ಪ್ರವೇಶಿಸಿದನು.

## ಶಿವಯೋಗ ಮಂದಿರದಲ್ಲಿ ವಟುಜೀವನ

ಗದುಗಿನಿಂದ ಬಿಜಾಪುರಕ್ಕೆ ಹೋಗುವ ರೈಲು ಮಾರ್ಗದಲ್ಲಿ ಇತಿಹಾಸ ಪ್ರಸಿದ್ಧ ವಾದ ಬಾದಾಮಿಯ ನಿಲ್ದಾಣವಿದೆ. ಬಾದಾಮಿಗೆ ನಾಲ್ಕು ಮೈಲಿ ದೂರದಲ್ಲಿ

ಪ್ರಸಿದ್ಧ ಬನಶಂಕರಿ ದೇವಾಲಯ. ದೇವಾಲಯಕ್ಕೆ ಐದು ಮೈಲಿ ದೂರದಲ್ಲಿ 'ಶಿವಯೋಗ ಮಂದಿರ'ವೆಂಬ ಗುರುಕುಲ. ಚಂದ್ರಶೇಖರನು ಅಲ್ಲಿಗೆ ಸೇರಿದ ಹೊತ್ತಿಗೆ, ಶ್ರೀ ಕುಮಾರಸ್ವಾಮಿಗಳು ಅದನ್ನು ಸ್ಥಾಪಿಸಿ ಹದಿನಾರು ವರ್ಷವಾಗಿತ್ತು. "ಶಿವಯೋಗ ಮಂದಿರ ಸಾಧಕರ ಸ್ಥಾನವಾಗಿ, ವೀರಶೈವ ಸಮಾಜಕ್ಕೆ ಯೋಗ್ಯರಾದ ಗುರುಗಳನ್ನು ಒದಗಿಸುವ ಕ್ಷೇತ್ರವಾಗಬೇಕೆಂಬುದು ಶ್ರೀಗಳವರ ಹೆಬ್ಬಯಕೆಯಾಗಿತ್ತು."*

ಶ್ರೀ ಜ. ಚ. ನಿ. ಅವರ ಸವಿನೆನಪಿನ ನುಡಿಯಲ್ಲಿ 'ಶಿವಯೋಗ ಮಂದಿರ' ಹೀಗೆ ಚಿರಸ್ಥಾಯಿಯಾಗಿದೆ :

"ನಿನ್ನ ಮಂದಿರ ಏನು ಸುಂದರ ಎನಿತು ಬಂಧುರ ಓ ಸುಕುಮಾರ !
ಕಣ್ಣ ನೋಡೊಳು ಬಂದು ನಿಂತಿಲು ಶಾಂತಿಯೀಯುವ ಕಾಂತಿಚಂದಿರ !
ಭವದಬೇಗೆಯು ಭಾವಭ್ರಾಂತಿಯು ತಪಿಸಿ ಶೋಷಿಸ ಶಿವನಮಂದಿರ !
ಮಲವ ಹಾರಿಸ 'ಮಲಾಪಹಾರಿ' ಬಳಿಕೆ ಹರಿದಿದೆ ಎನಿತು ಸುಂದರ !
ಸುತ್ತು ಪಾವನ ತೀರ್ಥಕ್ಷೇತ್ರಗಳ್ ಬೆಳೆದ ಬೆಟ್ಟಗಳ್ ಎಂಥ ಬಂಧುರ !
ಶಿವನ ರಾಗವ ಶಿವನ ಯೋಗವ ಜನಗೆ ಕಲಿಸುವ ಶಿವನ ಮಂದಿರ !
ಮುಕ್ತಿಗುಟಿಯನು ಭಕ್ತಜನರಿಗೆ ಬಿಡದೆ ಕೊಡುತಿಹ ಭಕ್ತಿಸಾಗರ !
ಮರೆಸಿಮುಚ್ಚಿ ನಿಂ ಮುಂಗಾಣದಿರೆ ಅರಿವ ನೀಡುವ ಸುಪ್ರಭಾಕರ !
ಸ್ವಾದಗೋಕ್ಷೀರ ಗೋಷ್ಠಿ ಅಪಾರ ಬೋಧ ವಿಹಾರ ಏನು ಸುಮಧುರ !
ರಾಗರಚನೆಯು ಯೋಗರುಚಿಯು ಬೇಗಬರಿಸುವ ಯೋಗಮಂದಿರ !
ನವಿಲ ನರ್ತನ ಮಿಗದ ನರ್ತನ ಜೊನಲಿ ಗಾಯನ ಎನಿತು ಇಂಚರ !
ತೊರೆಯ ಮಜ್ಜನ ದುರಿತನಾಶನ ಪುಣ್ಯವರ್ಧನ ಮಾನ್ಯಮಂದಿರ !
ಶುದ್ಧ ಜನರಿಗೆ ಸಿದ್ಧಿಬುದ್ಧಿಯನಿತ್ತು ಪೊರೆಯುವ ಮುದ್ದು ಮಂದಿರ !
ತಪನೆ ಮಹತ್ತು ಯಶವೆ ಸಂಪತ್ತು ನಯವು ಆಸ್ತಿತ್ತು ನಿನಗೆ ಮಂದಿರ !
ಚಿನ್ನ ಹೊಸಗೆಯ ಕಂಡೆ ನೀನಿಹೊ ರನ್ನ ದೊಸಗೆಯ ಕಾಣುಮಂದಿರ !

---

* ಈ ಪ್ರಕರಣವನ್ನು ಶ್ರೀಗಳವರ ಸಾಹಿತ್ಯ ಸೇವೆಯ ಪ್ರಕರಣವನ್ನೂ ಬರೆಯುವಲ್ಲಿ, ಶ್ರೀ ಅ. ನ. ಕೃ. ರಚಿತ 'ಶ್ರೀ ಕುಮಾರಸ್ವಾಮಿ ಸನ್ನಿಧಿಯಲ್ಲಿ' ಎಂಬ ಗ್ರಂಥವನ್ನು ಯಥೋಚಿತವಾಗಿ ಬಳಸಿಕೊಂಡಿದೆ. ಅವರನ್ನು ಇಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ.

—ಲೇಖಕ.

ಕಾರಣಿಕ ಕುಮಾರನಿನ್ನ ಯೋಗ ಮಂದಿರ
ರಾಗವುನವ ತೊಡೆಯಿತು ಭೋಗಭಾವ ಬಿಡಿಸಿತು
ಕಾಡ ನಾಡ ಮಾಡಿತು ನಾಡ ಜನರ ತೀಡಿತು !
ರೋಗ ರುಜಿನ ಕೆಡಿಸಿತು ಯೋಗ ಸುಖವ ನೀಡಿತು ![1]

ಈ ಸುಂದರ ಶಿವಯೋಗ ಮಂದಿರದಲ್ಲಿ ಹನ್ನೆರಡು ವರ್ಷಗಳ ಕಾಲ ಕಟ್ಟು ನಿಟ್ಟಿನ ವಟುಜೀವನದ ದಿನಚರಿಯೊಂದಿಗೆ ಚಂದ್ರಶೇಖರ ದೇವರ ಬಿಡುವಿಲ್ಲದ ಅಭ್ಯಾಸ ಸಾಗಿತು. ಈ ಅಭ್ಯಾಸ ವೈವಿಧ್ಯಪೂರ್ಣವಾದುದು, ಮೈಯ್‌ಮನಗಳನ್ನು ತಿದ್ದುವಂಥದು, ಹೃದಯವನ್ನು ಅರಳಿಸುವಂಥದು, ಬುದ್ಧಿಯನ್ನು ಬೆಳಗುವಂಥದು, ಆತ್ಮದಲ್ಲಿ ನಿಷ್ಠೆ ತರುವಂಥದು. ಕನ್ನಡ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಆವಶ್ಯ ಮಟ್ಟದ ಶಿಕ್ಷಣ ಲಭ್ಯವಾಯಿತು. ಮಂದಿರದ ಬಿಡುವು ಕೊಡದ ಕಾರ್ಯಕ್ರಮಗಳ ನಡುವೆ ವ್ಯಾಸಂಗವನ್ನು ಅಲಕ್ಷ್ಯಮಾಡದೆ ಚಂದ್ರಶೇಖರ ದೇವರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಸಾಹಿತ್ಯ, ವ್ಯಾಕರಣ, ಸಾಂಖ್ಯ, ವೇದಾಂತ ಶಾಸ್ತ್ರಗಳ ಪರೀಕ್ಷೆ ಕೊಟ್ಟು ಅದರಲ್ಲಿ ಉತ್ತೀರ್ಣರಾದರು. ಚಂದ್ರಶೇಖರರ ಕವಿತಾಶಕ್ತಿ ಕುಡಿಯೊಡೆದದ್ದು ಈ ಕಾಲದಲ್ಲಿಯೆ. ಇವರು ಆಗ ಕನ್ನಡಕ್ಕೆ ಅನುವಾದ ಮಾಡಿದ ಕಾಲಿದಾಸನ 'ಮಾಲವಿಕಾಗ್ನಿಮಿತ್ರ'ವು ಇವರು ಗಳಿಸಿದ್ದ ಉಭಯಭಾಷಾ ಪಾಂಡಿತ್ಯಕ್ಕೆ ನಿದರ್ಶನ. ಆಗ ಮಂದಿರದಲ್ಲಿ 'ಸುಕುಮಾರ' ಎಂಬ ಕೈಬರಹದ ಪತ್ರಿಕೆ ಹೊರಡುತ್ತಿತ್ತು. ಚಂದ್ರಶೇಖರ ದೇವರು ಸಂಪಾದಕ ಮಂಡಲಿಯಲ್ಲಿ ಒಬ್ಬರಾಗಿದ್ದುಕೊಂಡು, ಅದಕ್ಕಾಗಿ ಲೇಖನಗಳನ್ನೂ ಬರೆಯತೊಡಗಿದರು. 'ವಚನಕಾರ' ಜ.ಚ.ನಿ. ಜನ್ಮತಾಳಿದ್ದು ಆಗಲೇ ಎನ್ನಬಹುದು. ಅವರ ಪ್ರಾರಂಭದ ವಚನಗಳು 'ತಿಳಿನುಡಿಗಳು' ಎಂಬ ಶೀರ್ಷಿಕೆಯಲ್ಲಿ ಹೊರ ಬರುತ್ತಿದ್ದುವು. ತಮ್ಮನ್ನು ಬರಹಗಾರರಾಗಿ ಬೆಳಕಿಗೆ ತಂದ 'ಸುಕುಮಾರ'ನನ್ನು ಶ್ರೀಗಳವರು ಹೀಗೆ ಸ್ಮರಿಸಿದ್ದಾರೆ :

ಶಿವಯೋಗ ಮಂದಿರವ ಸ್ಥಾಪಿಸಿದ ಹರಿಕಾರ
ಹಾನಗಲ್ಲ ಕುಮಾರ ಧನ್ಯ ನೀನು
ಶಿವಯೋಗ ಸಂಸ್ಕೃತಿಯು ಕನ್ನಡದಿ ಮೊಳಗಿಸಿದ
ಶಿವಯೋಗಿ ಸುಕುಮಾರ ಮಾನ್ಯ ನೀನು."[2]

ವ್ಯಾಸಂಗ ವಿಚಾರದಲ್ಲಿ ಚಂದ್ರಶೇಖರ ದೇವರಿಗೂ ಮಂದಿರದ ಪರೀಕ್ಷಕರಿಗೂ ಭಿನ್ನಾಭಿಪ್ರಾಯವುಂಟಾಗಿ, ಮಂದಿರದ ಅಧ್ಯಕ್ಷರ ಅಪ್ಪಣೆ ಪಡೆದು ಚಂದ್ರಶೇಖರ ದೇವರು ತಮ್ಮ ವಿದ್ಯೆಯ ತವರನ್ನು ತ್ಯಜಿಸಬೇಕಾದ ದುಃಖದ ಸಂದರ್ಭವೊದಗಿತು.

1, ಶ್ರೀ ಜ. ಚ. ನಿ. ಕೃತ 'ಹೊಗೊನೆ' ಕವನಸಂಕಲನ : ಪು. ೧೪-೧೫.

2. 'ಶಿವಯೋಗ ಮಂದಿರ' ಹಾಗೂ ಅಲ್ಲಿನ 'ವಟುಜೀವನ'ವನ್ನು ಕುರಿತು ಶ್ರೀಗಳು ಬರೆದಿರುವ ಎರಡು ಮುದ್ದಾದ ಕವನಗಳನ್ನು 'ಹೂಬಿಂಗಸೆ' ಎಂಬ ಕವನ ಸಂಕಲನದಲ್ಲಿ ಕಾಣಬಹುದು. ೩೦-೪೦ ಪುಟಗಳಲ್ಲಿ ವಿಸ್ತರಿಸಬಹುದಾದ ವಿಷಯ ಅವುಗಳ ಸು. ೪೦ ಪದ್ಯಗಳಲ್ಲಿ ಚೆಲುವಾಗಿ ವ್ಯಕ್ತಗೊಂಡಿದೆ.

ಅಲ್ಲಿಂದ ಹೊರಟು ಅವರು ಅಡ್ನೂರಿಗೆ ಹಿಂದಿರುಗಿದರು. ಇಲ್ಲಿಂದ (೧೯೩೫) ಮೊದಲ್ಗೊಂಡು ಅವರು ಮುಂದೆ ಗೂಳೂರಿನ ಪೀಠವನ್ನಲಂಕರಿಸುವವರೆಗಿನ (೧೯೩೯) ಅವರ ಜೀವನಪಥವನ್ನು ಸ್ಥೂಲವಾಗಿ ಹೀಗೆ ಗುರುತಿಸಬಹುದು :

೧. 'ಶಿವಾನುಭವ' ಪತ್ರಿಕೆಯಲ್ಲಿ 'ಮಹಾದೇವಿಯಕ್ಕಗಳು ಮದುವೆಯಾಗಿರುವರೆ ?' ಎಂಬ ಲೇಖನ ಮಾಲೆಯ ಪ್ರಕಟನೆ.

೨. ಅಡ್ನೂರಿನಲ್ಲಿ ಯಶಸ್ವೀ ಪ್ರಥಮ ಭಾಷಣ.

೩. ಅನಾರೋಗ್ಯ : ಚಿಕಿತ್ಸೆಗಾಗಿ ಬೆಳಗಾವಿಗೆ ಪ್ರಯಾಣ.

೪. ಕನ್ನಡದಲ್ಲಿ ಉಚ್ಚ ವ್ಯಾಸಂಗಕ್ಕಾಗಿ ನವಿಲುಗುಂದದ ಶ್ರೀ ಸ್ವಾಮಿಗಳ ಪರಿಚಯ ಪತ್ರದೊಂದಿಗೆ ಬೆಂಗಳೂರಿಗೆ ಆಗಮನ (ಜುಲೈ ೧೯೩೬)

೫. ಬೆಂಗಳೂರು ಸರ್ಪಭೂಷಣ ಮಠದ ಆಶ್ರಯದಲ್ಲಿ ವ್ಯಾಸಂಗ (ಜೂನ್ ೧೯೩೯ ರವರೆಗೆ)

೬. ಲೇಖನ ವ್ಯವಸಾಯದ ಪ್ರಗತಿ (೧೯೩೬ ರಿಂದ ೧೯೩೯ ರ ವರೆಗೆ) : 'ಶಿವಾನುಭವ'ದಲ್ಲಿ ಅಕ್ಕಮಹಾದೇವಿ, ಹರಿಹರ, ಗುಬ್ಬಿ ಮಲ್ಲಣಾರ್ಯ ಮುಂತಾದ ಕವಿ-ಕೃತಿಗಳನ್ನು ಕುರಿತ ವಿಮರ್ಶಾತ್ಮಕ ಲೇಖನಗಳು ; 'ಶರಣಸಾಹಿತ್ಯ'ದಲ್ಲಿ ವಿವಿಧ ಧಾರ್ಮಿಕ ವಿಷಯಗಳ ಮೇಲೆ ಲೇಖನಗಳು ; ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡನುಡಿ'ಯಲ್ಲಿ (ಆಗ ಶ್ರೀ ಅ.ನ.ಕೃ. ಅವರ ಸಂಪಾದಕತ್ವದಲ್ಲಿ ಅದು ವಾರಪತ್ರಿಕೆಯಾಗಿ ಹೊರಡುತ್ತಿತ್ತು.) ಕೆಲವು ಆಧುನಿಕ ಸಾಹಿತಿಗಳನ್ನು ಕುರಿತು ಪರಿಚಯಾತ್ಮಕ ಲೇಖನಗಳು–ಇವುಗಳ ಪ್ರಕಟನೆ.

೭. ಮೊಮ್ಮೊದಲಿನ ಗ್ರಂಥಗಳ ಪ್ರಕಟನೆ (೧೯೩೯): (೧) 'ಅಕ್ಕನಬಾಳು', (೨) 'ಅಕ್ಕನ ಲಾವಣಿ'. (೩) 'ಅಕ್ಕನ ಅಮೃತವಾಣಿ', (೪) ಮಹಾದೇವಿಯಕ್ಕನ (ಅಪ್ರಕಟಿತ) 'ಯೋಗಾಂಗ ತ್ರಿವಿಧಿ' ಗ್ರಂಥದ ಸಂಪಾದನೆ ಮತ್ತು ಪ್ರಕಟನೆ. (೫) ಮುಪ್ಪಿನ ಷಡಕ್ಷರಿಯ 'ಕೈವಲ್ಯ'ದ ಪರಿಷ್ಕರಣ, ಸಂಪಾದನ ಮತ್ತು ಪ್ರಕಟನ (೧೯೪೦).

ಈ ಕಾಲದ ಇವರ ಸಾಹಿತ್ಯಸಾಧನೆ-ಸಿದ್ಧಿಗಳನ್ನು ಶ್ರೀ ಅ. ನ. ಕೃ. ಅವರ ಮಾತುಗಳಲ್ಲಿ ಹೀಗೆ ಸಂಗ್ರಹಿಸಬಹುದು :

"ಚಂದ್ರಶೇಖರ ದೇವರಿಗೆ ಅವರ ಜೀವನಪಥ ಸ್ಪಷ್ಟವಾಗುತ್ತ ಬಂದಿತು. 'ಅಕ್ಕನ ಬಾಳು' ಗ್ರಂಥದಲ್ಲಿ ಅವರು ಬಳಸಿದ ಕಾವ್ಯಮಯ ಗದ್ಯಶೈಲಿ ಬಹಳ ಜನ ವಿದ್ವಾಂಸರ ಮೆಚ್ಚುಗೆಯನ್ನು ತಂದಿತು. 'ಯೋಗಾಂಗ ತ್ರಿವಿಧಿ' ಮತ್ತು 'ಸುಬೋಧ

ಸಾರ' ಪರಿಷ್ಕರಣಗಳಲ್ಲಿ ಅವರು ತೋರಿದ ನಿಷ್ಪಕ್ಷಪಾತ ದೃಷ್ಟಿ, ವಿಮರ್ಶನಾನೈಪುಣ್ಯ ಪಂಡಿತರ ಮನಸ್ಸಿಗೆ ಮೆಚ್ಚುಗೆಯಾಯಿತು. ಚಂದ್ರಶೇಖರ ದೇವರ ಕಾವ್ಯಪರಿಣತ ಮತಿ ಪಕ್ವವಾಗುವುದನ್ನು ಕನ್ನಡ ಜನ ವಿಶ್ವಾಸ ಕುತೂಹಲಗಳಿಂದ ನೋಡತೊಡಗಿದರು." ('ನಿಡುಮಾಮಿಡಿ ಸನ್ನಿಧಿಯವರು', ಪು. ೧೪)

**ನಿಡುಮಾಮಿಡಿ ಸೂರ್ಯಸಿಂಹಾಸನಾರೋಹಣ :**
**ಆಧ್ಯಾತ್ಮಿಕ ಜೀವನ**

ವೀರಶೈವ ಮತದ ಪ್ರಾಚೀನ ಪಂಚಪೀಠಗಳಾದ ಬಾಳೆಹೊನ್ನೂರು, ಉಜ್ಜಯಿನಿ, ಹಿಮಾಲಯ, ಶ್ರೀಶೈಲ, ಕಾಶೀ ಪೀಠಗಳು ಕ್ರಮವಾಗಿ ಶ್ರೀ ಶ್ರೀಗಳಾದ ರೇಣುಕಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ವಿಶ್ವಾರಾಧ್ಯ ಇವರುಗಳಿಂದ ಸ್ಥಾಪಿತವಾದುವು. ಧೇನುಕ ಗಣೇಶ್ವರರು ಗೋಕರ್ಣಶಿವಾಚಾರ್ಯರೆಂಬ ಹೆಸರಿನಿಂದ ಶ್ರೀಶೈಲದಲ್ಲಿ ನೆಲಸಿ ಶಿವಭಕ್ತಿ ಪ್ರಚಾರ ಮಾಡಿದರು. ಅವರಿಂದಲೇ ಸ್ಥಾಪಿತವಾಯಿತೆಂದು ಪ್ರಖ್ಯಾತವಾದ ಶ್ರೀಶೈಲ ಗುರುಪೀಠಕ್ಕೆ ಶ್ರೀ ಪಂಡಿತಾರಾಧ್ಯರೇ ಮೊದಲಿಗರಾದರು. ಪುರಾತನವಾದ ಈ ಶ್ರೀಶೈಲ ಪೀಠವು ಪಂಡಿತಾರಾಧ್ಯ ಪರಂಪರೆಯ ಶ್ರೀ ಚಂದ್ರಗುಂಡ ದೇಶಿಕೇಂದ್ರರ ಕಾಲದಲ್ಲಿ ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ ಗುಂಯಲೂರಿಗೆ (ಗೂಳೂರು) ಬಿಜಯ ಮಾಡಿಸಿತು. (ಶ್ರೀಶೈಲ ಪೀಠ ಪಂಡಿತಾರಾಧ್ಯರ ಗುರುಪರಂಪರೆ–ಈ ಬಗೆಗೆ ಈ ಹಿಂದೆಯೇ ಉಲ್ಲೇಖಿಸಲಾಗಿದೆ.) ಗೂಳೂರಿನ ಶ್ರೀಸೂರ್ಯಸಿಂಹಾಸನದ ಗುರುಪರಂಪರೆ ಪೀಠಗೌರವವನ್ನು ಕಾಯ್ದುಕೊಂಡು ಅವಿಚ್ಛಿನ್ನವಾಗಿ ನಡೆದುಬಂದಿತು.

ಈ ಪೀಠದ ೨೭ ನೆಯ ಸ್ವಾಮಿಗಳಾದ ಶ್ರೀ ಜಗದ್ಗುರು ಮರಿ ಕರಿಬಸವರಾಜ ದೇಶಿಕೇಂದ್ರರವರು ೧೯೦೩ ರಲ್ಲಿ ಪೀಠಾರೋಹಣ ಮಾಡಿ, ೩೪ ವರ್ಷಕಾಲ ಪೀಠದ ಅಧಿಕಾರವನ್ನು ನಡಸಿ, ೧೯೩೭ ರಲ್ಲಿ ಲಿಂಗೈಕ್ಯರಾದರು ಕಾರಣಾಂತರದಿಂದ ತಾತ್ಕಾಲಿಕವಾಗಿ ಪೀಠದ ಆಡಳಿತವು ಮೈಸೂರು ಸರ್ಕಾರದ ಆದೇಶದ ಮೇರೆಗೆ ಒಂದು ಸಲಹಾ ಸಮಿತಿಗೆ ಒಳಪಟ್ಟಿತ್ತು. ಎರಡು ವರ್ಷಕಾಲ ಆಡಳಿತವನ್ನು ಕೈಲಿ ಇಟ್ಟುಕೊಂಡಿದ್ದ ಸಮಿತಿ, ಪೀಠಕ್ಕೆ ಉತ್ತರಾಧಿಕಾರಿಯೊಬ್ಬರನ್ನು ನೇಮಕಮಾಡುವ ಅವಶ್ಯಕತೆಯನ್ನು ಸರ್ಕಾರದ ಗಮನಕ್ಕೆ ತಂದು, ಪೀಠಕ್ಕೆ ಯೋಗ್ಯರಾದ ಕೆಲವರ ಹೆಸರುಗಳನ್ನು ಸೂಚಿಸಿದರು. ಅವುಗಳಲ್ಲಿ ಅಡ್ನೂರಿನ ಚಂದ್ರಶೇಖರ ದೇವರ ಹೆಸರೂ ಒಂದಾಗಿತ್ತು. ಪೀಠಾಧಿಕಾರಿಗಳನ್ನು ಆಯ್ಕೆಮಾಡುವ ಗುರುತರವಾದ ಹೊಣೆಗಾರಿಕೆ ಆಗ ಕೋಲಾರ ಜಿಲ್ಲೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀ ಜಿ. ಸುಂದರ ರಾಯರ ಮೇಲೆ ಬಿದ್ದಿತು. ದಕ್ಷ ಅಧಿಕಾರಿಗಳೂ ಪ್ರಾಮಾಣಿಕರೂ ಸ್ವಯಂ ಘನ ವಿದ್ವಾಂಸರೂ ಆಗಿದ್ದ ಆ ಮಹನೀಯರು ಸೂಚಿತರಾದವರೆಲ್ಲರನ್ನೂ ಬರಮಾಡಿಕೊಂಡು ಅವರೆಲ್ಲರನ್ನೂ ಅನೇಕ ದೃಷ್ಟಿಗಳಿಂದ ಪರೀಕ್ಷೆಮಾಡಿ, ಚಂದ್ರಶೇಖರ

ದೇವರು ಸರ್ವರೀತಿಯಿಂದಲೂ ಪೀಠಕ್ಕೆ ಅರ್ಹರೆಂದು ಮನಗಂಡು, ತಮ್ಮ ಶಿಫಾರಸನ್ನು ಸರ್ಕಾರಕ್ಕೆ ಕಳುಹಿಸಿದರು. ಶ್ರೀ ಸುಂದರರಾಯರ ಸಲಹೆಯನ್ನು ಸರ್ಕಾರವು ಅನುಮೋದಿಸಿತು.

"ಪಟ್ಟಾಧಿಕಾರ ಮಹೋತ್ಸವವು ಜೂನ್ ೧೨, ೧೯೩೫ ಎಂದು ನಿಶ್ಚಯವಾಯಿತು. ಉತ್ಸವದ ಒಂದೆರಡು ದಿನ ಮೊದಲು ಚಂದ್ರಶೇಖರದೇವರು ಬೆಂಗಳೂರಿಗೆ ಬಂದು ಸಿದ್ದುಮೂವಿಡಿಗೆ ಹೋದರು. ಮಠದ ಪರಿಸ್ಥಿತಿ ನೋಡಿ ಅವರಿಗೆ ದುಃಖವೂ ಭಯವೂ ಆಯಿತು. ಶಿಥಿಲವಾದ, ಸ್ಥಿತಿಯಿಲ್ಲದ ಮಠ, ಪರಿಚಯವಿಲ್ಲದ ಪ್ರಾಂತ. ಮಠದ ಒಳಹೊಕ್ಕರೆ ಹಾಳುಪೇಗುಲದಂತಿದೆ. ಈ ಮಠವನ್ನು ನೋಡದೆ ಏಕೆ ಒಪ್ಪಿಕೊಂಡೆ ಎಂದು ಚಂದ್ರಶೇಖರದೇವರು ವಿಚಾರ ಮಾಡಿದರು. ಮುಂದಿಟ್ಟ ಅಡಿಯನ್ನು ಹಿಂದಕ್ಕೆ ತೆಗೆಯಬಾರದೆಂಬ ನಿರ್ಧಾರ ಚಂದ್ರಶೇಖರದೇವರ ಮನಸ್ಸಿನಲ್ಲಿ ಮೂಡಿತು. ಇಂದು ಹಾಳು ದೇಗುಲವಾಗಿರುವ ಮಠವನ್ನೇ ಊರ್ಜಿತಪಡಿಸಿ, ಇದನ್ನೇ ಪಂಡಿತಾರಾಧ್ಯರ ಘನತೆಗೊಪ್ಪುವ ಮಹಾಸ್ಥಾನವನ್ನಾಗಿ ಮಾಡುತ್ತೇನೆಂದು, ಸಂಕಲ್ಪ ಮಾಡಿದರು." ('ಶ್ರೀ ಸಿದ್ದುಮೂವಿಡಿ ಸನ್ನಿಧಿಯವರು' ಅ. ನ. ಕೃ., ಪು. ೧೯-೨೦) ಅವರ ಈ ಮಹಾಸತ್ಸಂಕಲ್ಪವು ೨೫ ವರ್ಷಗಳಿಗೆ ಮೇಲ್ಪಟ್ಟ ಈ ಅವಧಿಯಲ್ಲಿ ಸಂಪೂರ್ಣವಾಗಿ ನೆರವೇರಿದೆಯೆಂದರೆ ಅತಿಶಯೋಕ್ತಿಯೆನಿಸದು.

ನಿಶ್ಚಿತವಾದಂತೆ ನಿಶ್ಚಿತ ಶುಭ ಮುಹೂರ್ತದಲ್ಲಿ, ಸರ್ಕಾರದ ಪ್ರತಿನಿಧಿಗಳಾದ, ಶ್ರೀ ಜಿ. ಸುಂದರರಾಯರು ಮುಂತಾದ ಅಧಿಕಾರಿಗಳ, ಹಾಗೂ ಸಖರಾಯಪಟ್ಟಣದ ಶ್ರೀ ಸದಾಶಿವ ಶಿವಾಚಾರ್ಯರು ಮತ್ತು ಬೇರೆ ಬೇರೆ ಕಡೆಗಳಿಂದ ಆಗಮಿಸಿದ್ದ ಇತರ ಸ್ವಾಮಿಗಳವರ ಸಮ್ಮುಖದಲ್ಲಿ ಸಕಲ ವೈಭವೋಪೇತರಾಗಿ ಚಂದ್ರಶೇಖರದೇವರು ಶ್ರೀ ಮಠದ ಹೊಂಗದ್ದುಗೆಯನ್ನು ಆರೋಹಿಸಿದರು. ಪೀಠದ ಸಂಪ್ರದಾಯಾನುಗುಣವಾಗಿ ಅದ್ನೂರು ಚಂದ್ರಶೇಖರದೇವರ ಹೆಸರು 'ಶ್ರೀ ಮದ್ವೀರಶೈವ ಮತಸ್ಥಾಪನಾಚಾರ್ಯ ಶ್ರೀ ೧೧೦೮ ಜಗದ್ಗುರು ಪಂಡಿತಾರಾಧ್ಯ ಪರಂಪರಾಗತ ಶ್ರೀ ಗಿರಿರಾಜ ಮಣಿಖಚಿತ ಕನಕ ಸೂರ್ಯಸಿಂಹಾಸನ ಪಟ್ಟಾಧ್ಯಕ್ಷ ಶ್ರೀ ಜ. ಸ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು' ಎಂದು ಪರಿವರ್ತಿತವಾಯಿತು. ಪಟ್ಟಾಧಿಕಾರದೊಂದಿಗೆ ಸರಕಾರದ ಮುಖಾಂತರ ದೊರೆತ ಆಸ್ತಿ ಕೇವಲ ಮುನ್ನೂರು ರೂಪಾಯಿ; ಆದರೆ ಪಟ್ಟದ ನಿಮಿತ್ತ ದೊರೆತ ನೂತನ 'ನಾಮ-ರೂಪ-ಕ್ರಿಯಾ ಶಕ್ತಿತ್ರಯ'ಗಳಿಂದ ಲಭಿಸಿದ್ದು-ಮಹಿಮಾನ್ವಿತ ವ್ಯಕ್ತಿತ್ವ.

ಜೀರ್ಣಾವಸ್ಥೆಯಲ್ಲಿದ್ದ ಮಠವನ್ನು ಊರ್ಜಿತಗೊಳಿಸುವುದಕ್ಕಾಗಿ ಶ್ರೀಗಳವರು ಪಟ್ಟ ಸಾಹಸ ಅಷ್ಟಿಷ್ಟಲ್ಲ. ಮಠದ ಜೀರ್ಣೋದ್ಧಾರ ಎಂದು ಅವರು ಅದರ ಕಟ್ಟಡದ ಗೋಡೆಗಳಿಗೆ ಬೆಳ್ಳಿಯ ತಗಡು ಹದ್ದಿಸದಿರಬಹುದು; ಗೋಪುರ ಕಟ್ಟಿಸಿ, ಅದಕ್ಕೆ ಚಿನ್ನದ ಕಳಸ ಹಾಕಿಸದಿರಬಹುದು. ಆದರೆ, ನಿಷ್ಠೆಯಿಂದ ನಡೆದುಕೊಳ್ಳುವ ಭಕ್ತ

ಕೋಟಿಯ ನಿತ್ಯ ದಾಸೋಹವನ್ನು ಸಂಪಾದನೆಮಾಡಿಕೊಂಡು, ಪೀಠದಲ್ಲಿ ಗುರು ಪರಂಪರೆಯ ಪ್ರಾಣಪ್ರತಿಷ್ಠೆ ಮಾಡಿದ್ದಾರೆ; ಮಠದ ಜೊಕ್ಕಸವನ್ನು 'ಕುರುಡು ಕಾಂಚಾಣ'ದಿಂದ ತುಂಬುವುದರಲ್ಲಿ ಎಂದೆಂದಿಗೂ ಮೌಲ್ಯವನ್ನು ಕಳೆದುಕೊಳ್ಳದ ಸಾಹಿತ್ಯ ಕೃತಿರತ್ನಗಳಿಂದ ತುಂಬಿದ್ದಾರೆ. ತಾವು ಪೀಠವೇರಿದ್ದು ಸಾರ್ಥಕವಾಯಿತು ಎಂಬ 'ಧನ್ಯೋಹಂ' ಭಾವ ಅವರ ಈ ಕವನದಲ್ಲಿ ಹೇಗೆ ವಾಗ್ರೂಪದ ಮುಂದಸ್ಮಿತವಾಗಿ ಅರಳಿದೆ, ನೋಡಿ.

ಸೂರ್ಯಸಿಂಹಾಸನವನೇರಿ ನಿಂದುದೆ ಲೇಸು
  ಸೇವೆಯನು ಸಲ್ಲಿಸುವ ಭಾಗ್ಯವೆಮಗಾಯ್ತು
ಐಶ್ವರ್ಯ ವೈಭವವು ತಾನಿಲ್ಲದಿರಲೇನು
  ಸಾರಸ್ವತದೊಲುಮೆಯ ಸೌಭಾಗ್ಯವಾಯ್ತು!
ಶ್ರೀಗಿರಿಯ ಪುಣ್ಯಮಯ ಪ್ರಾಚೀನ ಚರಿತೆಯದು
  ನಮ್ಮೆದೆಯ ರಸವಾಗಿ ನಿಂದಿಹುದು ಒಳಗೆ
ಸಾಗರದ ಸಿರಿಸೊಬಗ ಸಾರುತ್ತ ಕಂಗಳಿಗೆ
  ಸ್ಥಳಪುರಾಣರೂಪದೆ ಸಂದಿಹುದು ಹೊರಗೆ!
ಹಿಂದೆಂದು ಸಾರದಿಹ ಲೇಶವದು ಪೀಠದಲಿ
  ಎಮಗಿಂದು ಸೊಗಸಾಗಿ ನೆರೆ ಸಾರಿಬರಲಿ
ಮುಂದೆಂದಿಗಳಿಯದಿಹ ಸಾಹಿತ್ಯ ಜೀವನವು
  ಎಡೆಬಿಡದೆ ಸಂತಸದಿ ತಾ ಸಾಗುತಿರಲಿ!

ಸಾಹಿತ್ಯಸೇವೆಯ ಮೂಲಕ 'ಸ್ಥಿರಲಿಂಗ'ವಾಗಿ ಅವರು ಜನರಿಗೆ 'ರಸ'ಮಾರ್ಗದಲ್ಲಿ ಬೋಧೆ ಮಾಡುವ ಕಾರ್ಯ ಒಂದುಕಡೆ; ಪ್ರವಾಸ ಪ್ರವಚನಾದಿ ಕಾರ್ಯಕ್ರಮಗಳ ಮೂಲಕ 'ಚರಲಿಂಗ'ವಾಗಿ ಅವರು ಜನ ಪ್ರಬೋಧ ಮಾಡುತ್ತಿರುವುದು ಮತ್ತೊಂದುಕಡೆ. ಈ ಎರಡೂ ಕಾರ್ಯಗಳಲ್ಲಿ ಅವರ ಕೈಹಿಡಿದು ನಡಸುತ್ತಿರುವ ದೈವ ಎಂದರೆ, ಬಾಲ್ಯದಿಂದಲೂ ಅವರನ್ನು ಒಲಿದುಬಂದ, ಅವರನ್ನು ಅನುಗ್ರಹಿಸುತ್ತ ಬಂದ, 'ನುಡಿಯೊಡತಿ;' 'ನುಡಿಸೀರೆ.'

"ಹಿಂದಿಂದಣ ಕವಿಗಳ ನುಡಿಬನದ ಮಿಡಿಯಾಗಿ
ಹಿಂದಿಂದಣ ರಸಿಕರ ನಾಲಗೆಯ ರಸವಾಗಿ
ಹಿಂದಿಂದಣ ಋಷಿಗಳ ಆತ್ಮ ದರ್ಶನವಾಗಿ
ನಿಂದಿರುವ, ನುಡಿಯೊಡತಿ ನಿನಗಿದೋ ವಂದನವು"

ಎಂದು 'ನುಡಿಯೊಡತಿ'ಯನ್ನು ವಂದಿಸುವದು, "ನೀನೊಲಿದ ಮಹಿತಂಗೆ ಕುಲಮಲದ ಕೊಂಕಿಲ್ಲ, ನಿನ್ನೊಳಗೆ ಗೌರವಕೆ ಸೀಮೆಯೆಂಬುದಿಲ್ಲ" ಎಂಬ ನಿತ್ಯ ಸತ್ಯವನ್ನು ಸಾರುವುದು ಮಾತ್ರವಲ್ಲದೆ, ಅದನ್ನು ಆಚರಣೆಯಲ್ಲಿ ತಂದುಕೊಂಡಿದ್ದಾರೆ.

ಎಂದೇ ಶ್ರೀಗಳವರು ಮತಧರ್ಮ ಪೀಠದ ಹಿರಿಯ ಗುರುವಾಗಿರುವುದು ಮಾತ್ರವಲ್ಲದೆ, 'ರಸಧರ್ಮ' ಪೀಠದ ಗುರುವೂ ಆಗಿದ್ದಾರೆ. 'ನೆಗಳ್ದಿ ಪುರಾಣದೊಳ್ ಅರಿವುದು ಕಾವ್ಯಧರ್ಮಮುಂ ಧರ್ಮಮುಮಂ' ಎಂಬ ಕನ್ನಡದ ಆದಿಕವಿಯ ಕಾವ್ಯ ಮಾರ್ಗವನ್ನೂ, ಶಿವಶರಣರ 'ವಚನ ಧರ್ಮ'ದ ಸಾಹಿತ್ಯ ಸಂಪ್ರದಾಯವನ್ನೂ ಅವರು ಅನುಸರಿಸಿಕೊಂಡು ಬಂದಿರುವುದರಿಂದ, 'ಬೋಧ ಪ್ರದ ಕಾವ್ಯರಸ'ವನ್ನು ಅವರು ಕನ್ನಡನಾಡಿನಲ್ಲೆಲ್ಲಾ ತಮ್ಮ ಸಾಹಿತ್ಯ ಕೃತಿಗಳ ಮೂಲಕ ಸಿಂಪಡಿಸಿರುವುದರಿಂದ ಕನ್ನಡಿಗರೆಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ.

### ಕೃತಿದರ್ಶನ

ಶ್ರೀಗಳವರ ವಾಙ್ಮಯ ಪ್ರಪಂಚ ಬಹು ವಿಸ್ತಾರವಾದುದು. ಸುಮಾರು ೪೦ ಕೃತಿ ಸಂಖ್ಯೆಯನ್ನುಳ್ಳ ಅದನ್ನು ಇಲ್ಲಿ ಪರಿಚಯ ಮಾಡಿಕೊಡುತ್ತೇನೆನ್ನುವುದು ಸಾಹಸದ ಮಾತು, ಸಾಹಿತ್ಯಸಾಗರವನ್ನು ಆಪೋಶನಗೈಯಬೇಕೆಂಬ ಅಗಸ್ತ್ಯ ಸಾಹಸ. ಅವರ ವಿಶ್ವಾಸದ ಅನುಗ್ರಹದಿಂದಾಗಿ ಅವರ ಕೃತಿಗಳಲ್ಲಿ ಹಲಕೆಲವನ್ನು ಓದಿ ತಣಿಯುವ ಸದವಕಾಶ ನನಗೆ ದೊರಕಿದೆ. 'ಗುರುವಿನ ಗೆಲವು,' 'ಕಾರುಣ್ಯ ಕಿರಣ' ಮತ್ತು ಇದೀಗ ಹೊರತಂದ 'ಜೀವನ ಸಿದ್ಧಾಂತ'ದ ಪ್ರಥಮ ಸಂಪುಟ–ಇವುಗಳ ಬಗೆಗೆ 'ಮುನ್ನುಡಿ'ಯನ್ನೋ 'ಅಭಿಪ್ರಾಯ'ವನ್ನೋ ನನ್ನಿಂದ ಬರೆಯಿಸಿ, ಗ್ರಂಥಾದಿಯಲ್ಲಿ ಪ್ರಕಟಿಸಿ, ಹೂವಿನಿಂದ ನಾರು ಸ್ವರ್ಗಕ್ಕೇರುವ ಸೌಭಾಗ್ಯವನ್ನು ನನಗೆ ಅನುಗ್ರಹಿಸಿದ್ದಾರೆ. ಅವರ ಕೃತಿ ರಚನೆಯ ಬಗೆಗೆ ನಾನಾಡಿರುವ, ಇತರ ಗಣ್ಯ ಮಹನೀಯರು ಹೇಳಿರುವ, ನಾಲ್ಕು ಮಾತುಗಳನ್ನು ಸಂದರ್ಭೋಚಿತವಾಗಿ ಉಪಯೋಗಿಸಿಕೊಂಡು, ಕನಕನ ಕಿಂಡಿಯ ಮೂಲಕ ಕೃಷ್ಣದರ್ಶನ ಮಾಡಿಸುವಂತೆ ನನ್ನ ನುಡಿಕಿಂಡಿಯ ಮೂಲಕ ಶ್ರೀಗಳವರ 'ಸಾಹಿತ್ಯ ಸರಸ್ವತಿ'ಯ ದರ್ಶನ ಮಾಡಿಸುವ ಅಲ್ಪ ಪ್ರಯತ್ನವೊಂದು ಮುಂದೆ ನಡೆದಿದೆ.

ಶ್ರೀ ಜ. ಚ. ನಿ. ಅವರ ಸಾಹಿತ್ಯ ಸೃಷ್ಟಿಯನ್ನು ಸಂಖ್ಯಾಬಾಹುಳ್ಯ ದೃಷ್ಟಿಯಿಂದ ಸ್ಥೂಲವಾಗಿ, (೧) ಕವಿತೆ, (೨) ವಚನ, (೩) ದಾರ್ಶನಿಕ ಸಾಹಿತ್ಯ–ಎಂದು ತ್ರಿವರ್ಗವಾಗಿ ವಿಂಗಡಿಸಿಕೊಳ್ಳಬಹುದು. ಇದು ಕೃತಿಶರೀರವನ್ನು ಗಮನದಲ್ಲಿ ಇರಿಸಿಕೊಂಡು ಮಾಡಬಹುದಾದ ವರ್ಗೀಕರಣವೇ ಹೊರತು ಅದರ ಆತ್ಮವನ್ನಲ್ಲ. ಶ್ರೀ ಜ. ಚ. ನಿ. ಅವರ ಎಲ್ಲ ಕೃತಿಗಳಲ್ಲೂ ನಮಗೆ ಪರಿಚಯವಾಗುವುದು ಒಂದೇ ದಿವ್ಯಾತ್ಮದ ಅಖಂಡ ಸ್ವರೂಪ, ಇಹವನ್ನು ಪರವನ್ನೂ ಎರಡು ತೋಳುಗಳಿಂದಲೂ ಬಾಚಿ ತಬ್ಬಿಕೊಂಡು, ಇಹ–ಪರದೃಷ್ಟಿಗಳೆರಡರಿಂದಲೂ ಒಂದೇ ದಿವ್ಯದರ್ಶನವನ್ನು ಕಾಣುತ್ತ, ಆ ಒಂದೇ 'ದರ್ಶನ-ರವಿ'ಯ ಬೇರೆ ಬೇರೆ ಕಿರಣಗಳನ್ನು ತಮ್ಮ ಬೇರೆ ಬೇರೆ ಕೃತಿಗಳಲ್ಲಿ ವಿಕಿರಣಮಾಡಿದ್ದಾರೆ. ಇವರ ಸಾಹಿತ್ಯ ಕೃತಿಮಣಿಗಳು ಬೇರೆ

ಬೇರೆ; ಅವುಗಳ ಕಾಂತಿಯ ವರ್ಣವೀಚಿಗಳು ವಿವಿಧ; ಆದರೆ ಅವುಗಳನ್ನು ಅನುಸ್ಯೂತವಾಗಿ ಕೋದಿರುವ ಸೂತ್ರ ಒಂದೆ; ಜಗತ್ತನ್ನು ಭರಿಸುವ, ಧರಿಸುವ, ಉದ್ಧರಿಸುವ 'ಧರ್ಮ.'

ಶ್ರೀ ಜ. ಚ. ನಿ. ಅವರ ಕವಿತಾಸೃಷ್ಟಿಯ ಜಾಡನ್ನು ಹೀಗೆ ಗುರುತಿಸಬಹುದು: ಇವರ 'ಹೊನ್ನಹಕ್ಕಿ' ಹಾರಿ ಹೋದಮೇಲೆ 'ರನ್ನಚುಕ್ಕಿ' ಬೆಳಗಿತು. ಇವೆರಡೂ ಬಿಟ್ಟುಹೋದ ಹೊಂಬೆಳಕಿನ ಹೆಂದರದಡಿಯಲ್ಲಿ ಶಿವಯೋಗಮಂದಿರದ ಹೊನ್ನು ಹಬ್ಬಕ್ಕೆ ಅರ್ಪಿಸಿದ ಭಾವಕುಸುಮಾಂಜಲಿಯಾಗಿ 'ಹೂಬೊಗಸೆ' ಭಕ್ತಿಯ ಸೌರಭ ವನ್ನು ಬೀರಿತು. ಬೆಂಬಳಿಯಲ್ಲಿ ಬಾಗಿ ಬಿಟ್ಟಿತು 'ಹೂಗೊನೆ'ಯನ್ನು ಇವರ ಕಾವ್ಯ ವಲ್ಲರಿ. ಈ 'ಹೂಗೊನೆ'ಯಲ್ಲಿ, ಅವರೇ ತಿಳಿಸಿರುವಂತೆ, "ಎಲ್ಲವೂ ಅರಳಿವೆಯೆಂದು ಹೇಳಲಾರೆವು. ಹಲವು ಮೊಗ್ಗುಗಳಿರಬಹುದು....ಆದರಿಷ್ಟನ್ನು ಮಾತ್ರ ಹೇಳ ಬಲ್ಲೆವು: ಹಿಂದಿನಕ್ಕಿಂತಲೂ ಹೆಚ್ಚು ಹೃದಯಾನುಭವದ ಹೊಂಬಣ್ಣ ಹೊವಿನ್ಮದೆ; ಭಾವರಸ ಮಕರಂದವಾಗಿ ತುಂಬಿದೆ ಎಂದು." 'ಹೂಗೊನೆ'ಯಲ್ಲಿನ 'ಕೋಗಿಲೆ' 'ನೇಹನಾಯಿ,' 'ಚಿತ್ತಚಿಗರೆ' ಮುಂತಾದ ಕೆಲವು ಕವನಗಳು ಸಾಂಕೇತಿಕತೆಯ ಸೂಚ್ಯಮಾರ್ಗದಲ್ಲಿ ಹೆಜ್ಜೆಯಿಟ್ಟು, ತಮ್ಮ ಧ್ವನಿರಮ್ಯತೆಯಿಂದ ರಸಿಕರ ಮನಸ್ಸನ್ನು ಸೆಳೆಯುತ್ತವೆ. "ಹೂಗೊನೆಯ ಓದುಗ ದುಂಬಿಗಳು ಆ ಹೂಗೊನೆಯ ಮಕರಂದವ ನೀಂಟಿ ಮಧುರವಾದ ಮಧುವ ಮಾಡಿಕೊಂಡ ಬಳಿಕ ಅದರೊಡನೆ ಬೆರೆಸಿ ಆರೋಗಿ ಸಲು ಹಾಲ್ಕೆನೆ ಬೇಕಲ್ಲವೆ? ಕಲಾಗುರುವೆ ಕಾಮಧೇನು. ಆತನ ಕಾರುಣ್ಯವೆ ಹಾಲ್ಕೆನೆ. ಅದನ್ನು ಅಂಗಪಿಸುವುದೆ ಅಚ್ಚ ಬಾಳ್ಗುರಿಯ ಕೊನೆ; ಬಾಳ್ಗೊನೆ. ಈ ಹಾಲ್ಕೆನೆ ಅಂತಹ ಒಂದು ಅಂಕುರಿತ ಫಲ." ಈ ಸಂಕಲನದ 'ನೀ ಬಾರೆಯಾ' ಎಂಬ ಕವನದಲ್ಲಿ ಸತಿಭಾವದ ಮಧುರ ಭಕ್ತಿ ಬಹು ಸೊಗಸಾಗಿ ಭಾವರೂಪಿಣಿಯಾಗಿ ಕಾವ್ಯಮಂದಿರದಲ್ಲಿ ನಿಂತು, "ಮೂರು ಬಾಗಿಲ ತೆರೆದು ನಿಂದಿರುವೆ; ಮೂರು ಕಣ್ಣುಳ್ಳ ವನೆ ಬರುವೆಯೆಂದಿರುವೆ" ಎಂದು ಇನಿಯನನ್ನು ಕೈಬೀಸಿ ಕರೆಯುತ್ತಿದೆ. ಈ ಹಾಲ್ಕೆನೆ ಈಚೆಗೆ (೧೯೬೫) 'ನಿವೇದನ'ವಾಗಿ ಪರಿಣಮಿಸಿದೆ! ಶ್ರೀಗಳವರ ನುಡಿ ಯಲ್ಲಿ, "ನಿವೇದನವೂ ಒಂದು ಭಕ್ತಿ;" ಪರಿಣಾಮ ಭಕ್ತಿ; ಪಾಡಿಗೆ ಬಂದ ಅಂತರಂಗದ ಭಕ್ತಿ. ಭಕ್ತಿಯೆಂದರೆ ಸಂಪೂರ್ಣ ಪ್ರಪತ್ತಿ, ಆತ್ಮಾರ್ಪಣ. ನೈಜ ಕಾವ್ಯದ ಆತ್ಮಾಭಿ ವ್ಯಕ್ತಿಯೂ ಆತ್ಮಸಮರ್ಪಣ... All art is worship ಎಂದಿದ್ದಾರೆ Ruskin ಮತ್ತು Barlyle.

'ಕಾವ್ಯಸೃಷ್ಟಿಯೆನ್ನಲೇನು?
ತನ್ನ ತಾನೆ ಕೊಡುವುದು.' (ರಾಘವ : 'ಮುಗಿಯದ ಮಾಯೆ')

ಇತ್ತೀಚಿನ ಸಂಕಲನ 'ಗುರುಗೀತಾಂಜಲಿ'ಯಲ್ಲಿಯೂ ಈ ಸಮರ್ಪಣ ಭಾವವೆ ಸ್ಥಾಯಿ; ಓದುಗರಿಗೆ ದೊರಕುವ ರಸ-ಭಕ್ತಿ, ಶಾಂತಿ.

ಹೊಸಗನ್ನಡ ಯುಗದಲ್ಲಿ ವಚನ ಸಾಹಿತ್ಯವು ಬರಹಗಾರರಿಗೆ ಹೊಸಸ್ಫೂರ್ತಿಯನ್ನು ನೀಡಿತು. ನೂತನ ವಚನ ಸಾಹಿತ್ಯ ನಿರ್ಮಾಣದಲ್ಲಿ ಹೆಸರು ಮಾಡಿದವರೆಂದರೆ 'ಅಂತರಾತ್ಮನಿಗೆ' ಎಂಬ ಆಧ್ಯಾತ್ಮಿಕ ವಚನಗಳ ಸಂಕಲನದ ಕರ್ತೃ ಶ್ರೀ ದಿವಾಕರ ರಂಗರಾಯರು, ಹಾಗೂ 'ರಂಗಬಿನ್ನಪ'ದ ಕರ್ತೃ ಪ್ರೊ|| ಎಸ್. ವಿ. ರಂಗಣ್ಣನವರು. ನವಯುಗದ ವಚನ ಸಾಹಿತ್ಯದಲ್ಲಿ ಈ ಅಗ್ರಮಾನ್ಯತೆಗೆ ಅರ್ಹರಾದ ಇನ್ನೊಬ್ಬ ವ್ಯಕ್ತಿ ಎಂದರೆ ಶ್ರೀ ಜ. ಚ. ನಿ. 'ವಚನಾಂಜಲಿ,' 'ವಚನಮಂಜರಿ,' 'ವಚನವಲ್ಲರಿ' ಮತ್ತು 'ಮಣಿವಚನಗಳು' ಮುಂತಾದ ಹಲವಾರು ಸಂಕಲನಗಳಲ್ಲಿ ಶ್ರೀಗಳವರ ವಚನಸೃಷ್ಟಿ ಹಬ್ಬಿ ಹೂಬಿಟ್ಟಿದೆ. ಈ ವಚನಗಳ ಸತ್ತ್ವ-ಸ್ವರೂಪಗಳನ್ನು ಕುರಿತು ಶ್ರೀ ಅ. ನ ಕೃ. ಹೇಳಿರುವ ಕೆಲವು ಮಾತುಗಳನ್ನು ಉಲ್ಲೇಖಿಸುವಷ್ಟರಿಂದಲೇ ನಾವು ಇಲ್ಲಿ ತೃಪ್ತಿಪಡಬೇಕಾಗಿದೆ; "ವಚನಾಂಜಲಿ' ಮತ್ತು 'ವಚನ ಮಂಜರಿ' ಗ್ರಂಥಗಳನ್ನು ಬರೆದಿರುವ ನಿಡುಮಾಮಿಡಿ ಸಂಸ್ಥಾನದ ಶ್ರೀ ಜ. ಚ. ದೇಶಿಕೇಂದ್ರ ಮಹಾಸ್ವಾಮಿಗಳವರು ಸಂಪ್ರದಾಯವನ್ನು ಬಿಡದೆ ಪ್ರಗತಿ ಪಥದಲ್ಲಿ ಮುನ್ನಡೆದು ಸಾಹಿತ್ಯಲೋಕಕ್ಕೆ ಮಹೋಪಕಾರ ಮಾಡಿದ್ದಾರೆ."

**ನುಡಿಮಣಿಹ**

ಶ್ರೀ ಜ. ಚ. ನಿ. ಮಹಾಸ್ವಾಮಿಯವರು ಧರ್ಮಪೀಠವೊಂದರ ಅಧ್ಯಕ್ಷರಾಗಿ ಧರ್ಮಬೋಧೆ ಧರ್ಮಪ್ರಸಾರಗಳನ್ನು ತಮ್ಮ ಕಾಯಕವನ್ನಾಗಿ ಮಾಡಿಕೊಂಡಿರುವವರು ; ಈ ಕಾಯಕ ಅವರ ಬಹಿರಂಗ ಜೀವನವಾದರೆ, ಶಿವಯೋಗ, ಅವರ ಸಾಧನೆ,- ಇದು ಅವರ ಅಂತರಂಗ ಜೀವನ. ಅವರ ಈ ಬಹಿರಂಗ-ಅಂತರಂಗ ಜೀವನಗಳನ್ನು ಒಂದುಗೂಡಿಸುವ ಸೇತುವೆಯಾಗಿದೆ ಅವರ ಸಾಹಿತ್ಯ ಜೀವನ. ಹೀಗಾಗಿ, ಅವರ ಕಾಯಕವೆ ಒಂದು ಕಲೆಯಾಗಿದೆ; ಅವರ ಕಾವ್ಯಕಲೆಗೆ ಕಾಯಕದ ಬೆಲೆ ಬಂದಿದೆ. ಅವರು ಮಾತಿನಲಿ 'ಜ್ಯೋತಿರ್ಲಿಂಗ'ವನ್ನು ಕಂಡುಕೊಂಡಿರುವ ವಾಙ್ಮಯ ತಪಸ್ವಿ ; ತಾವು ಕಂಡ ಜ್ಯೋತಿರ್ದರ್ಶನವನ್ನು ಪಾಮರಲೋಕಕ್ಕೂ ಅರುಹಬೇಕೆಂಬ ಅನುಗ್ರಹ ಬುದ್ಧಿಯಿಂದ ಕಾಯಕವೆಸಗುತ್ತಿರುವ ಕಲಾಗುರು. ಕಾವ್ಯಕರ್ಮಯೋಗಿ. ಇಂಥ 'ಜ್ಯೋತಿರ್ಲಿಂಗಾನುಭಾವಿ'ಯತಿವರರಿಗೆ ಅರ್ಪಿಸುತ್ತಿರುವ ಈ'ದಾಸೋಹ'ದಲ್ಲಿ ನನ್ನ ನುಡಿಮಣಿಹಕ್ಕೂ ತುಸು ಎಡೆದೊರೆತು, ನಾನು ಧನ್ಯ ಎಂದು ಭಾವಿಸಿಕೊಂಡಿದ್ದೇನೆ.



ಎಸಳು ೧

ಸೂರ್ಯಸಿಂಹಾಸನಾಧೀಶ್ವರ
ಶ್ರೀ ಜ. ಚ. ನಿ. ಅವರ

# ಸಾಹಿತ್ಯ ದರ್ಶನ

ಸಂಕ್ಷಿಪ್ತ ಪರಿಚಯ
ಅನುವಾದ ಸಾಹಿತ್ಯ
ದಾರ್ಶನಿಕ ಸಾಹಿತ್ಯ
ಸಿದ್ಧಾಂತ ಸಾಹಿತ್ಯ
ಪ್ರಬಂಧ ಸಾಹಿತ್ಯ
ವಚನ ಸಾಹಿತ್ಯ
ಕವನ ಸಾಹಿತ್ಯ
ನಾಟಕ ಸಾಹಿತ್ಯ
ಚಾರಿತ್ರಿಕ ಸಾಹಿತ್ಯ
ವಿಶ್ಲೇಷಣ ಸಾಹಿತ್ಯ
ಸಮೀಕ್ಷಾತ್ಮಕ ಸಾಹಿತ್ಯ
ಪತ್ರ ಸಾಹಿತ್ಯ
ಸಂಪಾದನ ಸಾಹಿತ್ಯ
ಸಂಕಿರಣ ಸಾಹಿತ್ಯ

ಇಂದಿನ ಈ ಯುಗದಲ್ಲಿ ಪರಿಣಾಮಕಾರಿಯಾದ ವಿಪುಲವಾದ ಗುರುಮನೆಯ ಸಾಹಿತ್ಯ ಸಂಪತ್ತಿಯನ್ನು ಸಂದರ್ಶಿಸಬೇಕೆ? ಬಹುಮುಖ ಪ್ರತಿಭೆಯ ಬಹುವಿಧ ಸಾಧನೆಯ ಸಾಹಿತ್ಯದ ಸೊಗಸನ್ನು ಸವಿಯಬೇಕೆ? ಹರಿಹರ ಕವಿಯ ಹೃದಯಂಗಮ ಶೈಲಿಯನ್ನು ಹೋಲುವ ಅನುಭವ ಕಾವ್ಯ ರತ್ನಗಳನ್ನು ಕಂಡು ಹರುಷಿಸಬೇಕೆ? ಹಾಗಾದರೆ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಶ್ರೀಶೈಲ ಸಂಸ್ಥಾನ ಅವರ ಈ 'ಸಾಹಿತ್ಯ ದರ್ಶನ' ಭಾಗವನ್ನು ಮೊರೆ ಹೋಗಬೇಕು. ಜೀವಂತವೂ ಜ್ವಲಂತವೂ ಆದ ಇವರ ಸಾಹಿತ್ಯ ದರ್ಶನವನ್ನು ಓದಿ ಓಲಾಡಬೇಕು. ಇವರ ಈ ಸಾಹಿತ್ಯದಲ್ಲಿನ ದಾರ್ಶನಿಕ ದೀಪಿಯನ್ನು ದರ್ಶಿಸಿ ತಲೆದೂಗಬೇಕು. ಇವರದೇ ಆದ ಶೈಲಿಯ ಸೊಗಸನ್ನು ಸವಿದುಣ್ಣಬೇಕು. ಇವರದೇ ಆದ ನಿರೂಪಣ ಪದ್ಧತಿಯನ್ನು ವಿಶ್ಲೇಷಣ ವಿವೇಚನ ಕ್ರಮವನ್ನು ಅವಲೋಕಿಸಿ ಅನುಭವಿಸಿ ಆನಂದಿಸಬೇಕು.

ಸನ್ನಿಧಿಯವರು ಅಪಾರವಾದ ತಮ್ಮ ಕಾವ್ಯ ಪ್ರಬಂಧ ರೂಪಸಾಹಿತ್ಯದುದ್ದಕ್ಕೂ ಭಾವ ಸೌಂದರ್ಯವನ್ನು ಭಾಷಾ ಮಾಧುರ್ಯವನ್ನು ತುಂಬಿದ್ದಾರೆ. ಜೀವನ ಸ್ಫೂರ್ತಿಯನ್ನುಂಟು ಮಾಡುವ ಹೃದಯ ಸ್ಪರ್ಶಿಯಾದ ವಿಚಾರಾಚಾರಗಳನ್ನು ಕೈವಾರಿಸಿದ್ದಾರೆ. ಇವರ ಸಾಹಿತ್ಯದರ್ಶನದಲ್ಲಿ ಜೀವನ ದರ್ಶನವನ್ನು ಪಡೆಯುತ್ತೇವೆ. ಇವರ ಪದ್ಯ ಗದ್ಯಗಳೆರಡೂ ಶ್ರಾವ್ಯವಾಗಿರುತ್ತವೆ. ಶ್ರವ್ಯಕಾವ್ಯದಂತೆ ದೃಶ್ಯ ಕಾವ್ಯ ರಚನೆಯಲ್ಲಿಯೂ ಸಿದ್ಧಹಸ್ತರು.

* ಸನ್ನಿಧಿಯ ಬೆಳ್ಳಿಯ ಹಬ್ಬದ ಈ ಪ್ರಸಂಗದಲ್ಲಿ ಅವರ ಅಗಾಧವಾದ ಅಪೂರ್ವವಾದ ಸಾಹಿತ್ಯ ದರ್ಶನವನ್ನು ಮಾಡಿ ಕೊಡುವ ಸೌಭಾಗ್ಯದ ಸೇವೆಗಾಗಿ ಸಂಪಾದಕ ಮಂಡಳಿಯು ಹೆಮ್ಮೆಗೊಂಡಿದೆ.

ಶ್ರೀ

ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಅವರ
ಸನ್ನಿಧಿಗೆ ಚಿತ್ರದುರ್ಗ ಕರ್ನಾಟಕ ಸಂಘವು
ಸಮರ್ಪಿಸಿದ

# ಸ್ವಾಗತ ಪದ್ಯ ಮಾಲಿಕೆ

ಭಾ॥ಷ॥ ಸ್ವಾಗತವು ಸಂಪೂಜ್ಯ ಮೂರುತಿ
ಸ್ವಾಗತವು ವರ ಪುಣ್ಯರೂಪಿಯೆ
ಜಗದ್ಗುರು ನಿಡುಮಾಮಿಡಿ ಶಿವಾಚಾರ್ಯ ವಂದಿಪೆವು ।
ಸ್ವಾಗತವು ಕನ್ನಡದ ಜನತೆಗೆ
ಸ್ವಾಗತವು ನೆರೆದಿಹ ಸುಸಂಸ್ಕೃತ
ರಿಗಾವಗಂ ಶುಭಮಕ್ಕೆ ಸ್ವಾಗತವ ನೀಡುವೆವು ॥೧॥

॥ಕಂದ॥ ಉನ್ನತಿಯ ಕರುಣಿಸುವ ಕಾ
ವ್ಯೋನ್ನತಿಯ ಸಲೆ ಮಹಿಮಾಸ್ಪದ ವಚನ ರಚನೆಗಳಿಂ
ಕನ್ನಡದ ಕೀರ್ತಿಯನು ಮಿಗೆ
ಸನ್ನುತದಿ ವೆಗ್ಗಳಿಸಿದ ಶಿವಕವೀಂದ್ರನೇ ನಮೋ ॥೨॥

॥ಕಂದ॥ ಭವಕಾಮವಂ ಶಿವಪ್ರೇ
ಮವಾಗಿಸುವ ನಿಮ್ಮಾ ದಿವ್ಯ ಕಾಯಕ ನಿಷ್ಠೆಯು
ಭವಹರನ ಚಿಂತಿಸುವ ಮೇಣ್
ಭವರೋಗ ಪರಿಹರಿಪ ಸಂಜೀವಿನಿಯೈ ನಮಗೆ ॥೩॥

॥ಕಂದ॥ ಎತ್ತರದಿಂದಾ ತಗ್ಗಿಗೆ
ಕತ್ತಲು ಆದೊಡೆಯು ಗಂಗೆ ಹರಿಯುವಳಲ್ತೆ
ಮತ್ತಿನ ಭವ ಕೆಳಮುಖದಿಂ
ದೆತ್ತರಕೇರಿಸೆ ರಸ ಗಂಗೆಯೇ ಕಾರಣವಲ್ತೇ ॥೪॥

||ಕಂದ|| ಕನ್ನಡ ಋಷಿಕವಿ ಸಂಕುಲ
ದುನ್ನತ ತಪೋವನದ ರಸಗಂಗೆಯೆನಿಸಿರುವ
ಉನ್ನತದನುಭಾವ ಮಿಡಿವ
ಮನ್ನಣೆಯ ವಚನ ಮಾರ್ಗವನೆ ದೀಪ್ತಿಗೊಳಿಸುತಲಿ ||೫||

ಭಾ||ಷ|| ಕವಿಹೃದಯದಿಂ ಮೂಡಿದಾ ರಸ
ಭಾವ ವರ್ಷವನು ಕನ್ನಡದೊಳು
ಸವಿನಯದಿಂ ಸಮರ್ಪಿಸುತ ಹೊಂಗಲಸ ಮಾಡಿರುವ
ಜೀವದೇವರ ಸಮರಸದ ಸಮ
ಭಾವವನು ಶಿವಯೋಗ ಮಾರ್ಗದಿ
ಭಾವುಕತನದಿ ಚಿತ್ತರಿಸಿರುವ ಪುಣ್ಯಮೂರುತಿಯೆ ||೬||

ಭಾ||ಷ|| ಪರಮಕ ವಿಪುಂಗವರ ಸಂತರ
ಶರಣಕವಿಗಳ ದಾಸ ಪಂಥದ
ಗುರುತರದ ಸುವಿಚಾರಿ ಕಲಾವಿದರ ಕವಿಕ್ರತುವಿನಿಂ
ಹಿರಿತನವ ಪಡೆದಿರುವ ಸಂತತ
ಸಿರಿಯ ಸೊಂಪನು ತಳೆದ ನಮ್ಮೀ
ಪರಮ ಕನ್ನಡ ನಾಡು ನುಡಿ ನಿಮ್ಮಿಂದ ವರ್ಧಿಸಿದೆ ||೭||

ಭಾ||ಷ|| ಕವಿಸಹಜವಾಣಿಯಲಿ ನಿರುಪಮ
ಭಾವಶುದ್ಧಿಯಗ್ರೈವ ಮಾರ್ಗವ
ಶಿವಸುಖದ ಚಿನ್ಮಯಾನಂದ ಚೆಂದ ರೀತಿಯಲಿ
ಭಾವರಾಜ್ಯದ ಪ್ರಭುವೆ ಮಹಾನು
ಭಾವದಿ ಜನ ಬದುಕಿಸೆ ಕನ್ನಡ
ಸೇವೆಯಿಂ ಮಿಗೆ ಊರ್ಧ್ವಮುಖ ಮಂಗಳವ ಸಾಧಿಸುತ ||೮||

||ಕಂದ|| ಮಂಗಳವ ನೀಡೆಮಗೆ ಸ
ನ್ಮಂಗಳವ ಕರುಣಿಸಮ್ಮಯ ಕರ್ಣಾಟ ಸಂಘಕೆ
ಮಂಗಳ ಬೀರು ಗುರುವರ
ಮಂಗಳ ಸಕಲರಿಗೆ ಸರ್ವಲೋಕಕಂ ಶುಭದಿಂ ||೯||

**ಡಿ. ಟಿ. ರಂಗಸ್ವಾಮಿ, ಎಂ. ಎ,**
ಕನ್ನಡ ಲೆಕ್ಚರರ್, ಪ್ರಥಮದರ್ಜೆ ಕಾಲೇಜ್, ಚಿತ್ರದುರ್ಗ

# ಸನ್ನಿಧಿಯ
# ಸಾಹಿತ್ಯ ಸವಿಯ ಸವಿದು :

**ಶ್ರೀ ಗೊ. ರು. ಚೆನ್ನಬಸವಪ್ಪ**

೧

**ಸಾ**ಹಿತ್ಯ ಪ್ರಕಾರಗಳಲ್ಲೆಲ್ಲಾ ಸರ್ವೋತ್ಕೃಷ್ಟ ಸೇವೆ ಸಲ್ಲಿಸಿದ ಶ್ರೀಶೈಲ ಸೂರ್‍ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಅವರಿಗೆ ಪೀಠಾಧೀಶ್ವರರಲ್ಲಿ ಪ್ರಬುದ್ಧ ಸ್ಥಾನವಿದೆ. ನಾಡಿನ ಸ್ವಾಮಿಗಳಲ್ಲೆಲ್ಲ ವಿಶಿಷ್ಟ ವ್ಯಕ್ತಿತ್ವವಿದೆ; ವಿನಷ್ಟವಾಗದ ವಿಶಾಲಖ್ಯಾತಿಯಿದೆ. ಇಲ್ಲಿಯವರೆಗೆ ಸನ್ನಿಧಿಯವರ ಸಾಹಿತ್ಯ ಸೇವೆ ವಿವಿಧ ರೂಪ ಗಳಲ್ಲಿ ಬೆಳೆದು ಸಮೃದ್ಧವಾಗಿದೆ. ವಚನ ಕವನ ಕಾವ್ಯ ಪ್ರಬಂಧ ನಾಟಕ ಚರಿತ್ರೆ ಮುಂತಾಗಿ ಹಲವು ಪ್ರಕಾರಗಳಲ್ಲಿ ಇವರ ವಾಙ್ಮಯ ವೃಕ್ಷ ಶಾಖೋಪಶಾಖೆಗಳಿಂದ ಹರವಾಗಿದೆ. ಸುಮಾರು ನಾಲ್ಕು ಸಾವಿರ ವಚನ ರಚನೆಯ ಸೇವೆ ಸಣ್ಣದಲ್ಲ. ಮುನ್ನೂರಕ್ಕೂ ಮೇಲ್ಪಟ್ಟ ಕವನಗಳನ್ನು ಕಟ್ಟಿದ್ದಾರೆ. 'ಮಣಿಮುಕುರಂ' ಎಂಬ ಮಹಾದಾರ್ಶನಿಕ ಕಾವ್ಯವೊಂದನ್ನು ನಿರೂಪಿಸಿದ್ದಾರೆ. ಪದ್ಯಗಂಧಿಯಾದ ಪ್ರಬಂಧ ಸಾಹಿತ್ಯ ಸಾಕಷ್ಟಾಗಿದೆ. ಎರಡು ನಾಟಕಗಳನ್ನು ನಿರ್ಮಿಸಿದ್ದಾರೆ. ಚಾರಿತ್ರಿಕ ಗ್ರಂಥಗಳನ್ನೂ ಬರೆದಿದ್ದಾರೆ. ಲೇಖನಗಳಿಗೆ ಮಿತಿಯಿಲ್ಲ. ಅನೇಕ ಸಾಹಿತಿಗಳ ಗ್ರಂಥಗಳಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಶಿವಶರಣರ ಸಾಹಿತ್ಯದ ಮೇಲೆ ಮತ್ತು ಶಿವಾಚಾರ್ಯ ಸಾಹಿತ್ಯದ ಮೇಲೆ ಹೊಸ ಬೆಳಕು ಬರುವಂತೆ ಹೊಸ ಶೈಲಿಯಲ್ಲಿ ಗ್ರಂಥಗಳನ್ನು ಬರೆದು ಅವೆರಡು ದಡಗಳಿಗೆ ಸೇತುವೆಯನ್ನು ಕಟ್ಟಿ, ತಮ್ಮದೇ ಆದ ಪ್ರಭಾವವನ್ನು ಬೀರಿ, ನವೀನ ವಚನಕಾರರಾಗಿದ್ದಾರೆ. ನವೋದಯ ಶೈಲಿಯ 'ಸೀಳ್ನುಡಿ' 'ಅಭಯವಾಣಿ' ಕೃತಿ–ಕರ್ತರಾಗಿದಾರೆ. ಶ್ರೀಗಳವರ ಶೈಲಿಯಲ್ಲಿ ಸುಕು ಮಾರತೆಯಿದೆ. ಅರ್ಥದಲ್ಲಿ ಸತ್ವವಿದೆ. ಪದ ಮೈತ್ರಿಯಲ್ಲಿ ನಿಸರ್ಗಸುಭಗತೆಯಿದೆ. ಕಾವ್ಯದ ವಸ್ತು ಹಳೆಯದಾದರೂ ಶೈಲಿಯಲ್ಲಿ ನವ್ಯತೆಯಿದೆ ; ಭಾಷೆಯಲ್ಲಿ ಬೆಡಗಿದೆ ; ಭಾವಸೌಂದರ್ಯವಿದೆ. ಸನ್ನಿಧಿಯ ಸಮಗ್ರ ಸಾಹಿತ್ಯದಲ್ಲಿ ಸತ್ವವಿದೆ, ತತ್ವವಿದೆ ; ಗುಣಮಹತ್ವವಿದೆ. ಸಾನುಭೂತಿತ್ವ ಇವರ ಸಾಹಿತ್ಯದ ಜೀವಜೀವಾಳವಾಗಿದೆ. ಚಿಕ್ಕ ಚಿಕ್ಕ ಮಾತುಗಳ ಸರಸ ಶೈಲಿಯಲ್ಲಿ ಓದುಗರ ಮನಸ್ಸನ್ನಾಕರ್ಷಿಸುವ ಮೋಡಿ

ಯಿದೆ; ವಸ್ತು ಅಥವಾ ಪಾತ್ರ ನಿರೂಪಣೆಯಲ್ಲಿ ನಯನವನ್ನಾಕರ್ಷಿಸುವ ಗಾಡಿಯಿದೆ. ಬಾಹ್ಯನಿಸರ್ಗವನ್ನು ಭಾವಸ್ವರ್ಗವನ್ನಾಗಿ ರೂಪಿಸುವ ಶಕ್ತಿ ಸಂಪನ್ನತೆಯಿದೆ. ಈ ಶಕ್ತಿಯನ್ನು ಇವರ ಭಾವಗೀತೆಗಳಲ್ಲಿ ಭಾವ ಪ್ರಬಂಧಗಳಲ್ಲಿ ಬೇಕಾದಷ್ಟನ್ನು ಕಾಣ ಬಹುದು. ಸೃಷ್ಟಿ ಸೌಂದರ್ಯದಲ್ಲಿ ಸೃಷ್ಟೀಶನ ಸತ್ಯ ಸೌಂದರ್ಯವನ್ನು ಕಾಣುವುದೇ ಸನ್ನಿಧಿಯ ಸಾಹಿತ್ಯದಲ್ಲಿ ಇರುವ ಶ್ರೇಷ್ಠ ಸತ್ವ! ಇವರು ಸರ್ವದರಲ್ಲಿ ಶಿವಸೌಂದರ್ಯೋ ಪಾಸಕರು. ಸ್ವಾನುಭವ ಸಾಹಿತ್ಯ ಸೃಷ್ಟಿ ನಿರ್ಮಾಪಕರು. ಇವರ ಈ ಅಚ್ಚ ಅಳವನ್ನು ಕಂಡು ಅಚ್ಚರಿಯಾಗುತ್ತದೆ; ಮೆಚ್ಚು ಹೆಚ್ಚುತ್ತದೆ.

ಇವರ ಸಾಹಿತ್ಯ ಪ್ರತಿಭೆ ಸ್ವಾನುಭವದ ಸೆಲೆ, ಸಹಜ ಭಾವದ ನೆಲೆ; ಶಿವ ಸೌಂದರ್ಯದ ಕಲೆ. ಇವರ ಯಾವ ರಚನೆಯಾಗಲಿ ಅದು ರಸಪೂರ್ಣ, ರಹಸ್ಯಪೂರ್ಣ ಮತ್ತು ಕುತೂಹಲಕಾರಿ; ಕರ್ಣಹಿತಕಾರಿ. ಇವರ ಶೈಲಿ ಇವರದೇ! ಇವರ ಸಾಹಿತ್ಯಸತ್ವ, ಇವರ ಸ್ವಾನುಭವಶಕ್ತಿ ಇವರಿಗೇ ಮೀಸಲು. ಎಂತಹ ಜಟಿಲ ತತ್ವ ವನ್ನೂ ಸುಲಭವಾಗಿಸಬಲ್ಲರು. ಸುಭಗವಾಗಿಸಬಲ್ಲರು. ಇವರು ಯಾವುದನ್ನೇ ಹೇಳಲಿ ಹೃದಯಂಗಮವಾಗಿಸಬಲ್ಲರು. ಇವರು ಯಾವುದನ್ನೇ ರಚಿಸಲಿ ಅದನ್ನು ಆದರ್ಶವಾಗಿಸಬಲ್ಲರು. ಶಾಶ್ವತವಾಗಿಸಬಲ್ಲರು. ಸತ್ಯಂ ಶಿವಂ ಸುಂದರಂ ಆಗಿಸ ಬಲ್ಲರು. ಇವರಲ್ಲಿ ಈ ಆದರ್ಶಶಕ್ತಿ ಸ್ಥಾಯಿಯಾಗಿ ನಿಂತಿದೆ; ಸುಧಾಸ್ರಾವಿಯಾಗಿ ಪ್ರವಹಿಸುತ್ತಿದೆ.

ಶ್ರೀ ಸನ್ನಿಧಿಯವರ ಸರ್ವಕೃತಿಗಳು ಜೀವಂತವಾಗಿವೆ; ಶ್ರೀಮಂತವಾಗಿವೆ. ಈ ಮಾತಿನ ಸತ್ಯತೆಗಾಗಿ ಇವರ ಯಾವ ಕೃತಿಯನ್ನೇ ಆಗಲಿ ಓದುಗರು ಕೈಗೆ ತೆಗೆದುಕೊಂಡು ಇಡಿಯಾಗಿ ಓದಿ ನೋಡಬೇಕು. ಆ ಕೃತಿಯೊಡನೆ ಓದುಗನ ಮನಸ್ಸು ಬೆರೆದೇಕವಾಗುತ್ತದೆ. ಜೀವನಾನುಭವವು ಅವರ ಆ ಕಾವ್ಯಾನುಭವದಲ್ಲಿ ಕಲತು ಮೆಲತು ಹೋಗುತ್ತದೆ. ಇವರು ಇಂತಹ ಅರಳಿದ ಎಪ್ಪತ್ತು ಪುಸ್ತಕ ಪುಷ್ಪಗಳಿಂದ ನುಡಿ ದೇವಿಯನ್ನು ಪರಾಭಕ್ತಿಯಿಂದ ಪೂಜಿಸಿದ್ದಾರೆ; ಪ್ರಸನ್ನಗೊಳಿಸಿ ದ್ದಾರೆ.

ಸನ್ನಿಧಿಯಲ್ಲಿ ಸಾಹಿತ್ಯ ಸತ್ವ ಯುಗಧರ್ಮದ ಪರಿಣಾಮವಾಗಿ ಸ್ವಯಂ ಸಾಂಸ್ಕಾರಿಕ ಪರಿಶ್ರಮಫಲವಾಗಿ ಮೈಗೂಡಿ ಬಂದಿದೆ. ವಿಮರ್ಶೆಯಲ್ಲಿ ವಿಶ್ಲೇಷಣೆಯಲ್ಲಿ ಅವರದೇ ಆದ ಒಂದು ಕಲೆಯಿದೆ; ಕೌಶಲ್ಯವಿದೆ. ಯಾವ ವಸ್ತುವನ್ನೇ ತೆಗೆದುಕೊಳ್ಳಲಿ ಅದನ್ನು ಕೊರತೆಯಿಲ್ಲದೆ ಕಾಣುವ, ಕಂಡಂತೆ ಕಾಣಿಸುವ ಕಲಾವಂತಿಕೆಯಿದೆ. ವಿಚಾರ ವನ್ನು ವಿವರಿಸುವಲ್ಲಿ ವರ್ಣನೆಯನ್ನು ಮಂಡಿಸುವಲ್ಲಿ ದರ್ಶನಾನುಭವವನ್ನು ದರ್ಶಿಸು ವುದರಲ್ಲಿ ಸನ್ನಿಧಿಯವರು ಸಿದ್ಧ ಹಸ್ತರು. 'ಜೀವದೃಷ್ಟಿ' 'ಸಂಸ್ಕಾರ' 'ಶಿವಾದ್ವೈತ ದರ್ಶನ' ಈ ದಿಸೆಯಲ್ಲಿ ಉದಹರಿಸತಕ್ಕ ಉದ್ಗ್ರಂಥಗಳು. 'ಅಭಯವಾಣಿ' ಇವರ ಅಗಾಧವಾದ ಅನುಭವಾಮೃತದ ರಸಪಾಕ; ಸುಧಾಸ್ರಾವಿಯಾದ ಜೀವಪ್ರವಾಹ.

ಸನ್ನಿಧಿಯವರ ಸಾಹಿತ್ಯ ಹಳತು-ಹೊಸತುಗಳ ನಟ್ಟನಡುವಿನ ಸೇತುವೆ. ಹಳೆತುದಕ್ಕೆ ಹೊಸತು ರೂಪವಿತ್ತ ಕುಂದಣ ಕೆಲಸ. ಶುದ್ಧ ಜೀವನ ಸಂಕೇತ. ವರ್ತಮಾನ ಜೀವನ ಪ್ರತೀಕ. ಪ್ರಾಚೀನ ಕಾಲೀನ ನಿರ್ಮಲತೆಯಿದೆ; ಆಧುನಿಕ ಕಾಲೀನ ವಿಶಾಲತೆಯಿದೆ. ಇವರ ಸಾಹಿತ್ಯವಾಹಿನಿ ಹರಿದ ಹೃದಯಭೂಮಿಕೆ ವಿಶುದ್ಧವಾಗುತ್ತದೆ; ವಿಶಾಲವಾಗುತ್ತದೆ; ವಿಚಾರ ಪ್ರಕಾಶವುಳ್ಳದ್ದಾಗುತ್ತದೆ. ಸನ್ನಿಧಿಯವರ ಸಾಹಿತ್ಯದಲ್ಲಿ ಪ್ರಜ್ಞಾಪ್ರಭಾಕರನು ಅದೆಂದಿಗೂ ಅಚ್ಚಳಿಯದೆ ಸ್ವಚ್ಛವಾಗಿ ಬೆಳಗುತ್ತಿರುತ್ತಾನೆ; ವಾಚಕರಲ್ಲಿ ನವ ವೈಚಾರಿಕ ಪ್ರಭೆಯನ್ನು ಬೀರುತ್ತಿರುತ್ತಾನೆ.

ಹೃದಯಪ್ರಧಾನವಾದ ಇವರ ಸಾಹಿತ್ಯ ಅದೊಂದು ಹಿಮಾಲಯದಗೌರೀಶಿಖರ ಅದರ ಔನ್ನತ್ಯ-ಲಾಲಿತ್ಯಮಾನಸೂಚಕವಾಗಿದೆ; ಕಾರುಣ್ಯದ್ಯೋತಕವಾಗಿದೆ; ಆದರೂ ಅದು ಮಾನವತೆಯನ್ನು ಮರೆತಿಲ್ಲ. ಮಾನವರ ಸೇವೆಗಾಗಿ ಮೆರೆದಿದೆ. ಮಾನವತೆಯ ಉಪಾಸನೆಗಾಗಿ ಮಂಗಳಕರವಾಗಿ ಮೊರೆದಿದೆ. ಅದರ ಭಾವಸೌಂದರ್ಯ ಹಿಮಾಲಯದಷ್ಟೇ ಎತ್ತರ, ಅಷ್ಟೇ ಬಿತ್ತರ; ಅದರಷ್ಟೇ ಸುಬ್ಬರ.

ಇದರ ಅನುಭಾವ ವೈಖರಿ ಎಂಥವರನ್ನೂ ಬೆರಗುಗೊಳಿಸುತ್ತದೆ. ಅದರ ಮಾಧುರಿಯಲ್ಲಿ ಓದುಗನು ಮೈಮರೆಯುತ್ತಾನೆ. ಭಾವಾನುಭಾವಗಳನ್ನು ಭಾಷೆಯಲ್ಲಿ ತರುವ ಇವರ ಬೆಡಗು ಮನವಾರೆ ಮೆಚ್ಚತಕ್ಕುದು; ವಿಚಾರ ವೈವಿಧ್ಯ, ವಾಙ್ಮಯ ನಾವೀನ್ಯ ಇವರ ಸಾಹಿತ್ಯದ ವೈಶಿಷ್ಟ್ಯ. ಮಾನವ ಜೀವನದ ಬಗೆಗಳನ್ನು ತೆರೆತೆರೆಯಾಗಿ ಎತ್ತಿ ತೋರುವ ಕೌಶಲ್ಯ ಕುತೂಹಲಕಾರಿಯಾಗಿದೆ.

ಇವರು ತಮ್ಮ ಜೀವನಾನುಭವದ ಜತೆಗೆ ದಾರ್ಶನಿಕ ಗ್ರಂಥಗಳನ್ನು ಚೆನ್ನಾಗಿ ಜೀರ್ಣಿಸಿಕೊಂಡಿದ್ದಾರೆ. ವಚನ ವಾಙ್ಮಯವನ್ನೂ ಮಿಗಿಲಾಗಿ ಶಿವಯೋಗಿ ಶಿವಾಚಾರ್ಯರ 'ಸಿದ್ಧಾಂತ ಶಿಖಾಮಣಿ'ಯನ್ನೂ ಆಳವಾಗಿ ಅಭ್ಯಾಸಮಾಡಿದ್ದಾರೆ. ಅವೆಲ್ಲವುಗಳಲ್ಲಿ ಆರ್ಜಿಸಿಕೊಂಡ ಅಗಾಧ ಅರಿವನ್ನು ಆತ್ಮೀಯ ಅನುಭವವನ್ನಾಗಿ ಮಾರ್ಪಡಿಸಿಕೊಂಡು ತಮ್ಮದೇ ಆದ ನವ್ಯಶೈಲಿಯಲ್ಲಿ ಸಾಹಿತ್ಯ ನಿರ್ಮಾಣವನ್ನು ಮಾಡಿದರು. ಮತ್ತು ತಮ್ಮದೇ ಆದ ಒಂದು ಹೊಸಬಗೆಯ ಸಂಯೋಜನೆಯ ದರ್ಶನವನ್ನು ರೂಪಿಸಿದರು. ವೀರಶೈವ ಸಿದ್ಧಾಂತಕ್ಕೆ ಒಂದು ಹೊಸ ಹೊಳಪನ್ನು ಮನಂಬುಗುವ ಮೆರಗನ್ನು ಕೊಟ್ಟರು. ಇವರ 'ಸಂಸ್ಕಾರ' 'ಶಿವಾದ್ವೈತ ದರ್ಶನ' 'ಕಾಯಕ ಕಲೆ' ಗ್ರಂಥಗಳಿಂದ ವೀರಶೈವ ಸಿದ್ಧಾಂತಕ್ಕೊಂದು ಶಿಖರವಿಟ್ಟಂತಾಯಿತು. ಜಿಜ್ಞಾಸುಗಳ ತಿಳುವಳಿಕೆಗೆ ಒಂದು ತಳಹದಿ ಹಾಕಿದಂತಾಯಿತು ಬುದ್ಧಿಗೊಂದು ಬೆಳಕು ಮೂಡಿತು. ಚಕ್ಷುವಿಗೊಂದು ಚೆಲುವು ತೋರಿತು. ಸಾಮಾಜಿಕರ ಅನಿರ್ದಿಷ್ಟ ಅರಿವಿನಲ್ಲಿ ನಿರ್ದಿಷ್ಟತೆ, ಅರ್ಥಶೂನ್ಯತೆಯಲ್ಲಿ ಅರ್ಥಪೂರ್ಣತೆ ಅನನುಭವದಲ್ಲಿ ಅನುಭಾವಿಕತೆ ಮೈದೋರಿತು. ಜ್ಞಾನಕ್ರಿಯೆಗಳ ಆದ್ಯಂತದರ್ಶನ ಗೋಚರಿಸಿತು; ಅಚ್ಚಳಿಯದ ತಾತ್ವಿಕಮಂದಿರ ತೋರಿತು. ಅವೆರಡು ಬಾಳಬಟ್ಟೆಯಲ್ಲಿ ಹಾಸುಹೊಕ್ಕಾಗಿ ನೆಯ್ದು

ಕೊಳ್ಳುವಂತೆ ಮಾಡಿದ ಮನನೀಯ ಮಣಿಹ ಇವರದು. ಸಾಮಾಜಿಕಾಚಾರಗಳ ಸಂಪ್ರೀಹ ಉಯ್ಯಾಲೆಯಲ್ಲಿ ತೂಗಾಡುತ್ತಿರುವವರು ನೇರವಾಗಿ ಸಾಗಿ ಹೋಗುವಂತಾಯಿತು. ಹೋಗಿ ಧ್ಯೇಯಕ್ಕೆ ನಿಲುಕುವಂತಾಯಿತು. ನೆಲೆ ಕಲೆಗಳ ಅನುಭವಿಸಿ ಆನಂದಿಸುವಂತಾಯಿತು. ಆಂತರಿಕ ಎಲ್ಲ ವಿಕಾರಗಳನ್ನು ಕಳೆದು ವಿಭೂತಿತ್ವವನ್ನು ತಳೆದು ಸ್ವಾನುಭವಕ್ಕೆ ಸೇರಲು ಸಾಧ್ಯವಾಯಿತು. ಇಂದಿನ ನಮ್ಮ ಸಮಕಾಲೀನರ ಮೇಲೆ ಇವರ ಸತ್ವ ಸಾಹಿತ್ಯದ ಸುಪರಿಣಾಮ ಚೆನ್ನಾಗಿ ಆಗಿದೆ. ಬಹಿರಂತರಂಗದ ಜೀವನಾನುಭವಗಳು ಓದುಗರಿಗೆ ಒದಗುವಂತಾಗಿದೆ. ಇಪ್ಪತ್ತನೆಯ ಶತಮಾನಕ್ಕೆ ಒಪ್ಪುವಂತಹ ಇವರ ಸಾಹಿತ್ಯ ಪ್ರಕಾರಗಳು ಸ್ವಾನುಭವೋಕ್ತಿಗಳು ಓದುಗರಿಗೆ ಭಾವ ಸಮಾಧಿಯನ್ನು ಬರಿಸಿ ಭಕ್ತಿರಸ ನಿಷ್ಯಂದಿಗಳಾಗಿವೆ. ಸರ್ವ ಸಮನ್ವಯ ಸಿದ್ಧಾಂತ ಸೂಚಕಗಳಾಗಿವೆ. ಸರ್ವಧರ್ಮ ಸಮನ್ವಯ ಶಕ್ತಿಗಳಾಗಿವೆ. ಧರ್ಮಹಾನಿಯ ಈ ಕಾಲದಲ್ಲಿ ಧಾರ್ಮಿಕಾಚಾರ ವಿಚಾರಗಳನ್ನು ಅಂಗೀಕರಿಸಲು ಸಹಾಯಕಗಳಾಗಿವೆ. ಶ್ರದ್ಧೆಯ ಶಕ್ತಿಯನ್ನು ಹೆಚ್ಚಿಸುತ್ತವೆ. ಭಕ್ತಿ ಭಾವವನ್ನು ಹುಟ್ಟಿಸುತ್ತವೆ. ಒಂದು ಸಾಮಾಜಿಕ ಸಂಪ್ರದಾಯದಲ್ಲಿ ಪೀಠ ಪರಂಪರೆಯಲ್ಲಿ ಬೆಳೆದು ಬಂದ ಇವರು, ಆಧುನಿಕ ಪ್ರವಾಡಿಯೊಬ್ಬನು ಅದೆಷ್ಟು ಕೆಲಸವನ್ನು ಅದೆಷ್ಟು ಸಾಹಿತ್ಯ ಸೇವೆಯನ್ನು ಮಾಡಬಹುದೋ ಅಷ್ಟನ್ನು ಮಾಡಿದಾರೆ; ಮಾಡಲಿದಾರೆ. ಇವರಿಂದ ಬಿಡುವಿಲ್ಲದೆ ರಚಿತವಾಗುತ್ತಿರುವ ಶ್ರೇಷ್ಠ ಸಾಹಿತ್ಯ ದರ್ಪಣದಲ್ಲಿ ಇವರ ಬಹಿರಂತರಂಗಗಳೆರಡು ನಿರ್ವಂಚನೆಯಿಂದ ಸತತ ಸನುವಾಗಿ ಕೆಲಸ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ತಮ್ಮ ಜೀವಿತವನ್ನೇ ಇದಕ್ಕಾಗಿ ಮುಡುಪಿಟ್ಟಿದ್ದಾರೆ. ಇವರೊಬ್ಬರು ಹಿಂದಿನ ನಿಸ್ಸೀಮ ಸಾಹಿತ್ಯೋಪಾಸಕರು; ಅಸಮ ಸಾಹಿತ್ಯ ರಚಕರು. ಇವರ ಹೃದಯ ಭೂಮಿಯಲ್ಲಿ ಸಾಹಿತ್ಯ ಸುವರ್ಣದ ಅಪಾರ ಗಣಿಯಿದೆ. ಕಾವ್ಯ ಸೌಂದರ್ಯದ ಆಧಾರ ಮಣಿಯಿದೆ.

ಕಥೆ ಕಾದಂಬರಿಗಳನ್ನು ಬರೆಯಬಹುದು. ಚಂಪೂ ನಾಟಕಗಳನ್ನು ಬರೆಯಬಹುದು, ವಿಚಾರಾತ್ಮಕ ವಾಙ್ಮಯ ಸೇವೆ ಸಾಹಸದ ಕೆಲಸ. ಅವರಲ್ಲಿಯೂ ಆ ಅಮೃತತ್ವರೂಪಾದ ಆಧ್ಯಾತ್ಮ ಸಾಹಿತ್ಯ ನಿರ್ಮಾಣ ನಿಜಕ್ಕೂ ಕಷ್ಟಕರ ಕಾರ್ಯ. ಅಂತಹ ಕರಕಷ್ಟದ ಕಾರ್ಯವನ್ನು ಸನ್ನಿಧಿಯವರು ಸೊಗಸಾಗಿ ಸಾಗಿಸಿದ್ಧಾರೆ. ಆ ಅಮೃತತತ್ವದ ಅನುಭವವನ್ನು ತಮ್ಮ ಮನೋಹರವಾದ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಮರೆಯಲಾಗದ ಮಾತುಗಳಲ್ಲಿ ಬಣ್ಣಿಸಿದ್ದಾರೆ. ಇದಕ್ಕೆ ಅವರ 'ದೇವದೃಷ್ಟಿ' ಉತ್ತಮ ಉದಾಹರಣೆಯಾಗಿದೆ. 'ಶಿವಾದ್ವೈತ ದರ್ಶನ' ಶ್ರೇಷ್ಠವಾದ ಸೊಗಸಾದ ದಾರ್ಶನಿಕ ಕಾವ್ಯವಾಗಿದೆ. 'ಮಣಿಮುಕುರಂ' ಅದಕ್ಕಾಗಿಯೇ ಮೀಸಲಾದ ಸೊಗಸಾದ ಸುಂದರವಾದ ಮಹಾದಾರ್ಶನಿಕ ಕಾವ್ಯ. ಷಟ್‌ಸ್ಥಲ ಸಿದ್ಧಾಂತಪ್ರತಿಪಾದಕ ಪ್ರಾಸಾದಿಕ ಶೈಲಿಯ ಮಹಾ ಕಾವ್ಯ. 'ಶಿವಾದ್ವೈತ ದರ್ಶನ'ದ ಪ್ರಕರಣ

ದಲ್ಲಿಯೂ ನವ್ಯತೆಯಿದೆ; ರಮ್ಯತೆಯಿದೆ. ಅದರಲ್ಲಿನ 'ಪ್ರಪಂಚ ಪರಮಾರ್ಥ' ಎಂಬ ಪ್ರಕರಣವನ್ನು ಪ್ರತಿಯೊಬ್ಬರೂ ಓದಿಯಾಗಬೇಕು. ಎರಡನ್ನೂ ಒಂದೇ ಕಣ್ಣಿನಲ್ಲಿ ಕಂಡ ಒಂದೇ ರೂಪಾಗಿ ಭಾವಿಸಿದ ಬಗೆಯನ್ನು ಬಣ್ಣಿಸಿ ಹೇಳಲು ಸಾಧ್ಯವಿಲ್ಲ. 'ಯೋಗ-ಶಿವಯೋಗ'ದ ಮಾತೂ ಅಷ್ಟೆ! ಅದೊಂದು ಆದರ್ಶಗ್ರಂಥ; ಅಗ್ರಮಾನ್ಯಗ್ರಂಥ.

ಶಿವ-ಶಕ್ತಿ ಇವು ಅತ್ಯಂತ ಸೂಕ್ಷ್ಮವಾದ ಅತ್ಯಂತ ಮಹತ್ತರವಾದ ವಸ್ತುಗಳು. ಅವುಗಳ ಒಳ ಎಳೆಗಳನ್ನು ತತ್ವ ಸತ್ವಗಳನ್ನು ವಿಶ್ಲೇಷಿಸಿ ತೋರಿಸುವುದು, ವಿಚಾರವಾದಿಗಳನ್ನು ಒಪ್ಪಿಸುವುದು ಸುಲಭವಾದ ಮಾತಲ್ಲ; ಸಾಮಾನ್ಯವಾದ ಮಣಿಹವಲ್ಲ. ಶಿವಾಗಮಗಳನ್ನು ಶಿವಾಚಾರ್ಯರ ಸಿದ್ಧಾಂತವನ್ನು ಶಿವಶರಣರ ವಚನಗಳನ್ನು ಇವರ ಆ ಉದ್ಗ್ರಂಥದಲ್ಲಿ ಸಮ್ಮಿಳನ ಮಾಡಿ ಸಮರಸಗೊಳಿಸಿದ ಮಣಿಹ ಮೆಚ್ಚತಕ್ಕುದು. ಶಿವಾದ್ವೈತದರ್ಶನ ವಿಧಾನದಲ್ಲಿ ಇದೊಂದು ನವ್ಯ ಪ್ರಯೋಗ; ಸರ್ವಗ್ರಾಹ್ಯ ಪ್ರಯೋಗ. ಭೇದಭಾವ, ಸಂಕುಚಿತ ಬುದ್ಧಿಗಳಿಗೆ ಇದರಲ್ಲಿ ಎಡೆಯಿಲ್ಲ. ವಿಶಾಲ ಮನೋಭಾವ ಅನುಭಾವಗಳು ಇದರಲ್ಲಿವೆ. ಹಿಂದಿನ ದಾರ್ಶನಿಕರ ದಿವ್ಯಾನುಭವಗಳನ್ನು ಪಡೆದುಕೊಂಡು ಅವುಗಳ ಮೇಲೆ ತಮ್ಮದೇ ಆದ ಅನುಭಾವದ ಮೆರಗನ್ನಿತ್ತು ನವೀನವನ್ನಾಗಿಸಲಾಗಿದೆ. ನವ್ಯದರ್ಶನವೇನೋ ಎಂದೆನ್ನುವಂತಾಗಿದೆ. "ಶಿವಾದ್ವೈತ ದರ್ಶನ" ಶಾಶ್ವತವಾಗಿ ಬದುಕಿ ಬೆಳಗುವ ಉನ್ನತ ಕೃತಿ.

'ಮಣಿ ಮುಕುರಂ' ಇದು ಅನುವಾದ ಕೃತಿ. ಸಂಸ್ಕೃತದಲ್ಲಿರುವ 'ಸಿದ್ಧಾಂತ ಶಿಖಾಮಣಿ ಎಂಬ ಹೆಸರಿನ ರೇಣುಕ ಗೀತೆಯನ್ನು ತಿಳಿಗನ್ನಡಕ್ಕೆ ತಂದ ಸತ್ಕೃತಿ. ಅನುವಾದ ಆಕರ್ಷಣೀಯವಾಗಿದೆ. ಇದರಲ್ಲಿ ಕವಿಗುರು ಬಳಸಿದ ಪ್ರಾಸಾದಿಕ ಶೈಲಿ ಎಂಥವರನ್ನೂ ಆನಂದಗೊಳಿಸುವಂತಹದು. ಇದರಲ್ಲಿ ತೋರಿದ ಪ್ರತಿಭೆ ಬಗೆಯನ್ನು ಬೆಳಗುವಂತಹದು; ಬುದ್ಧಿವಂತರನ್ನು ಬೆರಗುಗೊಳಿಸುವಂತಹದು. ಪ್ರತಿಭೆಯಂತೆ ಕಾವ್ಯ ಪ್ರೌಢಿಮೆಯೂ ವರ್ಣನೀಯವಾದುದು. ಸಿದ್ಧಾಂತ ಭಾಗ ಹಳೆಯದಾದರೂ ಕಾವ್ಯಭಾಗ ಅಥವಾ ಕಾವ್ಯಾಂಗ ಹೊಚ್ಚಹೊಸದು. ಹಳೆಗನ್ನಡ ಶೈಲಿಯ ಬಂಧವಾದರೂ ಹೊಸಗನ್ನಡ ಛಂದದಿಂದ ಚಲುವಾದುದು ಷಟ್‌ಸ್ಥಲ ಜಿಜ್ಞಾಸುಗಳಿಗೆ ಪರಿಣಾಮವನ್ನು ಬೀರುವ ಬಂಧುರವಾದ ಸುಂದರವಾದ ಗ್ರಂಥವಿದು. ಇದು ಇಂದಿನ ಕಾವ್ಯ ಪರಂಪರೆಯ ಮೇಲೆ ತನ್ನದೇ ಆದ ಬೆಳಕನ್ನು ಚೆಲ್ಲುವಂತಿದೆ. ಚೆಲ್ಲಿದೆ. ಇದೊಂದು ಬಗೆಯ ನವ್ಯತೆಯನ್ನು ತರುವಂತಿದೆ; ತಂದಿದೆ. ಮಣಿಮುಕುರದ ಕಾವ್ಯನೆಯ್ಗೆಯಲ್ಲಿ ಕವಿಗುರುವಿನ ಕಲಾವಂತಿಕೆಯಿದೆ; ಕುಶಲವಂತಿಕೆಯಿದೆ.

ಇದು ಕನ್ನಡ ದಾರ್ಶನಿಕ ಕಾವ್ಯ ಲೋಕದಲ್ಲಿ ಇವರಿಗೆ ಒಂದು ಹಿರಿಯ ಸ್ಥಾನವನ್ನು ತಂದಿದೆ; ಹಿರಿದಾದ ಮಾನವನ್ನು ತಂದಿದೆ. ಇದೊಂದು ಅವರ ಮೇರುಕೃತಿ.

'ಮಣಿಕಾಂತಿ'ಯೂ ಅಷ್ಟೆ. ಇದು ಇಂಗ್ಲಿಷ್ ಭಾಷೆಗೆ ಅನುವಾದವಾಗಿದೆಯೆಂದರೆ ಸಾಕು, ಇದರಿಂದ ಇದರ ಹಿರಿಮೆ ಹೃದ್ಗೋಚರವಾಗುತ್ತದೆ.

'ಮಣಿವಚನಗಳು' ಎಂಬುದೂ ಒಂದು ಮಹಾಕೃತಿ. ಇದು ವಚನಶೈಲಿಯ ಬೃಹದ್ಗ್ರಂಥ. ವಚನ ಶೈಲಿ ಇದರಲ್ಲಿ ಪರಿಪಕ್ವವಾಗಿದೆ. ಮೂಲ 'ಸಿದ್ಧಾಂತ ಶಿಖಾಮಣಿ' ಗ್ರಂಥಕ್ಕೆ ಹೆಚ್ಚಿನ ಮೆರಗನ್ನು ತಂದಿದ. ಮೂಲದಲ್ಲಿ ಕಾಣುವ ಅರೆ ಕೊರೆಗಳನ್ನು ಇದು ತುಂಬಿ ತಂದಿದೆ. ಹಳೆಯ ಭಾವಗಳನ್ನು ಹೊಸದಾಗಿಸಿದೆ. ಹಣ್ಣೆಲೆಯ ಮೇಲೆ ಹಸಿರೆಲೆ ಮೂಡಿದಂತಾಗಿದೆ.

ಈ ಮೂರು ಮೇರು ಕೃತಿಗಳು ರೇಣುಕ ಗೀತೆಯನ್ನು ಸಕ್ಕದದಿಂದ ಸಿರಿಗನ್ನಡ ನುಡಿಬನಕ್ಕೆ ವಿಪುಲವಾಗಿ ತಂದು ವಸಂತ ಶ್ರೀಯನ್ನು ವಿಸ್ತರಿಸಿವೆ. ಮುಗುಳಾಗಿ ಮೂಡಿ ಹೂವಾಗಿ ಅರಳಿ ಹಣ್ಣಾಗಿ ಹೊಂಪುಳಿಗೊಂಡಿವೆ. ಮಣಿಯ ಬೆಲೆಯನ್ನು ಮಣಿಯ ಬೆಳಕನ್ನು ಹೆಚ್ಚಿಸಿವೆ. ಈ ಮೂರರ ಮುನ್ನುಡಿಗಳನ್ನು ನುಡಿನೇಹಿಗರು ಓದಿ ಓಲಾಡಬೇಕು. ಕೃತಿಗಳಲ್ಲಿ ಷಟ್‌ಸ್ಥಲದ ಸಂಸ್ಕೃತಿಯನ್ನು ಸುಂದರವಾಗಿ ಸವಿಸ್ತಾರವಾಗಿ ರೂಹಿಸಲಾಗಿದೆ. ವಿಶಾಲ ವಿಶ್ವಕ್ಕೆ ತಂದು ತೋರಲಾಗಿದೆ.

'ದೃಷ್ಟಿದರ್ಶನ' 'ದೇವದೃಷ್ಟಿ' ಇವೆರಡು ಇವರ ದಾರ್ಶನಿಕ ದಿವ್ಯ ಕೃತಿಗಳು. 'ದೃಷ್ಟಿದರ್ಶನ'ದಲ್ಲಿ ಸನ್ನಿಧಿಯವರ ದೃಷ್ಟಿದಿವ್ಯತೆ ನಮಗೆ ಗೋಚರವಾಗುತ್ತದೆ. 'ದೇವದೃಷ್ಟಿ'ಯಲ್ಲಿ ಇವರ ದೇವಾನುಭವದ ಸೊಗಸನ್ನು ಸವಿದು ಸಂತಸಗೊಳ್ಳು ತ್ತೇವೆ. ಇವೆರಡರ ಅಗಾಧ ಅನುಭವವನ್ನು ಕಂಡು ಅಚ್ಚರಿ ಆನಂದಗಳಲ್ಲಿ ಮುಳುಗು ತ್ತೇವೆ. ಮೈಮರೆಯುತ್ತೇವೆ.

ದೃಷ್ಟಿಜ್ಞಾನವನ್ನು ಬಹುಮುಖದಲ್ಲಿ ಪ್ರಕಾಶಗೊಳಿಸುವ ಕೃತಿ. 'ದೃಷ್ಟಿದರ್ಶನ' ಪುಟಪುಟಕ್ಕೂ ದಾರ್ಶನಿಕತೆ ಹಾಸು ಹೊಕ್ಕಾಗಿದೆ. ಸ್ವಾನುಭವ ಹೊರಹೊಮ್ಮಿದೆ. ಏನೆಲ್ಲವೂ ಕಣ್ಣಿನಲ್ಲಿದೆಯೆಂಬುದನ್ನು ಕಾಣಬಹುದು. ಕಣ್ಣಿನ ಹಿರಿಮೆಯ ಹಲವಾರು ಮುಖಗಳನ್ನು ಮನಗಾಣುತ್ತೇವೆ. ನೇತ್ರದ ಪರಿಪೂರ್ಣ ಚಿತ್ರದಲ್ಲಿ ತಲ್ಲೀನಗೊಂಡು ಅನುಭಾವ ಸಾಮ್ರಾಜ್ಯದಲ್ಲಿ ಆನಂದ ಪರವಶರಾಗುತ್ತೇವೆ. ಸತ್ಯವಾದ ಶಿವಸೌಂದರ್ಯ ವನ್ನು ಸೃಷ್ಟಿಸೌಂದರ್ಯವನ್ನು ತೋರುವ ಉಭಯ ನೇತ್ರಗಳ ಪರಿಪೂರ್ಣ ಅನುಭವ ಈ ಕೃತಿಯಲ್ಲಿ ನಮಗಾಗುತ್ತದೆ. 'ದೃಗ್ದರ್ಶನದ ಸಾಕ್ಷಾತ್ಕಾರವಾಗುತ್ತದೆ. ದೃಷ್ಟಿ ಅದೊಂದು ದಿವ್ಯ ಸೃಷ್ಟಿ, ಚೇತನ ಸ್ವರೂಪ. ಜೀವನದ ಜೀವಾಳ. ಬಾಳಿನ ಬೆಳಕು. ಸೃಷ್ಟಿಯಿದ್ದ ಬಳಿಕ ದೃಷ್ಟಿಬೇಕು. ಸೃಷ್ಟಿಯೊಡೆಯನ ನೋಡುವ ದೃಷ್ಟಿಯೂ ಬೇಕು.

'ದೇವದೃಷ್ಟಿ' ಇದೊಂದು 'ದೇವ' ಸಮಸ್ಯೆಯನ್ನು ಬಿಡಿಸಿದ ಗ್ರಂಥ. 'ದೇವ' ರಹಸ್ಯವನ್ನು ಬೀರಿದ ಉದ್ಗ್ರಂಥ. 'ದೇವ' ಈ ಶಬ್ದಾರ್ಥದಲ್ಲಿಯೇ ದೇವತ್ವವನ್ನು ಕಣ್ಣರಿಕೆ ಮಾಡಿಕೊಡುವ ಕೃತಿ. ದೀಪ್ತಿಯೇ ದೇವನೆಂಬುದನ್ನು ಸ್ಥೂಲದಿಂದ

ಸೂಕ್ಷ್ಮದವರೆವಿಗೂ ಎಳೆ ಎಳೆಯಾಗಿ ಬಿಡಿಸಿ ತೋರಿದ ವಿಚಾರಪೂರ್ಣವಾದ ಹೊತ್ತಗೆ. ತೇಜ ಮೊದಲ್ಗೊಂಡು ಪರಂಜ್ಯೋತಿ ಕೊನೆಯಾಗಿ ಇರುವ ಬೆಳಕುಗಳನ್ನು ಭಾವಪೂರ್ಣ ವಿಶ್ಲೇಷಣೆಯಿಂದ ವಿಜ್ಞಾನ ದೃಷ್ಟಿಗೊಪ್ಪುವಂತೆ ವಿವರಿಸಿ ತೋರಿಸಿ ತಣಿಸುವ ತಾತ್ವಿಕ ಪುಸ್ತಕ. ವಿಶ್ಲೇಷಣ ಚಿತ್ರಣ ಮನೋಜ್ಞವಾಗಿದೆ.

ಕಾಯಕ ಕಲೆ : ಇದೊಂದು ಇವರ ಕಲಾಕೃತಿ. ಇದರಲ್ಲಿ ತಮ್ಮ ಕರ್ಮ ಕೌಶಲ್ಯವನ್ನು ಕಲಾಸಿದ್ಧಿಯನ್ನು ಕಾಯಕ ವೈಶಾಲ್ಯವನ್ನು ಬಿತ್ತರವಾಗಿ ಬೀರಿದ್ದಾರೆ. ಇವರ ಕ್ರಿಯಾಸಿದ್ಧಿಗೆ ಇದೊಂದು ನಿದರ್ಶನ. ಇದರಲ್ಲಿ ಕಾಯಕವನ್ನು ಕುರಿತು ಹೇಳಬೇಕಾದುದನ್ನೆಲ್ಲ ಹೇಳಿದ್ದಾರೆ. ಈ ಕೃತಿಯಿಂದ ಕಾಯಕಕ್ಕೆ ಒಂದು ಹೊಸ ಪ್ರತಿಭೆ ಬಂದಿದೆ. ಕಾಯಕವನ್ನು ಕುರಿತು ಇವರ ಅನುಭವ ಅಪಾರ; ಅಸದೃಶ. ಕ್ರಿಯೆಯ ಆಳ-ಅಗಲಗಳೆರಡನ್ನೂ ಅಳೆದಿದ್ದಾರೆ. ಅದರ ಎತ್ತರಕ್ಕೆ ಎಟಕಿದ್ದಾರೆ.

ಕನ್ನಡದಲ್ಲಿ ಕಾಯಕವನ್ನು ಕುರಿತ ಇವರ ಈ ಕೃತಿ ಆದಿಕೃತಿ ; ಅಮರಕೃತಿ. ಅಗ್ರತಾಂಬೂಲಕ್ಕೆ ಸಲ್ಲುವ ಸತ್ಕೃತಿ. ಸಂಮೋಹಕ ಶೈಲಿಯಲ್ಲಿ ಕಾಯಕದ ಎಳೆ ಎಳೆಯನ್ನು ಬಿಡಿಸಿದ್ದಾರೆ. ವಿಚಾರಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಕಾಯಕ ಪ್ರಕಾರಗಳನ್ನೆಲ್ಲ ಸಂಗ್ರಹಿಸಿದ್ದಾರೆ. ಕೃತಿಯನ್ನು ಕಂಡರೆ ಕಾಯಕದ ಕನಕಗಿರಿಯನ್ನು ಕಂಡಂತಾಗುತ್ತದೆ. ಕಾಯಕ ಕೈಲಾಸನಾದುದು ಇವರ ಈ ಕೃತಿಯಲ್ಲಿ ! ಕಳೆಯುಳ್ಳಕಕಲೆಯಾದುದು ಇದರಲ್ಲಿ !

ಕಾಯಕ ಸತ್ಯವಂತರ ಬಾಳಗುರಿ. ಆ ಗುರಿಗೆ ಕರೆದೊಯ್ಯುವ ಹೆದ್ದಾರಿ. ಸತ್ಯ ಶುದ್ಧತೆಯ ಶ್ರೀಗಿರಿ. ಶಾಂತಿ ಸುಖಗಳ ಸಿರಿ. ನಿಸ್ವಾರ್ಥ ನಿರಪೇಕ್ಷಗಳ ಸಿರಿ- ಎಂಬುದನ್ನು ಈ ಕೃತಿ ಕೈವಾರಿಸಿದೆ ; ತಿಳಿಗನ್ನಡದಲ್ಲಿ ತಿಳಿಸಿದೆ. ಕಾಯಕ ಸಮಗ್ರ ಮೀಮಾಂಸೆ ಇದರಲ್ಲಿದೆ ; ಸುಸಂಬದ್ಧ ವಿಮರ್ಶೆ ಇದರಲ್ಲಿದೆ.

ಜೀವನದ ಸರ್ವಾಂಗೀಣ ಕ್ರಿಯಾಶಕ್ತಿಯ ಮೇಲೆ ಸಾಕಷ್ಟು ಸೋಪಜ್ಞತೆಯ ವಿವೇಚನೆ ನಡೆದಿದೆ. ಚೆನ್ನಾಗಿ ಶೋಧಿಸಿ ಕಾಯಕ ಕ್ರಮಗಳನ್ನೆಲ್ಲ ಜೋಡಿಸಿ ನೆಯ್ದಿರೋಣವಾಗಿದೆ. ಕಾಯಕ ನಿರೂಪಣೆಯಲ್ಲಿ ಕಾಯಕ ತತ್ವವಿಸ್ತರಣೆಯಲ್ಲಿ ಇದೊಂದು ಹೊಸ ಹೆಜ್ಜೆ. ಕಾಯಿಕ ವಾಚಿಕ ಮಾನಸಿಕ ಬೌದ್ಧಿಕ ಭಾವಿಕ ಜೈವಿಕ ದೈವಿಕ-ಈ ಎಲ್ಲ ಕಾಯಕಗಳ ಮೇಲೆ ಹೊಸ ಬೆಳಕನ್ನು ಚೆಲ್ಲಿದೆ ಈ ಕೃತಿ. ಪ್ರತಿಕಾಯಕದ ಪ್ರತಿಭೆ ಪರಿಶೀಲಿಸಲ್ಪಟ್ಟಿದೆ. ಮೌಲ್ಯ ನಿರ್ದೇಶಿಸಲ್ಪಟ್ಟಿದೆ.

ಭೌತಿಕ ಭೂತಿಯ ಲಾಭಕ್ಕಾಗಿ ಮಾತ್ರ ಉದ್ಯಮವೆಂಬ ಭಾವನೆಯನ್ನು ಬೇರು ಸಹಿತ ಕಿತ್ತು ಹಾಕಿ ಆತ್ಮಿಕ ವಿಭೂತಿತ್ವದ ಲಾಭಕ್ಕಾಗಿಯೂ ಕಾಯಕ ಆಧಾರ

ವೆಂಬುದನ್ನು ಕಾಣುವಂತಾಗಿದೆ. ಉದ್ಯಮವು ಜಾತಿ ವರ್ಣಗಳನ್ನು ಉತ್ಪಾದಿಸುವುದಿಲ್ಲ. ಅದು ಸತ್ಯ ಶುದ್ಧ ಕಾಯಕವಾದರೆ ಸ್ವಯಂಜ್ಯೋತಿಯನ್ನೇ ಉಂಟುಮಾಡುತ್ತದೆ. ಕರ್ಮಕುಶಲತೆಯೇ ಕಾಯಕದ ಜೀವಾಳವಾಗಿರುತ್ತದೆ. ಎಂಬಿವೇ ಮೊದಲಾದ ಉದಾತ್ತ ವಿಚಾರಗಳನ್ನು ವಿಶ್ಲೇಷಿಸುತ್ತದೆ ಈ ಕಾಯಕ ಕೃತಿ. ಕರ್ತರಿಗೆ ಕಾಯಕದ ಮೇಲೆ ತುಂಬಾ ಶ್ರದ್ಧೆಯಿದೆಯಾದರೂ ಅಂಧಶ್ರದ್ಧೆಯಿಲ್ಲ. ಅಂತೆಯೆ ಪರಂಪರೆಯ ಕಾಯಕ ತತ್ವದಲ್ಲಿ ಕರ್ತರು ಒಂದು ನವ್ಯತೆಯನ್ನು ಕಂಡು ಕಾಣಿಸಿದ್ದಾರೆ- ಅದರಲ್ಲಿ ಸುಪ್ತ ಶಕ್ತಿಯನ್ನು ಹೆಗ್ಗಳಿಸಿ ತೋರಿದ ಕೀರ್ತಿ ಕೃತಿಕರ್ತರದು.

ಕಾಯಕ ಪ್ರಕಾರಗಳಲ್ಲೆಲ್ಲ ಪರಿಶುದ್ಧ ಪರಿಶ್ರಮ ನಡೆದಿದೆ. ಪ್ರಬುದ್ಧ ಮನನಸಾಗಿದೆ. ಆಧುನಿಕ ಯುಗಕರ್ಮಗಳೊಡನೆ ವಿಮರ್ಶಿಸಿ ಎತ್ತರಕ್ಕೆ ಎಚ್ಚರಿಕೆಯಿಂದ ನಿಲ್ಲಿಸುವ ಸ್ವಾನುಭೂತಿ ಪ್ರದರ್ಶಿತವಾಗಿದೆ. ಸತ್ಕ್ರಿಯಾಶಕ್ತಿ ಪ್ರಕಾಶಿತವಾಗಿದೆ. ಜತೆಗೆ ಇಂದಿನ ಲೋಕಾನುಭವವೂ ಪ್ರತಿಬಿಂಬಿತವಾಗಿದೆ. ಈ ಕೃತಿಯಲ್ಲಿ ತೋರಿದ ನವ್ಯದೃಷ್ಟಿಕೋನವು ವಿಚಾರವಾದಿಗಳ ಮೇಲೆ ನಾಳಿನ ಜಗತ್ತಿನ ಮೇಲೆ ತನ್ನದೇ ಆದ ಪರಿಶುದ್ಧ ಪ್ರಭಾವವನ್ನು ಬೀರುವಂತಿದೆ. ಪ್ರಬುದ್ಧ ಭಾವವನ್ನು ತೋರುವಂತಿದೆ. ಈ ಬಗೆಯ ಕೃತಿ ಹಿಂದಿಲ್ಲ, ಮುಂದೆ ಒದಗುತ್ತದೆಯೋ ಇಲ್ಲೋ ಎಂಬೀ ಅಭಿಪ್ರಾಯಕ್ಕೆ ಅವಕಾಶವನ್ನೀಯುವ ಈ ಕೃತಿಯ ವಹೌಲ್ಯಪೂಪನ ಕಾರ್ಯ ಕ್ರಿಯಾನುಭವವುಳ್ಳ ಉತ್ತಮ ವಿಮರ್ಶಕರಿಂದ ಅಗತ್ಯ ಆಗಬೇಕೆನಿಸಿಸುತ್ತದೆ.

'ಶಿವಾದ್ವೈತ ದರ್ಶನ' ಇದೊಂದು ಇವರ ಅನುರಕ್ತಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಸೊಗಸಾಗಿ ಸಮಗ್ರವಾಗಿ ಚಿತ್ರಿಸಿದ ಅಸಾಧಾರಣ ಕೃತಿ. ಸಂಕ್ಷಿಪ್ತತೆಯಲ್ಲಿಯೇ ಸಮಗ್ರತೆಯನ್ನು ಸಾರುವ ಶ್ರೇಷ್ಠ ಕೃತಿ; ಶಿವಾಚಾರ್ಯರ ಮತ್ತು ಶಿವಶರಣರ ಸಿದ್ಧಾಂತಗಳೆರಡನ್ನು ಸಮನ್ವಯಗೊಳಿಸಿದ ಸುಂದರ ಕೃತಿ.

ದ್ವೈತಾದ್ವೈತ, ಪ್ರಪಂಚಪರಮಾರ್ಥ, ಜ್ಞಾನಕ್ರಿಯೆ, ಶಿವಶಕ್ತಿ–ಇವನ್ನು ಸಮನ್ವಯಗೊಳಿಸುವ ಕೃತಿ. ಇದೊಂದು ಯಥಾರ್ಥ ದರ್ಶನ. ಸರ್ವಸಮನ್ವಯ ದರ್ಶನ. ಮಹೋನ್ನತ ಮೀಮಾಂಸೆ. ಸ್ವಾನುಭಾವ ದರ್ಶನ. ಇದು ಗದ್ಯದಲ್ಲಿದ್ದರೂ ಕಾವ್ಯದಷ್ಟು ಸುಂದರವಾಗಿದೆ. ವಚನ ಶೈಲಿಯು ಮೈಕಟ್ಟಿದೆ.

ಶಿವಾಚಾರ–ವಿಚಾರಗಳೆಲ್ಲವನ್ನು ಹಿಂಜಿ ಹಿಂಜಿ ವಿಸ್ತರಿಸಲಾಗಿದೆ. ವಿಶಿಷ್ಟ ಬಗೆಯಲ್ಲಿ ವಿನ್ಯಾಸಿಸಲಾಗಿದೆ. ಇದೊಂದು ವೀರಶೈವದಾರ್ಶನಿಕದ ವಿಶಿಷ್ಟ ಕೊಡುಗೆಯಾಗಿದೆ. ಇದರಿಂದ ಶಿವಾದ್ವೈತ ದರ್ಶನದ ಆಳ–ಅಗಲ, ಎತ್ತರ ಬಿತ್ತರಗಳು ಮನವರಿಕೆಯಾಗುವವು. ಶಿವಾದ್ವೈತದ ವಿಚಾರದಲ್ಲಿ ಒಂದು ಹೊಸ ದೃಷ್ಟಿ ಹೊಸ

ದೀಪ್ತಿ ಉಂಟಾಗುತ್ತವೆ ಅಭ್ಯಸಿಸುವ ಅಭಿರುಚಿ ಅಳವಡುತ್ತದೆ. ಇದೊಂದು ದಾರ್ಶನಿಕ ಕ್ರಾಂತಿಯನ್ನೇ ಮಾಡಿದೆಯೆಂದರೆ ತಪ್ಪೇನಿಲ್ಲ- ಕೃತಿಕರ್ತರಿಗೆ ಕೀರ್ತಿಯನ್ನೂ ತಂದಿದೆ.

ದರ್ಶನ ಭಾಗ ದಿವ್ಯವಾಗಿ ಬಂದಂತೆ ಅಷ್ಟಾವರಣಗಳ ಅಷ್ಟಸಕೀಲಗಳ ಸ್ಪಷ್ಟೀಕರಣವೂ ಪುಷ್ಟವಾಗಿ ಬಂದಿದೆ; ನವ್ಯವಾಗಿ ಬಂದಿದೆ. ಪಂಚಾಚಾರ ಷಟ್‌ಸ್ಥಲಗಳ ಮಾತೂ ಅಷ್ಟೆ ! ವರ್ಗೀಕರಣ ಮಾಡಿ ಹೇಳಿದ ಶಿವಾದ್ವೈತ ತತ್ತ್ವಗಳ ಪಂಚೀಕರಣ ಪ್ರಕರಣ ವಿಮರ್ಶಕರ ವಿಚಾರ ಪ್ರಚೋದಕವಾಗಿದೆ. ವಿಶೇಷಾನುಭವ ವಿಶಿಷ್ಟವಾಗಿದೆ. ಪ್ರಪಂಚ ಪರಮಾರ್ಥಗಳ ಸಮಸ್ಯೆಯನ್ನು ಸ್ವಾರಸ್ಯವಾಗಿ ವರ್ತಮಾನ ಕಾಲದ ವಿಚಾರವಾದಿಗಳು ಪ್ರವಾದಿಗಳು ಒಪ್ಪುವ ರೀತಿಯಲ್ಲಿ ಶ್ರುತಿ ಸೂತ್ರ ಪ್ರಮಾಣ ಬದ್ಧವಾಗಿ ವಿಶ್ಲೇಷಿಸಲಾಗಿದೆ. ಕಿರಿಯು ಕನ್ನಡಿಯಲ್ಲಿ ಅಡಗುವಂತೆ 'ಯೋಗ ಶಿವಯೋಗ'ವನ್ನು ಅಡಗಿಸಿದ್ದಾರೆ. ಜೀವನದ ಸರ್ವತೋಮುಖವಾದ ವಿಕಾಸಕ್ಕೆ ಇಲ್ಲಿ ಉತ್ತಮ ಪಥವಿದೆ. ಶಿವತ್ವಪ್ರಾಪ್ತಿಯ ಸುಲಭ ಮತವಿದೆ. ಸತ್ಯ ಸೌಂದರ್ಯದ ದರ್ಶನವಿದೆ. ಸಾಮ್ಯವಾದಕ್ಕೆ ಚರಮ ಸೀಮೆಯಾಗಿದೆ.

"ಪುರಾಣಮಿತ್ಯೇವನ ಸಾಧು ಸರ್ವಂ । ನ ಚಾಪಿ ಕಾವ್ಯಂ ನವಮಿತ್ಯವದ್ಯಂ॥ ಸಂತಃ ಪರೀಕ್ಷ್ಯಾನ್ಯತರದ್ಭಜಂತೇ । ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥" ಎಂಬ ಕಾಳಿದಾಸ ಕವಿಯ ಸೂಕ್ತಿಗೆ ಸತ್ಯ ಸಾಕ್ಷಿಯಾಗಿ ನಿಂತಿದೆ ಈ ಕೃತಿ. ನವ್ಯದರ್ಶನವಾದರೂ ಸೇವ್ಯವಾಗಿದೆ; ಭಾವ್ಯವಾಗಿದೆ. ಇದರ ತತ್ತ್ವ ಹಳೆಯದಾದರೂ ಸತ್ವ ಹೊಸದು. ಶೈಲಿ ಪಕ್ವವಾದುದು. ಹೊಸ ಕಾಲಕ್ಕೆ ಬೇಕಾದ ಹೊಸ ದೃಷ್ಟಿಯಿದೆ. ಹೊಸ ಸಂಸೃಷ್ಟಿಯಿದೆ.

೨

## ನವೀನ ವಚನ-'ವಚನ ಮಂಜರಿ'

ಇಂದಿನ ಕನ್ನಡ ಕವಿಗಳಲ್ಲಿ ಅನೇಕರು ನವ್ಯ ಕಾವ್ಯಗಳನ್ನು ರಚಿಸಿ ಹೆಸರುಗಳಿಸಿರುವಂತೆ ಶ್ರೀ ಸನ್ನಿಧಿಯವರು ವಚನ ರ[illegible] ಪ್ರಯೋಗವನ್ನು ಮಾಡಿ ವಚನ ವಾಙ್ಮಯದಲ್ಲಿ ಹೊಸ ಮನ್ವಂತರವನ್ನ[illegible]ದ್ದಾರೆ; ಹೊಸ ಆದರ್ಶವನ್ನೇ ಬೀರಿದ್ದಾರೆ.

ಈ ದಿಸೆಯಲ್ಲಿ ಇವರ 'ವಚನ ಮಂಜರಿ' ಎತ್ತಿ ಉದ್ಧರಿಸುವ ಉತ್ತಮ ಕೃತಿ; ನವೀನ ವಚನ. ಇಪ್ಪತ್ತನೆಯ ಶತಮಾನದ ವಚನ ನಾವೀನ್ಯತೆಯಲ್ಲಿ ಇದಕ್ಕೆ ಅಗ್ರಸ್ಥಾನವಿದೆ.

'ನವೀನ ವಚನ' ವೆಂದರೆ ಶೈಲಿಯ ನಾವೀನ್ಯವಲ್ಲ. ಛಂದ ಬಂಧಗಳ ನಾವೀನ್ಯವಲ್ಲ. ವಚನ ವಿಷಯವಾದ ವಸ್ತುವಿನ ನಾವೀನ್ಯವೇ ಮುಖ್ಯ. ವಚನ ವಿಷಯ ಬರೀ ತತ್ತ್ವವಲ್ಲ; ಬರೀ ಮತದರ್ಶನವಲ್ಲ. ಜನಜೀವನವೇ ವಚನಗಳಿಗೆ ವಸ್ತುವಾಗಿರುವಿಕೆಯೇ ವಚನನಾವೀನ್ಯ. ಈ ಹೊಸತನವನ್ನು ಬಳಸಿಕೊಂಡಿದೆ ಇವರ ವಚನ ಮಂಜರಿ. ಅದರಲ್ಲಿಯೂ ಅದರೊಳಗಿನ ಕೊನೆಯದಾದ ಸಂಸ್ಕೃತಿ ಪ್ರಕರಣ ನವೀನ ವಚನ ಪ್ರಯೋಗಕ್ಕೆ ಮೀಸಲಾಗಿದೆ. ಇಂದಿನ ನವನಾಗರಿಕತೆಯನ್ನು ಜನಜೀವನವನ್ನು ರಾಜಕೀಯವನ್ನು ರೀತಿ ನೀತಿಗಳನ್ನು ಕುರಿತು ವಚನ ಶೈಲಿಯಲ್ಲಿ ವಿಶ್ಲೇಷಣೆ ನಡೆದಿದೆ; ವಿಚಾರವಿಮರ್ಶೆ ನಡೆದಿದೆ. ವಚನ ಶೈಲಿ ಹಳೆಯದಾದರೂ ವಚನಗಳಲ್ಲಿ ಪ್ರತಿಪಾದಿಸಿದ ವಿಷಯ ನವೀನಯುಗದ್ದಾಗಿದೆ. ನವನಾಗರಿಕತೆಯನ್ನು ಕುರಿತದ್ದಾಗಿದೆ. ಶೈಲಿಯ ನಾವೀನ್ಯವನ್ನೂ ಬಳಸಿಕೊಂಡಿದೆ ಇವರ ಇನ್ನೊಂದು ಕೃತಿಯಾದ 'ಅಭಯವಾಣಿ.'

ನವೀನ ವಚನ ಪ್ರಯೋಗ ಪರಿಣತರು ಶ್ರೀ ಸನ್ನಿಧಿಯವರು. ಇವರು ವಚನ ನವೀನತೆಯ ಪ್ರಯೋಗವನ್ನು ಇನ್ನೆಲ್ಲಿಂದಲೂ ಎರವಲಾಗಿ ಪಡೆದುದಲ್ಲ. ಇವರದೇ ಆದ ನವ ಪ್ರಯೋಗ 'ಅಭಯವಾಣಿ' ! ಇವರ ಈ ಕೃತಿ ಪರಂಪರೆಯ ಮತಧರ್ಮದ ಕಟ್ಟುಪಾಡಿಗೆ ಸಿಕ್ಕದೆ ಮಾನವತೆಯ ಮನೋಧರ್ಮಗಳನ್ನು ವಿಶ್ಲೇಷಿಸಿ ವಿನೂತನತೆಗೆ ಅಡಿಗಲ್ಲನ್ನಿಕ್ಕಿದೆ. ಈ ಕೀರ್ತಿ 'ಅಭಯವಾಣಿ'ಗೆ ಅಗತ್ಯ ಸಲ್ಲಬೇಕು.

ಇವರ ಈ ನವ್ಯ ವಚನ ಪ್ರಯೋಗ ಕಾವ್ಯಸತ್ವವನ್ನು ಕಳೆದುಕೊಂಡಿಲ್ಲ. ಉಳಿಸಿ ಬೆಳಸಿಕೊಂಡು ಬಂದಿದೆ. ನವ್ಯ ಶೈಲಿಯ ಬಂಧುರದೊಡನೆ ಕಾವ್ಯ ಬಂಧದ ಅದರಲ್ಲಿಯೂ ನವ್ಯಕಾವ್ಯ ಬಂಧದ ಬೆಡಗನ್ನು ಬೆಳಸಿಕೊಂಡು ಬಂದಿದೆ. ಇದೊಂದು ಗಮನಾರ್ಹ ವಿಷಯ. ತಾಂತ್ರಿಕದೊಡನೆ ತಾತ್ತ್ವಿಕ ಪರಿವರ್ತನೆಯೂ ಗಮನಾರ್ಹವಲ್ಲದೆ ಮತ್ತೇನು ?

ಪರಂಪರೆಯಿಂದ ಬಂದ ಸಾಧನ ಪಥ ಸರಾಗವಾಗಿರಲಿಲ್ಲ. ನವೀನ ಜನಜೀವನ ಪಥ ಶುದ್ಧವಾದುದಲ್ಲ. ಇವೆರಡರ ಮೇಲೆ ಹೊಸ ಬೆಳಕು ಬೀಳುವಂತೆ ಪ್ರಯತ್ನಿಸಿವೆ ಇವರ 'ವಚನ ಮಂಜರಿ' ಮತ್ತು 'ಅಭಯವಾಣಿ'–ಈ ಎರಡು ಗ್ರಂಥಗಳು.

ವೈಯಕ್ತಿಕ ಸಾಮಾಜಿಕ ಸಾಂಸ್ಕೃತಿಕ ಸಾಹಿತ್ಯಕ ಜೀವನದಲ್ಲಿ 'ವಚನ ಮಂಜರಿ'ಯು ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿದೆ.

ವೈಯಕ್ತಿಕ ವಿಕಾಸವಾದವನ್ನು ಆರಂಭಿಸಿ ಆಡಿದ ನುಡಿಗಳಿವು: "ಈಶ್ವರ ತಾನಾಗಬೇಕಲ್ಲದೆ ಕೈಲಾಸ ಈಶ್ವರನ ಕಾಂಬೆನೆಂಬುದು ಸಟೆ ನೋಡ! ಈಶ್ವರ ತಾನಾಗಲಾಶೆಯುಳ್ಳಡೆ ವಿಶ್ವವ ತಿರಗಲೇಕೆ? ವಿಶ್ವವು ವ್ಯಕ್ತಿಯಲ್ಲಿಲ್ಲವೆ ಹೇಳು? ವ್ಯಕ್ತಿ ಶಕ್ತಿಯ ಸಂಗಳಿಸುವುದೇ ಆದ್ಯಕರ್ತವ್ಯ ಕಾಣಾ...."

"ಅಂಗಾಂಗ ವಿಕಾಸವೆ ವ್ಯಕ್ತಿಶಕ್ತಿ, ಅಂತಃಕರಣ ವಿಕಾಸವೆ ವ್ಯಕ್ತಿಶಕ್ತಿ ; ಆತ್ಮ ವಿಕಾಸವೇ ವ್ಯಕ್ತಿಶಕ್ತಿ ಇವ ಕರುಣಿಸಯ್ಯ...." "ಸತ್ಯ ಸದಾಚಾರಂಗಳಿಲ್ಲದೆ ಆತ್ಮ ಪ್ರಗತಿಯಿಲ್ಲ. ನಿತ್ಯ ಸುವಿಚಾರಂಗಳಿಲ್ಲದೆ ಆತ್ಮ ಪ್ರಗತಿಯಿಲ್ಲ. ಸ್ವಾನುಭವವಿಲ್ಲದೆ ಆತ್ಮ ಮುಕುತಿಯಿಲ್ಲ. ಸತ್ಯಪಥದಿ ನಡೆಸಯ್ಯ...." "ಆತ್ಮ ಪರಿಶುದ್ಧನಾಗುವುದೆ ಆದಿಕಾಯಕ. ಆತನಿಂದ ಪಾವನ ಈ ಲೋಕ...." "ವ್ಯಕ್ತಿ ಉದಯವೆ ವಿಶ್ವದುದಯ. ವ್ಯಕ್ತಿನಾಶವೇ ವಿಶ್ವನಾಶ....ವ್ಯಕ್ತಿ ಉದಯಕ್ಕೆ ವ್ಯಕ್ತಿ ಯತ್ನವು ಬೇಕು. ಸಮಾಜ ಸಹಕಾರವು ಬೇಕು...." 'ವ್ಯಕ್ತಿಯಿಂದ ಮನೆ ವ್ಯಕ್ತಿಯಿಂದ ಊರು. ವ್ಯಕ್ತಿಯಿಂದ ನಾಡು. ವ್ಯಕ್ತಿಯಿಂದ ದೇಶ. ವ್ಯಕ್ತಿಯಿಂದ ವಿಶ್ವನೋಡಾ. ವ್ಯಕ್ತಿಶಕ್ತಿ ವಿಕಾಸವಪ್ಪೊಡೆ ಇವೆಲ್ಲ ಕಾಣಾ...."

ವ್ಯಕ್ತಿ ವೈಶಿಷ್ಟ್ಯವನ್ನು ಕುರಿತು ಈ ಮಾತುಗಳು ಮಾರ್ಮಿಕವಾಗಿವೆ; ಗಮನಾರ್ಹವಾಗಿವೆ. ವ್ಯಕ್ತಿಗೆ ವ್ಯಷ್ಟಿ ರೂಪವಿದ್ದರೂ ವ್ಯಕ್ತಿತ್ವಕ್ಕೆ ಬರೀ ವ್ಯಷ್ಟಿರೂಪವಿಲ್ಲ; ಸಮಷ್ಟಿ ಸ್ವರೂಪವೂ ಇದೆ. ವಾಸ್ತವ ಜೀವನವನ್ನು ಅಂಗೀಕರಿಸಿದ ಬಾಳು ಬಿತ್ತರದ್ದಾಗುವುದು. ಜೀವತತ್ತ್ವವೇ ದೇವ ತತ್ತ್ವವಾಗುವುದು. ವ್ಯಕ್ತಿತ್ವದ ವಿಕಾಸವಾದ ದೃಷ್ಟಿಯನ್ನು ಕವಿವಾಣಿಯಲ್ಲಿ ಕಾಣುತ್ತೇವೆ. ವ್ಯಕ್ತಿ ವ್ಯಕ್ತಿತ್ವದ ಶ್ರದ್ಧೆ ನಿಷ್ಠೆಗಳನ್ನುಎಂದಿಗೂ ಯಾವ ಕಾರಣದಿಂದಲೂ ಕಳೆದುಕೊಳ್ಳಬಾರದು. ವೈಯಕ್ತಿಕ ಭಾವ ವಿಶಾಲವಾಗಬೇಕು. ಆಗ ವ್ಯಕ್ತಿಮೌಲ್ಯ ಹೆಚ್ಚುತ್ತದೆ. ವ್ಯಕ್ತಿತ್ವ ಮಹತ್ವ ಹೆಚ್ಚುತ್ತದೆ. ಅಳವಡಿಸಿಕೊಂಡರೆ ವ್ಯಕ್ತಿ ಸತ್ವ ಅಪಾರ; ವ್ಯಕ್ತಿ ತತ್ವ ಆದರ್ಶ ಜೀವನಾಧಾರ; ಸರ್ವಸಂಸ್ಕಾರಗಳಿಗೆ ಆಗರ. ವ್ಯಕ್ತಿತ್ವ ಸಾಧನೆಯಲ್ಲಿ ಆಚಾರ ವಿಚಾರಗಳ ರೀತಿ ನೀತಿಗಳ ಧರ್ಮ ಕರ್ಮಗಳ ಪುನರುತ್ಥಾನ ಪ್ರಕಾಶನವಾಗುತ್ತದೆ. ಮಾನವೀಯ ಸಂಸ್ಕೃತಿ ನೈಜವಾಗಿ ನಿರೂಪಿತವಾಗುತ್ತದೆ. ಕಾವ್ಯ ಸಾಮಗ್ರಿ ಸಂಪಾದಿತವಾಗುತ್ತದೆ. ಅನ್ಯರಿಗೆ ಆದರ್ಶ ಸ್ಫೂರ್ತಿ ಅಳವಡುತ್ತದೆ. ಆದರ ಭಾವ ವುಂಟಾಗುತ್ತದೆ. ಸಮಗ್ರ ಜೀವನ ಸಿದ್ಧಿ ಸಮನಿಸುತ್ತದೆ. ಸಾರ್ಥಕತೆ ಸಂಭವಿಸು

ತ್ತದೆ. ತನ್ನಲ್ಲಿ ವಿಶ್ವರೂಪವನ್ನು ವಿಶ್ವದಲ್ಲಿ ತನ್ನನ್ನು ಕಾಣುವ ದಿವ್ಯನೇತ್ರ ಅಳವಡುತ್ತದೆ. ತನ್ನಂತೆ ಪರರನ್ನು ಬಗೆವ ಸಾಮ್ಯಭಾವ ಸೌಮ್ಯ ಸ್ವಭಾವ ತನಗುಂಟಾಗುತ್ತದೆ. ನವ್ಯಜೀವನ ಕಾವ್ಯ ಜೀವನ ಕೈಗೂಡುತ್ತದೆ. ಆತ್ಮಸತ್ತೆ ಆತ್ಮಪ್ರಜ್ಞೆ ಆತ್ಮಪ್ರತ್ಯಯ ಆತ್ಮಪ್ರಮೋದ ಅನಂತವಾಗುತ್ತವೆ. ಆತ್ಮಧನ್ಯತೆ ಅಳವಡುತ್ತದೆ. ಸಾಮಾಜಿಕ ಜೀವನದಂತಹ ವಿಶಾಲದರ್ಶನಕ್ಕೆ ದಾರಿಯನ್ನು ಹಾಕಿ ಕೊಡುತ್ತದೆ. ವ್ಯಕ್ತಿ ಜೀವನದ ಪ್ರಾಮುಖ್ಯತೆಯನ್ನು ತೊಡೆದು ಹಾಕುತ್ತಿರುವ ಆಧುನಿಕ ವಿಜ್ಞಾನಯುಗದಲ್ಲಿ ಈ ವೈಯುಕ್ತಿಕ ವಿಚಾರವಾದ ಗಮನಾರ್ಹವಾಗಿದೆ.

ಇನ್ನು ಸನ್ನಿಧಿಯವರ ಸಾಮಾಜಿಕ ವಿಕಾಸವಾದಕ್ಕೆ ನಿದರ್ಶನವನ್ನು ನೋಡೋಣ :

"ಮಾನವ ಸಮಾಜವೆಂಬ ಮರಕ್ಕೆ
ಮತಧರ್ಮಂಗಳೇ ರೆಂಬೆಗಳು ನೋಡಾ !
ಆವ ರೆಂಬೆಯಾದಡೇನು ?
ಮೂಲವೊಂದೆ; ಫಲವೊಂದೆ !
ಮೇಲು ಕೀಳೆಂಬ ಮರುಳರನೇನೆಂಬೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ ?"

ಆತ್ಮನ ವ್ಯಕ್ತಿತ್ವಕ್ಕೆ ಅಂಗವೇ ಆಧಾರ
ವಿಜ್ಞಾನದ ವ್ಯಕ್ತಿತ್ವಕ್ಕೆ ವಿದ್ಯೆಯೇ ಆಧಾರ
ವ್ಯಕ್ತಿಯ ಜೀವನಕ್ಕೆ ಸಮಾಜವೇ ಆಧಾರ
ಸರ್ವರ ಸುಖಕ್ಕೆ ಸಾಮ್ಯ ಸಹಕಾರಗಳೇ ಆಧಾರ.

ಆ ಮತ ಈ ಮತ ಎಂಬ ಭ್ರಾಂತಿ ಬಯಲಾಯಿತ್ತು
ಆವ ಮತವಾದಡೇನು ಸುವಿಚಾರದಲ್ಲಿ ನುಡಿವಂಗೆ !
ಆವ ಪಂಥವಾದಡೇನು ಸದಾಚಾರದಲ್ಲಿ ನಡೆವಂಗೆ !
ಆವ ಜಾತಿಯಾದಡೇನು ಜ್ಯೋತಿ ರೂಪಾಗಿ ಬೆಳಗುವಂಗೆ !
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ !

ಮತ ಪಂಥಗಳು ಮಾನವತೆಯ ವಿಕಾಸವಾದಕ್ಕೆ ಮಾರಕಗಳಾಗಬಾರದು. ಶಾಖೆಗಳಂತಿದ್ದು ಪೂರಕಗಳಾಗಿರಬೇಕು. ಸಾಮೂಹಿಕ ಜೀವನಕ್ಕೆ ಸಾಮ್ಯಭಾವನಕ್ಕೆ ಸಹಕಾರಿಗಳಾಗಿರಬೇಕು. ಮತಧರ್ಮಗಳು ಸಂಕುಚಿತ ಸ್ವಭಾವಕ್ಕೆ ಬೆಂಬಲವಾಗದೆ ವಿಶ್ವ ಬಾಂಧವ್ಯಕ್ಕೆ ಬೆಂಬಲವಾಗಬೇಕು.

"ವಿಶ್ವವೆ ಮನೆ. ವಿಶ್ವೇಶ್ವರನೆ ತಂದೆ. ವಿಶ್ವೇಶ್ವರಿಯೆ ತಾಯಿ.
ವಿಶ್ವದ ಮಾನವರೆಲ್ಲ ಮಕ್ಕಳು ಕಂಡಯ್ಯ.
ಬಣ್ಣ-ಭಾಷೆ, ಧರ್ಮ–ಕರ್ಮ, ದಿಕ್ಕು-ದೇಶಗಳಾವಾದಡೇನು ?
ಮಾನವ್ಯ ಬಾಂಧವ್ಯವೇ ವಿಶ್ವೈಕ್ಯದ ಜೀನಾಳ ಕಂಡಯ್ಯ

ಈ ವಚನದಲ್ಲಿ ದಿವ್ಯಭಾವವನ್ನು ಅಭಿವ್ಯಕ್ತಗೊಳಿಸಿ ವಚನ ಧ್ಯೇಯವನ್ನು ವಿಸ್ತರಿಸಲಾಗಿದೆ. ವಚನ ರಚನೆಯಲ್ಲಿ ವಿವರಣೆಯಲ್ಲಿ ನವೀನತೆಯನ್ನು ನಿರೂಪಿಸಲಾಗಿದೆ. ಇದರಲ್ಲಿ ತೋರಿದ ಈ ದಿವ್ಯಭಾವ ಈ ವಚನಕಾರರ ಜೀವನದಲ್ಲಿ ಪೂರ್ಣ ರೂಪದಲ್ಲಿಲ್ಲದಿದ್ದರೂ ಅಂಶರೂಪದಲ್ಲಿದೆಯೆಂದು ಹೇಳಲು ಹಿಂಜರಿಯುವಂತಿಲ್ಲ. ಬೀಜಪ್ರಾಯದಲ್ಲಿದ್ದುದು ಭೂಜರೂಪಕ್ಕೆ ಬಾರದಿರದು. ವಿಶಾಲಭಾವದ ಈ ಪ್ರತಿಮೆ ತೀರ ನವೀನವಾಗಿ ತೋರದಿರದು. ವಿಶ್ವೈಕ್ಯದ ಇಂದಿನ ವಿಚಾರ ಪ್ರಣಾಳಿಕೆಗೆ ವ್ಯವಸಾಯ ಶೀಲತೆಗೆ ದೋಹದವನ್ನುಂಟುಮಾಡದಿರದು. ಹೃದಯ ವೈಶಾಲ್ಯ ಶ್ರೀಮಂತಿಕೆಯೊಂದಿದ್ದರೆ ಜಾತಿ-ಮತ ಪಂಥಗಳಿದ್ದರೇನು, ಇಲ್ಲದಿದ್ದರೇನು ಎಂದು ಕೇಳುವುದೇ ಹೇಳುವುದೇ ಕವಿಯ ಕರುಳಿನ ಆಶಯ.

ಸನ್ನಿಧಿಯವರ ಸಾಹಿತ್ಯಕ ಜೀವನದ ಸ್ವಾನುಭವೋಕ್ತಿಗಳ ಸಜೀವತೆಗೆ ಕೆಳಗಿನ ವಚನಗಳನ್ನು ಕಾಣಬೇಕು :

"ಮತಪಂಥಗಳ ಹೋರಾಟಕ್ಕೆ ಸಾಹಿತ್ಯವೇ ಸಸಿನ !
ಒಳಪಂಗಡಂಗಳ ಹೊಡೆದಾಟಕ್ಕೆ ಸಾಹಿತ್ಯವೇ ಸಸಿನ !
ಒಳಕರಣಂಗಳ ಸಂಸ್ಕಾರಕ್ಕೆ ಸಾಹಿತ್ಯವೇ ಸಸಿನ !...."

ಸಂಕುಚಿತ ಸ್ವಭಾವಕ್ಕೆ ಮದ್ದು ಸಾಹಿತ್ಯ. ಶುದ್ಧಸಂಸ್ಕಾರಕ್ಕೆ ಸಾಧನ ಸತ್ಯ ಸಾಹಿತ್ಯೋಪಾಸನ. ಸಾಹಿತ್ಯ ಪದಾರ್ಥಜನ್ಯ ಪ್ರಸಾದದಿಂದ ನಿತ್ಯತೃಪ್ತಿ, ಸಾಹಿತ್ಯ ರಸ ತೀರ್ಥದಿಂದ ನಿತ್ಯಮುಕ್ತಿ; ಎಂದು ಹೇಳುತ್ತಾರೆ ಸನ್ನಿಧಿಯವರು.

"ಅನ್ನವನುಂಡು ಆಧಿ ವ್ಯಾಧಿಗಳುಂಟಾದವು.
ಅನ್ನವನುಂಡು ಜನನ ಮರಣಂಗಳುಂಟಾದವು
ಸಾಹಿತ್ಯ ಪರಮಾನ್ನವನುಂಡರೆ ರೋಗ ರುಜಿನಂಗಳಿಲ್ಲ ;
ಹುಟ್ಟು ಹೊಂದುಗಳಿಲ್ಲ...."

'ವಿಶ್ವವನರಿಯದೆ ವಿಶ್ವಸಾಹಿತ್ಯವೊದಗದು
ವಿಶ್ವಾತ್ಮನನರಿಯದೆ ವಿಶಿಷ್ಟ ಸಾಹಿತ್ಯ ನೆಲೆಗೊಳ್ಳದು
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ವಿಶ್ವ ವಿಶಿಷ್ಟ ಸಾಹಿತ್ಯವನೆ ಕರುಣಿಸಯ್ಯ'

'ವಿತರಣದೊಳಗೆ ಸಾಹಿತ್ಯ ವಿತರಣವೇ ಚಲುವ....' 'ಅಸುವರಿಯದ ಅಜ್ಞಾನಿಗೇತಕೋ ಸಾಹಿತ್ಯ? ಘನವರಿಯದ ಗರ್ವಿಗೇತಕೋ ಸಾಹಿತ್ಯ?....' 'ತನುವೆಂಬ ಕ್ಷೇತ್ರದಲಿ, ಬುದ್ಧಿಯೆಂಬ ಬೀಜವಂಕುರಿಸಲು, ಅನುಭವವೆಂಬ ಹೂವಾಗಿ, ಸಾಹಿತ್ಯವೆಂಬ ಸುರಸ ಫಲವಪ್ಪುದು ನೋಡಾ....'

"ಸೀಮೆ ರಾಜನಿಗಲ್ಲದೆ ರಸಜ್ಞನಿಗುಂಟೆ? ಸೀಮೆ ವಾರಿಧಿಗಲ್ಲದೆ ವಾಙ್ಮಯಕ್ಕುಂಟೆ? ಸೀಮೆ ರಸಾಸ್ವಕ್ಕಲ್ಲದೆ ರಸೋಕ್ತಿಗುಂಟೆ?...." 'ಷಡ್ರಸಂಗಳ ಸೃಷ್ಟಿ ಬ್ರಹ್ಮನದು, ನವರಸಂಗಳ ಸುಸೃಷ್ಟಿ ಸಾಹಿತಿಯದು. ಚತುರ್ಮುಖಿ ವಾಕ್ಪತಿ, ಸಹಸ್ರಮುಖಿ ಸಾಹಿತಿ ಕಾಣಾ!....'

'ಸಾರಸ್ವತ ಪ್ರಪಂಚವದು ಶಾಸ್ತ್ರ-ಸಾಹಿತ್ಯ ಎಂಬುದಾಗಿ ಇತ್ತೆರನಾಗಿಪ್ಪುದು ನೋಡಾ! ಪ್ರಭು ಹೃದಯವುಳ್ಳುದೆ ಶಾಸ್ತ್ರ: ಪ್ರಮದಾ ಹೃದಯವುಳ್ಳುದೆ ಸಾಹಿತ್ಯ ನೋಡಾ!....' '....ಶರೀರಿಗಳೆಲ್ಲ ಸಾಹಿತಿಗಳಲ್ಲ.' ಇವೇ ಮುಂತಾದ ಮಾತುಗಳು ಮುತ್ತಿನಂತಿವೆ; ಚಿತ್ತವನ್ನು ಆಕರ್ಷಿಸುವಂತಿವೆ.

ಸಾಂಸ್ಕೃತಿಕ ಪ್ರಕರಣ ಸರ್ವೋತ್ಕೃಷ್ಟವಾಗಿದೆ. ಆಧುನಿಕ ಕಾಲದ ಸರ್ವ ಜನಜೀವನದ ಪ್ರತೀಕವಾಗಿದೆ. ನಾಗರಿಕತೆಯು ಹಸಗೆಟ್ಟ ಜೀವನ ಚಿತ್ರ ವಾಸ್ತವವಾಗಿ ಬಂದಿದೆ. ವಿಜ್ಞಾನ ಪ್ರಪಂಚಕ್ಕೆ ವಿಚಾರದ ನೇತ್ರವನ್ನು ಪ್ರಸಾದಿಸಿದೆ. ವನಮಹೋತ್ಸವದ ಬಗೆಗೆ, ವಕೀಲರ ಬಗೆಗೆ, ಹಳ್ಳಿಪಟ್ಟಣಗಳ ಬಗೆಗೆ, ಭಾರತದ ಬಗೆಗೆ, ಯಂತ್ರಮಂತ್ರಗಳ ಬಗೆಗೆ, ಹಿಂದುತ್ವ ಮತ್ತು ಸಂಘ-ಸಂಸ್ಥೆಗಳ ಬಗೆಗೆ ಸ್ತ್ರೀ ಮತ್ತು ಸನ್ಯಾಸಿಗಳ ಬಗೆಗೆ, ಕೃಷಿ–ಸಿನಿಮಾ–ಕಾಫಿ–ಹೊಗೆಸೊಪ್ಪು–ಭೂಕಂಪನ ತೆ-ಸ್ವಾತಂತ್ರ್ಯ-ಬಂಜ-ಕಂಟ್ರೋಲು–ವಯಸ್ಕರಶಿಕ್ಷಣ ಪ್ರಗತಿ ನೀತಿಗಳ ಬಗೆಗೆ ಚೇತೋಹಾರಿಯಾಗಿ ವಚನಗಳನ್ನು ರಚಿಸಿದ್ದಾರೆ. ವಚನ ಶೈಲಿಯಲ್ಲಿ ನವೀನ ಜೀವನ ಚಿಂತನವನ್ನು ವಿಚಕ್ಷಣತೆಯಿಂದ ಮಾಡಿದ್ದಾರೆ; ವಿಚಾರಾರ್ಹವಾಗಿ ವಿವರಿದ್ದಾರೆ. ಈ ಪ್ರಕರಣದ ಪ್ರತಿವಚನವು ಪ್ರಗತಿ ಸೂಚಕವಾಗಿದೆ. ನವಸ್ವಭಾವ ಪೂರ್ಣವಾಗಿದೆ. ವಚನಗಳನ್ನು ಉದ್ಧರಿಸಲು ಸಾಧ್ಯವಿಲ್ಲ. ವಾಚಕರು ಓದಿಯೇ ಸಂತಸಗೊಳ್ಳಬೇಕು.

ಈ ಕೃತಿಗೆ 'ಮುನ್ನುಡಿ' ಯನ್ನು ಬರೆಯುತ್ತ ಕನ್ನಡ ಹೆಸರಾಂತ ಸಾಹಿತಿಗಳಾದ ಶ್ರೀ ಅ ನ. ಕೃ. ಅವರು ಹೀಗೆ ಹೇಳಿದಾರೆ:

"........'ವಚನಾಂಜಲಿ' ಮತ್ತು 'ವಚನಮಂಜರಿ' ಗ್ರಂಥಗಳನ್ನು ಬರೆದಿರುವ ನಿಡುಮಾಮಿಡಿ ಸಂಸ್ಥಾನದ ಶ್ರೀ ಜ. ಚ. ನಿ. ಅವರು ಸಂಪ್ರದಾಯವನ್ನು ಬಿಡದೆ ಪ್ರಗತಿಪಥದಲ್ಲಿ ಮುನ್ನಡೆದು ಸಾಹಿತ್ಯ ಲೋಕಕ್ಕೆ ಮಹೋಪಕಾರ ಮಾಡಿದ್ದಾರೆ. ವೀರಶೈವ ಸಂಪ್ರದಾಯದ ನುಡಿನುಡಿಗಳು, ಉಪಮೆಗಳು, ಗಾದೆಗಳು,

ಕವಿಸಮಯಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾರೆ. ವಚನಗಳ ರಚನೆ ಕಟ್ಟು ಕೂಡ ಪ್ರಮಥರ ಮಾರ್ಗವನ್ನೇ ಅನುಸರಿಸಿದೆ. ಇದರ ಜೊತೆಗೆ ತತ್ತ್ವ ನಿರೂಪಣೆಗೆ ಅವಶ್ಯಕವಾದ ಸಮಕಾಲೀನತೆ, ಪ್ರಾಗತಿಕ ಮನೋಭಾವ, ಸಮರಸ ದೃಷ್ಟಿಯನ್ನು ಬೆರಸಿದ್ದಾರೆ.

....ಕನ್ನಡ ನಾಡಭಕ್ತರಾದ ಶ್ರೀಗಳವರು ಕನ್ನಡ ನಾಡನ್ನು ಕುರಿತು ಹೇಳಿರುವ ವಚನ ಅವರ ಸ್ವದೇಶಾಭಿಮಾನದ ಕುರುಹಾಗಿದೆ. ... ಮೂರನೆಯ ಅಧ್ಯಾಯದ ವೈಯುಕ್ತಿಕ ವಚನಗಳಲ್ಲಿ ಶ್ರೀಗಳವರ ಸಾಧನಯೋಗದ ಚಿತ್ರ ಕಲಾಪೂರ್ಣವಾಗಿ ಸತ್ಯಪೂರ್ಣವಾಗಿ ಮೂಡಿದೆ. ....ಆತ್ಮಕಥನ ರೂಪವಾಗಿ ಶ್ರೀಗಳವರು ರಚಿಸಿರುವ ವೈಯಕ್ತಿಕ ವಚನಗಳಲ್ಲಿ ಅವರ ಸತ್ಯಪ್ರೇಮ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತದೆ.

ಶ್ರೀಗಳವರ ಮನಃಶುದ್ಧಿಗೆ, ಅಂತರಂಗ ವಿಕಾಸಕ್ಕೆ, ಉದಾತ್ತ ವಿಚಾರ ವೈಭವಕ್ಕೆ ಅವರ ಸಾಹಿತ್ಯ ಭಕ್ತಿಯೇ ಕಾರಣವೆನ್ನಬಹುದು.

ಶ್ರೀಗಳವರು ಸಾಹಿತ್ಯ ಮಾರ್ಗದಲ್ಲಿ ಅಧ್ಯಾತ್ಮವನ್ನಳವಡಿಸಿಕೊಂಡಿರುವ ರಸ ಯೋಗಿಗಳು.

ಸಾಂಸ್ಕೃತಿಕ ವಚನಗಳಲ್ಲಿ ನಮ್ಮ ನಿತ್ಯಜೀವನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು, ಸಮಸ್ಯೆಗಳು, ಘರ್ಷಣೆಗಳ ಬಗೆಗೆ ಶ್ರೀಗಳವರು ಮಾರ್ಮಿಕವಾಗಿ ನುಡಿದಿದ್ದಾರೆ. ಸಂಸ್ಕೃತಿಯೆಂದರೆ ಪುಸ್ತಕ ಪಾಂಡಿತ್ಯವಲ್ಲ. ಹಳೆಯ ಕತೆಗಳನ್ನು ಹೇಳಿಕೊಂಡು ಕೂಡುವುದಲ್ಲ. ನಮ್ಮ ಬಾಳು ನಮ್ಮ ಸಂಸ್ಕೃತಿಯ ಪ್ರತೀಕವಾಗ ಬೇಕು. ಆಚಾರ, ವಿಚಾರಗಳಿಗೆ ತಾದಾತ್ಮಕವಿಲ್ಲದ ಬಾಳು ನಿರರ್ಥಕ, ನಿಷ್ಪ್ರಯೋಜಕ.

ಆಧುನಿಕಯುಗ, ವೈಜ್ಞಾನಿಕ ನಾಗರೀಕತೆ ಸ್ವಾತಂತ್ರ್ಯದ ತರುವಾಯ ಬಂದಿರುವ ಪರಿಸ್ಥಿತಿಯನ್ನು ಶ್ರೀಗಳವರು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಲೋಕದ ನೀತಿ ಸಾಹಿತ್ಯ ವ್ಯವಹಾರವನ್ನು, ಸೀಮಾತೀತ ಸ್ವಾರ್ಥವನ್ನು, ರಾಕ್ಷಸೀಪ್ರವೃತ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ....ಶ್ರೀಗಳವರು ಭಾರತ ಉದ್ಧಾರವಾಗುವ ಬಗೆಯನ್ನೂ ಆಳವಾಗಿ ವಿಚಾರಮಾಡಿದ್ದಾರೆ.

ಶ್ರೀಗಳವರ ದಿವ್ಯಸಂದೇಶ ಎಲ್ಲರ ಹೃದಯದಲ್ಲಿಯೂ ಸುವರ್ಣಾಕ್ಷರಗಳಲ್ಲಿ ಉಲ್ಲಿಖಿತವಾಗಬೇಕು.

ಶ್ರೀ ಶ್ರೀಗಳವರ 'ವಚನಮಂಜರಿ' ಒಬ್ಬ ಸತ್ಯಶೋಧಕನೂ, ಲೋಕಕಲ್ಯಾಣ ನಿರತನೂ, ಪುರೋಗಾಮಿಯೂ ಆದ ಸಾಧಕನ ದಿವ್ಯ ಚರಿತ್ರೆ. ಅವರ ನುಡಿಗಳಲ್ಲಿ ಸಿಡಿಲಿನ ಹೊಡೆತವಿದೆ, ಮಿಂಚಿನ ಪ್ರಕಾಶವಿದೆ ; ತಾಯಿಯ ಪವಿತ್ರಪ್ರೇಮದ

ಅಮೃತ ವರ್ಷವೂ ಇದೆ. ಹಿರಿಯ ಗುರುಪೀಠದಿಂದ ಶ್ರೀಗಳವರು ಅಧಿಕಾರ ವಾಣಿಯಿಂದ ದಿವ್ಯೋಪದೇಶ ಮಾಡಿದ್ದಾರೆ;—ಅದಕ್ಕೂ ಹೆಚ್ಚಾಗಿ ಆಡಿದುದನ್ನು ಮಾಡಿ ತೋರಿಸುತ್ತಿದ್ದಾರೆ.

....ಶ್ರೀಗಳವರ ಸಾಹಿತ್ಯಸೇವೆ ಸತತ ಸಾಧನ, ಧ್ಯಾನ ತಪಸ್ಸುಗಳ ಪ್ರಭಾವದಿಂದ ಬಿದ್ದಿಸಿ ಲೋಕೋತ್ತರವಾದ ಫಲಗಳನ್ನು ನೀಡುತ್ತಿದೆ. ನಿಡುಮಾಮಿಡಿಯ ಮಾವಿನ ಮರ ಪೀಠದ ಗುರುಗಳೊಬ್ಬರ ಕರೆಗೆ ಓಗೊಟ್ಟು ಮಾಮಿಡಿಯನ್ನು ನೀಡಿದಂತೆ ಶ್ರೀಗಳವರ ತಪೋವೃಕ್ಷ ಜನತೆಯ ಕರೆಗೆ ಓಗೊಟ್ಟು ಇನಿವಣ್ಣುಗಳನ್ನು ನೀಡುತ್ತಿದೆ. ಈ ಜ್ಞಾನ ವೃಕ್ಷಕ್ಕೆ ವಸಂತ ಲಕ್ಷ್ಮಿ ನಿತ್ಯಾನುಗ್ರಹ ಮಾಡಲಿ-ಶ್ರೀಗಳವರ 'ವಿಶ್ವೇಶ್ವರ ಪ್ರೀತಿ' ನಿರಂತರವಾಗಿ ಸಾಗಿ ಲೋಕಕ್ಕೆ ಶಾಂತಿಯನ್ನು ಕಾಂತಿಯನ್ನು ಅನುಗ್ರಹಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ."

—೧೯-೫-೫೧

"ಶ್ರೀಶೈಲ ಜ. ಪ. ಚನ್ನಬಸವರಾಜ ಸ್ವಾಮಿಗಳು ಪ್ರಾಚೀನ ವಚನಕಾರರ ಪಥದಲ್ಲಿ ನಡೆದು ಬಿಂದುವಿನಲ್ಲಿ ಸಿಂಧುಸಮಾನ ಅನುಭವವನ್ನು ಸುಂದರವಾಗಿ ಸಂಗ್ರಹಿಸಲು ಸಮರ್ಥರಾದ ಯಶಸ್ವಿ ವಚನಕಾರರು. ....ಈ ವಚನ ಮಂಜರಿಯಲ್ಲಿ ಜನತೆಯ ಧಾರ್ಮಿಕ ಹಾಗು ಲೌಕಿಕ ಉದ್ಧಾರಕ್ಕಾಗಿ ಮಿಡಿಯುವ ಹೃದಯದ ಪರಿಚಯ ದೊರೆಯುತ್ತದೆ ಒಂದು ಪಂಥದ ಮಠದ ಅಧಿಪತಿಯಾಗಿದ್ದೂ ಹೃದಯ ವೈಶಾಲ್ಯವನ್ನು ಅವರು ಕಾಪಾಡಿಕೊಂಡಿದ್ದಾರೆ. ಇದರಲ್ಲಿರುವ ಅನೇಕ ವಚನಗಳು ಭಾಷಾಸೌಂದರ್ಯ ಮತ್ತು ಭಾವಶ್ರೀ ಇವೆರಡೂ ದೃಷ್ಟಿಯಿಂದ ಉತ್ತಮ ಸಾಹಿತ್ಯದ ಒರೆಗೆ ನಿಲ್ಲುತ್ತವೆ.

—ಕರ್ಮವೀರ, ೧-೯-೫೨

"ಈ ಗ್ರಂಥವು ೬ ಅಧ್ಯಾಯಗಳಿಂದ ಕೂಡಿ ೪೪೦ ವಚನಗಳುಳ್ಳದಾಗಿದೆ. ಇದರಲ್ಲಿ ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ–ಈ ಮೂರು ಅಧ್ಯಾಯಗಳು ಸಮಸ್ತ ಭಾರತೀಯರಿಗೂ ಅನ್ವಯಿಸುವ ರೀತಿಯಲ್ಲಿ ಬೋಧಪ್ರದವಾಗುವಂತೆ ಅತ್ಯಂತ ಕಳಕಳಿಯಿಂದ ನಿರ್ದಾಕ್ಷಿಣ್ಯವಾಗಿ ಬರೆದವುಗಳಾಗಿವೆ. ಒಂದೊಂದು ವಚನದಲ್ಲಿಯೂ ಸ್ಫೂರ್ತಿಯಿದೆ, ದಿಟವಿದೆ. ವಚನಗಳ ಶೈಲಿಯು ೧೨ ನೇ ಶತಮಾನದ ಪ್ರಮಥರ ಶೈಲಿಯನ್ನು ಹೋಲುತ್ತದೆ. ಆದರೂ ಅಲ್ಲಲ್ಲಿ ನಾವೀನ್ಯತೆ ಮಿನುಗುತ್ತದೆ. ಅಂದಿನ ಪ್ರಮಥರು ಆ ಕಾಲಕ್ಕೆ ತಕ್ಕಂತೆ ವಚನಗಳನ್ನು ರಚಿಸಿ ಧರ್ಮ ಕ್ರಾಂತಿಯನ್ನು ಮಾಡಿದ್ದರೆ, ಇಂದು ಈ ಪ್ರಮಥಾಚಾರ್ಯರು ಇಂದಿಗೆ ತಕ್ಕಂತೆ ಈ ವಚನಗಳನ್ನು ರಚಿಸಿ ವಿಚಾರ ಕ್ರಾಂತಿಗೆ ಪುಟ ಕೊಟ್ಟಿದ್ದಾರೆ. ಪ್ರತಿಯೊಬ್ಬ ಕನ್ನಡಿಗನೂ ಅವಶ್ಯ ಸಂಗ್ರಹಿಸಿ ಅಭ್ಯಸಿಸಬೇಕಾದ ಗ್ರಂಥ

—ಅಮರವಾಣಿ, ಅಕ್ಟೋಬರ್ ೧೯೫೨.

"ಭಕ್ತಿರಸದ ಅರವಟ್ಟಿಗೆ 'ವಚನ ಮಂಜರಿ.' ವಿಜ್ಞಾನ ವಿದ್ಯುತ್ತಿನ ಕೇಂದ್ರ–ವಚನ ಮಂಜರಿ. ಸಾಹಿತ್ಯ ಸಂಪತ್ತಿನ ಕೋಶಾಗಾರ–ವಚನಮಂಜರಿ. ಸಂಸ್ಕೃತಿಯ ಸುಂದರ ಸೌಧ-ವಚನಮಂಜರಿ. ವಚನಗಳ ಕಂಪಿನ ಚೆಲುವ ಹೂದೋಟ-ವಚನಮಂಜರಿ. ಇವೆಲ್ಲವುಗಳು ವಚನರೂಪದಲ್ಲಿ ಒಗ್ಗೂಡಿ ಅರಳಿರುವುದರಿಂದ ಇದು 'ವಚನಮಂಜರಿ.' ಈ ವಚನ ಪುಷ್ಪಗುಚ್ಛದಲ್ಲಿ ದಿವ್ಯರಸವಿದೆ. ದಿವ್ಯಜ್ಞಾನವಿದೆ. ಭವ್ಯ ಸಂಪತ್ತಿಯಿದೆ. ನವ್ಯಸಾಹಿತ್ಯ ಸಂಸ್ಕೃತಿಗಳಿವೆ. ಈ ವಚನಮಂಜರಿಯ ರಸವನ್ನು ಒಮ್ಮೆ ಕುಡಿದರೆ ತಿರುಗಿ ತೃಷೆಯಾಗುವುದಿಲ್ಲ. ಈ ಸಂಪತ್ ಸಾಹಿತ್ಯವನ್ನು ಸಂಗಳಿಸಿದರೆ ವಿಕೃತಿಯಿಲ್ಲದ ಶಾಂತಿ-ವಿಶ್ರಾಂತಿಗಳು ಲಭ್ಯವಾಗುತ್ತವೆ. ಇದುವೇ ಸತ್ಕೃತಿ, ಇನ್ನೇನಾಗಬೇಕು ?

—ಎಸ್. ಪಿ. ರಾಮರಾಯರು.

ಸನ್ನಿಧಿಯವರ 'ವಚನಮಂಜರಿ' ಎಂಬ ನವ್ಯ ವಚನಗಳುಳ್ಳ ಕೃತಿಯ ಮೇಲೆ ಬರೆದ ಮೇಲ್ಕಂಡ ಅಭಿಪ್ರಾಯಗಳೇ ಸಾಕು ಅದರ ಹಿರಿಮೆಗೆ ! 'ಪ್ರಮಥಾಚಾರ್ಯ'ರು ಎಂದು ಕರೆದ 'ಅಮರವಾಣಿ'ಯ ಅಭಿಪ್ರಾಯ ನಿಜಕ್ಕೂ ಸಾರ್ಥಕ; ಸಮರ್ಪಕ !

೩

## ನವೀನ ಕವನ-'ಅಭಯವಾಣಿ'

ಕನ್ನಡ ಸಾಹಿತ್ಯದಲ್ಲಿ ವಚನ ಪ್ರಯೋಗವು ಹೇಗೆ ನವ್ಯ ಪ್ರಯೋಗವೋ ಹಾಗೆ ವಚನ ಸಾಹಿತ್ಯದಲ್ಲಿ 'ಅಭಯವಾಣಿ'ರಚನೆ ನವ್ಯ ಪ್ರಯೋಗವಾಗಿದೆ. ವಚನ ಪಥದಲ್ಲಿ ಹೊಸ ರಚನೆ. ವಚನ–ಕವನಗಳ ಮಧ್ಯಮಾರ್ಗ. ಪ್ರೌಢಗಮನವಾದರೂ ಪರಿಣಾಮ ಪೂರ್ಣ ಗಮನ. ಸಂಗೀತಕ್ಕೆ ಒಗ್ಗದಿದ್ದರೂ ಸಂಗತ ಶೈಲಿ. ವಚನದ–ಹಿಡಿತವಿಲ್ಲ. ಕವನದ ಕಟ್ಟಿಲ್ಲ. ಗದ್ಯಗಮನದ ಸ್ವಚ್ಛಂದವಿಲ್ಲ. 'ಅಭಯವಾಣಿ'ಯ ಶೈಲಿ ವಚನ–ಕವನಗಳೆರಡರ ಸಮ್ಮಿಲನ ಶೈಲಿ. ತುಂಗಭದ್ರಾ ಪ್ರವಾಹ. ಕವನ ವಚನವೆಂದರೂ ಸರಿ. ವಚನ ಕವನವೆಂದರೂ ಸರಿ. ಹೇಗೆಂಡರೂ ಒಪ್ಪು. ನವನಾಗರಿಕತೆಯ ತರುಣರ ವೇಷ ಮಿಶ್ರಣದಂತೆ ಇದರ ಅಂದ. ಮನೋರಂಜನ ಪುಷ್ಪದಂತೆ ಇದರ ಗಂಧ. ಪಡಿಪ್ರಸಾದಗಳ ಉಂಡಬಳಿಕಿನ ಆನಂದ.

ಅವಸ್ಥೆಗಳಿಗೆ ತಕ್ಕಂತೆ ನಡೆ ನುಡಿಗಳು ಮಾರ್ಪಡುತ್ತವೆ. ಆಹಾರ-ವಿಹಾರಗಳು ಮಾರ್ಪಡುತ್ತವೆ. ಋತುಗಳು ಬದಲಾದಂತೆ ವಾತಾವರಣವೂ ಬದಲಾಗುತ್ತದೆ, ದೇಶ ಬದಲಾದಂತೆ ಧರ್ಮ ಬದಲಾಗುತ್ತದೆ. ಯುಗಯುಗಕ್ಕೆ ಹೊಸ ಪಂಥಗಳು

ಹುಟ್ಟಿಬರುತ್ತವೆ. ನಿಸರ್ಗ ಬದಲಾಗುವಂತೆ, ಕಾಳು ಬದಲಾಗುವಂತೆ ಭಾಷಾಶೈಲಿ ಬದಲಾಗುವುದರಲ್ಲಿ ಒಂದು ಆಪ್ಯಾಯನತೆಯಿದೆ; ಪ್ರಗತಿಶೀಲತೆಯಿದೆ.

ಯಾಂತ್ರಿಕ ಜೀವನ ಹೇಗೆ ಅಸಹಜವೋ ಹಾಗೆ ಬರೀ ತಾಂತ್ರಿಕ ರಚನವೂ ಅಸಹಜವೆಂದೇ ಹೇಳಬೇಕು. ರುಚಿ ಹೊಸತಾಗುವುದರಲ್ಲಿ ಅಭಿರುಚಿಯಿರುವಂತೆ ರಚನ ಹೊಸತಾಗುವುದರಲ್ಲಿಯೂ ಅಭಿರುಚಿ ಅನಿವಾರ್ಯ. ಜೀವಂತವಾದ ಜೀವನಾನು ಭವ ದೊರೆಯಬೇಕಾದರೆ ವಚನನಾವೀನ್ಯವೂ ವಾಂಛನೀಯ. ನವ್ಯ ಕಾವ್ಯವು ಬೇಗ ಕೊಡದ ಅಭಿಪ್ರಾಯ ಆಪ್ಯಾಯನವನ್ನು ನವೀನ ವಚನ ರಚನೆಯು ಕೊಡಬಲ್ಲುದು.

ವಚನ ಸಂಪ್ರದಾಯದಲ್ಲಿ ಹೊಸ ಹಾದಿಯನ್ನು ಹಾಕುವ ಹಂಚಿಕೆ 'ಅಭಯ ವಾಣಿ'ಯದು. ಹಂಚಿಕೆಗೆ ತಕ್ಕಂತೆ ಹಾದಿ ಹಸನಾಗಿದೆ. ಕರ್ತರ ಪ್ರಯತ್ನ ಫಲೋನ್ಮುಖವಾಗಿದೆ. ಭಾವ ಭಾಷೆಗಳು ಜೀವ-ದೇಹಗಳಂತೆ ಹೊಂದಿಕೊಂಡಿವೆ. ಪ್ರಯೋಗಿಸಿದ ಶಬ್ದಾರ್ಥಗಳು ಪರಿಣತ ಅನುಭಾವಕ್ಕೆ ಮೇಳವಿಸುತ್ತವೆ. ಮನಃ ಪ್ರಪಂಚಕ್ಕೆ ಒಂದು ಹೊಸ ದಾರ್ಶನಿಕ ಸೃಷ್ಟಿಯಾದಂತಾಗಿದೆ. ತತ್ವದರ್ಶನವೂ ತಿಳಿಯಾಗಿದೆ. 'ಅಭಯವಾಣಿ' ಆದರ್ಶಕೃತಿಯಾಗಿ ರಾಜಿಸಿದೆ. ಇದರಲ್ಲಿ ಭಾಷೆಯ ನಾವೀನ್ಯತೆಯೊಡನೆ ಭಾವಾನುಭಾವಗಳ ನಾವೀನ್ಯತೆಯನ್ನೂ ನೋಡಿ ನಲಿಯುತ್ತೇವೆ. ಶಕ್ತಿ ಸಂಪನ್ನವಾದ ಭಾವ–ಭಾಷೆಗಳೆರಡನ್ನು ಮನಗಂಡು ಮಹದಾನಂದತುಂದಿಲ ರಾಗುತ್ತೇವೆ. 'ಅಭಯವಾಣಿ' ಶೃತಿಮಾಡಿಕೊಂಡು ನುಡಿಸಿದ ವೀಣೆಯಂತಿದೆ. ಅದನ್ನು ನುಡಿಸಿದ ಕರ್ತರ ವ್ಯಕ್ತಿಶಕ್ತಿ ಸಣ್ಣದಲ್ಲ. ಅದರ ಇಂಚರಕ್ಕೆ ತಣಿಯದ ಕರ್ಣಮನಗಳಿರಲಾರವು. ಪ್ರತಿಸ್ಪಂದಿಸದ ಹೃದಯಗಳಿರಲಾರವು.

ಈ ಗ್ರಂಥದ ಉದ್ಘಾಟಕರು ಉದ್ಘೋಷಿದಂತೆ. ಅಭಯವಾಣಿ ಬೇರಲ್ಲ; ಅದನಿತ್ತ ಸನ್ನಿಧಿಯವರು ಬೇರಲ್ಲ. ಅವರ ಆತ್ಮಶಕ್ತಿಯೆಲ್ಲ ಅದರಲ್ಲಿ ಕೇಂದ್ರೀಕೃತವಾ ಗಿದೆ ಅವರ ಅನುಭಾವ ವೈಭವ ಅದರಲ್ಲಿ ತುಂಬಿ ತುಳುಕಿದೆ.

ಬಾಳಬೇಗೆಯಿಂದ ಬೇಗುದಿಗೊಂಡ ಹೃದಯಕ್ಕೆ ಅಲ್ಲಿ ಸಾಂತ್ವನ ಸಿಕ್ಕುತ್ತದೆ. ಬರಡಾದ ಬಾಳಿಗೆ ಮುಗುಳೊಡೆಯುತ್ತದೆ. ಬಡವಾದ ಬುದ್ಧಿ ಭಾವಗಳು ಶ್ರೀಮಂತ ವಾಗುತ್ತವೆ. ಮನದ ಕನಸು ನನಸಾಗುತ್ತದೆ. ಮಾತಿನ ಮೆಲುಕು ಮಧು ಮಾಧುರ್ಯ ವನ್ನು ಊಡಿಸುತ್ತದೆ. ಸ್ವಾನುಭೂತಿ ನಂದಾಜ್ಯೋತಿಯಾಗಿ ಬೆಳಗುತ್ತದೆ.

ಅದರಲ್ಲಿತ್ತ ಅಭಯ ಜೀವನಾನುಭವ ನವ್ಯವಾಣಿಯಲ್ಲಿ ಬಂದ ಆ ಅನುಭವಾ ಮೃತಕ್ಕೆ ಸಕ್ಕರೆಯ ಬೆರಸಿದಂತಿದೆ. ಅಲ್ಲಲ್ಲಿ ಬರುವ ತಿಳಿತಿಳಿಯಾದ ತಾತ್ವಿಕದರ್ಶನವೇ ಕೆಂಪು ಕಲ್ಲು ಸಕ್ಕರೆ.

'ಅಭಯವಾಣಿ' ಮೈದಾಳಿರುವುದು ಮನಸ್ಸಿಗಾಗಿ! ಮುದ್ದು ಮನಸ್ಸಿಗೆ ಬುದ್ಧಿ ಬರುವದಕ್ಕಾಗಿ; ಬುದ್ಧಿ ಸಮನಿಸುವುದಕ್ಕಾಗಿ! ನಿಶ್ಚಲತೆ ನೆಲೆಯಾಗಿರುವುದಕ್ಕಾಗಿ!

ಅದನ್ನು ಓದುವುದರಿಂದ ಅಥವಾ ಕೇಳುವುದರಿಂದ ಇವೆಲ್ಲವೂ ಉಂಟಾಗುತ್ತವೆ. ಅದರ ಸತ್ವ ಅಂತಹದು.

ಕವಿಗುರು ತನ್ನ ದಿವ್ಯ ದರ್ಶನವನ್ನು ತನಗಾಗಿ ಸೃಷ್ಟಿಸಿಕೊಂಡಿರುವನಾದರೂ ಅದು ಅಷ್ಟಕ್ಕೆ ಪರಿಮಿತವಾಗಿ ನಿಂತಿಲ್ಲ. ಹಿಂಡುವ ಹಸು ಹೊಟ್ಟೆ ತುಂಬಿಕೊಂಡಂತಾಗಿದೆ ಅದರ ಪರಿಣಾಮ. ಹೆಮ್ಮರ ಹಣ್ಣು ಬಿಟ್ಟಂತಾಗಿದೆ ಅದರ ಪಾವನ ಪರಿಶ್ರಮ.

"ಕುಣಿದಾಡು ಕಂದಾ, – ಕುಣಿದಾಡು ; ನೋವು ಸಾವುಗಳ ತುಳಿಯುತ !
ನಲಿವು ಒಲವುಗಳ ತುಳುಕಿಸುತ; – ಕುಣಿದಾಡು ಕಂದಾ–ಕುಣಿದಾಡು:
ಜಡಜಾಡ್ಯಗಳ ಕುಳಿಗೆಸೆಯುತ,
ಮೃಡಮಾಟವ ಮೊಗದೊಳು ಕುಲುಕಿಸುತ;
ಕುಣಿದಾಡು ಕಂದಾ–ಕುಣಿದಾಡು:
ಎಳೆತನದ ಭಂಗಿಯಲಿ, ಎಳೆಕುಳಿಯ ಪೊಂಗೊಳಲ ನುಡಿಸುತಲಿ ;
ಮುಂಗುರುಳ ಮುಂದಲೆಯ,–ಉಂಗುರದ ಅರಳೆಲೆಯ ಓ ಕಂದಾ
ನಿಸ್ಸಾನಂದ ಸರ್ವರಲಿ ಸೂಸುತ ಕುಣಿದಾಡು ಕಂದಾ–ಕುಣಿದಾಡು !
ಕುಣಿತದಲಿ ಹಣಿದಾಡು ತಮದ ಬೆಂಗಾಡು!"

'ಅಭಯವಾಣಿ' ನವ್ಯಕಾವ್ಯವೆಂಬುದಕ್ಕೆ ಇದೊಂದು ನಿದರ್ಶನ ಸಾಕು. ಇದರಲ್ಲಿ ಪದ್ಯಗದ್ಯಗಳೆರಡರ ಗುಣಗಳು ಗುಂಫಿತವಾಗಿವೆ. ಗದ್ಯದ ಸತ್ವವಿದೆ; ಪದ್ಯದ ಬಿಗುವಿದೆ, ಭಾವವಿದೆ. ಮಗುವಿನ ಆಟವನು ಮನಕ್ಕೆ ಹೋಲಿಸಿ ಹೇಳುವಲ್ಲಿ ಕವಿ ತೋರಿದ ಪ್ರಭಾವಪೂರ್ಣ ಪ್ರಜ್ಞೆ ಮೆಚ್ಚತಕ್ಕದ್ದು. ಮನದ ಕುಣಿತ ನಿಲ್ಲಬೇಕಿಲ್ಲ. ಆದರೆ ಮಗುವಿನ ಆಟದಂತೆ ವ್ಯರ್ಥವಾಗಬಾರದು. ಮಗುವಿನ ತುಳಿತಕ್ಕೆ ನೆಲವೊಂದೇ ಗುರಿ. ಮನದ ತುಳಿತಕ್ಕೆ ನೋವು ಸಾವುಗಳ ಗುರಿ. ಮಗುವಿನ ಆಟದಿಂದ ಮಗುವಿನಲ್ಲಿ ಉಕ್ಕುವ ನಲಿವು ಒಲವುಗಳಿಗೂ ಮನದ ಸತ್‌ಕ್ರಿಯೆಯ ಕ್ರೀಡೆಯಿಂದ ತುಳುಕುವ ನಲಿವು ಒಲವು ಅಂದರೆ ಚಿದಾನಂದ ಸದ್ಭಕ್ತಿಗಳಿಗೂ ಇರು ಅಂತರ ಇರುವ ಶೀಲತತ್ವ ಶಬ್ದಕ್ಕೆ ನಿಲುಕದಂತಹವು. ಇದರಂತೆ ಓದುಗರು ಮುಂದಿನ ಕವಿವಾಣಿಯ ಭಾವೋನ್ನತಿಯನ್ನು ಮೆಲುಕು ಹಾಕಬೇಕು. ಕವಿ ಕಾಲಿಲ್ಲದ ಮನವನ್ನು ಕುಣಿಸಿದ್ದಾನೆ. ತಲೆಯಿಲ್ಲದ ಮನಕ್ಕೆ ಭೋದಿಸಿದ್ದಾನೆ. ಜ್ಞಾನಾಚರಣೆಯಲ್ಲಿ ಮನ ಮಗುವಾಗಿದೆ. ಅಂತೆಯೇ ಕ್ರಿಯೆ (ಕ್ರೀಡೆ) ಯಲ್ಲಿಯೂ ಮಗುವಾಗಿದೆ.

ಮಗು–ಮನಗಳ ಸ್ಥಿತಿ ಒಂದಾದರೂ ಗತಿ ಬೇರೆ; ಬುದ್ಧಿಭಾವನೆಗಳು ಬೇರೆ; ಮನನ ಕಲ್ಪನಗಳು ಬೇರೆ. ಅರ್ಥ ವೈಶಾಲ್ಯ ಭಾವನೈರ್ಮಲ್ಯ ಸಂಭಾಷಣಾ ಚಾತುರ್ಯಗಳನ್ನು ಇಲ್ಲಿ ಕಾಣಬೇಕು. ಇದರಲ್ಲಿ ಗದ್ಯಗಮನವಿದೆ. ಪದ್ಯಗಾನವಿದೆ.

ಗದ್ಯಪದ್ಯ ಲಕ್ಷಣಗಳೆರಡೂ ಹಾಸು ಹೊಕ್ಕಾಗಿ ನೆಯ್ದುಕೊಂಡಿವೆ. ನವ್ಯಕಾವ್ಯದ ತಂತ್ರವನ್ನು ಇಲ್ಲಿ ಚೆನ್ನಾಗಿ ಮನಗಾಣುತ್ತೇವೆ. ಇಂತಹ ರಸಭಾವಗಳನ್ನು ಚಿಮ್ಮುವ ನವ್ಯಕಾವ್ಯ ವಾಣಿಗಳನ್ನು ಅಭಯವಾಣಿಯಲ್ಲಿ ಉದ್ದಕ್ಕೂ ಕಾಣಬಹುದು.

ಕಾವ್ಯೋದ್ದೇಶಕ್ಕೆ ತಕ್ಕಂತೆ ಕಾವ್ಯಸ್ವರೂಪ ಚಿತ್ರಣವಿದೆ. ಕಾವ್ಯ ಶೈಲಿ ಸಂಸ್ಕಾರವನ್ನು ಪಡೆದಿದೆ. ಭಾವಾನುಭಾವಗಳಲ್ಲಿ ನವ್ಯ ಪ್ರಭಾವವಿದೆ. ಮಾತು ಮಗುವಿನ ಮಟ್ಟದ್ದೆನಿಸ ಹೊರಟಿದ್ದರೂ ಮೇಲ್ಮಟ್ಟಕ್ಕೇರಿದೆ. ಏಕೆಂದರೆ ಅಲ್ಲಿನ ಶಿಶುತನ ವಯಸ್ಸಿನದಲ್ಲ. ಆದುದರಿಂದ ಮಾತಿನ ಎಳಸಿನಲ್ಲಿಯೇ ಪ್ರೌಢಿಮೆತೆಯ ಬೆಳಸಿದೆ ಉದ್ದೇಶ ಉದಾತ್ತಕ್ಕೇರಿದೆ. ಇಲ್ಲಿ ಅವಸ್ಥೆ ಮುಖ್ಯವಲ್ಲ; ಜೀವನ ವ್ಯವಸ್ಥೆ ಮುಖ್ಯ. ಹೊಸ ಶೈಲಿಯಲ್ಲಿ ಹೊಸ ಭಾವಗಳನ್ನು ಹದುಳತೆಯ ಭಾವಗಳನ್ನು ಬಿತ್ತರಿಸುವುದೇ ಅಭಯವಾಣಿಯ ಉದ್ದೇಶ. ಆ ವಾಣಿಯನ್ನು ಕೇಳುತ್ತಿರುವಾಗ ಭಯಕ್ಕೆಂಬಿರಬಾರದು. ಇದರಲ್ಲಿ ಇಲ್ಲ. ಇದೇ ಅಭಯವಾಣಿಯ ವೈಶಿಷ್ಟ್ಯ. 'ಅಭಯವಾಣಿಯ ವಾಗರ್ಥಗಳಲ್ಲಿ ನವಯುಗದ ಸಮಯೋಗಗಳನ್ನು ನಾವು ಕಾಣುತ್ತೇವೆ. ವಾಕ್ಕು ಹೊಸದು, ಅರ್ಥ ಹೊಸದು.

ಹೀಗೆ ಹೇಳಿದೊಡನೆ ಇದರಲ್ಲಿರುವುದೆಲ್ಲವೂ ಹೊಸದಲ್ಲ. ಹಳೆಯದೂ ಇದೆ. ಇದ್ದರೂ ಅದಕ್ಕೆ ಹೊಸ ಉಡುಗರೆಯನ್ನಿತ್ತಿದ್ದಾರೆ. ಸಂಪ್ರದಾಯ ವಸ್ತುವಿಗೆ ಸಮಕಾಲೀನ ವಾತಾವರಣಕ್ಕೆ ತಕ್ಕ ರೂಪನ್ನಿತ್ತಿದ್ದಾರೆ. ಹಳೆಯದು ಹೊಸದಾದರೆ ಅದೂ ಒಂದು ಅಂದ ತಾನೆ? ಹಳೆಯದನ್ನು ಹೊಸದಾಗಿಸುವಲ್ಲಿ ಕವಿ ತುಂಬಾ ಜಾಣತನವನ್ನು ಬಳಸಿದ್ದಾನೆ, ಜವಾಬ್ದಾರಿಯನ್ನು ವಹಿಸಿದ್ದಾನೆ. ಹಳತು ಹೊಸತುಗಳೆರಡನ್ನೂ ತನ್ನ ನವ್ಯವಾಣಿಯಲ್ಲಿ ಜೋಡಿಸಿಕೊಂಡ ಜಾಣ್ಮೆ ಕವಿಗುರುವಿಗೆ ಸಲ್ಲಬೇಕು. ಈ ಜಾಣ್ಮೆಗಾಗಿ ಈ ಜಾಣ್ನುಡಿಯನ್ನು ನೋಡಿ :

"ಪವಿತ್ರ ಹೃದಯನೆ ಕೇಳು, ಎಲ್ಲವನು ತಾ ಮಾಡಿ,  
ಎಲ್ಲದರೊಳು ತಾ ಕೂಡಿ, ಎಲ್ಲವರ ವಿಕಾರ ವಿನಾಶಗಳ ತಾ ದೂಡಿ  
ಎಲ್ಲೆಲ್ಲಿಯೂ ತಾನಿರುವುದೆ ಪೂರ್ಣರೂಪು .... ಅವನು ನೀ ತಾಳು "

ಗದ್ಯ ಶೈಲಿಯಾದರೂ ಪದ್ಯಲಯವಿದೆ ಅಣುವಿಗೆ ಅಣುವಾಗಿ ಮನವಾಗಿದ್ದರೂ ಮಹಾ ಮಹಾ ಮಣಿಹಗಳಿಂದ ಮಂಗಳ ಸಂಕಲ್ಪಗಳಿಂದ ಘನವಾಗುವ ಸತ್ವವಿದೆಯೆಂಬ ಧ್ವನಿಯನ್ನು ಕವಿ ಸ್ವಂತ ಚಿಂತನ ಶೀಲತೆಯ ಶಿವಾನುಭೂತಿಯಲ್ಲಿ ಎರಕ ಹೊಯ್ದು ಶ್ರುತಿಸಾಮ್ಯವನ್ನಾಗಿ ಪ್ರತಿಗವ್ಯವನ್ನಾಗಿ ಮಾಡಿದ್ದಾನೆ. ಪೂರ್ಣ ರೂಪಾಗಲು ಪವಿತ್ರ ಹೃದಯ ತಳಪಾಯ. ಅದು ನಿನಗಿದೆ; ನಿನಗಿಲ್ಲ ಕೊರತೆ. ನೀಕೇಳ, ಕೇಳಿದುದನ್ನು ತಾಳು ಎಂದು ಹೇಳಿ ಕವಿಯೂ ಆಗಿ ಗುರುವೂ ಆಗಿ ನಿಂತಿರುವುದಲ್ಲದೆ ಮನಕ್ಕೆ ಸಚ್ಚಿಸ್ಯತ್ವ ಪಾತ್ರವೂ ಸೂಚಿತವಾಗಿದೆ.

"ಓ ಮನವೆ, ಓ ಮಗುವೆ, ಕೇಳು; ಭಕ್ತಿರಸದಲ್ಲಿ ಬೆಳೆದ ಬಳ್ಳಿ ನೀನು;
ಭವದ ಹೆಗ್ಗಾಳಿಗೆ ಬಳ್ಕದ ಬಳ್ಳಿ ನೀನು; ಬವದ ಹೆಬ್ಬಿಸಿಲಿಗೆ ಬಾಡದ ಬಳ್ಳಿನೀನು;
ಭಾವಪುಷ್ಪಂಗಳ ಬಂಡಾರ ನೀನು; ಭವ್ಯ ಪಲಗಳ ಮಂದಾರ ನೀನು.
ನಿನಗಿನ್ನಾವ ಬವಣೆ ಹೇಳು.

ಮನದ ಪಾತ್ರ ಪವಿತ್ರವೆಂಬುದು ಈ ವಚನದಲ್ಲಿ ಖಚಿತವಾಗುತ್ತದೆ. ಮನವೆಂಬ ಮಗು ಸನಿಹದ ಶಿಷ್ಯ. ಬಳ್ಳಿಯಂತೆ ಬಾಗುವ ಬಳ್ಳುವ ಶಿಶು. ಪ್ರಾರ್ಥಿವ ಪ್ರಕೃತಿಯಲ್ಲಿ ಬೆಳೆದ ಶಿಶುವಲ್ಲ. ಪಾರ್ಥಿವಾಂಶವಾದ ದೇಹದ ಮೋಹದಲ್ಲಿರುವ ಶಿಶುವಲ್ಲ. ಭವಕ್ಕೆ ಬಳ್ಕದ ಬಳ್ಳಿ, ಬಾಡದ ಬಳ್ಳಿ. ಭಾವ ಪುಷ್ಪಗಳಿಂದ ಭರಿತವಾದ ಬಳ್ಳಿ. ಭವ್ಯಫಲಗಳನ್ನು ಬಿಡುವ ಸುರತರು-ಮನವೆಂಬ ಮಗು. ಹೀಗಿರುವಾಗ ಅದಕ್ಕಿನ್ನಾವ ಕೊರಗು, ಇನ್ನಾವ ಕೊರತೆ ? ಇಲ್ಲ ದಿಟ. ಆದರೂ 'ನುಡಿ ಹಸಾದವ ಬಯಸುತಿದೆ ಮನಸು. ಅದಕೆ ಬೇಕು ಅಭಯವಾಣಿಯ ಬೆಳಸು. ಅಭಯವಾಣಿ ಭಾವಾನುಭಾವಗಳ ಸಾಮ್ರಾಜ್ಯ ; ರಸರುಚಿಗಳ ಭೋಜ್ಯ.

"ಚುಕ್ಕೆಗಳ ಎಣಿಸಬಹುದು ; ಚಿತ್ತದ ಬಯಕೆಗಳ ಎಣಿಸಿ
ತೀರಿಸಬಹುದೆ ? ಬಟ್ಟೆಯು ಎಳೆಗಳ ಎಣಿಸಬಹುದು;
ಬಾಳ ಬಟ್ಟೆಯು ಎಳೆಗಳ ಎಣಿಸಬಹುದೆ ?
ರೋಮಂಗಳ ಎಣಿಸಬಹುದು ; ಜನ್ಮಕರ್ಮಂಗಳ ಎಣಿಸಬಹುದೆ ?
ಎಣಿಕೆಯ ಎಡೆಯಾಟವೇಕೆ ಹೇಳಾ ?"

ಶಿಶು ಸನಿಹದ್ದಾದರೂ ಸಂಕಲ್ಪ ಸಂಖ್ಯೆ ಸಣ್ಣದಲ್ಲ ; ಸನ್ನಿಹಿತವಲ್ಲ. ಅಂತೆಯೇ ಬಾಳ ಬಟ್ಟೆಯ ಎಳೆಗಳು ಅಸಂಖ್ಯ. ಜನ್ಮಗಳು ಕರ್ಮಗಳು ಎಣಿಕೆಗೆ ಎಟುಕದಸಿತು. 'ಜನ್ಮಕರ್ಮ' ಎಂಬ ಶಬ್ದ ಶ್ಲೇಷಾರ್ಥವು ಜನ್ಮಕಾರಣ ಕರ್ಮಗಳು ಎಂಬ ಇನ್ನೊಂದರ್ಥವನ್ನು ಗರ್ಭೀಕರಿಸಿಕೊಂಡಿದೆ. ಚಿತ್ತ ಜೀವನ ಜನ್ಮ ಇವುಗಳ ಕಾರಣಕಾರ್ಯಗಳನ್ನು ಕಾಣುವುದು ದುಸ್ತರ, ಕೈಗೂಡಿಸಿಕೊಳ್ಳುವುದು ದುಸ್ತರ. ಈ ಮೂರಕ್ಕೂ ಕ್ರಮವಾಗಿ ಕೊಟ್ಟ ಉಪಮೆಗಳಲ್ಲಿ ಕವಿಯ ಪ್ರಜ್ಞಾಪ್ರತಿಭೆಯನ್ನು ಮನಗಾಣಬೇಕು. ಚುಕ್ಕೆ, ಬಟ್ಟೆ, ರೋಮಗಳು ಕ್ರಮವಿಡಿದು ಮುಗಿಲು ನೆಲ ಮೈಗಳನ್ನು ಆಧರಿಸಿಕೊಂಡಿರುವ ವಸ್ತುಗಳು. ಮುಗಿಲಿಗೂ ಚುಕ್ಕೆಗೂ ಸಂಬಂಧವಿರುವಂತೆ ಚಿತ್ತಕ್ಕು ಅವುಗಳೊಡನೆ ಸಂಬಂಧವಿದೆ. ಭೂಮಿಗೂ ಬಟ್ಟೆಗೂ ಸಂಬಂಧವಿರವಂತೆ ಬಾಳಿಗೂ ಸಂಬಂಧವಿದೆ ಭೂಮಿಯನ್ನು ಬಿಟ್ಟು ಬಾಳುವೆಯಿಲ್ಲ. ದೇಹಕ್ಕೂ ರೋಮಕ್ಕೂ ಇರುವ ಸಂಬಂಧ ಜನ್ಮಕರ್ಮಗಳಿಗೂ ಇರುತ್ತದೆ. ಸಂದಿಲ್ಲದ ಸುಂದರ ಸಂಬಂಧದ್ದ ಹೋಲಿಕೆಗಳವು. ಉಪಮಾನೋಪಮೇಯಗಳ ವಿಷಯವಾಗಿ ವಿಚಾರಿಸಿದಷ್ಟೂ

ವಿಸ್ತೃತ ವಿಷಯವಿದೆ; ಪ್ರಭೂತ ಪ್ರಜ್ಞೆಯಿದೆ. ಬಾಳಿನ ಅಗಾಧ ಆಳ ಇಲ್ಲಿ ಪ್ರದರ್ಶಿತ ವಾಗಿದೆ. ಒಂದು ಅಪ್ರಮೇಯ, ಇನ್ನೊಂದು ಅಪ್ರಮಾಣ; ಮತ್ತೊಂದು ಅಗೋಚರ. ಇದರಿಂದಾಗಿ ಇವುಗಳ ಎಣಿಕೆಯ ಕಾರ್ಯ ಅಪ್ರಸ್ತುತ ಎಂದು ಕವಿಯ ಹೇಳಿಕೆ; ಪ್ರಯತ್ನವೇಕೆಂದು ಕವಿಯ ಮಾರ್ಮಿಕವಾದರೂ ಹಾರ್ದಿಕ ಕೇಳಿಕೆ. ಫಲವಿಲ್ಲದ ಪ್ರಯತ್ನವೆಂದು ಹೇಳುವುದೇ ಕವಿಯ ಹೃದಯ ಎಣಿಕೆ.

"ಸೃಷ್ಟಿ ಸೌಂದರ್ಯ, ಸೃಷ್ಟೀಶಸೌಂದರ್ಯ-ಎಂದು ಎರಡು ಚೆಲುವುಂಟು. ಸೃಷ್ಟಿ ಸೌಂದರ್ಯ ಅಸತ್ಯ, ಅಶಿವ; ಸೃಷ್ಟೀಶ ಸೌಂದರ್ಯ ಸತ್ಯ,-ಶಿವ. ಸತ್ಯಂ ಶಿವಂ ಸುಂದರಂ –ಎಂದು ಸತ್ಯಸೌಂದರ್ಯೋಪಾಸಕರು ಹಾಡಿದರು, ನೋಡಿದರು; ನಲಿದಾಡಿದರು. ಸೃಷ್ಟಿಸೌಂದರ್ಯವ ದೃಷ್ಟಿಸಿದವರು 'ಯದ್ದೃಷ್ಟಂ ತನ್ನಷ್ಟಂ'–ಎಂದು ನುಡಿದರು, ನೊಂದರು."

ಶಿವಕವಿಯ ಸೌಂದರ್ಯೋಪಾಸನೆಯ ಸ್ವಾನುಭವವಿದು. ದೃಕ್ ದೃಶ್ಯಗಳ ಚೆಲುವಿನ ಸತ್ಯಾಸತ್ಯತೆಯ ಚಿತ್ತಾಕರ್ಷಕ ಚಿತ್ರವಿದು. ಕಾವ್ಯ ಮಾಧುರ್ಯದಲ್ಲಿ ದಿವ್ಯ ಸೌಂದರ್ಯವನ್ನು ಕುಂದಣಿಸಿದ ಕುಶಲತೆ ಕವಿಗುರುವಿನದು.

'ಕವಿಗುರು' ಎಂದು ಹೆಸರಾಂತ ಶ್ರೀ ಜ. ಚ. ನಿ. ಅವರ ವಾಙ್ಮಯ ವ್ಯಕ್ತಿತ್ವದ ರಹಸ್ಯವನ್ನೂ ಸ್ವಾರಸ್ಯವನ್ನೂ ಶೋಧಿಸುತ್ತಿರುವೆನು. ಶೋಧಿಸಿದಷ್ಟೂ ಅವರ ವಾಙ್ಮಯ ವ್ಯಕ್ತಿತ್ವ ವಾರಿಧಿಯಂತೆ ವಿಶಾಲವಾಗುತ್ತಲಿದೆ. ಅವರ ವಾಙ್ಮಯ ಸ್ವಾರಸ್ಯ ಸುಧೆಯಂತೆ ಹೆಚ್ಚುತ್ತಲಿದೆ.

ಶ್ರೀ ಜ. ಚ. ನಿ. ಅವರು ಮಹಾದಾನಿಗಳು. ಅವರು ನಾಡಿಗೆ ನಾಡಿಗರಿಗೆ ಇತ್ತ ಸಾಹಿತ್ಯದಾನ ಅಪಾರ; ಅಮರ. ಅಂತಹ ದಾನಗಳಲ್ಲಿ 'ಅಭಯವಾಣಿ' ಒಂದು! ಏನನ್ನಾದರೂ ದಾನ ಮಾಡಬಹುದು. 'ಅಭಯವಾಣಿ'ಯಂತಹ ಚಿನ್ಮಯ ರತ್ನವನ್ನು ದಾನಮಾಡುವುದು ತೀರ ಅಪರೂಪ. ಇದೊಂದು ದಿವ್ಯ ಚಿಂತಾಮಣಿ. ಅದೊಂದು ಸತ್ಯಸಾಧಕನ ಅನುಭಾವದ ಗಣಿ. ಅದೊಂದು ಹೃದಯವಾಣಿ. ಅದರಲ್ಲಿ ಮಾತನಾಡಿದುದು ಅವರ ಮುಖವಲ್ಲ, ನಾಲಗೆಯಲ್ಲ; ಮಾತಾಡಿದುದು ಅವರ ಹೃದಯ.

"ಏಳು ಕಂದಾ, ಎಚ್ಚರಾಗು ಕಂದಾ; ಏಕೆ ಅರಿವಿನ ರವಿ ಇನ್ನೂ ಮೂಡಲಿಲ್ಲವೆ? ಜಗಜೀವನದ ಜಡಜಾಡ್ಯ ಇನ್ನೂ ಕಳೆಯಲಿಲ್ಲವೆ ? ಹೃದಯಾಂಗಣದಿ ಹೊಂಬೆಳಗ ಹೊಳೆ ಹರಿಯಲಿಲ್ಲವೆ ? ಅಂತರಾಕಾಶದಲಿ ಸದ್ಭಾವ ಹಕ್ಕಿಗಳು ಹಾರಾಡುತ್ತಿಲ್ಲವೆ ? ಹಾಡುತ್ತಿಲ್ಲವೆ ? ಕಣ್ದೆರೆದು ಕಂದಾ, ಕಾಣುತಿದೆ ನೋಡು – ನಿನ್ನ ಹೃದಯದ ಚಿನ್ಮೂರ್ತಿ ! ಸನಿಹಕ್ಕೆ ಸಾರು ! ಸಲಿಗೆಯಲಿ ಹೇಳು ! ಸವಿಬೆಟ್ಟಿಯ ಕೇಳು ! ಏಳು ! ಎದ್ದೇಳು ಕಂದಾ !

ಹಾನಿಗೊಳಗಾಗದಿರು. ಹಾನಿ ಎರಡುಂಟು. ಆದಿಭೌತಿಕ ಹಾನಿ, ಆಧ್ಯಾತ್ಮಿಕ ಹಾನಿ. ಭೌತಿಕ ಭಾಗ್ಯದ ಹಾನಿ ಹಾನಿಯಲ್ಲ. ಆಧ್ಯಾತ್ಮಹಾನಿಯೇ ಹಾನಿ. ತುಂಬಿಬಾರದ ಹಾನಿ. ಇದನರಿದು ನೀನಾಗು ಧ್ಯಾನಿ; ನಿನ್ನಾತ್ಮ ಸಂಧಾನಿ; ನಿಜ ಜ್ಞಾನಿ !

ನೀನೆಂದಿಗಾಗಬೇಡ ಉಪಜೀವಿ; ನೀನಾಗು ಉಜ್ಜೀವಿ ! ನೀನಾಗು ಸ್ವಾನುಭಾವಿ,–ಸರ್ವಾದರ್ಶಜೀವಿ. ಎನ್ನುತ್ತಾರೆ ಶ್ರೀ ಜ. ಚ. ನಿ. ಅವರು. ಅದೆಂತಹ ಹೃದಯ ? ಅದೇನು ದಯ ? ಇದು ಹೃದಯವಾಣಿಯಲ್ಲದೆ ಮತ್ತೇನು ? ಇದು ಚಿಂತಾಮಣಿಯಲ್ಲವೇನು ? ಇದ್ದಕ್ಕಿಂತ ಹಿತೋಪದೇಶ ಬೇರುಂಟೆ ? ವಾಣಿಯ ಸಮ್ಮೋಹಕತೆಗೆ ಸೀಮೆ-ಯಿದೆಯೆ ? ಮಾತು ಜ್ಯೋತಿರ್ಲಿಂಗವಾಗಿ ಬೆಳಗಿದೆ. ಮನಸ್ಸು ಬಾಡದ ತಾವರೆಯಾಗಿ ಅರಳಿದೆ. ನರುಗಂಪ ಬೀರಿದೆ. ಮಧುರ ಮಕರಂದ ತುಂಬಿದೆ. ಬಾಳನ್ನು ಬಾನೆತ್ತರಕ್ಕೆ ಎತ್ತಿ ಎಂದೆಂದಿಗೂ ಬೆಳಗಿಸುವ ಸತ್ಯ ಸಂಧಾನ ಹೃದಯಾವಧಾನ ಹೊರಹೊಮ್ಮಿವೆ.

ಇರುಳು ಹಗಲಿನ ಮಿಲನ ಈ ಜೀವನ. ಈ ಇರುಳು ಬಾರದಂತೆ ಬಂದು ಮುಸಗದಂತೆ ಮಾಡಲು ಆದಾರಿಗೂ ಸಾಧ್ಯವಿಲ್ಲ. ಆದರೆ ಆಂತರಿಕವಾದ ಇನ್ನೊಂದು ಇರುಳಿದೆ. ಅದೇ ಅಜ್ಞಾನಾಂಧಕಾರ. ಅದು ಮನವನ್ನು ಮುತ್ತಿದ್ದರೆ ಹಗಲೂ ಇರುಳಾಗಿರುತ್ತದೆ. ಅಂತಹ ಮರವೆಯ ಮಬ್ಬಿನಿಂದ ಎಬ್ಬಿಸುತ್ತಾನೆ. ಮನವೆಂಬ ಮಗುವನ್ನು ಗುರು ತಂದೆ ! ಉದಯಿಸುತ್ತಾನೆ ಚಿನ್ಮಯ ಭಾನುವನ್ನು ! ಒಮ್ಮೆ ಮೂಡಿದರೆ ಮುಳುಗದಂತಹ ಭಾನುವನ್ನು ! ಹಾರಾಡಿಸುತ್ತಾನೆ ಸದ್ಭಾವ ಹಕ್ಕಿಗಳನ್ನು ! ಹಡುತ್ತಾನೆ ಹೃದಯಕ್ಕೆ ಅಚ್ಚಳಿಯದ ಹೊಂಬೆಳಕನ್ನು ! ಅರಳಿಸುತ್ತಾನೆ ಅರಿವಿನ ಅಚ್ಚಿಯನ್ನು, ತನ್ನ ಕಂದನಿಗೆ ಕಾಣಿಸುತ್ತಾನೆ ಹಾರ್ದಿಕ ಚಿನ್ಮೂರ್ತಿಯನ್ನು! ಹೇಳುತ್ತಾನೆ ಸಲ್ಲಿಗೆಯುಲಿ ಸಲ್ಲಾಪಿಸಲು ! ಸ್ವಾನ ಭಾವಿ-ಸರ್ವಾದರ್ಶ ಜೀವಿ ನೀನಾಗು ಎಂದು ಹಿತೋಪದೇಶವನ್ನೀಯುತ್ತಾನೆ. ಜೀವನಕ್ಕೊಂದು ಜ್ಯೋತಿಪಥವನ್ನು ತೋರುತ್ತಾನೆ ಆಧ್ಯಾತ್ಮಿಕ ಸತ್ಯಶಾಂತಿ ಲಾಭವನ್ನು ಒದಗಿಸುತ್ತಾನೆ.

ಈ ಅಭಯವಾಣಿ ವೇದವಾಣಿಗೆ ಹೊಯ್‌ಕೆಯ್ ಆಗಿದೆ. ಕತ್ತಲಿನಿಂದ ಬೆಳಕಿಗೆ ಕರೆದೊಯ್ದು ಸ್ವಸ್ವರೂಪ ಸಾಕ್ಷಾತ್ಕಾರವನ್ನು ಮಾಡಿಕೊಡುವ ಈ ಅಭಯವಾಣಿ ತಮಸೋಮಾಜ್ಯೋತಿರ್ಗಮಯ ಎಂಬ ಶ್ರುತಿಯ ಉಕ್ತಿಗಿಂತ ಇನ್ನೂ ಒಂದು ಹೆಜ್ಜೆ ಮುನ್ನಡೆದಿದೆ. ಬರೀ ಬೆಳಕಿನ ಲೋಕಕ್ಕೆ ಕರೆದೊಯ್ಯದೆ ಭಾವ ಮೂರ್ತಿಯನ್ನು ಸಾಕ್ಷಾತ್ಕರಿಸುವ ಸೈಪಿದೆ. ಹೆಚ್ಚುಗಾರಿಕೆಯಿದೆ ಆಂತರಿಕ ಅಪರೋಕ್ಷಾನುಭೂತಿ ಇದೆ.

ಬಾಳಿನಲ್ಲಿ ಯಾವುದನ್ನು ಗುರುತಿಸಬೇಕೋ ಯಾವುದನ್ನು ಗಳಿಸಬೇಕೋ ಏನಾಗಬೇಕೋ ಈ ಮೂರನ್ನು ಶ್ರೀ ಸನ್ನಿಧಿಯವರು ತಮ್ಮ ಈ ಮುಮ್ಮಾತಿನಲ್ಲಿ

ಮನೋಜ್ಞವಾಗಿ ಹೇಳಿದ್ದಾರೆ. ಈ ಪರಮ ಪ್ರಾಸಾದಿಕವಾಣಿ ಯಾರಿಗೆ ಪರಿತೃಪ್ತಿಯನ್ನೀಯದು? ಯಾರು ಉಜ್ಜೀವನಕ್ಕೆ ಉದ್ಯಮಿಸರು?

ಓ ಕಂದ ನೀನೊಂದು ಕಲರವದ ವೀಣೆ ! ನಾನೊಂದು
ಕಲೆಯುಳ್ಳ ಪಾಣಿ ! ಇದರಿಂದ ನುಡಿಸಲು ಹೊಮ್ಮಿದೆ ಈ ಅಭಯವಾಣಿ !
“ಓ ಶ್ರದ್ಧೆಯ ಶಿಶುವೆ ಸಕಲಕಲಾಗುರು ಕಾರುಣ್ಯವೇ ಒಂದು ಕಲ್ಪತರು.
ಅದನು ಗಳಿಸಲು ಮರೆಯದಿರು. ಅದನು ಬೆಳೆಸಲು ಬೇಸರಿಸದಿರು.
ಅದರ ಫಲಗಳು ಅಪರಿಮಿತ. ಅವುಗಳ ರುಚಿ ಅತಿ ಹಿತ; ಅಚ್ಚಳಿಯದ ಹಿತ.

ಮೊದಲು ಮಾತಿನಲ್ಲಿ ಅಭಯವಾಣಿಯು ನಿಚ್ಚಳ ನಿಲವನ್ನು ತೋರಿದ್ದಾರೆ. ಮಗುವಾದ ಮನವೇ ವೀಣೆ. ಅದರ ರವ ಕಲರವ. ಅದನ್ನು ನುಡಿಸುವ ಕೈ ಅನುಭವವುಳ್ಳ ಚೈತನ್ಯ. ಈ ವೀಣೆ ಈ ಪಾಣಿಗಳಿಂದ ಹೊಮ್ಮಿದೆ ಈ ಅಭಯವಾಣಿ.

ಎರಡನೆಯ ನುಡಿಯಲ್ಲಿ ಆ ಚೈತನ್ಯಗುರುವಿನ ಕಾರುಣ್ಯವನ್ನು ಕಲ್ಪತರುವಿಗೆ ಹೋಲಿಸಿ ಹೇಳಿ ಅದರ ಫಲಗಳೆನಿತು, ಅವುಗಳ ರುಚಿ ಎಂತಹದು ? ಎಂಬುದನ್ನು ತಿಳಿಸಿ ಅವನ್ನು ಬಿಡದೆ ಸವಿಯಲು ಶ್ರದ್ಧೆಯ ಶಿಶುವಿಗೆ ಕಟ್ಟಪ್ಪಣೆಯಾಗಿದೆ.

ಇದೇ ಶೈಲಿ, ಇದೇ ಪ್ರಭಾವ, ಇದೇ ಸವ್ಯತೆ-ಭವ್ಯತೆಯುಳ್ಳ ಎರಡನೆಯ ಭಾಗವೂ ಪ್ರಕಟವಾಗಿದೆ. ಈ ಎರಡು ಭಾಗಗಳೂ ಕೊರಡು ಕೊನರಿಸುವ ಅದ್ಭುತ ಚೈತನ್ಯ ಪೂರ್ಣ ಸಾಹಿತ್ಯ ಕೃತಿಗಳು. ಅಲ್ಲಿ-ಇಲ್ಲಿನ ಉಸುರುಕ್ಕೊ ಅಭಯವಾಣಿಗಳು !

೪

## ಕವನ ಪುಷ್ಪ ಪರಿಮಳ

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ. ಅವರ ಕವನ ಸಂಗ್ರಹಗಳು ಈ ಅವಧಿಗೆ ಆಯ್ದು ಹೊರಬಂದಿವೆ. ಕನ್ನಡ ನುಡಿ ಬನದಲ್ಲಿ ಕಂಗೊಳಿಸಿವೆ. ಕಂಪು ಸೂಸಿವೆ.

ವಾಙ್ಮಯಾಕಾಶದಲ್ಲಿ ‘ಹೊನ್ನು ಹಕ್ಕಿ’ ರೆಕ್ಕೆಗೆದರಿ ಹಾರಾಡುತ್ತಿದೆ. ರನ್ನಚುಕ್ಕಿ ಮಿರ್ರನೇ ಮಿಂಚುತಿದೆ. ಕನ್ನುಡಿಯ ಬನದಲ್ಲಿ ಹೂಗೊನೆ ಅರಳಿ ನರುಗಂಪ ಹರಡಿದೆ. ಕವನ ರಸದೂಟದಲ್ಲಿ ‘ಹಾಲ್ಜೇನೆ’ ತನ್ನ ಮಾಧುರ್ಯವನ್ನು ಊಡಿದೆ. ಋಷಿಕವಿಯ ರಸಮಯ ಬಾಳ ಬಗೆಯನ್ನು ‘ನಿವೇದನ’ವು ನಿರೂಪಿಸಿದೆ. ವೇದನವನ್ನು ನಿವಾರಿಸಿದೆ.

ಸನ್ನಿಧಿಯವರ ಪಂಚ ಕವನ ಸಂಗ್ರಹಗಳ ಪರಿಚಯವನ್ನು ಸಂಗ್ರಹವಾಗಿ ಮಾಡಲಾಗುತ್ತದೆ.

೧. **ಹೊನ್ನು ಹಕ್ಕಿ** : ಇದು ಇವರ ಪ್ರಥಮ ಕವನ ಸಂಗ್ರಹ ಇದು ರಲ್ಲಿ ೪೪ ಕವನಗಳಿವೆ. ಇದರ ಹೆಸರೇ ಹೆಚ್ಚು ಹೃದಯಾಕರ್ಷಕವಾಗಿದೆ. ಜೀವನಕ್ಕೆ ಮೂಲಭೂತವಾದ ಜೀವವನ್ನು ಉದ್ದೇಶಿಸಿ ಉದಯವಾಗಿದೆ. ಉದ್ದೀಪಿತವಾಗಿದೆ. ಭವಕ್ಕೆ ಬಂದ ಅಂತೆಯೇ ದೇಹಕ್ಕೆ ಒಂದ ಜೀವಾತ್ಮನ ರೂಪುರೇಶಗಳ ಬಗೆಗೆ ಬಾಳು ಬದುಕುಗಳ ಬಗೆಗೆ, ಧರ್ಮ ಕರ್ಮಗಳ ಬಗೆಗೆ ಸ್ಥಿರ-ಅಸ್ಥಿರಗಳ ಬಗೆಗೆ ಜಿಜ್ಞಾಸೆ ನಡೆದಿದೆ. ಅರಿವ ಅಭಿಲಾಶೆ ಅಭಿವ್ಯಕ್ತವಾಗಿದೆ.

"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" — ಎಂಬೀ ಔಪನಿಷದ್ವಾಣಿಯ ಪ್ರತಿಬಿಂಬವಾಗಿ 'ಕನಕಪಕ್ಷಿ' ಕವನವಾಗಿ ಕಾಯಗೊಂಡಿದೆ. ಉಜ್ಜೀವನದ ಸಂವೇದನೆ ಇದರಲ್ಲಿ ಹದಗೊಂಡಿದೆ ಜೀವನದ ಕರ್ತವ್ಯ ಕೈಯಿಂದ ಕಳಚಬಾರದೆಂದು ಜೀವನದ ಆಯುಷ್ಯ ನಿರ್ಥಕವಾಗಬಾರದೆಂದು ಬಿತ್ತರಿಸಿ ಕವನ ಕೃತಾರ್ಥವಾಗಿದೆ. ಬಂದ ಜೀವ ಸಾರ್ಥಕವಾಗಬೇಕಲ್ಲದೆ ವ್ಯರ್ಥವಾಗಬಾರದು. ಅಲ್ಪಾರ್ಥಕ್ಕೆ ಸಲ್ಲಬಾರದು. ಎಂಬ ಕವಿಯ ಹೃದಯ ಹಂಬಲ ಕವನವಾಗಿ, ಜೀವನ ದರ್ಶನವಾಗಿ ರೂಪಿತವಾಗಿದೆ. ಇಡೀ ಬಾಳಿನ ನೋಟ ಈ ಕವನದಲ್ಲಿದೆ.

ಬಸಿರ ಉಸಿರು ಅದೊಂದು ಹೊನ್ನು ಹಕ್ಕಿ. ಮೈಯೆಂಬ ಮಣ್ಣುಮರದಲ್ಲಿ ಅದು ಬಂದು ಕುಳಿತಿದೆ. ಕುಳಿತ ಕಾಲ ಕಿಂಚಿತ್ ! ಕಲಿತು ಬಂದ ಕಳವಳ ಬೃಹತ್ ! ಕಣ್ಣಿನಲ್ಲಿಯೇ ಅದಿದ್ದರೂ ಕಣ್ಣೇ ಅದಾಗಿದ್ದರೂ ಕಾಣದಾಯಿತು. ಹಾಗಾದರೆ ತನ್ನ ತಾನರಿಯಬಹುದೆ?

ಮಣ್ಣಿಗೂ ಹೊನ್ನಿಗೂ ಅದೆಷ್ಟು ಅಂತರ ? ಮಣ್ಣೇ ಹೊನ್ನಾದರೂ ಹೊನ್ನಿನ ಬಣ್ಣ ಬೆಲೆ ಹೆಚ್ಚಿದವು. ಜಡ ಹೊನ್ನಿನ ಮಾತಿದು. ಆದರೆ ಈ ಕವನದಲ್ಲಿ ಅಜಡ ಹೊನ್ನಿನ ಸುದ್ದಿಯಿದೆ.

ಹೊನ್ನಿಗಿರುವುದು ಎರಡು ಮುಖ. ಒಂದು ಬಣ್ಣ, ಇನ್ನೊಂದು ಬೆಲೆ. ಜಡ ಹೊನ್ನಿನಲ್ಲಿ ಇವೆರಡನ್ನೂ ಗುರುತಿಸಬಹುದು. ಆದರೆ ಆ ಅಜಡ ಹೊನ್ನಿನಲ್ಲಿ ಗುರುತಿಸುವುದು ಕರಕಷ್ಟ. ಅದರ ಬಣ್ಣ ಅಗೋಚರ. ಅದರ ಬೆಲೆ ಅಪಾರ. ಆದರೆ ಅದು ಹೊನ್ನಿನಂತೆ ಸರ್ವಶ್ರೇಷ್ಠ. ಅದರ ಅಣು ಅಣುವಿಗೂ ಬೆಲೆಯಿದೆ.

ಅದು ವಾಙ್ಮನಗಳಿಗೆ ಅತೀತವಾದಂತೆ ಚರ್ಮ ಚಕ್ಷುವಿಗೂ ಅತೀತ. ಆದರೂ ಅದರ ಅನುಭವ ಬಾಳಿಗಿದೆ. ಅದರಿಂದಲೇ ಇರುವು. ಅದರಿಂದಲೇ ಅರಿವು. ಅದರಿಂದಲೇ ಅಚ್ಚಳಿಯದ ಆನಂದ.

ಅದನರಿಯದ ಬಾಳು ಬಾಳಲ್ಲ. ಆ ಬಾಳಿನಲ್ಲಿ ಬೆಳಕಿಲ್ಲ. ಆ ಪರಾನಂದ ಸ್ವರೂಪ ಚೈತನ್ಯ ಧರ್ಮದಲ್ಲಿ ಮುನ್ನಡೆಯುದ ಜೀವನ ಮುಗ್ಗರಿಸುತ್ತದೆ. ಮೂರು ಹೆಜ್ಜೆಯಲ್ಲಿಯೂ ಮುಗ್ಗರಿಸುತ್ತದೆ. ಸತ್ ಅಸತ್ ಆಗುತ್ತದೆ. ಚಿತ್ ಅಚಿತ್ ಆಗುತ್ತದೆ. ಸುಖ ದುಃಖವಾಗುತ್ತದೆ. ಇಂತಾದಾಗ ಸ್ಥಿರ ಅಸ್ಥಿರವಾಗುತ್ತದೆ. ಈ ಜೀವನಾನುಭೂತಿಯನ್ನು 'ಕನಕ ಪಕ್ಷಿ' ಕವನ ಸಾರುತ್ತಿದೆ ಭಾವ ಪೂರ್ಣ ಭಾಷೆಯಲ್ಲಿ ಕವಿ ತನ್ನ ಅನುಭೂತಿಯನ್ನು ಕವನದಲ್ಲಿ ಅಚ್ಚೊತ್ತಿದ್ದಾನೆ; ಅಭಿವ್ಯಕ್ತಗೊಳಿಸಿದ್ದಾನೆ.

ಮೃಣ್ಮಯ ಪ್ರಪಂಚದಲ್ಲಿ ಜೀವನವೊಂದು ಹಿರಣ್ಮಯ. ಜೀವವದು ಚಿನ್ಮಯ ಅಂತಾದಾಗ ಅದೇ ಆನಂದಮಯ.

ಹಕ್ಕಿ ಹಾರಲೇ ಬೇಕು; ಹಾರಲಿ. ಆದರೆ ಅದರ ದೃಷ್ಟಿ ಅಧೋಮುಖವಾಗಿರಬಾರದು. ಊರ್ಧ್ವಮುಖವಾಗಿರಬೇಕು. ಆ ಊರ್ಧ್ವ ದೃಷ್ಟಿಯ ದೀಪ್ತಿ ದಿವ್ಯವಾಗಿ ನವ್ಯವಾಗಿ ಸಿಡುಗಾಲ ಬೆಳಗುತ್ತಿರಬೇಕು. ಜೀವನ ವೃಕ್ಷ ಜೀವಪಕ್ಷಿಗೆ ರಸಫಲವನ್ನೀಯುವಂತಾಗಬೇಕು.

ಬಾಳದೇರನ್ನು ಎಳೆವ ಪಕ್ಷಿ ಪುಷ್ಟವಾಗಿರಬೇಕೆಂಬುದೇ ಪರಿಶುದ್ಧ ಸಂಕಲ್ಪ. ಪರಮುವಾಗಬೇಕೆಂಬುದೇ ಪುರುಷ ಪ್ರಯತ್ನ. ಇವಾಗಬೇಕಾದರೆ ಸರ್ವಸಾಮಾನ್ಯ ಜೀವನದ ಆಶೆ-ಆಕಾಂಕ್ಷೆ, ಸಂಕಲ್ಪ-ವಿಕಲ್ಪ, ಶೋಕ-ಮೋಹ; ಪಾಪ–ಪುಣ್ಯ, ಮಾನಾಪಮಾನ ಮುಂತಾದ ದ್ವಂದ್ವಗಳನ್ನು ದಾಟಿ ನಿಲ್ಲಬೇಕು. ನಾಟಿಸುವ ರೂಪು ರುಚಿಗಳ ಗೆಲ್ಲಬೇಕು. ಸಾಟಿಯಿಲ್ಲದ ಸಂತೃಪ್ತಿಗೆ ಸಲ್ಲಬೇಕು.

ಮರ್ತ್ಯದ ಪ್ರತಿಮಾನವನ ಮೃಣ್ಮಯ ಹಂಜರದಲ್ಲಿ ಹಿರಣ್ಮಯ ಹಕ್ಕಿಯಿದೆ. ಹಕ್ಕಿ ಹಾರದ ಮುನ್ನ ಹಂಜರ ಹೊನ್ನಾಗಬೇಕು. ಹೊನ್ನಾಗಿಸುವ ಸದ್ಧರ್ಮವೆಂಬ ಸ್ಪರ್ಶಮಣಿಯ ಸಂಪಾದಿಸಬೇಕು.

ಅಜಡವಾದ ಈ ಹೊನ್ನ ಹಕ್ಕಿಗೂ ಎರಡು ರೆಕ್ಕೆಗಳಿವೆ. ಕ್ರಿಯೆ ಜ್ಞಾನಗಳೇ ಆ ಹಕ್ಕಿಯ ರೆಕ್ಕೆಗಳು. ಅವುಗಳಿಂದ ಅದು ಊರ್ಧ್ವಗಾಮಿಯಾಗಿ ಹಾರಬಲ್ಲುದು. ಪರಿಪೂರ್ಣದೆಡೆಗೆ ನಿಲುಕಬಲ್ಲದು.

'ಕನಕ ಪಕ್ಷಿ' ಕವನವನ್ನು ರಚಿಸಿದ ಕವಿಯ ಸ್ವಾನುಭೂತಿಯಲ್ಲಿ ಸತ್ವವಿದೆ. ಸ್ವಯಂಪ್ರತಿಭೆಯಿದೆ. ಕವಿ ಜೀವನದಲ್ಲಿ ಜಾಗ್ರತನಾಗಿ ಈ ಕವನವನ್ನು ಹಾಡಿದ್ದಾನೆ. ಸಹಜ ಜೀವನ ದರ್ಶನವನ್ನೂ ಮಾಡಿದ್ದಾನೆ.

ಹೆಸರಿಸುವುದರಲ್ಲಿ ಜೀವ ಸೌಂದರ್ಯವನ್ನು ಕವಿ ತೋರಿದ್ದಾನೆ. ಜತೆಗೆ ಭಾವ ಸೌಂದರ್ಯವನ್ನೂ ಭಾಷಾ (ಕಾವ್ಯ) ಸೌಂದರ್ಯವನ್ನೂ ಮೇಳವಿಸಿದ್ದಾನೆ. ಇದೊಂದು ಜೀವನ ತತ್ವಗೀತೆ; ಸತ್ವಪ್ರತೀತೆ!

ದೇಹಾತ್ಮಗಳು ಕೂಡಿ ಅಗಲುವುದು ಸಹಜ. ಆದರೆ ಅಗಲುವ ಮುನ್ನ ಆಚರಿಸುವ ಅನುಭವಿಸುವ ಮಾರ್ಗ ಮತ್ತು ಸುಖ ದುಃಖ ಸಹಜವಾಗಿಲ್ಲ. ಸಹಜ ವಾಗಬೇಕೆಂಬ ಬಯಕೆ ಕವಿಗೆ. ಜೀವಿಸುವ ಅವಧಿಯಿಂದಲೂ ವಂಚಿತನಾಗಬಾರ ದೆಂಬ ಹಂಚಿಕೆ ಕವಿಗೆ ! ಮಿಗಿಲಾಗಿ ಜೀವನ ಅರ್ಥಪೂರ್ಣವಾಗಬೇಕೆಂಬ ಗ್ರಹಿಕೆ ಕವಿಗೆ ! ವಾಸ್ತವ ಅನುಭವ ಅಳವಡಬೇಕೆಂಬ ಎಣಿಕೆ ಕವಿಗೆ !

ಅಜ್ಞಾನ ಅನ್ಯಾಯ ಅನೀತಿ ಅತಿರತಿ ಅತ್ಯಾಶೆಗಳ ಬಲೆಯಲ್ಲಿ ಬಿದ್ದ ವನು ಜ್ಞಾನ ನ್ಯಾಯ ನೀತಿ ವಿರತಿ ನಿರಾಶೆಗಳ ಬಯಲ ಬೆಳಕಿಗೆ, ಸ್ವಾತಂತ್ರ್ಯ ಸಂಚಾರಕ್ಕೆ ಬರುವುದು–ಬಂದು ಬಾಳುವುದು ತುಂಬಾ ಕಷ್ಟ ! ಬಾಳದಿದ್ದರೆ ಭವ ಭವಾಂತರಕ್ಕೆ ಬರುವ ಸಂಕಟ ! ಈ ದ್ವಂದ್ವಸಂಧಿ ಸಮಸ್ಯೆಯನ್ನರಿತು ಕವಿ ಶುದ್ಧ ಜೀವನದ ಹಂಬಲವನ್ನು ಹೊಮ್ಮಿಸಿದ್ದಾನೆ. ಕವಿಯ ಅವಧಾನ ಜೀವನದ ಭಾವಾ ಸಕ್ತಿಯೇ 'ಕನಕ ಪಕ್ಷಿ' ಕವನವಾಗಿದೆ. ಸ್ವಕೀಯವೋ ಪರಕೀಯವೋ ಆದ ಬಾಳಿನ ಕಹಿ ಮಾತಿನಲ್ಲಿ ಮಿಂಚಿದೆ. ಕವನಕೃತಿಯಲ್ಲಿ ಚಿತ್ರಿತವಾಗಿದೆ. ಸತ್ಯ ಸಾಧಕನಿಗಿರಬೇಕಾದ ತೀವ್ರಾಸಕ್ತಿ ತತ್ತ್ವಾಸಕ್ತಿ ಸ್ಥಿರಜೀವನಾಸಕ್ತಿ ಈ ಕವನದಲ್ಲಿ ಮಡುಗಟ್ಟಿ ನಿಂತಿವೆ.

ಕವಿಭಾವ ಜೀವಿ. ಅಂತೆಯೇ ಈ ಕವನದಲ್ಲಿ ಕವಿಯ ಭಾವುಕತೆ ಬಾನಿನೆತ್ತ ರಕ್ಕೇರಿದೆ. ಆ ಭಾವುಕತೆಗೆ ಕವಿ ತನ್ನ ಅನುಭವದ ನಾವೀನ್ಯತೆಯನ್ನು ಜೋಡಿಸಿ ದ್ದಾನೆ. ಶಿವಸೌಂದರ್ಯದ ಶರದಶ್ಯತ ಜೀವನದ ಅಭೀಪ್ಸೆಯನ್ನು ಅಳವಡಿಸಿದ್ದಾನೆ.

ತನ್ನ ಹೃದಯಗೂಡಿನಿಂದ ಹಾರಿಹೋದ ಹೊನ್ನ ಹಕ್ಕಿಗಾಗಿ ಕವಿ ಹೃದಯ ಕಳವಳಿಸಿದೆಯಾದರೂ ಹೃದಯಗೂಡು ಬರಿದಾಗಿಲ್ಲ. ಬೆಳ್ಳಕ್ಕಿಯಿಂದ ಭರಿತವಾಗಿದೆ. ಅಂತೆಯೇ ಅದು ಆ ಹೊನ್ನು ಹಕ್ಕಿಗಾಗಿ ಹಂಬಲಿಸಿದೆ. ಜೀವನದ ದುರ್ಗತಿಯನ್ನು ನೆನೆಯುವುದರಲ್ಲಿಯೇ ಜೀವನ ಸುಗತಿ ಸ್ಪೃಹಣೀಯವಾಗಿದೆ. ಶುದ್ಧ ಜೀವನಾಶೆಯ ಧ್ವನಿ ಅನುರಣಿತವಾಗಿದೆ.

ಹಕ್ಕಿಯ ಹಾರುವಿಕೆಗೆ ಎರಡು ಮುಖಗಳಿವೆ. ಒಂದು ಸಂಚಲನ, ಇನ್ನೊಂದು ಸಂಪಾದನ. ಇವೆರಡಕ್ಕೂ ಎರಡೆರಡು ಮುಖಗಳಿವೆ. ಸಂಚಲನ ಅಧೋಮುಖ ಊರ್ಧ್ವಮುಖವೆಂದು ಇಬ್ಬಗೆ. ಸಂಪಾದನ ಅನಿತ್ಯ ಅಸತ್ಯ ಸಂಪಾದನ ಮತ್ತು ನಿತ್ಯಸತ್ಯ ಸಂಪಾದನ ಎಂದು ಇತ್ತೆರ.

ಹಾರುವ ಹಕ್ಕಿ ಕೆಳಕ್ಕೆ ಇಳಿಯಬಾರದು. ಕೆಳಕ್ಕೆ ಇಳಿದರೂ ಕ್ರಿಯೆಗೆ ತಪ್ಪ ಬಾರದು. ಕೆಳಕ್ಕಿಳಿಯುವುದು ಭೋಗ. ಮೇಲಕ್ಕೇರುವುದು ಯೋಗ. ಮೇಲಕ್ಕೇರಿ ಸತ್ಯಶುದ್ಧವಾದ ನಿತ್ಯವಾದ ಶಿವಯೋಗವನ್ನು ಸಂಪಾದಿಸಬೇಕೆಂಬ ಹೆಬ್ಬಯಕೆ ಕವಿ ಗುರುವಿಗಿದೆ.

'ಕನಕ ಪಕ್ಷಿ'ಯಲ್ಲಿ ಜೀವನೇ ಹಕ್ಕಿ. ಆ ಹಕ್ಕಿಯ ಧರ್ಮಾಧರ್ಮಗಳ ಅಭಿವ್ಯಕ್ತಿಯಿದೆ. ಈ ಕವನ ಸೃಷ್ಟಿಗೆ ವ್ಯಷ್ಟಿ ಅನುಭವವೊಂದೇ ಆಲಂಬನವಾಗಿಲ್ಲ; ಜತೆಗೆ ಜನತೆಯ ಜೀವನಾನುಭವವನ್ನೂ ಬಳಸಿಕೊಂಡಿದೆ. ಇದರಿಂದಾಗಿ ಈ ಕವನ ಜಾಗತಿಕ ವಿಶಾಲ ಕ್ಷೇತ್ರವನ್ನು ಸಂಗಳಿಸಿಕೊಂಡಿದೆ. ಹೀಗಿದ್ದರೂ ಕವಿಗುರು ಸ್ವಜೀವನ ಕವನವನ್ನಾಗಿಸಿದುದರಲ್ಲಿ ಒಂದು ಕುಶಲತೆಯಿದೆ. 'ಪರೋಪದೇಶೇ ಪಾಂಡಿತ್ಯಂ' ಎಂಬ ಆಕ್ಷೇಪಣೆಯಿಂದ ದೂರಾಗಿರುವ ದೂರದೃಷ್ಟಿ ಕವಿಗುರುವಿನಲ್ಲಿದೆ. ಓದುಗರಿಗೆಲ್ಲ ಸ್ವಾನುಭವವನ್ನು ನೀಡುವ ಶಕ್ತಿ ಕವನಕ್ಕಿದೆ. ಸರ್ವರ ಸಮಗ್ರ ಜೀವನದಲ್ಲಿ ಸಂದು ಹೋಗುವ ಪ್ರಾಕೃತಿಕ ಪೂರ್ಣ ಚಿತ್ರ ಈ ಕವನದಲ್ಲಿದೆ. ಇಳೆಯ ಬಾಳಿನ ಎಳೆ ಎಳೆಯನ್ನೂ ಎತ್ತಿ ತೋರಿದೆ ಈ ಕವನಸೃಷ್ಟಿ! ಜಗದ ಬಾಳಿನಲ್ಲಿ ಜರಗಿ ಹೋದುದರ ಸತ್ಯ ಚಿತ್ರ ಇದರಲ್ಲಿದೆ. ಮನದ ಮಿಡಿತ, ಹೃದಯ ತುಡಿತ, ಕರುಳ ಕುದಿತ, ಉಸಿರ ನೆಗೆತಗಳ ಸರಳಿಕೆಯನ್ನು ಹೃದಯ ಸ್ಪರ್ಶಿಯಾಗಿ ತೋಡಿದೆ ಈ ಹಾಡು. ಧ್ಯೇಯ ಧೋರಣೆಗಳಿಲ್ಲದೆ ಬರಿದೆ ಬಾಳಿ ತೊಳಲಿ ಹೋದ ಹೋಗುವ ಜೀವಗಳನ್ನು ಕಂಡು ಕವಿಗುರುವಿನ ಕರುಳು ಕಂದಿದೆ. ಕೆಳಕ್ಕಿಳಿವ ಹಕ್ಕಿಯನ್ನು ಕಂಡು ಕವಿಮನ ನೊಂದಿದೆ. ಕೊರಗು ಕಂಡ ಕೊರಳು ಹೀಗೆ ಹಾಡಿದೆ: "ಕನಕ ಪಕ್ಷಿ, ಕಣ್ಣುಮುಂದೆ ಹಾರಿಹೋಯ್ತು; ಮನವೆ ಸಾಕ್ಷಿ, ಬಣ್ಣವೊಂದು ತಿಳಿಯದಾಯ್ತು."

ಪೂರ್ವ ಪುಣ್ಯದಿಂದ ಸಿಕ್ಕ ಹಕ್ಕಿ ಅಂತರ್ದೀಶಹದಲ್ಲ; ಹೊನ್ನು ಹಕ್ಕಿ. ಅಂತಹ ಹದು ಹೃದಯದಿಂದ ಹಾರಿಹೋದರೆ ಆಗುವ ನಿರಾಶೆ ಅಷ್ಟಿಷ್ಟಲ್ಲ. ಅದರಲ್ಲಿಯೂ ಕಣ್ಣು ಮುಂದೆ ಹಾರಿಹೋದರೆ ಆಗುವ ಅಳಲು ಅಳತೆಗೋಲಿಗೆ ಎಟಕುವುದಲ್ಲ. ಕಳೆದುಕೊಂಡವನು ಕಣ್ಣಿಲ್ಲದ ಕುರುಡನಲ್ಲ; ಕಣ್ಣಿದ್ದಾತ. ಕಣ್ಣಾರೆ ಕಂಡು ಸಹಿಸುವುದೆಂದರೆ ಸಾಹಸದ ಕೆಲಸ. ಬರೀ ಕಣ್ಣೊಂದೇ ಕಂಡಿದೆಯಂತಲ್ಲ;–ಮನವೂ ಕಂಡಿದೆ. ಅದು ಹೊನ್ನು ಹಕ್ಕಿ ಎಂದು ಏನೋ ಹೇಳುವೆವು–ಆದರೆ ಅದರ ನೈಜ ವರ್ಣದ ಅರಿವಾಗಲಿಲ್ಲ. ಕವಿಗುರು ಸ್ವಾನುಭವವನ್ನು ಲಯಬದ್ಧವಾದ ನಯಸಿದ್ಧವಾದ ನುಡಿಗಳಲ್ಲಿ ನುಡಿದು ಕಾವ್ಯಪಾಕವನ್ನು ಸಿದ್ಧಗೊಳಿಸಿದ್ದಾರೆ. ಸ್ವಾನುಭವದ ಶ್ರೀಮಂತಿಕೆಯನ್ನು ಈ ಪದ್ಯದುದ್ದಕ್ಕೂ ಪ್ರದರ್ಶಿಸಿದ್ದಾರೆ.

ಹೃದಯದಲ್ಲಿರುವ ಹಿರಣ್ಮಯ ಪುರುಷನಿಗೆ ಹಕ್ಕಿ ರೂಪವನ್ನು ಕೊಟ್ಟು ಕವಿಗುರು ತನ್ನ ನಿಸರ್ಗ ಪ್ರೇಮವನ್ನು ಪ್ರಕಟಿಸಿದ್ದಾನೆ. ಅಂತೆಯೆ ಹಕ್ಕಿಗೆ ಕೊಟ್ಟ ವಿಶೇಷಣ ವಿವೇಕ ಪೂರ್ಣವಾಗಿದೆ. ವಿಶೇಷಣ ವಿಶೇಷಭಾವವುಳ್ಳದ್ದಾಗಿದೆ. ಹಕ್ಕಿ ಹಾರಿಹೋದುದಕ್ಕೆ ಬೇಗುದಿಗೊಂಡ ಕವಿ ಮನಸ್ಸು ಜತೆಗೆ ಬೆರಗು ಬೆಕ್ಕಸಗೊಂಡಿದೆ. ಜಿಜ್ಞಾಸೆಯನ್ನು ತಳೆದಿದೆ. ಅಂತಃಕರಣಗಳೆಲ್ಲ ಅಳಲಿವೆ.

'ಕನಕ ಪಕ್ಷಿ' ಈ ಮಾತು ಅಪ್ರತಿಮನಾದ ಆ ವಸ್ತುವಿಗೆ ಪ್ರತಿಮಾ ಪ್ರಸಾಧನ ಪ್ರಾಜ್ಞತೆಯನ್ನು ಪ್ರಕಟಿಸಿದೆ. ಪ್ರತಿಮೆ ಪ್ರಜ್ಞಾಲೋಕಕ್ಕೆ ಸಲ್ಲತಕ್ಕುದು. ದೃಶ್ಯ ಪ್ರಪಂಚಕ್ಕೆ ಸಲ್ಲತಕ್ಕದ್ದಲ್ಲ

ಹೊನ್ನು ಹಕ್ಕಿ ಹಾರಿಹೋದುದು ಕಣ್ಣಮುಂದೆ ! ಇಲ್ಲಿದೆ ಕವಿಯ ಕೌಶಲ್ಯದ ಆಳ. ಮೃತಾನಂತರದ ಮಾತಲ್ಲ ಇದು. ಕ್ರಿಯಾಶೂನ್ಯತೆಯ ಮಾತಿದು. ಜೀವನ ಕ್ರಮದಲ್ಲಿ ಕ್ರಿಯೆಯಿಲ್ಲ. ಕ್ರಿಯಾಶಕ್ತಿಯಲ್ಲಿ ಚೇತನವಿಲ್ಲ ಎಂಬುದನ್ನು ಕವಿ ಕಾಣಿಸ ಹೊರಟಿದ್ದಾನೆ. ಕರಸ್ಥಲಕ್ಕೆ ಬಂದಿದೆ. ಕರದಲ್ಲಿ ಕ್ರಿಯೆಯಾಗಿ ಕರಿಗೊಂಡಿಲ್ಲ. ಕರ ಕಮಲ ಮಕರಂದಾನಂದವನುಂಡಿಲ್ಲ. ಕಣ್ಣಿಗೆ ಕಾಣಿಸಿಕೊಂಡಿದೆಯಾದರೂ ಬಣ್ಣದ ಅರಿವಾಗಿಲ್ಲ. ಕಪ್ಪು ಬಣ್ಣವೆಂದರೆ ಅದು ಕಂತೆಯ ಬಣ್ಣವಲ್ಲದೆ ಅದರೊಳಗಿರುವ ಕನಕಪಕ್ಷಿಯ ಬಣ್ಣವಲ್ಲ. ದೇವತ್ವಾನುಭವ ಜೀವನದಲ್ಲಿ ಬರಲಿಲ್ಲ. ದೈವಶಕ್ತಿ ದೇಹಿಯಲ್ಲಿ ಅಳವಡಲಿಲ್ಲ. ಸಹಜವಾದ ತನ್ನ ದೇವತ್ವ ತನ್ನಲ್ಲಿಲ್ಲದ ಮೇಲೆ ತಾನ ದನ್ನು ಅನುಭವಿಸಿದ ಮೇಲೆ ಅದು ಹಾರಿಹೋದಂತೆ! ಅದು ತನ್ನಲ್ಲಿ ಇದ್ದೂ ಇಲ್ಲದಂತೆ! ಮರದಿಂದ ಹಕ್ಕಿಹಾರಿ ಬಾನಾಡಿಯಾಗಿದ್ದರೂ ಮರ್ತ್ಯಕ್ಕೆ ಹೊರಗಿಲ್ಲ. ಪ್ರಪಂಚ ಪರಿಸರವನ್ನು ಮೀರಿಲ್ಲ.

ಕವಿಯ ಕಾವ್ಯ ಪ್ರಜ್ಞೆ ಅದನ್ನು ಪ್ರತಿಮೆಯನ್ನಾಗಿ ಪ್ರಸಾದಿಸಿದೆ. ಅದು ಕವಿಗುರು ಕಂಡ ಕಳೆಯ ಅನುಭವ. ಬಿಂದು ನಾದಗಳ ಅನುಭವ. ತನ್ನ ಆ ಅನು ಭವವನ್ನು ಕಾವ್ಯ ಸಂಕೇತದಲ್ಲಿ ಕಾಣಿಸ ಬಯಸಿದ್ದಾನೆ. ಕಾವ್ಯಚಿತ್ರದಲ್ಲಿ ತೋರ ತಿಳಿಸಿದ್ದಾನೆ. ಕಾರಣಗುಣ ಕಾರ್ಯದಲ್ಲಿ ಇಲ್ಲದ್ದನ್ನು ಕಂಡು ಕನಿಕರಗೊಂಡಿದ್ದಾನೆ. ಜೈವಿಕ ಅಲ್ಪತ್ವಕ್ಕಾಗಿ ದೈವಿಕ ಅಭಾವಕ್ಕಾಗಿ ಅನುತಾಪಗೊಂಡಿದ್ದಾನೆ. ಹುಲಿ ಇಲಿ ಯಾಗಬಾರದು. ಅಂತೆಯೇ ಹೊನ್ನು ಹಕ್ಕಿ ಹಿತ್ತಾಳೆಯ ಹಕ್ಕಿಯಾಗಿ ಬಾಳ ಬಾರದು. ಜೀವಕಳೆಯಲ್ಲಿ ದೇವಕಳೆ ಮೂಡಿ ಬರಬೇಕೆಂಬುದೇ ಕವಿಗುರುವಿನ ಆಶಯ. ಅಂತೆಯೇ ಹೊನ್ನಿನ ವಿಶೇಷಣವನ್ನು ಕವಿ ಕೊಟ್ಟಿದ್ದಾನೆ. ಆಧಾರದಿಂದ ಸಹಸ್ರಾರದ ಬ್ರಹ್ಮರಂಧ್ರಕ್ಕೇರಬೇಕೆಂಬುದನ್ನು ಸೂಚಿಸಲು ಪಕ್ಷಿಯೆಂಬ ಪ್ರತಿಮಾ ವಿಧಾನವನ್ನು ತೋರಿದಾನೆ. ಭಾವನಾತ್ಮಕ ರೂಪವನ್ನು ವೆಗ್ಗಳಿಸಿದಾನೆ.

ಬರೀ ಭೌತಿಕದಲ್ಲಿ ಐಂದ್ರಿಕದಲ್ಲಿ ಬೆರತಿರುವ ಜೀವ ತನ್ನ ಹೊನ್ನುತನವನ್ನು ಹೋಗುಟ್ಟುಕೊಳ್ಳುತ್ತಾನೆ. ಊರ್ಧ್ವಗಾಮಿತ್ವದಲ್ಲಿ ಉದಾಶೀನನಾಗುತ್ತಾನೆ. ಉಡು ಗಿದ ಬಲವುಳ್ಳವನಾಗುತ್ತಾನೆ. ಸ್ಥಿತಪ್ರಜ್ಞತೆ ಶೂನ್ಯವಾಗುತ್ತದೆ. ಸದ್ಭಾವ ಸೀಮೆ ಯನ್ನು ದಾಟ ವಿಕೃತಿಯಲ್ಲಿ ವಿಹರಿಸುತ್ತಾನೆ. ಭೌತಿಕದ ಬದುಕಿನ ಆಶೆ ಬಲವಾಗು ತ್ತದೆ. ದೇವಧರ್ಮದಲ್ಲಿ ಬಾಳ ಬಂದು ಅದನ್ನು ಮರೆತು ನಿಂತು ಜೀವಧರ್ಮದಲ್ಲಿ ಜೀವನ ಜರಗುತ್ತದೆ. ಕಾಮ್ಯಕರ್ಮದಲ್ಲಿ ಭಾವನೆ ಹರಿಯುತ್ತದೆ.

ಹಕ್ಕಿ ಮೈಯೆಂಬ ಮರದಿಂದ ಹಾರಿದೆಯಾದರೂ ಭಾವಾಕಾಶವನ್ನು ಬಿಟ್ಟು ಹೋಗಿಲ್ಲ. ಅರಿವಿನ ಬೆಳಗಿನಲ್ಲಿ ತೋರದಿಲ್ಲ. ಏಕೆಂದರೆ ಅದಿರುವುದು ಕಣ್ಣಿನಂಚಿನಲ್ಲಿ; ಕಣ್ಣರಿಕೆಯಲ್ಲಿ :

ಹೊನ್ನಹಕ್ಕಿ ಕಣ್ಣಿನಂಚಿನಲ್ಲಿ ತನ್ನ
ಗೂಡಸಿಕ್ಕಿ ಚೆನ್ನಬದುಕು ಗಳಿಸಿ ಮುನ್ನ
ಅಂದಿನಿಂದ ಕರಣ ಶಾಖೆಗಳಲಿ ಸುಳಿದು
ಅಂದದಿಂದ ಹರಣವಾಂತು ಮನವ ಸೆಳೆದು,
ಮೋಹಗಳಿಸಿ ಕರ್ಮಜಾಲವೆಸಗ ಹಚ್ಚಿ
ದಾಹಗೊಳಿಸಿ ಧರ್ಮಕಾರ್ಯಗಳನು ಮುಚ್ಚಿ
ಕನಕಪಕ್ಷಿ ಕಣ್ಣಮುಂದೆ ಹಾರಿಹೋಯ್ತು
ಮನವೆ ಸಾಕ್ಷಿ ಬಣ್ಣವೊಂದು ತಿಳಿಯದಾಯ್ತು.

ಆ ಹೊನ್ನು ಹಕ್ಕಿ ಬಂದದ್ದೇ ಒಂದು ಉದ್ದೇಶ. ಆದದ್ದೇ ಬೇರೊಂದು ಆಭಾಸ. ಹೀಗಾಗಿ ಹೃದಯದ ಹಲಬು ಕಣ್ಣಿಗೆ ಬಂದು ಕಣ್ಣಿನಲಿ ನಿಂದು ಕಣ್ಣಿಗೆ ಕಾಣದಂತಾಗಿದೆ; ಕಾಣದಂತಿದೆ. ಇದೊಂದು ಅದರ ನೋಡಿ.

ಹಕ್ಕಿ ಕಟ್ಟಿದ ಗೂಡು ಅಂದವಾಗಿದೆ; ಅಗ್ಗಳವಾಗಿದೆ. ಅದರೊಳಗಿನ ಬಾಳು ಬದುಕು ಚೆನ್ನಾಗಿಯೇ ಇದ್ದುವು. ಬರುಬರುತ್ತ ಎಲ್ಲವೂ ಮಾರ್ಪಡಿಸಿತು. ಮೇಲು ನೋಟ ಹೋಗಿ ಕೆಳನೋಟವೊದಗಿತು. ಕೀಳು ಬಾಳು ಮೊದಲಾಯಿತು. ವಿಷಯವೆಂಬ ಹುಲು ಸವಿಗೆ ಬಾಯ್ಬಿಟ್ಟಿತು. ಮೋಹದಾಹಗಳ ಬಲೆಯಲ್ಲಿ ಬೀಳಿಸಿತು. ಕರಣ ಹರಣಗಳ ಕುಪ್ಪಳಿಸಿತು. ಪಾಪ ಝರಿ ತುಂಬಿ ಹರಿಯುವಂತಾಯಿತು. ತಾಪಕ್ಕೆ ತುದಿ ಮೊದಲಿಲ್ಲವಾಯಿತು. ಬಣ್ಣ ಬಗೆಗೆಡುವಂತಾಯಿತು. ರುಚಿ ಶುಚಿಯಿರದಂತಾಯಿತು. ಧರ್ಮಕ್ಕಿಂತ ಕರ್ಮದ ಕೈ ಮೇಲಾಯಿತು. ಮನವು ಮರುಳುಗೂಡಿತು. ಕರುಳು ಹುರುಳಿಲ್ಲದಾಯಿತು. ಬಯಲ ಭ್ರಾಂತಿ ಹೆಚ್ಚಿತು. ಸ್ವಯದ ಅವಧಿ ಸಮೀಪಿಸಿತು.

"ನೂರು ವರುಷ ಇರುವೆನೆಂದು ಗುಡಿಯ ಕಟ್ಟಿ,
ತೋರಿ ನಿಮಿಷ ತೊರೆದುದೇನು ಗಡಿಯ ಮೆಟ್ಟಿ
ಚೆನ್ನಬಸವ ತನ್ನ ಅಸುವ ಎಂದು ಮಾಡಿ,
ಚೆನ್ನ ಜೆಸವ ತನ್ನತನವ ಗಳಿಸದೋಡಿ;
ಕನಕ ಪಕ್ಷಿ ಕಣ್ಣ ಮುಂದೆ ಹಾರಿ ಹೋಯ್ತು.
ಮನವೆ ಸಾಕ್ಷಿ ಬಣ್ಣವೊಂದು ತಿಳಿಯದಾಯ್ತು."

ಇದು ಅಂಗನ ಅಂತರಂಗದ ಸವಾಲು. ಸಂಕಲ್ಪ ಮಾಡಿ ಬಂದ ಕಾಲ ಕಟ್ಟಳೆಗೂ ಸಿಲುಕಲಿಲ್ಲ ನಿಲುಕಲಿಲ್ಲ. ಮುಖ್ಯವಾಗಿ ತನ್ನ ತನವನ್ನು ಮೈಗೂಡಿಸಿ ಕೊಳ್ಳಲಿಲ್ಲ. ಸಾಧನೆಗಳಲ್ಲಿ ತನ್ನ ತನದ ಸಾಧನೆ ಶ್ರೇಷ್ಠವಲ್ಲವೆ? ಶಾಶ್ವತವಲ್ಲವೆ? ಸತ್ಯಸುಖದಾಯಕವಲ್ಲವೆ? ಅದೇ ಆಗದ ಮೇಲೆ ಎಂತಹ ನಷ್ಟ; ಎಂತಹ ಕಷ್ಟ? ಬಂದ ಮಣಿಹ ಮೈಗೂಡಿ ಬಾರದ ಅಳಲು ಬಳಲು ಕವಿ ಕೊರಳನ್ನು ಕೊರೆದಿದೆ. ಕೊರೆದು ವಾಗ್‍ಝರಿಯಾಗಿ ಹರಿದು ಬಂದಿದೆ. ಕವನವಾಗಿ ನಿಂದಿದೆ.

ಇದು ಪ್ರತಿಯೊಬ್ಬರ ಪ್ರಶ್ನೆಯಾಗಿದೆ; ಪ್ರತಿಪಾದನೀಯ ವಿಷಯವಾಗಿದೆ.

"ಉದಕದೊಳಗೆ ಕಿಚ್ಚು ಹುಟ್ಟಿ ಸುಡುವುದ ಕಂಡೆ.
ಗಗನದ ಮೇಲೆ ಮಾಮರನ ಕಂಡೆ
ಪಕ್ಕವಿಲ್ಲದ ಹಕ್ಕಿ ಬಯಲ ನುಂಗಿದ್ದ ಕಂಡೆ ಗುಹೇಶ್ವರಾ."

ಉದಕವೆಂದರೆ ಮನಸ್ಸು. ಕಿಚ್ಚೆಂದರೆ ಜ್ಞಾನ. ಇದು ಮೈ–ಮಾಂಸಗಳನ್ನು ಸುಡುತ್ತದೆ. ಅಂದರೆ ತನುಭಾವ ಮನಭಾವಗಳನ್ನು ಬಿಡಿಸುತ್ತದೆ. ಗಗನವೆಂದರೆ ಆತ್ಮತತ್ತ್ವ. ಮಾಮರವೆಂದರೆ ಮಹಾಜ್ಞಾನ. ಪಕ್ಕವಿಲ್ಲದ ಹಕ್ಕಿಯೆಂದರೆ ಬಹಿರಂಗ ಅಂತರಂಗಗಳಿಲ್ಲದ ಪರಮಹಂಸ. ಬಯಲ ನುಂಗಿತ್ತೆಂದರೆ ನಿರಾಳ ತತ್ವವನ್ನು ಅಳ ವಡಿಸಿಕೊಂಡಿತ್ತೆಂದು ಅಭಿಪ್ರಾಯ. ನಿರಾಲಂಬ ರೂಪಾಯಿತೆಂದು ಅದರ ಭಾವ.

ಹೀಗೆ ಈ ಜೀವ ಹಂಸನು ಪರಮಹಂಸನಾಗದೆ ಪ್ರಕೃತಿ ಗುಣದಲ್ಲಿ ಬೆಳೆದು ಪ್ರಪಂಚದಲ್ಲಿ ಸುತ್ತಾಡುವಂತಾಯಿತಲ್ಲ ಎಂಬುದೇ ಕವಿಯ ಕೊರಗು. ಮನದ ಮರುಗು.

'ಹೊನ್ನಹಕ್ಕಿ' ಸನ್ನಿಧಿಯವರು ಬಾಲ್ಯದಲ್ಲಿ ಬರೆದ ಕವನ ಸಂಗ್ರಹ. ಆದರೂ ಇದರಲ್ಲಿ ಹಲವಾರು ಭಾವಪೂರ್ಣ ಕವನಗಳಿವೆ ಇವುಗಳಲ್ಲಿ 'ಪ್ರಾರ್ಥನೆ' ಇದೊಂದು ಉತ್ತಮವಾದ ಪ್ರಾರ್ಥನಾ ಗೀತೆ; ಭಾವಪೂರ್ಣ ಗೀತೆ.

ಬಸಿರ ಬನದೊಳಗೆ
ಹೃದಯ ಕುಸುಮವರಳಲಿ
ಉಸಿರನಿಲವದರ
ಕಂಪು ಹೊತ್ತು ಹರಡಲಿ!

ಇದು ಪ್ರಾರ್ಥನೆ; ಪರಿಣಾಮಕಾರಿಯಾದ ಪ್ರಾರ್ಥನೆ; ಹೃದಯ ಶ್ರೀಮಂತಿಕೆ ಗಾಗಿ ಪ್ರಾರ್ಥನೆ.

ಏನು ತುಂಬುರೂಪಕ? ಎಷ್ಟು ಚಂದ ರೂಪಕ? ಎನಿತು ಉದಾತ್ತ ಉದ್ದೇಶ? ಓದುತ್ತಿರುವಂತೆ ಹೃದಯ ಅರಳುತ್ತದೆ; ಆನಂದಿಸುತ್ತದೆ.

ಮನದ ಹವಣಿಗೆ ಮಾನವತೆಯ ಹದ್ದಿಗೆ–ಮೀರಿದ ಹಂಬಲವಲ್ಲ. ಬಾಳನ್ನು ಬೆಡಗುಗೊಳಿಸುವ ಸಡಗರ ಈ ನುಡಿಯಲ್ಲಿ ಹೊರಹೊಮ್ಮಿದೆ. ಬಹಿರಂಗ ಅಂತರಂಗ ಗಳೆರಡನ್ನು ಸಾರ್ಥಕಗೊಳಿಸುವ ಸಾಹಸ ಸಾಗಿದೆ.

ಈ ಬಸಿರೊಂದು ಬನ. ಬರೀ ಬನವಲ್ಲ; ಹೂಬನ. ಈ ಬನದ ಹೂವೆಂದರೆ ಹೃದಯ, ವಿಕಸಿತ ಹೃದಯ. ವಿಶುದ್ಧ ಹೃದಯ. ಅದರ ಒಳ್ಗಂಪು ಒಳಹೊರಗೂ ಹರಡಬೇಕು. ಹರಡುವಂತೆ ಮಾಡುವ ಸಾಧನ ಗಾಳಿ. ಅದು ಉಸಿರನಿಲ. ಆ ಉಸಿರು ಆ ಹೃದಯ ಕಂಪನು ಹೊತ್ತುತಂದು ಹರಡಬೇಕಂತೆ !

ಹೀಗಾಗುವುದಕ್ಕಿಂತ ಬೇರೆ ಶಾರೀರ ಸಾರ್ಥಕತೆಯುಂಟೆ ? ಮಾನಸಿಕ ಮಹಿಹ ವುಂಟೆ ?

ತನುವನದಲ್ಲಿ ಕ್ರಿಯೆಗಳೆಂಬ ತರುಬಳ್ಳಿಗಳು ಬೆಳೆಯಬೇಕು. ಅಂತರಂಗಾ ಕಾಶದಲ್ಲಿ ಜ್ಞಾನಪ್ರಭೆ ಬೆಳಗಬೇಕು. ಆ ತರುಬಳ್ಳಿಗಳಲ್ಲಿ ಆ ಜ್ಞಾನ ಪ್ರಭೆಯಲ್ಲಿ ಹೃದಯ ಕುಸುಮ ಅರಳಬೇಕು. ಅದರ ಕಂಪನ್ನು ಉಸಿರು ಹೊತ್ತು ಹರಡಬೇಕು. ಇದು ಕವಿ ಗುರುದೇವನ ಕಾಂಕ್ಷೆ, ಕೋರಿಕೆ.

ಇವರ ಈ ಪ್ರಾರ್ಥನಾ ಗೀತೆ ಆಯ್ದ ನುಡಿಗಳಿಂದ ಸುಂದರವಾಗಿದೆ ಸ್ವಾನು ಭಾವಪೂರ್ಣವಾಗಿದೆ. ಕೊನೆಯ ನುಡಿಯನ್ನು ಕೇಳಿ.

ಜೀವ ಪೂಜಕನ
ವಿಶ್ವಪೂಜೆ ನಡೆಯಲಿ
ದೇವ ದೇಶಿಕನ
ಶಾಂತಿಯೋಜೆ ದೊರೆಯಲಿ !

ಇನ್ನೇನು ? ಪ್ರಾರ್ಥನಾ ಗೀತೆಯ ಮಟ್ಟವನ್ನು ಇದಕ್ಕಿಂತ ಎತ್ತರಕ್ಕೆ ಎತ್ತರಿ ಸಲು ಸಾಧ್ಯವೆ ?

ಅಂತೆಯೇ ಈ ಪ್ರಾರ್ಥನಾ ಗೀತೆ ಜನಪ್ರಿಯವಾಗಿದೆ. ಬಹು ಜನ ಭಕ್ತರು ಇದನ್ನು ಪಾವನ ಹೃದಯದಿಂದ ಪಠಿಸುತ್ತಾರೆ. 'ಪ್ರೇಮ ಕೋಕಿಲೆಯು, ಚೈತ್ರಗಾನ ಹಾಡಲಿ' ಎನ್ನುವುದಕ್ಕಿಂತ ಹೆಚ್ಚಿನ ಶ್ರೀಮಂತಿಕೆ ಬೇಕೆ ? ಹೆಚ್ಚಿನ ವಸಂತ ವೈಭವ ಬೇಕೆ ?

'ಹೊನ್ನುಹಕ್ಕಿ' ಕವನ ಸಂಗ್ರಹದಲ್ಲಿ ಇಂತಹ ಹತ್ತಾರು ಭಾವ ಗೀತೆಗಳನ್ನು ಸನ್ನಿಧಿಯವರು ಹಾಡಿದಾರೆ. 'ಕೊಳಲು' 'ತುಂಬಿನೋಡು' 'ಅಳಿಯ' 'ಅರಸು' 'ನಲಗನ್ನಡ' 'ಕರುಣ' 'ಪೂರ್ವೋತ್ತರ' 'ಅಂದು ಬಾಳು ಒಂದು ಹೋಳು'

'ಭಕ್ತಿಯ ಭಾಂಡಾರಿ ಬಸವಣ್ಣ' 'ಸಂಜೆಯ ಸೂರ್ಯ' 'ಬುಡು ಬುಡುಕೆಲು ಹಾಡು, ಇವು ಭಾವ ವೈಭವದಿಂದ ಕೂಡಿವೆ. ವಾಚನಾರ್ಹವಾಗಿವೆ.

ಸಾಹಿತ್ಯ ಶ್ರೀ ಜ. ಚ. ನಿ. ಸನ್ನಿಧಿಯವರ ಜೀವದುಸಿರು. ಅವರಲ್ಲಿಯೇ ಸಿದ್ಧಿಗೊಂಡ ಸತ್ಕಲೆ. ಅಭ್ಯಾಸ ಮಾಡುವ ಕಾಲದಿಂದಲೂ ಸಾಹಿತ್ಯವನ್ನು ಸಾಧಿಸಿಕೊಂಡು ಬಂದಿದ್ದಾರೆ. ಅವರ ಸಾಹಿತ್ಯ ಅವರ ಜೀವನ ಚಿತ್ರ. ಅವರ ಸ್ವಾನುಭವದ ಸೂತ್ರ. ಅವರ ಚಿದ್ರಸದ ಪಾತ್ರ. ಸಾಹಿತ್ಯ ಸೃಷ್ಟಿಯಲ್ಲಿ ಅವರೊಬ್ಬ ಬ್ರಹ್ಮ. ಸಾಹಿತ್ಯವೇ ಅವರ ಸತ್ಯಲೋಕ. ಮರ್ತ್ಯಕಲೋಕದಲ್ಲಿ ಅಮರ್ತ್ಯ ಲೋಕವೆಂದರೆ ಸಾಹಿತ್ಯ ಲೋಕ ಎಂದು ಅವರು ಅದೆಷ್ಟೋ ಸಲ ತಮ್ಮ ಉಪದೇಶ ಭಾಷಣಗಳಲ್ಲಿ ಅಪ್ಪಣೆ ಕೊಡಿಸುವುದನ್ನು ಕೇಳಿ ತಿಳಿಯಲಾಗಿದೆ. ಅವರ ಮಾತು ಮಾತಿನಲ್ಲಿ ಸಾಹಿತ್ಯ ಸತ್ವ ತುಂಬಿರುತ್ತದೆ. ಸಪ್ಪೆಯಾದ ಮಾತಿಲ್ಲ, ಸಪ್ಪೆಯಾದ ಬರಹವಿಲ್ಲ. ವೈಚಾರಿಕ ವಾಙ್ಮಯ ರಚನೆಯಲ್ಲಿ, ಭಾವಪೂರ್ಣ ಭಾಷಣವನ್ನು ಮಾಡುವುದರಲ್ಲಿ ಅವರದು ಅಪ್ರತಿಮಸಿದ್ಧಿ. ಅವರ ಭಾಷೆಯಲ್ಲಿ ಅವರ ಬರೆಹದಲ್ಲಿ ಭಾವಬಂಧುರ ಸಾಹಿತ್ಯ ಸಂಪತ್ತಿಯಿರುತ್ತದೆ. ಸರಸ ಶೈಲಿ ತೆರೆತೆರೆಯಾಗಿ ತೂರಿ ಬರುತ್ತದೆ. ಅವರ ಭಾಷಣವನ್ನು ಅದೆಷ್ಟು ಹೊತ್ತು ಕುಳಿತು ಕೇಳಿದರೂ ಸಾಕೆನಿಸುವುದಿಲ್ಲ. ಅವರ ಸಾಹಿತ್ಯವನ್ನು ಅದೆಷ್ಟು ಕಾಲ ಓದಿದರೂ ಬೇಸರಿಕೆ ಬರುವುದಿಲ್ಲ. ಇವರ ಲೇಖನ ಕಲೆಯಿಂದ ಕನ್ನಡ ಸಾಹಿತ್ಯಕ್ಕೊಂದು ನವ ಸ್ವರೂಪ ಬಂದಂತಾಗಿದೆ. ಇವರದು ವಾಸ್ತವ ಸಾಹಿತ್ಯ ಜೀವನ. ವಾಸ್ತವ ಭಾವಭರಿತ ಭಾಷಣ. ಇವರ ಬಾಳು ಸಾಹಿತ್ಯ, ಇವರ ಬದುಕು ಸಾಹಿತ್ಯ.

ಸನ್ನಿಧಿಯವರ ಸಾಹಿತ್ಯ ರಸ ಮಾಧುರ್ಯವನ್ನು ಸವಿದು ಸಂತಸಗೊಳ್ಳದವರಿಲ್ಲ. ಸಾಹಿತ್ಯ ಚಿತ್ರ ಸೌಂದರ್ಯವನ್ನು ಕಂಡು ಪ್ರಭಾವಿತರಾಗದವರಿಲ್ಲ. ಹೊಸಗನ್ನಡದಲ್ಲಿ ಹೊಸ ಶೈಲಿಯನ್ನು ಹುಲುಸಾಗಿ ಬೆಳೆದುಕೊಟ್ಟ ಇವರ ಹೆಸರನ್ನು ಕೇಳದ ಕನ್ನಡಿಗರಿಲ್ಲ ಇವರ ಭಾವ ಔನ್ನತ್ಯ, ಭಾಷಾ ಲಾಲಿತ್ಯ ಎಂಥವರನ್ನೂ ಮುಗ್ಧರನ್ನಾಗಿಸುತ್ತವೆ. ಅವರ ಸಾಹಿತ್ಯ ನಿತ್ಯಸತ್ಯ. ಅವರು ಕನ್ನಡ ನುಡಿ ಬಾನಿನಲ್ಲಿ ಬೆಳಗುವ ಹುಣ್ಣಿಮೆಯ ಶಶಿ. ಆ ಶಶಿಯ ಶೀತಲ ಕಿರಣಗಳು ಕೃತಿಗಳು. ಕೃತಿಗಳಿಗೆ ಕಾಲ ಕಟ್ಟಳೆಯಿಲ್ಲ. ಅದು ಜೀವ ಪ್ರವಾಹ. ಸಾರಸ್ವತ ಶ್ರೀ.

ಸನ್ನಿಧಿಯವರ ಶಬ್ದ ಸಂಪತ್ತು, ವಾಕ್ಯರಚನೆ, ವಿಚಾರ ಪ್ರವಾಹ, ಭಾವ ಸೌಂದರ್ಯ, ಧ್ವನಿ ನಿರ್ಮಾಣ–ಇವು ಅತ್ಯದ್ಭುತವಾದವು, ಅತ್ಯಾಶ್ಚರ್ಯಕರವಾದವು. ಅತ್ಯಾನಂದದಾಯಕವಾದವು.

# ಸಾಹಿತ್ಯ ಸೂರ್ಯನ ಸಂದರ್ಶನ

—ಶ್ರೀ ಕೆ. ಆರ್. ಲಿಂಗಪ್ಪ ಬಿ. ಎ., ಎಲ್.ಎಲ್.ಬಿ., ಅಡ್ವೊಕೇಟ್, ತರೀಕೆರೆ

ಐವತ್ತು ನಾಲ್ಕು ವರುಷ ತುಂಬಿದ ಶ್ರೀಶೈಲ ಶಿವಾಚಾರ್ಯ ಶ್ರೀ ಜ. ಚ. ನಿ. ಅವರನ್ನು ಕನ್ನಡನಾಡಿಗೆ ನಾಡೇ ಕಂಡರಿತಿದೆ. ಕನ್ನಡ ನುಡಿಗೆ ಅವರು ಸಲ್ಲಿಸಿದ ಸೇವೆ ಅಷ್ಟಿಷ್ಟಲ್ಲ. ಸೂರ್ಯಸಿಂಹಾಸನಾಧೀಶ್ವರರಾಗಿ ಸಾಮಾಜಿಕರ ಸಾಂಸ್ಕಾರಿಕ ಜೀವನ ಪಾವನತೆಯ ಹೊರೆ ಹೊತ್ತುದರ ಜತೆಗೆ ಸಾರಸ್ವತ ಜ್ಯೋತಿಯನ್ನು ಬೆಳ್ಳಂ ಬೆಳಗಿಸಿ ಅಪ್ರತಿಮವಾಗಿ ಪ್ರದರ್ಶಿಸಿ ಕನ್ನಡಿಗರ ಕಣ್ಣರಳಿಸಿದ್ದಾರೆ. ಹೃದಯ ಆಕರ್ಷಿಸಿದ್ದಾರೆ.

ಅವರ ಬಳಿ ಕುಬೇರಾಂಶವಿಲ್ಲ. ಕಾಯ ಬಲವಿಲ್ಲ. ಅವರದು ಆಡಂಬರ ಜೀವನವಲ್ಲ. ಆದರೂ ಅವರ ಪ್ರಭಾವ ಅಪಾರ, ಅನುಪಮ. 'ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ರತ್ನದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು...., ಎಂಬ ಅಣ್ಣನ ಈ ಹಾರ್ದಿಕವಾಣಿಯ ಮಧುರ ಮಾರ್ಗದಲ್ಲಿ ಶ್ರೀ ಜ. ಚ. ನಿ. ಅವರು ಹೆಜ್ಜೆ ಹಾಕಿ ಸಾಗಿ ಬಂದಿದ್ದಾರೆ. ಸ್ವಾನುಭವದ ಸ್ವಯಂ ಜ್ಯೋತಿಯನ್ನು ಹುಣ್ಣಿಮೆಯ ಬೆಳದಿಂಗಳಂತೆ ಹರಡಿದ್ದಾರೆ. ಸಹೃದಯರ ಹೃದಯಗಳನ್ನು ಹೊಂಪುಳಿಗೊಳಿಸಿದ್ದಾರೆ. ಅವರ ವಾಣಿ ಚೆನ್ನ. ಅವರ ಸಾಹಿತ್ಯ ಚೆನ್ನ. ಅವರ ಪ್ರತಿಯೊಂದು ಕೃತಿಯಲ್ಲಿ ಕಾವ್ಯಸೌಂದರ್ಯ ಮಿಂಚುತ್ತದೆ.

ಇಂದಿನ ದಿನಮಾನದಲ್ಲಿ ಮಠಾಧೀಶ್ವರರು ಮತ್ತು ಪೀಠಾಧೀಶ್ವರರು ಯಾರೂ ಮಾಡಿ ತೋರಿಸದ ಪವಾಡವನ್ನು ನುಡಿನೆಲೆಯಲ್ಲಿ ಅವರು ಮಾಡಿತೋರಿದ್ದಾರೆ; ಯಾರೂ ಮಾಡದ ಮಣಿಹವನ್ನು ಮಾಡಿ ಮೆರೆದಿದ್ದಾರೆ. ಅರವತ್ತೆಪ್ಪತ್ತು ಗ್ರಂಥಗಳನ್ನು ಬರೆವ ಪವಾಡ ಚಿಕ್ಕದಲ್ಲ. ಮಾಡಿದ ಮಣಿಹ ಚಿಕ್ಕದಲ್ಲ; ಗದ್ಯ–ಪದ್ಯ ಕವನ–ವಚನ, ಪ್ರಬಂಧ, ಕಾವ್ಯ, ನಾಟಕ, ಚಾರಿತ್ರ–ಇತ್ಯಾದಿ ಎಲ್ಲ ಪ್ರಕಾರಗಳಲ್ಲಿಯೂ ಸಾಹಿತ್ಯ ರಚನೆ ಸಾಗಿದೆ. ಎಲ್ಲಿಯೂ ಯಾವ ಕೃತಿಯಲ್ಲಿಯೂ ನೀರಸ ಶೈಲಿಗಿಂಬಿಲ್ಲ; ನಿರರ್ಥ ವಿಷಯ ಪ್ರತಿಪಾದನವಿಲ್ಲ. ಬಹು ಕೃತಿಗಳಲ್ಲಿ ಬಾಳಿಗೆ ಬೇಕಾದ ಸಮಸ್ಯೆಗಳನ್ನು ಬಿಡಿಸಿದ್ದಾರೆ. ದುರ್ಗಮ ಮಾರ್ಗಗಳನ್ನು ಸುಗಮಗೊಳಿಸಿದ್ದಾರೆ. ಆಗಬೇಕಾದ ವಿಚಾರ ಕ್ರಾಂತಿಯನ್ನು ಆಚರಿಸಬೇಕಾದ ಆಚಾರ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕಾದ ಸಂಸ್ಕಾರ ವಿಧಾನವನ್ನು ಬೀರಿ ತೋರಿದ್ದಾರೆ. ಸಾರಿ ಹೇಳಿದ್ದಾರೆ. ನಾಡಿನಲ್ಲೆಲ್ಲ ಒಡಕಿನ ನಂಜು ಒಡ ಮೂಡಿರುವಾಗ ಓಜಸ್ಸಿನಿಂದ ಒಡ

ಗೂಡಿದ ಒಗ್ಗಟ್ಟಿನ ಅಮೃತ ಸಿಂಚನ ಮಾಡಿದ್ದಾರೆ. ಶಿವಾಚಾರ್ಯ ಮತ್ತು ಶಿವಶರಣ ಸಾಹಿತ್ಯಸಮುದ್ರಕ್ಕೆ ಸೇತು ಬಂಧನ ಮಾಡಿದ್ದಾರೆ. ಉಭಯ ಸಂಸ್ಕೃತಿಗಳ ಸಮ್ಮಿಳನ ಮಾಡಿದ್ದಾರೆ. ಕಾರುಣ್ಯ ಕಿರಣಗಳನ್ನು ಹರಡಿದ್ದಾರೆ. 'ಅಭಯವಾಣಿ' ಯನ್ನು ಮೊಳಗಿಸಿದ್ದಾರೆ. ರೂಢಿಗೀಶನಿಗೆ ಅಚ್ಚಳಿಯದ ಕೊಳೆಯದ 'ಕಾಯಿಹಣ್ಣು' ಕರುಣಿಸಿದ್ದಾರೆ ಸಾಮಾಜಿಕರಿಗೆ 'ಶಿವಾದ್ವೈತ' ದರ್ಶನ ಮಾಡಿಸಿದ್ದಾರೆ. ಸಾರ್ವಜನಿಕರಿಗೆ 'ದೇವ ದೃಷ್ಟಿ' ಯನ್ನು ದಯಪಾಲಿಸಿದ್ದಾರೆ. 'ಮಣಿಕಾಂತಿ'ಯಿಂದ ಷಟ್‌ಸ್ಥಲ ವಿಷಯದಲ್ಲಿರುವ ಅಜ್ಞಾನಾಂಧಕಾರವನ್ನು ಅಳಿಸಿದ್ದಾರೆ. 'ಮಣಿಮುಕುರ'ವಿಡಿದು ಮುಮುಕ್ಷುಗಳ ಮುಖಾವಲೋಕನವನ್ನು ಮಾಡಿಸಿದ್ದಾರೆ. 'ಮಣಿ ವಚನಗಳ' ನುಡಿದು ನೂರೊಂದು ನೆಲೆಗಳ ಕಲೆ ಬೆಲೆಗಳನ್ನು ಹೆಚ್ಚಿಸಿದ್ದಾರೆ. 'ಜೀವನ ಸಿದ್ಧಾಂತ'ವಾದ ಭಕ್ತ ಸಂಪುಟನೆಂಬ ಬೃಹದ್ಗ್ರಂಥದ ರಚನೆಯಿಂದ ಕೈವಲ್ಯವನ್ನು ಕೈಗೂಡಿಸುವ ಭಕ್ತ ಸ್ಥಲ ಸಾಮ್ರಾಜ್ಯ ನಿರ್ಮಾಣ ಧುರೀಣರೆನಿಸಿದ್ದಾರೆ. ಇದೊಂದು ಇವರ ಮಹಾ ಮಣಿಹ; ಕ್ರಾಂತಿಕಾರೀ ಕಾರ್ಯ. ಈ ಮಹಾಗ್ರಂಥವು ಜಗದ್ಗುರುಗಳವರ ಸಿಂಹಾಸನಾರೋಹಣ ರಜತ ಮಹೋತ್ಸವದ ನೆನಪಿಗೆ ಪ್ರಕಟವಾಗುತ್ತಿದೆ. ಪ್ರಕಟಣೆಯ ಹೊಣೆಹೊತ್ತ ಬೆಂಗಳೂರಿನ ಅಕ್ಕಿಪೇಟೆ ಭ್ರಮರಾಂಬಾ ಬಳಗದವರ ಸೇವೆ ಸ್ತುತ್ಯಾರ್ಹ. 'ಹೊನ್ನು ಹಕ್ಕಿ'ಯಾಗಿ ಹಾಡಿದ್ದಾರೆ. 'ರನ್ನ ಚುಕ್ಕಿ' ಯಾಗಿ ಬೆಳಗಿದ್ದಾರೆ 'ಹೂಗೊನೆ' ಯಾಗಿ ಸಹೃದಯರ ಹೃದಯ ಭೂವನದಲ್ಲಿ ಅರಳಿದ್ದಾರೆ. 'ಹಾಲ್ಕೆನೆ' ಯಾಗಿ ಮಧುರ ಸಾರವನ್ನುಣಿಸಿದ್ದಾರೆ. 'ದೃಷ್ಟಿದರ್ಶನ'ದಿಂದ ಕಣ್ತೆರೆಯಿಸಿ 'ಕಾಯಕ ಕಲೆಯ' ಖಚಿತ ರೂಪನ್ನು ಕಾಣಿಸಿದ್ದಾರೆ. ಮಂತ್ರದ ಮೂಲವನ್ನರುಹುವ 'ಪರಮ ಹಂಸ' ವಾಗಿ ಮಂತ್ರೋಪಾಸಕರ ಮಾನಸ ಸರೋವರದಲ್ಲಿ ಮಾಸದೆ ವಿಹರಿಸಿದ್ದಾರೆ. 'ನಾನು –ನೀನು' ಎಂದು ಎರಡಳಿದು ಏಕರೂಪರಾಗಿದ್ದಾರೆ. ಆತ್ಮ 'ನಿವೇದನ' ಮಾಡಿದ್ದಾರೆ.

'ಅಕ್ಕನ ಬಾಳು' 'ಅಣ್ಣನ ಬದುಕು' 'ಅಲ್ಲಯ್ಯನ ಬೆಳಕು' ಬರೆದು ಬಾಳು–ಬದುಕು ಬೆಳಕುಗಳನ್ನು ವಿಶ್ಲೇಷಿಸಿ ವಿಮರ್ಶಿಸಿ ವಿವರಿಸಿದ್ದಾರೆ. 'ವಚನಾಂಜಲಿ' 'ವಚನ ವಲ್ಲರಿ' 'ವಚನ ಮಂಜರಿ' ಗಳ ಬೀಜ ಬಿತ್ತಿ, ಬಳ್ಳಿ ಬೆಳೆದು ಹೂವಾಗಿಸಿ ವಚನ ವಾಙ್ಮಯ ವನಕ್ಕೆ ವಿಶಿಷ್ಟ ಶೋಭೆಯನ್ನು ತಂದಿದ್ದಾರೆ. ಆಧುನಿಕ ಅಗ್ರವಚನಕಾರರಾಗಿದ್ದಾರೆ. ಖಂಡಕಾವ್ಯವಾದ 'ಚಂದ್ರಾವತಿ' ಶ್ರೀ ಜ. ಚ. ನಿ. ಅವರ ರಸವತ್ತಾದ ರಗಳೆಯ ಶೈಲಿಗೆ ಸತ್ಯಸಾಕ್ಷಿಯಾಗಿದೆ. ಬಿಂದುವಿನಲ್ಲಿ ಸಿಂಧುವನ್ನು ತುಂಬ ಬಲ್ಲರೆಂಬುದಕ್ಕೆ 'ಸೀಳ್ನುಡಿ' 'ಮುಪ್ಪಿನಾರ್ಯರ ಭಾವ ಪಾತ್ರಗಳು' ಪರಮ ಪ್ರಮಾಣಗಳಾಗಿವೆ. ಭಾವಪೂರ್ಣ ಗದ್ಯಶೈಲಿಗೂ ಅವುಗಳೇ ಆದರ್ಶಗಳಾಗಿವೆ. 'ದೇವರ ದಾಸಮಾರ್ಯ ಪ್ರಶಸ್ತಿ' 'ವಿಭೂತಿ' ಇವೆರಡು ಸಂಭಾವನಾ ಸಂಪುಟಗಳು. ಇವನ್ನು ನಾಡಿಗಿತ್ತು ಪ್ರಶಸ್ತಿಯುಗವನ್ನೇ ಪ್ರಾರಂಭಿಸಿದರು. ದೇ. ದಾ. ಪ್ರಶಸ್ತಿಯು ಹೊರ ಬಾರದ ಮುನ್ನ ವೀರಶೈವ ಸಮಾಜದಲ್ಲಿ ಯಾವ ಪ್ರಶಸ್ತಿ ಗ್ರಂಥವೂ ಹೊರಬಂದಿರಲಿಲ್ಲ.

ಇದನ್ನು ನೋಡಿದ ಬಳಿಕ ಇದರ ದಾರಿಯಲ್ಲಿ ಅನೇಕರು ಹೆಜ್ಜೆ ಹಾಕಿದರು. ಆದರೂ ಈ ಗಾಂಭೀರ್ಯ ಈ ಪ್ರೌಢಿಮೆಯನ್ನು ಹಿಂದಕ್ಕೆ ಹಾಕಿದ ಪ್ರಶಸ್ತಿ ಗ್ರಂಥಗಳು ಬಂದಿಲ್ಲ. 'ವಿಭೂತಿ'ಯೂ ಅಷ್ಟೇ ಮಹಾ ಮೇರು ಕೃತಿ.

ಶ್ರೀ ಜ. ಚ. ನಿ. ಅವರು ಭಾವ ಜೀವಿಗಳು; ಭಾಷಾಭಿಮಾನಿಗಳು. ಭಾವ ಪೂರ್ಣ ಸಾಹಿತ್ಯ ಬ್ರಹ್ಮರು. ಬಾಳಿನುದ್ದಕ್ಕೂ ಸಾಹಿತ್ಯ ಸೇವೆಯಲ್ಲಿ ನಿರತರು. ವ್ಯರ್ಥವಾಗಿ ಕಾಲಕಳೆಯುವುದೆಂದರೆ ಅವರಿಗಾಗದು. ಮಾತಿಗೆ ಮಾತು ಬೆಳಸುವುದಾಗಲಿ ಶುಷ್ಕ ಕಾರ್ಯಕ್ಕೆ ಕಾಲವನ್ನು ಬಳಸುವುದಾಗಲಿ ಅವರಿಗಾಗದು

ಸಮಾಜ ಬಾಂಧವರಲ್ಲಿ ಬೌದ್ಧಿಕದಾಸ್ಯ ಬೃಹತ್ತಾಗಿ ಬೆಳೆದಿದೆ. ಸ್ವಾನುಭವದ ಸೌಂದರ್ಯ ಕಮ್ಮಿಯಾಗಿದೆ. ಶಿವಾನುಭಾವ ಮಾಧುರ್ಯದ ಸವಿಯಿಲ್ಲದಾಗಿದೆ. ಬೌದ್ಧಿಕ ದಾಸ್ಯ ತೊಲಗಬೇಕು. ಸ್ವಾನುಭವ ಸೌಂದರ್ಯ ಮಾಧುರ್ಯಗಳು ಮಿಗಿಲಾಗಬೇಕು—ಎಂಬುದೇ ಇವರ ಇಚ್ಛೆ. ಇದೇ ಇವರ ಸಾತ್ತ್ವಿಕ ತಪಸ್ಸು.

ಸತ್ವ ಸಾಹಿತ್ಯವನ್ನು ರಚಿಸಿ ಮರ್ತ್ಯಲೋಕದಲ್ಲಿ ಅಮರ್ತ್ಯ ಲೋಕವನ್ನು ಸೃಜಿಸುವುದೇ ಇದರ ಮುಖ್ಯ ಮಣಿಹ. ಇವರಿಗೆ ಸ್ವಾನುಭಾವ ಸಾಹಿತ್ಯವೇ ಸ್ವರ್ಗ; ಕಲಾತ್ಮಕ ಕಾವ್ಯವೇ ಕೈಲಾಸ. ಕಣ್ಣಿಗೆ ಕಾಣದ ಆ ಲೋಕಗಳ ಹವ್ಯಾಸ ಇವರಿಗಿಲ್ಲ. ಅವುಗಳಿಗಾಗಿ ಇವರು ಪೂಜಿಸುವುದಿಲ್ಲ. ಸಾಹಿತ್ಯ ರಚನೆಯೇ ಇವರ ಶಿವಪೂಜೆ. ಸಚ್ಚಿದಾನಂದದಾಯಕ ಸಾಹಿತ್ಯಾಭ್ಯಾಸವೇ ಇವರಿಗೆ ಪರಮ ಪ್ರಸಾದ. ಇದೇ ಪ್ರಮೋದ.

ಅಂತೆಯೇ ಇವರು ಪೀಠಾಧಿಕಾರಿಗಳಾದರೂ ಪೀಠದ ಮೋಹಕ್ಕೆ ಅದರ ಮಮತೆ ಅಂಟಿಕೊಂಡಿಲ್ಲ. ಇವರಲ್ಲಿ ಸ್ವಾರ್ಥಸುಖಗಳಿಗಿಂಬಿಲ್ಲ. ಶಾರೀರಿಕ ಸುಖ ಸೌಲಭ್ಯಗಳನ್ನು ಕಟ್ಟಿಟ್ಟು ಸಾಹಿತ್ಯ ಸೇವೆಗಾಗಿ ದಿಟ್ಟತನದಿಂದ ಹೃದಯ ಹುಮ್ಮಸದಿಂದ ಹೊರಟಿದ್ದಾರೆ. ಸಾಹಿತ್ಯವೇ ಇವರ ಸಂಪತ್ತು. ಸಾಹಿತ್ಯವೇ ಇವರ ಮಹತ್ತು.

ಬರೀ ಕಾಯಸತ್ವಕ್ಕಾಗಿ, ಬರೀ ಕನಕಾದಿ ಸಂಪತ್ತಿಗಾಗಿ ಸತತ ಶ್ರಮಿಸುವವರನ್ನು ತತ್ವ ಸತ್ವವುಳ್ಳವರನ್ನಾಗಿ ಸಾಹಿತ್ಯ ಸಂಪತ್ತುಳ್ಳವರನ್ನಾಗಿ ಪರಿವರ್ತಿಸುವುದೇ ಧ್ಯೇಯವೆಂದು ತಿಳಿದು ಅದರಲ್ಲಿ ಉದ್ಯುಕ್ತರಾಗಿರುವ ಇವರು ವಿಶೇಷವಾಗಿ ವಿಚಾರ ನಿಷ್ಠರು. ವಿಶುದ್ಧ ಸಾಹಿತ್ಯ ಸೇವಾ ಬದ್ಧರು.

ಸತತ ಅಭ್ಯಾಸ ನಿರತರು; ಸುಜ್ಞಾನ ಭರಿತರು; ಸಂಸ್ಕಾರ ಪ್ರದಾನದಲ್ಲಿ ಸುಯ್ದಾನಿ. ಸುಮ್ಮಾನ ಕಾರುಣ್ಯದಲ್ಲಿ ಸುಜ್ಞಾನಿ. ಕೇವಲ ಸಂಪ್ರದಾಯಕ್ಕೆ ಶರಣು ಹೋದವರಲ್ಲ; ಅಂತೆಯೇ ಕೇವಲ ನವೀನತೆಗೆ ಮನಮಾರು ಹೋದವರಲ್ಲ. ಮಾಧ್ಯಮಿಕ ಮಂಗಳ ಮಾರ್ಗದಲ್ಲಿ ಮುನ್ನಡೆಯುತ್ತಿರುವ ಮೇಧಾವಿ; ಅನುಭಾವಿ. ಸಾರಸ್ವತ ಸೇವೆಗೆ ತಮ್ಮ ಸತ್ವವನ್ನು ಸಂಪತ್ತನ್ನು ಸೂರೆಗೊಂಡ ಮಹಾತ್ಯಾಗಿ; ಮಹಾ ಶಿವಯೋಗಿ

ಆಚಾರ–ವಿಚಾರಗಳೆರಡು ಸಮಸತ್ತೆಯಲ್ಲಿ ಜೀವನ ಪಾತ್ರೆಯಲ್ಲಿ ಹೆಪ್ಪುಗಟ್ಟಿಸಿಕೊಂಡ ಹೆಗ್ಗಡೆಯರು. ತಾವು ಏರಿರುವ ಸೂರ್ಯಸಿಂಹಾಸನದ ಬಲದಿಂದ ಬಲಿತು ಬೆಳಿಕಿಗೆ ಬಂದವರಲ್ಲ. ತಮ್ಮೊಳಗಿರುವ ಸಾಹಿತ್ಯ ಸೂರ್ಯನಿಂದ ಪ್ರಕಾಶಕ್ಕೆ ಬಂದವರು; ಪ್ರಗತಿಗೆ ಸಂದವರು. ತಮ್ಮ ಸಾಹಿತ್ಯದಿಂದ ಸಾಮ್ಯವನ್ನು ಎತ್ತಿಹಿಡಿದ ಸಾಮ್ಯಯೋಗಿ. ತಮ್ಮದೇ ಆದ ನವೋನವ ಶೈಲಿಯಿಂದ–ಸರಳ ಸುಂದರ ಶೈಲಿಯಿಂದ ನವೋನವ ವಿಚಾರ ವಿಮರ್ಶೆಗಳಿಂದ ಪುರಾತನ ತತ್ತ್ವಪುರುಷನನ್ನು ನವೀನ ಪೀಠದ ಮೇಲೆ ಪ್ರತಿಷ್ಠಿಸಿ ನವೀನ ನಯನ ಮನೋಹರ ರೂಪವಂತನನ್ನಾಗಿಸಿ ನಾಡಿನಲ್ಲಿ ಹೆಸರುಗಳಿಸಿದ ನವ್ಯ ಶಿಲ್ಪಿ; ನವ್ಯ ಶೀಲಿ.

ಅವರ ಹೃದಯ ಅದೊಂದು ಮಧುರ ವೀಣೆ. ಅದನ್ನು ಅವರು ಯಾವಾಗಲೂ ಅನುಭವದ ಅಂಗುಲಿಯಿಂದ ಮಿಡಿದು ನುಡಿಸುತ್ತಾರೆ. ಅದರಿಂದ ಹೊರಹೊಮ್ಮಿದ ಗದ್ಯವೇ ಆಗಲಿ, ಪದ್ಯವೇ ಆಗಲಿ–ಹೃದ್ಯವಾಗಿರುತ್ತದೆ. ಅವರ ವಚನವಾಙ್ಮಯ ಸಂವೇದ್ಯವಾಗಿರುತ್ತದೆ.

ಕನ್ನಡ ನಾಡಿನ ಅಂಚಿನಲ್ಲಿ ಅವರಿದ್ದರೂ ಕನ್ನಡ ನುಡಿಯ ಆಗಸದ ನಟ್ಟನಡುವೆ ಮೂಡಿ ಹುಣ್ಣಿಮೆಯ ತುಂಬು ಚಂದಿರನಂತೆ ಬೆಳಗುತ್ತಿದ್ದಾರೆ; ಸೂರ್ಯನಂತೆ ವಿರಾಜಿಸುತ್ತಿದ್ದಾರೆ.

ಅವರು ಸ್ವಾನುಭಾವಿ, ಶಿವಕವಿ. ಅಂತೆಯೇ ಸೂರ್ಯರಾಗಿ, ಶಶಿಯಾಗಿ ಶೋಭಿಸಲು ಸಮರ್ಥರು. ನುಡಿ ಬಾಂದಳದಲ್ಲಿ ನಿಡುಗಾಲ ಬೆಳಗುವ ಉಭಯೈಕ ಜ್ಯೋತಿಸ್ವರೂಪರು !

# ಸದ್ಗುರುವೆ ಬಾ !

ಒಳ ಹೊರಗು ವ್ಯಾಪಿಸಿಹ ಅಜ್ಞಾನ ತಿಮಿರವನು
ಜ್ಞಾನ ರವಿ ಗುರುವರನೆ ಬೆಳಗು ಬಾ
ಮಮಕಾರದಿಂದಲೆ ಮುದುಡಿರುವ ಹೃತ್ಕಮಲ
ಅರಳಿಸಲು ಶ್ರೀಗುರು ಚಂದ್ರಮನೆ ಬಾ !

ವೀರಶೈವಾಚಾರ ಸಿರಿಬನದಿ ವಿಹರಿಸುತ
ತತ್ವ ಇಂಚರ ನುಡಿದ ಕೋಗಿಲೆಯೆ ಬಾ
ಬಾಳ್ಬಟ್ಟೆಯಲಿ ಬೆಂದು ಬೆಂಡಾದ ಭಕ್ತ ಜನ
ಸಂತೈಸೆ ಅಮರ ನುಡಿ ಸುಧೆ ಸುರಿಸು ಬಾ

ನಾ–ನೀನು ಎಂಬಿದು ದುಕ್ಕ ಸೊಗಕವೆ ಮೂಲ
ನಾ–ನೀನುಗಳ ಆಚೆ ಪರಮ ಸುಖವು
ಕಾಯ ಹಣ್ಣಾಗಿಸಿ ಲಿಂಗಕದನರ್ಪಿಸಿ
ಬಾಳು ಬಾಳಲು ನಡೆಯ ಕಲಿಸು ಬಾ.

ಜ್ಞಾನ ವಿಜ್ಞಾನದಲಿ ಕಾರ್ಯ ಕಾಯಕದಲ್ಲಿ
ಜೀವ ಶಿವರೂಪದಲಿ ರೂಪಿಸಲು ಬಾ
ಅಂಗದೊಳು ತುಂಬಿರುವ ಲಿಂಗದೇವನ ತೋರಿ
ಪರಮ ಹಂಸನ ಮಾಡಿ ನಡೆಸು ಬಾ

ಗುರುಪಾದ ಪ್ರಿಯ ಸಿದ್ಧರಾಮ ರೂಪಾಗಿರುವ
ನಿರುಪಮಾಮಿತಿಯ ಶ್ರೀ ಸದ್ಗುರುವೆ ಬಾ ||

—ನಿ. ಚೆ. ಬ.
ದೇ–ಹಿಪ್ಪರಗಿ

ಎಸಳು ೨

# ಅನುವಾದ ಸಾಹಿತ್ಯ

[ ದರ್ಶನ-೧ ]

ಮಣಿಕಾಂತಿ (ಗದ್ಯ)

ಮಣಿಮುಕುರಂ (ಮಹಾ ಕಾವ್ಯ)

ಮಣಿ ವಚನಗಳು (ವಚನ ರೂಪ)

ಯೋಗ ಕ್ಷೇಮ (ಪ್ರಬಂಧ)

ಕಾವ್ಯ ಸೌಂದರ್ಯ, ತತ್ತ್ವಸಂಪತ್ತಿಗಳಿಗೆ ಆಕರವಾದ, ಶಿವಾಗಮ ಪರಿಜ್ಞಾನದ ಸಾರ ಸರ್ವಸ್ವವಾದ "ಸಿದ್ಧಾಂತ ಶಿಖಾಮಣಿ" ಮಹಾ ಗ್ರಂಥದ ಅನುವಾದವು ವೀರಶೈವ ಧರ್ಮಕ್ಕೆ ಮಾತ್ರವಲ್ಲದೆ ಕನ್ನಡ ಸಾರಸ್ವತ ಪ್ರಪಂಚಕ್ಕೇ ಮಹಾ ಕಾಣಿಕೆಯಾಗಿದೆ. ಜಗದ್ಗುರುಗಳವರು "ಸಿದ್ಧಾಂತ ಶಿಖಾಮಣಿ"ಯನ್ನು ಗದ್ಯರೂಪದಲ್ಲಿ 'ಮಣಿಕಾಂತಿ'ಯನ್ನಾಗಿ, ದಾರ್ಶನಿಕ ಮಹಾಕಾವ್ಯ ರೂಪದಲ್ಲಿ "ಮಣಿಮುಕುರವನ್ನಾಗಿ, ವಚನರೂಪದಲ್ಲಿ "ಮಣಿವಚನಗಳ"ನ್ನಾಗಿ ಕನ್ನಡಿಗರಿಗೆ ದಯಪಾಲಿಸಿದ್ದಾರೆ. ಮೂಲ ಗ್ರಂಥದ ನಿತ್ಯ ನವೀನತತ್ತ್ವ ಪ್ರತಿಪಾದನೆಯು ಕಾವ್ಯರ್ಷಿ ಶ್ರೀ ಜ. ಚ. ನಿ. ಅವರ ಸತ್ವಪೂರ್ಣ ಅನುವಾದದಿಂದ ಕೃತಾರ್ಥವಾಗಿದೆ. "ಗದ್ಯಂ ವದ್ಯಂ – ಪದ್ಯಂ ಹೃದ್ಯಂ" ಎಂಬ ಮಾತನ್ನು ಪೂರ್ಣ ಪ್ರತಿನಿಧಿಸುತ್ತಿರುವ ಈ ಮೂರು ಕೃತಿಗಳು ಅನುವಾದ ಸಾಹಿತ್ಯಾಕಾಶದಲ್ಲಿ ನಿತ್ಯ ಬೆಳಗುವ ನಕ್ಷತ್ರಗಳು. ಕನ್ನಡ ಸಾಹಿತ್ಯೇತಿಹಾಸದಲ್ಲಿ "ಸಿದ್ಧಾಂತ ಶಿಖಾಮಣಿ"ಯ ಅನುವಾದ ಕಾರ್ಯ ಪ್ರಪ್ರಥಮ; ಅಪ್ರತಿಮ!

# ಮಣಿಕೀರ್ತಿ

—ಹೆಚ್. ಗಂಗಾಧರನ್, ಎಂ. ಎ, ಎಲ್. ಎಲ್. ಬಿ, ಅಡ್ವೋಕೇಟ್

ಸತ್ಪುರುಷರು ಮಾಡುವ ಸತ್ಕಾರ್ಯಕ್ಕೆ ಅನಿವಾರ್ಯವಾಗಿ ಬೆಂಬತ್ತಿ ಬರುವ ಫಲವೆಂದರೆ ಕೀರ್ತಿ. ಇದು ನಿತ್ಯ. ಮಾಡಿದ ಕೃತಿಯ ರೂಪರೇಖೆಗಳು ಅಳಿಸಿದರೂ ಮಾಡಿದವ. ದೇಹ ಮಣ್ಣಾಗಿ ಅಸ್ಥಿ ಕರಗಿ ಹೋದರೂ ಉಳಿಯುವ ಸಂಪತ್ತು ಕೀರ್ತಿ. ' ಕ್ರಿಯೆಯೆಷ್ಟು ಶುದ್ಧವೋ ಅಷ್ಟು ಸಿದ್ಧಿಸುವುದು ಕೀರ್ತಿ. ಮಾಡಿದ ಕೃತಿಗೆ ಅನಪೇಕ್ಷಿತವಾಗಿ ಬರುವ ಫಲ ಕೀರ್ತಿ. ಇದರಿಂದ ಜೀವರ ಶ್ರೇಯಸ್ಸು. ಕೀರ್ತಿಗಾಗಿಯೇ ಮಾಡಿದ ಕೃತಿಗಳೂ ಇರುತ್ತವೆ. ಅದರಿಂದ ಬರುವ ಕೀರ್ತಿ ಕೃತಿ ಅಳಿಯುವ ಮುನ್ನವೇ ಅಳಿಸಿಹೋಗುತ್ತದೆ. ಯಾವುದರ ಕೀರ್ತಿ ಅನಂತ ಕಾಲ ಉಳಿದು ಬೆಳೆದು ಬೆಳಗುತ್ತಿರುವುದೋ ಅದು ಮಹತ್ಕೃತಿಯಾಗಿಯೇ ಇರುತ್ತದೆ. ಅಂತೆಯೇ ದಿನದಿನಕ್ಕೆ ಅನಂತ ಆತ್ಮಗಳ ಅಭ್ಯುದಯಕ್ಕೆ ಸಾಧನಾ ಮಾರ್ಗವನ್ನು ನೀಡುತ್ತಿರುವ ಮಹತ್ ಕೃತಿ 'ಸಿದ್ಧಾಂತ ಶಿಖಾಮಣಿ'

ಭಾರತೀಯ ಸಂಸ್ಕೃತಿಯನ್ನು ಚಿತ್ರಿಸಲು ಹಲವಾರು ಕೃತಿಗಳಿವೆ. ಋಷಿ ಮಹರ್ಷಿಗಳು ತಮ್ಮ ತಪಸ್ಸಿನ ಅನುಭವದ ಅಮೃತವನ್ನು ಕಾವ್ಯ ರೂಪದಲ್ಲಿ ಗದ್ಯರೂಪದಲ್ಲಿ ಸೂತ್ರರೂಪದಲ್ಲಿ ಜನಸಮುದಾಯಕ್ಕೆ ನೀಡಿದರು. ಅಂತೆಯೇ ವೇದ, ಉಪನಿಷತ್ತು ಪುರಾಣಾದಿ ಪುಣ್ಯಕೃತಿಗಳು ಉದಿಸಿದುವು. ಅಗಾಧವಾದ ವೇದಸಾಹಿತ್ಯ ಅಮೋಘವಾದ ಉಪನಿಷತ್ತು ಅಪಾರವಾದ ಪುರಾಣ ರಾಶಿಯಲ್ಲಿ ಅಂದಿನಿಂದ ಇಂದಿನವರೆಗಿನ ಮತ್ತು ಮುಂದೆ ಬರುವ ಯುಗಾಂತರಗಳ ಜೀವನದ ಮೇಲೆ ತನ್ನ ಹೊಂಗಿರಣಗಳನ್ನು ಬೀರುವ ಅನುಭವದ ಕಾಂತಿ ತುಂಬಿದೆ. ಈ ಬೃಹತ್ ಸಾಹಿತ್ಯ ಸೌಧವನ್ನು ಹೊಕ್ಕು ಆನಂದಿಸಲು ಅವಕಾಶವಿಲ್ಲದವರಿಗಾಗಿ ಮಹಾನುಭಾವರು ಸೂತ್ರ ರಚಿಸಿದರು. ಸುಲಭವೈದ್ಯವೆಂದು ಗೀತೆಗಳನ್ನು ರಚಿಸಿದರು. ಅವುಗಳಲ್ಲಿ ಮಹಾಭಾರತದಲ್ಲಿ ಬರುವ ಕೃಷ್ಣನಿಂದ ಅರ್ಜುನನಿಗೆ ಉಪದೇಶಿತವಾದ ಭಗವದ್ಗೀತೆ ಲೋಕಪ್ರಿಯವಾಯಿತು. ಭಾರತದಲ್ಲಿ ಬರುವ ಎಲ್ಲ ಆಚಾರ್ಯರು ತಮ್ಮ ಧರ್ಮ ಪ್ರತಿಪಾದನೆಗೆ ಗೀತೆಯನ್ನು ಉದಹರಿಸಿದರು. ಹಲವಾರು ಜನ ಪ್ರಭೃತಿಗಳು ಗೀತೆಯನ್ನು ಮಾತೆಯೆಂದೆಣಿಸಿ ತಮ್ಮ ಜೀವನದ ಆದರ್ಶವಾಗಿ ಬಳಸಿದರು. ಭವ ಜೀವನವನ್ನು ನಡೆಸಿ

ದರು. ಆದರೂ ಗೀತೆಯೊಂದೇ ಜೀವನದ ಎಲ್ಲ ಗುರಿಯನ್ನು ಮುಟ್ಟಿಸುವ ಮತ್ತು ಅದರ ಮಾರ್ಗವನ್ನು ಅರಿಯಲು ಸಾಧನವಾಗುವ ಕೃತಿಯೆಂದು ಹೇಳುವುದು ಕಷ್ಟ ವಾಗುತ್ತದೆ. ಏಕೆಂದರೆ ಎಲ್ಲ ಮಾರ್ಗಗಳನ್ನೂ ಹೇಳಿ ಯಾವುದೂ ಬೇಡವೆಂಬ ಆದೇ ಶವನ್ನು ಅಲ್ಲಿ ತೋರಿದೆ. ಅಲ್ಲಿ ವಿಚಾರ ಶಕ್ತಿಗಿಂತ ಆಚಾರಕ್ಕೆ ಪ್ರಾಧಾನ್ಯತೆ ತೋರಿದೆ. ಅದಕ್ಕಾಗಿಯೇ ಅನುಭಾವಿಗಳು ಅದನ್ನು ಜ್ಞಾನಪ್ರತಿಪಾದಕ ಕೃತಿಯೆಂದೂ ಕರ್ಮ ಯೋಗದ ಶಾಸ್ತ್ರವೆಂದೂ ಅನಾಸಕ್ತಿ ಯೋಗವೆಂದೂ ಬಣ್ಣಿಸಿದರು. ಆದರೂ ಅದು ಮಾತ್ರ ನಮ್ಮ ನಮ್ಮ ಬಿಂಬಗಳನ್ನು ನೋಡಿ ಆನಂದಪಡುವ ಮುಕುರವಾಗಿಯೇ ಉಳಿದಿದೆ. ಇದರಂತೆ ಅನೇಕ ಗೀತೆಗಳಿವೆ. ಗಣೇಶಗೀತೆ, ಶಿವಗೀತೆ, ಉತ್ತರಗೀತೆ, ಅವಧೂತ ಗೀತೆ, ಅಷ್ಟಾವಕ್ರಗೀತೆ, ಸೂರ್ಯಗೀತೆ, ದೇವೀಗೀತೆ, ರಾಮಗೀತೆ ಇತ್ಯಾದಿ ಹಲವಾರು ಗೀತೆಗಳು ನಮ್ಮ ಸಾಹಿತ್ಯ ಭಂಡಾರದಲ್ಲಿವೆ. ಆದರೆ ಭಗವದ್ಗೀತೆ ಗಳಿಸಿದಷ್ಟು ಕೀರ್ತಿ ಉಳಿದ ಗೀತೆಗಳಿಗಿಲ್ಲ. ಪ್ರಾಯಃ ಈ ಗೀತೆಯನ್ನು ದರ್ಶನಗಳ ಆಚಾರ್ಯರು ಬಳಸಿಕೊಂಡು ಪ್ರಸ್ಥಾನ ತ್ರಯಗಳಲ್ಲಿ ಸೇರಿಸಿಕೊಂಡದ್ದೂ ಒಂದು ಮುಖ್ಯ ಕಾರಣವಿರ ಬೇಕು. ಅದೇನೇ ಇರಲಿ ಆ ಕೃತಿಗಿರುವ ಕೀರ್ತಿ ಅಸಾಧಾರಣವಾದುದು. ಆದರೆ ಅದರಂತೆಯೇ ಪ್ರಖ್ಯಾತ ಕೃತಿಗಳು ಅನುಭಾವಿಗಳ ಆತ್ಮ ಶಿಖರಿಯಿಂದ ಚಿಮ್ಮಿ ಪುಣ್ಯ ಭೂಮಿಯಲ್ಲಿ ಪ್ರವಹಿಸಿವೆ. ಇಂತಹ ವಾಹಿನಿಗಳಲ್ಲಿ ಶಿವಯೋಗಿ ಶಿವಾಚಾರ ಸಿದ್ಧಾಂತ ಶಿಖಾಮಣಿಯೂ ಒಂದು. ಇದು ರೇಣುಕ ಗೀತೆಯೆಂಬ ಹೆಸರಿನಿಂದ ರಾಜಿಸುತ್ತಿದೆ.

ಭಾರತದ ಆಚಾರ್ಯತ್ರಯರು ತಮ್ಮ ದರ್ಶನಗಳನ್ನು ನಿರೂಪಿಸಲು ಭಗವದ್ಗೀತೆ ಯನ್ನು ಬಳಸಿದಂತೆ ಶಕ್ತಿ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸಲು ಶ್ರೀಪತಿಪಂಡಿತರೇ ಮೊದಲಾದವರು ಸಿದ್ಧಾಂತ ಶಿಖಾಮಣಿಯನ್ನು ಬಳಸಿದ್ದಾರೆ. ಏಕೆಂದರೆ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದ ಹೃದಯ ಷಟ್‌ಸ್ಥಲ. ಷಟ್‌ಸ್ಥಲದ ವಿವರಣೆಯನ್ನು ಸುಜ್ಞಾನ ವಿಜ್ಞಾನ ನಿರ್ದಿಷ್ಟವಾಗಿ ನಿರೂಪಿಸಬಲ್ಲ ಕೃತಿ ಸಿದ್ಧಾಂತ ಶಿಖಾಮಣಿ. "ಪ್ರಕೃತ ಸಿದ್ಧಾಂತ ಶಿಖಾಮಣಿಯ ಧರ್ಮ. ಷಟ್‌ಸ್ಥಲ ಧರ್ಮ. ವಿಶಾಲವಾದ ಧ್ಯೇಯವನ್ನು ಇಟ್ಟುಕೊಂಡು ಅದು ಜನ್ಮ ತಾಳಿದೆ. ಆಳವಾದ ವಿಚಾರವನ್ನು ಹುದುಗಿಸಿಕೊಂಡು ಮುನ್ನಡೆದಿದೆ. ಮಾನವನು ಯಾವ ಕ್ಷೇತ್ರದಲ್ಲಿಯೇ ದುಡಿಯಲಿ ಯಾವ ಕಾರ್ಯದಲ್ಲಿಯೇ ಆಸಕ್ತನಾಗಿರಲಿ ಅದರಲ್ಲಿ ಸಿದ್ಧಿಯನ್ನು ಪಡೆಯುವ ವೇಳೆಗೆ ಷಟ್ ಸ್ಥಲ ಭಾವಗಳನ್ನು ತಾಳಿಯೇ ಬಾಳಬೇಕು. ಷಟ್‌ಸ್ಥಲವೆಂಬ ಹಂತಗಳನ್ನು ಹತ್ತಿಯೇ ತೀರಬೇಕು. ಆಗ ಅವನು ಸಿದ್ಧಿಯ ಮೇಲುಪ್ಪರಿಗೆಯಲ್ಲಿ ಇರಬಲ್ಲ ಪ್ರಸಿದ್ಧ ಪುರುಷನಾಗಬಲ್ಲ. ಪರಮ ಸುಖವ ಪಡೆಯಬಲ್ಲ.

ಈ ವಿಶಾಲವಾದ ಉದ್ದೇಶವನ್ನು ಇಟ್ಟುಕೊಂಡೆ ಶ್ರೀಶಿವಯೋಗಿ ಶಿವಾಚಾರ್ಯರು ಶಿವಾಗಮಗಳಲ್ಲಿರುವ ಷಟ್‌ಸ್ಥಲ ತತ್ವವನ್ನು ಸಂಗ್ರಹಿಸಿ:

ಅನುಹ್ರಾಗಯ ಲೋಕಾನಾಂ ಅಭ್ಯುದಾತ್ ಸುಧಿಯಾಂ ವರಃ" ಎಂದು ಜಗತ್ತಿನ ಜನರ ಕ್ಷೇಮವಾಗಿ ಬಿತ್ತರಿಸಿದನು" (೧) ಪೂಜ್ಯ ಶ್ರೀ ಜ. ಚ. ನಿ. ಯವರು ಮೇಲೆ ಹೇಳಿದ ಮಾತು ಅಕ್ಷರಶಃ ಸತ್ಯ. ಸಿದ್ಧಾಂತ ಶಿಖಾಮಣಿಯ ಕೀರ್ತಿಗೆ ಇದಕ್ಕಿಂತಲೂ ಹೆಚ್ಚಿನದೇನು ಬೇಕು? ಮೇಲಿನ ಮಾತು ಶಿಖಾಮಣಿಯ ಸಾರಸರ್ವಸ್ವ. ಈ ಕೃತಿಯನ್ನು ಇಷ್ಟೊಂದು ವಿಶಾಲ ದೃಷ್ಟಿಯಿಂದ ಆಳವಾಗಿ ಇಳಿದು ನೋಡಿದವರು ವಿರಳ. ಈ ಮಾತು ಶ್ರೀಯವರು ಈ ಕೃತಿಯ ಅಮೃತ ಸಾಗರವನ್ನು ಮಥಿಸಿ ಮುಂದಿಟ್ಟ ನವನೀತ. ಈ ಕೃತಿಯ ವಿಷಯದಲ್ಲಿ ಇಷ್ಟನ್ನೇ ಹೇಳಿ ತೃಪ್ತರಾಗಿಲ್ಲ. "ಸಿದ್ಧಾಂತ ಶಿಖಾಮಣಿ"ಯು ಶ್ರೀ ಶಿವಯೋಗಿ ಶಿವಾಚಾರ್ಯರ ಅನುಭಾವ ತಪಸ್ಸಿನ ಫಲ. ಶಿವಾಗಮ ಪರಿಜ್ಞಾನದ ಸಾರಸರ್ವಸ್ವ. ಲೋಕದ ಎಲ್ಲ ಜನರ ಅಭ್ಯುದಯಕ್ಕಾಗಿ ಜನ್ಮ ತಾಳಿದೆ. ಜಗತ್ತಿನ ಜನರಿಗೆ ಬೇಕಾದ ಎಲ್ಲ ತತ್ವಗಳಿಂದ ತುಂಬಿ ತುಳುಕಿದೆ. ಇದರೊಳಗಿರುವ ತತ್ವಜ್ಞಾನವು ಪುರಾತನಕ್ಕೆ ಪುರಾತನ. ಅರ್ವಾಚೀನಕ್ಕೆ ಅರ್ವಾಚೀನ. ಅದ್ವೈತ ಸಿದ್ಧಾಂತದಿಂದ ಅರವಿಂದರ ಸಿದ್ಧಾಂತದವರೆವಿಗೂ ಇರುವ ಎಲ್ಲ ತತ್ವಗಳ ಸಾರವೂ ಇದರಲ್ಲಿ ಇದೆ ಶ್ರೇಷ್ಠ ಸಂಪತ್ತು ಇದರಲ್ಲಿದೆ. ಬೇರೊಂದು ಸಾಟಿಯಿಲ್ಲದ ಬೆಳಗು ಇದರಲ್ಲಿದೆ. (೨) ಶಿಖಾಮಣಿಯ ವಿಷಯದಲ್ಲಿ ಶ್ರೀಗಳಿಗಿರುವ ಪಾಂಡಿತ್ಯವಷ್ಟೇ ಅಲ್ಲ, ಅವರಿಗಿರುವ ಭಾರತೀಯ ದರ್ಶನ ಜ್ಞಾನದ ಪ್ರತಿಭೆಯನ್ನೇ ಪ್ರತಿಬಿಂಬಿಸುತ್ತದೆ. ಈ ಮಾತನ್ನು ತಮ್ಮ ಇತರ ಕೃತಿಗಳಲ್ಲಿ ಸಾಧಿಸಿ ತೋರಿಸಿರುವುದು ಗಮನಾರ್ಹ. ಶ್ರೀಗಳವರ ಪ್ರತಿಯೊಂದು ದಾರ್ಶನಿಕ ಗ್ರಂಥದಲ್ಲೂ ಈ ಮಾತು ಪ್ರತಿಧ್ವನಿಸಿರುವುದನ್ನು ನಾವು ಕಾಣುತ್ತೇವೆ. ಪ್ರಸ್ತುತ ಸಿದ್ಧಾಂತ ಶಿಖಾಮಣಿಯನ್ನು ಶ್ರೀಗಳವರು ಹೇಳುವ ಸೂತ್ರರೂಪದ ಅಭಿಪ್ರಾಯದಲ್ಲಿ ವಿವೇಚಿಸುವುದು ಇಲ್ಲಿ ಸಮಂಜಸವಾಗಿದೆ.

ವೀರಶೈವ ದರ್ಶನದ ಹೃದಯ ಷಟ್‌ಸ್ಥಲ ಸಿದ್ಧಾಂತ. ಪ್ರಕೃತ ಸಿದ್ಧಾಂತ ಶಿಖಾಮಣಿಯ ಧರ್ಮ ಷಟ್‌ಸ್ಥಲ ಧರ್ಮ. ಶ್ರೀಗಳವರ ಮೇಲಿನ ಮಾತನ್ನು ವರ ಕವಿ ಕುವೆಂಪು ಸಂಪೂರ್ಣ ಅನುಮೋದಿಸುತ್ತಾರೆ. ಅವರು ವೀರಶೈವ ಧರ್ಮವನ್ನು ಕುರಿತು ಹೇಳಿರುವ ಮಾತು ಸಿದ್ಧಾಂತ ಶಿಖಾಮಣಿಯ ಕೀರ್ತಿಗೆ ಮತ್ತೊಂದು ನಿದರ್ಶನವಾಗುತ್ತದೆ. "ಭಾಷೆಯಲ್ಲಿ, ಛಂದಸ್ಸಿನಲ್ಲಿ, ಭಾವಗಳಲ್ಲಿ ವಸ್ತುವಿನ ಆಯ್ಕೆಯಲ್ಲಿ ದರ್ಶನದಲ್ಲಿ ವೀರಶೈವ ಶ್ರದ್ಧಾಭಕ್ತಿಗಳಿಂದ ಪ್ರಚೋದಿತವಾದ ಕನ್ನಡ ಸಾಹಿತ್ಯದ ದ್ವಿತೀಯ ಸರ್ವೋದಯದ ಅಗ್ರಗಣ್ಯ ವೈಶಿಷ್ಟ್ಯವೆಂದರೆ 'ಕಾಯಕ' ತತ್ವಬೋಧೆ. ಜೀವನ ಯಾಪನೆಗಾಗಿ ಯಾರೇ ಆಗಲಿ ಯಾವ ವೃತ್ತಿಯನ್ನೇ ಕೈಗೊಳ್ಳಲಿ ಧರ್ಮ ದೃಷ್ಟಿಯಲ್ಲಿ ಉಚ್ಚ ನೀಚ ಬೇದವಿಲ್ಲ; ಶ್ರದ್ಧೆ ಭಕ್ತಿ ಶರಣಾಗತಿ ಪ್ರಪತ್ತಿ ಸಮರ್ಪಣೆ

---

೧) ಮಣಿಕಾಂತಿ ಪುಟ ೯-೧೦ (ಮುನ್ನುಡಿ)

೨) ಮಣಿಕಾಂತಿ-ಪು. ೩೨ (ಮುನ್ನುಡಿ)

ಸಮತೆ ಇವುಗಳ ಅನುಷ್ಠಾನವಿದ್ದಲ್ಲಿ ಅವರು ಅತ್ಯಂತ ಪವಿತ್ರರೂ ಪುಣ್ಯರೂ ಆಗಿ ಸರ್ವೋಚ್ಚ ದಿವ್ಯ ಪದವಿಗೇರುತ್ತಾರೆ.

ಉತ್ತಮ ವರ್ಗದವರಿಗೆ ಮಾತ್ರ ಮೀಸಲು ಎಂದು ಭ್ರಮಿಸಿದ್ದ ಭಕ್ತಿ, ಜ್ಞಾನ, ಭಗವದನುಭೂತಿ ಮತ್ತು ಆಧ್ಯಾತ್ಮಿಕ ಉನ್ನತಿ ಇವುಗಳಿಗೆ ಸಾಮಾನ್ಯ ಜನರು, ಸಲ್ಲುವಂತಾದುದು; ಕೆಳವೃತ್ತಿಯವರೆಂದೂ ಕೀಳು ಜಾತಿಯವರೆಂದೂ ಮೂಲೆಗೆ ತಳ್ಳಿಸಿಕೊಂಡು ಅನಾಮಧೇಯರೂ ಅಜ್ಞಾತರೂ ಆಗಿ, ದೇವಸ್ಥಾನಗಳಿಗೂ ರಾಜಾಸ್ಥಾನಗಳಿಗೂ ಬಹುದೂರದಲ್ಲಿಯೇ ನಿಂತಿರುತ್ತಿದ್ದವರೂ ಸಾಧಕರಾಗಿ, ಶರಣರಾಗಿ, ಸಿದ್ಧರಾಗಿ ಪರಮ ಶ್ರೇಯಸ್ಸಿನ ಮಹೋನ್ನತ ಶಿಖರಗಳಿಗೆ ಏರಿದ ರೋಮಾಂಚಕ ನಿದರ್ಶನಗಳನ್ನೊಳಗೊಂಡ ಈ ಕಥನ ಕೃತಿ ನಮ್ಮ ಸಾಮಾನ್ಯ ಜನವರ್ಗಕ್ಕೆ ಆಶೆ ಧೈರ್ಯ ಆತ್ಮ ಗೌರವಗಳನ್ನು ದಯಪಾಲಿಸಿ ಅವರನ್ನು ರಾಜಕೀಯ ಪ್ರಜಾಸತ್ತೆಗೆ ಮಾತ್ರವಲ್ಲದೆ ಆಧ್ಯಾತ್ಮಿಕವಾದ ಆತ್ಮಶ್ರೀಯ ಪ್ರಜಾಸತ್ತೆಗೂ ಅಧಿಕಾರಿಗಳನ್ನಾಗಿ ಮಾಡುವುದರಲ್ಲಿ ಸಂದೇಹವಿಲ್ಲ. (೧) ಕವಿ ಕುವೆಂಪು ಹೇಳಿದ ವೀರಶೈವ ದರ್ಶನದ ಈ ವಿವರಣೆ ಸಿದ್ಧಾಂತ ಶಿಖಾಮಣಿಯು ಬೋಧಿಸಿದ ತತ್ತ್ವಗಳನ್ನೇ ಪ್ರತಿಪಾದಿಸುತ್ತದೆ.

ಶ್ರೀಗಳವರು ಸಿದ್ಧಾಂತ ಶಿಖಾಮಣಿಯ ತತ್ತ್ವಗಳ ಆಳವಾದ ಅಭ್ಯಾಸ ಮಾಡಿದಂತೆ ಅಪಾರ ಅನುಭವವನ್ನು ಪಡೆದಿದ್ದಾರೆ. ಆದುದರಿಂದ ಅದರಲ್ಲಿನ ತತ್ವಗಳನ್ನು ಗದ್ಯ ಪದ್ಯ ವಚನಗಳಾಗಿ ರಚಿಸಿ ರಸೋಲ್ಲಾಸನೆಯಲ್ಲಿ ನಲಿಯುತ್ತಾರೆ. ಅವರು ಷಟ್‌ಸ್ಥಲದ ವಿಷಯವಾಗಿ ಹೇಳುವ ಮಾತು ಅತ್ಯಂತ ಮನೋಜ್ಞವಾಗಿದೆ. ಪಾಂಡಿತ್ಯಪೂರ್ಣವಾಗಿದೆ ವಿಶ್ವದರ್ಶನದ ಪ್ರತಿಬಿಂಬವಾಗಿದೆ. "ಷಟ್‌ಸ್ಥಲವು ಒಬ್ಬರ ಸೊತ್ತಲ್ಲ. ಅದು ಮಾನವೀಯ ಧರ್ಮ. ಅದರ ವಿಕಾಸವೆ ಮಾನವ್ಯದ ವಿಕಾಸ ಮಹೋನ್ನತಿ, ಮಹಾಶಾಂತಿ. ಮಾನವನ ಪ್ರತಿಜೀವನದಲ್ಲಿಯೂ ಆರು ಭಾವಗಳಿವೆ; ಆರು ಹಂತಗಳಿವೆ. ಅವು ಮಹೋನ್ನತಿಗೆ ಮಹಾಶಾಂತಿಗೆ ಕಾರಣಗಳಾಗಬೇಕಾದಲ್ಲಿ ಸತ್ಯಸರಳ ಮಾರ್ಗದತ್ತ ಜೀವನವನ್ನು ಸಾಗಿಸಬೇಕು. ಆ ಸತ್ಯ ಮಾರ್ಗದಲ್ಲಿ ಒದಗುವ ಆರವಸ್ಥೆಗಳೇ ವಾಸ್ತವಿಕ ಷಟ್‌ಸ್ಥಲಗಳು" (೨) ಇದರಲ್ಲಿರುವ ಪ್ರತಿಯೊಂದು ವಾಕ್ಯವೂ ಒಂದೊಂದು ಮಹಾ ಪ್ರಬಂಧದಂತೆ ಪ್ರತಿಬಿಂಬಿಸುತ್ತದೆ. ಅರ್ಥವತ್ತಾಗಿದೆ, ರಸಪೂರ್ಣವಾಗಿದೆ. ಜ್ಞಾನ ಪ್ರಚೋದಕವಾಗಿದೆ. ಜನ ಸಾಮಾನ್ಯರೆಲ್ಲರ ಅಭ್ಯುದಯಕ್ಕೆ ಸಾಧನವಾಗದ, ವಿಶ್ವ ಕುಟುಂಬದ ಸಮಾನತೆಗೆ ಸಾಧ್ಯವಾಗದ ಯಾವೊಂದು ದರ್ಶನವೂ ಕೀರ್ತಿ ಪಡೆಯಲಾರದು. ಯಶಸ್ಕರವಾಗಲಾರದು. ಈ ವಿಶಾಲ ಗುರಿಯನ್ನು ಹೊಂದಿಯೇ ಹೊರಹೊಮ್ಮಿದ ಧರ್ಮ ಷಟ್‌ಸ್ಥಲ ಧರ್ಮ. ಈ ಅಂಶವನ್ನು ಶ್ರೀಗಳವರು ಒಂದು ಬಾರಿ ಒಂದು ರೀತಿಯಲ್ಲಿ ಅಂದು ತೃಪ್ತರಾಗುವುದಿಲ್ಲ.

---

೧) ಶರಣ ಚರಿತಾಮೃತ-ಸಿದ್ಧಯ್ಯ ಪುರಾಣಿಕ (ಮುನ್ನುಡಿ ಪು. ೯)

೨) ಮಣಿಕಾಂತಿ ಪು-೧೨-೧೭ (ಮುನ್ನುಡಿ)

ಈ ತತ್ವದ ಗುರಿಯನ್ನು ಎಳೆ ಎಳೆಯಾಗಿ ಬಿಡಿಸಿ ಕೊನೆಗೆ ಕಾವ್ಯ ಪೀತಾಂಬರ ವಾಗಿ ಹೆಣೆದಿದ್ದಾರೆ. ಓದುಗರ ಹೃದಯವನ್ನು ಪುಲಕಿತಗೊಳಿಸಿದ್ದಾರೆ. ಆತ್ಮೋನ್ನತಿಯ ದಿವ್ಯ ದರ್ಶನ ಮಾಡಿಸುತ್ತಾರೆ. ಅವರ ಮಾತಿನಲ್ಲಿ ಹೇಳುವುದಾದರೆ "ಕೇವಲ ವ್ಯಕ್ತಿ ಜೀವನವೆ ಶಕ್ತಿ ಭಾವನೆಯೆ ಮಾನವನ ಇಡಿಯ ಗುರಿಯಲ್ಲಿ ವ್ಯಕ್ತಿ ಜೀವನದಿಂದ ವಿಶ್ವಜೀವನಕ್ಕೆ ಹೋಗಿ ನಿಲುಕಬೇಕು. ಶಕ್ತಿ ಭಾವನೆಯಿಂದ ವಿರಕ್ತಿ ಭಾವನೆಗೆ ನೆಲೆಯಾಗಬೇಕು. ಅದುವೆ ಮಾನವನ ಪರಿಪೂರ್ಣ ಗುರಿ. ಅದನ್ನು ಬೋಧಿಸುವುದೆ ಸಾಧಿಸುವುದೆ ಷಟ್‌ಸ್ಥಲದ ಸಿರಿ" ಈ ದಿವ್ಯ ಮಂತ್ರವನ್ನು ನೆನಪಿಟ್ಟುಕೊಂಡು ಷಟ್‌ಸ್ಥಲ ಸಿದ್ಧಾಂತವನ್ನು ಅಭ್ಯಾಸ ಮಾಡಿದವರು ವಿರಳ. ಸಿದ್ಧಾಂತ ಶಿಖಾಮಣಿಯಲ್ಲಿ ಈ ಬೆಳಕನ್ನು ತಂದು ಉಂಡು ತಣಿದವರೂ ವಿರಳ. ಈ ಮಾತನ್ನು ಹೆಜ್ಜೆ ಹೆಜ್ಜೆಗೂ ತೋರಿಸುತ್ತಾರೆ ಶ್ರೀಗಳವರು ತಮ್ಮ ಎಲ್ಲ ದಾರ್ಶನಿಕ ಕೃತಿಗಳಲ್ಲಿ. ಆದುದರಿಂದ ಮೇಲೆ ಹೇಳಿದ ಸೂತ್ರಗಳನ್ನು ನೆನಪಿಟ್ಟುಕೊಂಡು ಸಿದ್ಧಾಂತ ಶಿಖಾಮಣಿಯನ್ನು ಸೂಕ್ಷ್ಮವಾಗಿ ವಿವೇಚಿಸಿದರೆ ಅದರ ಕೀರ್ತಿ ಎಷ್ಟು ಶಾಶ್ವತವಾದುದು, ವಿಶಾಲವಾದುದು ಎಂಬುದನ್ನು ನಾವು ಅರಿಯಬಹುದು. ಆರು ಸ್ಥಲಗಳೆಂದರೆ ಆರು ಹಂತಗಳು ಅಥವಾ ಸ್ಥಾನಗಳು. ಈ ಆರು ಮೆಟ್ಟಲುಗಳನ್ನೇರಿ ಮಾನವ ತನ್ನ ಗುರಿ ಮುಟ್ಟುತ್ತಾನೆ. ದಾರ್ಶನಿಕಾರ್ಥದಲ್ಲಿ ಜೀವಾತ್ಮ ಪರಮಾತ್ಮರ ಸಮರಸವಾಗುವುದು. ಈ ಆರು ಸ್ಥಲಗಳನ್ನು ಏರಿದಾಗಲೇ ಜೀವ ದೇವಸಮರಸವೇ ಮಾನವನ ಅಂತರಂಗ ಬಹಿರಂಗ ವ್ಯಾಪಾರದ ಗುರಿ. ಗುರಿಮುಟ್ಟುವುದಕ್ಕೊಂದು ದಾರಿ ಬೇಕು. ಆದುದರಿಂದಲೇ ಈ ದರ್ಶನವನ್ನು ಷಟ್‌ಸ್ಥಲ ಮಾರ್ಗವೆಂದು ಹೇಳುತ್ತಾರೆ.

ಈ ಆರು ಹಂತಗಳನ್ನು ವೀರಶೈವ ಪಾರಿಭಾಷಿಕ ಶಬ್ದದಲ್ಲಿ "ಸ್ಥಲ" ಎಂದು ಕರೆದಿದೆ. ಸ್ಥಲವೆಂಬುದನ್ನು ದಾರ್ಶನಿಕ ಅರ್ಥದಲ್ಲಿ ಬಳಸಿದೆ. ಈ ಅರ್ಥದಿಂದ ಪ್ರತಿಯೊಂದು ಹಂತವೂ ಪೂರ್ಣತೆಯ ಹಾಗು ಸಾಕ್ಷಾತ್ಕಾರದ ನಿಲವು ಶಾಸ್ತ್ರ ದೃಷ್ಟಿಯಿಂದ

> ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
> ತದ್ಬ್ರಹ್ಮ ಸ್ಥಲಮಿತ್ಯುಕ್ತಂ ಸ್ಥಲತತ್ವ ವಿಶಾರದೈಃ ॥

ಎಂದರೆ ಜಗತ್ತಿನ ಎಲ್ಲ ಚರಾಚರ ವಸ್ತುವೂ ಯಾವುದರಲ್ಲಿ ಉತ್ಪತ್ತಿ ಲಯಗಳನ್ನು ಹೊಂದುವುದೋ ಅದಕ್ಕೆ ಸ್ಥಲವೆಂದು ಕರೆದಿದ್ದಾರೆ. ಆದುದರಿಂದ ಪ್ರತಿಯೊಂದು ಹಂತದಲ್ಲೂ ಸಾಧಕನು ಸಾಕ್ಷಾತ್ಕಾರ ಹೊಂದುತ್ತಾ ಹೋಗಬೇಕಾಗುತ್ತದೆ. ಶ್ರೀಗಳವರ ವಿವರಣೆಯಿಂದ ಹೇಳುವುದಾದರೆ "ಮಾನವ ನಿಸರ್ಗ ಜೀವನಕ್ಕೆ ವ್ಯತ್ಯಸ್ತವಾದ ಪ್ರತಿಪಾದನೆಯನ್ನು ಮಾಡುವುದು ಧರ್ಮಕ್ಕೂ ಧರ್ಮ ಶಾಸ್ತ್ರಗಳಿಗೂ ಒಂದು ಕೊರತೆ! ಒಂದು ಅಪರಿಪಕ್ವತೆ! ಆಚರಣೆಯ ವಿಷಯದಲ್ಲಿ ಜನತೆಗೆ ಒಂದು ಜಟಿಲ ಸಮಸ್ಯೆ....

ಈ ಎಲ್ಲ ಲೋಪ ದೋಷಗಳನ್ನು ದಾಟಿ ಮಾನವನ ಸಹಜ ಪ್ರವೃತ್ತಿಯನ್ನನುಸರಿಸಿ ಆ ವೃತ್ತಿಯನ್ನೇ ನಿವೃತ್ತಿಯನ್ನಾಗಿ ಮಾರ್ಪಡಿಸಿ ಮಾನವನನ್ನು ಮೇಲ್ಮಟ್ಟಕ್ಕೆ ಒಯ್ಯುವ ವೈಶಿಷ್ಟ್ಯವುಳ್ಳದ್ದು ಷಟಸ್ಥಲ........ಚರಮ ಜೀವನದ ಪರಮ ಸುಖವನ್ನು ಪ್ರಪ್ರಥಮದಲ್ಲಿಯೇ ಉಂಟುಮಾಡಿಕೊಡಬಲ್ಲುದು. (೧) ಭಾರತದಲ್ಲಿ ಮಾನವನ ಇತಿಹಾಸ ಆರಂಭವಾದಾಗಲೇ ಧರ್ಮದರ್ಶನಗಳ ಉದಯವಾಗಿದೆ. ಆದರೆ ಹುಟ್ಟಿದ ಧರ್ಮಗಳು ಸಮಸ್ಯಾ ಪರಿಹಾರಕ್ಕಿಂತ ಸಮಸ್ಯೆಯ ಗೊಂದಲವನ್ನೇ ಎಬ್ಬಿಸಿರುವುದು ಇತಿಹಾಸದಿಂದ ಕಂಡುಬರುತ್ತದೆ ಮಾನವನ ಅಂತರಾತ್ಮಕ ಸಾಕ್ಷಾತ್ಕಾರ ಸಾಧನೆಗೆ ಮೀಸಲಾದ ದರ್ಶನ ನಿತ್ಯ ಜೀವನದಲ್ಲಿ ನುಗ್ಗಿ ಸಮಾಜದ ಸಾಮೂಹಿಕ ಜೀವನದಲ್ಲಿ ಅಲ್ಲೋಲ ಕಲ್ಲೋಲಗಳನ್ನುಂಟುಮಾಡಿದೆ. ಆತ್ಮಸಾಕ್ಷಾತ್ಕಾರಕ್ಕೆ ಜ್ಞಾನವನ್ನೇ ಪ್ರಧಾನವೆಂದು ಜ್ಞಾನವೇ ಸಾಕ್ಷಾತ್ಕಾರವೆಂದು ಹೇಳುವುದಕ್ಕೆ ಆರಂಭಿಸಿದಾಗಲೇ ಈ ಆಂದೋಳನ ಜೀವನದಲ್ಲಿ ಮೂಡಿದೆ. ಸಾಮಾಜಿಕ ಭಿನ್ನತೆಗಳು ವ್ಯಕ್ತಿ ವಿಕಾಸಕ್ಕೆ ಆತ್ಮ ವಿಲಾಸಕ್ಕೆ ಅಡ್ಡಿಯಾಗಿವೆ. ಆದುದರಿಂದ ಅರಿವಿಗಿಂತ ಆಚರಣೆಯಲ್ಲಿ ಸಾಕ್ಷಾತ್ಕಾರ ಸಾಧ್ಯವೆಂದೂ ಸುಲಭವೆಂದೂ ನಿದರ್ಶನವಾಗಿ ನಿಲ್ಲಬಲ್ಲ ದರ್ಶನಕ್ಕಾಗಿ ಮಾನವ ನಿರೀಕ್ಷಿಸಿದ್ದಾನೆ ಆ ಮಹತ್ಕಾರ್ಯ ಷಟ್‌ಸ್ಥಲ ದರ್ಶನದಿಂದ ಸಂಪೂರ್ಣವಾಗಿ ಸಾಧಿಸಿದೆಯೆಂದು ಧಾರಾಳವಾಗಿ ಹೇಳಬಹುದು. ಭಾರತದ ಎಲ್ಲ ಧರ್ಮಗಳೂ ಕೊನೆಗೆ ಕಂಡೋ ಕಾಣದೆಯೋ ಈ ಸಿದ್ಧಾಂತವನ್ನು ಪ್ರಚ್ಛನ್ನವಾಗಿ ಒಪ್ಪಿರುವುದೂ ಅಪ್ಪಿರುವುದೂ ಕಂಡು ಬರುತ್ತದೆ. ಆದುದರಿಂದಲೇ ಷಟ್‌ಸ್ಥಲ ದರ್ಶನವು ವಿಶ್ವ ದರ್ಶನವೆನಿಸಿದೆ. ಈ ದರ್ಶನ ಮಾನವರೆಲ್ಲರ ನಿತ್ಯ ಜೀವನದಲ್ಲಿ ಹಾಸು ಹೊಕ್ಕಾಗಿ ಅವರನ್ನು ಪೂರ್ಣತೆಯೆಡೆಗೆ ಕೈ ಹಿಡಿದು ನಡೆಸುತ್ತದೆ. ಏಕೆಂದರೆ "ಮಾನವರಿಗೆಲ್ಲ ತಾವು ಮಾಡುವ ಕಾರ್ಯದಲ್ಲಿ ಪಡುವ ಭೋಗ–ಯೋಗಗಳಲ್ಲಿ ಸಾಮರಸ್ಯವನ್ನು ಪಡೆದು ಪರಿಪೂರ್ಣತೆಯಲ್ಲಿ ತನ್ಮಯರಾಗಬೇಕೆಂಬ ಆಕಾಂಕ್ಷೆಯಿರುತ್ತದೆ. ಹಾಗಾಗುವುದೇ ಪ್ರಾಕೃತಿಕ ಮತ್ತು ಪಾರಮಾರ್ಥಿಕ ಸತ್ಯ. ಅದೇ ಪರಮಾನಂದ ಪರಾಕಾಷ್ಠೆ ! ಆದರೆ ಆ ಮಾರ್ಗದಲ್ಲಿ ಉಂಟಾಗುವ ಷಡ್ಭಾವಗಳನ್ನು (ಷಟ್ ಸ್ಥಲಗಳನ್ನು) ಆರು ನಿಲುಕಡೆಗಳನ್ನು ತಿಳಿದು ಅನುಭವಿಸುತ್ತ ಮುನ್ನಡೆವ ಪರಿಸ್ಥಿತಿಯನ್ನು ಪರಿಜ್ಞಾನವನ್ನು ಕಂಡುಕೊಂಡವರು ನಿಜ. ಅವನ್ನು ವಿಂಗಡಿಸಿ ತೋರಿದ [illegible] ವಿಜ್ಞಾನ ವೈಶಿಷ್ಟ್ಯ [illegible] ಆಚಾರ್ಯರ ಪ್ರತಿಭೆ ಕ್ರಿಯೆಯನ್ನು ಕ್ರಿಯಾಪರ [illegible] ಸಾಗಿ ಚಿತ್ರಿಸಿದ್ದಾರೆ.

ಷಟ್‌ಸ್ಥಲ ದರ್ಶನ ಅನುಷ್ಠಾನಾತ್ಮಕ ನಿಲುವೆಂದು ಹೇಳಿದಾಗ ಅದು ಅರಿವಿನ ಹಂಗು ತೊರೆದಿದೆಯೆಂದು ಭಾವಿಸಬಾರದು. ಇಲ್ಲಿ ಅರಿವು ಆಚರಣೆಗಳ ಸಮನ್ವಯ

---

೧) ವ.ಣವ ಂಕ ೦ (ಮುನ್ನುಡಿ) ಪು. ೨೧

೨) ವ.ಣವ ಂಕುರ–ಮುನ್ನುಡಿ ಪು. ೮.

ತಾನಾಗಿ ಆಗುತ್ತದೆ. ಈ ದರ್ಶನದ ನಿರೂಪಣವೇ ಆ ರೀತಿಯದು. ಅದನ್ನು ನಿಡುಮಾಮಿಡಿ ಶ್ರೀಶೈಲ ಶ್ರೀಗಳವರು ಮನಸದಣಿಯ ವಿವರಿಸಿದ್ದಾರೆ. "ಜಡತತ್ವವನ್ನರಿಯಲು ಭೌತಶಾಸ್ತ್ರ ಸಾಧನವಾಗಿರುವಂತೆ ಅಜಡ ತತ್ವವನ್ನರಿಯಲು ತತ್ವಶಾಸ್ತ್ರವೇ ಸತ್ಯ ಸಾದನ. ಆ ತತ್ವ ಶಾಸ್ತ್ರದಲ್ಲಿ ಒಂದು ಹೊಸ ಮಾರ್ಗವನ್ನು ಕಂಡು ಹಿಡಿದು ಜ್ಞಾನಾನುಭವಗಳ ಸಮರಸ ಶಾಸ್ತ್ರವನ್ನು ಅಂದರೆ ಷಟ್‌ಸ್ಥಲ ಮಾರ್ಗವನ್ನು ಒಂದು ಮೂರ್ತರೂಪಕ್ಕೆ ತರುವ ನೊತ್ತಮೊದಲಿನ ಸಾಹಸ, ಅದೇಕೆ ಸಿದ್ಧಿ ಶಿವಯೋಗಿ ಶಿವಾಚಾರ್ಯರದು. ಆತನ ಷಟ್‌ಸ್ಥಲ ಶಾಸ್ತ್ರದಲ್ಲಿ ಜಡದಿಂದ ಅಜಡದವರೆವಿಗೂ ಸ್ಪಷ್ಟವಾದ ನಿರ್ದುಷ್ಟವಾದ ವಿಶಿಷ್ಟವಾದ ಪ್ರತಿಪಾದನೆಯಿದೆ. ಭೌತ, ಜೀವ, ಅರ್ಥ ಮುಂತಾದ ಎಲ್ಲ ಶಾಸ್ತ್ರಗಳ ಸಾರ ಅದರೊಳಗಿದೆ. ಈ ಸಿದ್ಧಾಂತ ಜನಜೀವನದ ಸೂಕ್ಷ್ಮ ಕಾರಣಗಳನ್ನೆಲ್ಲ ವಿಶದವಾಗಿ ವಿವರಿಸಿದೆ. ಇದರಿಂದ ಈ ಸಿದ್ಧಾಂತ ಸರ್ವಜನಾದರಣೀಯವಾದುದು. ಸದಾಂಗೀಕಾರಾರ್ಹವಾದುದು.(೧) ಸಿದ್ಧಾಂತ ಶಿಖಾಮಣಿಯ ವಿಷಯದಲ್ಲಿ ಶ್ರೀಗಳವರು ಮಾಡಿದ ವಿಮರ್ಶೆ ಈ ಕೃತಿಯ ಅಷ್ಟೆ ಅಲ್ಲ ಷಟ್‌ಸ್ಥಲ ದರ್ಶನದ ಕೀರ್ತಿಯನ್ನು ಹೆಚ್ಚಿಸಿದೆ. ಅಭಿಮಾನವನ್ನು ಮೂಡಿಸುತ್ತದೆ. ಆನಂದವನ್ನುಂಟುಮಾಡುತ್ತದೆ.

## ಮಣಿದರ್ಶನ ಮತ್ತು ಧರ್ಮ

ಸಿದ್ಧಾಂತ ಶಿಖಾಮಣಿಯ ದರ್ಶನ ಮತ್ತು ಧರ್ಮವೇ ಷಟ್‌ಸ್ಥಲ. ಷಟ್‌ಸ್ಥಲದ ಸೂಕ್ಷ್ಮ ಚಿತ್ರವನ್ನು ಶ್ರೀಗಳವರು ಹೇಳಿರುವುದು ಅತ್ಯಂತ ಅರ್ಥಪೂರ್ಣವೂ ಗಭೀರವೂ ಆಗಿದೆ.

"ವೃತ್ತಿ ಜೀವನದ ಸ್ವಾರ್ಥಸಾಧನೆಯನ್ನು ಬಿಡಿಸುವುದೆ ಮೊದಲಿನದಾದ ಭಕ್ತಸ್ಥಲದ ಮುಖ್ಯೋದ್ದೇಶ. ಸ್ವಾರ್ಥಸಂಕುಚಿತ–ಅರ್ಥಕಾಮಸಂವ್ಯಥಿತ ಜೀವನದ ಪಾತ್ರವನ್ನೆಲ್ಲ ಪರಿಹರಿಸಿ, ಪುಣ್ಯಸಂಗಳಿಸಿ ಪರಮಾರ್ಥವನ್ನು ವಿವೇಚಿಸಿ ಪರಮ ಗುರುವಿನ ಕಾರುಣ್ಯಕ್ಕೆ ಭಾಗಿಯಾಗುವುದೇ ಒಂದು ಹಂತ.

ಈ ವಿಶ್ವಜೀವನದಿಂದ ವಿಶ್ವ ಕುಟುಂಬಿಯಾ.. ವಿಶ್ವದ ವಿಶಾಲವಾದ ಐಶ್ವರ್ಯಾಧಿಕಾರಿಯಾಗಿ ವಿಶ್ವ ಕಲ್ಯಾಣಕ್ಕಾಗಿ ಅದನ್ನು ವಿನಿಯೋಗಿಸುವವನು ಆಗುವುದೇ ಮಹೇಶ್ವರ ಸ್ಥಲದ ಮರ್ಮ.

---

೧) ಮಣಿಮುಕರ-ಮುನ್ನುಡಿ ಪು. ೧೭.

ವಿಶ್ವವಿಶಾಲ ಜೀವಿಯಾಗಿ ಬಾಳುವಾಗ ವಿಶ್ವಸಂಪತ್ತು ಬೇಕಾದಷ್ಟಿದ್ದರೂ ತನಗೆ ಬೇಕೆಂಬ ಬಯಕೆಯಿಲ್ಲದೆ ಬಳಲಿಕೆಯಿಲ್ಲದೆ ಅದನ್ನು ಲೋಕದ ಪ್ರಗತಿಗೆ ಹಂಚಿ ತಾನು ಜೀವನ ನಿರ್ವಹಣ ಮಾತ್ರದಿಂದ ಸಂತುಷ್ಟನಾಗಿ ಸುಪ್ರಸನ್ನನಾಗಿ ಇರುವುದೇ ಪ್ರಸಾದಿಸ್ಥಲದ ಪರಿಶುಭ್ರ ಘಟ್ಟ.

ಜ್ಞಾನವೇ ಆತ್ಮ, ಪ್ರಾಣವೇ ಶಕ್ತಿ ಎಂದು ಅರಿದು ಜ್ಞಾನಜೀವಿಯಾಗುವುದೇ ಪ್ರಾಣಲಿಂಗಿಯ ಮೂಲಪ್ರಾಣ. ವಿಶ್ವ ವಿಚಾರಗಳನ್ನೆಲ್ಲ ವಿವೇಚಿಸಿ ವಿಶಿಷ್ಟವಾದುದರಲ್ಲಿ ವಿಶ್ವಾಸ ತೋರುವುದೇ ಪ್ರಾಣಲಿಂಗಿಯ ಹೃದಯ ಹರಕೆ.

ಅರಿದಾಚರಿಸುವವನಾದರೂ ಅಹಂಕಾರಕ್ಕೆ ಅವಕಾಶವಿಲ್ಲದೆ ವಿನಯವಿನಮಿತನಾಗಿ ಜನತಾ ಜಗದೀಶನ ಸೇವಾಭಾಗಿಯಾಗಿ ಇರುವವನೇ ಶರಣ. ಪಾಣಿಗ್ರಹಣ ಮಾಡಿದವನೆ ತನ್ನ ಪತಿಯೆಂಬ ದೃಢಭಾವ ಸತಿಯಲ್ಲಿ ಹೇಗಿರಬೇಕೋ ಹಾಗೆ ತಾನು ಶೀಲದ ನಿಜತತ್ವವೆ ಸತ್ಯವೆಂದು ಭಾವಿಸಿ ಸಾವು ಬಂದರೂ ಅದನ್ನು ಬಿಡದೆ ನಯದಿಂದ ನಡೆಸುವುದೇ ಶರಣಸ್ಥಲದ ಸೂಕ್ಷ್ಮ.

ತಾನೆ ಕೈಕೊಂಡ ಸತ್ಯ ಮಾರ್ಗವು ಸಾಧಿಸಿ ಸತ್ಫಲ ಪ್ರಾಪ್ತಿಯಾಗುವುದೇ ಐಕ್ಯತೆ. ನಿರ್ಮಲ ಮನಸ್ಕನಾಗಿ ನಿಖಿಲಜಗದ ಕಲ್ಯಾಣ ಕಾರ್ಯಸಿದ್ಧಿ ಫಲಾನಂದದಲ್ಲಿ ಮುಳುಗಿರುವುದೇ ನಿಜೈಕತ್ಯೆ. ಆನಂದವೇ ಬ್ರಹ್ಮ. ಅದರಲ್ಲಿರುವುದೇ ಸಾಮರಸ್ಯ ಅವನೇ ಷಟ್‌ಸ್ಥಲ ಬ್ರಹ್ಮಿ. ಷಟ್‌ಸ್ಥಲ ಚಕ್ರವರ್ತಿ. "(೧) ಮೇಲೆ ಹೇಳಿದ ವಿವರಣೆ ಷಟ್‌ಸ್ಥಲ ಧರ್ಮದರ್ಶನದ ಗುರಿ ಮತ್ತು ವಿವೇಚನೆಯ ಪೂರ್ಣಚಿತ್ರ. ಶಿವಧರ್ಮದ ಹೃದಯವನ್ನು ಇಷ್ಟು ಬಿಡಿಯಾಗಿ ಬಿಡಿಸಿ ತೋರಿಸಿರುವುದು ಸಾಹಸದ ಮಾತು ಮತ್ತು ಅನುಭವ ಸಿದ್ಧಿಯ ಫಲ.

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವು ಷಟ್‌ಸ್ಥಲಗಳು. (೨) ಮಾನವ ತನ್ನ ಗುರಿ ಮುಟ್ಟುವ ಮೊದಲನೆ ಹಂತವೇ ಭಕ್ತಸ್ಥಲ. ಮಾನವ ತನ್ನಲ್ಲಿರುವ ಮಾನವೀ ಶಕ್ತಿಗೆ ಅತ್ಮರೂಪವಾದ ಪ್ರತ್ಯೇಕ ಶಕ್ತಿಯೊಂದಿದೆ, ಅದರ ಆಧಾರದಿಂದಲೇ ಈ ಸಂಸಾರ ಗತಿಯೆಂದು ಅರಿತು ಅದೆಷ್ಟೋ ಶತಮಾನಗಳಾಗಿವೆ. ಆ ಶಕ್ತಿ ಬಾಹ್ಯೇಂದ್ರಿಯಗಳಿಗೆ ಅಗಮ್ಯವೂ ಅಪ್ರಾಪ್ಯವೂ ಆದುದೆಂದು ಉಪನಿಷತ್ಕಾಲದಲ್ಲೇ ನಿಶ್ಚಿತವಾಗಿದೆ. ನಮ್ಮ ಸರ್ವವಾಣಿಯೂ ಮಾನವ ಬುದ್ಧಿಯೂ ಅಲ್ಲಿಗೆ ನಿಲುಕಲಾರವು.(೩) ಚಕ್ಷು ನೋಡಲಾರದು; ಮಾತು ಮುಟ್ಟಲಾರದು.

---

೧) ಮಣಿಕಾಂತಿ-ಮುನ್ನುಡಿ ಪು. ೧೪

೨) ಸಿ. ಶಿಖಾಮಣಿ ٧. ೨೪

೩) ತೈ. ಉಪನಿಷತ್. ೨-೪

ಬುದ್ಧಿ ಎಟುಕಲಾರದು.(೧) ಆದುದರಿಂದ ಮಾನವ ತನ್ನ ಸರ್ವಶಕ್ತಿಯನ್ನೂ ಈ ಅಂತಶ್ಶಕ್ತಿ ಸಾಕ್ಷಾತ್ಕಾರಕ್ಕಾಗಿ ಬಳಸುತ್ತಾನೆ. ಏಕೆಂದರೆ ಅದರ ಸಾಕ್ಷಾತ್ಕಾರವಾಗುವವರೆಗೆ ಈ ಸಂಸಾರ ದುಃಖಮಯವಾಗಿದೆ. ಕಾರ್ಪಣ್ಯಯುಕ್ತವಾಗಿದೆ. ಅದನ್ನು ಅರಿಯದಿದ್ದಾಗ ಬುದ್ಧ ಹೇಳಿದ "ಸರ್ವಂ ದುಃಖಂ" ಎಂಬ ಮಾತು ನಿಶ್ಚಯವೆನಿಸುತ್ತದೆ. ಈ ಅಂತಃಶಕ್ತಿಯ ಅರಿವಿಲ್ಲದ ಮತ್ತು ಅರಿಯಬೇಕೆಂಬ ಗುರಿಯಿಲ್ಲದ ಜೀವನ ದುಃಖಮಯವಷ್ಟೆ? ಶ್ರೀ ಜಯದೇವ್‌ಸಿಂಗ್‌ರವರು ಹೇಳಿರುವಂತೆ (೨) Every system of Indian Philosophy recognises the hard fact of duhkha and points a way out of it. It gives the heartening message to more that it is open to him to regulate his life in such a way as to rise above duhkha" ಎಂದಿದ್ದಾರೆ. ಈ ದುಃಖ ನಿವಾರಣೆಯಾಗುವುದು ಅಂತಶ್ಶಕ್ತಿ ಬಹಿಶ್ಶಕ್ತಿಗಳ ಸಮರಸವಾದಾಗಲೇ ಈ ಸಮರಸ ಸಾಧನೆಯ ಹೋರಾಟವೆ ಜೀವನ. ಅಂದು ಬಾಳು ಬಂಗಾರವಾಗುತ್ತದೆ; ಐಹಿಕ ಆಮುಷ್ಮಿಕವಾಗುತ್ತದೆ. ಮಾನವೀಯತೆಯ ಬಾಹ್ಯಶಕ್ತಿಗೆ ಅಲಭ್ಯವಾದ ಈ ಶಕ್ತಿ ಸಾಕ್ಷಾತ್ಕಾರಕ್ಕೆ ಯಾವುದೇ ಹೆಸರಿರಲಿ, ಅದು ಸ್ಥಿತಿಯಲ್ಲಿ ಸ್ಥಿತಿ, ಸತ್ಯದಲ್ಲಿ ಸತ್ಯ, ನಿಜದ ನಿಜ. (೩) ಈ ದ್ವಂದ್ವಗಳ ಸಮರಸವಾದಾಗ ಶಿಶುವಿನಂತೆ ನಿರ್ಮಲತ್ವ; ಆನಂದ ಪ್ರಾಪ್ತವಾಗುತ್ತದೆ. (೪) ಈ ಪ್ರತ್ಯೇಕತೆಯೇ ದುಃಖದ ಮೂಲ. ಐಕ್ಯತೆಯೇ ಆನಂದ ಪ್ರಾಪ್ತಿಯ ಸಿದ್ಧಿ. (೫) ಯಾವುದಾದರೂ ಅರಿವಿಗೊಂದು ಗುರಿಬೇಕು. ಗುರಿ ಮುಟ್ಟುವುದಕ್ಕೊಂದು ಮಾರ್ಗ ಬೇಕು. ಈ ಮಾರ್ಗ ಅಖಂಡ ಮಾನವೀಯತೆಗೆ ನಿಲುಕುವಂತಹುದಾಗಿರಬೇಕು. ಪ್ರಶಸ್ತವೂ ಸುಲಭವೂ ಆಗಿದ್ದರೆ ಸರ್ವ ಜನಾದರಣೀಯವಾಗುತ್ತದೆ. ಇಂತಹ ಸುಂದರ ಮಾರ್ಗವನ್ನು ಕಂಡುಕೊಂಡ ಸಾಧಕರನ್ನು ಭಕ್ತಿ ಪಂಥದವರೆಂದು ಬಿಜ್ಞಾಸುಗಳು ಕರೆದಿದ್ದಾರೆ. ಭಕ್ತಿಯಲ್ಲಿ ಅಗೋಚರವಾದುದನ್ನು ಮುಟ್ಟಲು ಗೋಚರವಾದ ಗುರಿಯನ್ನಿಟ್ಟುಕೊಂಡೇ ಹೋಗಬೇಕಾಗುತ್ತದೆ. ಇದರಲ್ಲಿ ತನುಶುದ್ಧಿ ಮನಶುದ್ಧಿ ಮತ್ತು ಭಾವಶುದ್ಧಿಯಾಗುತ್ತವೆ. ಭಕ್ತಿಯೆಂಬ ಭಾವಚ್ಛಾಯೆ ಮಾನವನನ್ನು ಆವರಿಸಿದರೆ ಈ ತ್ರಿಕರಣ ಶುದ್ಧಿ ತಾನಾಗಿ ಆಗುತ್ತದೆ. ಈ ಶುದ್ಧಿಗೆ

---

೧) ಕೇನ. ಉ. ೩-೩, ಮುಂಡಕ ಉ. ೨-೧, ಕಠ-ಉ. ೧-೩. ೧೦.

೨) Paper on 'The concept of Duhkha in Indian Philosophy, (Ganganatha Jha Research Institute)

೩) ಕೇನ. ಉ. ೧, ೪-೮.

೪) ಕೇ. ಉ. ೨-೩,

೫) ಬೃ. ಉ. ೨, ೩-೬,

ಯಾರ ಮತ್ತು ಯಾವ ಭೇದವೂ ಇರಲಾರದು. ಆದುದರಿಂದಲೇ ಇದು ಸರ್ವ ಪ್ರಿಯ ಮಾರ್ಗವೆನಿಸಿದೆ ಆದುದರಿಂದ ಭಕ್ತಿ ಷಟ್‌ಸ್ಥಲದ ಮೊದಲ ಹಂತವಾಗಿ ಸ್ವೀಕೃತವಾಗಿದೆ.

## ಭಕ್ತಸ್ಥಲ

ಸಿದ್ಧಾಂತ ಶಿಖಾಮಣಿಕಾರರ ನುಡಿಯಂತೆ ಯಾರಲ್ಲಿ ಶಿವಭಕ್ತಿ ಉದಿಸುವುದೋ ಅವನು ಭಕ್ತನಾಗುತ್ತಾನೆ. ಅವನ ಆಚರಣೆಯು ಅನುಭವವೇ ಭಕ್ತಿಸ್ಥಲದ ಧರ್ಮ ವಾಗುತ್ತದೆ.(೧)

> ಈಶನೊಳ್ ಭಕ್ತಿಯನಿರಿಸೆ ಭಕ್ತನೆನಿಪ್ಪಂ
> ಭಕ್ತಾಚರಣ ಧರ್ಮ ನಿರೂಪಂಗೈವುದೇ
> ಭಕ್ತಸ್ಥಲವೆಂಬರದರಿಯಯ್ ಕುಂಭ ಸಂಭವಾ । (೨)

ಭವಹರನೊಳನುರಾಗವಿಹುದೇ ಭಕ್ತಿ. ಆ ಭಕ್ತಿಯುಳ್ಳಾತನೇ ಭಕ್ತ. ಆ ಭಕ್ತ ನಾಚರಿಸುವ ಧರ್ಮಂಗಳ–ಜಿತ್ತರಿಸುವುದೇ ಭಕ್ತಸ್ಥಲ ಕಂಡಯ್ಯಾ!(೩) ಶಿವಾಚಾರ್ಯರ ಮಾತಿನಲ್ಲಿ ಭಕ್ತಸ್ಥಲದ ವಿವರಣೆ ಇನ್ನೂ ಗಹನವಾಗಿರುವುದೆಂದು ತೋರುತ್ತದೆ. ಧರ್ಮ ನಿರೂಪಣೆಯೇ ಭಕ್ತಸ್ಥಲವೆನಿಸುವುದಿಲ್ಲ. ಯಾರಲ್ಲಿ ಶಿವಭಕ್ತಿ ಉತ್ಪಾದನ ವಾಗುವುದೋ ಅವನು ಭಕ್ತನಾಗುತ್ತಾನೆ. ಅದಕ್ಕೆ ಜಾತಿ ಮತ ವಯೋಲಿಂಗ ಭೇದಗಳಿಲ್ಲ. ಆದುದರಿಂದ ಭಕ್ತಿ ಸಮುತ್ಪನ್ನನಾದವನು ಅನುಸರಿಸುವ ಧರ್ಮವು ಭಕ್ತಸ್ಥಲವೆಂಬ ಅಭಿಮತದಿಂದ ನಿರೂಪಿಸಲಾಗಿದೆ. ಎಂದರೆ ಭಕ್ತಸ್ಥಲ ವಿವರಣೆಯು ಇನ್ನೂ ವಿಶಾಲವಾಗುತ್ತದೆ. ಭಕ್ತಿ ಸಮುತ್ಪನ್ನನಾದವನ ನಡೆಯೆಲ್ಲ ಪಾವನ, ನುಡಿ ಯೆಲ್ಲ ಪಾವನ. ಆದುದರಿಂದ ಅವನು ಆಚರಿಸುವುದೆಲ್ಲಾ ಧರ್ಮವೇ ಆದರೂ ಶಿವಾ ಚಾರ್ಯರು ಭಕ್ತಿ ಸಮುತ್ಪನ್ನನಾಗುವುದರ ಅರಿವನ್ನು ಗುರಿಯನ್ನು ೧೫ ಸ್ಥಲವಾಗಿ ವಿಂಗಡಿಸುತ್ತಾರೆ. ಈ ಸ್ಥಲಗಳು ಆಗಮೋಕ್ತವಾದವುಗಳಾಗಿವೆ. ಇವುಗಳ ಆಚ ರಣೆಯಿಂದ ದ್ವಂದ್ವಗಳ ಸಮನ್ವಯದ ಹಾದಿ ಸುಗಮವಾಗುತ್ತದೆಂಬುದನ್ನು ಶಾರೀ ರಕ ಮೀಮಾಂಸೆಯಿಂದ ಹಿಡಿದು ತನು ಮನ ಧನದ ಭವ ಹರಿದು ಮಾನವ ಮಹಾನು ಭಾವನಾಗುವನೆಂಬುದನ್ನು ವೈಜ್ಞಾನಿಕ ರೀತಿಯಿಂದ ವರ್ಣಿಸಿರುವುದು ಅತ್ಯಂತ ಗಮನಾರ್ಹ. ಈ ೧೫ ಸ್ಥಲಗಳು ಮಾನವನ ಆಚರಣೆಗೆ ಅನುಕೂಲಗಳೂ ವಿಚಾರ ವಂತರಿಗೆ ವೈಜ್ಞಾನಿಕ ರೀತಿಯಿಂದ ಸಮರ್ಥನೀಯವೂ ಆಗಿರುವುದರಿಂದ ಶಾಸ್ತ್ರ

---

೧) ಸಿ– ಶಿ. V–೨೬.
೨) ಮಣಿಮುಕುರ. ಸಾಲು ೧೦೦ ರಿಂದ ೧೦೩
೩) ಮಣಿವಚನ–೧೪೬

ನಿರ್ದೇಶನವಾಗಿ ಕಲ್ಪಿಸಲ್ಪಟ್ಟಿವೆ. ಈ ನಿರ್ದೇಶನವನ್ನು ಅನುಸರಿಸುವ ಹಕ್ಕು ಸರ್ವರಿಗೂ ಲಭ್ಯವಾಗಿರುವುದರಿಂದ ಇದರಲ್ಲಿ ಮೇಲೆ ತಿಳಿಸಿದಂತೆ ಯಾವ ಭೇದವೂ ಇಲ್ಲದೆ ಸರ್ವ ಜನಾದರಣೀಯ ಸಿದ್ಧಾಂತವಾಗಬಲ್ಲದು.

ಪಿಂಡ, ಪಿಂಡಜ್ಞಾನ, ಸಂಸಾರಹೇಯ, ದೀಕ್ಷಾಲಕ್ಷಣ, ಗುರುಕಾರುಣ್ಯ, ಲಿಂಗಧಾರಣ, ಭಸ್ಮಧಾರಣ, ರುದ್ರಾಕ್ಷಧಾರಣ ಪಂಚಾಕ್ಷರ ಜಪ, ಭಕ್ತಿ ಮಾರ್ಗ ಕ್ರಿಯೆ, ಉಭಯ, ತ್ರಿವಿಧಸಂಪತ್ತಿ, ಪ್ರಸಾದಸ್ವೀಕಾರ, ಸೋಪಾಧಿ, ನಿರುಪಾಧಿ, ಸಹಜದಾನವೆಂಬ ೧೫ ಸ್ಥಲಗಳನ್ನು ನಿರ್ದೇಶಿಸಿರುವುದರಿಂದ ಇದೊಂದು ಅನ್ಯಧರ್ಮಗಳಂತೆ ಜಾತಿಸೂಚಕ ಸಂಕೇತಗಳೆಂಬ ಭಾವನೆಗೆ ಅವಕಾಶವಿರಬಹುದು. ವಿಚಾರ ಮಾಡಿದಾಗ ಈ ಅಪವಾದಕ್ಕೆ ಷಟ್‌ಸ್ಥಲ ಸಿಲುಕುವುದಿಲ್ಲ. ಇವು ಸಮುತ್ಪನ್ನ ಭಕ್ತಿಯ ಲಕ್ಷಣಗಳೂ ಸಿದ್ಧಿಯ ಸುಲಭಕ್ರಿಯೆಗಳೂ ಆಗಿವೆಯೆಂಬುದನ್ನು ಶಿಖಾಮಣಿ ಕರ್ತರು ವಿವರಿಸಿದ್ದಾರೆ. ಮೊದಲಿನ ಮೂರು ಸ್ಥಲಗಳು ಜ್ಞಾನವನ್ನು ಉಳಿದವುಗಳಲ್ಲಿ ಕ್ರಿಯೆಯನ್ನು ಬೋಧಿಸಿ ಅವುಗಳ ಸಮರಸವೇ ಭಕ್ತಿಯಾಗುವುದನ್ನು ಸೂಚಿಸಿದೆ. ಉದಾಹರಣೆಗೆ ಲಿಂಗವನ್ನು ಮೂರಾಗಿ ವಿಂಗಡಿಸಿ ಸ್ಥೂಲಸೂಕ್ಷ್ಮ ಪರಾತ್ಪರ" ಎಂದು ಹೇಳಿದೆ. ಇಷ್ಟಲಿಂಗವೇ ಸ್ಥೂಲಲಿಂಗ, ಅಂತರ್ಭಾವನಾಮಯವಾದುದೇ ಸೂಕ್ಷ್ಮಲಿಂಗ, ಭಾವನಾತೀತವಾಗಿ ಅವ್ಯಕ್ತವಾದುದೇ ಪರಾತ್ಪರಲಿಂಗ(೧) ಎಂದು ಹೇಳಿದೆ. ಶರೀರಕ್ಕೆ ಧಾರಣೆ ಮಾಡಿದ ಲಿಂಗಕ್ಕೆ ಇಷ್ಟಲಿಂಗವೆಂದೂ ಭಾವನಾಮಯವಾದ ಪ್ರಾಣಲಿಂಗವನ್ನೇ ಸೂಕ್ಷ್ಮಲಿಂಗವೆಂದೂ ಭಾವನೆಗೆ ಮೀರಿನಿಂದ ಪರವಸ್ತುವನ್ನೆ ಭಾವಲಿಂಗವೆಂದೂ ಕರೆಯುತ್ತಾರೆ(೨) ಇವುಗಳಲ್ಲಿ ಇಷ್ಟಲಿಂಗ ಕ್ರಿಯೆಯನ್ನೂ ಪ್ರಾಣಲಿಂಗ ಜ್ಞಾನವನ್ನು ಭಾವಲಿಂಗ ಭಕ್ತಿಯನ್ನು ಸೂಚಿಸುತ್ತದೆ. ಆದಾಗ್ಯೂ ಇಷ್ಟಲಿಂಗವೇಕೆ ಬೇಕು ಭಕ್ತಿಗೆ? ಎಂಬ ಪ್ರಶ್ನೆ ಬರುವುದು ಸಹಜ; ಶಿಖಾಮಣಿಕಾರರು ಮಾನವನು ಪ್ರಯತ್ನಪೂರ್ವಕವಾಗಿ ಪ್ರಾಣಲಿಂಗದ ಅನುಸಂಧಾನ ಮಾಡಬೇಕು ಎನ್ನುತ್ತಾರೆ(೩) ಇದು ಜ್ಞಾನಸೂಚಕ. ಆದಾಗ್ಯೂ ವೀರಶೈವನಾದವನು ಇಷ್ಟಲಿಂಗವನ್ನು ಧರಿಸಲೇಬೇಕೆನ್ನುತ್ತಾರೆ.(೪) ಏಕೆಂದರೆ ಜ್ಞಾನವಿಕಾಸವಾದ ಮನುಷ್ಯ ಕರ್ತವ್ಯ ಹೀನನಾಗಬಾರದೆಂಬುದೇ ಈ ಸಿದ್ಧಾಂತದ ಉದ್ದೇಶ. ಭಾವಲಿಂಗದಲ್ಲಿ ಕ್ರಿಯೆ ಲೀನವಾಗುತ್ತದೆ. ಜ್ಞಾನ ನಿರುಪಾಧಿಯಾಗುತ್ತದೆ ಅಂದರೆ ಸಂಶಯರಹಿತವಾಗಿ ದಂದುಗದಿಂದ ದೂರವಾಗುತ್ತದೆ. ಅದೇ ಭಕ್ತಿಯಾಗುವುದು.

---

೧) ಸಿ. ಶಿ. vi ೪೨-೪೯-

೨) ಮ. ಮುಕುರ. ಸಾಲು ೧೯೩ ರಿಂದ ೨೦೦ (ಲಿಂಗಧಾರಣ ಸ್ಥಲಂ. ೫) ಪು. ೫೫

೩) ಸಿ. ಶಿ. vi ೪೬. ಮ. ಮು. ಸಾ. ೧೪೫ ರಿಂದ ೧೪೪ ( ,, )

೪) ಅದೇ vii ೪೭ ,,

ಭಜಿಸುವವನು ಭಜಿಸಿಕೊಳ್ಳಲ್ಪಡುವುದೂ ಏಕವಾಗುತ್ತದೆ. ಅದೇ ಉಪನಿಷತ್ತಿನ ತೂರ್ಯಾವಸ್ಥೆಯಾಗುತ್ತದೆ. ಇದನ್ನೆ ಶರಣರು ಅರ್ಥಗರ್ಭಿತವಾಗಿ ಹೇಳುತ್ತಾರೆ.

ನೆನೆ ಎಂದಡೇನ ನೆನೆವೆನಯ್ಯ,
ಎನ್ನ ಕಾಯವೇ ಕೈಲಾಸವಾಯಿತ್ತು
ಮನವೇ ಲಿಂಗವಾಯಿತ್ತು
ತನುವೇ ಸೆಜ್ಜೆಯಾಯಿತ್ತು.
ನೆನೆವಡೆ ದೇವನುಂಟೆ?
ನೋಡುವಡೆ ಭಕ್ತನುಂಟೆ?
ಗುಹೇಶ್ವರಲಿಂಗ ಲೀಯವಾಯಿತ್ತು ” (೧)

ಆದರೆ ಸಿ. ಶಿಖಾಮಣಿಯಲ್ಲಿ ಶ್ರವಣ, ಕೀರ್ತನ ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನವೆಂಬ ನವವಿಧ ಭಕ್ತಿಯನ್ನು ಹೇಳಿ(೨) ಇವುಗಳಲ್ಲಿ ಅಂತರ್ಭಕ್ತಿ ಬಹಿರ್ಭಕ್ತಿ ಎಂದು ಎರಡುಭಾಗ ಮಾಡಿದೆ. (೩) ನಿಯಮಾನುಸಾರ ಇಷ್ಟಲಿಂಗ ಪೂಜಿಸುವುದೇ ಬಹಿರ್ಭಕ್ತಿಯೆಂದೂ (೪) ಲಿಂಗದಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ಲಿಂಗವನ್ನೂ ಅನುಸಂಧಾನಗೊಳಿಸಿ ಮನಸ್ಸನ್ನು ಸಿದ್ಧಗೊಳಿಸುವುದೇ ಅಂತರ್ಭಕ್ತಿಯೆಂದೂ ಹೇಳಿದ್ದಾರೆ(೫) ಶ್ರೀಗಳವರು ಈ ಶ್ಲೋಕದ ಅಂತರಾರ್ಥವನ್ನು ಮಣಿವಚನದಲ್ಲಿ ಹೇಳಿರುವುದು ಈ ತತ್ವದ ಹೃದಯವನ್ನು ರನ್ನಗನ್ನಡಿಯಲ್ಲಿ ಪ್ರತಿಬಿಂಬಿಸಿದಂತಿದೆ.

ಲಿಂಗವೇ ಪ್ರಾಣವಾಗಿ ಪ್ರಾಣವೇ ಲಿಂಗವಾಗಿ
ಲೀನವಾದನಿಯೂ ಚಿಂತೆಯಿಲ್ಲದೆ ಸ್ವಸ್ಥ ಚಿತ್ತನಾಗಿಪ್ಪುದೇ
ಅಭ್ಯಂತರ ಭಕ್ತಿಯೆಂಬರು ಶಿವಾಚಾರ್ಯರು, (೬)

ಹಿಂದೆ ಹೇಳಿದ ಪ್ರಭುದೇವರ ವಚನಕ್ಕೂ ಶ್ರೀಗಳವರ ಮೇಲಿನ ವಚನಕ್ಕೂ ಹೋಲಿಸಿದಾಗ ಅಂತರ್ಭಕ್ತಿ ಮತ್ತು ಅಲ್ಲಿನ ಅವಸ್ಥೆಯ ಚಿತ್ರದ ಪರಿಚಯ ನಮಗೆ ಪೂರ್ಣವಾಗಿ ದೊರೆಯುತ್ತದೆ. ಇದೇ ಭಕ್ತಸ್ಥಲದ ನಿರ್ದಿಷ್ಟಸಿದ್ಧಾಂತ. ಈ ಗುರಿಯನ್ನು ಮುಟ್ಟಿಸಲು ಉಳಿದೆಲ್ಲ ನಿರ್ದೇಶನಗಳು ಸಾಧಕಗಳು. ಈ ಸಾಧನೆ

---

೧) ಅಲ್ಲಮನ ವಚನ ಚಂದ್ರಿಕೆ. ಸಂ: ಎಲ್. ಬಸವರಾಜು. ಪು ಸಂಖ್ಯೆ ೩೦೪.
೨) ಸಿ. ಶಿ. ix ೨.
೩) ಅದೇ ix-೬.
೪) ಅದೇ. ix ೭
೫) ಸಿ. ಶಿ. ix-೨. ಮ. ಮಟಕರು ಪು. ೭೭ ಸಾಲು ೨೯ ರಿಂದ ೩೨.
೬) ಮಣಿವಚನ. ೪೫೩

ಎಲ್ಲರಿಗೆ ಮೀಸಲು. ಶಿಖಾಮಣಿ ಕರ್ತರೇ ಈ ಮಾತನ್ನು ಹೇಳುತ್ತಾರೆ. ಗಂಡು ಗಲಿತನದಿಂದ ಬಿಚ್ಚು ಹೃದಯದಿಂದ ಈ ಮಾತನ್ನು ಹೇಳುತ್ತಾರೆ.

ಅಧಮೇ ಚೋತ್ತಮೇ ವಾಪಿ ಯತ್ರ ಕುತ್ರ ಚಿದೂರ್ಜಿತಾ |
ವರ್ತತೇ ಶಾಂಕರೀಭಕ್ತಿಃ ಸ ಭಕ್ತ ಇತಿ ಗೀಯತೇ ||
ಭಕ್ತಿಃ ಸ್ಥಿರೀಕೃತಾ ಯಸ್ಮಿನ್ ಮ್ಲೇಚ್ಛೇವಾ ದ್ವಿಜಸತ್ತಮೇ |
ಶಂಭೋಃ ಪ್ರಿಯಃ ಸಃ ವಿಪ್ರಶ್ಚ ನ ಪ್ರಿಯೋ ಭಕ್ತಿವರ್ಜಿತಃ ||(೧)

ಮೇಲಿನ ಮಾತನ್ನು ಹೇಳುವಾಗ ಶ್ರೀಗಳವರ ಹೃದಯ ಹಿಗ್ಗಿ ವಿಶ್ವದ ಇತರ ಧರ್ಮಗಳು ಹೇಳಿಕೊಳ್ಳುವ ತಮ್ಮ ಹಿರಿಮೆಗೆ ಸವಾಲು ಹಾಕಿ ವಿಶ್ವಧರ್ಮದ ಶಾಂತಿ ಕಹಳೆಯನ್ನೂದಿ ವಿಶ್ವೇಶ್ವರನಲ್ಲಿ ಅಖಂಡ ಮಾನವೀಯತೆಯ ಆನಂದದ ಆಲಿಂಗನಕ್ಕೆ ಅಭಿಮಾನದ ಆಹ್ವಾನವನ್ನಿತ್ತಿದ್ದಾರೆ.

ಅಧಮನಾದೊಡೇನುತ್ತಮನಾದೊಡೇಂ ಮತ್ತ-
ಮಾವನಾದೊಡೇಂ ಶಿವಭಕ್ತಿ ತಾ ನೆಲಸಿರಲ್
ಪೇಳ್ವಪರ್ 'ಶಿವಭಕ್ತ' ನಲ್ವೆಸರ ನಾತಂಗೆ;
ನೀಚೋಚ್ಚ ಮಾತುಂಟೆ ಶಿವಭಕ್ತಿಪಂಥದೊಳ್ ?
ಅಂತ್ಯಜನೊ ಅಗ್ರಜನೊ (ದ್ವಿಜನೋ) ಈ ಸೊಲ್ಲು ತಾ ಸಲ್ಲ
ಸ್ಥಿರಭಕ್ತಿಯುಳ್ಳವನ್ ಶಂಭುವಿಗೆ ಸುಪ್ರಿಯನ್,
ಅಪ್ರಿಯನ್ ಅಗ್ರಜನ್ (ದ್ವಿಜನ್) ಸ್ಥಿರಭಕ್ತಿವರ್ಜಿತನ್;
ಭಕ್ತಿ ಪ್ರಭೆಯಿರೆ ಜಾತಿಕುಲ ನಿಶೆಗೆಡೆಯುಂಟೆ ? (೨)

ಇದೊಂದೇ ನುಡಿ ಸಾಕು ಷಟ್‌ಸ್ಥಲ ಧರ್ಮದ ವೈಶಾಲ್ಯತೆಗೆ ! ವಿಶ್ವಧರ್ಮವೆಂಬ ಹೆಸರು ಇದಕ್ಕಿಲ್ಲದಿದ್ದರಿನ್ನಾವುದಕ್ಕೆ ? ಶಿವಾಚಾರ್ಯರ ಈ ನುಡಿ ಕೇಳಿದ ಮೇಲೆ ಭಕ್ತಿಸ್ಥಲದಲ್ಲಿ ಬರುವ ಸ್ಥಲದ ಅವಾಂತರಗಳು ಜಾತಿ ಸೂತಕ ಸಂಕೇತಗಳಾದರೆ ಈ ಧರ್ಮ ದರ್ಶನದ ಕೀರ್ತಿಗೆ ಕಳಂಕ ತಂದಂತಾಗುತ್ತದೆ. ಆದುದರಿಂದಲೇ ಶ್ರೀ ನಿ. ಜಗದ್ಗುರುಗಳವರು ಅಭಿಮಾನದಿಂದ ಸಿದ್ಧಾಂತ ಶಿಖಾಮಣಿಯು ಬೋಧಿಸಿದ ಧರ್ಮ ವಿಶ್ವಧರ್ಮವೆಂದದ್ದು; ಅಗ್ಗಳಿಕೆಯಿಂದ ಬಿತ್ತರಿಸಿದ್ದು. "ಷಟ್‌ಸ್ಥಲವು ಯಾರೊಬ್ಬರ ಸೊತ್ತಲ್ಲ. ಅದು ಮಾನವೀಯ ಧರ್ಮ. ಅದರ ವಿಕಾಸವೇ ಮಾನವ್ಯದ ವಿಕಾಸ, ಮಹೋನ್ನತಿ, ಮಹಾಶಾಂತಿ.(೩) ವೈಜ್ಞಾನಿಕ ರೀತಿಯಿಂದ ವಿವರಿಸಿ

---

೧) ix-೪,೫.
೨) ಮ. ಮುಕುರ ಪು. ೭೬-೭೭ ಸಾಲು ೧೩ ರಿಂದ ೨೦.
೩) ಮಣಿಕಾಂತಿ ಮುನ್ನುಡಿ. ಪು. ೧೨

ದ ಗಲೂ ಸಹ ಈ ಸ್ಥಾನ ಸಿದೇಶಸವು ಪ್ರಯೋಗ ಸಿದ್ಧವಾಗಿ ನಿಲ್ಲಬಲ್ಲುದು. ಈ ನಿರ್ದೇಶನ ಕೇವಲ ಬುದ್ಧಿಶಕ್ತಿಯ ಪರಿಣಾಮವಲ್ಲ; ಅನುಭಾವದ ಅಮೃತವಾಹಿನಿ. ಸಿದ್ಧಾಂತ ಶಿಖಾಮಣಿಯ ತತ್ವವು ಕೇವಲ ಕಾವ್ಯವಿಲಾಸೀ ಪಂಡಿತರಿಗಷ್ಟೇ ಅಲ್ಲ ಅನುಭಾವಿಗಳದೆಂಬುದು ನಿರ್ವಿವಾದ. ಅವರಲ್ಲಿ ಈ ತತ್ವ ಸಿದ್ಧಿಸದಿದ್ದರೆ ಈ ಕೃತಿ ಇಷ್ಟು ರಮ್ಯವಾಗಿ ಹೊರಹೊಮ್ಮುತ್ತಿರಲಿಲ್ಲ. ಈ ಮಾತನ್ನು ಶ್ರೀಗಳವರು ಮನಸಾರೆ ಕಂಡುಕೊಂಡಿರುವಂತಿದೆ. ಅನುಭವಕ್ಕೆ ತಂದುಕೊಂಡಂತಿದೆ. ಆದುದ ರಿಂದಲೇ ಅವರು "ಕಾವಮಯ ಶಾಸ್ತ್ರ ಸಿದ್ಧಾಂತ ಶಿಖಾಮಣಿ...................... ಶಿವಶಕ್ತಿ-ಕ್ರಿಯಾಜ್ಞಾನ ಸಮುಚ್ಚಯದಂತೆ ಕಾವ್ಯಶಾಸ್ತ್ರಗಳೆರಡರ ಸಮುಚ್ಚಯ ವನ್ನು ಮಾಡಿ ತೋರಿದ ವೈಶಿಷ್ಟ್ಯ ಈ ಕೃತಿಯದು(೧) ಎನ್ನುತ್ತಾರೆ "ಸಿದ್ಧಾಂತ ಶಿಖಾಮಣಿಯು ಶ್ರೀ ಶಿವಯೋಗಿ ಶಿವಾಚಾರ್ಯರ ಅನುಭಾವ ತಪಸ್ಸಿನ ಫಲ. ಶಿವಾಗಮಪರಿಜ್ಞಾನದ ಸಾರಸರ್ವಸ್ವ(೨) ಎಂದಿದ್ದಾರೆ.

## ಅದ್ವೈತದಿಂದ ಅರವಿಂದ ಸಿದ್ಧಾಂತಕ್ಕೆ

ಭಕ್ತಿ ಸಿದ್ಧಾಂತ ಸರ್ವ ಜನಾದರಣೀಯವಾದಂತೆ ಸರ್ವದರ್ಶನ ಗ್ರಾಹ್ಯವಾ ಗಿದೆ. ಭಕ್ತಿಪಥದಲ್ಲಿ ದಿಟ್ಟತನದ ಹೆಜ್ಜೆಯನ್ನಿಟ್ಟು ಜನಪ್ರಿಯವಾಗಿ ಮಾಡಿದವರು ಆಚಾರ್ಯ ಶ್ರೀ ರಾಮಾನುಜರು. ಅವರಿಗಿಂತ ಹಿಂದೆ ದರ್ಶನ ವಿಚಾರದಲ್ಲಿ ಜ್ಞಾನ ವೊಂದೇ ಪ್ರಧಾನವಾಗಿತ್ತು. ಸ್ವಾಮಿ ವಿವೇಕಾನಂದರು:

"The movement of shankara forced its way through its high intellectuality, but it could be of little service to the masses, because of its adherence to strict caste laws, very small scope for ordinary emotion, and making sanskrit the only vehicle of of communication. Ramanuja on the other hand with a most practical philosophy, a great appeal to the emotions, an entire denial of birth rights before spiritual attainments and appeals through the popular tongue, completely succeeded in bringing the

೧) ಮಣಿಮುಕುರ ಮುನ್ನುಡಿ ಪು. ೨
೨) ಮಣಿಕಾಂತಿ, ಮುನ್ನುಡಿ ಪು. ೩೨.

masses back to the vedic religion (೧, ಭಕ್ತಿ ದರ್ಶನ ಪ್ರಾಚೀನವಾದದ್ದು. ಜ್ಞಾನಸಿದ್ಧಾಂತವನ್ನೇ ಪ್ರತಿಪಾದಿಸಿದ ಆಚಾರ್ಯ ಶ್ರೀಶಂಕರರೂ ಸಹ "ಮೋಕ್ಷ ಸಾಧನ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ" ಎಂದಿದ್ದಾರೆ. ಉಪನಿಷತ್ ತತ್ವಗಳಿಗೆ ಜೀವಕಳೆ ತುಂಬಿದವರು ಶಂಕರಾಚಾರ್ಯರು. ಅದರಲ್ಲಿಯೂ ಪ್ರಥಮವೆನಿಸಿದ್ದ ದಶೋಪನಿಶತ್ತುಗಳು ಜ್ಞಾನ ವೈಭವವಿಮರ್ಶೆಯ ಮಹಾಕೃತಿಗಳಾಗಿದ್ದರೂ ಸಹ ಭಕ್ತಿ ವೈಭವವನ್ನು ಅಂತಶ್ಶಕ್ತಿಯ ಅನುಭಾವವನ್ನು ಕಡೆಗಾಣಿಸಿಲ್ಲ" ಅಣೋರಣೀಯನೂ ಮಹತೋ ಮಹಿಮನೂ ಆದ ಪರಮಾತ್ಮನು ಸರ್ವವಸ್ತುಗಳ ಜೀವರಾಶಿಗಳ ಅಂತರಾತ್ಮನಿರುತ್ತಾನೆ. ಆಶಾಪಾಶಗಳಿಂದ ನಿವೃತ್ತನಾದವನ ಸಾಧನೆಯಿಂದಲೂ ಭಗದನುಗ್ರಹದಿಂದಲೂ ಅವನ ಸಾಕ್ಷಾತ್ಕಾರವಾಗುತ್ತದೆಂದು(೨) ಆತ್ಮನು, ಸತ್ಯ, ತಪಸ್ಸು ಜ್ಞಾನ ಮತ್ತು ಬ್ರಹ್ಮಚರ್ಯಾದಿ ಆಚರಣೆಯಿಂದ ಲಭ್ಯವೆಂದೂ(೩) ಹೇಳಿರುವುದರಿಂದ ಮಾನವ ಪ್ರಯತ್ನ ಮತ್ತು ಭಗವದನುಗ್ರಹಗಳ ಸಮಾವೇಶದಿಂದ ಸಾಕ್ಷಾತ್ಕಾರವಾಗುತ್ತದೆಂದು ತಿಳಿಯಬಹುದಾಗಿದೆ. ಪ್ರಸ್ಥಾನ ತ್ರಯಗಳಲ್ಲೊಂದಾದ ಭಗವದ್ಗೀತೆಯಲ್ಲಿ ಭಕ್ತಿಯೋಗವೆಂಬ ಅಧ್ಯಾಯವೇ ಇದೆ. ಅನಂತ ಧರ್ಮಗಳ ಗೊಂದಲವನ್ನು ಮರೆತು ನನ್ನಲ್ಲಿ ಶರಣಾಗತನಾಗು. ಯಾವ ಚಿಂತೆಗೂ ಎಡೆಗೊಡದೆ ಮೋಕ್ಷವನ್ನು ಕೊಡುತ್ತೇನೆಂದು ಆಶ್ವಾಸನೆಯನ್ನೀಯಲಾಗಿದೆ.(೪) ಅವಧೂತ ಗೀತೆಯಲ್ಲಿ :

> ಈಶ್ವರಾನುಗ್ರಹಾದೇವ ಪುಂಸಾಂ ಅದ್ವೈತವಾಸನಾ |
> ಮಹದ್ ಭಯಪರಿತ್ರಾಣಾತ್ ವಿಪ್ರಾಣಾಂ ಪ್ರಜಾಯತೇ || (೫)

ದ್ವಂದ್ವದಲ್ಲಿ ತೊಳಲಾಡಿ ಭಯಾಕ್ರಾಂತನಾದ ಮಾನವನು ಈಶ್ವರಾನುಗ್ರಹದಿಂದ ಸಾಮರಸ್ಯವನ್ನು ಹೊಂದುವನೆಂದು ಹೇಳಿದೆ. ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದವರಿಗೆ ಆತ್ಮ ಸಾಕ್ಷಾತ್ಕಾರ ಲಭ್ಯವೆಂದು(೬) ಉಪನಿಷತ್ತಿನಲ್ಲಿ ಹೇಳಿರುವುದನ್ನು ಎಲ್ಲ ದಾರ್ಶನಿಕರೂ ಆಂತರಂಗಿಕವಾಗಿ ಅಂಗೀಕರಿಸುತ್ತಲೇ ಬಂದಿದ್ದಾರೆ. ಮಾನವ ಸಾಧನೆ ಮತ್ತು ದೈವಾನುಗ್ರಹ ಇವುಗಳ ಸಮನ್ವಯವೇ ಸಿದ್ಧಿಯೆಂದು ಶಾಸ್ತ್ರಗಳು ಭಾವಿಸಿರುವುದು ಇದರಿಂದ ಅರ್ಥವಾಗುತ್ತದೆ. ಷಟ್‌ಸ್ಥಲದ ಮೊದಲನೇ

---

೧) A Paper on Historical Evolucation of India

೨) ಕಠ, ಉ. ೧-[illegible]-೨೦, ಮುಂಡಕ ಉ. ೩-೨-೩

೩) ಮುಂಡಕ–ಉ. ೩-೧-೫

೪) ಭಗವದ್ಗೀತೆ. xviii-೬೬

೫) ಅವಧೂತ ಗಿತೆ i-೧

೬) ಕಠ ೧-೨-೨೨ "ಯಂ ಏವೈಷ ವೃಣೀತೆ ತೇನ ಲಭ್ಯಃ"

ಹಂತವಾದ ಭಕ್ತಸ್ಥಲದಲ್ಲಿ ಹದಿನೈದುಸ್ಥಲ ನಿರೂಪಣೆಮಾಡಿರುವುದರ ಉದ್ದಿಶ್ಯವಾದರೂ ಈ ಕ್ರಿಯೆ ಮತ್ತು ಅನುಗ್ರಹ ಪ್ರಾಪ್ತಿಯ ಸಮನ್ವಯ ದರ್ಶನಕ್ಕಾಗಿಯೆಂಬುದು ಅರ್ಥವಾಗುತ್ತದೆ. ಶಂಕರಾಚಾರ್ಯರು ಜ್ಞಾನ ಮತ್ತು ಕರ್ಮಗಳ ವಿರೋಧವು ಪರ್ವತಾಕಾರದಷ್ಟೆಂದು ಭಾವಿಸಿದರೂ(೧) ಬ್ರಹ್ಮಜ್ಞಾನವು ಅನುಭವದಲ್ಲಿ ಸಮರಸಗೊಂಡು ಬ್ರಹ್ಮಸಾಕ್ಷಾತ್ಕಾರವಾಗುತ್ತದೆನ್ನುತ್ತಾರೆ.(೨) ಇಲ್ಲಿ ಅನುಭವ ಅರಿವಿನಿಂದ ಬರುವುದೋ ಅನುಗ್ರಹದಿಂದ ಬರುವುದೋ ಮತ್ತು ಕ್ರಿಯಾಶಕ್ತಿಯಿಂದ ಬರುವುದೋ ಎಂದು ವಿಚಾರ ಮಾಡಿದಾಗ ಅವುಗಳ ಸಮನ್ವಯದಿಂದಲೇ ಎಂದು ಹೇಳಬೇಕಾಗುತ್ತದೆ. ಈ ಅದ್ವೈತ ದರ್ಶನದಲ್ಲಿ ಜ್ಞಾನಪ್ರಭಾವವನ್ನು ವಿವರಿಸುವಾಗ ಕ್ರಿಯೆಯನ್ನು ಮರೆತರೂ ಅನುಭವವನ್ನು ಮರೆಯುವಂತಿಲ್ಲ. ಸಿದ್ಧಾಂತ ಶಿಖಾಮಣಿಕಾರರು ವಿವರಿಸುವ ಭಕ್ತಿಸ್ಥಲ ಅದ್ವೈತ ದರ್ಶನವನ್ನು ತನ್ನಲ್ಲಿ ಅಳವಡಿಸಿಕೊಂಡು ವಿಶಿಷ್ಟಾದ್ವೈತ ಮತ ನಿರೂಪಣೆಯನ್ನು ಸಂಗೋಳಿಸಿಕೊಂಡು ಆತ್ಮಜ್ಞಾನದ ಹಾಗು ಆತ್ಮಸಾಕ್ಷಾತ್ಕಾರದ ಪ್ರಾಯೋಗಿಕ ದರ್ಶನವಾಗಿದೆ. ಆಧುನಿಕ ಸಿದ್ಧ ಪುರುಷರೆನಿಸಿದ್ದ ಶ್ರೀ ರಾಮಕೃಷ್ಣ ಪರಮಹಂಸರು ಶಿಷ್ಯರಿಗಿತ್ತ ಉಪದೇಶವೂ ಇಲ್ಲಿ ವ್ಯಕ್ತವಾಗಿದೆ.

"Pity to creatures! pity to creatures! sir, you, who are lower than even a worm, how dare you speak of showing pity to creatures! who are you to show pity to them ? No, no, it is not pity to creatures, but service to them in the consciousness that they are verily God Himself. (೩)

> ಕೊಡುಗೆಯಂ ಕೊಂಬುವವನೊಳ್ ಕೊಡುವವನೊಳ್ ಮೇಣ್
> ಕೊಡುವ ವಸ್ತುವಿನೊಳ್ ವಲಂ ಶಿವಭಾವಮಂ ನೆನೆದು
> ಕೊಡುವೆನೆಂಬಹಮಿಕೆಯನುಳಿದು ನಿರಪೇಕ್ಷೆಯಿಂ
> ಕುಡುವ ಕೊಡಿಗೆಯದು ಸಹಜದಾನಂ ಕುಂಬಜ.(೪)

ಸೇವೆಯನ್ನು ಕೈಗೊಳ್ಳುವುದರಲ್ಲಿ ಶಿವನನ್ನು ಕಾಣುವ ಕಲ್ಪನೆ ಅತ್ಯಮೂಲ್ಯವಾದುದು ಒಂಬತ್ತನೇ ಭಕ್ತಿಭಾವದಲ್ಲಿ ಅಂದರೆ ಆತ್ಮನಿವೇದನೆಯಲ್ಲಿ ಎಲ್ಲ ವೈಪುಲ್ಯ ಭಾವನೆಗಳಳಿದು ಸಮರಸದ ಸತ್ಯಸ್ವರೂಪ ವ್ಯಕ್ತವಾಗುವುದು. ನಿತ್ಯಜೀವನ ವೃತ್ತಿ

---

೧) ಜ್ಞಾನ ಧರ್ಮಣೋರ್ವಿರೋಧಃ ಪರ್ವತವದಕಂಪ್ಯಃ ॥ ಶಾರೀರಭಾಷ್ಯ–೨

೨) ಅನುಭವಾವಸಾನತ್ವಾದ್ ಭೂತವಸ್ತು ವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ" ಅದೇ ೧-೨,

೩) Sayings or sri Ramakrishna

೪) ಮ. ಮುಕುರ. ಪು- ೮೭ ಸಾಲು ೪೮೯ರಿಂದ ೨೯, ಸಿ. ಶಿ. ಮಣಿ. ೯-೮೩

ಯಾಗಿರಬೇಕೆಂಬ ದಾರಿ ತೋರಿದ ದಿವ್ಯಕೀರ್ತಿ ಷಟ್‌ಸ್ಥಲ ದರ್ಶನಕ್ಕೆ ಅರ್ಥಾತ್ ಸಿದ್ಧಾಂತ ಶಿಖಾಮಣಿಗೆ! ಮಾನವ ಗುರಿಯನ್ನು ಮುಟ್ಟುವ ಮಾರ್ಗವನ್ನರಸಿ ತನ್ನದೆ ದಾರಿಯಿದೆಂದು ತೋರಿದ ಎಲ್ಲ ದರ್ಶನಗಳ ಅಂತರಾಳವನ್ನು ಅಳವಡಿಸಿಕೊಂಡ ಶಾಸ್ತ್ರ ಷಟ್‌ಸ್ಥಲ ಶಾಸ್ತ್ರ. ಆದುದರಿಂದಲೇ ಷಟ್‌ಸ್ಥಲ ಧರ್ಮ ಸದ್ಧರ್ಮ. ಸರ್ವಧರ್ಮ; ಸಾರಸರ್ವಸ್ವ. ವಿಶ್ವಕೀರ್ತಿಗೆ ಕಾರಣವಾದ ಧರ್ಮ.

ಈ ಷಟ್‌ಸ್ಥಲ ದರ್ಶನವು ಆಧುನಿಕ ವಿದ್ವಾಂಸರಲ್ಲಿ ಅನುಭಾವಿಗಳಲ್ಲಿ ಎಲ್ಲರಿಗಿಂತಲೂ ಮಿಗಿಲಾಗಿ ಪಾಂಡುಚೆರಿಯ ಅರವಿಂದ ಮಹರ್ಷಿಗಳಿಗೆ ಅರಿವಾಗಿತ್ತು. ಅನುಭಾವವಾಗಿತ್ತೆಂದರೆ ನಾವು ಹೆಮ್ಮೆಪಡುವ ಸಂಗತಿ. ಅವರ ದಿವ್ಯಜೀವನ ಮತ್ತು ಯೋಗಸಮನ್ವಯದರ್ಶನ ಷಟ್‌ಸ್ಥಲದರ್ಶನದ ವಿಮರ್ಶಾತ್ಮಕ ವ್ಯಾಖ್ಯಾನದಂತಿದೆ. ಪರಾತ್ಪರ ವಸ್ತುವಿನ ಸತ್ಯ ಸಾಕ್ಷಾತ್ಕಾರವನ್ನು ಕುರಿತು ಶ್ರೀ ಅರವಿಂದರು ಅತ್ಯಾಧುನಿಕವಾಗಿ ವಿಚಾರ ಮಾಡಿದ ಅನುಭಾವಿಗಳು. ಅವರು ಪರಾತ್ಮಕ ವಸ್ತುವನ್ನು Supermind ಎನ್ನುತ್ತಾರೆ.

"The Supermind is a Real-Idea, a Truth consciousness. It is conscious reality throwing itself in to meetable forms of its own imperishable and immutable substance (೧)

ಅವ್ಯಕ್ತವಾದ ಪರವಸ್ತು ವ್ಯಕ್ತವಸ್ತುವಿನ ರೂಪದಲ್ಲಿ ಪ್ರಕಟಿತವಾಗಿ ತಾನು ಅವ್ಯಕ್ತವಾಗಿಯೇ ಇರುತ್ತದಲ್ಲವೆ? ಈ ಮಾತನ್ನು ಸಿದ್ಧಾಂತ ಶಿಖಾಮಣಿಯು ಅನ್ವರ್ಥವಾಗುವಂತೆ ಹೇಳಿದೆ.

> ಅವ್ಯಕ್ತಮಾಗಿ ಜಡಮಾಗಿ ಮೇಣ್ ಲೋಕದೊಳ–
> ತ್ಯಂತ ಗೂಢ ಚೈತನ್ಯಮದಾಗಿರುತಿರ್ಕುಂ.
> ಸರ್ವಜ್ಞನಾಗಿ ಪ್ರೇರಕನಾಗೀಶನೆನಿಸಿಪಂ
> ಕಿಂಚಿಜ್ಞನಾಗಿ ಲೋಕದೊಳೆ ಜೀವನೆನಿಪಂ" (೨)

ಶ್ರೀ ಅರವಿಂದರು ಭಕ್ತಸ್ಥಲದ ವಿವರಣೆಯನ್ನು ತಮ್ಮದೇ ಆದ ಶೈಲಿಯಲ್ಲಿ ಅರ್ಥವತ್ತಾಗಿ ಹೇಳಿದ್ದಾರೆ:

"The Supramental change is a thing decreed and invertable in the evolution of the earth consci-

---

೧) The life Divine V-I p-119

೨) ಮ. ಮುಕುರ ಪು. ೪೨. ಸಾಲು ೧೫೩ ರಿಂದ ೧೫೬. ಸಿ. ಶಿಖಾಮಣಿ ೫-೪೦

ousness; for its upward ascent is not ended and mind is not its last summit. But that the change may arrive, take form and endure there is needed the call from below with a will to recognize and not deny the light when it comes, and there is needed the sanction of the supreme from the above" (೧)

ಸಿದ್ಧಾಂತ ಶಿಖಾಮಣಿಕಾರರು ಭಕ್ತಿಸ್ಥಲವನ್ನೇ ಅಂತ್ಯಸಿದ್ಧಿಯೆನ್ನುವುದಿಲ್ಲ. ಇದು ಮೊದಲನೇ ಮೆಟ್ಟಲು. ಮಲಪರಿಪ್ಲುತವಾದ ಶರೀರದಲ್ಲಿ ಶುದ್ಧವಾದ ಅಂತಃಕರಣ ಸಿದ್ಧಿಸಲು ಶಿವಕಾರುಣ್ಯವನ್ನು ಪಡೆಯುವ ಮೊದಲ ಹೆಜ್ಜೆ. ಅದನ್ನು ಸಾಧಿಸಿದ ಜೀವ ಪಿಂಡವೆನಿಸುತ್ತದೆ. ಪಿಂಡಸ್ಥಲ ಪ್ರಾಪ್ತಿಯಾದನಂತರ ಅನುಗ್ರಹ ಪ್ರಾಪ್ತಿಯಾಗಿ ಅನುಭವ ಸಿದ್ಧಿಯಾಗುತ್ತದೆ.

"ಶಂಭು ಪ್ರಸಾದದಿಂ ಶುದ್ಧಮಾನಸನಾಗಿ
ಶುಭಾಂತಃಕರಣ ತಾನೆನಿಸಿರ್ಪದೇಹಿತಾನ್
ಪರಿಪಕ್ವನೆನಿಸಿಹನ್ ಪರಿಶುದ್ಧನೆನಿಸಿಹನ್
ಆತನೊಳ್ ಶಿವಭಕ್ತಿ ಸಂಜನಿಸಿ ಬೆಳಗುಗುಂ
ಚರಮದೇಹಿ ಜೀವನೆ 'ಪಿಂಡ' ನೆಂದೆನಿಸುಗುಂ.(೨)

ಷಟ್‌ಸ್ಥಲ ದರ್ಶನದಲ್ಲಿ ಭಕ್ತಿಸ್ಥಲವು ಮೊದಲ ಹಂತವಾದರೂ ಮಹತ್ವಪೂರ್ಣವಾದುದು. ಗಹನವೂ ಗಂಭೀರವೂ ಆದುದು. ಜಗತ್ತಿನ ಎಲ್ಲ ದರ್ಶನಗಳ ವಿವೇಚನೆ ಮತ್ತು ಸಮನ್ವಯವನ್ನು ಇಲ್ಲಿಯೇ ಕಾಣುತ್ತೇವೆ ಇನ್ನು ಐದು ಸ್ಥಲಗಳಿವೆ. ಅಲ್ಲಿ ನಡೆಸಿರುವ ಸಾಧನೆ ಎಷ್ಟು ಹಿರಿದೆಂಬುದನ್ನು ನಾವು ಅರಿಯಬೇಕು ಅಂದು ನಮಗೆ ಈ ದರ್ಶನದಲ್ಲಿ ಅಪಾರ ಅಭಿಮಾನ ಶ್ರದ್ಧೆ ಉದಿಸದಿರದು. ಒಂದು ಲೇಖನದಲ್ಲಿ ಎಲ್ಲ ಸ್ಥಲಗಳ ವಿವೇಚನೆ ಮಾಡುವ ಸಾಮರ್ಥ್ಯವಾಗಲಿ ಅವಕಾಶವಾಗಲಿ ಇರುವುದಿಲ್ಲ. ಕನ್ನಡಿಯಲ್ಲಿ ಕರಿಯಡಗಿದಂತೆ ಸಿದ್ಧಾಂತ ಶಿಖಾಮಣಿಯ ಭವ್ಯತೆಯನ್ನು ಆತ್ಮಾನಂದಕ್ಕೆ ಹಾಡಿಕೊಂಡಿದ್ದೇನೆ. ಈ ದರ್ಶನವನ್ನು ಅನುಭಾವಕ್ಕೆ ತಂದುಕೊಂಡ ಶ್ರೀಗಳವರ ಜ್ಞಾನಸಂಪತ್ತು ಕಾವ್ಯಶೈಲಿ ಎಷ್ಟೆಂಬುದರ ಸೂಕ್ಷ್ಮ ಪರಿಚಯ ಇದರಿಂದ ಆಗಬಹುದೆಂದು ಆಶಿಸಿದ್ದೇನೆ. ಇಲ್ಲಿ ಅದ್ವೈತದಿಂದ ಹಿಡಿದು ಅರವಿಂದರ ಸಿದ್ಧಾಂತದ ವರೆಗೆ ಇರುವ ಎಲ್ಲ ತತ್ವಗಳ ಸಾರವೂ ಇದರಲ್ಲಿದೆ.(೩) ಎಂದು ಶ್ರೀಗಳ

---

೧) The mother p- 83-84

೨) ಮ. ಮುಕುರ. ಪುಟ ೫೩ ಸಾಲು ೧೮೪ ರಿಂದ ೧೮೮ ಸಿ. ಶಿಖಾಮಣಿ ೫-೫೦

೩) ಮಾ. ಕಾಂತಿ [ಮುನ್ನುಡಿ] ಪುಟ ೩೨

ವರು ಹೇಳಿರುವ ಮಾತು ಎಷ್ಟು ಸಮಂಜಸವಾಗಿದೆಯೆಂಬುದನ್ನು ಗಮನಿಸಬಹು ದಾಗಿದೆ.

ಶ್ರೀಗಳವರು ವಿಶ್ವತತ್ವದಲ್ಲಿ ಎಷ್ಟು ಅನುಭವ ಪಡೆದಿರುವರೆಂಬುದನ್ನು ವ್ಯಕ್ತ ಪಡಿಸುತ್ತದೆ. ಇಂತಹ ಉತ್ತಮ ಕೃತಿಯನ್ನು ಅರಿತು ಅನುಭವಿಸಿ ಕನ್ನಡ ಜನ ಸಾಮಾನ್ಯರಿಗಾಗಿ ಗದ್ಯರೂಪದಲ್ಲಿ 'ಮಣಿಕಾಂತಿ'ಯನ್ನು ರಚಿಸಿದರು. ಆ ಕಾಂತಿ ಯಲ್ಲಿ ಮಾನವರ ಕಣ್ಣು ತೆರೆಸಿದರು. ಅಷ್ಟಕ್ಕೇ ತೃಪ್ತರಾಗದೆ ಆಧುನಿಕ ಆಂಗ್ಲ ಪದ್ಧತಿಯ ಪದ್ಯಶೈಲಿಯಲ್ಲಿ ಕಾವ್ಯವಾಗಿ ಹೆಣೆದು 'ಮಣಿಮುಕುರ' ವನ್ನು ನಮ ಗಿತ್ತರು. ಕನ್ನಡಿಯಲ್ಲಿ ಕಾಣುವ ಬಿಂಬಕ್ಕಿಂತಲೂ ಶಿವಯೋಗಿ ಶಿವಾಚಾರ್ಯರ ಅದ್ಭುತ ತತ್ವ ರಚನೆ ನಮಗೆಲ್ಲ ವಚನವಾಗಿ ಅಭ್ಯುದಯ ಹೊಂದಲೆಂದು ವಚನಗಳ ನ್ನಾಗಿಸಿ 'ಮಣಿವಚನ' ಕೃತಿಯನ್ನು ಅನುಗ್ರಹಿಸಿದರು. ಈ ಮೂರು ಕೃತಿಗಳಿಗೂ ಮುನ್ನುಡಿ ರೂಪದಲ್ಲಿ ಮನೋಜ್ಞವಾದ ವಿದ್ವತ್ಪೂರ್ಣವಾದ ವ್ಯಾಖ್ಯಾನ ವಿಮರ್ಶೆ ಯನ್ನಿತ್ತರು. ಈ ಲೇಖನದಲ್ಲಿ ಒಂದು ಸ್ಥಲದ ವಿಷಯವನ್ನು ಬರೆಯುವುದೇ ಬೃಹ ದಾಕಾರದಂತಿದೆ. ಆದರೆ ಶ್ರೀಗಳವರ ಅಭಿಮತದಂತೆ ಇದು ಎಲ್ಲ ತತ್ವಗಳ ಸಾರ ಸರ್ವಸ್ವ. ಆದುದರಿಂದ ಉಳಿದ ಸ್ಥಲಗಳನ್ನೂ ಇತರ ವಿಶ್ವತತ್ವಗಳ ಬೆಳಕಿನಲ್ಲಿ ಸಹ ವಿವೇಚಿಸಿದರೆ ಸಿದ್ಧಾಂತ ಶಿಖಾಮಣಿಯ ಗರಿಮೆ ಶಿವಯೋಗಿ ಶಿವಾಚಾರ್ಯರ ಹಿರಿಮೆ ಶ್ರೀಶೈಲ ನಿಡುಮಾಮಿಡಿ ಜಗದ್ಗುರುಗಳವರ ಒಲುಮೆ ಇವೆಲ್ಲದರ ಒಲುಮೆ ನಮಗೆ ಪೂರ್ಣವಾಗಿ ಆಗುವುದಲ್ಲದೆ ಈ ತತ್ವ ಹಾಗು ಈ ಕೃತಿಯ ಕೀರ್ತಿ ಉಜ್ವಲವಾಗು ತ್ತದೆ. ಜಗತ್ತಿಗೆ ದಿವ್ಯಕಾಣಿಕೆಯಾಗುತ್ತದೆ. ಅಂತೆಯೇ ಶ್ರೀಗಳವರು ಈ ದರ್ಶನ ವನ್ನು ತಮ್ಮ ಎಲ್ಲ ದಾರ್ಶನಿಕ ಕೃತಿಗಳಲ್ಲಿ ಎಷ್ಟು ಸುಂದರವಾಗಿ ಸುಲಭವಾಗಿ ಬಿತ್ತರಿ ಸಿದ್ದಾರೆಂಬುದನ್ನು ಇಲ್ಲಿ ವಿವೇಚಿಸಲು ಸಾಧ್ಯವಾಗಲಿಲ್ಲ. ಷಟ್‌ಸ್ಥಲ ಧರ್ಮ ದರ್ಶ ನದ ಬಗೆಗೆ ಅಭಿಮಾನವಿತ್ತಾದರೂ ನಾನು ಸಿದ್ಧಾಂತ ಶಿಖಾಮಣಿಯನ್ನು ಇಷ್ಟು ವಿಶಾಲವೃತ್ತಿಯ ಕಾವ್ಯವೆಂದು ಅರಿತಿರಲಿಲ್ಲ. 'ಮಣಿಕಾಂತಿ' ಯು ನನ್ನ ಕೈ ಸೇರಿದಾಗ ನನ್ನ ಆಸಕ್ತಿ ಕೆರಳಲಿಲ್ಲ. ಆದರೆ ಮಣಿಮುಕುರವನ್ನು ಶ್ರೀಗಳವರು ಅನು ಗ್ರಹಿಸಿದಾಗ ಕಾವ್ಯ ವಿಹಾರಕ್ಕಾಗಿ ಓದಿ ಆನಂದಿಸಿದ್ದೆ. ಅಭಿಮಾನಪಟ್ಟದ್ದೆ. ಆದರೆ 'ಮಣಿವಚನ' ನನಗೆ ದೊರೆತಮೇಲೆ ನನ್ನ ಆಸಕ್ತಿ ಪಲ್ಲವಿಸಿತು. ಮೂಲಕೃತಿಯನ್ನು ಓದುತ್ತ 'ಮಣಿಮುಕುರ'ವನ್ನು ಜೋಡಿಸಿಕೊಂಡು ಹಾಡಿ ಆನಂದಪಡುವಂತಾ ಯಿತು. ಉಳಿದೆರಡು ಕೃತಿಗಿಂತ ಮಣಿವಚನದಲ್ಲಿ ಮೂಲಕೃತಿಯ ಸತ್ಯ ಸಾಕ್ಷಾತ್ಕಾ ರವೇ ಆಗಿರುವಂತೆ ಭಾಸವಾಗುತ್ತದೆ. ಶ್ರೀ ಶಿವಯೋಗಿ ಶಿವಾಚಾರ್ಯರ ಶಿಖಾಮಣಿಯ ಕೀರ್ತಿ ಶಿಖರಿಯಿಂದ ಜಗದ್ಗುರುಗಳವರು ತ್ರಿವೇಣಿಯನ್ನು ಪ್ರವಹಿಸಿ ಕನ್ನಡ ಕುಲದ ಅಭ್ಯುದಯಕ್ಕೆ ಅನುಗ್ರಹಿಸಿದ್ದಾರೆ. ಇದು ಕನ್ನಡ ಸಾರಸ್ವತ ಸಂಪತ್ತಿಗೆ ಅಮೂಲ್ಯ ಕೊಡುಗೆ. ಮುಮುಕ್ಷುಗಳ ಮೋಕ್ಷ ಚಿಂತಾಮಣಿ. ಈ ಕೊಡುಗೆಯಿಂದ ಮೂಲ

ಕೃತಿಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ ಶ್ರೀಗಳವರು. ಈ ಲೇಖನದಲ್ಲಿ ಮಣಿಕೀರ್ತಿಯ ಪೂರ್ಣವಾದ ಪಕ್ಷಪಾದ ಚಿತ್ರವನ್ನು ಕೊಡಲು ಅಸಮರ್ಥನಾಗಿದ್ದೇನೆ. ಆದರೂ ಒಂದು ಸಂತೃಪ್ತಿ. ಶ್ರೀಗಳವರೆಸಗಿದ ಜ್ಞಾನ 'ದಾಸೋಹ' ವಾಹಿನಿಯಲ್ಲಿ ಒಂದು ಉದ್ಧರಣಿ ತೀರ್ಥ ಲಭ್ಯವಾಯಿತೆಂದು ಆ ಒಂದುದ್ಧರಣಿ ತೀರ್ಥದಲ್ಲಿ ಒಂದು ಹನಿಯನು ಳಿಸಿ ದಾಸೋಹನುಹಿಸಿಗೆ ಅರ್ಪಿಸಿದ್ದೇನೆ ಏಕೆಂದರೆ ಸಪ್ತಸಾಗರದ ಜಲದಲ್ಲಿ ಕೋಟ್ಯಂಶವನ್ನು ಆವಿಯಾಗಿ ಪಡೆದ ರವಿ ಅಪಾರ ಧೈರ್ಯವನ್ನು ಜಗತ್ತಿಗೆ ಕರುಣಿಸುವನೆಂಬ ಅನುಭವ ನಮಗಿಲ್ಲವೆ? ಅಂತೆಯೇ ಅಪಾರ ಅನುಗ್ರಹಾಪೇಕ್ಷೆಯ ಪ್ರತೀಕವಾಗಿ ಈ ಲೇಖನ ಜ್ಞಾನ ದಾಸೋಹ ಮಹಾನಿಧಿಗೆ ಸಮರ್ಪಿತವಾಗಿದೆ.

"ಸತ್ಯಂ ಶಿವಂ ಸುಂದರಂ"

---

# ಗೀರ್ವಾಣ ಭಾಷೆಗೆ ಕನ್ನಡದ ದೀಕ್ಷೆ

ಈಶ್ವರಯ್ಯ, ನರೇಂದ್ರ

ಮಣಿಕಾಂತಿ ಅಚ್ಚಾಗಿ ಹೊರಬಿದ್ದುದು ಅತ್ಯಾನಂದದ ಸಂಗತಿ. ವೀರಶೈವ ತಿರುಳನ್ನೊಳಗೊಂಡ "ಸಿದ್ಧಾಂತ ಶಿಖಾಮಣಿ" ಗ್ರಂಥವು ಗೀರ್ವಾಣ ಭಾಷೆಯಲ್ಲಿರುವುದರಿಂದ ಅದರಲ್ಲಿಯ ವಿಚಾರವನ್ನು ತಿಳಿದುಕೊಳ್ಳಲು ಕನ್ನಡಿಗರು ಇದುವರೆಗೂ ಎರವಾಗಿದ್ದರು. ಅದರ ವಿವರಗಳನ್ನು ತಾಯನುಡಿಯಲ್ಲಿ ತಿಳಿದುಕೊಳ್ಳುವ ಅನುವು ನಮಗೆ ಇಲ್ಲಿಯ ತನಕ ದೊರೆಯದ್ದರಿಂದ ಈ ವಿಷಯದಲ್ಲಿ ಕುರುಡರಂತಾಗಿದ್ದೆವು. ಈ ಕುರುಡುತನವನ್ನು ಇಂದು "ಮಣಿಕಾಂತಿ"ಯು ತನ್ನ ತೇಜೋಮಯವಾದ ಸ್ವಪ್ರಕಾಶದಿಂದ ಕಳೆಯುವುದರಿಂದ ಮನವು ಹರ್ಷಿಸುತ್ತಿದೆ. ವೈರಾಗ್ಯಶೀಲರಾದ ಶ್ರೀ ನಿಜಗುಣ ಶಿವಯೋಗಿಗಳು ಕನ್ನಡಮ್ಮನನ್ನು ವೇದಾಂತಿನಿಯನ್ನಾಗಿ ಮಾಡಿ ಕನ್ನಡ ಸಾರಸ್ವತ ಸೊತ್ತನ್ನು ಬೆಳಸಿ ಕನ್ನಡಿಗರೆಲ್ಲರಿಗೆ ವೇದಾಂತದ ಸವಿತಿನಿಸನ್ನು ಕೊಟ್ಟಂತೆ ಇಂದು ವೀರಶೈವರೆಲ್ಲರಿಗೂ ದ್ವೈತಾದ್ವೈತ ತತ್ವಗಳಿಂದೊಡಗೂಡಿದ ವೀರಶೈವ ಸಿದ್ಧಾಂತಕ್ಕೆ ಕನ್ನಡದ ಪವಿತ್ರವಾದ ತ್ರಿವಿಧ ದೀಕ್ಷೆಯನ್ನು ಅನುಗ್ರಹಿಸಿ ವೀರಶೈವ ಸಾಹಿತ್ಯ ಭಾಂಡಾರವನ್ನು ತನ್ಮೂಲಕ ಆ ಜನಾಂಗವನ್ನು ಉದ್ಧರಿಸಿದ ಕೀರ್ತಿ ಪರಮ ಪವಿತ್ರ ತೇಜೋಮಯ ಶ್ರೀಶೈಲ ಸೂರ್ಯಸಿಂಹಾಸನವನ್ನಲಂಕರಿಸಿದ ನಮ್ಮ ಪರಮ ಪೂಜ್ಯ ಮಹಾ ಜಗದ್ಗುರುಗಳ ದಿವ್ಯ ಪಾದಂಗಳಲ್ಲಿ ಸಲ್ಲುವುದು.

---

# ಶ್ರೀ ಜ. ಚ. ನಿ ಅವರ 'ಮಣಿವಚನಗಳು'

—ಡಾ. ಡಿ. ಎಸ್. ಕರ್ಕಿ, ಎಂ.ಎ., ಪಿಹೆಚ್. ಡಿ

ಮಾವು, ಇಮ್ಮಾವು ಭಾರತ ದೇಶದ ಅದರಲ್ಲಿಯೂ ಕನ್ನಡ ನಾಡಿನ ಹೆಮ್ಮೆಯ ಹಣ್ಣು. ನಮ್ಮ ಕಾವ್ಯಗಳಲ್ಲಿ ಮಾವಿಗೆ ವಿಶಿಷ್ಟ ಸ್ಥಾನವಿದೆ. ಮಾವಿನ ಮಿಡಿಗೂ ಅದರದೇ ಆದ ಚೆಲುವಿದೆ. ಮಾಮಿಡಿ ಕನ್ನಡದ ಕಿವಿಗೆ ಸವಿನುಡಿ. ನಿಡು ಮಾಮಿಡಿ ಇನ್ನೂ ಚೆನ್ನ. ಕನ್ನಡದ ನಮ್ಮ ನಾಡಿನ ಒಂದು ಊರಿಗೆ ಈ ಹೆಸರಿದೆ. ಅಂದರೆ ನಾಡಿನ ನುಡಿ ಸಂಸ್ಕೃತಿಯ ಅರಿವಾದೀತು. ಇಷ್ಟಕ್ಕೇ ತೀರಲಿಲ್ಲ ಈ ಸ್ವಾರಸ್ಯ. ನಿಡುಮಾಮಿಡಿಗೆ ಸಾಹಿತ್ಯದ ಸಂಪರ್ಕವೂ ಉಂಟು. ಈ ಸಂದರ್ಭದಲ್ಲಿ 'ಅಣ್ಣನ ಬದುಕು' 'ಅಕ್ಕನಬಾಳು' ಮೊದಲಾದ ಗಣ್ಯ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ಕೊಟ್ಟ ನಿಡುಮಾಮಿಡಿ ಜಗದ್ಗುರುಗಳನ್ನು–ಶ್ರೀ ಜ.ಚ.ನಿ; ಅವರನ್ನು ಗಮನಿಸಬೇಕು. ಶ್ರೀಗಳವರ ಭಾಷಾ ಶೈಲಿಯಲ್ಲಿಯೂ ವೈಶಿಷ್ಟ್ಯವಿದೆ ಅವರ ಅನುಭವಕ್ಕೆ ಅದರದೇ ಆದ ರುಚಿಯಿದೆ. ವಚನ ಸಾಹಿತ್ಯವನ್ನು ಅವರು ನಿಷ್ಠೆಯಿಂದ ಅಭ್ಯಸಿಸಿದ ಪರಿಣಾಮ ಅವರ ಸಾಹಿತ್ಯ ಕೃತಿಗಳಲ್ಲಿ ಚೆನ್ನಾಗಿ ಕಾಣುತ್ತದೆ. ಅದರಂತೆ ಅವರ ಕಾವ್ಯಾಭ್ಯಾಸದ ಗುರುತು ಅಲ್ಲಲ್ಲಿ ಸುಳಹುದೋರಿದೆ ಹೊಸ ಪ್ರಭೆಗಳ ಪ್ರಜ್ಞೆ ಚಿತ್ತಕ್ಕೆ ಇಳಿದು ಬಂದಷ್ಟು ಒಳಿತು. ಈ ಪ್ರಜ್ಞೆ ಶ್ರೀ ಜ. ಚ. ನಿ. ಅವರ ಕೃತಿಗಳಲ್ಲಿ ಕಾಣುತ್ತದೆ. ಶ್ರೀ ಜ ಚ. ನಿ ಅವರ 'ಮಣಿವಚನ'ವೆಂಬ ಅನುವಾದ ಕೃತಿಯ ಹಿನ್ನೆಲೆಯಲ್ಲಿ ಇದನ್ನೆಲ್ಲಾ ಹೇಳುವುದು ಪ್ರಸ್ತುತವೇ ಸರಿ. 'ಮಣಿ ವಚನ' ಶ್ರೀ ಜಗದ್ಗುರು ಮೂರು ಸಾವಿರ ಮಠ, ಗ್ರಂಥಮಾಲೆ (ಹುಬ್ಬಳ್ಳಿ) ಯಿಂದ ಪ್ರಕಟವಾದ ಕುಸುಮ ಎಂಬುದು ಇಲ್ಲಿ ಹೆಚ್ಚಿನ ವೈಶಿಷ್ಟ್ಯ.

'ಮಣಿ' ಇಲ್ಲಿ ಶಿಖಾಮಣಿ. ಬರಿ ಶಿಖಾಮಣಿಯಲ್ಲ; ಸಿದ್ಧಾಂತ ಶಿಖಾಮಣಿ. 'ವೀರಶೈವ ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತ ಗ್ರಂಥವನ್ನು ಸೂಚಿಸುತ್ತದೆ ಈ ಹೆಸರು. ಮಣಿ ಎಂಬ ಕಿರಿ ಶಬ್ದ ಇದನ್ನೆಲ್ಲ ಕಿರು ಹನಿಯಂತೆ ಪ್ರತಿಬಿಂಬಿಸಿದೆ. ಇನ್ನು ಈ ಹೆಸರಿನಲ್ಲಿ ಜೋಡುಗೂಡಿರುವ 'ವಚನ' ಎಂಬುದರಲ್ಲಿಯೂ ಔಚಿತ್ಯವಿದೆ. ಏಕೆಂದರೆ, 'ಸಿದ್ಧಾಂತ ಶಿಖಾಮಣಿ' ಇಲ್ಲಿ ವಚನ ರೂಪದಲ್ಲಿ ನಿರೂಪಿತವಾಗಿದೆ. ಈ ಕನ್ನಡ ಭಾಷಾನುವಾದ ಕೃತಿಯಲ್ಲಿ ಬಳಕೆಯಾದ ವಚನ ಹಿಂದೆ ಶಿವಶರಣರು ಶಿವಾನುಭವದ ಅಭಿವ್ಯಕ್ತಿಗಾಗಿ ಬಳಸಿದ ವಿಶಿಷ್ಟ ರೀತಿಯ ವಚನ ರಚನೆ.

'ಮಣಿ' ಹಾಗೂ 'ವಚನ' ಇವೆರಡನ್ನೂ ಒಳಗೊಂಡ 'ಮಣಿ ವಚನ' ಎಂಬ ನಾಮ ಕರಣ ಕಿರಿದಾದರೂ ಹೀಗೆ ಪರಿಣಾಮಕಾರಕವಾಗಿದೆ. ಇಷ್ಟು ತಿಳಿದ ಬಳಿಕ ಈ ಕೃತಿ 'ಸಿದ್ಧಾಂತ ಶಿಖಾಮಣಿ'ಯ ಕನ್ನಡ ಅನುವಾದ ಎಂದು ಬೇರೆ ಹೇಳಬೇಕಿಲ್ಲ, ಈ ಮೊದಲೇ ಹೇಳಿದೆ.

ಅನುವಾದ ಕೃತಿಯಾದರೂ ಕನ್ನಡದಲ್ಲಿ ಇದು ಮೂಲ ಕೃತಿ ಎಂಬ ಭಾವನೆ ಯನ್ನುಂಟುಮಾಡುವಷ್ಟು ಚೆನ್ನಾಗಿದೆ. ವಚನದ ರಚನೆಗೆ ಅಳವಟ್ಟು ಅಂದವಾಗಿದೆ. ಶ್ರೀ ಜ. ಚ. ನಿ. ಅವರಿಗೆ ಸಹಜವಾಗಿ ಒಲಿದು ಬಂದಂತಿದೆ ವಚನ ರಚನಾ ಸರಣಿ. ಬಸವಾದಿ ಪ್ರಮಥರ ವಚನಗಳ ವಿಷಯದಲ್ಲಿ ಅವರಿಗೆ ತುಂಬಾ ಒಲವು, ಒಲವರ. ಅವರ ಮನವನ್ನು ಸೂರೆಗೊಂಡಿದೆ ವಚನ ಶೈಲಿ. ಆದುದರಿಂದ ವಚನ ರಚನೆ ಹವಣಾಗಿ ಹದುಳವಾಗಿ ಬಳಕೆಗೊಂಡಿದೆ ಈ ಅನುವಾದ ಕೃತಿಯಲ್ಲಿ. ಅದರ ನೆಲೆ ಕಲೆಗಳನ್ನೆಲ್ಲ ಮಣಿವಚನದಲ್ಲಿ ಕಾಣಬಹುದು. ಅವರ ಸುಳುಹು-ಹೊಳಹುಗಳಂತು ಸರಿಯೇ ಸರಿ. ಶ್ರೀ ಜ. ಚ. ನಿ. ಅವರು ಹೀಗೆ ಭಾವಲೀನರಾಗಿ ಬಳಸಿದ್ದಾರೆ– ವಚನ ಶೈಲಿಯ ಒಲವು-ಚೆಲುವುಗಳನ್ನೆಲ್ಲ.

ವಿಷಯ ಗಹನ; ಆದರೆ ನಿರೂಪಣೆ ಸರಳ ಸುಂದರ. ವಚನದ ರೀತಿಯೇ ಹಾಗೆ ಎಂದು ಮತ್ತೆ ಹೇಳಬೇಕೆ? ವಚನದ ರೀತಿಯಲ್ಲಿಯೇ ಹೇಳಬೇಕಾದರೆ, ತಿಳಿಗನ್ನಡ ಸುಳಿದೆಗೆದು ಬಂದಿದೆ ಇಲ್ಲಿ. ವಚನದ ಒಟ್ಟು ರಚನೆಯಲ್ಲಿ ಅಲ್ಲಲ್ಲಿ ಹಳಗನ್ನಡ ಕಾವ್ಯಗಳ ಮನೋಹರ ಶಬ್ದ ಪ್ರಯೋಗಗಳು ಮಿನುಗಿ ಈ ಮಣಿ ವಚನ ಗಳಿಗೆ ಕಳೆ ನೀಡಿವೆ. ಅಂತು ಅನುವಾದದ ದಾರಿ ಹಿಡಿದು ಬಂದ ಕನ್ನಡದ ಸರಣಿ ತನ್ನದೇ ಆದ ಚೆಲುವನ್ನು ಸುಳುಹುಗಾಣಿಸಿದೆ ಮಣಿವಚನದಲ್ಲಿ. ವಿಷಯಕ್ಕೆ ಭಾಷಾ ಶೈಲಿ ಕಳೆ ಕಟ್ಟಿದೆ. ಇದು ಈ ಮಣಿವಚನದ ವೈಶಿಷ್ಟ್ಯ. ಉದಾಹರಣೆಗಳ ಪರಿ ಶೀಲನೆಯಿಂದ ಈ ಮಾತನ್ನು ಮನಗಾಣಬಹುದು.

ಮಹಾದೇವ, ನಿಮ್ಮ ತವಕವೆನ್ನೆದೆಯ ತುಂಬಿ
ನಿಮ್ಮ ನಾನೆಂತು ಅಗಲಲಯ್ಯ
ನಿಮ್ಮಡಿಗಳ ನಾನೆಂತು ಬಿಡಲಯ್ಯ
ನೀವೆನ್ನ ತ್ರಿಕರಣದಲ್ಲಿ ತುಂಬದ ಕಾರಣ ಮರಳಿ
ನಿಮ್ಮೊಡನಾಟದ ಸವಿಗಲೆಯನೆನ್ನೊಂದಿಗೆ ಕಾಂಬೆನಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ.

ವಚನದ ಇನ್ನೊಂದು ಬಗೆ ಹೀಗೆ ತೆರೆಗೊಂಡು ಬಂದಿದೆ :

ಸಂಸಾರವೆಂಬ ಸರ್ಪ ಕಚ್ಚಿ, ನಂಜೇರಿ
ನರವೇಷಿಗಳೆಲ್ಲ ಬವಳಿಗೊಂಡಿಹರು ನೋಡಾ,

ಅವರಾ ಬನಳಿಗೆ ನಿಮ್ಮ ಕಲ್ಯಾಣಕಾರಕ ಕಟಾಕ್ಷವೆ
ಸಂಜೀವನೌಷಧವು ನೋಡಾ,
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ.

ಸಿದ್ಧಾಂತ ತತ್ತ್ವವನ್ನು ಅನುಭಾವದ ಶೈಲಿಯನ್ನು ಸಮರಸಗೊಳಿಸಿದ ಶ್ರೇಯಸ್ಸು ಶ್ರೀ ಜ. ಚ. ನಿ. ಯವರ ತನ್ನತನದ ಚೆಲುವು ಅಲ್ಲಲ್ಲಿ ಹೊಳೆದಿವೆ. ಅಂತಹ ಉದಾಹರಣೆಗಳನ್ನು ನೋಡಬಹುದು:

ಆ ಮಲಯಾಚಲದ ಚೆಲುವನೇನೆಂಬೆ?
ಹೊಸಚಂದನ ನಂದನವನ
ಚಿಗುರೊಡೆದು ತಂಪಾಗಿದೆ. ಹೂವಿಡಿದು ಕಂಪಾಗಿದೆ;
ಆ ಕಂಪ ಹೊತ್ತು ತಂಗಾಳಿ ತೀಡುತಿದೆ ಒಯ್ಯನೆ!
ತುಂಬಿ ತುಳುಕಿದೆ ನೆರೆದ ನಾಗನಾರಿಯರ ಸಂಗೀತ ಸುಧೆಯಿಂದ;
ಶ್ರೀ ಸಿಡುಮಾಮಿಡಿ ಶ್ರೀ ಗಿರಿ ಸಿಂಹಾಸನಾಧೀಶ್ವರ.

ವಚನ ರೀತಿಯ ಇನ್ನೊಂದು ಸುಳುಹಿನ ಉದಾಹರಣೆ ಇಲ್ಲಿದೆ:

ಕುಜವೆಂದಡೇನೋ ? ಬೀಜವೆಂದಡೇನೋ ?
ವಿಕಾಸವಾಗಿ ಕುಜವೆನಿಸಿತ್ತು,
ಸಂಕೋಚವಾಗಿ ಬೀಜವೆಂದೆನಿಸಿತ್ತು.
ಬೀಜವಾಗಿರಲು ಕುಜ ಸುಳ್ಳೆನಲುಂಟೆ?
ಬ್ರಹ್ಮವಾಗಿರಲು ಬ್ರಹ್ಮಾಂಡ ಸುಳ್ಳೆಂಬ ಭ್ರಮಿತರೇನೆಂಬೆ ?
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ.

ಹೀಗೆಲ್ಲ ವಚನಗಳ ರಚನಾ ರೀತಿಗೆ ಸಿದ್ಧಾಂತ ಗ್ರಂಥವನ್ನು ಅಳವಡಿಸಿ ಅನುವಾದಿಸಿದುದು ಒಂದು ಕಷ್ಟಸಾಧ್ಯವಾದ ಕಾರ್ಯ. ಶ್ರೀ ಜ. ಚ. ನಿ. ಅವರು ಇದನ್ನು ಸಹಜವಾಗಿ ಸಾಧಿಸಿದುದರಲ್ಲಿ ಕೌತುಕವಿದೆ. ವಚನ ರಚನೆಯಲ್ಲಿ ಇಂಥ ಕೃತಿಯ ಅನುವಾದ ಸಾಧ್ಯ ಎಂದು ಅರಿಯುವುದು ಅಭಿರುಚಿಯ ಕಾರ್ಯ. ಅದಕ್ಕೆ ಸ್ವಯಂ ಸ್ಫೂರ್ತಿ ಬೇಕು. ಭಾವದ ತಾಳಮೇಳದಿಂದಾಗಿ ಈ ಉತ್ಕೃಷ್ಟವಾದ ಅನುಭಾವ ಸಾಧ್ಯವಾಗಿದೆಯೆಂದು ಹೇಳಬಹುದು. ಶ್ರೀ ಜ. ಚ. ನಿ. ಅವರ ವಿಷಯ ನಿರೂಪಣೆಯಲ್ಲಿ ಅನುಭವದ ಅಭಿವ್ಯಕ್ತಿಯಿದೆ. ಅವರ ಭಾಷಾ ಶೈಲಿಯಲ್ಲಿ ತಿಳಿ ಬೆಳಕಿನ ಸೊಗಸಿದೆ. ಈ ದೃಷ್ಟಿಯಿಂದಲೂ ಅವರ ಕೃತಿ 'ಮಣಿವಚನ' ಅರ್ಥಪೂರ್ಣ.

# ಸರಸ್ವತಿಯ ಸಿರಿಮುಡಿಗೊಂದು ಪುಷ್ಪ ಮಣಿಕಾಂತಿ

ಆರ್. ಸಿ. ಹಿರೇಮಠ, ಎಂ. ಎ.,
ರೀಡರ್, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ

ಶ್ರೀ ಜ. ಚ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು ಕನ್ನಡನಾಡಿಗೆಲ್ಲ ಚಿರಪರಿಚಿತರು. ಪೂಜ್ಯ ಸ್ವಾಮಿಗಳವರು ಈಗಾಗಲೇ ವಿವಿಧ ಮುಖವಾಗಿ ಸರಸ್ವತಿಯ ಸಿರಿಮುಡಿಗೆ ಪುಷ್ಪಗಳನ್ನು ಏರಿಸಿದ್ದಾರೆ. ಧರ್ಮಾಧಿಕಾರಿಗಳಾಗಿದ್ದರೂ ಸಾಹಿತ್ಯ ಸೇವೆಯನ್ನು ಒಳ್ಳೆ ಆಸ್ಥೆಯಿಂದ ಮಾಡುತ್ತಿದ್ದಾರೆ. ಇದೀಗ ಸಿದ್ಧಾಂತ ಶಿಖಾಮಣಿಯೆಂಬ ಒಳ್ಳೇ ಮಹತ್ವದ ವೀರಶೈವ ಗ್ರಂಥವನ್ನು ಅಚ್ಚುಗನ್ನಡದಲ್ಲಿ ಕೊಟ್ಟಿರುವದು ತುಂಬಾ ಸಂತೋಷದ ವಿಷಯ. ಈ ಗ್ರಂಥವು ಗೀರ್ವಾಣ ಭಾಷೆಯಲ್ಲಿರುವದರಿಂದ ಅದು ಪಂಡಿತರ ಸೊತ್ತಾಗಿತ್ತು. ಜನ ಸಾಮಾನ್ಯರಿಗೆ ಉಕ್ಕಿನ ಕಡಲೆ ಕಾಳಿನಂತಿದ್ದಿತು. ಆದರೆ ಮಹಾಸ್ವಾಮಿಗಳವರು ಅತಿ ಶ್ರಮವಹಿಸಿ ವೀರಶೈವ ಸಾಹಿತ್ಯ ಭಾಂಡಾರಕ್ಕೆ ಅಪರಿಮಿತವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅದಕ್ಕಾಗಿ ಕನ್ನಡಿಗರೆಲ್ಲ ಅವರಿಗೆ ಚಿರಋಣಿಗಳು.

ಶಿವಯೋಗಿ ಶಿವಾಚಾರ್ಯನು ವೀರಶೈವ ಧರ್ಮದ ಷಟ್‌ಸ್ಥಲದ ತತ್ವಗಳನ್ನು ಮೊತ್ತಮೊದಲು ಬಿತ್ತರಿಸಿದನು. ಈ ಗ್ರಂಥದಲ್ಲಿ ನಾಮ ರೂಪಾತ್ಮಕವಾದ ಜಗತ್ತು ಸತ್ಯವಾಗಿದೆಯೆಂಬುದು ಪ್ರತಿಪಾದಿಸಲ್ಪಟ್ಟಿದೆ. ಪೂಜ್ಯಪಾದರು ತಮ್ಮ ಅಪರಿಮಿತವಾದ ಭಕ್ತಿ ಅಪಾರವಾದ ಜ್ಞಾನ ಭಾಂಡಾರದಿಂದ ಈ ಕೃತಿಯನ್ನು ಕನ್ನಡಕ್ಕೆ ತರುವುದರಲ್ಲಿ ತುಂಬಾ ಯಶಸ್ವಿಗಳಾಗಿದ್ದಾರೆ.

ಈ ಗ್ರಂಥದಲ್ಲಿ ಜಗತ್ತಿನ ಜನರಿಗೆಲ್ಲ ಬೇಕಾದ ವಿಷಯಗಳ ರತ್ನಗಳಿವೆ. ದ್ವೈತ ಅದ್ವೈತ ಮುಂತಾದ ಸಿದ್ಧಾಂತಗಳಿವೆ. ನಿಜವಾಗಿ ಶ್ರೀಗಳವರೇ ಹೇಳಿದಂತೆ ಗೀತೆಗಿರುವ ಸ್ಥಾನ ಶಿಖಾಮಣಿಗಿದೆಯೆಂದರೆ ಅತಿಶಯೋಕ್ತಿಯಲ್ಲ.

ಶಿವಯೋಗಿ ಶಿವಾಚಾರ್ಯನ ಕೃತಿಗಳನ್ನು ಕೂಲಂಕಷವಾಗಿ ಅಭ್ಯಸಿಸಿ ಅಂದಿನ ಕೃತಿಗಳ ಮೇಲೆ ಇನ್ನೂ ಸಾಕಷ್ಟು ವಿಮರ್ಶೆ ಬಾರದಿದ್ದುದು ಶೋಚನೀಯವಾದುದು. ಅವನ ವಾಣಿ ಕಾವ್ಯವಾಣಿ; ಹೃದಯ ಕವಿ ಹೃದಯ. ಅವನು ವೇದಾಗಮಗಳನ್ನು ಚೆನ್ನಾಗಿ ಅಭ್ಯಸಿಸಿರಲೇಬೇಕು. ಅವನು ಮಹಾ ತತ್ವಜ್ಞಾನಿ, ಶಿವಯೋಗಿ. ಆತನ ಪ್ರತಿಯೊಂದು ಪದ್ಯವೂ ಮಹಾಕಾವ್ಯ, ಅವನ ಕಾವ್ಯದಲ್ಲಿ ಓಜಸ್ಸಿದೆ, ತೇಜಸ್ಸಿದೆ. ಓದುಗರ ಮನಸ್ಸನ್ನು ಮುಗ್ಧಗೊಳಿಸುವ ಸಾಮರ್ಥ್ಯವಿದೆ.

ಇಂಥಾ ಮಹಾಕವಿಯ ಕೃತಿಯೊಂದನ್ನು ಕವಿವಾಣಿಯಂತೆ ತರಲು ಪೂಜ್ಯರು ಶ್ರಮವಹಿಸಿದ್ದಾರೆ. ಅವರ ಕಾರ್ಯ ಘನವಾದುದು. ತುಂಬಾ ಭಕ್ತಿಯಿಂದ ಕಾರ್ಯ ಪ್ರವೃತ್ತರಾಗಿದ್ದಾರೆ. ಅಲ್ಲಿ ಅವರು ಯಶಸ್ವಿಗಳೂ ಆಗಿದ್ದಾರೆ.

ವೀರಶೈವ ಧರ್ಮವು ಅನಾದಿಯಿಂದ ಬಂದುದು. ಅದರ ತತ್ವಗಳನ್ನು ಅರಿತು ಕೊಳ್ಳಲಿಕ್ಕೆ ಇಂತಹ ಪುಸ್ತಕಗಳು ತುಂಬಾ ಅವಶ್ಯಕವಾದುವುಗಳು. ಕನ್ನಡ ನಾಡಿನಲ್ಲಿ ಓದುಗರ ಸಂಖ್ಯೆ ಅತಿ ಕಡಿಮೆ. ಅಚ್ಚು ಹಾಕಿಸಿದ ಪುಸ್ತಕಗಳು ಮರಳಿ ಅಚ್ಚು ಮಾಡಿಸದಂತೆ ಗಟ್ಟಿಯಾಗಿ ಉಳಿದುಬಿಡುತ್ತವೆ. ಇಂತಹ ಪ್ರಸಂಗದಲ್ಲಿ ಸಿದ್ಧರಾಗಿ ಮುಂದೆ ಬಂದು ಗ್ರಂಥವನ್ನು ಬಯಲಿಗೆ ತರಲು ಸಹಾಯಕರಾದ ತ್ಯಾಗವೀರ ಶಿವಶಂಕರಪ್ಪ ಶಿವಲಿಂಗಪ್ಪ ಚಿತ್ತರಗಿ ಬಾಗಲಕೋಟೆ, ಅವರ ಸಹಾಯ ಸ್ತುತ್ಯವಾದುದು. ಶ್ರೀಯುತರು ತಮ್ಮ ತನು ಮನ ಧನಗಳನ್ನು ಈಗಾಗಲೇ ಸಮಾಜಕ್ಕೆ ಮುಡುಪನ್ನಾಗಿರಿಸಿದ್ದಾರೆ. ಅವರಿಂದ ಇನ್ನೂ ಅನೇಕ ಗ್ರಂಥಗಳು ಬೆಳಕು ಕಾಣಲೆಂದೂ ಮಹಾಸ್ವಾಮಿಗಳವರಿಂದ ಇನ್ನೂ ಹೆಚ್ಚು ಸಾಹಿತ್ಯ ಸೇವೆ ಸಲ್ಲಲೆಂದೂ ಕೋರಿಕೆ.

---

**ಪತ್ರಿಕಾಭಿಪ್ರಾಯಗಳು :**

## ಸುಂದರ ಶೈಲಿಯ “ಮಣಿಕಾಂತಿ”

ಸಿದ್ಧಾಂತ ಶಿಖಾಮಣಿಯ ಕನ್ನಡ ಅನುವಾದಗಳು ಈ ಹಿಂದೆಯೇ ಬಂದಿದ್ದರೂ ಕಾವ್ಯಮಯ ಸೌಂದರ್ಯ ವೇದಿಕೆಯ ಮೇಲೆ ಷಟ್‌ಸ್ಥಲ ದಿವ್ಯಮೂರ್ತಿಯನ್ನು ಪ್ರತಿಷ್ಠಿಸಿರುವ ಶಿಖಾಮಣಿಯು ಕನ್ನಡದಲ್ಲಿ ಕಾವ್ಯಮಯ ಶೈಲಿಯಲ್ಲಿ ಅನುಭಾವದ ಅಧಿಕಾರವಾಣಿಯೊಂದಿಗೆ ಬೆರೆತು ಪಂಡಿತ ಪಾಮರರಿಗೆ, ರಸಜ್ಞರಿಗೆ, ಜಿಜ್ಞಾಸುಗಳಿಗೆ ಮೆಚ್ಚುಗೆಯಾಗುವಂತೆ, ಉಪಯೋಗವಾಗುವಂತೆ ಇನಿಗನ್ನಡದಲ್ಲಿ ಮೂಡಿ ಬಂದದ್ದು ಇದೇ ಮೊದಲು ವೇದಾಂತ ಗ್ರಂಥಗಳನ್ನು ಸರಳ ಸುಂದರ ಸಹಜ ಶೈಲಿಯಲ್ಲಿ ಬರೆಯಬಹುದೆಂಬುದಕ್ಕೆ ಮಣಿಕಾಂತಿ ನಿದರ್ಶನ.

—ಪುಸ್ತಕ ಪ್ರಪಂಚ, ಏಪ್ರಿಲ್ ೧೯೫೭

# ವಚನ ಗದ್ಯದ ಕಾಂತಿ

ಈಚೆಗೆ ವರ್ಣಾಶ್ರಮ ಪಂಥಿಗಳ ಮಠಾಧಿಪತಿಗಳು ಕೂಡ ಈ ಪುರಾತನ ತಮಿಳು ಗ್ರಂಥಗಳಿಗೆ ವೇದ ಸಮಾನ ಪ್ರಾಮಾಣ್ಯವನ್ನು ಕೊಡುತ್ತಿದ್ದಾರೆ. ಆದರೆ ಆದರಿಂದ ಶೈವ ತತ್ವಜ್ಞಾನದ ಗ್ರಂಥಗಳು ಸಂಸ್ಕೃತದಲ್ಲಿ ಇಲ್ಲವೇ ಇಲ್ಲವೆಂದಾಗಲಿ ಅದು ಕೇವಲ ಪ್ರಾದೇಶಿಕ ಧರ್ಮವೆಂದಾಗಲಿ ಅರ್ಥವಲ್ಲ. ಕರ್ಣಾಟಕದಲ್ಲಿ ಪ್ರಚಲಿತ ವಾಗಿರುವ ವಿಶಿಷ್ಟ ಶೈವ ಪಂಥವಾಗಿರುವ ವೀರಶೈವದ ತತ್ವಗಳನ್ನು ಸಂಸ್ಕೃತದಲ್ಲಿ ಸಂಗ್ರಹಿಸಿದ ಸಿದ್ಧಾಂತ ಶಿಖಾಮಣಿ ಗ್ರಂಥವೇ ಇದಕ್ಕೆ ಸಾಕ್ಷಿ. ಆ ಗ್ರಂಥವನ್ನೇ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನಾಧೀಶ್ವರರು ಮಣಿಕಾಂತಿಯೆಂಬ ಹೆಸರಿಟ್ಟು ಅನುವಾದಿಸಿ ಕನ್ನಡಿಗರ ಕೈಯ್ಯಲ್ಲಿಟ್ಟಿದ್ದಾರೆ.

ಶ್ರೀಶೈಲ ಶ್ರೀಮನ್ನಿಡುಮಾಮಿಡಿ ಸ್ವಾಮಿಗಳು ಸಿದ್ಧಾಂತ ಶಿಖಾಮಣಿಯನ್ನು ವೀರಶೈವರ ಭಗವದ್ಗೀತೆಯೆಂದು ಕರೆದಿದ್ದಾರೆ. ಆ ಭಗವದ್ಗೀತೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದನು. ವ್ಯಾಸರು ಬರೆದರು. ಇದನ್ನು ರೇಣುಕಾಚಾರ್ಯರು ಅಗಸ್ತ್ಯನಿಗೆ ಹೇಳಿದರು. ಶಿವಯೋಗಿಶಿವಾಚಾರ್ಯರು ಬರೆದರು. ಶ್ರೀ ಕೃಷ್ಣನು ಅಲ್ಲಿ ಅರ್ಜುನನಿಗೆ ವಿರಾಡ್ರೂಪ ಪ್ರದರ್ಶನ ಮಾಡಿಸಿದರೆ ಇಲ್ಲಿ ರೇಣುಕರು ವಿಭೀಷಣ ನಿಗೆ ಮುಕ್ಕೋಟಿ ಆಚಾರ್ಯರನ್ನೊಳಗೊಂಡು ತಮ್ಮ ವಿಶ್ವರೂಪವನ್ನು ತೋರಿಸಿದ ಉಲ್ಲೇಖವಿದೆ.

ಶಿಖಾಮಣಿಕಾರನ ಪ್ರಾಸಾದಿಕ ಅನುಷ್ಟುಪ್ ಛಂದೋಮಯ ವಾಣಿಯ ಅನು ವಾದವನ್ನು ಶ್ರೀ ನಿಡುಮಾಮಿಡಿ ಸಂಸ್ಥಾನಾಧೀಶ್ವರರು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸುಂದರವಾಗಿ ಮಾಡಿದ್ದಾರೆ. ಶಿವಯೋಗಿಯ ಸುಂದರ ಶೈಲಿಯ ಬೆನ್ನು ಹತ್ತಿ ಬರೆವ ಶಕ್ತಿಶಾಲದು ಎಂದು ಅವರು ವಿನಯದಿಂದ ಹೇಳಿಕೊಂಡಿದ್ದರೂ ಅವರ ಅನುವಾದ ಪೂರ್ಣ ಯಶಸ್ವಿಯಾಗಿದೆಯೆಂದು ಕಂಠೋಕ್ತವಾಗಿ ಹೇಳಬಹುದು. ಅವರ ಗದ್ಯ ಆಧುನಿಕವಾದರೂ ಅವರಲ್ಲಿ ವಚನ ಗದ್ಯದ ಕಾಂತಿಯಿದೆ. ಶಾಸ್ತ್ರಗ್ರಂಥಗಳಲ್ಲಿರ ಬೇಕಾದ ಸ್ಪಷ್ಟಾರ್ಥತೆಯೂ ಇದೆ. ಭಾರತೀಯ ತತ್ವಜ್ಞಾನ ಪರಿಭಾಷೆಯ ತೀರ ಪ್ರಾಥಮಿಕ ಪರಿಚಯವಿದ್ದವನೂ ಅದನ್ನು ಅರ್ಥಮಾಡಿಕೊಳ್ಳಬಲ್ಲ.

—ಕರ್ಮವೀರ, ಏಪ್ರಿಲ್ ೧೯೫೨

# ಕನ್ನಡಾಂಬೆಗೆ ಕಮನೀಯ ಕಾಣಿಕೆ

## "ಮಣಿಮುಕುರಂ"

ಸುಬುದ್ಧಿಸ್ವಾಮಿ ಹಿರೇಮಠ,
ಬಿ. ಎ. ಎಲ್ಎಲ್. ಬಿ.,

ಪೂಜ್ಯರಾದ ಶ್ರೀಶೈಲ ನಿಡುಮಾಮಿಡಿ ಶ್ರೀಗಳವರ ಪವಿತ್ರವಾದ ಪಳಗಿದ ಹಸ್ತ ದಿಂದ ಇಳಿದು ಬಂದ ಒಂದು ಮಹಾಕೃತಿ ಈ ಮಣಿಮುಕುರಂ. ಆಳವಾದ ಅಧ್ಯಯನ ದಿಂದಲೂ, ಸಾಹಸಮಯವಾದ ಸಾಹಿತ್ಯದ ತಪಸ್ಸಿನಿಂದಲೂ, ಅವಿರತವಾದ ಅನು ಭಾವದ ಅರಿವಿನಿಂಧಲೂ ಆವಿರ್ಭವಿಸಿ ಮೈದಾಳಿ ನಿಂದಿಹುದೀ ಮಣಿಮುಕುರಂ.

ಕಂಗಳೆದುರಿನಲ್ಲಿದ್ದ ಕನ್ನಡಿಯಲ್ಲಿ ಮಾನವನು ತನ್ನ ಬಾಹ್ಯಸ್ವರೂಪವನ್ನು ಕಾಣುವಂತೆ ಈ ರನ್ನಗನ್ನಡಿ (ಮಣಿಮುಕುರ) ಯಿಂದ ಸಾಧಕನು ತನ್ನ ಆಂತರಿಕ ಸ್ವರೂಪದ ಅರಿವನ್ನುಂಟು ಮಾಡಿಕೊಂಡು ಷಟ್‌ಸ್ಥಲ ತತ್ತ್ವಗಳ ಸಮ್ಯಗ್ ಜ್ಞಾನ ವನ್ನು ಸಾಧಿಸಿಕೊಂಡು ಮಾನವ ಜೀವನದ ಚರಮಗುರಿಯಾದ ಆತ್ಮ ಸಾಕ್ಷಾತ್ಕಾರ ವನ್ನು ಅನುವು ಮಾಡಿಕೊಳ್ಳಲು ಮಹಾ ಸಾಧನವಾಗಿರುವುದೀ ಮಣಿಮುಕುರಂ.

ಜಗದ್ಗುರು ರೇಣುಕಾಚಾರ್ಯರು ಮುನಿಶ್ರೇಷ್ಠ ಅಗಸ್ತ್ಯನಿಗೆ ಮಾಡಿದ ಮಹೋಪ ದೇಶವನ್ನು ಶಿವಾನುಭಾವಿಗಳಾದ ಶಿವಾಚಾರ್ಯರು ೧೨೦೦ ವರ್ಷಗಳ ಹಿಂದೆ ವಾಗ್ದೇವಿಯ ವರಪ್ರಸಾದಮನಾಂತು ನಿರರ್ಗಳವಾದ ಸಂಸ್ಕೃತ ಭಾಷೆಯಲ್ಲಿ 'ಸಿದ್ಧಾಂತ ಶಿಖಾಮಣಿ' ಯೆಂಬ ಕಾವ್ಯದ ಕಾಣಿಕೆಯ ರೂಪದಲ್ಲಿ ಸಮರ್ಪಿಸಿದರು ಭಾರತ ಮಾತೆಯ ಪವಿತ್ರವಾದ ಪದತಲದಲ್ಲಿ. ಆದರೆ ಜನಸಾಮಾನ್ಯರಲ್ಲಿ ಸಂಸ್ಕೃತ ಭಾಷೆಯ ಸೊಬಗಿನ ಸವಿಯನ್ನು ಸವಿದು ಜಟಿಲವಾದ ವೀರಶೈವ ತತ್ತ್ವಗಳ ತಿರುಳನ್ನು ತಿಳಿದುಕೊಳ್ಳಲು ಆತುರಪಡುವವರೆಷ್ಟು ಜನ ?

ಈ ಸಂಗತಿಯ ಸತ್ಯಾಂಶವನ್ನರಿತುಕೊಂಡ ಪೂಜ್ಯರಾದ ಶ್ರೀಗಳವರು ಜನ ಸಾಮಾನ್ಯರಿಗೂ ತಿಳಿಯುವಂತೆ 'ಸಿದ್ಧಾಂತ ಶಿಖಾಮಣಿ' ಯನ್ನು ಲಲಿತವಹ ಕನ್ನಡದ ನುಡಿಯಲ್ಲಿ ಕನ್ನಡಿಸಿ ಕನ್ನಡಾಂಬೆಗೆ ಕಮನೀಯವಾದ ಕಾಣಿಕೆಯೊಂದನ್ನು ಸಲ್ಲಿಸಿದ್ದಾರೆ ಆತ್ಮಜ್ಞಾನದ ಅರಿವಿಗಾಗಿ ಜೀವದೇವರ ಸಮನ್ವಯಕ್ಕಾಗಿ 'ಮಣಿ ಮುಕುರ' ವೆಂಬ ರನ್ನಗನ್ನಡಿಯನ್ನು ಕನ್ನಡಿಗರ ಕೈಗಿತ್ತು ಕನ್ನಡ ಜನಾಂಗಕ್ಕೆ ಮನ್ನಣೆಯ ಮಹೋಪಕಾರ ಸಲ್ಲಿಸಿದ್ದಾರೆ ಮಹಾಸ್ವಾಮಿಗಳವರು.

ಯಾವುದಾದರೊಂದು ಲೌಕಿಕ ವಿಷಯುವನ್ನು ಕುರಿತು ಕಾವ್ಯಸೌಧ ಕಟ್ಟುವ ಕಾರ್ಯದಲ್ಲಿ ಕಷ್ಟ ಕಡಿಮೆ. ಆದರೆ ಅನುಭವ ಶಾಸ್ತ್ರವನ್ನೊ, ಆಧ್ಯಾತ್ಮಶಾಸ್ತ್ರ ವನ್ನೊ ಕುರಿತು ಕಾವ್ಯ ರಚಿಸುವುದು ಕಷ್ಟಕರ. ಶ್ರೀ ಜಗದ್ಗುರುಗಳವರು ಇಂಥ ಕಠಿಣ ಕಾರ್ಯದಲ್ಲಿಯೂ ಕೂಡ ವಿಜಯಶಾಲಿಗಳಾದುದು ತುಂಬಾ ಪ್ರಶಂಸನೀಯ ವಾಗಿದೆ. ಬೆಳಗಿನಿಂದ ಬೈಗಿನವರೆಗೂ, ಬೈಗಿನಿಂದ ಬೆಳಗಿನವರೆಗೂ ಶ್ರೀಗಳವರು ವಿಹರಿಸುವುದು ಕಾವ್ಯಸೃಷ್ಟಿಯಲ್ಲಿ, ಕನ್ನಡ ಕಲಾಕೃತಿಗಳನ್ನು ರಚಿಸಿ ಕನ್ನಡಮ್ಮನ ಉನ್ನತಕರವಾದ ಸೇವೆ ಸಾಧಿಸಬೇಕೆಂಬ ಭಾವಸೃಷ್ಟಿಯಲ್ಲಿ ಈವರೆಗೂ ಮಾಡಿದ ಸಾಹಿತ್ಯ ಸೇವೆಯಿಂದ ಶ್ರೀಗಳವರು ತಮ್ಮ ಜೀವನದ ಸಾರ್ಥಕ್ಯವನ್ನು ಸಾಧಿಸಿಕೊಂಡಿ ದ್ದಾರೆ. ಇಂಥ ಪುತ್ರರತ್ನನಿಗೆ ಜನ್ಮಕೊಟ್ಟ ಕನ್ನಡಾಂಬೆ ಧನ್ಯಳು !

ಅಮೋಘವಾದ ಅನೇಕ ಕನ್ನಡ ಕೃತಿಗಳಿಂದ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಉನ್ನತವಾದ ಸ್ಥಾನವೊಂದು ಶ್ರೀಗಳವರಿಗೆ ಪ್ರಾಪ್ತವಾಗಿದೆ. ವಿಶೇಷವಾಗಿ 'ಮಣಿ ಮುಕುರ' ಮಹಾಕಾವ್ಯವು ಶ್ರೀಗಳವರ ಸಾಹಿತ್ಯ ಕೃತಿಗಳಿಗೆ ಮಣಿಮುಕುಟವಾಗಿದೆ. ಕನ್ನಡ ಸಾಹಿತ್ಯದ ಹೂದೋಟದಲ್ಲೊಂದು ಚಿರಂತನವಾದ ಸುವಾಸನೆಯ ಸುಮ ವಾಗಿದೆ. ಕನ್ನಡಮ್ಮನ ಕಮನೀಯ ಕಂಠಾಭರಣವಾಗಿದೆ. ಇದರಿಂದ ಶ್ರೀಗಳವರ ಸ್ಥಾನವು ಹೆಚ್ಚಾದ ಮಾನಮನ್ನಣೆಗಳಿಗೆ ಪರಿಪರಿಯಿಂದ ಪಕ್ಕಾಗಿದೆ.

ಶಿವಯೋಗಿ ಶಿವಾಚಾರ್ಯರು ಸಂಸ್ಕೃತ ಭಾಷೆಯಲ್ಲಿ ಬರೆದ 'ಸಿದ್ಧಾಂತ ಶಿಖಾಮಣಿ' ಯಲ್ಲಿ ತಿಳಿಸಿದ ತತ್ವಗಳನ್ನು ಶ್ರೀಗಳವರು ಆದ್ಯಂತವಾಗಿ ಅರಿತು ಅರಗಿಸಿಕೊಂಡು ಅಂಗಾಂಗಗಳಲ್ಲಿ ಅಳವಡಿಸಿಕೊಂಡು ಸುಭಗವಾದ ಸುಂದರ ಶೈಲಿಯ ಕನ್ನಡ ಭಾಷೆಯ ಉಡುಪನ್ನು ಉಡಿಸಿ ಓದುಗರ ಕೈಗಿತ್ತಿದಾರೆ. ಈ ಮಹಾ ಕೃತಿಯು, ಇದರಲ್ಲಿಯ ಶೈಲಿ ಗಂಭೀರವಾಗಿದ್ದರೂ ಮನೋಹರವಾಗಿದೆ. ಬಯಲು ಭೂಮಿಯಲ್ಲಿ ಪ್ರವಹಿಸುವ ಪ್ರವಾಹವಂತೆ ಶಾಂತವಾಗಿಯೂ ಸುಲಲಿತವಾಗಿಯೂ ಸುಂದರವಾಗಿ ಸಾಗುತಿದೆ ಇವರ ಸುಮಧುರ ಶೈಲಿಯ ಪ್ರವಾಹ. ಈ ಕಾವ್ಯಕ್ಕೆ ಶ್ರೀಗಳವರು ಬರೆದ ಪೀಠಿಕೆಯೊಂದೇ ಸಾಕು ನಿದರ್ಶನಕ್ಕೆ ! ಅದನ್ನೋದುವಾಗ ಒಂದು ಚೇತೋಹಾರಿಯಾದ ಗದ್ಯಕಾವ್ಯವನ್ನೋದುವ ಭಾವ ನಿರ್ಭರತೆ ಓದುಗರ ಮನದಲ್ಲಿ ಮೂಡುತಿದೆ. ಮುಂದೆ ಕಾವ್ಯವೆಲ್ಲದರಲ್ಲಿಯೂ ವಿವೇಚಿಸಿದ ವಿಷಯವಂತೂ ವಿಶಿಷ್ಟವಾದ ವೈಖರಿಯನ್ನು ತಾಳಿ ನಿಂತುಕೊಂಡಿದೆ. ಇಂತಹ ಒಂದು ಅಮರಕೃತಿ ರೂಪದ ತನಿವಣ್ಣಿನ ಇನಿರಸವನ್ನುಣ್ಣಿಸಿ ಕನ್ನಡಮ್ಮನ ಹೆತ್ತೊಡಲನ್ನು ತಣಿಸಿದ ತನ್ನ ಈ ಸುಪುತ್ರನನ್ನು ಕನ್ನಡಮ್ಮನು ಹಾರ್ದಿಕವಾಗಿ ಹರಸಿ ನಿಡುಗಾಲದ ಜೀವನವನ್ನು ನೀಡಿ ಇನ್ನೂ ಹೆಚ್ಚಿನ ಕೃತಿರತ್ನಗಳಿಗೆ ಅವಕಾಶವನ್ನುಂಟುಮಾಡಲೆಂದಪೇಕ್ಷಿಸುವೆನು.

ಎಸಳು ೩

# ಸಿದ್ಧಾಂತ ಸಾಹಿತ್ಯ

[ದರ್ಶನ-೨]

ಅಷ್ಟಾವರಣ

ಪಂಚಾಚಾರ

ಷಟ್‌ಸ್ಥಲ

ಪರಮ ಹಂಸ

ನಾನು–ನೀನು

ಸಂಕ್ಷಿಪ್ತ ಶಿವಪೂಜಾ ವಿಧಿ

ಶೀಲ ಸಂಪಾದನೆ

ವೇದಾಂತ–ಶಿವಸಿದ್ಧಾಂತ

ಸಿದ್ಧಾಂತ ದ್ವಿವಿಧ, ಒಂದು ಸಾಮಾಜಿಕ ಇನ್ನೊಂದು ಸಾರ್ವಜನಿಕ. ಮೊದಲಿನ ಮೂರು ಕೃತಿಗಳು ಮತ್ತು 'ಸಂಕ್ಷಿಪ್ತ ಶಿವಪೂಜಾ ವಿಧಿ' ಇವು ವೀರಶೈವ ಸಾಮಾಜಿಕ ಸಿದ್ಧಾಂತ ಸೂಚಕಗಳು. 'ಪರಮಹಂಸ' 'ನಾನು ನೀನು 'ಶೀಲ ಸಂಪಾದನೆ' 'ವೇದಾಂತ ಶಿವ ಸಿದ್ಧಾಂತ' ಈ ನಾಲ್ಕು ಕೃತಿಗಳು ಸಾರ್ವಜನಿಕ ಸಿದ್ಧಾಂತ ಸಂಕೇತಗಳು.

ಪರಮಹಂಸ ಇದೊಂದು ಮಂತ್ರ ಮೂಲವನ್ನು ತಿಳಿಸುವ ತಿಳಿಗನ್ನಡನುಡಿಯ ಕಿರು ಹೊತ್ತಗೆ! ಕಿರಿದಾದರೂ ನೆಲೆಗೆ ಕಿರಿದಲ್ಲ. ಇದರಲ್ಲಿ ಮಂತ್ರ ಮೀಮಾಂಸೆ ಮುಮುಕ್ಷು ಗಳನ್ನು ಮಂತ್ರ ಮುಗ್ಧರನ್ನಾಗಿಸುವ ಮೋಡಿ ಗಾಡಿಗಳುಳ್ಳದಾಗಿದೆ. ಷಡಕ್ಷರ ಮಂತ್ರ ಮಹಿ ಮೆಯನ್ನು ಮಂತ್ರ ಮೂಲವನ್ನು ಕನ್ನಡದಲ್ಲಿ ಮೊಮ್ಮೊದಲು ಮೂಡಿಸಿ ಕನ್ನಡಿಗರ ಕಣ್ಣು ತೆರೆಯಿಸಿ ಕಿರಿತನದಲ್ಲಿಯೇ ಹಿರಿತನವನ್ನು ಹೊತ್ತುನಿಂತ ಸಿದ್ಧಾಂತ ಕೃತಿಯಿದು.

'ಶೀಲ ಸಂಪಾದನೆ' ಸೊಗಸಾದ ಹೊಸ ಹೊತ್ತಗೆ ! ಹೊಸ ಬೆಳಕನ್ನು ಶೀಲಾಚರಣೆಯ ಮೇಲೆ ಬೀರುವ ಕನ್ನಡದ ಮೊದಲ ಹೊತ್ತಗೆ ಯಿದು. ಶೀಲ ಸಂದರ್ಶನದಲ್ಲಿ ಇದು ಮಹಂತ ಸಿದ್ಧಾಂತ ಕೃತಿ. 'ಶೂನ್ಯ ಸಂಪಾದನೆ'ಯ ಹೆದ್ದಾರಿಯಲ್ಲಿ ಕನ್ನಡದಲ್ಲಿ ಇದು ಎರಡನೆಯ ಕೃತಿ.

'ವೇದಾಂತ ಶಿವಸಿದ್ಧಾಂತ' ಇದು ಪ್ರಮುಖವಾದ ಶ್ರೀ ಶಂಕರ-ಶ್ರೀ ರೇಣುಕರ ಸಿದ್ಧಾಂತಗಳೆರಡನ್ನು ತುಲನಾತ್ಮಕವಾಗಿ ತೂಗಿ ನೋಡಿದ ವಿಶಿಷ್ಟ ಪೂರ್ಣ ಕುತೂಹಲಕಾರಿ ಕೃತಿಯಿದು!

# ವೀರಶೈವ ತತ್ತ್ವಜ್ಞಾನಿ
# ಶ್ರೀಜ.ಚ.ನಿ. ಸನ್ನಿಧಿಯವರು

**ಚೆನ್ನಪ್ಪ ಎರೇಸೀಮೆ,**

ಗೌ. ಸೆಂಟ್ರಲ್ ಹೈಸ್ಕೂಲ್, ಬೆಂಗಳೂರು-೨

ಎಲ್ಲ ಯೋಗಗಳಂತೆ ಕಾವ್ಯಯೋಗವೂ ದೊಡ್ಡಯೋಗ. ಅದು ಕರ್ಮ ಕೌಶಲ್ಯ. ಅಂದರೆ ಕವಿಯಾದವರು ಲೋಕಸಂಗ್ರಹಣಾರ್ಥವಾಗಿ ಅಥವ ಜನತೆಯ ಕಲ್ಯಾಣಮಾರ್ಗಸಂದರ್ಶನಕ್ಕಾಗಿ ಕುಶಲತೆಯಿಂದ ಮಾಡಿದ ಕ್ರಿಯೆಯೆನ್ನ ಬಹುದು. ಸಹೃದಯ ಹೃದಯೋಲ್ಲಾಸಿನೀ ಅರವಟ್ಟಿಗೆಯೆಂದರೆ ಕಾವ್ಯವೊಂದೇ. ಇದು ಭಕ್ತಿಯೋಗ ಕರ್ಮಯೋಗಗಳಂತೆ ಕಾವ್ಯಯೋಗ. 'ಕಾವ್ಯಯೋಗ' ಶಬ್ದ ಪ್ರಯೋಗವನ್ನು ಬಹುಶಃ ಹಲವಾರು ಜನಗಳು ಪ್ರಯೋಗಿಸದಿದ್ದರೂ ಮಹಾಕವಿ ರುದ್ರಭಟ್ಟನು ತನ್ನ ಜಗನ್ನಾಥವಿಜಯದಲ್ಲಿ 'ಕಾವ್ಯಸಮಾಧಿ' ಶಬ್ದ ಪ್ರಯೋಗಮಾಡಿದ್ದಾನೆ. ಕಾವ್ಯಸಮಾಧಿಯ ಧ್ಯಾನ, ಧಾರಣಗಳನ್ನೊಳಗೊಂಡ ದರ್ಶನ ಸಿದ್ಧಿಯೇ ಕಾವ್ಯಯೋಗವೆನ್ನಲು ಅಡ್ಡಿಯೇನಿದೆ ? ಇಂಥ ಕಾವ್ಯಸಮಾಧಿಯಲ್ಲಿ ಓಲಾಡಿ ಕರ್ಮಕೌಶಲ್ಯವನ್ನು ವ್ಯಕ್ತಪಡಿಸಿ ಕಟ್ಟಿದ ಕಾವ್ಯವೇ ಲೋಕಜೀವನವನ್ನು ಸಂಪೂರ್ಣ ತನ್ನತನದಲ್ಲಿ ಮಿಳನಗೊಳಿಸಿಕೊಂಡು ಹೃದಯವೃತ್ತಿಯ ವಿಶೇಷರೂಪದಲ್ಲಿ ಪ್ರಕಾಶಪಡಿಸಿಕೊಂಡ ವಸ್ತು.

ಕವಿಹೃದಯವು ತನ್ನ ಆವೇಗವನ್ನು ಬಾಹ್ಯ ಜಗತ್ತಿನೊಡನೆ ಬೆರೆಸಲು ಅಪೇಕ್ಷಿಸುತ್ತಿರುತ್ತದೆ. ಅದು ತನ್ನಲ್ಲಿಯೇ ತಾನಾಗಿದ್ದಾಗ ಸತ್ಯವೆನಿಸಿಸುವುದಿಲ್ಲ. ಆಂತರಿಕವಾದ ಆ ಸತ್ಯವನ್ನು ಯಾವ ಬಗೆಯಿಂದಾದರೂ ಬಾಹ್ಯ ದಲ್ಲಿಯೂ ಸತ್ಯವೆಂದು ಸ್ಥಾಪಿಸಿದಾಗ ಅದು ಬದುಕುತ್ತದೆ. ಹಾಗೆ ಹೃದಯವು ಬಾಹ್ಯದಲ್ಲಿ ತನ್ನನ್ನು ವ್ಯಕ್ತಪಡಿಸಿ ಬದುಕದಿದ್ದರೆ, ಲೋಕದ ಬದುಕನ್ನು ತೋರದಿದ್ದರೆ ಅದು ಮೃತ್ಯುವನ್ನಪ್ಪಿದಂತೆಯೇ ಸರಿ. ಭಾಷೆಯ ಮೂಲಕ ಹೃದಯವು ಹೊರ ಬಂದು ಕಾವ್ಯವೆನಿಸುವುದು; ಸ್ವರದ ಮೂಲಕ ಹೊರ ಬಂದು ಸಂಗೀತವೆನಿಸುವುದು, ಶಿಲೆಯ ಮೂಲಕ ಸುಂದರ ಕಲಾಕೃತಿಯಾಗುವುದು; ಕುಂಚದ ಮೂಲಕ ಬಂದು

ಅನುಪಮ ಚಿತ್ರವೆನಿಸುವುದು. ಇಲ್ಲಿ ಬುದ್ಧಿಯ ಲೆಕ್ಕಾಚಾರಕ್ಕೆ, ಕಾರ್ಪಣ್ಯಕ್ಕೆ, ಔದಾಸೀನ್ಯಕ್ಕೆ, ಭಯಕ್ಕೆ ಸ್ಥಾನವಿಲ್ಲ.

ಈ ದೃಷ್ಟಿಯಿಂದ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕಾವ್ಯ ಯೋಗ ಕೌಶಲದಿಂದ ಅತ್ಯದ್ಭುತ ಪವಾಡವನ್ನೇ ಮಾಡಿರುವ ಸಿಡುವಾವಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯಸ್ವಾಮಿಗಳು,ಜ.ಚ.ನಿ, ವಿಚಾರಯೋಗ್ಯರೂ, ಪುರಸ್ಕಾರಾರ್ಹರೂ, ಗೌರವ ಸ್ಥಾನಾಪನ್ನರೂ ಎನಿಸಿದ್ದಾರೆ. ಕನ್ನಡ ಸಾರಸ್ವತ ಪ್ರಪಂಚಕ್ಕೆ ಅವರು ಅಲಭ್ಯಲಾಭ; ಅಗತ್ಯ ಪುಣ್ಯಪುರುಷರೆನ್ನುವುದಾದರೆ ಅತಿಶಯೋಕ್ತಿಯಲ್ಲ. ಏಕೆಂದರೆ ಅವರ ಬಾಳ ಬಳ್ಳಿಯುದ್ದಕ್ಕೂ ಬಿಟ್ಟ ಸತ್ಫಲಗಳೆಂದರೆ ವೈವಿಧ್ಯಮಯ ಸಾಹಿತ್ಯ ಫಲ. ಅದು ದರ್ಶನ, ಕಾವ್ಯ, ಪದ್ಯ ವಿಮರ್ಶೆ, ಚರಿತ್ರೆ, ನಾಟಕ, ಜೀವನ ಚಿತ್ರ, ಅನುವಾದಮಯವಾಗಿದೆ. ಆಳವಾದ ಪಾಂಡಿತ್ಯದ ಪಾತಿಯಲ್ಲಿ, ವಶವಾದ ವಾಕ್ ಶಕ್ತಿಯ ಬಳ್ಳಿ ಹೃದಯ ಸಂಪದ್ಭರಿತವಾದ ಭೂಸಾರದ ಸೂರೆಯಲ್ಲಿ ದಾಂಗುಡಿಯಿಟ್ಟು ಹಬ್ಬಿ, ಲೋಕಜೀವನ ಸುಖಾಪೇಕ್ಷೆಯಿಂದ ರಸಮಯ ಸಾರತರ ಫಲಸಮೃದ್ಧಿಯನ್ನಿತ್ತು ತನ್ನನ್ನು ಪ್ರಕಾಶಪಡಿಸಿಕೊಂಡಿದೆಯೆಂದು ಆಲಂಕಾರಿಕವಾಗಿ ಹೇಳಬಹುದು. ಶ್ರೀಗಳವರು ಸಂಸ್ಕೃತದಲ್ಲೂ, ಕನ್ನಡ ವಚನಸಾಹಿತ್ಯ ದರ್ಶನದಲ್ಲೂ, ಸಂಸ್ಕೃತದರ್ಶನದಲ್ಲೂ ಅಪಾರ ಅನುಭವಗಳಿಸಿ ಅನುಭವವನ್ನು ಜೀವನದಲ್ಲಿ ಪ್ರಸಾರಗೊಳಿಸುತ್ತ ಸಾಹಿತ್ಯ ಸರಸ್ವತಿಯ ಪೀಠವನ್ನೇರಿದಾಗ ಅಂಥವರ ಎತ್ತರವನ್ನಳೆಯುವ ಅಳತೆಗೋಲೂ ದೊಡ್ಡದಾಗಿರಬೇಕು. ಅಳತೆ ಮಾಡುವವನೂ ಅಳತೆಗೋಲನ್ನು ಹಿಡಿದು ನಿಲ್ಲುವಷ್ಟಾದರೂ ಸಾಮರ್ಥ್ಯ ಪಡೆದಿರಬೇಕು. ಶ್ರೀಗಳವರ ಶಿವಾದ್ವೈತದರ್ಶನ, ದೇವದೃಷ್ಟಿ, ಕಾಯಕ ಕಲೆ, ನವಲಿಂಗ ಸಾಹಿತ್ಯ, ದೃಷ್ಟಿದರ್ಶನ ಮುಂತಾದ,ಸ್ವತಂತ್ರ ಗ್ರಂಥಗಳು ವಿಚಾರಶಕ್ತಿಯ ಔನ್ನತ್ಯವನ್ನು ವ್ಯಕ್ತಪಡಿಸುತ್ತವೆ. ಶ್ರೇಷ್ಠ ವೀರಶೈವದರ್ಶನ ಗ್ರಂಥವಾದ ಸಿದ್ಧಾಂತ ಶಿಖಾಮಣಿಯ ಪದ್ಯಮಯ ಗ್ರಂಥದ ಶೈಲಿ ಮಹಾಕವಿ ಹರಿಹರನನ್ನು ಜ್ಞಾಪಕಕ್ಕೆ ತರುತ್ತದೆ. ಇದು 'ಮಣಿಮುಕುರ' ಅಷ್ಟೇ ಅಲ್ಲ ಮುಕುರಮಣಿಯೂ ಹೌದು. ಬಸವಣ್ಣನ ನಚ್ಚಿನ ದಾಸ ದುಗ್ಗಳೆಯರ ಬಗೆಗೆ ಅಪಾರ ಶ್ರಮವಹಿಸಿ ಅವರ ಅನೇಕ ಮುಖಗಳನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟ ಕೀರ್ತಿ ಪ್ರಥಮತಃ ಇವರಿಗೇ ಸಲ್ಲತಕ್ಕದ್ದು. ಹೂಗೊನೆ, ಹೊನ್ನ ಹಕ್ಕಿ, ಹಾಲ್ಕೆನೆ ಮುಂತಾದ ಕವನ ಗ್ರಂಥಗಳು ಇವರ ನವನವೋನ್ಮೇಷ ಶಾಲಿನೀ ಬುದ್ಧಿಗೆ ಜೀವಂತ ನಿದರ್ಶನಗಳು. ಒಟ್ಟು ೭೦ ಕ್ಕೂ ಹೆಚ್ಚು ಕೃತಿಗಳನ್ನು ರಚನೆ ಮಾಡಿ, ಸಂಪಾದಿಸಿ, ಕನ್ನಡ, ಆಂಧ್ರ ಸಂಸ್ಕೃತ ಸಾಹಿತ್ಯ ಸಾರಸ್ವತ ಪ್ರಪಂಚಕ್ಕೆ ಅಮೋಘ ಕಾಣಿಕೆಯಿತ್ತಿರುವ ಶ್ರೀಗಳವರ ಸಮಗ್ರ ಕಾವ್ಯಯೋಗದ ಪ್ರದರ್ಶನ ಮಾಡಬೇಕೆಂಬ ದಕ್ಕಿಸಿಕೊಳ್ಳಲಸಾಧ್ಯ ದುರಾಸೆಯಾದರೂ ನನಗೇಕೆ? ಪ್ರಕೃತ ಶ್ರೀಗಳವರು ವಿರಚಿಸಿರುವ 'ಅಷ್ಟಾವರಣ,' 'ಪಂಚಾಚಾರ,' 'ಷಟ್‌ಸ್ಥಲ' ಗ್ರಂಥ

ಸಮೀಕ್ಷೆ ಮಾಡಬೇಕೆಂದು 'ರಜತ ಸಂಭಾವನಾ ಸಂಪುಟ ಸಮಿತಿ'ಯವರ ಆದೇಶ ವನ್ನು ಶಕ್ತಿ ಬಾಹುಳ್ಯವಿಲ್ಲದಿದ್ದರೂ ಒಪ್ಪಿ ಈ ಸಾಹಸಕ್ಕೆ ಕೈ ಹಾಕಬೇಕಾಗಿದೆ.

**ಮತಗಳ ಸಾಮಾನ್ಯ ಸ್ವರೂಪ:**

ವಂಶಪಾರಂಪರ್ಯದಿಂದ ಒಂದು 'ಸಮಾಜ'ದ ರೂಪ ಪಡೆದಿರುವ ಪ್ರತಿಯೊಂದು ಮತದಲ್ಲಿಯೂ ಮುಖ್ಯವಾಗಿ ತಾತ್ವಿಕ, ನೈತಿಕ, ಧಾರ್ಮಿಕ (ಸಾಮಾಜಿಕವಾಗಿ) ಎಂಬ ಮೂರು ವಿಭಾಗಗಳನ್ನು ಕಾಣಬಹುದು. ತಾತ್ವಿಕ ಭಾಗದಲ್ಲಿ ಜೀವ, ಜಗತ್ತು ಈಶ್ವರ ಈ ತತ್ತ್ವಗಳ ಸಂಬಧ, ಮೋಕ್ಷೋಪಾಯ, ಬಂಧ, ಬಂಧಕಾರಣ ಮೊದಲಾದ ವುಗಳ ವಿಚಾರವೂ, ನೈತಿಕ ಭಾಗದಲ್ಲಿ ವ್ಯಕ್ತಿ ವ್ಯಕ್ತಿಗಳ ನೈತಿಕ ಪಾರಿಶುದ್ಧ್ಯ ವಿಧಾ ನವೂ, ನೈತಿಕ ಮತ್ತು ತಾತ್ವಿಕ ವಿಚಾರಗಳನ್ನು ಒಂದುಗೂಡಿಸುವ ಸುವ್ಯವಸ್ಥಾ ಮಯ ಸಮಾಜದ ಧಾರ್ಮಿಕ ಭಾಗವೆನ್ನಿಸಿಕೊಳ್ಳುವುದು. ಅಂತೆಯೆ ಸುವ್ಯವಸ್ಥಿತ ವೀರಶೈವ ಮತಸಿದ್ಧಾಂತದಲ್ಲೂ ಈ ಮೂರು ವಿಭಾಗಗಳುಂಟಾಗಿರುವುದನ್ನು ಗಮನಿಸ ಬಹುದು.

"ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲ ಮಾರ್ಗದಲ್ಲಿ ನಡೆದರೆ ಲಿಂಗಾಂಗ ಸಾಮರಸ್ಯ ಪ್ರಾಪ್ತಿಯಾಗುವುದೆಂಬ" ಅನುಭವ ವಾಣಿಯು ವೀರಶೈವದಲ್ಲಿ ರೂಢವಾಗಿದೆ. ಅದರಂತೆ ಅಷ್ಟಾವರಣ ವಿಭಾಗವು ಸಾಮಾಜಿಕ (ಧಾರ್ಮಿಕ) ಭಾಗಕ್ಕೆ ಸೇರಿದುದು, ಪಂಚಾಚಾರಗಳ ವಿಚಾರವು ನೈತಿಕ ವಿಭಾಗಕ್ಕೆ ಸೇರಿದುದು; 'ಷಟ್‌ಸ್ಥಲ'ವು ತಾತ್ತ್ವಿಕ ವಿಭಾಗಕ್ಕೆ ಸೇರಿದುದಾಗಿದೆ. ಈ ಮೂರು ಮತ ತತ್ತ್ವಗಳ ತಿಳುವಳಿಕೆ, ಆಚರಣೆಗಳಿಂದುಂಟಾದ ಆನಂದಾನುಭವ ದಲ್ಲಿ ಇದರ ಒಂದು ವ್ಯಕ್ತವು ಪೂರ್ಣಗೊಳ್ಳುವುದು.

ಮೇಲ್ಕಂಡ ಈ ಮೂರು ಮುಖ್ಯ ತತ್ತ್ವಗಳ ಬಗೆಗೆ ಶ್ರೀ ಜ.ಚ.ನಿ. ಅವರು ಮನಂಬುಗುವ ಭಾಷಾ ಶೈಲಿಯಿಂದ, ತಮ್ಮ ಅಪಾರ ವೀರಶೈವ ಸಿದ್ಧಾಂತದ ಅನುಭ ದಿಂದ, ಬಸವಾದಿ ಪ್ರಮಥರ ವಚನರಚನೆಯ ಮತ್ತು ಸಿದ್ಧಾಂತ ಶಿಖಾಮಣಿಯ ಪ್ರಮಾಣಾಧಾರ ಪೂರ್ವಕವಾಗಿ ಕಿರುಹೊತ್ತಗೆಗಳನ್ನು ರಚಿಸಿ ಸಮಾಜಕ್ಕೊಂದು ಮಹದುಪ ಕಾರವೆಸಗಿದ್ದಾರೆ.

## ಅಷ್ಟಾವರಣ :

ಅಷ್ಟಾವರಣಗಳು ಎಂದರೆ ಎಂಟು ಆವರಣಗಳು ಎಂದರ್ಥ. ಇವುಗಳಲ್ಲಿ 'ಗುರು' ತತ್ತ್ವವೇ ಮೊದಲನೆಯ ತತ್ತ್ವ. ಅವನು ಎದೆಯ ಮೇಲೆ ಲಿಂಗಕಟ್ಟಿ ದವನು; ಲಿಂಗದ ಮೇಲೆ ಎದೆಯನ್ನು ಕಟ್ಟುವವನು. ಶಿವನ ಸ್ವಲೀಲೆಯ ಅಂಗ-ಲಿಂಗ ಭೇದ ಪಡೆದು ಉಪಾಸ್ಯನೂ, ಉಪಾಸಕನೂ ಆಗುವನೆಂಬುದು ವೀರಶೈವದ ತರ್ಕಬದ್ಧವಾದ, ಯುಕ್ತಿಯುಕ್ತವಾದ ಸತ್ಯಶುದ್ಧವಾದ ತಿಳುವಳಿಕೆ. ಈ ತಿಳುವಳಿ ಕೆಯ ಪ್ರಕಾರ ಅಂತರಂಗದ ಅರಿವೇ ಗುರು. ಅಂತರಂಗದ ಅನುಭವವೇ ಲಿಂಗ,

ಆನಂದ ಸ್ವರೂಪವೇ ಜಂಗಮ. ಆಚಾರದಿಂದ ಗುರು ಸಂಬಂಧವೂ,ಗುರುವಿನಿಂದ ಲಿಂಗ ಪ್ರಾಪ್ತಿಯೂ,ಲಿಂಗದಿಂದ ಲಿಂಗ ಮುಖನಾದ ಜಂಗಮವೂ,ಜಂಗಮದಿಂದ ಪ್ರಸಾದವು ಪ್ರಸಾದದಿಂದ ಪರಿತೃಪ್ತಿಯೂ ಉಂಟಾಗುವುದು. ಅಂತರಂಗದ ಅರಿವು, ಅನುಭವ, ಆನಂದ ಈ ಮೂರರ ಮೂರ್ತಸ್ವರೂಪಗಳೇ ಗುರು ಲಿಂಗ ಜಂಗಮಗಳು. ವಿಭೂತಿ, ರುದ್ರಾಕ್ಷಿ ಮಂತ್ರಗಳು ಸಾಧನಗಳು. ಈ ತತ್ತ್ವಗಳನ್ನು ಶ್ರೀಗಳವರು ತಮ್ಮ ಬೆಡಗಿನ ನುಡಿಗಡಣದಿಂದ ಪ್ರತಿಸಾಧಕನ ಹೃದಯದ ಮೇಲೂ ವಿಶೇಷ ಪರಿಣಾಮ ಬೀರುವ ರೀತಿಯಲ್ಲಿ ಹೇಳಿದ್ದಾರೆ. ಶ್ರೀಗಳವರ ಸುಂದರ ಮಾತನ್ನೇ ಉದ್ಧರಿಸ ಬೇಕೆಂದರೆ—

> (೧)"ಅಷ್ಟಾವರಣವೇ ಲಿಂಗ; ಪಂಚಾಚಾರವೇ ಪ್ರಾಣ; ಷಟ್ ಸ್ಥಲವೇ ಆತ್ಮ " ಇದು ವೀರಶೈವ ತತ್ತ್ವಸ್ವರೂಪ; ಸಾಕಾರರೂಪ. ಇದೊಂದು ಸುಂದರವಾದ ರೂಪಕ. ತತ್ತ್ವಕ್ಕೂ ಒಂದು ವ್ಯಕ್ತರೂಪ (ವ್ಯಕ್ತಿತ್ವ) ವನ್ನು ಕೊಟ್ಟ ಅಗ್ಗಳಿಕೆ ವೀರಶೈವರದು. ವ್ಯಕ್ತಿತ್ವದ ಮನಗಂಡು ದರ ಮುಂಗುರುಹು. ಅಸ್ತಿತ್ವದಲ್ಲಿ ವ್ಯಕ್ತಿಸ್ವರೂಪಕ್ಕೆ ಅಂಗ, ಪ್ರಾಣ, ಆತ್ಮ–ಈ ಮೂರು ಮುಖ್ಯವಾದುವು. ಈ ಮೂರರಲ್ಲಿ ಯಾವು ದೊಂದು ಇಲ್ಲದಿದ್ದರೂ ವ್ಯಕ್ತಿರೂಪ ಪೂರ್ಣವಾಗದು; ಪರಿಗ್ರಾಹ್ಯ ವಾಗದು "
>
> "ವೀರಶೈವ ತತ್ವಕ್ಕೂ ಒಂದು ವ್ಯಕ್ತಸ್ವರೂಪವನ್ನು ಕಲ್ಪಿಸಿದರು. ಇದರಿಂದ ವೀರಶೈವರು ಪ್ರತ್ಯಕ್ಷ ಪ್ರಮಾಣ ಪ್ರಿಯರೆಂಬುದಕ್ಕೆ ಇದೊಂದು ಪ್ರಬುದ್ಧ ನಿದರ್ಶನ. ಅವ್ಯಕ್ತವಾದ ತತ್ತ್ವಕ್ಕೂ ಒಂದು ವ್ಯಕ್ತ ರೂಪವನ್ನು ಕೊಟ್ಟು ಅದನ್ನು ನೋಡಿ ನಲಿದರು; ನಲಿಯುವರು. ಮೂರ್ತರೂಪವಿಲ್ಲದ ತತ್ತ್ವ ಅದೊಂದು ಬಯಲು ಭ್ರಮೆ" ಇತ್ಯಾದಿ;

ಈ ಸರ್ವ ಸಂಗ್ರಹಯೋಗ್ಯ ಕಿರುಹೊತ್ತಗೆಯಲ್ಲಿ ಅಷ್ಟಾವರಣಗಳ ಬೃಹತ್ತು ಮಹತ್ತುಗಳ ಬಗೆಗೆ ಬಹು ಮಾರ್ಮಿಕವಾಗಿ ಸಂಗ್ರಹವಾಗಿ ಪುರಾತನರ ಅಭಿಪ್ರಾಯ ಗಳ ಮಹತ್ವದ ಆಧಾರಗಳೊಂದಿಗೆ ವಿವರಣೆ ನೀಡಿದ್ದಾರೆ. ಜಂಗಮ ತತ್ತ್ವನಿರೂಪಣೆ ಮಾಡುವಾಗ—

> "ಜಾನಂತ್ಯತಿಶಯಾದ್ಯೇತು ಶಿವಂ ವಿಶ್ವಪ್ರಕಾಶಕಂ !
> ಸ್ವಸ್ವರೂಪತಯಾ ತೇತು ಜಂಗಮಾ ಇತಿ ಕೀರ್ತಿತಃ |"

---

೧ ಅಷ್ಟಾವರಣ ಪುಟ. ೧-೨

"....ನಿಜ. ಜಂಗಮವೆಂತೆಂದೊಡೆ ನಿರ್ಲೇಪಕ, ನಿರುಪಾಧಿಕ, ನಿರ್ಭೇಟ್ಯ
ನಿರಾಶ್ರಿತ, ಜಂಗಮು.
ನಿರ್ಲಂಪಟ, ನಿಷ್ಕಪಟ, ಜಂಗಮು. ಈ ಷಡ್ಗುಣ ಭರಿತನಾದಾತನೇ
ನಿರವಯ ಜಂಗಮು...."

ಈ ಸಿದ್ಧಾಂತ ಶಿಖಾಮಣಿಯು ಶ್ರೀ ಚೆನ್ನಬಸವಣ್ಣನವರ ವಚನಾಧಾರ ಕೊಟ್ಟು ಈಗ ಸಮಾಜದಲ್ಲಿರುವ ಜಂಗಮ ಜಂಗಮ ಎಂದು ಅತಾತ್ವಿಕವಾಗಿ ಕರೆದುಕೊಳ್ಳುವವರ ಬಗೆಗೆ ಯಥಾರ್ಥವನ್ನು ಹೇಳಿದ್ದಾರೆ. ಜಂಗಮತತ್ವ ವಂಶಾನುಗತವಾಗಿ ಉಂಟಾಗುವುದಿಲ್ಲ. ತತ್ವದಿಂದ ದೂರಸರಿದು ಸಮಾಜದಲ್ಲಿ ಜಂಗಮ ವರ್ಗವೆಂದು ಕಲ್ಪಿಸಿಕೊಂಡಿರುವುದು ಅಷ್ಟೊಂದು ಸಮಂಜಸವಲ್ಲ. 'ಜಂಗಮ' ಎಂದರೆ ನಿರಾಭಾರಿ ದೇಶಿಕವರೇಣ್ಯ (೧) ಜಗದ ಎಲ್ಲ ಜಂಜಡವನ್ನು ಜರಿದು ಜೀವಭಾವ, ಜೀವ ಗುಣಗಳನ್ನೆಲ್ಲ ತೊರೆದು ಯಾವಾಗಲೂ ಆತ್ಮಾನುಸಂಧಾನವಿಲ್ಲದಿರುವವನೇ ಜಂಗಮ ಎಂಬ ಮಾತು ಯುಕ್ತಿ ಯುಕ್ತ; ತತ್ವಬದ್ಧವಾದುದು.

ಭಸ್ಮ ರುದ್ರಾಕ್ಷಿಗಳ ವಿಚಾರದಲ್ಲಿ ಶ್ರೀಗಳವರು 'ಏಕೆ ಧರಿಸಬೇಕು' ಎಂದು ಕೇಳುವ ಆಧುನಿಕ ಚಿಕೀರ್ಷಕ ಬುದ್ಧಿಯ ಜನಗಳಿಗೂ ತಕ್ಕ ಉತ್ತರ ಹೇಳಿದ್ದಾರೆ. ಬುದ್ಧಿ ಪ್ರಧಾನ ಜೀವಿಗಳು ಪ್ರತಿಯೊಂದಕ್ಕೂ ಕಾರಣ ಕೇಳುತ್ತಾರೆ. ಅದು ಈ ಕಾಲದ ವೈಶಿಷ್ಟ್ಯ. ಪ್ರಾಚೀನರು ಶ್ರದ್ಧೆಯಿಂದ ಆಪ್ತವಾಕ್ಯ ಪ್ರಮಾಣವೆಂದು ನಂಬಿ ಅವನ್ನು ಧರಿಸುತ್ತ ಬಂದರು. ಆಧುನಿಕರಿಗೆ ಈ ವಿಷಯದಲ್ಲಿ ಸಂಶಯ. ಅದು ಸ್ವಾಭಾವಿಕವೇ ಆಗಿದೆ. ಆದರೂ ಶ್ರೀಗಳವರು ವಿವರಿಸಿದ ವಿವರಣೆ ಚಿಕೀರ್ಷಕ ಬುದ್ಧಿಯ ಆ ಮಾನವರುಗಳ ಮಾನಸಿಕ ಸಂಶಯವನ್ನು ಬಹುಮಟ್ಟಿಗೆ ಹೋಗಲಾಡಿಸಿ ತದ್ವಿಷಯಕ ಭಕ್ತಿಯನ್ನುಂಟು ಮಾಡುವಲ್ಲಿ ಸಂಶಯವಿಲ್ಲ. ಇದರ ಹಾಗೆಯೆ ಮಂತ್ರ ಪಾದೋದಕ ಪ್ರಸಾದಗಳ ರೀತಿಗೂ ಸುಲಭವಾದ ಸುಂದರವಾದ ಅಚ್ಚುಕಟ್ಟಾದ ವಿವರಣೆಯಿದೆ. ಪಾದೋದಕ ಪ್ರಸಾದ ಸೇವಿಸುವ ಕ್ರಮ, ಅವುಗಳ ಭೇದಗಳೇ ಮೊದಲಾದ ಅಂಶಗಳನ್ನು ಸಂಗ್ರಹವಾಗಿ ಸಾರವತ್ತಾಗಿ ಸಮಗ್ರವಾಗಿ ನಿರೂಪಣೆ ಮಾಡಿರುವ ಶ್ರೀಗಳವರ ಕೌಶಲ ಅನ್ಯಾದೃಶ.

## ಪಂಚಾಚಾರ:

ನೈತಿಕ ವಿಭಾಗಕ್ಕೆ ಸೇರಿದ ಪಂಚಾಚಾರ ಗ್ರಂಥವಂತೂ ತುಂಬ ಉತ್ತಮ ಕೃತಿಯಾಗಿದೆ. "ಆಚಾರವೇ ಧರ್ಮ; ಆಚಾರವೇ ದೇವ, ಆಚಾರವೇ ಅಲಂಕಾರ, ಆಚಾರವೇ ಓಂಕಾರ...." ಇತ್ಯಾದಿ ಆದ್ಯರ ವಚನದಂತೆ ತೋರುವ ಶ್ರೀಗಳವರ ನುಡಿಯಿಂದ ಪ್ರಾರಂಭವಾದ ಈ ಮಹತ್ವದ ಗ್ರಂಥದಲ್ಲಿ ಲಿಂಗಾಚಾರ

೧ ಅಷ್ಟಾವರಣ ಪುಟ ೫೩-೫೪

ಸದಾಚಾರ, ಶಿವಾಚಾರ, ಗಣಾಚಾರ' ಭೃತ್ಯಾಚಾರಗಳ ಬಗೆಗೆ ಸೂತ್ರೋದಾಹರಣ ಪೂರ್ವಕವಾದ, ಪ್ರಮಾಣಾಧಾರ ಯುಕ್ತವಾದ ವಿವರಣೆ ತತ್ತ್ವಜಿಜ್ಞಾಸುಗಳ ಮೆಚ್ಚುಗೆಗೆ ವಿಶೇಷ ರೀತಿಯಲ್ಲಿ ಪ್ರಾಪ್ತವಾಗುವುದರಲ್ಲಿ ಸಂಶಯವಿಲ್ಲ. ಲಿಂಗಾಚಾರದ ವಿಷಯ ವಿವರಣೆಯಲ್ಲಿ ಲಿಂಗ, ಲಿಂಗದೀಕ್ಷೆ, ದೀಕ್ಷಾವಿಭಾಗ, ಮಂತ್ರದೀಕ್ಷೆ, ವಿಧಾನ, ವಿಭಾಗ ಫಲಗಳ ಸಂಗ್ರಹವಾಗಿ ವಿವರಣೆ ನೀಡಿದ್ದಾರೆ. ತ್ರಿವಿಧ, ಷಡ್ವಿಧ; ನವವಿಧ ಲಿಂಗತತ್ತ್ವಗಳ ನಿರೂಪಣೆ ಮಾಡಿದ್ದಾರೆ. ಅನಾದ್ಯಂತನೂ, ಅಪ್ರತರ್ಕನೂ, ಅಪ್ರಮೇಯನೂ ಆದ ಪರಶಿವನ ಪರಿಪೂರ್ಣದ ಶಕ್ತಿ ಶರಣನಲ್ಲಿ ಹೇಗೆ ಇದೆ ಎಂಬುದಕ್ಕೆ ದೃಷ್ಟಾಂತವಾಗಿ ಹರಿವ ನದಿಗೆ ಮೈಯೆಲ್ಲ ಕಾಲು, ಉರಿವಗ್ನಿಗೆ ಮೈಯೆಲ್ಲ ನಾಲಗೆ, ಬೀಸುವ ಗಾಳಿಗೆ ಮೈಯೆಲ್ಲ ಕೈ, ಗುಹೇಶ್ವರ, ನಿಮ್ಮ ಶರಣಂಗೆ ಸರ್ವಾಂಗಲಿಂಗ, (೧)

ಎಂಬ ಪ್ರಭುದೇವರ ಸುಂದರ ವಚನಾಧಾರ ಕೊಟ್ಟು ಸಿದ್ಧರಾಮೇಶ್ವರರ, ಬಸವಣ್ಣನವರ ವಚನಗಳ ಆಧಾರದ ಮೇಲೆ ವಿವರಣೆ ಮುಂದುವರಿಸಿ–

> "ವಿಶ್ವವನ್ನು ಲಿಂಗಮುಖದಿಂದ ಲಿಂಗಸ್ವರೂಪವಾಗಿ ಕಾಣಬೇಕು, ಲಿಂಗಮಯವಾಗಿ ರೂಹಿಸಬೇಕು, ಹೀಗಿರುವಾಗ ಲಿಂಗವಂತರಲ್ಲಿ ಸೌಮ್ಯ ಭಾವ ಬೇಡವೆ ? ಲಿಂಗವಂತರೆಲ್ಲ ಒಂದೆಂಬ ಭಾವವಿರಬೇಕು. ಭ್ರಾತೃ ಭಾವ ಬಲಿಯಬೇಕು; ಭೇದ ಭಾವ ತೊಲಗಬೇಕು........ಲಿಂಗವಂತರಲ್ಲಿ ವ್ಯಕ್ತಿ ಭೇದ, ಜಾತಿಭೇದ, ಒಳಭೇದ ಮಾಡದಿರುವುದೇ ಲಿಂಗಾಚಾರ(೨)"

ಇತ್ಯಾದಿಯಾಗಿ ನುಡಿದಿರುವ ನುಡಿ ಈಗಿನ ಸಮಾಜದ ಕೆಲವು ಮೂರ್ಖ ನಂಬಿಕೆಯ ಮೂಢ ನಂಬಿಕೆಯ ದುರಭಿಮಾನಿಗಳಿಗೆ ಹಿತ ಮಿತ ಮೃದು ನುಡಿಯ ಬುದ್ಧಿಯನ್ನು ಹೇಳಿದ್ದಾರೆ. ಇದು ನಿಜಕ್ಕೂ ಸ್ವಾಗತಾರ್ಹ. ಅಂಥವರು ಲಿಂಗಾಚಾರಕ್ಕೆ ದೂರವೆಂದು ಸ್ಪಷ್ಟ ಉತ್ತರ ಕೊಟ್ಟಿದ್ದಾರೆ. ಸದಾಚಾರ ವಿವರಣೆಯಿತ್ತ ಸದಾ ಆಚಾರ, ಸತ್ ಆಚಾರ ವಿಂಗಡನೆ ಮಾಡಿ ವೀರಶೈವಾಚಾರ ಪ್ರದೀಪಿಕೆಯ ಉತ್ಪನ್ನಶೀಲ, ಆಚಾರಶೀಲ, ಉದ್ಯೋಗ ಶೀಲ, ಉತ್ಕಲಿಕ ಶೀಲ, ಸಂಬಂಧ ಶೀಲ, ಪ್ರಸನ್ನಶೀಲ, ಉತ್ತಮ ಶೀಲ, ಜ್ಞಾನಶೀಲಗಳೆಂಬ ಅಷ್ಟಶೀಲಗಳ ಸೂತ್ರರೂಪವಾದ (೩) ಅರ್ಥವಿದೆ. ಶಿವಾಚಾರ ಪ್ರಕರಣದಲ್ಲಿ ಶಿವಶರಣರ ಶಿವನ ಅನುಭಾವ ಪಡೆದ ಚೆನ್ನಬಸವಣ್ಣ ಬಸವಣ್ಣನವರ ಧರ್ಮ ಶಾಸನಗಳ ಆಧಾರವಿಡಿದು ಜಾತಿ ಭೇದಗಳನ್ನು

---

೧ ಪಂಚಾಚಾರ ಪುಟ ೧೩

೨ ಪಂಚಾಚಾರ ಪುಟ–೧೩

೩ ಪಂಚಾಚಾರ ಪುಟ ೨೦-೨೧-೨೨

ಖಂಡಿಸಿ ಆಚಾರ ಸಂಪನ್ನರೆಲ್ಲ ಒಂದೇ ಎಂದು ಹೇಳುವಲ್ಲಿನ ವಿವರಣೆ ಇಂದು ಸಮಾಜಕ್ಕೆ ತುಂಬ ಅವಶ್ಯಕ. ಭಕ್ತರಲ್ಲಿ ವ್ಯಕ್ತಿ ಭೇದ, ಜಾತಿಭೇದಗಳನ್ನು ಎಣಿಸಬಾರದು; ಸತ್ಯ ಶುದ್ಧ ಮಾರ್ಗದಿಂದ ನಡೆವುದೇ ಶಿವಾಚಾರ; ಅವರೆಲ್ಲ ಒಂದೇ ಎಂದು ಹಿತ ಹೇಳಿದ್ದಾರೆ.

ಗಣಾಚಾರದ ವಿಷಯದಲ್ಲಿ ಕೆಲವರಿಗೆ ತಪ್ಪು ಕಲ್ಪನೆಯಿದೆ. ದೃಢಪ್ರತಿಜ್ಞೆಯಿಂದ ಧಾರ್ಮಿಕಾಚರಣೆಯನ್ನು ಆಚರಿಸುವುದೇ ಗಣಾಚಾರ. ಈ ಧಾರ್ಮಿಕಾಚರಣೆಯಲ್ಲಿ ಕಷ್ಟನಷ್ಟಗಳೇನೇ ಬಂದರೂ ಮನೋದೌರ್ಬಲ್ಯ, ಬುದ್ಧಿವೈಕಲ್ಯಗಳಿಂದ ಧೈರ್ಯಗುಂದದೆ ಸತ್ಯಸಂಕಲ್ಪಭರಿತಮಾನಸಿಕ ಪ್ರಬಲ ಶಕ್ತಿಯಿಂದ ತನ್ನ ಕರ್ತವ್ಯವನ್ನು ಪೂರೈಸಬೇಕು. ಸತ್ಯ ಧರ್ಮದಲ್ಲಿ ಆಗ್ರಹವುಳ್ಳವನಾಗಬೇಕು. ಅಭಿಮಾನ ಮೂರ್ತಿಯಾಗಬೇಕು. ಆದರೆ ಈ ಅಭಿಮಾನವು ಅವಿಚಾರಿಕ, ಅವ್ಯವಹಾರಿಕವಾಗಬಾರದು. ಇದನ್ನು ಧರ್ಮಚ್ಯುತಿಗೈವ ಕೆಲವರು ಧರ್ಮದ್ರೋಹಿಗಳಿಗೆ ತಕ್ಕ ಶಾಸನ ಮಾಡಬೇಕು. ಅವರ ದೇಹ ನಾಶಗೈಯಬೇಕು ಅನ್ನುವವರೆಗೆ ಹೇಳಿರುವುದೂ ಉಂಟು. ಇದು ಅಷ್ಟೊಂದು ಸಮಂಜಸವಲ್ಲ. ಅವರ ಮನಸ್ಸನ್ನು ಪರಿವರ್ತನೆಗೊಳಿಸಬಲ್ಲ ಅವರ ದುರ್ಗುಣಗಳನ್ನು ಸದ್ಗುಣಗಳನ್ನಾಗಿ ಮಾರ್ಪಡಿಸಬಲ್ಲ ಸಾಮಾಜಿಕ ಯೋಗ್ಯವಾದ ಆಚಾರವಾಗಿ ಪರಿಣಾಮಗೊಳ್ಳಬೇಕೆಂಬುದೇ ತಾತ್ಪರ್ಯ.[1] ಶ್ರೀಗಳವರು ಇದೇ ಅಂಶವನ್ನು ತಕ್ಕ ವಿವರಣೆಯೊಂದಿಗೆ ವಿವರಿಸಿ ಕೃತಕೃತ್ಯರಾಗಿದ್ದಾರೆ. ಶೀಲ ಶೀಲಗಳ ಸ್ವರೂಪಕಥನ ಮಾಡಿ ಕೊನೆಯಲ್ಲಿ ತನ್ನ ಪ್ರಾಣ ಹೋದರೂ ಆಧಾರ ವಿಮುಖನಾಗದಿರುವ ದೃಢ ವಿಶ್ವಾಸವೇ ಗಣಾಚಾರವೆಂದು ಸೂಳ್ನುಡಿ ನುಡಿದಿದ್ದಾರೆ. ಕೊನೆಯ ದಾದ ಭೃತ್ಯಾಚಾರದಲ್ಲಿ ಬಸವಣ್ಣನವರ ಸಮಗ್ರ ಭೃತ್ಯಾಚಾರದ ಚಿತ್ರವನ್ನೇ ಅವರ ಜ್ಯೋತಿ ರೂಪ ವಚನಗಳ ಆಧಾರದಿಂದ ವಿವರಿಸಿ ಕೊನೆಯಲ್ಲಿ ಪಂಚಾಚಾರಗಳ ಮೂಲಕ ತನು, ಮನ, ಧನ, ನಡೆನುಡಿ[2] ಶುದ್ಧವಾಗುವ ಪರಿಯನ್ನು ಮನಂಬುಗುವಂತೆ ಹೇಳಿ ಗ್ರಂಥ ಮುಗಿಸಿದ್ದಾರೆ. "ಆಚಾರಃ ಪ್ರಥಮೋ ಧರ್ಮಃ" "ಆಚಾರವೇ ಸ್ವರ್ಗ ಅನಾಚಾರವೇ ನರಕ" "ಆಚಾರಸಹಿತ ಭಕ್ತ ಅನಾಚಾರಸಹಿತ ನರ" ಈ ಆದ್ಯರ ಮಾತುಗಳ ಯಥಾರ್ಥ್ಯ ಈ ಪ್ರಕರಣದಿಂದ ಸುಸ್ಪಷ್ಟಗೊಂಡಿದೆ. ಕೊನೆಯ ಲ್ಲಿ ಶಿವಾಗಮೋಕ್ತ ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಸರ್ವಾಚಾರಗಳ ಪ್ರಾಚೀನರ ಅಭಿಪ್ರಾಯಗಳಿಗೆ ಸಾರಸಂಗ್ರಹವಾದ ವಿವರಣೆಯಿತ್ತಿರುವುದು ಈ ಗ್ರಂಥದ ಇನ್ನೊಂದು ವೈಶಿಷ್ಟ್ಯ.

---

1. ಪಂಚಾಚಾರ ಪುಟ ೩೫-೩೯
2. ಪಂಚಾಚಾರ ಪುಟ ೫೦

## ಷಟ್‌ಸ್ಥಲ

ಅರ್ಥಪೂರ್ಣವೂ ತತ್ತ್ವಬದ್ಧವೂ ಆದ ಚಿತ್ರರಕ್ಷಾಪಟದ ಮೇಲಿನ ಚಿತ್ರವೇ ಈ ಗ್ರಂಥಸ್ಥ ವಿಷಯಕ ಅಂಕುರ ರೂಪವಾದ ಪರಿಚಯ ಮಾಡಿಕೊಡುವಂತೆ ಇದೆ. ಶಿವಜೀವರುಗಳಿಗೆ ಭೇದಾಭೇದವಿರುವುದು. ಲಿಂಗಾಂಗ ಪದಗಳಿಂದ ವಾಚ್ಯರಾಗುತ್ತಿರುವ ಶಿವ–ಜೀವರುಗಳಲ್ಲಿ ಉಪಾಸನೆಯ ದೃಷ್ಟಿಯಿಂದ ಭೇದವೂ, ಸಾಮರಸ್ಯ ದೃಷ್ಟಿಯಿಂದ ಅಭೇದವಿರುವುದೂ ಸಿದ್ಧಾಂತದ ಮುಖ್ಯ ತಿರುಳು. ಒಂದು ಎರಡಾದಾಗ ಭೇದ. ಎರಡು ಒಂದಾದಾಗ ಅಭೇದ. ಲೀಲೆಯುಂಟಾದಾಗ ಎರಡಾಯಿತು. ಆಗ ಭೇದ. ಎರಡು ಒಂದಾದಾಗ ಅದಿಲ್ಲ. ಅಖಂಡಾನಂದವೊಂದೇ ಆ ಸ್ಥಿತಿ. ಕಾರಣರೂಪನಾದ ಶಿವನು ಕಾರ್ಯರೂಪನಾಗಿ ಜೀವಜಗತ್ತೆಂದು ಕರೆಯಿಸಿಕೊಳ್ಳುವನು. "ಲೀಲೆಯಾದೊಡೆ ಉಮಾಪತಿ; ಲೀಲೆ ತಪ್ಪಿದರೆ ಸ್ವಯಂಭೂ" ಎಂದು ನುಡಿದ ಪ್ರಭುವಿನ ವಚನವೇ ಸಾಕ್ಷಿ. ಪ್ರವೃತ್ತಿ ಮಾರ್ಗದಲ್ಲಿ ಒಂದು ಹಲವಾಯಿತು. ನಿವೃತ್ತಿ ಮುಖದಲ್ಲಿ ಹಲವು ಒಂದಾಯಿತು. ಸ್ಥಲಪದ ವಾಚ್ಯನೂ ಶಿವನೇ! ಅಂತೆಯೆ ಗ್ರಂಥದ ರಕ್ಷಾಪುಟದ ಚಿತ್ರದಲ್ಲಿ ಕಾಂಡ (ಮೂಲ) ತತ್ತ್ವ ಸ್ಥಲ. ಸ್ಥಲಪದ ವಾಚ್ಯನೆನಿಸಿದ ಶಿವನ ಲೀಲೆ ಅಂಗ–ಲಿಂಗವೆಂಬ ಕವಲಾಯಿತು ಅಂಗದಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗಳು. ತ್ಯಾಗಾಂಗದಲ್ಲಿ ಭಕ್ತ ಮಹೇಶ್ವರ ಸ್ಥಾನ, ಭೋಗಾಂಗದಲ್ಲಿ ಪ್ರಸಾದಿ ಪ್ರಾಣಲಿಂಗಿಸ್ಥಾನ. ಯೋಗಾಂಗದಲ್ಲಿ ಶರಣ ಐಕ್ಯರ ಸ್ಥಾನಗಳು ಚಿತ್ರಿಸಲ್ಪಟ್ಟಿವೆ. ಪ್ರವೃತ್ತಿಯುಂಟಾದ್ದರಿಂದ ಈ ವೃಕ್ಷದಲ್ಲಿ ಎಲೆ. ಈ ಪ್ರವೃತ್ತಿ ಮುಖ ನಿವೃತ್ತಿಗೆ ತಿರುಗಿದಾಗ ಪುನಃ ಸೃಷ್ಟಿಯಿಲ್ಲ. ಮತ್ತೆ ಮೂಲ ವಸ್ತುವಿನತ್ತ ತಿರುಗಮೊಗ. ಆಗ ಅಖಂಡಾನಂದದ ಸಿದ್ಧಿರಗು.

ಮೇಲ್ಕಂಡ ಸೂತ್ರರೂಪವಾದ ಚಿತ್ರದ ವಿವರಣೆಯೆ ೧೬೮ ಪುಟದ ಕಿರಿಯ ಪುಸ್ತಕದಲ್ಲಿ ಸಾರ ಸಂಗ್ರಹ ರೂಪವಾಗಿ ಆದ್ಯರ ಶಾಸ್ತ್ರೀಯ ನುಡಿಗಡಣ, ಶ್ರೀಗಳ ವರ ಶಿವಾನುಭಾವ ವಿದ್ಯಾವೈದುಷ್ಯ. ಶ್ರೀಗಳ ಭಾಷಾ ಮುಪ್ಪುರಿಯಿಂದ ಹೊರಬಂದಿದೆ. ಅಂಗಗತ ಶಕ್ತಿಯೆ ಭಕ್ತಿಯಾಗಿ ಬಾಳೆಲ್ಲ ಭಕ್ತಿ ಶಕ್ತಿಯ ಭವ್ಯ ಮಾರ್ಗದಲ್ಲಿ ಮುನ್ನಡೆಯುವ ಮಹಾ ಅರಿವು ಸರ್ವ ಜನ ಮನಂಬುಗುವಂತೆ ಎಲ್ಲೆಲ್ಲೂ ಹಿತ ಮಿತ ನುಡಿಯ ಬೆಡಗಿನ ಮೋಡಿಯಿಂದ ಮೂಡಿಬಂದಿವೆ. ಆರು ಸ್ಥಲಗಳಿಗೂ ಸಂಬಂಧಿಸಿದ ಏಕೋತ್ತರ ಶತ (೧೦೧) ಲಿಂಗಾಂಗ ಸ್ಥಲಗಳ ಹಂಚಿಕೆಯಿಂದಲೂ, ಅವುಗಳ ಸಂಕ್ಷೇಪ ವಿವರಣೆಯಿಂದಲೂ ನೇಸಳಿಸಿ, ಕಳೆಗೊಂಡು ಕುಡಿವರೆದು ಬೆಳೆದು ಬಂದಿರುವ ಅಭಿಪ್ರಾಯ ಪೂರ್ಣವಾದ ಈ ಗ್ರಂಥ ವೀರಶೈವತತ್ತ್ವಜಿಜ್ಞಾಸುಗಳೆಲ್ಲರ ಸಂಗ್ರಹ ಯೋಗ್ಯವಾಗಿದೆ. ಇಷ್ಟೇ ಅಲ್ಲ ಸಂಗ್ರಹಿಸಲೇ ಬೇಕಾದುದಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಪ್ರತಿಯೊಂದು ಸ್ಥಲದ ರೀತಿಗೂ ಸಿದ್ಧಾಂತ ಶಿಖಾಮಣಿಯ ಆಧಾರ, ಶರಣರ

ಅಭಿಪ್ರಾಯಗಳ ವಿವರಣೆಗಳು ಶ್ರೀಗಳವರ ಪ್ರಸನ್ನ ಕನ್ನಡ ನುಡಿಯ ಪಡಿಯಚ್ಚಿನಲ್ಲಿ ಹೊರಬಂದು ಕಲಾತ್ಮಕವೆನಿಸಿವೆ. ಇಂಥ ಗ್ರಂಥಗಳು ವಿಶೇಷವಾಗಿ ಜನತೆಯಲ್ಲಿ ಪ್ರಸಾರವಲ್ಲಿಲ್ಲ. ಆದ್ದರಿಂದಲೇ ಇಷ್ಟೊಂದು ರೀತಿಯಲ್ಲಿ ಹೃದಯಾರೆ ಹೊಗಳುವ ಹರಿಕಾರನ ಕೆಲಸ ಮಾಡಿದೆ.

ಉಪಸಂಹಾರ ಪ್ರಕರಣದಲ್ಲಿ ಶ್ರೀಗಳವರು ಕೊಟ್ಟ ವಿವರಣೆ ಅಭ್ಯಾಸಪೂರ್ಣ ದೃಷ್ಟಿಯಿಂದ ಕೂಡಿದ ಮಹತ್ವದ ಲೇಖನವೆನಿಸಿದೆ.* ಷಟ್‌ಸ್ಥಲ ಒಂದು ಸರ್ವಾಂಗ ಸುಂದರ ಸರ್ವಾದರ ಸಿದ್ಧಾಂತ. ಅದರಲ್ಲಿ ತನುಶುದ್ಧಿಯಿಂದ ತನ್ಮಯಸಿದ್ಧಿಯ ವರೆವಿಗೂ ಪ್ರತಿಪಾದನೆಯಿದೆ, ವ್ಯಾಪ್ತಿಯಿದೆ; ಕ್ರಿಯಾಜ್ಞಾನ ಸಮನ್ವಯವಿದೆ; ಜಗತ್ತು, ಜೀವ, ಜಗದೀಶ್ವರ ಈ ಮೂರನ್ನು ಸತ್ಯವಾಗಿ, ನಿತ್ಯವಾಗಿ ಅಂಗೀಕರಿಸಿದೆ; ಅಂಗುವಿಸಿದೆ. ವೇದಾಂತವು ಯಾವುದನ್ನು ಮಿಥ್ಯೆಯೆಂದು ಅಲ್ಲಗಳೆಯುತ್ತದೆಯೊ ಅದೆಲ್ಲವೂ ಸತ್ಯವೆಂದು ಶಾಶ್ವತವೆಂದು ನಿರೂಪಿಸುತ್ತದೆ, ಸ್ವರೂಪಿಸುತ್ತದೆ. ವೇದಾಂತವು ಮಾಯ ಜಂಜಡವೆಂದರೆ, ಷಟ್‌ಸ್ಥಲ ಸಿದ್ಧಾಂತವು ಶಕ್ತಿ ಚಿನ್ಮಯವೆನ್ನುತ್ತದೆ. ಶಕ್ತಿರಹಿತ ಅದ್ವೈತವು ವೇದಾಂತಮತವಾದರೆ, ಶಕ್ತಿವಿಶಿಷ್ಟಾದ್ವೈತವು ಷಟಸ್ಥಲ ಸಿದ್ಧಾಂತ ಮತ............ಇತ್ಯಾದಿ ಅಭಿಪ್ರಾಯಗಳಿಗೆ ಯುಕ್ತಿ ಯುಕ್ತವಾದ ವಿವರಣೆಯಿತ್ತು ಗ್ರಂಥ ಮುಗಿದಿದೆ.

ಈ ರೀತಿಯಲ್ಲಿ ಅಷ್ಟಾವರಣ, ಪಂಚಾಚಾರ, ಷಟಸ್ಥಲ ಗ್ರಂಥಗಳನ್ನು ಕನ್ನಡಿಗರ ಕರಕಮಲಕ್ಕೆ ಇತ್ತು ಮಹೋಪಕಾರಮಾಡಿದ ಶ್ರೀಗಳವರನ್ನು ಮನವಾರೆ ಕೊಂಡಾಡಬೇಕು. ಹೃದಯಾರ ಹೊಗಳಬೇಕು. ಈ ಕರ್ತವ್ಯ ಭಾರವನ್ನು ನಾನು ಎಷ್ಟರ ಮಟ್ಟಿಗೆ ನಿರ್ವಹಿಸಿರುವೆನೊ ನನಗೇ ಅರಿವಿಲ್ಲ. ಅರಿವಿಲ್ಲದೆ ಆದ ಅಪರಾಧಕ್ಕೆ ಕ್ಷಮೆಯುಂಟೆಂದು ಭಾವಿಸಿ ಪ್ರಕೃತ ವಿಶೇಷ ಸಾಹಸಕ್ಕೆ ಕೈ ಹಾಕದೆ ವಿರಮಿಸುತ್ತೇನೆ.



'ಕಾಯಕ ಕಲೆ' ಯನ್ನು ಓದಿದೆ. ಅದೊಂದು ಅದ್ವಿತೀಯ ಅಮರ ಕೃತಿ. ಪೂಜ್ಯ ಶ್ರೀ ಜ. ಚ. ನಿ. ಅವರು ಕಾಯಕತತ್ತ್ವವನ್ನು ಬಲು ಸೊಗಸಾಗಿ ವಿವರಿಸಿದ್ದಾರೆ. ಶರಣರ ಕಾಯಕದ ಕಲ್ಪನೆಯನ್ನು ತಮ್ಮ ಪ್ರತಿಭೆಯ ಕುಂಚದಿಂದ ಚನ್ನಾಗಿ ಚಿತ್ರಿಸಿದ್ದಾರೆ. ಈ ಗ್ರಂಥವನ್ನು ಇಂಗ್ಲೀಷ್ ಮತ್ತು ಇತರ ಭಾರತೀಯ ಭಾಷೆಗಳಲ್ಲಿ ಭಾಷಾಂತರಿಸಿದರೆ ಶರಣ ಸಂಸ್ಕೃತಿ ಪ್ರಪಂಚಕ್ಕೆ ತಿಳಿಯಲು ಅನುಕೂಲವಾಗುವದು.

— ಸ್ವಾಮಿ ಲಿಂಗಾನಂದ

* ಷಟಸ್ಥಲ, ಪುಟ ೧೪೪-೪೯

## ವೇದಾಂತದ ಅನುಭವ ಸಾರ 'ನಾನು-ನೀನು'

—ಶ್ರೀ ದೇವುಡು

ನಾನು ನೀನು ಎಂಬ ಮಾತು ಅರಿಯದವರು ಯಾರು? ಆದರೂ ಅದನ್ನು ಬಲ್ಲವರು ಯಾರು? ಈ ಮಾತುಗಳ ಸರಿಯಾದ ಅರ್ಥ ತಿಳಿಯುವುದೇ ವೇದಾಂತದ ಗುರಿ.

ಪ್ರಾಕೃತರು ನಾನು ಎಂದುಕೊಳ್ಳುವ ದೇಹವು ನಾನು ಅಲ್ಲ ಎಂದು ವಿಚಾರಿಸಿ ತೋರಿದುವು. ವಿಚಾರ ಧಾರೆಯು ಸಂಪ್ರದಾಯವನ್ನು ಹಿಡಿದು ಹೊರಟರೆ 'ನೇತಿ' ಮಾರ್ಗವನ್ನು ಹಿಡಿಯುವುದು. ಆಗ ಪಂಚಕೋಶ-ದೇಹತ್ರಯಗಳನ್ನು ದಾಟಿ ಅದರ ಆಚೆಗೆ ನಿಂತಿರುವ ವಸ್ತುವು ಅಹಂ-ನಾನು ಎಂಬ ಶಬ್ದದ ಅರ್ಥ ಎನ್ನುವುದು ತಿಳಿಯುವುದು. ಅದಕ್ಕೆ ಗುರುವು ಬೇಕು. ಸ್ವತಂತ್ರ ವಿಚಾರವು ವಾಚ್ಯಾರ್ಥವನ್ನು ಅವಲಂಬಿಸಿ ಹೊರಟು, ಲಕ್ಷ್ಯಾರ್ಥವನ್ನು ಸೇರುವುದು. ಬಲವಾಗಿದ್ದರೆ ಅಲ್ಲಿಂದಾಚೆಗೆ ಹೋಗಿ ವ್ಯಂಜನಾವೃತ್ತಿಯನ್ನು ಆಶ್ರಯಿಸಿ ತತ್ ವರೆಗೆ ಹೋಗಿ ಅಲ್ಲಿ ನಿಂತುಬಿಡುವುದು. ಅಲ್ಲಿಯೇ ಬುದ್ಧಿಯಿರುವುದು. ಅದೇ ವೇದಾಂತದ ಗುಹೆ. ಅಲ್ಲಿಯೇ ವಿಜ್ಞಾನಮಯ ಕೋಶ. ಅದೇ ಶ್ರುತಿಗಳು ಹೇಳುವ ತಮಸ್ಸು. ಅದರ ಆಚೆ ಆನಂದಮಯ ಕೋಶ. ಬುದ್ಧೇಸ್ತು ಪರತಃ ಇರುವುದು ಅಲ್ಲಿ! ಅಲ್ಲಿನವರೆಗೂ ಎಲ್ಲಾ ವೇದಾಂತಿಗಳೂ ಗುರು ಕೃಪೆಯಿದ್ದರೆ ಹೋಗಬಹುದು. ಆದರೂ ಅದೇ ಪುನರಾವೃತ್ತಿರಹಿತ ಬ್ರಹ್ಮಲೋಕವಾದರೂ ಅಲ್ಲಿಂದಾಚೆಗೆ ಹೋದವರೇನೇ ತತ್ವಜ್ಞಾನ ಅದನ್ನು ದಾಟಿದವನು ಆರೂಢ.

ಪಂಚೀಕರಣವನ್ನು ಒಪ್ಪಿಕೊಂಡವರು ಆಕಾಶದ ಅರ್ಧಭಾಗವೇ ಜ್ಞಾತೃವೆನ್ನುವರು. ಆಕಾಶವು ಭೂತ; ಚೇತನವಲ್ಲ. ಆಕಾಶದ ಆಚೆ ಮಹತ್ತು. ಅದೇ ತ್ರಿಗುಣಾತ್ಮಿಕಾ, ಪ್ರಕೃತೀ, ಮಾಯಾ. ಅದನ್ನು ದಾಟಿದವನು ವಿರಾಟ್ಪುರುಷನನ್ನು ಸೇರಿ ಎಂದರೆ ದೇವಾವ್ಯಯ ಸಿದ್ಧಿಯಲ್ಲಿ ಪರಮಾವಧಿಯನು ಪಡೆದ. ಈಶ್ವರನು ಮಾಯಾತೀತನಾದರೂ ಇನ್ನೂ ಸಗುಣ. ಶ್ರುತಿಯ ಮಾತಿನಲ್ಲಿ ಹೇಳಬೇಕೆಂದರೆ ಎಲ್ಲವನ್ನೂ ಒಳಗೊಂಡ ವಿರಾಟನು "ಪಾದೋಽಸ್ಯ" ಎಂದರೆ ಒಂದು

ಹಾಗ ಪಾಲು. ಅದರಾಚೆ ಸಗುಣದಾಚೆ ಅದರ ಮೂರರಷ್ಟು ಇರುವ ಪುರುಷ. ಅಲ್ಲಿಂದಾಚೆ ಏನಿದೆಯೋ ಯಾರೂ ಕಾಣರು. ಗುರುಕೃಪೆಯನ್ನು ಪಡೆದ ಧೀರರು, ಮಹಾಂತಂ ವಿಭುಮಾತ್ಮಾನಂ ಮತ್ವಾ" ಹೇಳಿದರು. "ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸ : ಪರಸ್ತಾತ್" ಸಾಧಿಸಿದವರು ಹೌದು ಎಂದರು.

ಇಂತಹ ವೇದಾಂತ ಜಗತ್ತಿನಲ್ಲಿ ಅಂದಿನಿಂದ ಇಂದಿಗೂ ಇದೆ. ಗುಹೆಯಲ್ಲಿ ಕಣ್ಮುಚ್ಚಿ ಕುಳಿತವನು "ಸೂರ್ಯನೇ ಇಲ್ಲ. ಎಲ್ಲಾ ಕತ್ತಲು" ಎಂದ ಹಾಗೆ. ಅವಿಚಾರ ದಲ್ಲಿ ಇದ್ದು ಅನ್ಯವಿಚಾರದಲ್ಲಿ ಬಿದ್ದು, ಅರ್ಥವಾಗದೇ ವೇದಾಂತವನ್ನು ತಿರಸ್ಕರಿಸಿದ ವರ ಸಂಖ್ಯೆ ಕೋಟಿ, ಕೋಟಿ. ಆದರೆ ವೇದಾಂತ ಹೋಗಲಿಲ್ಲ.

ಬಲ್ಲವರು ಈ ಕೋಟಿ ಕೋಟಿಗಳನ್ನು ಕಂಡು ಕನಿಕರಿಸಿ ಅವರ ಉದ್ಧಾರ ಕ್ಕೆಂದು ಮಾತಿನ ಮಳೆ ಸುರಿದು ಅಮೃತದ ಸ್ವರೂಪವನ್ನು ತೋರಿಸಿದರು. ಹಾಗೆ ವೇದಾಂತದ ಅನುಭವಸಾರವನ್ನು ಆದಷ್ಟು ಮಟ್ಟಿಗೆ ಗುರುತಿಸಲು ಸಾಧ್ಯವಾಗುವಂತೆ ಕಾವ್ಯಭಾಷೆಯಲ್ಲಿ ಪುರಾತನರ ಸದುಕ್ತಿಗಳನ್ನು ಆಧರಿಸಿ ಅಥವಾ "ಕೃತವಾಗ್ದ್ವಾರೇ ವಂಶೇಽಸ್ಮಿನ್ ಪೂರ್ವ ಸೂರಿಭಿಃ । ಮಣೌ ವಜ್ರ ಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ" ಎಂದ ಮಹಾನುಭಾವನಂತೆ ಶ್ರೀ ಶ್ರೀ ಸ್ವಾಮಿಗಳು ಒಂದು ಸಣ್ಣ ಪುಸ್ತಕ ವನ್ನು ಬರೆದಿದ್ದಾರೆ. ಅಲ್ಲಮ ಪ್ರಭುದೇವ, ರೇಣುಕ ಸಿದ್ಧ ಮೊದಲಾದ ಮಹಾನು ಭಾವರ ವಚನಗಳಲ್ಲಿ ಅಡಗಿರುವ ಸುಧೆಯನ್ನು ಕರೆದು ವಿಸ್ತಾರವಾಗಿ ಚಿತ್ರಿಸಿ, ಬಣ್ಣಿಸಿ, ವಿಚಾರಿಗಳಿಗೆ ಉಪಕಾರ ಮಾಡಿದ್ದಾರೆ. ಈ ಕೃತಿಯಿಂದ ನಮ್ಮ ದೇಶಕ್ಕೆ ಉಪಕಾರವಾಗಿ ದೇಶವು ಶ್ರೀ ಶ್ರೀಸ್ವಾಮಿಗಳ ಉಪಕಾರವನ್ನು ಸ್ಮರಿಸಿ, ದೊರೆತ ಲಾಭವು ಇತರರಿಗೂ ದೊರೆಯುವಂತೆ ಮಾಡಲಿ

## ಸಾರ್ಥಕ ಕೃತಿ ನಾನು-ನೀನು

"ನಾನಾರೆಂಬುದನ್ನು ಅರಿ, ಕಾಯ ಕರಣಗಳು ನಾನೆಂಬ ಕತ್ತಲೆಯನ್ನು ಹರಿ, ನಾನು ನೀನು ಒಂದೆಂಬುವೆ ಗುರಿ. ಈ ಮೂರು ಮಾತುಗಳೆ ಎಲ್ಲರ ಮುಂದಾರಿ" ಎಂಬುದು ಈ ಪುಟ್ಟ ಪುಸ್ತಕದ ಪುಣ್ಯಮಯವಾದ ಪೀಠಿಕೆ. "ತನ್ನ ಬಿಟ್ಟು ದೇವ ರಿಲ್ಲ" ಎಂಬುದು ಈ ಹೊತ್ತಿಗೆಯ ಜೀವಾಳ. "ಅಸತೋ ಮಾ ಸದ್ಗಮಯ" ಅಸತ್ಯ ದಿಂದ ಸತ್ಯದ ಸೀಮೆಯನ್ನು ಸೇರಿಸುವುದೇ ಈ ಗ್ರಂಥದ ಹೆಗ್ಗಳಿಕೆ. "ಚಿದಹಂ ಭಾವನೆಯು ಮೀಸಲು, ಅಜ್ಞಾನಾಹಂ ಭಾವನೆಯು ಎಂಜಲು ಎಂಬುದು ಇದರ ನೀತಿ. "ಜಾತಿ ಭಾವದ ಮುಸುಕುಗನ್ನು ತೆಗೆದರೆ ಮನುಷ್ಯರೆಲ್ಲರೂ ಒಂದೆ, ಜೀವ ಭಾವದ ಪರೆಯನ್ನು ಹರಿದರೆ ದೇಹಿಗಳೆಲ್ಲರೂ ದೇವರೆ" ಎಂಬುದು ಈ ಪುಸ್ತಕದ ರೀತಿ. "ನೀನು ಶಿವ ನಾನು ಜೀವ, ನೀನು ಮುಕ್ತ ನಾನು ಬದ್ಧ, ನೀನು ಸುಖಿ ನಾನು ದುಃಖಿ" ಮುಂತಾದ ವಿಚಾರಗಳನ್ನು ವಿಸರ್ಜಿಸಿ ನಿರುಪಾಧಿಕವಾದ ನಿಜ ತತ್ತ್ವವೇ ತಾನೆಂದು ಗುರುಮುಖದಿಂದರಿತು ಅಳವಡಿಸಿಕೊಳ್ಳಬೇಕು- ಎಂದು ತಿದ್ದಿ ತಿಳಿಯಪಡಿಸುವುದೇ ಈ ಗ್ರಂಥದ ಗೋಪ್ಯಬೋಧ. "ನಾನು–ನೀನು ಎಂಬುದರಲ್ಲಿ

ನಾ (ಜೀವ) ನೀ (ಶಿವ) ಈ ಎರಡು ಅಳಿದರೆ ಸು (ಶುದ್ಧ ಬ್ರಹ್ಮ) ಒಂದೇ ಉಳಿಯುವುದು ಎಂಬುದೇ ಈ ಹೊತ್ತಿಗೆಯ ತಿರುಳು. "ನಾನು ನೀನು ಒಂದೇ" ಎಂಬುದೇ ಈ ಪುಟ್ಟ ಪುಸ್ತಕದ ಸಾರ್ಥಕವಾದ ಕೊನೆಯ ಉಸಿರು. ಮುಮುಕ್ಷುಗಳು ಈ ಗ್ರಂಥವನ್ನು ಸಂಗ್ರಹಿಸುವುದು ಅತ್ಯಗತ್ಯ. ಲೇಖಕರಾದಶ್ರೀ ಶೈಲ ಜಗದ್ಗುರು ಜ.ಪ. ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರ ಪವಿತ್ರ ಲೇಖನಿಯಿಂದ ಇಂತಹ ಅತ್ಯುತ್ತಮ ಹೊತ್ತಿಗೆ ರತ್ನಗಳು ಇನ್ನೂ ಕೆಲವು ಹೊರಬೀಳಲೆಂಬುದು ನಮ್ಮ ಹೃದ್ಗತ; ಅಚ್ಚಳಿಯದ ಹೆಬ್ಬಯಕೆ.

ಸುಖಾಶ್ರಯ ಪ್ರಬೋಧ

---

ಅಹಮೆಂಬ ಬೀಜದಲ್ಲಿ
ಇಹವೆಂಬ ವೃಕ್ಷ ಅಡಗಿಪ್ಪುದು ನೋಡಾ,
ಸೋಹವೆಂಬ ಪುಷ್ಪ ಅಡಗಿಪ್ಪುದು ನೋಡಾ;
ಶಿವೋಹಂ ಎಂಬ ಕಸುಗಾಯಿ ಅಡಗಿಪ್ಪುದು ನೋಡಾ.
ಶಿವೋಂ ಎಂಬ ರಸಫಲ ಅಡಗಿಪ್ಪುದು ನೋಡಾ,
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ.

ನಾನೆಂಬ ವಸ್ತು ಪ್ರತ್ಯಕ್ಷವೋ, ಪರೋಕ್ಷವೋ ?
ಎತ್ತುವೆ ಮುಂಡಿಗೆಯ; ಇಳುಹಬಲ್ಲವರು ಬನ್ನಿರೋ !
ಪ್ರತ್ಯಕ್ಷವೆಂದಡೆ ಇಂದ್ರಿಯಗೋಚರದೊಳಪ್ಪುದಗಿತ್ತು.
ಪರೋಕ್ಷವೆಂದಡೆ ತನ್ನರಿವು ತನಗಿಲ್ಲದ ಮರುಳತನವಪ್ಪುದಗಿತ್ತು.
ಇನ್ನೇನು ಹೇಳಿರೇ ನಮ್ಮ,
ಶ್ರೀ ಸಿಡುಮಾಮಿಡಿ ಶ್ರೀಗಿರಿಸಿಂಹಾಸನಾಧೀಶನಲ್ಲಿ ?

ಅಹಂ ಪದದರ್ಥವನಾಲಿಸಿರೇ !
ಅಕಾರವೇ ಪರಶಿವ; ಹಂಕಾರವೇ ಪರಶಕ್ತಿ
ಶಿವಶಕ್ತಿ ಸಂಪುಟವಾದ 'ಅಹಂ' ತತಿಯ
ವಿಸ್ತಾರ ವಿಚಾರವ ಕೇಳಲಿನ್ನೇನೇ ಹೇಳಾ,
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ ?

—ವಚನವಲ್ಲರಿ, ಭಾಗ-೨

ಎಸಳು-೪

# ಪ್ರಬಂಧ ಸಾಹಿತ್ಯ

[ದರ್ಶನ-೩]

ಸಂಸ್ಕಾರ
ಕಾಯಕ ಕಲೆ
ದೇವದೃಷ್ಟಿ
ಇರುಳು ಹಗಲು

'ಸಂಸ್ಕಾರ' 'ಕಾಯಕ ಕಲೆ' ಮತ್ತು 'ದೇವದೃಷ್ಟಿ' ಮೂರೂ ವಿಶಿಷ್ಟ ಪೂರ್ಣವಾದ ಪ್ರಬಂಧ ಗ್ರಂಥಗಳು. ಈ ಗ್ರಂಥಗಳನ್ನು ಕುರಿತು ಆರಂಭದ ಸಂಕ್ಷಿಪ್ತ ಪರಿಚಯದಲ್ಲಿ ಪ್ರಸ್ತಾಪ ಮಾಡಲಾಗಿದೆ.

'ಸಂಸ್ಕಾರ' ಮತ್ತು 'ಕಾಯಕ ಕಲೆ' ಗ್ರಂಥಗಳು ನಿಜಕ್ಕೂ ಅಪೂರ್ವ; ಅವಕ್ಕೆ ಮಹಾ ಪ್ರಬಂಧಗಳೆಂದರೂ ಸಲ್ಲುತ್ತದೆ. ನಾಲ್ಕೈದು ಅಕ್ಷರಗಳ ಆ ಶಬ್ದಗಳು ಶ್ರೀ ಸನ್ನಿಧಿಯವರ ಸಾಹಿತ್ಯ ತಪಸ್ಸಿನ ಯೋಗದಂಡದ ಸ್ಪರ್ಶದಿಂದ ಸುದೀರ್ಘ ಪ್ರಬಂಧವಾಗಿ ಬೆಳೆದು ನಿಂತಿವೆ. ಶ್ರೀಗಳವರ ಉಳಿದೆಲ್ಲ ಗ್ರಂಥಗಳಿಗಿಂತ ಈ ಗ್ರಂಥಗಳಲ್ಲಿ ಬಳಸಿರುವ ಭಾಷೆಯ ಬೆಡಗೇ ಬೆಡಗು; ಸೊಗಸೇ ಸೊಗಸು! ಈ ಗ್ರಂಥಗಳು ಇಂಗ್ಲಿಷ್ ಮತ್ತಿತರ ಭಾಷೆಗಳಿಗೆ ಪರಿವರ್ತನವಾಗಬೇಕೆಂಬುದು ಹಲವರ ಹಂಬಲ ಅಂತೇ 'ಕಾಯಕ ಕಲೆ'ಯ ಇಂಗ್ಲಿಷ್ ಅನುವಾದ ಕಾರ್ಯ ನಡೆದಿದೆ.

'ಸಂಸ್ಕಾರ'ದಲ್ಲಿ ಸ್ವಾನುಭಾವದ ಸ್ತುತ್ಯ ಸಂದೇಶವಿದ್ದರೆ 'ಕಾಯಕ ಕಲೆ'ಯಲ್ಲಿ ಸ್ವಾವಲಂಬನ ಜೀವನದ ಸತ್ಯ ಸಂದೇಶವಿದೆ. 'ದೇವದೃಷ್ಟಿ'ಯು ವೈಜ್ಞಾನಿಕ ದೃಷ್ಟಿಯಿಂದ ಪರಂಜ್ಯೋತಿಯ ಪರಮದರ್ಶನವನ್ನು ಮಾಡಿಸುತ್ತದೆ.

ಇರುಳ-ಹಗಲು ಬಾಳಿನ ಸಂಘರ್ಷಣವನ್ನು ಸಾರುವ ಪ್ರೌಢವಾದ ಲೇಖನಗಳ ಗ್ರಂಥ. ಈ ಗ್ರಂಥದಲ್ಲಿ ಇರುವ 'ವೀರಭದ್ರ-ವೀರಶೈವ', ಕಣ್ಣಡಿಕ-ಕನ್ನಡಿಗ, ಅಚ್ಚ ಕನ್ನಡಿಗ ಅಗಸ್ತ್ಯ ಮುಂತಾದ ಲೇಖನಗಳು ವಿಚಾರವಾದಿಗಳ, ಸಂಶೋಧಕರ ಆಸಕ್ತಿಯನ್ನು ಕೆರಳಿಸುವ, ಆ ವಿಷಯಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವ ಸಂಶೋಧನಾತ್ಮಕ ಲೇಖನಗಳಾಗಿವೆ. ಶ್ರೀಗಳವರ ವಿಚಾರ ಸಂಪತ್ತಿಗೆ ಸಾಕ್ಷಿಭೂತವಾಗಿ ಕಂಗೊಳಿಸುತ್ತಿವೆ ಈ ಪ್ರಬಂಧ ಗ್ರಂಥಗಳು!

# ಕಾಯಕದ ಹಿರಿಮೆ ಸಾರುವ
# ಪ್ರಥಮ ಕನ್ನಡ ಗ್ರಂಥ



ಇದೊಂದು ವಿದ್ವತ್ಪೂರ್ಣ ವಿವರಣಾತ್ಮಕ ಗ್ರಂಥ. ಶ್ರೀ ಜ ಚ ನಿ. ಅವರ ವಿವರಣೆಯನ್ನು ಸ್ಥೂಲವಾಗಿ ಈ ಮಾತುಗಳಲ್ಲಿ ಸಂಗ್ರಹಿಸಬಹುದು:—

ಕಾಯದಿಂದ ಮಾಡಿದುದೆಲ್ಲಾ ಕಾರ್ಯ. ಕಾಯಕವೆಂದರೆ ಸತ್ಕ್ರಿಯೆ ಕರದಿಷ್ಟದ ಕ್ರಿಯೆ. ಸತ್ಯಶುದ್ಧ ಸ್ವಾರ್ಥರಹಿತ ಕಾರ್ಯವೇ ಕಾಯಕ. ಕೃ, ಕ್ರಿಯೆ, ಕರ್ತವ್ಯ, ಕಾರ್ಯ, ಮಾಟ ಇವೆಲ್ಲಾ ಸಂವಾದಿ ಪದಗಳು.

ಕಾಯಕದಲ್ಲಿ ಮಾಂಗಲ್ಯವಿರುವುದರಿಂದ, ಕೌಶಲ್ಯವಿರುವುದರಿಂದ ಸಾಕಲ್ಯ ಸೌಂದರ್ಯಗಳಿರುವುದರಿಂದ ಅದು ಕಲೆಯೆನಿಸಿತು. ಕಾಯಕ ಪ್ರಿಯವಾದದ್ದು. ಸತ್ ಚಿತ್ ಆನಂದಗಳಿಂದ ಕೂಡಿದುದು; ಅದು ಮಾನವನನ್ನು ಮಾನ್ಯತೆಗೆ ಮಹಾನು ಭಾವತ್ವಕ್ಕೆ ಒಯ್ಯುತ್ತದೆ ಕಾಯಕದಿಂದ ಸುಂದರ ಜೀವನ ರೂಪುಗೊಳ್ಳುತ್ತದೆ. ಕಾಯಕ ತತ್ತ್ವ ಸರ್ವಾಂಗ ಸಂಪೂರ್ಣವಾದುದು. ಕಾಯಕ ಒಂದು ಬಗೆಯ ತಪಸ್ಸು, ಕಾಯಕವೇ ಕೈಲಾಸ ಬ್ರಹ್ಮಾಂಡದ ಜೀವಿಗಳೆಲ್ಲಾ ಒಂದಿಲ್ಲೊಂದು ಕಾರ್ಯದಲ್ಲಿ ನಿರತವಾಗಿರುತ್ತವೆ ಆದರೆ ಕಾರ್ಯದಂತೆ ಕಾಯಕ ನಿಸರ್ಗಸಿದ್ಧವಾಗಿರದೆ ಪ್ರಯತ್ನದ ಫಲವಾಗಿರುತ್ತದೆ. ಕಾಯಕದ ನೆಲೆ ಜಡದೇಹವಲ್ಲ; ಜೀವಂತ ಕಾಯ. ಲಿಂಗಭೋಗಗಳನ್ನು ಉಪಭೋಗಿಸುವುದೇ ಕಾಯಕ.

ಯೋಗ ಮಾಡುವ ಮನೋನಿರೋಧ ಕಾರ್ಯವನ್ನು ಉದ್ಯೋಗವೂ ಅಂದರೆ ಕಾಯಕವೂ ಮಾಡುತ್ತದೆ. ಉದ್ಯೋಗಶೀಲನ ಮನಸ್ಸು ಉದ್ಯೋಗದಲ್ಲೇ ತಲ್ಲೀನ ವಾಗಿರುತ್ತದೆ. ಕಾಯಕ ಎಲ್ಲರಿಗೂ ಸಾಧ್ಯ ಕಾಯಕವೇ ಭೋಗ- ತ್ಯಾಗಗಳಿಗೆ ಆಧಾರ. ದಾರಿದ್ರ್ಯತೆಗೆ ಮದ್ದು. ಕಾಯಕ ಕಾಯದ ಕತ್ತಲೆಯನ್ನು ಕಳೆಮು,

ಮನದ ಮಲಿನತೆಯನ್ನು ತೊಳೆದು ಭಾವದ ಭ್ರಾಂತಿಯನ್ನು ಬಿಡಿಸುತ್ತದೆ. ಜೀವನು ಜೀವತ್ವದಿಂದೆದ್ದು ಆ ಪರಾಕಾಶಕ್ಕೇರಬೇಕಾದರೆ ಕೃಪೆಯು ಎಷ್ಟು ಅವಶ್ಯಕವೋ ಕಾಯಕವೂ ಅಷ್ಟೇ ಅವಶ್ಯಕ.

ಕಾಯಕದ ಮೂಲ ತತ್ತ್ವ ಸ್ವಾವಲಂಬನೆ. ಇನ್ನೊಬ್ಬರ ಹಂಗಿಲ್ಲದೆ, ಮತ್ತೊಬ್ಬರಿಗೆ ಹೊರೆಯಾಗದೆ ತನ್ನ ಜೀವನವನ್ನು ಹಸನಾಗಿಸಿಕೊಳ್ಳಲು ಶರಣರು ತೋರಿದ ಮಾರ್ಗ ಕಾಯಕ. ಮಾನವನಲ್ಲಿ ಆತ್ಮಾಭಿಮಾನವನ್ನೂ, ಚಿತ್ತಸ್ಥೈರ್ಯವನ್ನೂ ದೈವದಲ್ಲಿ ನಂಬಿಕೆಯನ್ನೂ ಹುಟ್ಟಿಸುತ್ತದೆ. ಇಹಪರಗಳ ಮಾಂಗಲ್ಯಕ್ಕೆ ಸಾಧಕವಾಗುತ್ತದೆ.

ಕಾಯಕಕ್ಕೆ ಅದು ಇದು ಎಂದಿಲ್ಲ. ಸಂಗೀತದಿಂದ ಚರ್ಮ ಹದಮಾಡುವವರೆಗೆ ಎಲ್ಲವೂ ಒಂದೇ. ಇಂಥ ಅಮೂಲ್ಯ ಕಾಯಕ ತತ್ತ್ವವನ್ನು ಸಾರಿದ ಹಿರಿಮೆ ಶಿವಶರಣರಿಗೆ ಸಲ್ಲುತ್ತದೆ. ಪರಧನ, ಪರಸ್ತ್ರೀಯರನೊಲ್ಲೆನೆಂಬ ಶರಣರು ಇನ್ನು ಪರಾನ್ನಕ್ಕೆ ಕೈವಡ್ಡಾರೇ ? ಅವರ ದೃಷ್ಟಿಯಲ್ಲಿ ಭಿಕ್ಷೆ ಬೇಡುವುದು ಮಹಾಪಾಪ. ಮೋಳಿಗೆ ಮಾರಯ್ಯ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ ಮುಂತಾದ ಹೆಸರುಗಳಿಂದಲೇ ಕಾಯಕಕ್ಕೆ ಅವರು ಕೊಟ್ಟಿದ್ದ ಸ್ಥಾನಮಾನಗಳನ್ನು ಊಹಿಸಬಹುದು. ಪ್ರತಿಯೊಬ್ಬ ಶರಣನೂ ಯಾವುದೋ ಒಂದು ಕಾಯಕದಿಂದ ಅಂದಂದಿನ ಅನ್ನವನಾರ್ಜಿಸಿ ಲಿಂಗ ಜಂಗಮಕ್ಕರ್ಪಿಸಿ ಪ್ರಸಾದವನ್ನು ಸಂತೋಷದಿಂದ ಸ್ವೀಕರಿಸಿ ನಿತ್ಯತೃಪ್ತಿಯಿಂದ ಬಾಳುತ್ತಿದ್ದನೆಂದು ತಿಳಿಯುತ್ತೇವೆ. ತನ್ನಲ್ಲಿ ಯಾವ ಬಗೆಯ ಕಲೆಯೇ ಇರಲಿ, ಕ್ರಿಯಾಶಕ್ತಿಯೇ ಇರಲಿ ಅದನ್ನೇ ತನ್ನ ಕಾಯಕವನ್ನಾಗಿ ಕೈಗೊಳ್ಳುವುದನ್ನು ಕಾಣುತ್ತೇವೆ- ಈ ಮುಂತಾಗಿ ಶ್ರೀ ಜ. ಚ. ನಿ. ಅವರು ಕಾಯಕದ ನೆಲೆಬೆಲೆಗಳನ್ನು ವಿವರಿಸುತ್ತಾರೆ.

ಇಂಥ ಅಮೂಲ್ಯ ತತ್ತ್ವವನ್ನು ಕಡೆಗಣಿಸಿರುವ ಇಂದಿನ ನವನಾಗರೀಕ ಜನಾಂಗವನ್ನು ಶ್ರೀ ಅವರು ಕಳಕಳಿಯಿಂದ ಎಚ್ಚರಿಸುತ್ತಾರೆ. ಜನರಲ್ಲಿ ಶಾಂತಿ ದಾಂತಿಗಳು ಮೂಡಬೇಕಾದರೆ ದುರಾಶೆ ದುರಾಚಾರಗಳು ಅಳಿಯಬೇಕಾದರೆ, ನಿರುದ್ಯೋಗ ಪೈಪೋಟಿ ಹೋಗಬೇಕಾದರೆ, ದೈಹಿಕ ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳಬೇಕಾದರೆ ಇಂದಿನ ಜನಾಂಗ ಕಾಯಕದ ಜ್ಯೋತಿಯನ್ನು ಅನುಸರಿಸದೇ ಗತ್ಯಂತರವಿಲ್ಲವೆನ್ನುತ್ತಾರೆ. ಸ್ವಧರ್ಮದಂತೆಯೇ ಸ್ವಕರ್ಮವೂ ಎಲ್ಲಕ್ಕೂ ಶ್ರೇಯವಾದುದು ಎಂದು ಸಾರುತ್ತಾರೆ. "ಮರ್ತ್ಯಲೋಕವು ಕರ್ತಾರನ ಕಮ್ಮಟವಯ್ಯ". "ಕಾಯಕವೇ ಕೈಲಾಸ" ಈ ನುಡಿಗಟ್ಟುಗಳ ಅರ್ಥವಿಶ್ಲೇಷಣೆಯನ್ನು ಮನೋಜ್ಞವಾಗಿ ಮಾಡಿದ್ದಾರೆ.

ಶ್ರೀ ಜ. ಚ. ನಿ. ಅವರ ಬರವಣಿಗೆ ಶಕ್ತಿಯುತವಾದದ್ದು. ಅವರ ಶಬ್ದ ಸಂಪತ್ತಿ ಅಪಾರ. ಅವರ ಬರವಣಿಗೆ ಈ ಗ್ರಂಥದಲ್ಲಂತೂ ಮಳೆಗಾಲದ ಮಹಾಪೂರದಂತೆ ಹರಿಯುತ್ತದೆ.

ಈ ಕೃತಿಯ ವಸ್ತು ಸುಂದರವಾಗಿ ನಿರೂಪಿತವಾಗಿದೆ. ಕಾಯಕದ ಹಿರಿಮೆಯನ್ನು ಕೊಂಡಾಡುವ ಕನ್ನಡ ಗ್ರಂಥಗಳಲ್ಲಿ ಬಹುಶಃ ಇದೇ ಮೊದಲಿನದು. ಅಂದ ಮೇಲೆ ಈ ಗ್ರಂಥ ತುಂಬಾ ಅಗತ್ಯವಾದದ್ದು. ಗ್ರಂಥಾಂತ್ಯದಲ್ಲಿ ಕಲೆ ಹಾಕಿರುವ ಕಾಯಕ ವಚನಗಳು ಅಮೂಲ್ಯವಾದವುಗಳು. ಇದನ್ನು ರಚಿಸಿದ ಶ್ರೀ ಜ. ಚ. ನಿ. ಅವರು ಅಭಿನಂದನಾರ್ಹರು.

ಬೆಂಗಳೂರು ಬಾನುಲಿ
೬-೫-೬೩

---

# ಅವರ ಕೃತಿ ಸಂಸ್ಕಾರದ ಬಗೆಗೆ

೧

ಶ್ರೀ ಶ್ರೀ ಜ. ಚ. ನಿ. ಯವರು ತಮ್ಮ ಹಲವಾರು ಆಧ್ಯಾತ್ಮಿಕ ಗ್ರಂಥಗಳಿಂದ ಕನ್ನಡ ಸಾಹಿತ್ಯ ಭಂಡಾರವನ್ನು ತುಂಬುತ್ತಿದ್ದಾರೆ. ಪ್ರಸ್ತುತ ಗ್ರಂಥ ಅವರ ಆತ್ಮ ಚಿಂತನೆಯ, ವಿಚಾರ ಮಂಥನದ ಅಪೂರ್ವ ಫಲ. ಮಾನವನ ಜೀವಿತದಲ್ಲಿ ಸಂಸ್ಕಾರದ ಸ್ಥಾನ ಅದ್ವಿತೀಯವಾದುದು. ಚೇತನ ಸುಸಂಸ್ಕೃತವಾಗಬೇಕಾದರೆ ಹಲವಾರು ವಿಧವಾದ ಸಂಸ್ಕಾರಕ್ಕೆ ಅದು ಒಳಗಾಗಬೇಕಾಗುತ್ತದೆ. ಆಗಲೇ ಅದರ ಜನ್ಮ ಸಾಫಲ್ಯ. ಪ್ರಕೃತಿಯ ಎಲ್ಲ ಜೀವಿಗಳಲ್ಲೂ ಈ ಸಂಸ್ಕಾರ ಒಂದಿಲ್ಲೊಂದು ರೂಪದಲ್ಲಿ ಕಾಣಬರುತ್ತದೆ. ಸಂಸ್ಕಾರದಿಂದಲೇ ಹರಿಯುವ ಜೀವಿ ಹಾರುವ ಜೀವಿಯಾಗಿ ಪರಿಣಮಿಸಿದೆ. ಸಂಸ್ಕಾರದಿಂದಲೇ ಕಗ್ಗಲ್ಲು ದಿವ್ಯ ಮಂಗಳ ವಿಗ್ರಹವಾಗಿ ಪರಿಣಮಿಸುತ್ತದೆ. ವಿಶ್ವ ಜೀವನದಲ್ಲಿ ಅರಾಜಕತೆ ಅಳಿಯಬೇಕಾದರೆ ಈ ಸಂಸ್ಕಾರ ಅತ್ಯಗತ್ಯ. Culture and Anarchy ಎಂಬ ಗ್ರಂಥದಲ್ಲಿ ಮ್ಯಾಥ್ಯೂ ಆರ್ನಾಲ್ಡನು ಇದೇ ಸಂಸ್ಕಾರ ತತ್ತ್ವವನ್ನು ಪ್ರತಿಪಾದಿಸಿ "ಸಂಸ್ಕೃತಿ"ಯೆಂದರೆ ಲೈಟ್ ಅಂಡ್ ಸ್ವೀಟ್‌ನೆಸ್ - ಅದಿಲ್ಲದಿದ್ದರೆ ಜಗತ್ತಿನಲ್ಲಿ ಅನಾಯಕತ್ವವುಂಟಾಗುತ್ತದೆ ಎಂದು ಸಾರಿದ್ದಾನೆ. ಭಾರತೀಯ ಭಾವನಾ ಭೂಮಿಕೆಯಲ್ಲಿ ಇದೇ ತತ್ತ್ವವನ್ನು ಶ್ರೀ ಶ್ರೀಯವರು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಅವರ ಲಲಿತವಾದ ಶೈಲಿ ಯಾರನ್ನೂ ಮುಗ್ಧಗೊಳಿಸುವಂತಹದು. ಪುಸ್ತಕವನ್ನು ಓದುತ್ತ ಹೋದಂತೆಲ್ಲ ಸಂಸ್ಕಾರದ ಸುಸ್ಪರ್ಶದಿಂದ ಓದುಗನ ಮನೋನ್ಮೇಷವಾಗುತ್ತದೆ. ಶ್ರೀಗಳ ಶೈಲಿಯಲ್ಲಿ ಒಂದೆಡೆ ವಿಚಾರ ವೈಭವ ಕಂಡರೆ, ಮತ್ತೊಂದೆಡೆ ಭಾವುಕತೆಯ ರಸಮಂದಾಕಿನಿ ಓದುಗರನ್ನು ರಸಾದ್ರ್ರರನ್ನಾಗಿ ಮಾಡುತ್ತದೆ. ಆಕರ್ಷಕವಾದ ರಕ್ಷಾಕವಚ, ಸುಂದರವಾದ ಮುದ್ರಣ ಪುಸ್ತಕದ ಸೌಂದರ್ಯವನ್ನು ಹೆಚ್ಚಿಸಿವೆ. ಸುಸಂಸ್ಕೃತರಾಗಬೇಕೆಂದು ಬಯಸುವವರೆಲ್ಲರೂ ಓದಬೇಕಾದ ಗ್ರಂಥ ಇದು

— ಪ್ರಜಾಮತ, ೨೭-೧೨-೫೯

೨

ಶಿಲ್ಪಿಯ ಸೃಷ್ಟಿ ಸೌಂದರ್ಯ, ಭಕ್ತರ ಭಾವ,ಬಾಂಧವ್ಯ ಇವೆರಡೂ ಬೆರೆಯ ದಿದ್ದರೆ ಕಾಶಿಯ ವಿಶ್ವನಾಥ ಕಾಡುಕಲ್ಲಾಗಿಯೇ ಉಳಿಯುತ್ತಿದ್ದನೋ ಏನೋ ? ಆದರೆ ಸೃಷ್ಟಿಯ ದೃಷ್ಟಿ ಅದಾಗಿರಲಿಲ್ಲ. ಶಿಲ್ಪಿ ಕೊಟ್ಟ ಬಹಿರಂಗ ಸೌಂದರ್ಯ, ಭಕ್ತರಿತ್ತ ಅಂತರಂಗ ಬಾಂಧವ್ಯಗಳೆರಡನ್ನೂ ಮಿಲನಗೊಳಿಸಿ 'ಸಂಸ್ಕಾರ'ದ ಕೃಷಿ ನಡೆಸಿ ಶಿಲೆಯನ್ನು ಶಿಲ್ಪವಾಗಿಸಿತು ; ಶಿಲ್ಪವನ್ನು ಶಿವವಾಗಿಸಿತು.

ಜಡದಲ್ಲಿ ಅಡಗಿರುವ ಚೇತನವು ಸಂಸ್ಕಾರದ ಸ್ಪರ್ಶದಿಂದ ಶಿವರೂಪವಾಗುವಾಗ ಪೂರ್ಣ ಚೇತನಸ್ವರೂಪಿಯಾಗಿರುವ ದೇಹಿ ದೇವನಾಗನೇ ?........ಎಂಬ ಪ್ರಶ್ನೆಗೆ ಸಂಪೂರ್ಣ ಉತ್ತರ ದೊರೆತಿದೆ ಈ ಗ್ರಂಥದಲ್ಲಿ.

ಜಗದ್ಗುರುಗಳು ಈ ಮೂಲಕ ಸಾಧಕರಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯ ಲೋಕಕ್ಕೂ ಸಂಸ್ಕಾರದ ಸ್ಪರ್ಶಮಾಡಿದ್ದಾರೆ. ಅದಕ್ಕೆ ನಾಡು ಋಣಿ. ಶ್ರೀಗಳವರ ಅಮೃತ ವಾಣಿಯೊಂದು ಹಿರಿಹೊನಲು. ಆ ಹೊನಲು ಹರಿದ ಶಿಷ್ಯನ ಜನ್ಮಭೂಮಿ ಪಾವನ !

ಸಂಸ್ಕಾರ, ನೀನೊಂದು ಚಮತ್ಕಾರ. ನಿನಗಿದೋ ನಮಸ್ಕಾರ !

— ಗೊ. ರು. ಚನ್ನಬಸವಪ್ಪ



೩

ಸನ್ನಿಧಿಯವರಿಂದ ರಚಿತವಾದ ಹಾಗೂ ಪ್ರಕಟಿತವಾದ 'ಸಂಸ್ಕಾರ' ವೆಂಬ ದಿವ್ಯವಾದ, ಅನರ್ಘ್ಯವಾದ, ಕಮನೀಯವಾದ, ಚಿತ್ತಾಕರ್ಷಕವಾದ, ಇನಿದಾದ, ರಸವತ್ತಾದ, ಪಾಠಕರಿಗೆ ಓದಬದತ್ತಲೆ ನೇರವಾಗಿ ಅವರ ಎದೆಗೆ ಎರಕವಾಗುವ ಸಮಂಜಸವೂ, ಯುಕ್ತಿಯುಕ್ತವೂ ಆ ಓದುಗರನ್ನು ಸಹೃದಯರನ್ನಾಗಿಸಿ ತನ್ನತ್ತ ಸೆಳೆಯಲು ಸಮರ್ಥವಾದ, ಸ್ಪೃಹಣೀಯವಾದ, ನಿಜವಾಗಿಯೂ ಅಮೃತಮಯ ವಾದ, ಅಷ್ಟೇ ಏಕೆ ಮನಃಶಾಸ್ತ್ರೀಯವಾಗಿ ಪ್ರಚೋದಕವಾಗಿ, ಉದ್ಬೋಧಕವಾಗಿ ರಸಾಲ ವಾಗ್ವಾಣಿಯಿಂದ ಹಿತಮಿತವಾಗಿ ಮೂಡಿಬಂದಿರುವ ಅಮರಕೃತಿಯನ್ನು ನಾನು ಮನದ ಣಿಯೆ ಆಸ್ವಾದಿಸಿ ತಣಿದೂಗಿ (ಬರೆದ ಮಹನೀಯರು ಒತ್ತಟ್ಟಿಗೆ ಶಿವಾನಂದಪರರಾಗಿ ರಲಿ)ನಾನು ನಲಿ-ನಲಿದು ಸೈಪುವಳಿದು ಆ ಆನಂದವನ್ನು ಶಿವಾರ್ಪಣ ಮಾಡಿ ಹಿಗ್ಗಾಗಿದೆ

ಮಹಾರುದ್ರಪ್ಪಾ ಮಹಾಲಿಂಗಪ್ಪಾ ಮಿರ್ಜಿ, ಹುಬ್ಬಳ್ಳಿ

## ‘ ದೇವದೃಷ್ಟಿ ’ ಯ ಬಗೆ

ಶ್ರೀ ಕೆ. ವೆಂಕಟರಾಯಾಚಾರ್ಯರು.



“ದೇವರ ವಿಷಯದಲ್ಲಿ ಇದೊಂದು ಹೊಸ ಬಗೆಯ ದೃಷ್ಟಿ. ದೃಷ್ಟಿ ಬಹು ಪುರಾತನವಾದರೂ ನೋಡಿದ ಬಗೆ–ಅದರಲ್ಲಿಯೂ ಎಲ್ಲ ಬೆಳಗುಗಳಲ್ಲಿ ಹಂತ ಹಂತವಾಗಿ ಹಬ್ಬಿ ಬಂದ ದೇವತ್ವದ ದೃಷ್ಟಿಯನ್ನು ವೇದಯುಗದಿಂದ ಆಧುನಿಕ ಯುಗದವರೆಗೂ ಚೆಲ್ಲಿದ ಬಗೆ ಹೊಸದು. ಇಂದಿನ ದಿನಮಾನದಲ್ಲಿ ಇಂತಹ ದೃಷ್ಟಿ ಅವಶ್ಯಕವೆಂದು ಹೇಳುವುದಾದರೆ ಈ ಶ್ರಮ ಸಾರ್ಥಕ ”.

ಶ್ರೀ ಜ. ಚ. ನಿ. ಅವರ ‘ ದೇವ ದೃಷ್ಟಿ ’

ಇಂದಿನ ಯುಗದಲ್ಲಿ–ಜೀವನದಲ್ಲಿ ಭೌತಿಕ ಸುಖದರ್ಶನ ಮಾತ್ರವೇ ಅವಶ್ಯವೆಂದು ಹೇಳುವವರಿದ್ದಾರೆ. ಅದಕ್ಕಿಂತ ಹೆಚ್ಚಿನ ಆಧ್ಯಾತ್ಮಿಕ ದಿವ್ಯದರ್ಶನವು ಇಹ-ಪರಗಳ ಸುಖಸಾಧನವೆಂದು ಹೇಳುವುದು ಚೆನ್ನು ! ಈ ಬಗೆಯಿಂದ, ಇಂದಿನ ದಿನಮಾನದಲ್ಲಿ ಇಂತಹ ‘ದೇವ ದೃಷ್ಟಿ’ ಅವಶ್ಯಕವೆಂದೂ, ಈ ಶ್ರಮ ಸಾರ್ಥಕವೆಂದೂ ಹೇಳಲಡ್ಡಿಯಿಲ್ಲ ! ಪ್ರಸ್ತುತ ಈ ಗ್ರಂಥದ ಬಗೆಗೆ ಒಂದು ಚಿಕ್ಕ ಇಣಿಕು ನೋಟದ ಬಯಕೆಯಿಂದ ; ಇದು ಪೂರ್ಣ ವಿಮರ್ಶೆಯೆಂದಾಗಲಿ, ಇಡಿಯ ಸಂಗ್ರಹವೆಂದಾಗಲಿ ಭಾವಿಸುವಂತಿಲ್ಲ ; ಓದುಗರಿಗೆ ಹೇಳಿದ ಒಂದು [illegible] ನಿವೇದಿಸುವೆನು.

“ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾಃ ” ಎಂದು ದೇವತ್ವದ ಕಾರಣವೇನೆಂಬುದಕ್ಕೆ ಹೇಳಿದ ಉಪನಿಷದ್ವಾಕ್ಯವನ್ನು ವಿವರಿಸಿ, ಇವು ಕಾರಣಗಳಾಗವೆಂದು ಪ್ರತ್ಯೇಕಶಃ ವಿವೇಚಿಸಿ, ‘ ಪುರುಷ ’ ವೆಂಬುದರ ವಿಶೇಷಾರ್ಥವೇ ಇಲ್ಲಿ ಕಾರಣವಾಗಿ ಪರಿಗ್ರಹಣೀಯವೆಂದುದು ಶಾಸ್ತ್ರೀಯವಾಗಿದೆ.[1]

1. “ದೇವದೃಷ್ಟಿ” ಪುಟ ೩-೪

ದೇವಪದವಾಚ್ಯಗಳೆಂದರೆ ಅಗ್ನಿ-ಚಂದ್ರ-ಸೂರ್ಯರು, ಆತ್ಮ-ಅಂತರಾತ್ಮ-ಪರಮಾತ್ಮರೆಂದು ಸೂಚಿಸಿ[1] ಇವನ್ನು ಕುರಿತು ಪ್ರತ್ಯೇಕತಃ ಒಂದೊಂದು ಅಧ್ಯಾಯವನ್ನೇ ಬರೆದಿದೆ. ಇದರ 'ಭೂಮಿಕೆ'ಯ ಕೊನೆಯಲ್ಲಿ ಹೇಳಿದೆ: "ಜ್ಯೋತಿರೂಪ ದೇವನಿಗೂ ಜೀವನಿಗೂ ನಿಕಟ ಸಂಬಂಧವಿದೆಯೆಂಬುದನ್ನು ಜ್ಯೋತಿಷ ಶಾಸ್ತ್ರವು ಚೆನ್ನಾಗಿ ತಿಳಿಸುತ್ತದೆ. ನವಗ್ರಹಗಳೆನಿಸುವ ಜ್ಯೋತಿರ್ಮಂಡಲಗಳೂ ಇಪ್ಪತ್ತೇಳು ನಕ್ಷತ್ರಗಳೂ ಮಾನವ ಜೀವನದ ಮೇಲೆ ಬೀರಿದ ಪ್ರಭಾವ ಇಷ್ಟಿಷ್ಟಲ್ಲ. ಮಾನವ ಜೀವನದಲ್ಲಿ ಜ್ಯೋತಿಷ್ಯ ಅದೊಂದು ದೈವೀಸಂಪತ್ತಾಗಿ ನಿಂತಿದೆ. ಜ್ಯೋತಿರ್ಮಂಡಲಗಳಿಂದಲೇ ಮಾನವನ ಶುಭಾಶುಭಗಳು, ಆಗುಹೋಗುಗಳು ನಿಶ್ಚಯಿಸಲ್ಪಡುತ್ತಿವೆ. ಜ್ಯೋತಿಯ ಪರಿಣಾಮವೇ ಜೀವ ಎಂಬುದನ್ನು ನಾವು ಸುಲಭವಾಗಿ ಜ್ಯೋತಿಷ್ಯ ಶಾಸ್ತ್ರದ ವಿಮರ್ಶೆಯಿಂದ ಅರಿಯಬಹುದಾಗಿದೆ. ಜ್ಯೋತಿಯಲ್ಲಿ ದೇವತ್ವ ದೃಷ್ಟಿ ಹುಟ್ಟಿ ಬೆಳೆದುಬಂದುದಕ್ಕೆ ಜ್ಯೋತಿಷ್ಯವೂ ಒಂದು ಸಾಕ್ಷಿಯಾಗಿದೆ".[2]

ಈ ಬಗೆ ಬೇರೆಡೆ ವಿವರಿಸಲ್ಪಟ್ಟಿದೆ:

"ಶರೀರೇ ದೇವತಾ ವಿದ್ಯಾದ್ಗ್ರಹಾಃ ಸೂರ್ಯಾದಯೋ ನವ ।
ಅಗ್ನ್ಯಾದಿ ಮೂರ್ತಯಸ್ತ್ವೇತೇ ಗ್ರಹಾಃ ಸೂರ್ಯಾದಯೋಽಖಿಲಾಃ
ನಿವಸಂತಿ ಯತಸ್ತಸ್ಮಾತ್ ವಿಕುರ್ವಂತಿ ಶರೀರಿಷು ॥"[3]

ಆಧುನಿಕ ಯುಗದಲ್ಲೂ ಗ್ರಹಣಾದಿ ವಿಚಾರಗಳನ್ನು ಮುಂದಾಗಿ ತಿಳಿಸುವ ಜ್ಯೋತಿಷಶಾಸ್ತ್ರವು ಪಾಶ್ಚಾತ್ಯರಿಂದಲೂ ಪರಿಗ್ರಹಣೀಯವಾಗಿದೆ. ಅರ್ಥಾತ್, ಈ ಪ್ರತ್ಯಕ್ಷವಿಚಾರಗಳಂತೆ, ಪರೋಕ್ಷವಿಚಾರಗಳೂ ಸಮಾದರಣೀಯಗಳಾಗಿವೆ. ಇವೆಲ್ಲಾ ಭಾರತೀಯ ಗ್ರಂಥಗಳಲ್ಲಿ ತಾನೇ ಮುಂದಾಗಿ ವಿವರಿಸಿವೆ. ಇವನ್ನು ಸಂಗ್ರಹಿಸುವ ಮನನಿಸುವ-ವ್ಯವಸಾಯಕ್ಕೆ 'ದೇವದೃಷ್ಟಿ'ಯೆಂಬ ಈ ಸತ್ಕೃತಿಯು ಮಾರ್ಗದರ್ಶಕವಾಗಿದೆ.

'ಅಗ್ನಿದೇವ'ನೆಂಬ ಅಧ್ಯಾಯದಲ್ಲಿ[4] ಅಗ್ನಿಯ ಹುಟ್ಟು, ಬಗೆ, ಆವಶ್ಯಕತೆ ಇತ್ಯಾದಿ ಹೇಳಿದೆ. ಇಲ್ಲಿ ಕೇವಲ ಗ್ರಾಂಥಿಕವಾಗಿ ಮಾತ್ರವಲ್ಲ; ಐತಿಹಾಸಿಕವಾಗಿ ಚರ್ಚಿಸಿ ಈ ವಿಚಾರಕ್ಕೆ ಪುಷ್ಟಿಗೊಟ್ಟಿದೆ: "ಮಾನವನ ನಾಗರಿಕತೆಯೂ ಮೊದಲಾದುದು ಅಗ್ನಿಯಿಂದ........"[5]

'ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್' ಈ ಐತರೇಯೋಪನಿಷತ್ತಿನ ವಾಣಿಯಂತೆ ಅಗ್ನಿಯು ನಮ್ಮಲ್ಲಿ ಬರಿ ಜಠರಾಗ್ನಿ ಮಾತ್ರವಾಗಿ ನೆಲಸಿಲ್ಲ, ವಾಣಿಯಾಗಿಯೂ ವಾಸಿಸಿದೆ. ಚತುರ್ವಿಧವಾಣಿಯಾಗಿ ಚತುರ್ವೇದಮಯವಾಗಿದೆ ಎಂದು ಹೇಳಿದೆ.[6] ಇದಕ್ಕೆ ಅನುಗುಣವಾಗಿ ಇತರತ್ರ ಹೇಳಿದೆ:

---

1. ದೇವದೃಷ್ಟಿ ಪುಟ ೯
2. ಅದೇ ಪುಟ ೧೦
3. ಆಶ್ವಲಾಯನಸ್ಮೃತಿ, ೪-೧೬೨-೧೬೯.
4. ದೇವದೃಷ್ಟಿ ಪುಟ ೧೧-೪೪
5. ಅದೇ ಪುಟ ೧೨-೧೩
6. ಅದೇ ಪುಟ ೧೬

"ಆತ್ಮಾವಿವಕ್ಷಮಾಣೋಽಯಂ ಮನಃ ಪ್ರೇರಯತೇ ಮನಃ ।
ದೇಹಸ್ಥಂ ವಹ್ನಿಮಾಹಂತಿ ಸ ಪ್ರೇರಯತೇ ಮಾರುತಂ ।
ಬ್ರಹ್ಮಗ್ರಂಥಿಸ್ಥಿತಃ ಸೋಽಥ ಕ್ರಮಾದೂರ್ಧ್ವಪತೇ ಚರನ್ ।
ನಾಭಿಹೃತ್ಕಂಠಮೂರ್ಧಾಸ್ಯೇ ಷ್ವಾವಿರ್ಭಾವಯತಿ ಧ್ವನಿಂ ।"[1]

"ವೈಖರೀ ಶಬ್ದನಿಷ್ಪತ್ತಿರ್ಮಧ್ಯಮಾ ಶ್ರುತಿಗೋಚರಾ ।
ದ್ಯೋತಿತಾರ್ಥಾಚ ಪಶ್ಯಂತೀ ಸೂಕ್ಷ್ಮಾವಾಗನಪಾಯಿನೀ ।"

ಈ ಪ್ರಾಚೀನ ವಾಕ್ಯಗಳಲ್ಲಿ ಧ್ವನಿ ಜನನಕ್ಕೇ (ವಾಣಿಯ ಸ್ಫುರಣೆಗೆ) ಅಗ್ನಿಯ ಸಹಾಯಕತೆಯೂ, ಧ್ವನಿಯ ಚತುರ್ವಿಧಗಳೂ ಹೇಳಿವೆ.

ನಿವೃತ್ತಿ ಮಾರ್ಗದ ವಿವರಣೆಯಲ್ಲಿ 'ವಾಙ್ಮನಸಿ ಸಂಪದ್ಯತೇ' ಎಂಬ ಪ್ರಾಚೀನ ವಾಣಿಯ ಉದಾಹರಣದೊಂದಿಗೆ, 'ಗತ ಪ್ರಾಣರಾಗುವವರಲ್ಲಿ ಕಂಡ ಇದು ಅನುಭವಕ್ಕೆ ಬಂದ ಮಾತಾಗಿದೆ'[2]ಯೆಂಬ ಸೂಚನೆ ಮಾರ್ಮಿಕವೂ ಶ್ರುತ ದೃಷ್ಟ ಸತ್ಯಾರ್ಥವೂ ಆಗಿದೆ. ಅಗ್ನಿಯ ವಿಚಾರವೆಂದರೆ 'ಸೃಷ್ಟಿಗೆ ದೃಷ್ಟಿರೂಪದಲ್ಲಿ ಮಿಂಚಿನ ಸಂಚಿನಲ್ಲಿ ಸೊಬಗನ್ನು ತರುತ್ತಾನೆ. ತಂಪನ್ನು ತರುತ್ತಾನೆ'[3]ದುದು ಅನುಭೂತ ವಿಚಾರವಾಗಿದೆ. 'ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತಿ'[4] ಎಂಬುದು ಇದನ್ನು ಸಮರ್ಥಿಸುತ್ತದೆ.

'ಯಸ್ತ್ವಾಮಗ್ನೇ ಹವಿಷ್ಪತಿರ್ದೂತಂ ದೇವ ಸಪರ್ಯತಿ' ಎಂಬಲ್ಲಿಗೆ[5] ಕಾಕ ಧ್ವನಿಯು—ಈ ಮಂತ್ರದಲ್ಲಿ ಈ ಪ್ರಾರ್ಥನೆಯಲ್ಲಿ ಬರುವ ದೇವ—ದೂತ ಪದಗಳನ್ನು ಗಮನಿಸಬೇಕು. ಅಗ್ನಿಯು ಆರಾಧಕನಿಗೆ ದೇವನಾದರೂ ಆ ಪರಂಜ್ಯೋತಿಗೆ ದೂತನಾಗಿದ್ದಾನೆ. ಸ್ವರ್ಗೀಯ ದೇವತೆಗಳಿಗೇನೆ ದೂತನಾಗಿರುವಾಗ ಆ ಪರಂಜ್ಯೋತಿಗೆ ಆಗನೆ?" ಎಂಬ ವಿವರಣೆಯು—ಸಾಧುವಾಗಿದೆ[6]. 'ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ' ಎಂಬ ಶ್ರುತಿಯು ಇದನ್ನೇ ಹೇಳುತ್ತದೆ.

ಪಂಚಾಗ್ನಿ ವಿದ್ಯೆಯ ವಿವರಣೆಯಲ್ಲಿ 'ಈ ಬಗೆಯಾದ ದ್ಯುಲೋಕಾಗ್ನಿಯಲ್ಲಿ ಆತ್ಮರು ಹವನ ಮಾಡುವ ದ್ರವ್ಯವೆಂದರೆ ಶ್ರದ್ಧೆ'ಯೆಂದು, ಪರ್ಜನ್ಯಾಗ್ನಿಯ ಸೇವೆಯೆಂದರೆ 'ಭಕ್ತಿಯಲ್ಲಿ ಶಿವಭಾವವನ್ನುಂಟು ಮಾಡಿಕೊಳ್ಳುವುದೆಂ'ದು ಮೊದಲಾಗಿ ಫಲ

---

1. ಸಾರಂಗ ದೇವಕೃತ ಸಂಗೀತ ರತ್ನಾಕರ, ೨-೩-೪
2. ದೇವದೃಷ್ಟಿ ಪು. ೧೬
3. ಅದೇ ಪು. ೨೪
4. ಮನುಸ್ಮೃತಿ ೩-೭೬
5. ದೇವದೃಷ್ಟಿ ಪು. ೨೫
6. ಅದೇ ಪು. ೩೦

ದ್ರೂಪ-ತಾತ್ತ್ವಿಕಸಾರಗಳನ್ನು ಹೇಳಿರುವುದು[1] ಅನ್ಯಾದೃಶವಾಗಿದೆ. 'ಯೋಷಾಗ್ನಿ'ಯ ವಿವರಣೆಗೆ[2] 'ಅಗ್ನಿರ್ವೈ ದಾರಾಃ' ಎಂಬ ಪ್ರಾಚೀನವಾಣಿ ಸಮಾಕರಿಸಬಹುದು.

'ಇಂದಿನದು ಅಣುಯುಗ'ವೆಂದು ತೊಡಗಿದ ಪ್ರಕರಣದಲ್ಲಿ[3] ಜಾಗತಿಕ ಕ್ರಾಂತಿಕಾರಕತ್ವಕ್ಕೆ ನೀತಿಯಿದೆ. 'ಅಗ್ನಿಯೆಂದರೆ ಪಾರಿಭಾಷಿಕ ಅರ್ಥವೊಂದುಂಟು. ಅಗ್ನಿಯೆಂದರೆ ಅತಿಥಿಯೆಂದರ್ಥ'[4] ವೆಂದು 'ನಾಚಿಕೇತಾಗ್ನಿ'ಯನ್ನು ಉದಾಹರಿಸಿದದು ಚೆನ್ನು. ಪ್ರತಿಯೊಬ್ಬನು ಅನುಸರಿಸತಕ್ಕ ಅತಿಥಿ ಸತ್ಕಾರಕ್ಕೆ ಇದು ಪ್ರೇರಕವಾಗಿದೆ. 'ಅತಿಥಿದೇವೋಭವ'[5]ಎಂದು ಉಪನಿಷದ್ವಾಣಿಯೂ ಇದೆ.

ಸೋಮದೇವ, ಸೂರ್ಯದೇವ ಎಂಬೆರಡು ಅಧ್ಯಾಯಗಳಲ್ಲಿ ಅನೇಕ ವಿಚಾರಾಂಶಗಳಿವೆ. 'ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋ ಅಜಾಯತ ಮುಖಾದಿಂದ್ರಶ್ಚಾಗ್ನಿಶ್ಚ....'[6] ಎಂದು ಮೂರು ತೇಜಸ್ಸುಗಳ ಉತ್ಪತ್ತಿ ಹೇಳಿದೆ. ಚಂದ್ರನು ದೇವನ ಮನೋಜನ್ಯ, ಸರ್ವೆಲ್ಲರ ಮನೋಭಿಮಾನಿ. ಚಂದ್ರನು ಸಂಚರಿಸುವ ಯಾವ ನಕ್ಷತ್ರದಲ್ಲಿ ಜೀವಿಯು ಹುಟ್ಟಿದನೆಂದು ಗುರುತಿಸಿ (ಲೆಕ್ಕಿಸಿ) ಜೀವಿಯ ಭವಿಷ್ಯ ಫಲವನ್ನು ಜ್ಯೋತಿಷ್ಯವು ನಿರೂಪಿಸುತ್ತದೆ. ಪ್ರತಿಯೊಬ್ಬನ ಒಳಗಣ್ಣು (ಬುದ್ಧಿ) ಮತ್ತು ಹೊರಗಣ್ಣು (ಚರ್ಮಚಕ್ಷು) ಬೆಳಗಲು ಸೂರ್ಯನು ಅವಶ್ಯವೆಂದು ಗಾಯತ್ರೀ ಮಂತ್ರದಲ್ಲಿ ಹೇಳಿದೆ: 'ಧಿಯೋ ಯೋ ನಃ ಪ್ರಚೋದಯಾತ್'[7] ಮುಖವೇ ಜೀವಿಯ ದೇವನ ಮುಖ್ಯಾಂಗ. ಅದರಿಂದ ಅಗ್ನಿಯ ಜನನವಾಯಿತೆಂದರೆ ಮಾತು ಮತ್ತು ಆಹಾರಗಳಿಗೆ ಅಗ್ನಿಯೇ ಮೂಲಕಾರಣನೆಂದು ಅರ್ಥ. ಈ ಬಗೆಗಳು ಇಲ್ಲಿ ಪ್ರತ್ಯೇಕಶಃ ಸಾಧಾರವಾಗಿ ವಿವರಿಸಲಾಗಿವೆ. ಚಂದ್ರನ ಬಗೆಗಳನ್ನು ಕುರಿತು ಭಾರತೀಯ ವಿಚಾರಗಳೊಂದಿಗೆ ಪಾಶ್ಚಾತ್ಯವಿವರಣಗಳಿಲ್ಲವೆ! ಚಂದ್ರನ ಬಗೆಗೆ ಹೇಳಿದವು:

"ಚಂದ್ರನೊಡನೆ ಘರ್ಷಣೆಯಾದರೆ ಜಗತ್ತಿನ ವಿನಾಶವುಂಟಾದೀತೆಂದು ಹೇಳುತ್ತಾರೆ. ಸೂರ್ಯ ಮಂಡಲದ ಘಟನೆಗಳ ಪರಿಣಾಮವಾಗಿ ಚಂದ್ರಮಂಡಲದ ಘಟನೆಗಳ ಪರಿಣಾಮವಾಗಿ ಚಂದ್ರಮಂಡಲದಲ್ಲಿ ನಾಲ್ಕು ಸೆಕೆಂಡುಗಳಿಗೊಮ್ಮೆ ಕಂಪನ

---

1. ದೇವದೃಷ್ಟಿ ಪು. ೩೭
2. ಅದೇ ಪು. ೩೨
3. ಅದೇ. ಪು. ೪೧
4. ಕೈ. ಉ. ೧-೧೧-೨
5. ಋಗ್ವೇದ
6. ಋಗ್ವೇದ

ವುಂಟಾಗುತ್ತದೆ ........... ಪ್ರಾಣಿಗಳ ಉಚ್ಛ್ವಾಸ-ನಿಶ್ವಾಸಗಳಿಗೆ ಇದೇ ಮುಖ್ಯ ಆಧಾರ........".[1] "ಚಂದ್ರಗ್ರಹದ ವ್ಯಾಸ ಅಥವಾ ಅಡ್ಡಳತೆ ೨೧೬೦ ಮೈಲುಗಳೆಂದು ವಿಜ್ಞಾನಿಗಳು ಹೇಳುತ್ತಾರೆ. ಚಂದ್ರನ ಸುತ್ತಲೂ ಕಣಗಟ್ಟಿದರೆ ಅದನ್ನು ಮಳೆಯ ಸೂಚನೆಯೆಂದು ಬಗೆಯುತ್ತಾರೆ........"[2] "ಚಂದ್ರನ ತೂಕ ೭೮ ಮಿಲಿಯ, ಮಿಲಿಯ, ಮಿಲಿಯ ಟನ್ನುಗಳಷ್ಟಾಗಬಹುದಂತೆ (೭೮ ಅಂಕೆಯ ಬಳಿಕ ಹದಿನೆಂಟು ಸೊನ್ನೆಗಳು). ಸಾಮಾನ್ಯರ ಪಾಲಿಗೆ ಇದು ವಿಸ್ಮಯವನ್ನು ಹುಟ್ಟಿಸಬಲ್ಲುದಾದರೂ ಗಣಿತದಿಂದ ಅದನ್ನು ಹೇಳಬಹುದು........"[3]

ಸೂರ್ಯನ ಬಗೆಗೆ ಹೇಳಿದವು : 'ಸೂರ್ಯಗ್ರಹ ಗೋಲದಲ್ಲಿ ನಿಯಮಿತ ವೇಳೆಯೊಳಗೆ ತೇಜಃಪ್ರವಾಹ ತರಂಗಗಳು ಬದಲಾಗುತ್ತ ಇರುತ್ತವೆ........"[4] "ಸೂರ್ಯನ ಪ್ರಕಾಶವನ್ನು ಸಂಗ್ರಹಿಸಿಡುವುದು ಸಾಧ್ಯವೇ ಎಂದು ಮನುಷ್ಯ ಯೋಚನೆ ನಡೆಸಿದ್ದಾನೆ. ಮನುಷ್ಯನು ಈಗಲೂ ಯೋಚಿಸುತ್ತಿರುವುದನ್ನು ಸಸ್ಯ ಜಗತ್ತು ಎಂದೋ ಮಾಡಿ ತೋರಿಸಿದೆ. ಪ್ರತಿಯೊಂದು ಮರವೂ ಸೂರ್ಯಶಕ್ತಿಯ ಉಗ್ರಾಣವಾಗಿದೆ........"[5] "ಇಂಥ ಕಾರಣಗಳಿಂದ ಭೂಮಿಯಿಂದ ಸೂರ್ಯನ ತನಕ ಮೇರೆ ಗುರುತಿಸಲಾರದ ವಿದ್ಯುತ್ಕಾಂತ ರಾಜ್ಯವೇ ಇದ್ದರೂ ಇದ್ದೀತೆಂಬ ಊಹೆ ಬರತೊಡಗಿದೆ........"[6]

ಇಂದಿನ ವಿಜ್ಞಾನದಿಂದ ತಿಳಿದ ವಿಚಾರಗಳೂ ಜ್ಞಾನೋಪಾಸನಕ್ಕೆ ತಕ್ಕವೆಂದು ಇಲ್ಲಿ ವೇದ್ಯವಾಗುತ್ತದೆ. 'ಅಗ್ನಿ ಗೃಹಮಿತ್ರನಾದರೆ ಆದಿತ್ಯನು ಲೋಕಮಿತ್ರನು'[7] ಎಂದುದು ಒಳ್ಳುಡಿಯಾಗಿದೆ.

ದಿವಾಕರನೆಂದು ಸೂರ್ಯನಿಗೆ ಹೆಸರಿದೆ. ಸೂರ್ಯನು ಸಂಜೆ ಮುಳುಗುತ್ತಾ ಲೋಕಕ್ಕೆ ರಾತ್ರಿ ಬೆಳಕು ನೀಡಲೋಸುಗ ತನ್ನ ತೇಜಸ್ಸನ್ನು ಅಗ್ನಿಯಲ್ಲಿರಿಸುವನೆಂಬ[8] ಪ್ರಾಜ್ಞವಾಣಿಯು ಗಮನೀಯವಾಗಿದೆ: 'ದಿನಾಂತೇ ನಿಹಿತಂ ತೇಜಃ ಸವಿತ್ರೇವ ಹುತಾಶನಃ,

---

1. ದೇವದೃಷ್ಟಿ ಪುಟ ೫೪. ಶ್ರೀ ಸಿ. ವಿ. ಸ್ವಾಮಿ ಹಿರೇಮಠ ಅವರ ವಾಕ್ಯಗಳು.
2. ,, ಪುಟ ೫೫. ಶ್ರೀ ಪಾಟೀಲ ಪುಟ್ಟಪ್ಪನವರ 'ಪ್ರಪಂಚಜ್ಞಾನ'ದ ವಾಕ್ಯಗಳು.
3. ,, ಪುಟ ೫೬. ಶ್ರೀ ಶಿವರಾಮ ಕಾರಂತರ 'ಈ ಜಗತ್ತು' ಎಂಬುದರ ವಾಕ್ಯಗಳು
4. ,, ಪುಟ ೭೮ ಶ್ರೀ ಸಿ. ವಿ. ಸ್ವಾಮಿ ಹಿರೇಮಠ ಅವರ ವಾಕ್ಯಗಳು.
5. ,, ಪುಟ ೮೯ ಶ್ರೀ ಪಾಟೀಲ ಪುಟ್ಟಪ್ಪನವರ 'ಪ್ರಪಂಚ ಜ್ಞಾನ'ದ ವಾಕ್ಯಗಳು
6. ,, ಪು. ೯೩ ಶ್ರೀ ಶಿವರಾಮಕಾರಂತರ 'ಈ ಜಗತ್ತು ಎಂಬುದರ ವಾಕ್ಯಗಳು.
7. ,, ಪು. ೭೫
8. ಕಾಳಿದಾಸಃ ರಘುವಂಶ ೪-೧

ಅಗ್ನಿಯು ಗೃಹಪತಿಯಾದರೆ ಸೂರ್ಯನು ಗ್ರಹಪತಿಯಾಗಿದ್ದಾನೆ; ಒಂದೇ ತೇಜಸ್ಸಿನ ಎರಡು ರೂಪಗಳು ಲೋಕವನ್ನು ಬೆಳಗಿಸುತ್ತಿವೆಯೆಂಬುದು ನಮಗೆಲ್ಲಾ ತಿಳಿದುದೇ ಆಗಿದೆ.

ಸೋಮದೇವ ಹಾಗೂ ಸೂರ್ಯದೇವನೆಂಬೆರಡು ವಿಭಾಗಗಳಲ್ಲಿ ಸಾಧಾರಣ ವಾಗಿ ಐಯ್ವತ್ತು ಪುಟಗಳಲ್ಲಿ ಹೇಳಿದ ಆಕರಗ್ರಂಥಗಳು ಹಲವು, ಅವುಗಳ ವಿವರಣೆ ಯಾಗಿ ಎತ್ತಿದ ವಿಚಾರಾತ್ಮಕ ಕೃತಿಗಳು ಹಲವು. ಅವೆಲ್ಲವುಗಳ ಕ್ರೋಢೀಕರಣವು ಅದೊಂದು ಪಾಂಗವಾಗಿ ಸಾಗಿದೆ. ಈ ಬಗ್ಗೆ ಇನ್ನೂ ಹಲವಾರು ಆಕರಗಳನ್ನು ವಿವರಣ ಗಳನ್ನು ಎತ್ತಿದರೂ ಈ ವಿಚಾರ ಸಾಕಾಗುವಂತಿಲ್ಲ. ಪರಂತು, ಅಚ್ಚುಕಟ್ಟಿನಲ್ಲಿ ಹಾಗೂ ನ್ಯೂನಾತಿರೇಕವಾಗದಂತೆ 'ಸಮದೃಷ್ಟಿ'ಯಲ್ಲಿ ಶ್ರೀ ಜ.ಚ.ನಿ. ಅವರು ಇಲ್ಲಿ ಪ್ರತಿಪಾದಿಸಿದ ವಿಷಯಗಳು ಜಿಜ್ಞಾಸುಗಳಿಗೆ ಆದರ್ಶವಾಗಿವೆ !

ರುದ್ರನು ಅಷ್ಟಮೂರ್ತಿಯಾಗಿದ್ದಾನೆಂಬುದಲ್ಲದೆ, 'ಇವುಗಳ ನಿಯಾಮಕನೂ ಆತನೇ ಆಗಿದ್ದಾನೆ'ಂಬುದು[1] ವೇದಾಂತಸಾರವಾಗಿದೆ. ಶಿವನ ಅಷ್ಟಮೂರ್ತಿಗಳ ವಿವರಣೆಯನ್ನು 'ಯಾ ಸೃಷ್ಟಿಃ ಸ್ರಷ್ಟುರಾದ್ಯಾ....'[2] ಎಂದು ಶಿವಮಹಾಭಕ್ತ ನಾದ ಹಾಗೂ ಕವಿವರ್ಯನಾದ ಕಾಲಿದಾಸನು ಹೇಳಿದ್ದಾನೆ. ಇವೆಂಟು ರುದ್ರನ ಪ್ರತ್ಯಕ್ಷ ರೂಪಗಳು. ಆದುದರಿಂದ ಇವುಗಳ ನಿಯಾಮಕನಾಗಿ ಅಪ್ರತ್ಯಕ್ಷನಾಗಿ ಆತನಿರುವನೆಂದು ಹೇಳಿದುದು ಚೆನ್ನು. ರುದ್ರಶಬ್ದದ ನಿರ್ವಚನಗಳು ಹಲವು ಇಲ್ಲಿವೆ[3]. ಇಲ್ಲಿಗೆ 'ರುಜಂ ದ್ರಾವಯತೇ ಯಸ್ಮಾತ್ತಸ್ಮಾದ್ರುದ್ರೋ ಜನಾರ್ದನಃ' ಎಂಬುದು ಸಾಂಗತ್ಯವದೆ.

"ಲಯ ರುದ್ರಕಾರ್ಯ....ಲಯವೆಂದರೆ ಅವ್ಯಕ್ತ ಸ್ವರೂಪಕ್ಕೆ ಮೂಲ ಸ್ವರೂ ಪಕ್ಕೆ ಸಿಲುಕಿಸುವ ನಿಯತಿ. ವಿಕಾರವನ್ನಳಿದು ಸ್ವಾಕಾರವಾಗಿ ಉಳಿಯುವುದು. ಪ್ರಾಕೃತಿಕಭಾವದಿಂದ ಪಾರಮಾರ್ಥಿಕಭಾವಕ್ಕೆ ಒಯ್ದು ಸಿಲ್ಲಿಸುವುದು"[4] 'ಮರಣವೇ ಮಹಾನವಮಿ'ಯೆಂಬ ಹಿರಿಯರ ಮಾತು[5] ಇದನ್ನೇ ನೆನಹಿಸುತ್ತದೆ.

"ಸುಖದಲ್ಲಿ ದುಃಖವಿದೆ, ದುಃಖದಲ್ಲಿ ಸುಖವಿದೆ. ಈ ಸುಖ ದುಃಖಗಳ ಘರ್ಷಣವನ್ನು ತಪ್ಪಿಸುವ ತತ್ತ್ವವೇ ರುದ್ರದೇವ"[6]ನೆಂದು ಹೇಳಿದುದು ವಿರೋಧಾ ಭಾಸವಾಗಿ ಕಂಡರೂ, ಆಂತರಿಕವಾಗಿ ಆತ್ಯಂತಿಕವಾಗಿ ಸತ್ಯಪೂರ್ಣವಾಗಿದೆ. 'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ' ಎಂಬ ಸೂಕ್ತಿ ಲೌಕಿಕ ವಿಷಯಕವಾಗಿದ್ದರೆ, ಸುಖದುಃಖಗಳೆರಡೂ ಇಲ್ಲದ ಶಾಂತಿರೂಪವೇ ಅಲೌಕಿಕವಾದ ಈ ರುದ್ರನೆಂದು ತಿಳಿಯುತ್ತದೆಯಲ್ಲವೇ ?

---

1. ದೇವದೃಷ್ಟಿ ಪು. ೯೬
2. ಅಭಿಜ್ಞಾನ ಶಾಕುಂತಲ ೧-೧
3. ದೇವದೃಷ್ಟಿ ಪು. ೯೮
4. ಅದೇ ಪು. ೧೧೦
5. ಶ್ರೀ ಬಸವೇಶ್ವರ ವಚನ
6. ದೇವದೃಷ್ಟಿ ಪು. ೧೧೨

"ಈ ಹೊರಗಿನ ಜ್ಯೋತಿಗಳನ್ನೆಲ್ಲ ನೋಡಲು ಕಣ್ಣು ಬೇಕು. ಕಣ್ಣು ಮುಚ್ಚಿದಾಗ ಇಲ್ಲವೆ ಕನಸು ಕಾಣುವಾಗ ಕುರುಡನಾಗಿರುವಾಗ ಕಾಣುವ (ತಿಳಿವ) ಕರಣವೊಂದಿದೆ. ಅದುವೇ ಬುದ್ಧಿ ಅಥವಾ ಅಂತಃಕರಣ. ಅದಕ್ಕೂ ಸ್ವಯಂ ಜ್ಯೋತಿಯಿಲ್ಲ. ಅದು ಸುಷುಪ್ತಿಯಲ್ಲಿ ಇರುವುದಿಲ್ಲ. ಅಸ್ವತಂತ್ರ, ಅಧೀನ. ಆಗಲೂ ತಿಳಿಯತಕ್ಕ ಜ್ಯೋತಿಯೆಂದರೆ ಆ ಆತ್ಮವೊಂದೇ. ಅದೇ ಜ್ಯೋತಿ. ಅದೇ ದೇವ"[1]ನೆಂದು 'ಆತ್ಮಜ್ಯೋತಿ'ಯ ಬಗೆಗೆ ವಿವರಿಸಿದುದು ಸ್ವಾನುಭವೈಕ ವೇದ್ಯವಾದ ವೇದಾಂತಸಾರವಾಗಿದೆ.

"ಅಂಬು ಇಲ್ಲದಿದ್ದರೆ ಅಂಬುಜವನಾರು ಬಲ್ಲರು ? ನೀರಿಲ್ಲದಿದ್ದರೆ ಹಾಲನಾರು ಬಲ್ಲರು ? ನಾನಿಲ್ಲದಿದ್ದರೆ ನಿನ್ನನಾರು ಬಲ್ಲರು ? ನಿನಗೆ ಎನಗೆ ಬೇರೊಂದೆಡೆಯುಂಟೆ ನಿಃಕಳಂಕ ಮಲ್ಲಿಕಾರ್ಜುನಾ ?" ಎಂಬುದರ ವಿವರಣದಲ್ಲಿ[2] 'ಬಿಂಬೋಸಿ ಪ್ರತಿ ಬಿಂಬೋಸ್ಮಿ' ಎಂಬಂತೆ ಜಗತ್-ಆತ್ಮ ಪರಮಾತ್ಮರ ವಿಚಾರ ಚೆನ್ನಾಗಿ ಮೂಡಿದೆ. "ಸೂರ್ಯನು ಜ್ಞಾನೇಂದ್ರಿಯ ಕರ್ಮೇಂದ್ರಿಯ ರೂಪ ತ್ಯಾಗಾಂಗವನ್ನು ವ್ಯಾಪಿಸಿ ಪ್ರಕಾಶಿಸಿದರೆ, ಚಂದ್ರನು ಅಂತಃಕರಣರೂಪ ಭೋಗಾಂಗವನ್ನು ವ್ಯಾಪಿಸಿ ಪ್ರಕಾಶಿಸು ತ್ತಾನೆ. ಆತ್ಮನು ಸರ್ವಾಂಗವನ್ನು (ಯೋಗಾಂಗವನ್ನು) ವ್ಯಾಪಿಸಿ ಪ್ರಕಾಶಿಸು ತ್ತಾನೆ"[3] ಎಂಬೀಮಾತು ಮುನ್ನೋಟದ ಸೂಚಿಯಾಗಿದೆ !

ಪರಮಾತ್ಮನನ್ನು ಕುರಿತು ಉಪನಿಷತ್ತು 'ಹ್ಯಕ್ಷರಾತ್ಪರತಃ ಪರಃ' ಎಂಬುದು[4] ಭಗವದ್ಗೀತೆಯಲ್ಲಿ ವಿವರಿಸಲ್ಪಟ್ಟು ಅನುವಾದಿಸಿಯದೆ[5]-

"ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ |
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ |
ಯಸ್ಮಾತ್ಕ್ಷರಮತೀ ತೋಽಹಮಕ್ಷರಾದಪಿ ಚೋತ್ತಮಃ |
ಅತೋಽಸ್ಮಿಲೋಕೇ ವೇದೇಚ ಪ್ರಥಿತಃ ಪುರುಷೋತ್ತಮಃ ||"

"ಜೀವಭಾವರಹಿತನು ಆತ್ಮನು, ಶಿವಭಾವಸಹಿತನು ಅಂತರಾತ್ಮನು. ಜೀವಾತ್ಮ ಧರ್ಮ ಪರಮಾತ್ಮಧರ್ಮಗಳೆರಡರ ಮಧ್ಯ ಧರ್ಮದಲ್ಲಿರುವವನೇ ಅಂತರಾತ್ಮನು...."[6] ಎಂಬಲ್ಲಿ ಆತ್ಮ-ಅಂತರಾತ್ಮರ ವಿಭೇದ ಹೇಳಿ ಪರಮಾತ್ಮನತ್ತ ದಿಟ್ಟಿಯನ್ನು ಹೊರಳಿಸಲು ಅನುಗೊಳಿಸಿದುದನ್ನು ನಾಣುತ್ತೇವೆ.

"ಪರಂಜ್ಯೋತಿಯೇ ಸ್ವಯಂಜ್ಯೋತಿ; ಸ್ವತಂತ್ರ ಜ್ಯೋತಿ...." ಎಂಬಲ್ಲಿಯ ಉಪನಿಷತ್ತಿನ 'ಭಯಾದಸ್ಯಾಗ್ನಿಸ್ತಪತಿ' ಎಂಬುದಕ್ಕೆ[7] 'ಭೀಷಾಸ್ಮಾದ್ವಾತಃ

---

1. ದೇವದೃಷ್ಟಿ ಪು. ೧೨೫
2. ಅದೇ ಪು. ೧೨೭
3. ಅದೇ ಪು. ೧೨೮
4. ಅದೇ ಪು. ೧೪೪
5. ಭಗವದ್ಗೀತೆ: ೧೫
6. ದೇವದೃಷ್ಟಿ ಪು. ೧೪೮
7. ಅದೇ ಪು. ೧೫೧

ಪವತೇ ಘೀಷೋದೇತಿ ಸೂರ್ಯಃ, ಎಂಬುವು ಸಂವಾದಿಗಳಾಗಿವೆ. ಈ ಅಧ್ಯಾಯದ ಕೊನೆಗೆ "ಪರಂಜ್ಯೋತಿ ಅದೊಂದು ಮಹಾಸಾಗರ. ಅದರ ತರಂಗಗಳು ಸೂರ್ಯ ಚಂದ್ರ ನಕ್ಷತ್ರ ಅಗ್ನಿಗಳು. ಅನರ್ಘ್ಯರತ್ನಗಳು. ಆತ್ಮ ಅಂತರಾತ್ಮ ಪರಮಾತ್ಮ ರುದ್ರ ದೇವರು"[1] ಎಂಬೀ ರೂಪಕ ರೀತಿಯ ನಿರೂಪಣವು ಬಲುಚೆನ್ನು; ಜ್ಯೋತಿ ಮಂಡಲಗಳೂ ಅನೇಕ, ಆತ್ಮಾದಿಗಳೂ ಅನೇಕವೆಂದು ಧ್ವನಿತವಾಗುತ್ತದೆ.

"ಬಚ್ಚಬರಿಯ ಬೆಳಕು" ಎಂಬ ಶೀರ್ಷಿಕೆಯಲ್ಲಿಯ ವಿವರಣವು 'ಕೈವಲ್ಯಪದ್ಧತಿ' ಯಲ್ಲಿ ಶ್ರೀ ನಿಜಗುಣ ಶಿವಯೋಗಿಗಳು ಹೇಳಿದಂತಿವೆ. "ಜ್ಯೋತಿ ಬೆಳಗುತಿದೆ ಪರಂ ಜ್ಯೋತಿ ಬೆಳಗುತಿದೆ ........" ಜ್ಯೋತಿರ್ವಿದ್ಯೆಯ ವಿಚಾರ ಭೌಗೋಲಿಕವಾಗಿ ಐತಿಹಾಸಿಕವಾಗಿ—ಸಂಗ್ರಹಿಸಿ ಬರೆದುದು.[2] ಸರ್ವರಿಂದಲೂ ಮನನೀಯವೂ ಅನುಸರಣೀಯವೂ ಆಗಿದೆ.

ಇನ್ನು "ಕಡೆನೋಟ"ದಲ್ಲಿ ಬೆಳಕಿನ ಮನೆಯಿಂದ ಬಂದಿದ್ದೇವೆ. ಬೆಳಕಿನ ಮನೆಯಲ್ಲಿದ್ದೇವೆ. ಬೆಳಕಿನ ಮನೆಗೆ ಹೋಗುತ್ತೇವೆ. ಇರುವಾಗ ಅಂದರೆ ಬಾಳುವಾಗ ಮಾತ್ರ ಬೆಳಕು-ನೆರಳುಗಳ ಹೋರಾಟ. ಬರಿ ನೆರಳಿಗೆ ಅಂದರೆ ಕೇವಲ ಅಂಧಕಾರಕ್ಕೆ ಸಿಕ್ಕಿಬಿದ್ದರೆ ಮಾತ್ರ ಣೀಕಲಾಟ. ಇದಾಗದಂತೆ ಪ್ರಯತ್ನಿಸುವುದೇ ದೇವದೃಷ್ಟಿ! ಅಥವಾ ದೇವರಾಧನೆ !"[3] ಎಂಬುದು ಯಥೋಕ್ತಿಯಾಗಿದೆ. 'ಕಡೆನೋಟ'ದ ಕಡೆಯ ಭಾಗಗಳಲ್ಲಿ ಹಲವಾರು ಸಲ "ಲಿಂಗಮ್ಮನ ವಚನ"ಗಳನ್ನು ಉದಾಹರಿಸಿದ್ದು, ವಿವರಿಸಿದ್ದು ಬಹಳ ಚೊಕ್ಕವಾಗಿದೆ.[4] ಇದೀಗ ಆ ವಚನಗಳಲ್ಲಿ ಕೆಲವನ್ನು ತುಸ ವಿವರಿಸಬೇಕಾಗಿದೆ. ಆ ಮೊದಲು "ದೇವ-ದೃಷ್ಟಿ"ಯ ಬಗೆಗೆ "ಪ್ರಭುದೇವರ ವಚನ" ವೊಂದನ್ನು ಪರಿಕಿಸಬಹುದಾಗಿದೆ.[5] "ಮೂರುಬಟ್ಟೆಯನಳಿದ ಒಬ್ಬ ಬಯಲೇ ದಿಟ್ಟ...." ಈ ಮೂರು ಬಟ್ಟೆಯನಳಿದ ಕೇವಲ ಚೈತನ್ಯವೇ ದೃಷ್ಟಿ—ಅದೇ ತುರ್ಯಾತೀತಸ್ಥಿತಿ". ಅದೇ "ದೇವದೃಷ್ಟಿ"!

"ಏನೇನು ಇಲ್ಲದಾಗ ನೀವಿಲ್ಲದಿದ್ದರೆ, ನಾನಾಗಬಲ್ಲೆನೆ ಅಯ್ಯಾ ?.... ಕಾಣಬಾರದ ಕದಳಿಯನೆ ಹೊಕ್ಕು ನೂನಕದಳಿಯ ದಾಂಟಿದೆ....." ಎಂಬ ವಚನವು "ಅಂತರ್ಜ್ಯೋತಿಗಳ ಅಥವಾ ಆತ್ಮ ಜ್ಯೋತಿಗಳ ದೇವತ್ವ ದೃಷ್ಟಿಗೆ ಹಡಪದಪ್ಪಣ್ಣನ ಹೆಂಡತಿ ಲಿಂಗಮ್ಮನ ಈ ವಚನ ಪ್ರತ್ಯಕ್ಷ ಸಾಕ್ಷಿಯಾಗಿದೆ, ಪರಮಸಾಕ್ಷಿಯಾಗಿದೆ"ಯೆಂಬ ವಿವರಣವು ಹೇಳಿದೆ. ಇಲ್ಲಿಯ 'ಕದಳಿ'ಯ ಅರ್ಥವಿಸ್ತರಣಕ್ಕೆ ಇದೇ ಲಿಂಗಮ್ಮನ ವಚನವೊಂದರ ಮೇರೆ ಉಲ್ಲೇಖವು ಬೆಂಬಲಗೊಡುತ್ತಿದೆ.[6]

1. ದೇವದೃಷ್ಟಿ ಪು. ೨೫೭
2. ಶ್ರೀ ಟಿ. ಎಸ್. ಮಲ್ಲಿಕ್ಕು: [illegible] ಮತ್ತು ಪ್ರಗತಿ;
3. ಅದೇಪುಟ ೧೭೦.
4. ಅದೇ ಪುಟ ೧೭೩-೧೮೩
5. ದೇವದೃಷ್ಟಿ ಪು. ೧೭೩–೭೪
6. ಶ್ರೀ [illegible] 'ಪರಂಜ್ಯೋತಿ[illegible]' ಪು. ೧೪-೧೬

"ಸಾಸಿರದಳ ಕಮಲವೆಂದರೆ ಸೂಸಿಕೊಂಡಿರುವ ಮನ" ಎಂಬ ವಚನಕ್ಕೆ[1] ಆಕೆಯುದಿರಬಹುದೆಂಬ 'ಮಂತ್ರಗೋಪ್ಯ'ದ "ಎಲೆಯಿಲ್ಲದಾ ವೃಕ್ಷ-"ವೆಂಬ ಪದ್ಯಗಳು ಸಂವಾದಿಗಳಾಗಿವೆ[2]

"ಮುಕ್ತಿಯ ಪಥವನರಿವುದಕ್ಕೆ ತತ್ವತ್ತದ ಭಿತ್ತಿಯ ಕಾಣಬೇಕು" "ನಿಶ್ಚಿಂತವಾಗಿ ಚಿತ್ತಾರದ ಬಾಗಿಲ ತೆರೆದು....ಉಪ್ಪರಿಗೆ ಮೇಗಳ ಶಿವಾಲಯುವ ಕಂಡು.... ಮಂಗಳದ ಮಹಾ ಬೆಳಗು ಕಾಣಿಸಿತ್ತು–" ಎಂಬೆರಡು ವಚನಗಳು ಇಲ್ಲಿವೆ[3]. ಇವುಗಳ ಹಿನ್ನೆಲೆಯಾಗಿ "ದಾರಿವಿಡಿದ ಬರಲು ಮುಂದೆ ಸರೋವರವ ಕಂಡೆ...." ಎಂಬ ಆಕೆಯ ವಚನವು ನೆನಹಾಗುತ್ತದೆ.[4]

"ಬೆಳಗ ಕಾಣುವುದೇ ದೇವದೃಷ್ಟಿ. ಬೆಳಗ ಕಾಣದೆ ಬೇರೆ ಏನು ಮಾಡಿದರೂ ಏನು ನೋಡಿದರೂ ಏನೂ ಪ್ರಯೋಜನವಿಲ್ಲ. ಬೆಳಗನ್ನು, ಬೆಳಗುಳ್ಳ ವಿಭೂತಿಯನ್ನು ಕಾಣುವುದೇ ದೃಷ್ಟಿಯ ಸಾಫಲ್ಯ, ದೃಷ್ಟಾರನ ಸಾಫಲ್ಯವೆಂಬುದು"[5] ಸೂಕ್ತವಾಗಿದೆ. ಇದಕ್ಕೆ ಪ್ರಾಚೀನವಾಣಿಯು ಹಿನ್ನೆಲೆಯಿದೆ.[6]

"ಭದ್ರಂ ಕರ್ಣೇಭಿಃ ಶೃಣಿಯಾಮ ದೇವಾ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ
ಸ್ಥಿರೈರಂಗೈಸ್ತುಷ್ಟುವಾಂಸ ಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥"

ಕಿವಿ ಕಣ್ಣು ಮೊದಲಾದ ಅಂಗಗಳಿಂದ ಒಳ್ಳಿತನ್ನು ಸೇವಿಸುತ್ತಾ ಆಯಸ್ಸವನ್ನು ದೇವಹಿತವಾಗಿ ಕಳೆಯುವುದೇ ಅಂಗಗಳ-ಅಂಗಿಯ ಸಾರ್ಥಕ್ಯ !

"ಒಟ್ಟಾರೆ ಶ್ರೀ ಜ. ಚ. ನಿ. ಸನ್ನಿಧಿಯವರು ಈ ಶತಮಾನದ ಏಕೈಕ ಸತ್ವಶಾಲಿ ವಚನ ಸಾಹಿತಿಯಾಗಿದ್ದಾರೆ. ಸಂಖ್ಯೆ–ಸತ್ವ ದೃಷ್ಟಿಯಿಂದ ಸಾರ್ಥಕ ಸಾಹಿತ್ಯ ಒದವಿಸಿದ್ದಾರೆ....ಪುರಾತನರ ವಚನರೂಪಕ್ಕೆ ವಿನೂತನ ಶಾಂತಿ ಚೆಲ್ಲಿದ್ದಾರೆ" ಎಂದು ಶ್ರೀಗಳವರ 'ವಚನವಲ್ಲರಿ' ಕುರಿತು ಶ್ರೀ ಚ. ಸುಂದರೇಶನ್ ಅವರು ಹೇಳಿದುದು ಇಲ್ಲಿಗೂ ಒಪ್ಪತಕ್ಕುದಾಗಿದೆ.

'ದೇವದೃಷ್ಟಿ'ಯು ಬಗೆಯೆಂದರೆ ಮಾನವಾತೀತವಾದ, ದಿವ್ಯ ಜ್ಯೋತೀರೂಪವೇನಿಪೆಯೋ ಅತ್ತ ನಾವು ದಿಟ್ಟಿಸಿದರೆ, ನಮ್ಮತ್ತ ಅದು ದಿಟ್ಟಿಸಿದರೆ, ನಮ್ಮ ಒಳ-ಹೊರಗು ಕತ್ತಲೆ ಕಳೆದುಹೋಗುತ್ತದೆ. ಆಗಲೇ 'ದೇವದೃಷ್ಟಿ'ಯೊದಗುತ್ತದೆ. ಇಂತಹ ಸತ್ಕೃತಿಗಳು ಇನ್ನೂ ಹೆಚ್ಚು ಹೆಚ್ಚಾಗಿ ವಾಚಕ–ಸಾಧಕರಿಗೆ ಶ್ರೀ ಜ.ಚ.ನಿ. ಸನ್ನಿಧಿಯವರಿಂದ ಒದಗಿಸಲ್ಪಡಲಿ !

---

1. ದೇವದೃಷ್ಟಿ ಪು. 179
2. ಪರಂಜ್ಯೋತಿದರ್ಶನ
3. ದೇವದೃಷ್ಟಿ ಪು. 180
4. ಪರಂಜ್ಯೋತಿದರ್ಶನ ಪು. 24
5. ದೇವದೃಷ್ಟಿ ಪು. 181
6. ಋಗ್ವೇದ.

## ಕವಿಗುರು
## ಶ್ರೀ ಜ. ಚ. ನಿ. ಜಗದ್ಗುರುವಿಗೆ

ಸಚ್ಚಿದಾನಂದ ಭಾವಶ್ರೀಗಿರಿಯಿಂದ ತಾವು
ಅಚ್ಚಳಿಯದನುಭವಾಮೃತದ ಹೊಳೆಯ ಹರಿಸಿದಿರಿ;
ನೆಚ್ಚಿಸಲಿ ಸಾಹಿತ್ಯ ಶಾರದೆಯನರ್ಚಿಸಿ
ನಿಚ್ಚ ನಿರ್ಮಲ ಚಿನ್ಮಯಾರತಿಯ ಬೆಳಗಿದಿರಿ.

ನವವಚನಗಳ ರಚಿಸಿ ನವ ರುಚಿಯ ತೋರಿಸಿ
ನವ್ಯ ವಚನಕಾರರೆಂದೆನಿಸಿದಿರಿ ನಾಡಿನಲಿ;
ನವ ಕಾವ್ಯವನದಿ ನವ ಕುಸುಮಗಳನರಳಿಸಿ
ನವ ಗಂಧವನು ಹರಡಿ ನವ ಕವಿಗಳೆನಿಸಿದಿರಿ.

ಮಣಿ ಮುಕುರ ಮಹಾಕಾವ್ಯ ವೀಣೆಯನು ಮಿಡಿದು
ಕರ್ಣಾಮೃತವ ಕನ್ನಡಿಗರಿಗೆ ಕರುಣಿಸಿದಿರಿ;
ಅಣಿಯರದ ಅನ್ನೇಯ ತಿರುಳನು ತಿಳುಹುದಿರಿ,
ಮಣಿ ಮಣಿದು ಭಕ್ತಿಯಲಿ ನಮಿಸುವೆನು ನಿಮಗಿದೋ

'ಶಿವಾದ್ವೈತದರ್ಶನ' ಶಿವತತ್ವ ಸಂಜೀವನ;
'ಕಾರುಣ್ಯ ಕಿರಣ' ಕರುನಾಡ ಜನ ಚೇತನ
ಇದೋ 'ಅಭಯವಾಣಿ' ಆಣಿಮುತ್ತಿನ ಸರಣಿ,
ಇದನು ಗಳಿಸಿದವರಿಗಿಲ್ಲ ಬಡತನದ ಬವಣೆ.

ಬದುಕೆಲ್ಲ ಹಾಲ್ಕೆನೆ, ಬಗೆಯಲ್ಲ ಹೂಗೊನೆ;
ಬಗೆದುಂಬಿ ಹಾಡಿದರೆ ಹರಿವುದು ಮನವೇದನೆ,
ಉನ್ನತದ ವಿನಯವೇ ತಾನಿದು ನಿವೇದನ,
ಸನ್ನಿಧಿಯ ಸಾಹಿತ್ಯ ಕುರುನಾಡಿಗೆ ಚೇತನ!

—ಶ್ರೀಮತಿ. ಗು. ಶಂಕರಮ್ಮ ಕರಿಬಸಪ್ಪ,

ಎಸಳು ೫

# ದಾರ್ಶನಿಕ ಸಾಹಿತ್ಯ

[ದರ್ಶನ-೪]

ಶಿವಾದ್ವೈತ ದರ್ಶನ
ನವಲಿಂಗ ಸಾಹಿತ್ಯ
ಜೀವನ ಸಿದ್ಧಾಂತ (ಆರು ಸಂಪುಟ)
ದೃಷ್ಟಿ ದರ್ಶನ

ಸರ್ವ ಧರ್ಮಗಳ, ಶ್ರುತಿ ಶಾಸ್ತ್ರಗಳ ಸಮನ್ವಯವಾದ ಶಿವಾದ್ವೈತ ತತ್ತ್ವ ದರ್ಶನದ ಬಗೆಗೆ ಬರೆದಿರುವ ವಿಚಾರ ಪೂರ್ಣ ಗ್ರಂಥ 'ಶಿವಾದ್ವೈತ ದರ್ಶನ'. ಶ್ರೀ ಸನ್ನಿಧಿಯವರ ಅದ್ಭುತವಾದ ದರ್ಶನ ಶಾಸ್ತ್ರಾನುಭವದ ಫಲವಾಗಿರುವ ಈ ಗ್ರಂಥ ದರ್ಶನ ಶಾಸ್ತ್ರಾಭ್ಯಾಸಿಗಳ ಕೈಪಿಡಿಯಾಗಿದೆ.

ಇದೇ ದಿಸೆಯಲ್ಲಿ ಹೊರಬಂದಿರುವ "ನವಲಿಂಗ ಸಾಹಿತ್ಯ" ಮತ್ತು "ವೃಷ್ಟಿ ದರ್ಶನ" ಗ್ರಂಥಗಳೂ ಜಗದ್ಗುರುಗಳ ಅವಿರಳ ಸಾಹಿತ್ಯಾಭ್ಯಾಸ ಹಾಗೂ ಆಳವಾದ ಅನುಭವದ ಸಾಹಸೀ ಪ್ರಯತ್ನದ ಪ್ರತೀಕವಾಗಿವೆ. 'ನವಲಿಂಗ ಸಾಹಿತ್ಯ'ವು ಸರ್ವ ದರ್ಶನಗಳ ಐಕ್ಯೈಕ ಲಾಕ್ಷಣಿಕ ಗ್ರಂಥವಾಗಿದೆ.

ಶ್ರೀ ಸನ್ನಿಧಿಯವರಿಂದ ಮತ್ತೊಂದು ದಾರ್ಶನಿಕ ಮಹಾಗ್ರಂಥ ಸಿದ್ಧವಾಗಿದೆ. ಸುಮಾರು ೪೮೦೦ ಪುಟಗಳಿಗೂ ಮೀರುವ ಈ ಬೃಹತ್‌ಗ್ರಂಥದ ಹೆಸರು 'ಜೀವನ ಸಿದ್ಧಾಂತ'. ಜೀವವನ್ನು ಕುರಿತು ಜಗತ್ತನ್ನು ಆಧರಿಸಿ ಆರಂಭವಾಗಿರುವ ಈ ಮಹಾ ಸಂಪುಟ ಕನ್ನಡ ಸಾಹಿತ್ಯದಲ್ಲೇ ಮೇರು ಕೃತಿಯಾಗಲಿದೆ. ಗ್ರಂಥದ ಪ್ರಥಮಭಾಗವಾದ ಭಕ್ತಸಂಪುಟವೇ ಸುಮಾರು ೧೨೦೦ ಪುಟಗಳಿಂದ ತುಂಬಿದೆ. ಪಿಂಡಾಂಡದ ಪ್ರತ್ಯಂಗವನ್ನು ಪ್ರಭಾವಯುತವಾಗಿ, ಹೊಸ ದೃಷ್ಟಿಯಿಂದ, ಹೊಸ ಬೆಳಕು ಬೀರುವ ಬಗೆಯಲ್ಲಿ ವಿಶ್ಲೇಷಿಸಿರುವ ಈ ಬೃಹತ್ ಸಂಪುಟ ಅಭ್ಯಾಸಿಗಳಿಗೆ ಆಧಾರ ಗ್ರಂಥವಾಗಿ, ಜಿಜ್ಞಾಸುಗಳಿಗೆ ವಿಚಾರ ಗ್ರಂಥವಾಗಿ ಮಹದುಪಕಾರ ಮಾಡುತ್ತದೆ.

# ಶಿವಾದ್ವೈತ ದರ್ಶನ

## ಹಸುಗೆ ಬೆಸುಗೆಯಾಗಿರುವ ದರ್ಶನ

—ಶ್ರೀ ಸ. ಶಿವಾಚಾರ್ಯರು, ಗಿರಿಯಾಪುರ

ಗಡುಚಾದ ಮತ್ತು ಪಂಡಿತರಿಗೆ ಮಾತ್ರ ವೇದ್ಯವಾಗುವಂತಹ ಗೀರ್ವಾಣ ಭಾಷೆಯ ಗೋಜಿಗೆಡೆಗೊಡದೆ ಪಂಡಿತ ಪಾಮರರಾದಿಯಾಗಿ ಸರ್ವ ಸಾಮಾನ್ಯರಿಗೂ ಅರ್ಥವಾಗುವ ತರಹದಲ್ಲಿ ಇಂದಿನ ಇಪ್ಪತನೆಯ ಶತಮಾನಾನುಸಾರ ಸ್ವಾನುಭಾವ ದ್ಯೋತಕ ವಚನಸಾಹಿತ್ಯವನ್ನೇ ಪ್ರಾಮುಖ್ಯ ಗುರಿಯಾಗಿ ಇರಿಸಿಕೊಂಡು ವಿಷಯ ವಿವರಣೆಯನ್ನು ಬಿತ್ತರಿಸುತ್ತ ವಚನಕಾರ ಮತ್ತು ಶಿವಾಚಾರ್ಯೋಭಯ ದೃಷ್ಟಿ ಅನುಸರಿಸಿ । ಶಿವನಲ್ಲಿ ಒಂದೇ ಒಂದಾದ ನೋಟ ಅಥವಾ ಮಂಗಲೈಕದೃಷ್ಟಿ ಶಿವಶಕ್ತಿ ಬೋಧಕ ಅಲ್ಪಾಕ್ಷರ ಸಮನ್ವಿತ ಸೂತ್ರ ಪ್ರಾಯವಾದ 'ಶಿವಾದ್ವೈತ ದರ್ಶನ'ವೆಂಬ ಅಭಿಧಾನಾಂಕಿತ ವೈಶಿಷ್ಟ್ಯ ಕೃತಿಯನ್ನು ಬ್ರಹ್ಮ ಸೂತ್ರಾದಿ ಪ್ರಬಲ ಪ್ರಾಮಾಣ್ಯ ಗ್ರಂಥಾಧಾರಗಳೊಂದಿಗೆ ಬಹು ಶ್ರಮಿಸಿ ಸರಸ ಸುಲಭ ಶೈಲಿಯಲ್ಲಿ ರಚಿಸಿ ಪ್ರಕಾಶನ ಪಡಿಸಿ ಸರ್ವ ಜನತೆಯು ಆತ್ಮಪ್ರಗತಿ ಸನ್ಮಾರ್ಗಗಾಮಿಗಳಾಗಲು ಅನುಕೂಲ ಪಡಿಸಿ ಕೊಟ್ಟಿರುವ ವಿಷಯ ಬಹು ಸ್ತುತ್ಯ ಚಿರಸ್ಮರಣೀಯವಾದುದೆಂದೂ ದಾರ್ಶನಿಕ ವಿಚಾರಗಳನ್ನು ಕನ್ನಡಿಗರು ಅರಿದು ಅರಗಿಸಿಕೊಳ್ಳಲು ಅವಕಾಶವಿಲ್ಲದೆ ಇರುವ ಕೊರತೆಯನ್ನು ಈ ಕೃತಿಯು ಸುಲಭವಾಗಿ ಪೂರೈಸಿಕೊಡಲು ತುಂಬ ಸಹಾಯವಾಗಿದೆಯೆಂದೂ ಮತ್ತು ಅಖಿಲಭಾರತ ವೀರಶೈವ ಮಹಾಸಭೆಯು ವೀರಶೈವ ಸಿದ್ಧಾಂತ ಗ್ರಂಥವೊಂದನ್ನು ಬರೆಯಿಸುವ ಸಂಕಲ್ಪವನ್ನು ಈ ಒಳಕ್ಕೆ ಮಾಡಿದ್ದು ಸರಿಯಷ್ಟೆ ? ಆ ಸಂಕಲ್ಪವನ್ನೂ ಕೂಡ ಈ ಕೃತಿಯು ಸಂತೃಪ್ತಿಕರವಾಗಿ ನೆರವೇರಿಸಿದೆಯೆಂದೂ ಹೇಳಲು ತುಂಬ ಹೆಮ್ಮೆ ಮತ್ತು ಸಂತಸವೆನಿಸುತ್ತದೆ. ಇದು ನಮ್ಮ ಸದುಹೃದಯದ ಸದಭಿಪ್ರಾಯ.

ನವಲಿಂಗ ಸಾಹಿತ್ಯ, ಕಾಯಕ ಕಲೆ, ಶಿವಾದ್ವೈತ ದರ್ಶನ ಕೃತಿ ರತ್ನತ್ರಯ ವನ್ನು ಆಮೂಲಾಗ್ರವಾಗಿ ಓದಿದೆ.

ಲೌಕಿಕ ಪಾರಮಾರ್ಥಿಕೋಭಯ ದೃಷ್ಟಿಯಿಂದ ತುಲನಾತ್ಮಕ ಸೂಕ್ತ್ಯಾತ್ಮ ಸಾಕ್ಷ್ಯಾನುಭಾವ ವಿವರಣಾತ್ಮಕ ಯೋಜನೆಯು ಬಹು ಅಗಾಧ(ಆಳ)ವಾದ, ಅಮೋಘ ವಾದ ಸನ್ನಿಧಿಯ ಬುದ್ಧಿ ಶಕ್ತಿ, ವಿಚಾರ ವಿವೇಚನಾ ಶಕ್ತಿ ಕೌಶಲತೆ ಜಾಣ್ಮೆಯನ್ನು ಮನಗಂಡು ಬೆರಗುಗೊಂಡೆ.

ಶ್ರೀ ಗುರು ಮಹಾದೇವನ ಅನುಗ್ರಹ ವಿಶೇಷದಿಂದ ಸಂಪ್ರಾಪ್ತವಾದ ದೇವ ದೇಣಿಗೆಯು ಲೇಖನ ಕಾಯಕ ಕಲೆಯು ಚಿತ್ಕಳಾವೈಶಿಷ್ಟ್ಯ ವೈಭವದ್ಯೋತಕ ಪ್ರತೀಕ ವೆಂದು ಭಾವ ಬಲಿದು ಹೆಮ್ಮೆ ಕರಿಗೊಂಡು ಸಂತಸದಿಯೋಲಾಡಿ ಮೈಮರೆದೆ.

ದರ್ಶನದಲ್ಲಿ ಹಸುಗೆ ಬೆಸಗೆಯಾಗಿರುವುದೊಂದು ವೈಶಿಷ್ಟ್ಯ.



## ಜ್ಞಾನ ನಿಧಿಯೆ !

ತಪೋನಿಧಯೆ, ಜ್ಞಾನನಿಧಯೇ, ವೈರಾಗ್ಯ ಮೂರ್ತಿಯೇ
ಜನಿಸಿಬಂದು ಜಗವಪೊರೆವ ಪರಂಜ್ಯೋತಿಯೇ !

ಯೋಗಭೂಮಿಯಲ್ಲಿ ಬಂದು ತ್ಯಾಗಿಯಾಗಿ ನೆಲೆಸಿಹಾ
ದೇವ ದೇವ ಶಿವನರೂಪ ಚನ್ನಬಸವ ಸ್ವಾಮಿಯೇ

ಬೆಂದು ನೊಂದು ಬಳಲುತಿರುವ ಭುವಿಯ ಜನರಿಗೇ
ಬಂದು ಲಿಂಗ ತತ್ವವೀವೆ ಭವಿ ಪಾಮರರಿಗೇ

ತಪೋವನದಿ ಯೋಗತನದಿ ನೀಡುಮಾಮಿಡಿಯೊಳೂ
ತಪೋತನದಿ ಜಗವ ಪೊರೆವೆ ಹಗಲು ಇರುಳೊಳೂ

ಕಾಮ–ಕ್ರೋಧ ಮರೆಸುತಾ, ಪ್ರೀತಿ–ಶಾಂತಿ ಬೆಳೆಸುತಾ
ಕಾಯ್ವೆ ನೀನು ಜನಮತಾ, ಜೀವ ಜಂತು ಹರಸುತಾ

ದಾಸೋಹ ಜ್ಞಾನದಾನ ಕರುಣಿಸುತಿಹ ಶಕ್ತಿಯೇ
ದೇವ ತಮ್ಮ ಸೇವೆಯನ್ನು ಮಾಡದೆಮಗೆ ಮುಕ್ತಿಯೇ

ಹೆಚ್. ಎಸ್. ಬಸವರಾಜು, ಹೇಮಾಪುರ

# ಭಾರತೀಯ ತತ್ವಶಾಸ್ತ್ರಕ್ಕೆ ವಿಶಿಷ್ಟ ಕೊಡುಗೆ

—ಆಸ್ಥಾನ ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯ, ಮೈಸೂರು

ದೇವ ಜೀವ ಜಗತ್ತುಗಳ ಸಂಬಂಧ ಸಂಶೋಧನೆ ಪುರಾತನ. ಪ್ರಾಯಃ ಜೀವನ ಬೌದ್ಧಿಕ ವಿಕಾಸಾರಂಭದಿಂದ ಇದು ಮುಂದುವರಿದು ಬರುತ್ತಿದೆ. ಅಜ್ಞಾತ ಯುಗದ ಅನುಭಾವಿಗಳು ವೇದಕಾಲದ ಋಷಿಮುನಿಗಳು ವಿಶ್ವದ ಹಲವಾರು ಮಂದಿ ಪ್ರವಾದಿಗಳಿಂದ ಹಿಡಿದು ಆಧುನಿಕ ಯುಗದ ಸಾಧಕರ ವರೆಗೆ ಈ ಬಗ್ಗೆ ಜನತೆಯ ಕುತೂಹಲ ಇಮ್ಮಡಿಸುತ್ತಲೇ ಇದೆ. ಜಗತ್ತತ್ತ್ವ ರಹಸ್ಯಗಳನ್ನರಿಯಲು ತೊಡಗಿದ ವಿಜ್ಞಾನವೂ ಸಹ ಅಧ್ಯಾತ್ಮ ತತ್ತ್ವಜ್ಞಾನಿಯ ಮುಂದೆ ಅನೇಕ ಸಲ ದಿಗ್ಮೂಢವಾಗಿರುವುದಕ್ಕೆ ನಿದರ್ಶನಗಳಿಲ್ಲದಿಲ್ಲ. 'ದೈವಿಕ ಶಕ್ತಿಗಳ ವಿಷಯದಲ್ಲಿ ವೈಜ್ಞಾನಿಕ ಸಂಶೋಧನೆಗಳು ನಿರರ್ಥಕ' "Scientific investigations about supernatural Power are useless" ಎಂಬ ಅಭಿಜ್ಞೋಕ್ತಿ ಇದನ್ನು ಸಮರ್ಥಿಸುತ್ತದೆ.

ವಿಶ್ವದ ಆಧ್ಯಾತ್ಮಸಾಧನೆಯ ಅಡಿಗಲ್ಲು ಭಾರತ. ವೇದಾಗಮೋಪನಿಷತ್ತುಗಳಲ್ಲಿ ಮೂಡಿ ಬಂದ ಅಧ್ಯಾತ್ಮತತ್ವದ ಅಂತರಾತ್ಮನನ್ನು ಅವಲೋಕಿಸುವ ವಿದ್ವಾಂಸರಿಗೆ ವ್ಯಾಸಸೂತ್ರ ನೇತ್ರವಾಯಿತು. ಈ ನೇತ್ರದಿಂದ ವೀಕ್ಷಿಸುವ ಸಾಧಕರ ದೃಷ್ಟಿಭೇದ ಮಾರ್ಗ ಭೇದಕ್ಕೂ ಬೋಧಕವಾಯಿತು. ಈ ಮಾರ್ಗಗಳಲ್ಲಿ ಮುಖ್ಯವಾದವು ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಮತ್ತು ಶಕ್ತಿ ವಿಶಿಷ್ಟಾದ್ವೈತ ವಿಭಾಗಗಳು. ಮೇಲೆ ಕಂಡ ಈ ವಿಭಾಗಗಳಲ್ಲಿ ಇದು ಪ್ರಾಚೀನ, ಇದು ನವೀನ ಎಂಬ ವಾದಕ್ಕೆ ಇಂಬಿಲ್ಲ. ಏಕೆಂದರೆ ಈ ಪ್ರಭೇದಗಳ ಮೂಲ ವೇದಾಗಮೋಪನಿಷತ್ತುಗಳು. ಅವುಗಳಲ್ಲಿ ಅವ್ಯಕ್ತವಾಗಿದ್ದ ತತ್ವಗಳನ್ನು ತಮ್ಮ ಬುದ್ಧಿ ಮತ್ತು ಅನುಭವಗಳಿಗೆ ಎಟುಗಿಸಿಕೊಂಡು ಅರ್ಥವಿಸಿ ಭಾಷ್ಯಾದಿಗಳನ್ನು ರಚಿಸಿದವರು ಆಚಾರ್ಯರೆನಿಸಿದರು. ಇದರಿಂದ

ಆಯಾ ಮಾರ್ಗಗಳು ಆಯಾ ಆಚಾರ್ಯೋಪಜ್ಞಗಳೇ ಹೊರತು ಅವರು ಪ್ರತಿಷ್ಠಾಪಿಸಿದವುಗಳೇನಲ್ಲ. ಆಯಾ ಆಚಾರ್ಯ ದೃಷ್ಟವಾದ ತತ್ತ್ವ ಪ್ರತಿಪಾದಕ ಶಾಸ್ತ್ರಕ್ಕೆ 'ದರ್ಶನ'ವೆಂದು ಹೆಸರಾದುದೂ ಈ ದೃಷ್ಟಿಯಿಂದಲೇ ಎಂದು ಬೇರೆ ಹೇಳ ಬೇಕಿಲ್ಲವಷ್ಟೆ?

ಶ್ರೀ ಜ. ಚ. ನಿ. ಯವರ "ಶಿವಾದ್ವೈತದರ್ಶನ"ವು ಮೇಲೆ ಕಂಡ ಮಾರ್ಗ ಪ್ರಭೇದಗಳಲ್ಲೊಂದಾದ "ಶಕ್ತಿವಿಶಿಷ್ಟಾದ್ವೈತದರ್ಶನ"ದ ವಿಶಿಷ್ಟ ರೂಪಾಂತರ. ವಿಶೇಷಾದ್ವೈತ, ದ್ವೈತಾದ್ವೈತ (ಭೇದಾಭೇದ), ಷಟ್‌ಸ್ಥಲ ಸಿದ್ಧಾಂತ ಮುಂತಾದ ಹೆಸರುಗಳು ಈ ದರ್ಶನದ ಪರ್ಯಾಯನಾಮಗಳು

ಅದ್ವೈತವು ಪರಬ್ರಹ್ಮದ ಕೈವಲ್ಯವನ್ನು ಪ್ರತಿಪಾದಿಸಿದರೆ ಶಿವಾದ್ವೈತವು ಆ ಪರವಸ್ತುವಿನ ಶಕ್ತಿವೈಶಿಷ್ಟ್ಯವನ್ನು ಸಾರಿದೆ. ಒಂದು ಪ್ರಪಂಚವನ್ನು ಪ್ರಾತಿಭಾಸಿಕವೆಂದರೆ ಮತ್ತೊಂದು ಪ್ರಪಂಚ ಪರಮಾರ್ಥವೆಂದು ಸಿದ್ಧಾಂತಪಡಿಸಿದೆ. ದ್ವೈತಾದಿಗಳು ತಮಗನುಕೂಲವಾದ ಶ್ರುತಿಗಳಿಗೆ ಮಾತ್ರ ಪ್ರಾಮಾಣ್ಯವನ್ನು ಒಪ್ಪಿದರೆ ಶಿವಾದ್ವೈತದಲ್ಲಿ 'ಸರ್ವಶ್ರುತಿ ಸಮನ್ವಯ'ವಿದೆ. ಇಲ್ಲಿ 'ದ್ವೈತ ಮತದ ಭಕ್ತಿ ಅದ್ವೈತ ಜ್ಞಾನ'ಗಳ ಸಮನ್ವಯವಿದೆ. ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ರೂಪವಾದ ದಾರ್ಶನಿಕ ಷಡ್ವಿಧತಾತ್ಪರ್ಯ ಲಿಂಗಗಳಿಗೆ (ಪ್ರ ಪು. ii) ಉಚಿತ ಉಪಪತ್ತಿಯಿದೆ. ವೇದ ವೇದಾಂತಗಳಲ್ಲಿ ಸಿದ್ಧ ಸಿದ್ಧಾಂತಗಳಲ್ಲಿ ಎಲ್ಲಿನೋಡಿದರೂ ಒಂದೇಭೇದ "ಅರಿದಲ್ಲಿ ಮುಕ್ಕೆ ಹೊರಗು;ಮರೆದಲ್ಲಿ ಮುಕ್ಕೆ ಒಳಗು ಅರಿವು ಮರವು ನಿಂದಲ್ಲಿ ಸದಾಶಿವ ಮೂರ್ತಿಯು ಲಿಂಗದ ಬೆಳಗು" (ಪ್ರ. ಪು. iv) ಇದು ಈ ಸಿದ್ಧಾಂತ (ದರ್ಶನ)ದ ವೈಶಿಷ್ಟ್ಯ. ಇನ್ನು ಸನ್ನಿಧಿಯವರ ಶಿವಾದ್ವೈತ ದರ್ಶನದಲ್ಲಿ ಇತರತ್ರ ಅಪೂರ್ವವೆನಿಸಿದ ಮತ್ತೊಂದು ವೈಶಿಷ್ಟ್ಯವಿದೆ. ಸಾಮಾನ್ಯವಾಗಿ ವೀರಶೈವ ದಾರ್ಶನಿಕ ಸಾಹಿತ್ಯವು ಸಂಸ್ಕೃತದಲ್ಲಿದೆ. ಶ್ರೀಪತಿಪಂಡಿತರೇ ಮೊದಲಾದ ಆಚಾರ್ಯರು ಶ್ರೀ ರೇಣುಕಾದಿ ಪೂರ್ವಾಚಾರ್ಯರ ಪರಂಪರೆಯಿಂದ ಬಂದ ಶಿವಾದ್ವೈತವನ್ನು ಕುರಿತ ಪ್ರಸ್ಥಾನಕ್ಕೆ ಪ್ರಕರಣ ಗ್ರಂಥಗಳನ್ನು ಭಾಷ್ಯಾದಿಗಳನ್ನು ಕಾರಿಕೆಗಳನ್ನು ವಿಮರ್ಶ ಗ್ರಂಥಗಳನ್ನು ಬರೆದಿದ್ದಾರೆ. ಈ ಸಿದ್ಧಾಂತವನ್ನು ಅನುಷ್ಠಾನ ಮಾಡಿ ಸಿದ್ಧಿ ಪಡೆದ ಬಸವೇಶ್ವರಾದಿ ಶಿವ ಶರಣರ ಅನುಭವ ಸಾಹಿತ್ಯ ಕನ್ನಡದಲ್ಲಿದೆ. ಇವೆರಡರ ಅಪೂರ್ವಸಂಗಮ ಸನ್ನಿಧಿಯವರ ಶಿವಾದ್ವೈತ ದರ್ಶನದಲ್ಲಾಗಿದೆ. ಇದು ಇತರ ಮಾರ್ಗಗಳಿಗೂ ಮಾರ್ಗದರ್ಶಕವೆಂದರೆ ತಪ್ಪಾಗದು. ದಾರ್ಶನಿಕವಾದ ಅನೇಕ ತಾತ್ತ್ವಿಕ ಗಂಟುಗಳು ಅವರು ಕೊಡುವ ಸಂದರ್ಭೋಚಿತ ಅನೇಕ ಕನ್ನಡ ವಚನ ನಿದರ್ಶನಗಳಿಂದ ಸುಲಭ ಗ್ರಾಹ್ಯವಾಗಿ ಓದುಗರನ್ನು ಉಲ್ಲಾಸಗೊಳಿಸುತ್ತವೆ. ಆಚಾರ್ಯರ ಬುದ್ಧಿ ಪ್ರಧಾನವಾದ ದಾರ್ಶನಿಕ ನಿಗೂಢತತ್ತ್ವ ಅನುಷ್ಠಾನ ಪರವಾದ ಶಿವಶರಣರ ಅನುಭವೋಕ್ತಿಗಳಿಂದ ಬಯಲಾಗುತ್ತದೆ ಇದರಿಂದ ಶಿವಾದ್ವೈತ ದರ್ಶನ ಉಪನಿಷದುಕ್ತವಾದ 'ಶ್ರೋತ್ರಿಯ–ಬ್ರಹ್ಮ ನಿಷ್ಠತ್ವ'

ಎಂದರೆ ಶಾಸ್ತ್ರ ಪ್ರಾವೀಣ್ಯ ಮತ್ತು ಅನುಷ್ಠಾನಗಳಿಂದ ಕೂಡಿ ಪರಿಪೂರ್ಣತೆ ಪಡೆದಿರುವುದಕ್ಕೆ ಇದು ನಿದರ್ಶಕವಾಗಿದೆ. ವಚನ ಶಾಸ್ತ್ರಕ್ಕೆ ದಾರ್ಶನಿಕತ್ವವನ್ನು ಸಮರ್ಥಿಸಿರುವ ತಾತ್ವಿಕ ಗ್ರಂಥಗಳಲ್ಲಿ ಇದಕ್ಕೆ ವಿಶಿಷ್ಟಸ್ಥಾನ ಮೀಸಲು.

ಮುಖ್ಯವಾಗಿ ದರ್ಶನವು ಸಮಷ್ಟಿ, ಹಸುಗೆ ಎಂದು ದ್ವಿದಳವಾಗಿ ವಿಭಕ್ತವಾಗಿದೆ. ಮೊದಲನೆಯದರಲ್ಲಿ ಸಮಷ್ಟಿ ತತ್ತ್ವತ್ರಯವು ದರ್ಶನೋದಯಕ್ಕೆ ಭೂಮಿಕೆಯಂತಿದೆ. ಶಾಸ್ತ್ರಾನುಭವ ಬಲ್ಲಿದರಾದ ಸನ್ನಿಧಿಯವರ ಮನೋಜ್ಞವಾದ ಶೈಲಿ ಭಾವನಾಲೋಕವನ್ನು ಮೀರಿ ಅನುಭವದಾಳಕ್ಕೆ ಭಾವುಕರನ್ನೊಯ್ದು ತತ್ತ್ವ ಶಾಸ್ತ್ರದ ಹಿನ್ನೆಲೆಯನ್ನು ದೃಢಪಡಿಸುತ್ತದೆ. ಶಿವತತ್ತ್ವ ಶಕ್ತಿತತ್ತ್ವ ಮುಂತಾದ ಪ್ರಕರಣಗಳಲ್ಲಿ ಸಾಂಪ್ರದಾಯಕವಾದ ಸಿದ್ಧಾಂತಗಳನ್ನು ಸೂತ್ರೋಪನಿಷತ್ತುಗಳು ಹಾಗೂ ವಚನ ಶಾಸ್ತ್ರದ ಸಾರ ಸಂಗ್ರಹದಿಂದ ಸಮರ್ಥಿಸಿರುವುದಲ್ಲದೆ ಸಮಷ್ಟಿ, ಸೃಷ್ಟಿ ೩೬ ತತ್ತ್ವೋದಯ, ಅರ್ಚನ ಅರ್ಪಣ ಮತ್ತು ಅನುಭವ ರಹಸ್ಯಗಳನ್ನು ತಮ್ಮದೇ ಆದ ಶೈಲಿಯಲ್ಲಿ ವಿಸ್ತರಿಸಲಾಗಿದೆ. 'ಅರ್ಚನದಲ್ಲಿ ದಾಸೋಽಹಂಭಾವ, ಅರ್ಪಣದಲ್ಲಿ ಶಿವೋಽಹಂಭಾವ, ಅನುಭವದಲ್ಲಿ ಶಿವೋಂ ಭಾವ' (ಪು. ೮೦) ದಲ್ಲಿ ಪರಿಣಮಿಸುವ ವೈಶಿಷ್ಟ್ಯವನ್ನು ನಾವಿಲ್ಲಿ ಕಾಣಬಹುದು. ಮೇಲಾಗಿ 'ನ ತತ್ರ ಚಕ್ಷುರ್ಗಚ್ಛತಿ' ಎಂಬ ಉಪನಿಷದುಕ್ತಿಯನ್ನು ಹಿಂದುಳಿಸಿದೆಯೆಂದು ಹೇಳಲಾಗಿರುವ 'ಆ ಪರಶಿವನ ಸ್ವರೂಪವೇ ಕಣ್ಣು ಮಾತು ಮನಗಳಲ್ಲಿ ತುಂಬಿ ತೊಳಗುತ್ತಿರುವಾಗ ಕಣ್ಣು ಮನಗಳೇಕೆ ಹೋಗಬೇಕು ? ಎಲ್ಲಿಗೆ ಹೊಗಬೇಕು ? 'ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ....' (ಪು. ೮೪) ಎಂಬ ಮಾತು ಅನುಭವದ ತುದಿಯಲ್ಲಿ ಒಂದೇ ಆಗುವುದೆಂಬುದನ್ನೂ ಮರೆಯುವಂತಿಲ್ಲ. 'ಬಯಲು ಬಯಲ ಬೆರಸಿ ಬಯಲೇ ಆಯಿತ್ತು' (ಪು. ೮೬) ಎಂಬ ವಚನಕಾರನ ಹೃದ್ಗತ 'ಪೂರ್ಣಮದ:' ಎಂಬ ಉಪನಿಷತ್ ದೃಷ್ಟಿಯ ಹೃದಯವನ್ನೇ ಸೂರೆಗೊಂಡ ಅಂಶವನ್ನು ನೆನಪಿಸುತ್ತದೆ. 'ಷಟ್‌ಸ್ಥಲ ಮಾರ್ಗವು ದ್ವೈತದ ಪರಿವರ್ತನೆಯಲ್ಲ, ಅದ್ವೈತದ ಪರಿವರ್ತನೆಯಲ್ಲ, ಅದೇನು ಕಾರಣವೆಂದರೆ 'ಶಿವಾದ್ವೈತವಾದ ಕಾರಣ (ಪು. ೮೮-೮೯) ಎಂಬ ವಚನವು ಶಿವಾದ್ವೈತ ದರ್ಶನಕ್ಕೆ ಇಟ್ಟಿರುವ ನಾಮ ಸಾರ್ಥಕ್ಯವನ್ನು ಸಮರ್ಥಿಸಿದೆ.

ಮುಂದಿನ ದರ್ಶನ ಹಸುಗೆ 'ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲ ಮಾರ್ಗದಲ್ಲಿ ನಡೆದರೆ ಅವನಿಗೆ ಲಿಂಗಾಂಗ ಸಾಮರಸ್ಯ ಸಿದ್ಧಿಸುವುದು' ಎಂಬ ಅನುಭವೋಕ್ತಿಯಿಂದ ಗುಂಫಿತವಾಗಿದೆ. ಇಲ್ಲಿ ಸಿದ್ಧಾಂತದ ತಾತ್ವಿಕ, ನೈತಿಕ ಮತ್ತು ಧಾರ್ಮಿಕ ವಿಭಾಗಗಳು ಈ ದರ್ಶನಕ್ಕೆ ಪೂರಕವಾಗಿ ಇದರಲ್ಲಿ ಪರಿಪೂರ್ಣತೆಯನ್ನು ತುಂಬಿಕೊಟ್ಟಿವೆ. ಪ್ರಾರಂಭದಲ್ಲಿ ಬರುವ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲ ವಿವರಣವು ಸಿದ್ಧಾಂತ ಶಿಖಾಮಣಿ, ಅನುಭವ ಸೂತ್ರ, ಕರಣಹಸುಗೆ, ಮಿಶ್ರಾರ್ಪಣ ಮುಂತಾದ ಪ್ರಕರಣ ಗ್ರಂಥಗಳ ಸಾರವನ್ನೇ ಸಂಗ್ರಹಿಸಿದೆಯಾದರೂ ಅಲ್ಲಿ ಬರುವ ಸಾಧನ, ಸಿದ್ಧಿಗಳ ಸಮನ್ವಯ ಗಮನಾ

ರ್ಹವಾಗಿದೆ. ಅಷ್ಟ ಸಕೀಲುಗಳ ವಿವರಣೆ, ಷಟ್‌ಸ್ಥಲಗಳನ್ನು ನಿರಾಮಯ ನಿರ ವಯ ಎಂದು ವಿಭಾಗಿಸಿರುವಿಕೆಯಲ್ಲಿ ಅನುಭವ ರಹಸ್ಯ ಗುರು ಮುಖದಿಂದ ಮಾತ್ರ ಅರಿಯುವುದಾಗಿದೆ. ಇದು ಇಡಿಯ ದರ್ಶನದ ಮೇಲೆ ಹೊಸ ಬೆಳಕನ್ನು ಚೆಲ್ಲುವು ದಾಗಿದೆ. ಇಲ್ಲಿ ಬರುವ ಅಂಗ–ಲಿಂಗ, ಶಿವ–ಜೀವ, ಶಕ್ತಿ-ಭಕ್ತಿ, ಹಸ್ತ-ಮುಖ, ಪದಾರ್ಥ-ಪ್ರಸಾದ, ಜ್ಞಾನ–ಕ್ರಿಯೆ, ಪಂಚೀಕರಣ, ಪ್ರಪಂಚ-ಪರಮಾರ್ಥ, ಯೋಗ–ಶಿವಯೋಗ ವಿಭಾಗಗಳು ಕೇವಲ ಸಾಂಪ್ರದಾಯಕ ಮಾತ್ರವಲ್ಲದೆ ಸವಿ ಮರ್ಶಕವಾಗಿಯೂ ಪ್ರತಿಪಾದಿತವಾಗಿರುವುದು ಮತ್ತೊಂದು ವಿಶೇಷ.

ಸನ್ನಿಧಿಯವರ 'ಶಿವಾದ್ವೈತ ದರ್ಶನ' ವೀರಶೈವ ಸಮಾಜಕ್ಕೆ ಮಾತ್ರವಲ್ಲದೆ ಭಾರತೀಯ ತತ್ತ್ವಶಾಸ್ತ್ರಕ್ಕೆ ನೀಡಿರುವ ವಿಶಿಷ್ಟ ಕೊಡುಗೆಯೆಂದು ಬೇರೆ ಹೇಳಬೇಕಾ ಗಿಲ್ಲ. ನಿರಂತರವೂ ಗ್ರಂಥರಚನೆ ಪ್ರವಚನಾನುಭವಗಳಲ್ಲಿ ಬಲ್ಲಿದರಾಗಿ ಶಾಸ್ತ್ರಾನುಭವ ಗಳ ಸೂರ್ಯ ಸಿಂಹಾಸನವನ್ನೇರಿರುವ ಪರಮ ಪೂಜ್ಯ ಸನ್ನಿಧಿಯವರ ಸಾರಸ್ವತಸೇವೆ ಅಖಂಡವಾಗಿ ನಡೆದು ಅವರ ಅಮೃತ ಹಸ್ತದಿಂದ ಇಂಥ ಅನಂತ ಕೃತಿ ರತ್ನಗಳು ಸರ್ವಮಂಗಲೆಯ ತಳಿರಡಿಯನ್ನು ಭಾರತಿಯ ಮಣಿಮಕುಟವನ್ನಲಂಕರಿಸುವಂತಾಗ ಲೆಂದು ಹಾರೈಸುವೆ.



## ಶ್ರೀ ಸನ್ನಿಧಿಯ ಆಣಿಮುತ್ತು !

ಮಲ್ಲಿಗೆಯ ಹೂವಿನಲಿ, ಮಾದಲದ ಹಣ್ಣಿನಲಿ,
ಚಂದನದ ಕಾಷ್ಠದಲಿ, ಬಾಳದ ಬೇರಿನಲಿ,
ಪಚ್ಚೆಯ ತೆನೆಯಲಿ, ದವನದ ಎಲೆಯಲಿ,
ಧೂಪದ ಹೊಗೆಯಲಿ, ಹೂವಿನ ನಗೆಯಲಿ,
ಪುನಗಿನ ಮೈಯಲಿ, ಹಾಲಿನ ಒಡಲಲಿ,
ನೆಲವು ಸರುಗಂಪಾಗಿ ನೆಲಸಿ ನಲಿಸುವುದು ಜೀವರ !
ಶ್ರೀಸಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ.

ವಚನವಲ್ಲರಿ, ಭಾಗ–೨

# ಶಿವಾದ್ವೈತ ಸಿದ್ಧಾಂತ
# ಸಹಜ ಸುಂದರ ಚಿತ್ರಣ

—ಶ್ರೀ ವೈ. ನಾಗೇಶಶಾಸ್ತ್ರಿ, ಬಳ್ಳಾರಿ

ಶ್ರೀ ಗುರುತ್ವಸ್ಥಾನಕ್ಕೆ ತಕ್ಕಂತೆ ಪಾಂಡಿತ್ಯ ಪೂರ್ಣವಾದ ಯೋಗ್ಯತೆಯನ್ನು ಪಡೆದು, ಈಗಾಗಲೇ ಅನೇಕ ಗ್ರಂಥಗಳನ್ನು ಬರೆದು ಸ್ತುತ್ಯರಾಗಿರುವ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಸಹಜ ಸುಂದರವಾದ ಸಾಹಿತ್ಯದ ಸವಿನುಡಿಯಲ್ಲಿಯೇ ತಾತ್ವಿಕ ಗ್ರಂಥವಾದ ಶಿವಾದ್ವೈತ ದರ್ಶನವನ್ನು ರಚಿಸಿರುವರು.

ವೀರಶೈವ ಧರ್ಮಕ್ಕೆ—ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮ ಎಂದು ವೀರಶೈವ ಧರ್ಮಜ್ಞರು ಹೇಳುವುದುಂಟು. ಈ ಹೇಳಿಕೆಯು ಅನುಭವ ಪೂರ್ಣವಾಗಿರುವುದು. ಅಷ್ಟಾವರಣ—ಪಂಚಾಚಾರ—ಷಟ್‌ಸ್ಥಲ—ಇವು ಪರಸ್ಪರ ಸಂಬಂಧವುಳ್ಳವುಗಳಾಗಿದ್ದರೂ, ವಿಚಾರ ಸೌಕರ್ಯಕ್ಕಾಗಿ ಅಷ್ಟಾವರಣಗಳು ಸಾಮಾಜಿಕ ಭಾಗಕ್ಕೂ, ಪಂಚಾಚಾರಗಳು ನೈತಿಕ ಭಾಗಕ್ಕೂ, ಷಟ್‌ಸ್ಥಲವು ತಾತ್ವಿಕ ಭಾಗಕ್ಕೂ ಸೇರಿದವುಗಳಾಗಿರುವವೆಂದು ವಿಭಾಗಿಸಿ ಅವುಗಳ ಸ್ವರೂಪವನ್ನು ಪ್ರತಿಪಾದಿಸಬಹುದು. ಈ ಬಗೆಯ ಪ್ರತಿಪಾದನದ ದೃಷ್ಟಿಯಿಂದಲೇ ನಾನು ಶ್ರೀ ಸ್ವಾಮಿಗಳವರ ಶಿವಾದ್ವೈತ ದರ್ಶನವನ್ನು ಸಂಪೂರ್ಣವಾಗಿ ಓದಿನೋಡಿದೆನು. ಅಷ್ಟಾವರಣಗಳ ಮತ್ತು ಪಂಚಾಚಾರಗಳ ವಿಚಾರ ವಿಮರ್ಶೆಯು ಅತ್ಯಂತ ಸಮರ್ಪಕವಾಗಿರುವುದು. ಇನ್ನು ತಾತ್ವಿಕ ಭಾಗಕ್ಕೆ ಸೇರಿದ ಷಟ್‌ಸ್ಥಲದ ವಿಷಯದಲ್ಲಿ "........ಈ ಷಟ್‌ಸ್ಥಲದ ಮಾರ್ಗವು ದ್ವೈತದ ಪರಿವರ್ತನೆಯಲ್ಲ, ಅದ್ವೈತದ ಪರಿವರ್ತನೆಯಲ್ಲ, ಅದೇನು ಕಾರಣವೆಂದರೆ ಇದು ಶಿವಾದ್ವೈತ ಮಾರ್ಗನಾದ ಕಾರಣ...." ಎಂದು ತೋಂಟದ ಶ್ರೀ ಸಿದ್ಧಲಿಂಗಶಿವಯೋಗಿಗಳು ತಮ್ಮ ವಚನದಲ್ಲಿ ಅಪ್ಪಣೆಕೊಟ್ಟಿರುವಂತೆ ಶಿವಾದ್ವೈತ ದರ್ಶನ ಎಂಬ ಹೆಸರಿನಿಂದಲೇ ಶ್ರೀಜಗದ್ಗುರುಗಳು ಷಟ್‌ಸ್ಥಲ ಸಿದ್ಧಾಂತದ ವಿಚಾರವನ್ನು ವಿಸ್ತಾರವಾಗಿ ಪ್ರತಿಪಾದಿಸಿರುವರು.

ಷಟ್ ಸ್ಥಲ ಸಿದ್ಧಾಂತದಲ್ಲಿ—ಸ್ಥಲಪದ ಪ್ರತಿಪಾದ್ಯವಾದ ಪರಶಿವನೇ ತನ್ನ ಶಕ್ತಿಯಿಂದ ಅಂಗ (ಶುದ್ಧ ಜೀವ) ಲಿಂಗವೆಂದು ದ್ವಿವಿಧವಾಗಿರುವನೆಂದು ಉಕ್ತವಾಗಿರುವುದರಿಂದ ಶಿವಾದ್ವೈತವೆಂಬುದು ಶಕ್ತಿ ವಿಶಿಷ್ಟಾದ್ವೈತವೆಂದೇ ನಿಶ್ಚಿತವಾಗುವುದು. ಈ ಶಕ್ತಿ ವಿಶಿಷ್ಟಾದ್ವೈತದಲ್ಲಿ ಶಿವನು ಕೇವಲ ಸಗುಣಮೂರ್ತಿ ಎಂಬುದನ್ನೂ ಮುಕ್ತಾವಸ್ಥೆಯಲ್ಲಿಯೂ ಶಿವಜೀವರ ಭೇದವನ್ನೂ ಒಪ್ಪದಿರುವುದರಿಂದ ಈ ಸಿದ್ಧಾಂತವು ದ್ವೈತವಲ್ಲ. ಇನ್ನು, ಶಿವನು ಕೇವಲ ನಿರ್ಗುಣನೆಂಬುದನ್ನೂ ಜೀವಸ್ವರೂಪವೂ ಜಗತ್ತು ಮಿಥ್ಯವೆಂಬುವನ್ನೂ ಒಪ್ಪದಿರುವುದರಿಂದ ಕೇವಲಾದ್ವೈತವಲ್ಲವೆಂಬುದನ್ನೇ ಶ್ರೀ ಸಿದ್ಧಲಿಂಗ ಶಿವಯೋಗಿಗಳು ತಮ್ಮ ವಚನದಲ್ಲಿ ನಿರೂಪಿಸಿರುವರು. ಅವರ ನಿರೂಪಣೆಯಂತೆ ಶ್ರೀ ಸ್ವಾಮಿಗಳು ಶಿವಾದ್ವೈತದ ಸ್ವರೂಪವನ್ನು ಅನೇಕ ಪ್ರಮಾಣ ಪೂರ್ವಕವಾಗಿ ಸಿದ್ಧಮಾಡಿರುವರು. ಇಷ್ಟೇ ಅಲ್ಲ; ಷಟ್ ಸ್ಥಲ ಮಾರ್ಗದಲ್ಲಿ ಜೀವಜಗತ್ತುಗಳನ್ನು ಮಿಥ್ಯವೆಂದು ಹೇಳುವುದಿಲ್ಲ. ದೇಹೇಂದ್ರಿಯಗಳನ್ನು ಹೇಯವೆಂದು ತಿರಸ್ಕರಿಸುವುದಿಲ್ಲ. ಜೀವನು ಕೈಕೊಂಡ ವೃತ್ತಿಯನ್ನು ತುಚ್ಛ ಮಾಡುವುದಿಲ್ಲ. ಭೋಗವನ್ನು ದುಃಖಪ್ರದವೆಂದು ತ್ಯಜಿಸುವುದಿಲ್ಲ. ಈ ಜಗತ್ತು ಆತ್ಮಶಕ್ತಿಯ ವಿಕಾಸಮಾರ್ಗಕ್ಕೆ (ಷಟ್ ಸ್ಥಲ ಮಾರ್ಗಕ್ಕೆ) ಸಾಧನವಾಗಿರುವುದು. ಜೀವಜಗತ್ತುಗಳು ಶಿವನ ಪರಿಣಾಮರೂಪಗಳೇ. ಜೀವನಿಗೆ ದೇಹವು ದೇವಾಲಯವು. ಅವನು ತನ್ನ ಇಚ್ಛಾ ಜ್ಞಾನ ಕ್ರಿಯೆಗಳ ವಿಕಾಸರೂಪನಾದ ಲಿಂಗ (ದೇವ)ನನ್ನು ದೇಹದಲ್ಲಿ ಗುರುವಿನಿಂದ ಪ್ರತಿಷ್ಠಿಸಿಕೊಂಡು ಉಪಾಸಿಸುವನು. ಜೀವನವೃತ್ತಿಯು ಸತ್ಯ ಶುದ್ಧ ಕಾಯಕವಾಗಿ ಪರಿಣಮಿಸಿ ದೇವರ ಪೂಜೆಯಾಗುವುದು. ಜೀವನ ಭೋಗವೇ ದೇವರ ಪ್ರಸಾದವು; ಈ ಪ್ರಸಾದ ಭೋಗದಿಂದಲೇ ಜೀವನ ಆತ್ಮಶಕ್ತಿಯು (ಭಕ್ತಿಯು) ಲಿಂಗರೂಪವಾಗಿ ಪರಿಣಮಿಸುವುದು-ಎಂಬಿವೇ ಮೊದಲಾದ ಅನೇಕ ವಿಚಾರಗಳು ಶ್ರೀ ಸ್ವಾಮಿಗಳು ಪ್ರತಿಪಾದಿಸಿರುವ ಷಟ್ ಸ್ಥಲಕ್ಕನುಸರಿಸಿದ ಉಪಾಸನೆಯ ಅರ್ಚನ-ಅರ್ಪಣ-ಅನುಭವ ಎಂಬ ಭಾಗಗಳಲ್ಲಿ ಹೃದಯಂಗಮವಾಗಿ ತುಂಬಿರುವವು. ಮತ್ತು ಲಿಂಗಾಂಗಯೋಗವೇ ಶಿವಯೋಗವೆಂಬುದನ್ನು ಶ್ರೀ ಪೂಜ್ಯಪಾದರು ಮನಮುಟ್ಟುವಂತೆ ಪ್ರತಿಪಾದಿಸಿರುವರು. ಮುಖ್ಯವಾಗಿ ಶ್ರೀ ರೇಣುಕಾಚಾರ್ಯಾಚಾರ್ಯರೂ ಬಸವಾದಿ ಪ್ರಮಥರೂ ನೆರೆಗೊಳಿಸಿದ ಸಂಪ್ರದಾಯ ಸಿದ್ಧವಾದ ವೀರಶೈವ ಸಮಾಜದ ಸಹಜ ಚಿತ್ರವನ್ನು, ಈ ಶಿವಾದ್ವೈತ ದರ್ಶನದಲ್ಲಿ ಕಾಣಲಾಗುವುದೆಂದೇ ನನ್ನ ಸದಭಿಪ್ರಾಯವಿರುವುದು.

ಶ್ರೀ ಜಗದ್ಗುರುಗಳು ಈ ಬಗೆಯ ತತ್ವವಿವೇಚನೆಯ ಗ್ರಂಥಗಳನ್ನು ರಚಿಸಿ, ತನ್ಮೂಲಕವಾಗಿ ವೀರಶೈವ ಧರ್ಮೋದ್ಧಾರವನ್ನು ಮಾಡುತ್ತಿರುವುದು ಸ್ತುತ್ಯವೂ ಅಭಿನಂದನೀಯವೂ ಆಗಿರುವುದು.

---

# ಕನ್ನಡ ವೈಚಾರಿಕ ಪರಂಪರೆಗೊಂದು ಚೇತನ

ಶ್ರೀ ಜ. ಚ. ನಿ. ಅವರು ಸೂತ್ರಬದ್ಧ ನವಗನ್ನಡದಲ್ಲಿ ಶಿವಾದ್ವೈತ ದರ್ಶನವನ್ನು ಕನ್ನಡಿಗರಿಗೆ ನೀಡಿದ್ದಾರೆ. ಅವರ ಶೈಲಿಯಲ್ಲಿ ವಚನಗಳ ಬಿಗಿಬಂಧ ಇದೆ. ಒಡಪಿನ ಒಪ್ಪವಿದೆ. ಈ ಗದ್ಯ ಶೈಲಿಯಿಂದ ಶಿವಾದ್ವೈತ ದರ್ಶನಕ್ಕೆ ವಿಶಿಷ್ಟವಾದ ಕಾಂತಿ ಘನತೆ ಪ್ರಾಪ್ತವಾಗಿದೆ. ವೀರಶೈವ ತತ್ವಜ್ಞಾನಕ್ಕೆ ಶ್ರೀ ಶಿವಕುಮಾರಸ್ವಾಮಿಗಳವರಂತೆ ಶ್ರೀ ಜ. ಚ. ನಿ. ಅವರೂ ಹೊಸ ಕಳೆಯನ್ನು ನೀಡಿದ್ದಾರೆ. ಆಧುನಿಕ ಪರಿಭಾಷೆ ಸಾಂಪ್ರದಾಯಿಕ ನಿರೂಪಣ ಕ್ರಮಗಳಿಗೆ ಅವಿರೋಧ ಭಾವವನ್ನುಂಟು ಮಾಡಿದ್ದಾರೆ. ಈ ದೃಷ್ಟಿಯಿಂದ ಪ್ರಸ್ತುತ ಗ್ರಂಥವು ಸರ್ವರಿಂದಲೂ ಸ್ವಾಗತಾರ್ಹವಾಗಿದೆ.

**ವೈಚಾರಿಕ ಪರಂಪರೆ :**

ಶ್ರೀಗಳು ರಚಿಸಿದ ಪ್ರಸ್ತುತ ಗ್ರಂಥದಲ್ಲಿ ನಿರೂಪಿತವಾದ ವಿಷಯ ಅನುಭಾವಿಗಳಿಂದ ಪ್ರಣೀತವಾದ ತಾಂತ್ರಿಕ ಭೂಮಿಕೆಯುಳ್ಳದ್ದು; ಅಲ್ಲಮ ಪ್ರಭುಗಳಂತಹ ಪ್ರಖರ ವಿಚಾರವೇತ್ತರ ಸ್ವಾನುಭವದ ಬೆಂಬಲವುಳ್ಳದ್ದು. ಕೊನೆಯದಾಗಿ ಈ ಗ್ರಂಥದ ಕೆಚ್ಚು ಮುಖ್ಯವಾಗಿ ತಾಂತ್ರಿಕ ತಾತ್ವಿಕ ವಿಷಯಗಳನ್ನು 'ಕನ್ನಡದ ಪರಿಭಾಷೆಯಲ್ಲಿ ಪಡಿಮೂಡಿಸಿರುವುದಲ್ಲದೆ ಬಹುಶಃ ಇದು ವೀರಶೈವ ಮತದ ವಿಶಿಷ್ಟ ಕಾಣಿಕೆಯನ್ನಬೇಕು. ಕನ್ನಡದ ಮಾತಿನಲ್ಲಿ ಅನುಭಾವದ ಮಂತ್ರ ಶಕ್ತಿ ಶಿವಶರಣರಿಂದ ಪ್ರಕಟಗೊಂಡಿತು. ಇದರಿಂದ ಶಿವಾಗಮಗಳ ಸಾರ ಕನ್ನಡ ಪರಿಭಾಷೆಯನ್ನು ರೂಪಿಸಿಕೊಂಡು ಅಭಿವ್ಯಕ್ತವಾಗಲು ಸಹಾಯಕವಾಯಿತು. ವೈದಿಕ ಪರಿಭಾಷೆ ಈ ಕೆಚ್ಚಿನಿಂದ ಕನ್ನಡಕ್ಕೆ ಬರಬೇಕಾದರೆ ದಾಸವರೇಣ್ಯರ ಮಂತ್ರಪೂತ ಸಂಗೀತದ ಉದಯಕ್ಕಾಗಿ ದಾರಿ ಕಾಯಬೇಕಾಯಿತು. ಈ ರೀತಿ ಮಾಡಿದ ತಾತ್ವಿಕ ಪರಿಭಾಷೆಗೆ ಆಧುನಿಕ ಒಪ್ಪವನ್ನು ಹಾಕಿ ಕನ್ನಡದಲ್ಲಿಯ ವೈಚಾರಿಕ ಪರಂಪರೆಯನ್ನು

ಮುಂದುವರಿಸುವುದರಲ್ಲಿ ಶ್ರೀ ಜ. ಚ. ನಿ. ಅವರ ಕೃತಿಯು ಪ್ರಬಲ ಸಾಧನವಾಗಿದೆ. ಇದರಲ್ಲಿಯ ಸೂತ್ರ ಶೈಲಿ ಇನ್ನಷ್ಟು ಸಡಿಲಗೊಂಡು ಮುಂದಿನ ಕೃತಿಗಳಲ್ಲಿ ಬೆಳಗಲೆಂದೇ ಕನ್ನಡಿಗರ ಆಶೆ.

**ಶಿವಾದ್ವೈತ :**

ಶಿವಾದ್ವೈತದ ತಾತ್ವಿಕ ಭೂಮಿಕೆಯಲ್ಲಿ ನಾವು ಎರಡು ದೃಷ್ಟಿಗಳನ್ನು ಕಾಣುತ್ತೇವೆ.

೧. ಸ್ವಮತದ ವಿವರಣೆ ಹಾಗೂ ಸಮರ್ಥನೆ.
೨. ಇತರ ಮತಗಳಲ್ಲಿಲ್ಲದ ವೈಶಿಷ್ಟ್ಯದ ಪ್ರತಿಪಾದನೆ.

ಸ್ವಮತ ವಿವರಣ ಹಾಗೂ ಸಮರ್ಥನೆಯಿಂದ ಶಿವಾದ್ವೈತವೆಂದರೇನೆಂಬುದರ ಸ್ಪಷ್ಟ ಕಲ್ಪನೆಯಾಗುತ್ತದೆ. ಈ ದೇಶದಲ್ಲಿ ನಡೆದ ದಾರ್ಶನಿಕ ಪ್ರಯೋಗಗಳ ವಿಶಿಷ್ಟ ರೂಪ ಗೋಚರವಾಗುತ್ತದೆ. ಶ್ರೀಗಳು ವಿವರಿಸಿದಂತೆ ಶಿವತತ್ವವೂ 'ಶಿವಾ' (ಶಕ್ತಿ) ತತ್ವವೂ ಜಗತ್ತು ಹಾಗೂ ಜೀವ ತತ್ವವು ಅಖಂಡವೂ ಪರವೂ ಆಗಿದೆ ಎಂದು ಗೊತ್ತಾಗುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ'ದ ವಿಸ್ತಾರ ವ್ಯಾಖ್ಯೆ ಈ ದರ್ಶನದಲ್ಲಿದೆ. ಈ ದರ್ಶನ ಇತರ ದರ್ಶನಗಳಿಂದ ಹೇಗೆ ಭಿನ್ನ ಎಂಬ ಪ್ರಶ್ನೆ ಬಂದಾಗ ಲೇಖಕರ ಸೂತ್ರಬದ್ಧ ಶೈಲಿಯಿಂದ ಓದುಗರಿಗೆ ಸ್ವಲ್ಪ ಕಷ್ಟವಾಗುತ್ತದೆ. ಜೀವ, ಜಗತ್ತು, ಜಗತ್ಕಾರಣ ಶಕ್ತಿ, ಸರ್ವಕಾರಣನೂ ಸರ್ವೇಶ್ವರನೂ ಆದ ಪರಮಾತ್ಮನ ಅಚಿಂತನೀಯವಾದ, ಸರ್ವಾತೀತವಾದ ಸ್ವರೂಪ ಇಷ್ಟು ಅಂಶಗಳನ್ನು ವೈದಿಕ ತತ್ವಜ್ಞಾನಿಗಳೆಲ್ಲರೂ ಗ್ರಹಿಸಿದ್ದಾರೆ. ತಾತ್ವಿಕರುಗಳಲ್ಲಿಯ ಪರಸ್ಪರ ಸಂಬಂಧದ ಬಗೆಗೆ ಭಿನ್ನಾಭಿಪ್ರಾಯವಿರಬಹುದೇ ಹೊರತು ಇವುಗಳ ಅಸ್ತಿತ್ವದ ಬಗೆಗೆ ಶಂಕೆ ಇಲ್ಲ. ಆದರೆ ಇವೆಲ್ಲವುಗಳ ಅಖಂಡತ್ವದ ಪ್ರತಿಪಾದನೆ ಪ್ರಸ್ತುತ ಗ್ರಂಥದಲ್ಲಿ ಶಕ್ತಿಯುತವಾಗಿ ಒಡಮೂಡಿದೆ.

ನಮ್ಮವರು ಪರಮಾತ್ಮನನ್ನು ಸತ್-ಚಿತ್-ಆನಂದ ರೂಪನೆಂದು ಗ್ರಹಿಸಿ 'ಚಿತ್' ಎಂಬುದೆ ಆ ಪರಮಾತ್ಮನ ಅಭಿವ್ಯಕ್ತ ಶಕ್ತಿಯೆಂದು ಅರಿತಿದ್ದಾರೆ. 'ಸತ್' ಸ್ವರೂಪನಾದ ಪರಮಾತ್ಮನ ಅನಂತತ್ವವೇ ಆನಂದ ರೂಪದಲ್ಲಿ 'ಚಿತ್' ಶಕ್ತಿಯಿಂದ ಪ್ರಕಾಶಗೊಳ್ಳುತ್ತದೆ. ಪರಮಾತ್ಮನು ಈ 'ಸತ್-ಚಿತ್-ಆನಂದ' ಅಲ್ಲದೆ "ಇನ್ನೂ ಏನೋ" ಆಗಿದ್ದಾನೆ. ಎಂಬುದಕ್ಕೆ ಶ್ರೀ ಶಂಕರಾಚಾರ್ಯ ಮೊದಲಾದವರು "ಅನಂತಗುಣ" ಎಂದು ಕರೆದಿದ್ದಾರೆ. ಹಾಗಾದರೆ ಈ ಶಿವಾದ್ವೈತ ತ್ರಿಮತಸ್ಥರಿಂದ ಹೇಗೆ ಭಿನ್ನ ? ಈ ಪ್ರಶ್ನೆಗೆ ಪ್ರಸ್ತುತ ಗ್ರಂಥದ ಆಧಾರದಿಂದ ಇಷ್ಟು ಹೇಳಬಹುದು.

೧ ಜಗತ್ ಸತ್ಯವನ್ನೂ ಶಿವನ ಹಾಗೂ ಶಕ್ತಿಯರ ಅಖಂಡತ್ವವನ್ನೂ ಪ್ರತಿಪಾದಿಸುವುದರಿಂದ ಇದು ಶಂಕರ ಮತದಿಂದ ಭಿನ್ನವಾಗಿದೆ.

೨ ಜೀವೇಶ್ವರ ಭೇದವನ್ನಾಗಲಿ ಪಂಚ ಭೇದಗಳನ್ನಾಗಲಿ ಒಪ್ಪದುದರಿಂದ ಈ ಮತವು ಮಾಧ್ವರಿಂದ ಭಿನ್ನವಾಗಿದೆ.

೩. ಆದರೆ ಒಬ್ಬ ಪರಮಾತ್ಮನಿಂದಲೇ ಮಹಾಲಕ್ಷ್ಮಿ ಹಾಗೂ ಜೀವರು ಜಗತ್ತು ನಿರ್ಮಾಣವಾಗಿ ಪುನಃ ಆ ಪರಮಾತ್ಮನಲ್ಲಿಯೇ ಸಮಸ್ತವೂ ಲೀನವಾಗುವುದೆಂದು ಹೇಳುವ ವಿಶಿಷ್ಟಾದ್ವೈತದಿಂದ ಈ ಮತ ಹೇಗೆ ಭಿನ್ನ ? ಬಹುಶಃ ಜೀವೇಶ್ವರದ ಅದ್ವೈತಭಾವದಲ್ಲಿ ವೈಶಿಷ್ಟ್ಯವನ್ನು ಶ್ರೀ ರಾಮಾನುಜೀಯರು ಪ್ರತಿಪಾದಿಸುವರೆಂದು ಗ್ರಹಿಸಿ ಶಿವ–ಶಿವೆಯರ ಅದ್ವೈತ ಭಾವವನ್ನು ಪ್ರತಿಪಾದಿಸುವ "ಶಿವಾದ್ವೈತವು ಶಕ್ತಿ ವಿಶಿಷ್ಟಾದ್ವೈತವಾಗಿರಬೇಕು.

೪. ಕೊನೆಯದಾಗಿ "ಶಿವಸರ್ವೋತ್ತಮತ್ವ"ದಿಂದ ಈ ಮತವು ಸರ್ವ ಮತಗಳಿಂದ ಭಿನ್ನವಾಗುವುದು ಸಹಜವಾಗಿದೆ. ಆದರೆ ಶಿವ, ವಿಷ್ಣು ಸರ್ವೋತ್ತಮತ್ವಗಳಲ್ಲಿದ್ದ "ಸಾಮ್ಯವೈಶಿಷ್ಟ್ಯ"ದ ತಾತ್ವಿಕ ಘಟನೆ ಅನಿವಾರ್ಯತೆಗಳು ಇನ್ನೂ ಆಧುನಿಕ ಮನಸ್ಸಿಗೆ ಒಪ್ಪಿತವಾಗುವ ರೀತಿಯಲ್ಲಿ ಪ್ರತಿಪಾದಿತವಾಗಬೇಕಾಗಿವೆ.

**ಸಮನ್ವಯ ಯೋಗ —**

ಈ ವೈಶಿಷ್ಟ್ಯ ಪ್ರತಿಪಾದನೆ ಹಾಗು ಯೋಗ ವಿಚಾರ ಮತ್ತು "ದ್ರಾವಿಡ ಆರ್ಯ" ಭಿನ್ನತ್ವ ವಾದಗಳನ್ನು ಮಂಡಿಸುವಾಗ ಶ್ರೀಗಳು ಪಾಂಡಿಚೇರಿಯ ಶ್ರೀಅರವಿಂದರ ವಿಚಾರ ಧಾರೆಯನ್ನು ಗಮನಿಸಿದ್ದಾರೆಯೋ ಇಲ್ಲವೋ ವಿಮರ್ಶಕನಿಗೆ ತಿಳಿಯದು. ಅವರು ಗಮನಿಸಿದ್ದರೆ ಶಿವಾದ್ವೈತ ಪ್ರತಿಪಾದನೆಯ ಅನೇಕಾಂಶಗಳು ಇನ್ನಿಷ್ಟು ಸ್ಪಷ್ಟವಾಗಬೇಕಿದ್ದವೆಂದು ಅನ್ನಿಸುತ್ತದೆ.

ಮೊದಲನೆಯದಾಗಿ "ಯೋಗ ಸಮನ್ವಯ"ದ ಬಗೆಗೆ ಶ್ರೀ ಅರವಿಂದರು ಬಹು ವಿಸ್ತಾರವಾಗಿ ತಮ್ಮ 'ಸಿಂತಿಸಿಸ್ ಆಫ್ ಯೋಗ' ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ. ಶ್ರೀ ಜ. ಚ. ನಿ. ಅವರ "ಶಿವಯೋಗವು" ಶ್ರೀ ಅರವಿಂದರ "ವಿಜ್ಞಾನ ಯೋಗ ಅಥವಾ ಅತಿ ಮಾನಸ ಯೋಗಕ್ಕಿಂತ ಯಾವ ರೀತಿಯಲ್ಲಿ ಭಿನ್ನವಾಗಿದೆ ?

ಎರಡನೆಯದಾಗಿ ವಿಕಾಸ ವಾದವನ್ನು ತಾವು ಒಪ್ಪಿಕೊಳ್ಳುವೆವೆಂದು ಶ್ರೀಗಳು ಹೇಳಿರುವುದು ಬಹಳ ಹಿತಕರವಾದ ನುಡಿಯಾಗಿದೆ. ಆದರೆ ಶ್ರೀ ಅರವಿಂದರು ಪ್ರತಿಪಾದಿಸುವಂತೆ ಮನೋಮಯದಾಚೆಗೇನೆ ವಿಜ್ಞಾನಮಯದ ಪ್ರತಿಷ್ಠಾಪನೆಯಾಗುವ ವಿಕಾಸದ ಹಂತ ಈಗ ಪ್ರಾಪ್ತವಾಗಿದೆ.

ಅದಕ್ಕಾಗಿ ತಾವು ನೂತನ ಪೂರ್ಣ ಯೋಗವನ್ನು ಕೈಕೊಂಡಿರುವುದಾಗಿ ಶ್ರೀ ಅರವಿಂದರು ಶ್ರೀ ಮಾತೆಯವರು ಸಾರಿದ್ದಾರೆ. ಈ ಯೋಗ ದರ್ಶನಕ್ಕೂ ಶ್ರೀ ಜ. ಚ. ನಿ. ಅವರು ಹೇಳುವ "ಸಮನ್ವಯ ಯೋಗಕ್ಕೂ" ಏನು ಭಿನ್ನತೆಯುಂಟು ? ಶ್ರೀ ಅರವಿಂದರು ಆಧುನಿಕ ದ್ರಷ್ಟಾರರು. ಅವರ ಯೋಗ ದರ್ಶನಕ್ಕೆ ಸಾಮ್ಯವಿದ್ದರೆ ಅಂಶಗಳ ಖಚಿತ ವಿವರಣೆ ತೀರ ಅಗತ್ಯವಾಗಿದೆ.

ಆದರಿಂದ ಕನ್ನಡಿಗರ ತಾತ್ವಿಕ ನಿಲುವಿಗೆ ಬಲ ಬಂದೀತು. ನಿಜವಾಗಿ ಷಟ್‌ಸ್ಥಲಗಳ ವೈಜ್ಞಾನಿಕ ಹಾಗೂ ಅನುಭಾವಿಕ ವಿವರಣೆಯಲ್ಲಿ ಈ ಹೋಲಿಕೆಗಳು ಕಾಣುವುದುಂಟು. ಅವುಗಳ ವಿಸ್ತಾರವೂ ನಿಷ್ಪಕ್ಷಪಾತವೂ ಆದ ವಿವೇಚನೆ ಅಗತ್ಯ. ಶ್ರೀ ಅರವಿಂದರು ಕ್ರಿಯಾಶೀಲ ಚೈತನ್ಯಪುರುಷ. ಈತನಿಗೆ ಇರುವ ಆತ್ಮಪರಮಾತ್ಮರ ಸಂಬಂಧ ಪರಾಶಕ್ತಿ ಇವರೆಲ್ಲರನ್ನೂ ಸಮರಸಗೊಳಿಸಿ ತನ್ನ ವಿಜ್ಞಾನಾವತರಣ ಮಾಡುವ ದರ್ಶನ ಶ್ರೀ ಜ. ಚ. ನಿ. ಅವರಂಥ ಸಮರ್ಥರಿಂದ ತುಲನಾತ್ಮಕವಾಗಿ ವಿವರಿಸಲ್ಪಡಬೇಕು. ಇದರಿಂದ ಕನ್ನಡದ ಸಾರಸ್ವತ ಸಂಪತ್ತು ಬೆಳೆದೀತು.

**ಆರ್ಯ–ದ್ರಾವಿಡ ಏಕತ್ವ:—**

ಶ್ರೀಗಳ ಸ್ವಮತ ಪರಿಭಾಷಾ ಪರಿಜ್ಞಾನ ಅತ್ಯಂತ ಶುದ್ಧವಾಗಿದೆಯಾದ್ದರಿಂದ ಪರಮತೀಯರ ಪರಿಭಾಷೆಯ ಹಿನ್ನಲೆಯನ್ನೂ ಅವರು ಸ್ಪಷ್ಟವಾಗಿ ಗ್ರಹಿಸಬಲ್ಲರು. ನಿಜವಾಗಿ ಭಾರತದಲ್ಲಿ ಸ್ವ-ಪರ ಎಂಬುದು ಕೇವಲ ವ್ಯಾವಹಾರಿಕ ಅಗತ್ಯ ಮಾತ್ರ. "ಶಿವಾದ್ವೈತ ದರ್ಶನ"ವು ಭಾರತೀಯರ "ಅದ್ವೈತ ವ್ಯಕ್ತಿತ್ವದ" ನಿರ್ಮಿತಿಗೆ ಪೋಷಕವಾಗಬೇಕಾದ ಕಾಲ ಸನ್ನಿಹಿತವಾಗಿದೆ. ಈಗ ನಾವು "ಶೈವ" ರನ್ನೂ ಶಿವನನ್ನೂ ಆರ್ಯರಿಂದ ದೂರವಿಡುವ ಅಥವಾ ದೂರವೆಂದು ಕಲ್ಪಿಸುವ ಆರ್ಯ-ದ್ರಾವಿಡ ವಾದಕ್ಕೆ ಘನವಾದ ಸಾಕ್ಷ್ಯವಿಲ್ಲದೆ ಲಕ್ಷ್ಯಕೊಡಬಾರದ ಮುಹೂರ್ತ ಪ್ರಾಪ್ತವಾಗಿದೆ.

ದ್ರಾವಿಡರೆಂಬುವರು ಆರ್ಯರಲ್ಲದ ಯಾವುದೋ ಒಂದು ಭಿನ್ನ ಜನಾಂಗದವರೆಂದು ಊಹಿಸದೆ ಆರ್ಯರೊಳಗಿನವೆ ಒಂದು ಉಪತಂಡದವರಾಗಿದ್ದರೆಂದು....ಇದುವರೆಗೆ ವಿವರಣೆಯಿಂದ ಸಿದ್ಧವಾಗುವುದಿಲ್ಲವೆ? ಇಷ್ಟೇ ಏಕೆ ಸ್ವಯಂ ಶ್ರೀ ಅರವಿಂದ ಸಿದ್ಧಾಂತವೇ ಹೀಗಿದೆಯೆಂಬ ಮಾತನ್ನು ಅವರ ವೇದರಹಸ್ಯ 'secret of the veda' ಎಂಬ ಗ್ರಂಥವನ್ನೋದಿದವರೆಲ್ಲಾ ಬಲ್ಲರು. ಈ ವಿಷಯವನ್ನು ನಾನು ನನ್ನ ಆರ್ಯ ಭಾಷಾ ಸಮನ್ವಯವೆಂಬ ಲೇಖನದಲ್ಲಿ (ಜೀವನ ಚರಿತ್ರೆಯಲ್ಲಿ) ನಿರ್ದೇಶಿಸಿದ್ದೇನೆ.

**ಸ್ತುತ್ಯದೃಷ್ಟಿ**

ಈ ಆರ್ಯ ದ್ರಾವಿಡರ ಐಕ್ಯ ದೃಷ್ಟಿಯಿಂದ ವೀರಶೈವ ಮತ ಪ್ರತಿಪಾದನೆಗೇನೂ ಬಾಧಕವಿಲ್ಲ. ಸತ್ಯವೆಂಬುದು ಸನಾತನವಾದುದು. ಶ್ರೀ ಜ. ಚ. ನಿ. ಅವರು ತಮ್ಮ ಗ್ರಂಥದಲ್ಲಿ ಪುನಃ ಪುನಃ ಸಾಮರಸ್ಯ ಸಮನ್ವಯ ದೇವ ಜೀವನ ಶಿವಭಾವ ಜಾಗೃತಿಯ ಮಾತುಗಳನ್ನು ಬಹು ಸಮರ್ಥ ರೀತಿಯಲ್ಲಿ ಪ್ರತಿಪಾದಿಸಿರುವುದು ಕನ್ನಡಿಗರಿಗೆ ಭಾರತೀಯರಿಗೆ ಮಂಗಲ ಭವಿತವ್ಯದ ಸೂಚನೆ ನೀಡುತ್ತವೆ. ಈ ಪ್ರತಿಪಾದನೆಯಲ್ಲಿರುವ ತಾತ್ವಿಕ ದೃಷ್ಟಿ ಸ್ತುತ್ಯವಾಗಿದೆ. ಈ ಸ್ತುತ್ಯ ದೃಷ್ಟಿಯು ಆರ್ಯ–ದ್ರಾವಿಡರ ಏಕತ್ವದ ದರ್ಶನವನ್ನು ಪಡೆದು ಕನ್ನಡಿಗರಿಗೆ ಇನ್ನೊಂದು ಕೃತಿಯ ಮೂಲಕ ನೀಡಲೆಂದು ಹಾರೈಸುತ್ತೇವೆ.

—ಸಂಯುಕ್ತ ಕರ್ನಾಟಕ

## ‘ಶಿವಾದ್ವೈತ ದರ್ಶನ’ವನ್ನು ಕುರಿತು....

### ಸಾಧಕರಿಗೆ ಬೆಳಕು

೧

ಶಿವಾದ್ವೈತ-ದರ್ಶನವನ್ನು ಓದಿಸಿದೆ. ಆದರ ಅನುಭಾವವು ತಲೆಗೆ ಬಂದಿತು. ಮನಸ್ಸಿಗೆ ಹಿಡಿಸಲಾರದಷ್ಟು ಆನಂದವಾಯಿತು.

ತತ್ತ್ವಾನ್ವೇಷಣದಲ್ಲಿ ಸಾಂಖ್ಯರು ೨೫ ತತ್ವಗಳನ್ನು ಪ್ರತಿಪಾದಿಸಿ ಅನಾದಿ ಸಾಂಖ್ಯವನ್ನು ಸ್ವೀಕರಿಸಿ ತೃಪ್ತರಾದರು. ಸಾಂಖ್ಯರು ನಿಂತ ಮೆಟ್ಟಲಿನಿಂದ ವೀರಶೈವ ಶಿವಾದ್ವೈತ ದರ್ಶನವು ೧೧ ಮೆಟ್ಟಲು ಮೇಲೇರಿ ಅನಾದಿ ಅನಂತತತ್ವವನ್ನು ಸ್ವೀಕರಿಸಿ ಮೆರೆದಿದೆ. ಈ ೧೧ ತತ್ವಗಳನ್ನು ಸೂಕ್ಷ್ಮವಾಗಿ ರೂಪಿಸಿರುವದರಲ್ಲಿ ತಮ್ಮ ಅಗಾಧ ವಾದ ಪಾಂಡಿತ್ಯಪೂರ್ಣ ಪರಿಶ್ರಮ ಒಡೆದೆದ್ದು ಮೂಡಿದೆ.

ಷಟ್‌ಸ್ಥಲ ಮಾರ್ಗ ಸಾಧಕನಿಗೆ ತೊಡಕೆನಿಸದಂತೆ ಮಿಶ್ರಾರ್ಪಣ, ಕರಣಾರ್ಪ ಣಗಳು ಸುಲಭಗ್ರಾಹ್ಯವಾಗುವಂತೆ ನಿರೂಪಿಸಿರುವ ರೀತಿ ಮೆಚ್ಚುವಂತಾಗಿದೆ.

ಎಲ್ಲ ವೀರಶೈವ ಪ್ರಕ್ರಿಯೆಗಳನ್ನು ಒಳಗೊಂಡು, ಎಲ್ಲ ಮುಮುಕ್ಷುಗಳಿಗೆ–ಸಾಧ ಕರಿಗೆ-ಬೆಳಕು ನೀಡುವುದರಲ್ಲಿ-ಬೆಳಕಾಗಿರುವದರಲ್ಲಿ–ಇದರ ಉಪಯುಕ್ತತೆ ಹಿರಿದಾಗಿದೆ.

ಶೈವ ಸಂಪ್ರದಾಯದ ಮೋಹಕ್ಕೆ ಬಿದ್ದು, ಸ್ವೇತರ ದೈವಗಳನ್ನು ಅರ್ಚಿಸುವದ ರಲ್ಲಿ ತೊಡಗಿದ ವೀರಶೈವ ಹೃದಯ ಪರಿವರ್ತನೆ ಮಾಡುವ ಮಹದುಪಕಾರವು ಈ ಗ್ರಂಥದಿಂದ ಸಂಭವಿಸಬಹುದಾಗಿದೆ.

ವೀರಶೈವ ತತ್ವಾಚರಣೆ ವಿಶಿಷ್ಟರಲ್ಲಲ್ಲದೆ, ಸಾಮಾನ್ಯರಲ್ಲಿಲ್ಲದ ಕಾಲದಲ್ಲಿ ವೀರಶೈ ವದ ಅಸ್ತಿತ್ವವು ಗ್ರಂಥಗಳನ್ನೇ ಪ್ರಾಮುಖ್ಯವಾಗಿ ಅವಲಂಬಿಸಿರುವದರಿಂದ ಈ ಶಿವಾ ದ್ವೈತ ದರ್ಶನದ ಬಗೆಗೆ ನಾನೇ ಏಕೆ ವೀರಶೈವ ಸಮಾಜವೇ ತಮಗೆ ಚಿರಋಣಿಯಾ ಗಿರಬೇಕಾಗಿದೆ.

—ಶ್ರೀ ಶಾಂತವೀರಸ್ವಾಮಿಗಳು, ಹರಳೇಶ್ವರಾಶ್ರಮ

# ಆಧುನಿಕ ಜಿಜ್ಞಾಸುವಿಗೆ ವೀರಶೈವ ಸೈದ್ಧಾಂತಿಕ ಸಮೀಕ್ಷೆ

೨

ವೀರಶೈವ ಧರ್ಮದ ಸೈದ್ಧಾಂತಿಕ ಸಮೀಕ್ಷೆ ನಡೆಸುವ ಗ್ರಂಥಗಳು ಸಂಸ್ಕೃತದಲ್ಲಿ ಹಲವಾರು ಇವೆ. ಶ್ರೀಪತಿ ಪಂಡಿತರೇ ಮೊದಲಾದವರು ಶಂಕರರೇ ಮೊದಲಾದ ಆಚಾರ್ಯರ ಕ್ರಮದಲ್ಲಿ ವೀರಶೈವದ ತಾತ್ವಿಕ ವಿವೇಚನೆ ವ್ಯಾಖ್ಯೆಯನ್ನೊಳಗೊಂಡ ಪ್ರಕರಣ ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಶ್ರೀಗಳಾದ ನಾಗೇಶಶಾಸ್ತ್ರಿ ಚಂದ್ರಶೇಖರಶಾಸ್ತ್ರಿ ಮೊದಲಾದವರು ಈ ದಿಶೆಯಲ್ಲಿ ಸಾಕಷ್ಟು ಕೆಲಸ ಮಾಡಿದ್ದಾರೆ. ಆದರೆ ಈ ಗ್ರಂಥಗಳೆಲ್ಲವೂ ಸಾಂಪ್ರದಾಯಿಕ ಶೈಲಿಯಲ್ಲಿ ರಚಿತವಾಗಿವೆ. ಆಧುನಿಕ ಜಿಜ್ಞಾಸುವಿಗೆ ವಿವಿಧ ಖಂಡನೆ ಮಂಡನೆಗಳಿಗಿಂತ ಸಂಗ್ರಹ ರೂಪದಲ್ಲಿ ವಿಶ್ಲೇಷಣ ಮಾರ್ಗದಲ್ಲಿ ತತ್ವಜ್ಞಾನ ನಿರೂಪಣೆ ನಡೆದರೆ ಹೆಚ್ಚು ಬೇಗ ಗ್ರಾಹ್ಯವಾಗುತ್ತದೆ. ಶ್ರೀ ಜ. ಚ. ನಿ. ಅವರಗ್ರಂಥ ಈ ದಿಕ್ಕಿನಲ್ಲಿ ಸಾಗಿದೆ. ಇಂದು ಯಾವುದೋ ಒಂದು ಧರ್ಮವನ್ನು ಸಂಪ್ರದಾಯದ ಚೌಕಟ್ಟಿನಲ್ಲಿ ನಿರೂಪಿಸುವುದಕ್ಕಿಂತ ವಿಶ್ವಧರ್ಮದ ಬೆಳಕಿನಲ್ಲಿ ನೋಡಬೇಕಾಗಿದೆ. ಶ್ರೀ ಜ. ಚ. ನಿ. ಅವರು ಈ ಗ್ರಂಥದಲ್ಲಿ ವೀರಶೈವ ಧರ್ಮ ಸಮನ್ವಯ-ದ್ವೈತಾದ್ವೈತಗಳ ಜ್ಞಾನಭಕ್ತಿಗಳ ಸಮನ್ವಯ ಅಡಿಗಲ್ಲಿನ ಮೇಲೆ ಹೇಗೆ ನಿಂತಿದೆ ಎಂಬುದನ್ನು ತುಂಬ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಸಮಷ್ಟಿ, ಅಸಂಗೆ ಎಂದು ಎರಡು ದಳಗಳಲ್ಲಿ ವಿಭಕ್ತವಾಗಿರುವ ಈ ಗ್ರಂಥದ ೨೯ ಅಧ್ಯಾಯಗಳಲ್ಲಿ ಷಟ್‌ಸ್ಥಲ ದರ್ಶನದ ಸಮ್ಯಕ್ ವಿವೇಚನೆ ನಡೆದಿದೆ. ಉಪನಿಷತ್ತು ಆಗಮಗಳು ಬಸವಾದಿ ವಚನಕಾರರ ವಚನಗಳ ವಿಪುಲ ಉದ್ಧರಣಗಳಿಂದ ಷಟ್‌ಸ್ಥಲ ದರ್ಶನದ ತಾತ್ವಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ. ಅಂಗ–ಲಿಂಗ, ಶಿವ–ಜೀವ ಶಕ್ತಿ, -ಭಕ್ತಿ, ಹಸ್ತ-ಮುಖ, ಪದಾರ್ಥ-ಪ್ರಸಾದ ಜ್ಞಾನ-ಕ್ರಿಯೆ,ಪಂಚೀಕರಣ,ಪ್ರಪಂಚ,ಪರಮಾರ್ಥ ಯೋಗ, ಶಿವಯೋಗ ಈ ಅಧ್ಯಾಯಗಳಲ್ಲಿ ಲೇಖಕರ ಸ್ವತಂತ್ರ ಚಿಂತನೆ ವೀರಶೈವ ದರ್ಶನದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತವೆ. ಸಂಪ್ರದಾಯವನ್ನು ಅನುಸರಿಸಿಯೂ ಸಂಪ್ರದಾಯಾತೀತವಾದ ಚಿಂತನೆ ವಿವರಣೆ ಇಲ್ಲಿ ದೊರೆಯುತ್ತವೆ.

ಶ್ರೀ ಜ. ಚ. ನಿ. ಅವರ ಶೈಲಿ ತುಂಬ ವಿಚಾರಕ್ಷಮವಾಗಿದೆ. ಗಂಭೀರವಾಗಿದೆ. ಕನ್ನಡದಲ್ಲಿ ವಿಚಾರ ಸಾಹಿತ್ಯದ ಕೊರತೆಯಿರುವಾಗ ಇಂಥ ಪುಸ್ತಕ ನಿಜಕ್ಕೂ ಸ್ವಾಗತಾರ್ಹ.

**ಮ. ಸು. ಕೃಷ್ಣಮೂರ್ತಿ**
ಪ್ರಜಾಮತ.

೩

## ಪ್ರಶಂಸನೀಯ ಪರಿಶ್ರಮ

ಈ ಪುಸ್ತಕವು ಶಿವಾದ್ವೈತವನ್ನು ಕುರಿತಾದ ಪುಸ್ತಕಗಳಲ್ಲೊಂದಾಗಿದೆ. ವೀರ ಶೈವ ದರ್ಶನವನ್ನು ಶ್ರೀಗಳವರು ಸವಿಸ್ತಾರವಾಗಿ ತಿಳಿಸಲು ಮಾಡಿದ ಉತ್ತಮ ಪ್ರಯತ್ನವಾಗಿದೆ. ಪುಸ್ತಕವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟು ವೀರಶೈವ ದರ್ಶನದ ವಿಷಯಕ್ಕೆ ವಿವರಿಸಬೇಕಾದ ಅಂಶಗಳನ್ನು ಒಳಗೊಂಡಿದೆ.

ವೀರಶೈವ ದರ್ಶನವನ್ನು ಆಧುನಿಕ ರೀತಿಯಲ್ಲಿ ವಿವರಿಸಬಲ್ಲ ಪುಸ್ತಕಗಳು ಕನ್ನಡದಲ್ಲಿ ವಿರಳವಾಗಿವೆ. ಅಂತಹ ಪ್ರಸಂಗದಲ್ಲಿ ಶ್ರೀ ಶೈಲ ನಿಡುಮಾಮಿಡಿ ಜಗದ್ಗುರು ಗಳವರು ಮಾಡಿದ ಪ್ರಯತ್ನ ಪ್ರಶಂಸನೀಯವೆಂದು ಹೇಳಬಹುದು.

ಪುಸ್ತಕದಲ್ಲಿ ಮೊದಲನೆಯ ಭಾಗದಲ್ಲಿ ಶಿವ ಶಬ್ದದ ಉತ್ಪತ್ತಿ ದೇವರ ಸ್ವರೂಪ ಕಲ್ಪನೆ, ಶಕ್ತಿ ಶಿವ ಸಂಬಂಧ, ಅಂಗಲಿಂಗಗಳ ವಿಭೇದನಿರೂಪಣೆ. ಶಿವಾದ್ವೈತ ತತ್ವ ನಿರೂಪಣೆ,ಜಗತ್ತು ಜೀವಈಶ್ವರ ಮೂವತ್ತಾರು ತತ್ವ ವಿವರ, ಮಲತ್ರಯವಿವರ, ಲಿಂಗ ಧಾರಣ ಮಹತ್ವಗಳನ್ನು ವಿವರಿಸುವುದನ್ನು ಕಾಣುತ್ತೇವೆ ಅಲ್ಲಲ್ಲಿ ವೀರಶೈವ ದರ್ಶ ನವನ್ನು ಇತರ ದರ್ಶನಗಳೊಂದಿಗೆ ಹೋಲಿಸುವ ಕ್ರಮವನ್ನೂ ಕಾಣುತ್ತೇವೆ.

ಎರಡನೆಯ ಭಾಗದಲ್ಲಿ ಲಿಂಗಾರ್ಚನೆಯ ಪರಿಣಾಮ, ಅರಿಷಡ್ವರ್ಗನಾಶ, ಅರ್ಪ ಣಾವಿಧ, ಸ್ಥಲ ವಿವರ, ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳನ್ನೂ ಮತ್ತು ಶಕ್ತಿ ಭಕ್ತಿ, ಶಿವ, ಜೀವ, ಕ್ರಿಯಾ ಜ್ಞಾನ, ಪಂಚೀಕರಣ ಮತ್ತು ಶಿವಯೋಗ ಮೊದಲಾದ ವೀರಶೈವ ದರ್ಶನಕ್ಕೆ ಸಂಬಂಧಿಸಿದ ಮಹತ್ವದ ವಿಷಯಗಳ ವಿವೇಚನೆ ಇದೆ. ಈ ಪುಸ್ತಕಕ್ಕೆ ವಿಶೇಷವಾಗಿ "ಸಿದ್ಧಾಂತ ಶಿಖಾಮಣಿ"ಯನ್ನೇ ಆಧಾರ ಗ್ರಂಥವೆಂದು ಭಾವಿ ಸಿದ್ದರೂ ವಚನಕಾರರನ್ನೂ ಹಲವಾರೆಡೆಗೆ ಉದಹರಿಸಿದ್ದಾರೆ. ಶ್ರೀಗಳವರ ಶೈಲಿಯು ತುಂಬಾ ಸರಳವೂ ಲಲಿತವೂ ಆಗಿದೆ. ಅವರ ಪರಿಶ್ರಮ ನಿಜವಾಗಿಯೂ ಪ್ರಶಂಸ ನೀಯ.

**ಬಿ. ಸಿ. ಜವಳಿ** (ಪ್ರಜಾಮತ)

೪

## ತತ್ವದ ಕೈದೀವಿಗೆ ಶಿವಾದ್ವೈತ ದರ್ಶನ

ವೀರಶೈವ ಧರ್ಮದ ಆಚಾರ್ಯ ಪುರುಷರೊಬ್ಬರ ಸಿದ್ಧ ಹಸ್ತದಿಂದ ಹೊರ ಬಿದ್ದ ವೀರಶೈವ ಧರ್ಮವನ್ನು ಪ್ರತಿಪಾದಿಸುವ ಈ ಧರ್ಮ ಗ್ರಂಥವು ವೀರಶೈವ ಮತ ತತ್ವಕ್ಕೆ ಕೈದೀವಿಗೆಯಂತೆ ಇದೆಎಂದರೆ ತಪ್ಪಾಗಲಾರದು. ಶತಮಾನಗಳು ಉರುಳಿ ಹೋಗುವಾಗ ಮತದ ಏರು ಪೇರುಗಳು ಎಷ್ಟಾಗಿದ್ದರೂ ಆ ಪರಂಪರೆಯನ್ನು ರಕ್ಷಿಸಲ

ನಿರ್ಮಿತವಾಗಿರುವ ಸ್ಥಾನವನ್ನು ಅಲಂಕರಿಸಿರುವ ಶ್ರೀಗಳು ಸಕಲ ತತ್ವಗಳನ್ನೂ ಅನುಷ್ಠಾನದಲ್ಲಿ ತರತಕ್ಕವರಾಗಿದ್ದು ಅವರ ಅನುಭವದಿಂದ ಹೊರಬಿದ್ದಿರುವ ಈ ಮಾತುಗಳು ನಿಜಕ್ಕೂ ಪ್ರಮಾಣ ವಾಕ್ಯಗಳೆಂದು ಹೇಳಬಹುದು. ಅನುಭವದೊಂದಿಗೆ ಅನೇಕ ಪ್ರಮಾಣ ಗ್ರಂಥಗಳನ್ನು ಉದಾಹರಿಸಿರುವುದು ಗ್ರಂಥದ ಹಿರಿಮೆಗೆ ಮತ್ತಷ್ಟು ಮೆರುಗನ್ನು ಕೊಟ್ಟಿದೆ. ಶಿವತತ್ವ ಶಕ್ತಿತತ್ವ ಮುಂತಾದ ಪ್ರಕರಣಗಳಲ್ಲಿ ಸಾಂಪ್ರದಾಯಕವಾದ ಸಿದ್ಧಾಂತಗಳನ್ನು ಸೂತ್ರೋಪನಿಷತ್ತುಗಳು ಹಾಗು ವಚನ ಶಾಸ್ತ್ರದ ಸಾರಸಂಗ್ರಹದಿಂದ ಸಮರ್ಥಿಸಿರುವುದಲ್ಲದೆ ಸಮಷ್ಟಿ ಸೃಷ್ಟಿ, ೩೬ ತತ್ವೋದಯ ಅರ್ಚನ ಅರ್ಪಣ ಮತ್ತು ಅನುಭವ ರಹಸ್ಯಗಳನ್ನು ತಮ್ಮದೇ ಆದ ಶೈಲಿಯಲ್ಲಿ ಶ್ರೀಗಳು ಬಹಳ ಸರಳವಾಗಿ ಧರ್ಮದ ತಿರುಳನ್ನು ತೋರಗೆಡಪಿದ್ದಾರೆ. ಕನ್ನಡಿಗರು ಅದರಲ್ಲೂ ಧರ್ಮ ಜಿಜ್ಞಾಸುಗಳು ಈ ಹೊತ್ತಿಗೆಯನ್ನು ಆದರದಿಂದ ಓದಿ ಕೃತಾರ್ಥರಾಗಬೇಕೆಂದು ಹಾರೈಸುತ್ತೇನೆ.

—ಶಂಕರ (ಕನ್ನಡ ನುಡಿ)

---

## ಶೈವ ಸಿದ್ಧಾಂತದ ಮಣಿ-ಸಿದ್ಧಕೃತಿ

"ಶಿವಾದ್ವೈತ ದರ್ಶನ" ಅದೊಂದು ಶೈವಸಿದ್ಧಾಂತದ ಮಣಿ; ಅದರಲ್ಲಿ ಕಲಾಕಾರನ ಅವ್ಯಕ್ತ ಕಲೆ ಸೂರೆಗೊಂಡಿದೆ; ಲೇಖನಚಾತುರ್ಯದ ಶೈವಾಡ ಹೃದಯಂಗಮವಾಗಿ ಹಬ್ಬಿದೆ ; ಸಿದ್ಧಾಂತದ ನೆಲೆಕಲೆಗಳನ್ನೆಲ್ಲ ಬಗೆದು ಆಳಿವ ಸಿದ್ಧಮತಿಯ ಸ್ಫುಟ ದರ್ಶನವಲ್ಲಿದೆ: ಅಷ್ಟೇ ಏಕೆ? ಅದೊಂದು ಸಿದ್ಧ ಕೃತಿ ! ಅದರ ಕ್ರಯ ೫೦೦ ಅಲ್ಲ, ಐವತ್ತು ಸಹಸ್ರ... !

ಒಂದೇ ವರುಷ ಅಲ್ಲ, ಆರು ತಿಂಗಳುಗಳಲ್ಲಿಯೇ ಮೂರ್ತಿವೆತ್ತ ಒಂದು ವಚನ ಕಾರ್ಯ ಮತ್ತೊಂದು ಪ್ರಬೋಧಕೃತಿ ಅಚ್ಚುಕಟ್ಟಾಗಿ, ಕನ್ನಡಿಗರ ಕೈ ಸೇರುತ್ತಿರುವುದು ಅಭ್ಯುದಯದ ಮುನ್ಸಂಕೇತವಲ್ಲದೆ ಇನ್ನೇನು ? ಇದರಲ್ಲಿ ಒಂದು ಸಾಮಾನ್ಯರ ಬುದ್ಧಿಗೆ ಚಾಲನವಿತ್ತರೆ, ಇನ್ನೊಂದು—ನಾಡಿನ ಧರ್ಮ ಪ್ರಭುಗಳ ತಲೆಗೊಂದು ಮಾತ್ರ ಈಯುತ್ತಿದೆ—ಕ್ಷಮಿಸಿ ಅದು ನನಗಿನ್ನು ಕಡಿಯಲಾರದ ಕಡಲೆ........! ಪದ್ಯಗದ್ಯಗಳ ಸೊಬಗನಿಂತು ನಿರಾಯಾಸವಾಗಿ ಸುರಿಸುವ ಮಹಾಶಕ್ತಿ ಶ್ರೀಸನ್ನಿಧಿಯವರ ಅಪ್ರಾಕೃತ ಅಶಕ್ತ-ಅಲ್ಲ-ಒಂದು ದೃಷ್ಟಿಯಿಂದ, ನಿಶ್ಚಿತವಾಗಿಯೂ ನನಗೆ ತಿಳಿಯದ ದೃಷ್ಟಿಕೋನದಿಂದ ಸಶಕ್ತವಾದ ಪ್ರಕೃತಿ (ಶರೀರ) ಯಲ್ಲಿ ತುಂಬಿ ತುಳುಕುತ್ತಿರುವದನ್ನು ಕಂಡು ನನಗೆ ಆಶ್ಚರ್ಯವೆನಿಸುತ್ತಿದೆ: ಅದು ನಾಡಿನ ಪುಣ್ಯವೋ, ಸಿದ್ಧಾಂತದ ಪುಣ್ಯವೋ ಇರಬೇಕು ! ನಾನದಕ್ಕೆ ಮಾತ್ಸರ್ಯ ಪಡದಿರಲಾರೆ ! ನನ್ನಲ್ಲಿ ಕೇಳುವಷ್ಟು ಧೈರ್ಯವೋ, ತೆರೆದುಕೊಳ್ಳುವ ಪಾತ್ರತೆಯೊ ಇದ್ದಿದ್ದರೆ-ಅಲ್ಲ ದೇವನು ದಯೆಪಾಲಿಸಿದ್ದರೆ ಪೂಜ್ಯ ಸನ್ನಿಧಿಯವರ ಜ್ಞಾನ, ಶೈಲಿ, ಸ್ಫೈರಣೆ, ಶಾಂತಿಗಾಗಿ

ಅವರನ್ನೇ ಅಲುಗದಂತೆ ಕೇಳುತ್ತಿದ್ದೆ; ಅಥವಾ ಅದೆಲ್ಲದರ ಒಂದು ಸೆಲೆಗಾದರೂ ಕಾಯುವ ಕಾಲ ನಿರೀಕ್ಷಿಸುತ್ತಿದ್ದೆ. ಅದೇನೇ ಇರಲಿ—

'ಶಿವಾದ್ವೈತ' ದರ್ಶನವನ್ನು ಕುರಿತು ಒಂದೆರಡು ಸೂಚನೆಗಳನ್ನು ಹೇಳಬಯಸುವೆ. ಅವರ ಮತದಂತೆ 'ಶಿವಾದ್ವೈತದರ್ಶನ'ದಲ್ಲಿ ಉಪಯೋಗಿಸಲ್ಪಟ್ಟ ಹಲ ಕೆಲವು ಪಾರಿಭಾಷಿಕ—ಸಿದ್ಧಾಂತಶಾಸ್ತ್ರಕ್ಕೆ ಅನುಗುಣವಾದ—ಶಬ್ದಗಳು ಸಾಮಾನ್ಯ ಓದುಗರಿಗೆ (ಅಥವಾ for the comparative Readers of different philosophical systems.) ತಿಳಿದುಕೊಳ್ಳಲು ಕಠಿಣವಾದವುಗಳಾಗಿವೆ ಅಥವಾ ಕಷ್ಟ ಸಾಧ್ಯತಃ ತಿಳಿಯಬೇಕಾಗುವುದು. ಅದಕ್ಕಾಗಿ ಅಲ್ಲದೆ ಅನ್ಯಮತೀಯರು ಅವಗಾಹಿಸುವಾಗ ಅಪಾರ್ಥ-ಭಿನ್ನಾರ್ಥ ಮಾಡಿಕೊಳ್ಳದಿರಲೆಂಬ ಸುದುದ್ದೇಶಕ್ಕಾಗಿ ಪಾರಿಭಾಷಿಕ ಶಬ್ದಗಳ ಅರ್ಥವನ್ನೂ ಹಾಗು ಅವುಗಳಿಗೆ ಸರಿಯಾದ ಅನ್ಯಮತೀಯರ ಉದಾ: ವೇದಾಂತ-ಶಬ್ದಗಳನ್ನು ಒಳಗೊಂಡ ಒಂದು ಚಿಕ್ಕ (೨-೩ ಪುಟದ) ಕೋಷ್ಟಕವನ್ನು ತಯಾರಿಸಿ ಪುಸ್ತಕದ ಕೊನೆಗೆ ಹಚ್ಚುವುದು ಅವಶ್ಯಕವಾಗಿದೆ.

ಧರ್ಮಾಭಿಮಾನಿಗಳು ವಿಶಾಲ ತಳಹದಿಯ ಮೇಲೆ, ಶಿವಾನುಭವದ ಮಹಾ ಅನುಭವದ ಮೇಲೆ, ಖಂಡನ-ಮಂಡನದ ಸೆಳತಿಲ್ಲದ ಸದ್ಬೋಧ ಶಿವಾದ್ವೈತ ಪ್ರಬೋಧೆಯ ಮೇಲೆ, ಪೂರ್ಣವಾದ ಆಧಾರಿತವಾದ ಒಂದು ಶಿವಾದ್ವೈತ ಮಹಾಕೃತಿಯ ಕನಸೊಂದನ್ನು ಕಾಣುತ್ತಿದ್ದಾರೆ; ಆ ಕನಸನ್ನು ನೆರವೇರಿಸುವ ಮಹಾವ್ಯಕ್ತಿ ಯಾರಿರಬಹುದು? ಅವರ ದೃಷ್ಟಿಯಲ್ಲಿ ಆ ಕಾರ್ಯ ನಿರ್ವಹಿಸುವ ಅತುಲ ಆಳವು ಶ್ರೀ ಸನ್ನಿಧಿಯವರಲ್ಲಿದೆ. ಆ ಕಾರ್ಯದ ಅನತಿ ಕಾಲದ ಪ್ರತೀಕ್ಷೆ ಮಾಡಬಹುದಷ್ಟೆ? ಅಂದರೆ ಓದುಗ ದ್ವೈತಿಯೇ ಇರಲಿ, ಬದ್ಧನೇ ಇರಲಿ ತನ್ನ ತನ್ನ ಮತಕ್ಕೆ ಭಿನ್ನವಲ್ಲವೆಂದೇ ತಿಳಿಯಬೇಕು; ಅಥವಾ ತನ್ನ ಮತಕ್ಕೂ ಮಿಕ್ಕಿ ಮುನ್ನುಗ್ಗಿದ ಮೊಗ್ಗೆಯೊಂದಿಲ್ಲಿದೆ ಎಂದು ಹೆಮ್ಮೆ ಪಡಬೇಕು.

—ಶ್ರೀ ಸಿದ್ಧೇಶ್ವರ, ಎಂ. ಎ.,

# ನವಲಿಂಗ ಸಾಹಿತ್ಯ ಸಮೀಕ್ಷೆ

— ಪಂಡಿತ ಹೆಚ್. ಎಂ. ರಾಮಾರಾಧ್ಯರು, ಬೆಂಗಳೂರು

ಭಾರತದಲ್ಲಿನ ಹಲವಾರು ಆಸ್ತಿಕ ಮತಗಳಲ್ಲಿ ವೀರಶೈವ ಮತವೂ ಒಂದು. ಎಲ್ಲ ಆಸ್ತಿಕ ಮತಗಳಿಗೂ ಒಂದೊಂದು ಸಿದ್ಧಾಂತವಿರುವಂತೆ ವೀರಶೈವ ಮತವೂ ತನ್ನದೇ ಆದ ಸ್ವತಂತ್ರ ಹಾಗೂ ವಿಶಿಷ್ಟ ಸಿದ್ಧಾಂತವನ್ನು ಹೊಂದಿದೆ. ಇದನ್ನು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ, ಶಿವಾದ್ವೈತ ಸಿದ್ಧಾಂತ ಶಿವಾನುಭವ ಸಿದ್ಧಾಂತ ಎಂಬ ಪರ್ಯಾಯನಾಮಗಳಿಂದ ಕರೆಯುತ್ತಾರೆ. ಶಿವಾಗಮಗಳಲ್ಲಿ ವೀರಶೈವಾಚಾರ್ಯವರ್ಯರಿಂದ ರಚಿತವಾದ ತತ್ತ್ವಗ್ರಂಥಗಳಲ್ಲಿ, ಶಿವಶರಣರ ಸುಮಧುರ ವಚನ ವಾಙ್ಮಯದಲ್ಲಿ ಈ ಸಿದ್ಧಾಂತದ ಸ್ವರೂಪವು ನಮಗೆ ಕಾಣಸಿಗುತ್ತದೆ. ವೀರಶೈವರ ಸಾಧನಾ ಮಾರ್ಗವೂ ಮೋಕ್ಷದ ಭಾವನೆಯೂ ಇತರ ಮತಗಳು ಪ್ರತಿಪಾದಿಸುವುದಕ್ಕಿಂತ ತೀರ ವಿಭಿನ್ನವಾದದ್ದು, ಪರಮಾತ್ಮ ಬೇರೆ. ತಾನು ಬೇರೆ; ಅವನನ್ನು ಆರಾಧಿಸಿ, ಭಜಿಸಿ, ಅವನ ಪ್ರೇಮವನ್ನು ಸಂಪಾದಿಸಿ, ಆತನ ಸಾನ್ನಿಧ್ಯದಲ್ಲಿರುವುದೇ ಮೋಕ್ಷ ಅಥವಾ ಅವನಲ್ಲಿ ಪೂರ್ಣವಾಗಿ ಬೆರೆತು ಹೋಗುವುದೇ ಮುಕ್ತಿ ಮುಂತಾದ ವಿಚಾರವನ್ನು ವೀರಶೈವ ಸಿದ್ಧಾಂತ ಹೇಳುವುದಿಲ್ಲ. ಪರಮಾತ್ಮನು ಜಗದ್ಭರಿತ ಅವನು ಮನುಷ್ಯನಲ್ಲಿಯೂ ಇದ್ದಾನೆ, ಆದರೆ ಪ್ರಕಟನಾಗಿಲ್ಲ, ಪ್ರಕಟೀಕರಿಸಿಕೊಳ್ಳಬೇಕಾಗಿದೆ. ಇದಕ್ಕಾಗಿ ಶ್ರೀಗುರುವು ಅವನಲ್ಲಿರುವ ಪರಮಾತ್ಮ ಶಕ್ತಿಯನ್ನು ದೀಕ್ಷಾ ಸಂಸ್ಕಾರದ ಮೂಲಕ ಹೊರತಂದು ಇಷ್ಟಲಿಂಗರೂಪದಲ್ಲಿ ಅವನ ಕರಸ್ಥಲಕ್ಕೆ ನೀಡುತ್ತಾನೆ. ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿರುವಂತೆಯೇ ಅವುಗಳಿಗೆ ಅನುಸಾರವಾಗಿ ಲಿಂಗವೂ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಮೂರಾಗಿ ವಿಭಾಗವಾಗುತ್ತದೆ. ಇಷ್ಟಲಿಂಗವು ಕ್ರಿಯೆಗೂ, ಪ್ರಾಣಲಿಂಗವು ಮನಸ್ಸಿಗೂ, ಭಾವಲಿಂಗವು ಜ್ಞಾನಕ್ಕೂ ಸಂಬಂಧ ಪಡುತ್ತದೆ. ಮುಂದೆ ಈ ಮೂರು ಲಿಂಗಗಳೂ

ವಿಕಾಸವಾಗಿ ಷಟ್‌ಸ್ಥಲಕ್ಕೆ ಅನುಗುಣವಾಗಿ ಷಡ್ಲಿಂಗಗಳಾಗುತ್ತವೆ. ಅನಂತರ ನವಾಂಗಕ್ಕೆ ಅನುಸಾರವಾಗಿ ನವಲಿಂಗಗಳಾಗುತ್ತವೆ – ವೀರಶೈವನಾದವನು ಈ ಲಿಂಗಾಂಗಗಳ ಸಕೀಲವನ್ನರಿದು ತನ್ನಲ್ಲಿಯೇ ಎಂದರೆ ತನ್ನ ದೇಹವೆಂಬ ದೇವಾಲಯ ದಲ್ಲಿಯೇ ಈ ನವಲಿಂಗಗಳನ್ನು ಆರಾಧಿಸಬೇಕು. ತನ್ನ ಶುದ್ಧವಾದ ವರ್ತನೆಗಳ ಮೂಲಕ ತನ್ನಲ್ಲಿರುವ ಶಕ್ತಿಗಳನ್ನು ಅರಳಿಸಿಕೊಳ್ಳಬೇಕು. ಆಗ ಆ ಶಕ್ತಿಗಳಲ್ಲೆಲ್ಲ ಮೇಲೆ ಹೇಳಿದ ಲಿಂಗಗಳ ಕಳೆ ಸ್ಥಾಪನೆಯಾಗುತ್ತದೆ. ಆರಾಧಕನಲ್ಲಿ ಶುದ್ಧ ವೃತ್ತಿ ಗಳು ವಿಕಾಸವಾದಂತೆಲ್ಲ ಲಿಂಗದ ಕಳೆ ಪ್ರಗತಿ ಹೊಂದುತ್ತದೆ. ಹೀಗೆ ಒಂದು ಮೂರಾಗಿ, ಆರಾಗಿ, ಒಂಬತ್ತಾಗಿ ಕೊನೆಗೆ ಆ ಒಂದರಲ್ಲಿ ಎಂದರೆ ಲಿಂಗದಲ್ಲಿ ಅಥವಾ ಶೂನ್ಯದಲ್ಲಿ ಐಕ್ಯವಾಗುವುದೇ ಮೋಕ್ಷ, ಮುಕ್ತಿ, ಕೈವಲ್ಯ ಅಥವಾ ಲಿಂಗಾಂಗ ಸಾಮ ರಸ್ಯ. ಇಂತಹ ಪರಮೋತ್ತಮ ಸ್ಥಿತಿಯನ್ನು ಪಡೆಯಲು ಬೇಕಾದ ಸಾಧನ ಸಾಮಗ್ರಿ ಗಳನ್ನು ತಿಳಿಸುವುದೇ ಶಿವಾದ್ವೈತ ಸಿದ್ಧಾಂತ.

ಶ್ರೀ ಜಗದ್ಗುರು ನಿಡುಮಾಮಿಡಿ ಮಹಾಸನ್ನಿಧಿಯವರು ಈ ಸಿದ್ಧಾಂತಕ್ಕೆ ಸಂಬಂಧಿಸಿದ ಲಿಂಗ ಸಂಕೀಲಗಳನ್ನು ತಿಳಿಗನ್ನಡದ ಮಧುರ ಶೈಲಿಯಲ್ಲಿ ಸಾಮಾನ್ಯ ರಿಗೂ ಅರ್ಥವಾಗುವಂತೆ ತಮ್ಮಿಂದ ರಚಿತವಾದ 'ನವಲಿಂಗ ಸಾಹಿತ್ಯ' ಎಂಬ ಗ್ರಂಥದ ಮೂಲಕ ಅನುಗ್ರಹಿಸಿದ್ದಾರೆ. ಈ ಗ್ರಂಥವನ್ನು ಸ್ಥೂಲವಾಗಿ ಪರಿಚಯ ಮಾಡಿ ಕೊಡುವುದೇ ಈ ಲೇಖನದ ಉದ್ದೇಶ. ಶ್ರೀಗಳವರ ವಾಣಿಯ ಮುಖಾಂತರ ಅವ ರದೇ ಆದ ವಿಚಾರಧಾರೆಯನ್ನು ಓದುಗರ ಮುಂದೆ ಮಂಡಿಸುವ ಪ್ರಯತ್ನ ಇಲ್ಲಿ ನಡೆದಿದೆ.

ಗ್ರಂಥದ ಹೆಸರು 'ನವಲಿಂಗ ಸಾಹಿತ್ಯ' ಇದರಲ್ಲಿ ನವ, ಲಿಂಗ, ಸಾಹಿತ್ಯ ಎಂಬ ಮೂರು ಪದಗಳಿವೆಯಷ್ಟೆ. ಗ್ರಂಥಾರಂಭದಲ್ಲಿ ಇವುಗಳಿಗೆ ವಿವರಣೆಯನ್ನು ಕೊಟ್ಟು ತಾವು ಪ್ರತಿಪಾದಿಸುವ ವಿಷಯಕ್ಕೆ ಸಂಬಂಧಿಸಿಕೊಂಡಿರುವ ಶ್ರೀಗಳವರ ರೀತಿ ಬಹಳ ಮನೋಜ್ಞವಾಗಿದೆ. "ಒಂದು ಒಂಬತ್ತಾಗುವುದೇ ತತ್ವದ ಕೊನೆ ; ಅದೇ ತತ್ವ ಗಳ ಗೊನೆ" ಎಂಬ ಮಾತಿನಿಂದ ಆರಂಭಿಸಿ, ಒಂದರಿಂದ ಒಂಬತ್ತರವರೆಗಿನ ಅಂಕಗಳ ಮಹತ್ವವನ್ನು ಹೊರಗೆಡಹಿದ್ದಾರೆ. ಅದರಲ್ಲೂ ಲಿಂಗ ಶಬ್ದಕ್ಕೆ ವಿಶೇಷಣವಾದ 'ನವ' ಎಂದರೆ ಒಂಬತ್ತು ಎಂಬ ಅಂಕವು ಹೇಗೆ ಗಣಿತ ಶಾಸ್ತ್ರದಲ್ಲಿ, ಬ್ರಹ್ಮಾಂಡ ಪಿಂಡಾಂಡಗಳಲ್ಲಿ ಶಿವಾದ್ವೈತಸಿದ್ಧಾಂತದಲ್ಲಿ ತನ್ನತನವನ್ನು ಸ್ಥಾಪಿಸಿಕೊಂಡಿದೆ ಎಂದು ಹೇಳಿರುವ ವಿಚಾರವಂತೂ ವಿದ್ವಾಂಸರು ಮೆಚ್ಚುವಂತಿದೆ. ನಿಜಕ್ಕೂ ಇವನ್ನು ಒಂದು ನವೀನ ಪರಿಶೋಧನೆಯೆಂದೇ ಹೇಳಬಹುದು. ಆ ವಿವರಣೆಯ ರೀತಿ ಹೀಗಿದೆ :

"ಒಂದು ಒಂಬತ್ತಾಗುವುದೇ ತತ್ವದ ಕೊನೆ ; ಅದೇ ತತ್ವಗಳ ಗೊನೆ. ಒಂಬತ್ತರ ಒಡೆತನ ಒಗುಮಿಗೆಯಾದುದು. ಅಂತೆಯೇ ಅದರ ಓಜ ಒಳ್ಪು ಒಳ ಗುಟ್ಟು ಒಕ್ಕಣೆಗೆ ಮಿಕ್ಕಿದವುಗಳು. ಅವಕ್ಕೆ ಬೇರೆ ಅಂಕಗಳ ಹಂಗಿಲ್ಲ. ಆ ಒಂಬತ್ತು

ಅಂಕಗಳಿಗೆ ಉಳಿದೆಲ್ಲ ಅಂಕಗಳ ಮೇಲೆ ಒಡೆತನವಿದೆ; ಒಗತನವಿದೆ. ಸ್ವರಾಕ್ಷರಗಳಲ್ಲಿ ಒಕಾರವೇ ಅಂತ್ಯಸ್ವರ. ಅದರ ಮುಂದೆ ಬೇರೆ ಸ್ವರಾಕ್ಷರಗಳಿಲ್ಲ. ಓಕಾರದ ಹ್ರಸ್ವಾಕ್ಷರವಾಗಿರುವ ಭಾಗ್ಯ ಒಂದಕ್ಕೆ ಒಂಬತ್ತಕ್ಕೆ ಬಿಟ್ಟರೆ ಬೇರಾವ ಅಕ್ಷರಕ್ಕಿದೆ? ಬೇರಾವ ಅಂಕಕ್ಕಿದೆ? ಎಲ್ಲಕ್ಕೂ ಮೂಲವಾದ ಎಲ್ಲವೂ ತಾನಾದ ಶೂನ್ಯವನೊಳಗೊಂಬ ಸೈಪು ಇವೆರಡಕ್ಕೆ ಇದೆ. ಒಂಬತ್ತರ ಬೆಳಕು, ಬದುಕು ಬೇರಾವುದಕ್ಕಿಲ್ಲ. ಒಂದರಿಂದ ಒಂಬತ್ತು; ಒಂಬತ್ತರಿಂದ ಒಂದು-ಇವೆರಡಕ್ಕೂ ಒಮ್ಮತವಿದೆ, ಒಮ್ಮೊಗವಿದೆ; ಓರಣವಿದೆ.

ಒಂಬತ್ತರ ಅಂಕೆಯಲ್ಲಿಯೂ ಒಂದು ವೈಶಿಷ್ಟ್ಯವಿದೆ. ಎರಡರಿಂದಿರುವ ಎರಡೆರಡು ಅಂಕಗಳನ್ನು ಕೂಡಿಸಿದರೆ ಒಂಬತ್ತೇ ಆಗುತ್ತದೆ. ನಿದರ್ಶನಕ್ಕಾಗಿ ಒಂಬತ್ತೆರಡು ೧೮; ಈ ಒಂದು ಎಂಟು ಎರಡನ್ನೂ ಕೂಡಿಸಿದರೆ ೯ ಆಗುತ್ತದೆ. ಇದರ ಮುಂದಿನವೆಲ್ಲವೂ ೯ ಆಗುತ್ತವೆ. ಮತ್ತೊಂದು ವಿಶೇಷವೆಂದರೆ ೯ ರ ೨—೩—೪—೫ ಅಂಕಿಗಳನ್ನು ಎಂದರೆ ೧೮-೨೭-೩೬-೪೫ ಇವನ್ನು ತಿರುಗಿಸಿಟ್ಟರೆ ೯-೮-೭-೬ರ ಕ್ರಮಾಂಕಗಳಾಗುತ್ತವೆ. ಎಂದರೆ ೮೧-೭೨-೬೩-೫೪ ಆಗುತ್ತವೆ. ಈ ವೈಶಿಷ್ಟ್ಯ ಇನ್ನಾವ ಅಂಕಿಗೆ ಇಲ್ಲ.

ಒಂಬತ್ತಕ್ಕೆ ಗಣಿತಶಾಸ್ತ್ರದಲ್ಲಿ ಗಣ್ಯತೆಯಿರುವಂತೆ ಶಿವಾದ್ವೈತ ತತ್ವ ಶಾಸ್ತ್ರದಲ್ಲಿಯೂ ಗಣ್ಯತೆಯಿದೆ, ಗಮ್ಯತೆಯಿದೆ. ಒಂಬತ್ತರ ಒಂದನೆಯ ಅಕ್ಷರದ ಮುಂದೆಯೆ ಶೂನ್ಯರೂಪಲಿಂಗವಿದೆ. ಅದರ ಮುಂದೆ ಸಂಪಾದನೆಯ ಸಾಹಿತ್ಯವಿದೆ. ಬತ್ತು ಪತ್ತು ಎಂದು ವಿಂಗಡಿಸಿ ವಿಚಾರಿಸಿದಾಗ ಒಂಬತ್ತು ಲಿಂಗಸಾಹಿತ್ಯ ಸಂಪಾದನೆ ಇಲ್ಲದಿದ್ದರೆ ಬತ್ತುವುದೆ ಬಾಳಿನ ಬಗೆ! ಅದೇ ನವಲಿಂಗ ಸಾಹಿತ್ಯ ಸಂಪಾದನೆಯಿದ್ದರೆ ಪತ್ತು ಅಂದರೆ ಸಚ್ಚಿದಾನಂದ ನಿತ್ಯ ಪರಿಪೂರ್ಣಾಖಂಡರೂಪಕ್ಕೆ ಹತ್ತು ಎಂದರ್ಥ. ಅಥವಾ ಹತ್ತನೆಯ ಚಕ್ರಕ್ಕೇರು ಎಂದರ್ಥ. ನಿಃಶೂನ್ಯಸ್ಥಲದ ಪಶ್ಚಿಮ ಚಕ್ರದ ಏಕದಳದ ಓಂಕಾರವನೇರಿ ಒಂಬತ್ತರ ಓಂಕಾರ ಮುಂದಿರುವ ಅವಾಚ್ಯ ಪ್ರಣವ ಸ್ವರೂಪನಾಗು ಎಂದು ಅಭಿಪ್ರಾಯ"

ಮುಂದೆ ನವಲಿಂಗ ಜಪ ವಿಧಾನವನ್ನು ಹೇಳುವಾಗ ಸಹ ಈ ಒಂಬತ್ತರ ವೈಶಿಷ್ಟ್ಯ ಎದ್ದು ಕಾಣುತ್ತದೆ. ಅದು ಈ ಪ್ರಕರಣಕ್ಕೆ ಸಂಬಂಧಿಸದಿದ್ದರೂ ಓದುಗರ ಮನವರಿಕೆಗಾಗಿ ಇಲ್ಲಿ ಕೊಡಲಾಗಿದೆ.

"ಆಚಾರ ಲಿಂಗಕ್ಕೆ ಅಥವಾ ಚಕ್ರಕ್ಕೆ ನಾಲ್ಕುದಳ. ದಳವೊಂದಕ್ಕೆ ೪೩೨ (೪+೩+೨=೯) ಜಪ. ನಾಲ್ಕಕ್ಕೂ ಸೇರಿ ೧೭೨೮ (೧+೭+೨+೮=೧೮, (೧+೮=೯) ಜಪವಾಗುತ್ತದೆ. ಗುರುಲಿಂಗಕ್ಕೆ ಆರು ದಳ. ದಳಕ್ಕೆ ೪೩೨ ಜಪ,

ಆರಕ್ಕೂ ಸೇರಿ ೨೫೯೨೦ (೯) ಆಗುತ್ತವೆ. ಶಿವಲಿಂಗಕ್ಕೆ ಹತ್ತು ದಳ. ದಳಕ್ಕೆ ೪೩೨೦ರಂತೆ ಹತ್ತಕ್ಕೆ ೪೩೨೦೦ (೯) ಜಂಗಮಲಿಂಗಕ್ಕೆ ಹನ್ನೆರಡು ದಳ. ದಳಕ್ಕೆ ೪೩೨೦ರಂತೆ ಹನ್ನೆರಡಕ್ಕೆ ೫೧೮೪೦ (೯) ಪ್ರಸಾದಲಿಂಗಕ್ಕೆ ಹದಿನಾರು ದಳ. ದಳಕ್ಕೆ ೪೩೨೦ರಂತೆ ಹದಿನಾರಕ್ಕೆ ೬೯೧೨೦ (೯) ಮಹಾಲಿಂಗಕ್ಕೆ ಎರಡು ದಳ. ದಳಕ್ಕೆ ೪೩೨೦ರಂತೆ ಎರಡಕ್ಕೆ ೮೬೪೦ (೯) ಒಟ್ಟು ಐವತ್ತು ದಳಗಳಿಗೆ ೨೧೬೦೦ ಜಪಗಳು ಪೂರೈಸುತ್ತವೆ."

ಇದುವರೆಗೆ ಲಿಂಗ ಶಬ್ದಕ್ಕೆ ವಿಶೇಷಣವಾದ 'ನವ' ಶಬ್ದದ ವಿವರಣೆಯನ್ನು ತಿಳಿದೆವು. ಅದು ಇನ್ನೂ ಮುಗಿದಿಲ್ಲ. ಮತ್ತೊಮ್ಮೆ ಬ್ರಹ್ಮಾಂಡ ಪಿಂಡಾಂಡಗಳನ್ನೂ ಸಕೀಲ ಸಾಹಿತ್ಯವನ್ನೂ ವಿವರಿಸುವಾಗ ಅದರ ಪ್ರಸ್ತಾಪ ಬರುತ್ತದೆ. ಈಗ ಲಿಂಗ ಶಬ್ದದ ಭಾಷ್ಯವನ್ನು ತಿಳಿಯೋಣ. ಘನ(ಲಿಂಗ)ದ ಮಹತ್ತ್ವವನ್ನು ತಿಳಿಸುವುಕ್ಕೆ ಶ್ರೀಗಳವರು ಆತ್ಮಜ್ಞಾನಿ ಅಲ್ಲಮ ಪ್ರಭುವಿನ ಒಂದು ವಚನವನ್ನು ಆಯ್ದುಕೊಂಡಿದ್ದಾರೆ. ಆಯ್ಕೆ ಅತ್ಯಂತ ಸಂಗತವಾಗಿದೆ. ಈ ವಚನದ ವ್ಯಾಖ್ಯಾನವೇ ಲಿಂಗ ಶಬ್ದದ ವ್ಯಾಖ್ಯಾನ.

**ನಿಜ ಚಿದ್ಬೆಳಗು**

> "ಬಿಳಿಯ ಮುಗಿಲ ಕರಿಯ ನಕ್ಷತ್ರದೊಳಗೊಂದು
> ಉರಿಯ ಅಂಕುರ ತೋರಿತ್ತು.
> ಅದು ಒಂದು ಮೂರು ಒಂಬತ್ತಾಗಿ ಹೊಸ್ತಿಲ ಜ್ಯೋತಿಯಂತೆ
> ಒಳ ಹೊರಗೆ ಹೊಳೆಯುತ್ತಿತ್ತು.
> ಅದನರಿದೊಡೆ ಘನ; ಅರಿಯದಿದ್ದೊಡೆ ಘನಕ್ಕೆ ಘನ.
> ಇದರಂತರವ ಗುಹೇಶ್ವರ ಲಿಂಗದಲ್ಲಿ ಚೆನ್ನಬಸವಣ್ಣನೇ ಬಲ್ಲ.
> ಬೆಸಗೊಂಬುವ ಬಾರಾ ಸಿದ್ಧರಾಮಾ !"

"ಶಿವಾದ್ವೈತಿಯು ತನ್ನ ನವಾಂಗಗಳಲ್ಲಿ ನವಲಿಂಗ ಸಾಹಿತ್ಯವ ಸಂಪಾದಿಸುವುದೆ ಚರಮ ಗುರಿ, ಪರಮ ಪರಿ. ಅದು ಒಂದಾಗಿ ಹೊರ ಹೊಮ್ಮಿ ಮೂರಾಗಿ ಆರಾಗಿ ಆ ಮೇಲೆ ಒಂಬತ್ತಾಗಿ ಬೆಳೆದು ಹೊರವೊಳಗೆ ಬೆಳಗುವ ಜ್ಯೋತಿ, ಜನಿಸುವ ನೆಲೆ ನಿಲುಕದ್ದಲ್ಲ. ತನ್ನ ಕಣ್ಣೊಳಗಿನ ಬಿಳಿಯ ಬಣ್ಣವೆ ಬಯಲು. ಅದರೊಳಗಿರುವ ಕಣ್ಣಾಲಿಯು ಅಂದರೆ ಕಪ್ಪು ಗುಡ್ಡೆಯ ತಾರೆ. ಅದರೊಳಗೆ ತೋರಿದ ತಿಳಿ ಬೆಳಗೆ ಜ್ಯೋತಿರ್ಲಿಂಗ. ಅದೇ ಮೂಲ ಲಿಂಗ. "ಮೂರು ಬಟ್ಟೆಯನಳಿದ ಬಟ್ಟಬಯಲೀ ದಿಟ್ಟಿ. ಧಿಟ್ಟಿಯಿಟ್ಟಷ್ಟು ಸಿಜಲಿಂಗದೊಳಗೆರಕಗೊಳೆ ಸುಟ್ಟರಿವೆಯಂತಿರ್ಪುದೇ ತುಟ್ಟತುದಿ ಬಟ್ಟೆ......." ಬಯಲೇ ಕಣ್ಣು, ಕಣ್ಣುಕಾಂತಿಯೆ ಲಿಂಗ, ಎಂಬುದಕ್ಕೆ ಇದು ಪ್ರಮಾಣ ವಚನ. ಅದು ಪ್ರಾಣಕ್ಕೆ ಪ್ರಾಣ. ಅದುವೆ ಅಂಗನು ಸಂಪಾದಿಸುವ

ಸಾರಾಯ ಸಂಪತ್ತು, ಸವಿಯಾದ ಸಾಹಿತ್ಯ. ಆ ಲಿಂಗ ಸಾಹಿತ್ಯವೆ ಇಷ್ಟ–ಪ್ರಾಣ–ಭಾವಲಿಂಗವೆಂದು ಮೊದಲು ಮೂರಾಗಿ ಆ ಮೇಲೆ ಆಚಾರ, ಗುರು, ಶಿವ, ಜಂಗಮ, ಪ್ರಸಾದ, ಮಹಾ–ಲಿಂಗಗಳೆಂದು ಆರಾಗಿ ಆ ಮೂರು ಸೇರಿ ಒಂಬತ್ತಾಗಿ ಒಳಹೊರಗೆ ಅಂದರೆ ಬಹಿರಂಗ ಅಂತರಂಗಗಳಲ್ಲಿ ಬೆಳ್ಳನೇ ಬೆಳಗುತ್ತದೆ ಅದನ್ನು ಎದುರಿಟ್ಟು ಅಂದರೆ ಅಂಗಲಿಂಗವೆಂಬ ದ್ವೈತಭಾವದಲ್ಲಿ, ಅರಿತರೆ ಘನ, ಎದುರಿರಿಸದೆ ಏಕವಾಗಿ ಅಂದರೆ ಅದ್ವೈತರೂಪವಾಗಿ ಅರಿಯದಿದ್ದೊಡೆ ಅಂದರೆ ಜ್ಞಾನಶೂನ್ಯವಾಗಿ ಜ್ಞಾತೃಜ್ಞಾನ ಜ್ಞೇಯರೂಪ ತ್ರಿಪುಟಿರಹಿತವಾಗಿ ಇದ್ದರೆ ಘನಕ್ಕೆ ಘನ. ಈ ಮರ್ಮವನರಿತಾತ ಚೆನ್ನಬಸವಣ್ಣ ಆತ ನವಲಿಂಗ ಸಾಹಿತ್ಯ ಸಂಪನ್ನ."

ಇದುವರೆಗೆ 'ಲಿಂಗ' ಶಬ್ದದ ವಿವರಣೆಯನ್ನು ನೋಡಿದುದಾಯಿತು. ಮುಂದೆ "ಸಾಹಿತ್ಯ" ಶಬ್ದದ ವ್ಯಾಖ್ಯಾನ:

"ಅಗಮ್ಯ ಅಗೋಚರ ಅಪ್ರಮಾಣ ಸರ್ವಶೂನ್ಯ ನಿರಾಲಂಬ ಆ ವಸ್ತುವು ಪರಶಿವಲಿಂಗವಾಗ ಮೂಲಲಿಂಗವಾಗಿ ತನ್ನಲೀಲೆಗಾಗಿ ತಾನೆ ನವಲಿಂಗವಾಯಿತು. ತಾನೊಂದೇ ಆದರೆ ಲೀಲೆ ಘಟಿಸದು. ಲೀಲೆಗೆ ಸಂಬಂಧ ಸಾಹಿತ್ಯ ಬೇಕು. ಸಾಹಿತ್ಯವೆಂದರೆ ಸಾಧನಸಾಮಗ್ರಿ ವಾಙ್ಮಯವೆಂದು ಅರ್ಥ. ನವಲಿಂಗಕ್ಕೆ ಸಾಧನ ಸಾಮಗ್ರಿಯು ಇದೆ: ಲೀಲಾ ಸಾಧನ ಸಾಮಗ್ರಿ ಇದ್ದ ಬಳಿಕ ಸಾಹಿತ್ಯರೂಪ ವಾಙ್ಮಯವು ಇದ್ದೇ ಇರುತ್ತದೆ ಆ ಲಿಂಗಲೀಲಾ ಸಾಮಗ್ರಿಯನ್ನು ವಿವರಿಸಿ ಹೇಳುವುದೇ ವಾಙ್ಮಯ ಅಥವಾ ಸಾಹಿತ್ಯ. ಈ ಸಾಧನ ಸಾಮಗ್ರಿಯನ್ನು ನಿರೂಪಿಸುವ ಸಾಹಿತ್ಯವು ಲಿಂಗಸಹಿತವಾಗಿರುವುದರಿಂದಲೇ ಸಾಹಿತ್ಯವೆಂದು ಸಾರ್ಥಕನಾಮವು. ಸಾಹಿತ್ಯದಂತೆ ಆ ಸಾಹಿತ್ಯದ ಪದಾರ್ಥವಾದ ಸಾಮಗ್ರಿಯೂ ನವಲಿಂಗ ಹಿತ ಸಹಿತವಾದುದೆ ಆಗಿರಬೇಕು, ಆಗಿರುತ್ತದೆ. ಅಂದರೆ ಸಾಧನ ಸಾಮಗ್ರಿಯೆಲ್ಲ ನವಲಿಂಗ ಸಂಬಂಧವಾದವುಗಳಾಗಿರುವವು. ಅಂತೆಯೆ ಸಾಧನ ಸಾಮಗ್ರಿಯನ್ನು ನವಲಿಂಗ ಸಕೀಲ' ವೆಂದು ಪೂರ್ವದ ಶಿವಾನುಭವಿಗಳು ಹೇಳಿದರು.

ನವಲಿಂಗ ಸಾಹಿತ್ಯ ಅಂದರೆ ಸಾಧನ ಸಾಮಗ್ರಿ ಅಪಾರವಾಗಿದೆ. ಅಪಾರವಾದರೂ ಅದನ್ನೆಲ್ಲ ಮುಖ್ಯವಾಗಿ ಬ್ರಹ್ಮಾಂಡ ಪಿಂಡಾಂಡವೆಂದು ಇಬ್ಭಾಗಿಸಿದ್ದಾರೆ. ಇವೆರಡೂ ಲಿಂಗದಂತೆ ಒಂಬತ್ತು ಒಂಬತ್ತು ಬಗೆಯಾಗಿವೆ

## ಬ್ರಹ್ಮಾಂಡ ನವವಿಧ:

ಪೃಥ್ವಿ ಅಪ್ ತೇಜ ವಾಯು ಆಕಾಶ ಸೂರ್ಯ ಚಂದ್ರ ನಕ್ಷತ್ರ ಆತ್ಮ ಇವು ಬ್ರಹ್ಮಾಂಡದ ಒಂಬತ್ತು ಬಗೆಗಳು. ಸೂರ್ಯ ಚಂದ್ರ ನಕ್ಷತ್ರಗಳಿಗೆ ಬದಲಾಗಿ ಸತ್ ಚಿತ್ ಆನಂದಗಳನ್ನೂ ಹೇಳುವುದುಂಟು. ಇವೆ ಮುಂದೆ ಲಿಂಗಗಳಿಗೆ ಅಂಗಗಳಾಗು

ತ್ತವೆ. ಬ್ರಹ್ಮಾಂಡದಂತೆ ಭೂಮಿಯು ಅಂದರೆ ಮರ್ತ್ಯವು ನವಖಂಡವಾಗಿದೆಯೆಂದು ಹಿಂದಿನವರು ಹೇಳಿದ್ದಾರೆ. ನೆಲವು ನವಧಾನ್ಯಗಳನ್ನು ಬೆಳೆಯುತ್ತದೆ. ನೀರು ನವ ರತ್ನಗಳ ತವರಾಗಿರುತ್ತದೆ. ಈ ನವರತ್ನಗಳಿಗೆ ನೆಲ ನೀರುಗಳೆರಡರ ಸಂಬಂಧವಿದೆ. ನೀರು ಮುಗಿಲುಗಳು ನವರಸಗಳನ್ನು ಹುಟ್ಟಿಸುತ್ತವೆ. ಆಕಾಶದಲ್ಲಿ ನವಗ್ರಹಗಳಿರು ತ್ತವೆ. ಅಗ್ನಿ ನವರೂಪಗಳ ಜನಕವಾಗಿದೆ. ವಾಯು ನವಸ್ಪರ್ಶಗಳ ಜನಕವಾಗಿದೆ. ಹೇಗೆ ಲಿಂಗದಿಂದೊಗೆದ ಬ್ರಹ್ಮಾಂಡವು ನವ ಸಾಹಿತ್ಯ ರಂಗವಾಗಿದೆ.

**ಪಿಂಡಾಂಡ ನವವಿಧ :**

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ತ್ಯಾಗಾಂಗ ಭೋಗಾಂಗ ಯೋಗಾಂಗವೆಂದು ನವವಿಧವಾಗಿದೆ. ನವದ್ವಾರ ಅಥವಾ ರಂಧ್ರಗಳಿಂದ ಬಹಿರಂಗ ಕೂಡಿದೆ. ನವಚಕ್ರಗಳಿಂದ ಅಂತರಂಗವು ಬಳಸಿಕೊಂಡಿದೆ. ಅಲ್ಲದೆ ನವ ಭಕ್ತಿ ಶಕ್ತಿ ಕಲೆ ಮುಖ ಹಸ್ತಾದಿಗಳಿಂದ ಕೂಡಿದೆ. ಇವನ್ನೆಲ್ಲ ಮುಂದೆ ವಿವರಿಸ ಲಾಗುತ್ತದೆ. ಇವೆಲ್ಲವನ್ನು ನವಲಿಂಗ ಸಕೀಲವೆಂದು ನಿರೂಪಿಸಿದ್ದಾರೆ. ಸಕೀಲ ವೆಂದರೆ ಸಂಬಂಧ ಪಿಂಡಾಂಡ ಬ್ರಹ್ಮಾಂಡವೆಲ್ಲವೂ ಲಿಂಗಸಂಬಂಧ, ಲಿಂಗಸಾಹಿತ್ಯ. ಲಿಂಗದಿಂದಲ್ ಹುಟ್ಟಿದವಾಗಿ ಲಿಂಗ ಸಂಬಂಧ (ಸಕೀಲ). ಲಿಂಗದಲ್ಲಿಯೆ ಲೀನ ವಾಗುವವಾಗಿ ಲಿಂಗ ಸಾಹಿತ್ಯ. ಲಿಂಗ ಲೀಲೆಗಾಗಿಯೆ ಇರುವವಾಗಿ ಲಿಂಗಲೀಲಾ ವಿಲಾಸ ಸಾಹಿತ್ಯ.

ಬ್ರಹ್ಮಾಂಡ ಸಾಹಿತ್ಯವೆಲ್ಲ ಪಂಚತನ್ಮಾತ್ರಗಳ ಸಾರವಾಗಿ ಪಿಂಡಾಂಡವನ್ನು ಪ್ರವೇಶಿಸುತ್ತವೆ. ಆ ಪಂಚತನ್ಮಾತ್ರಗಳನ್ನು ಅಂಗನು ಲಿಂಗಕ್ಕರ್ಪಿಸಿ ಭೋಗಿಸಿ ಜೀರ್ಣಿಸಿಕೊಂಡು ಶುಕ್ರೋತ್ಪತ್ತಿಯಾಗಿಸಿ ಅದರಿಂದ ಆ ಚೈತನ್ಯರೂಪಲಿಂಗವಾಗಿ ಸುತ್ತಾನೆ. ಇದರಿಂದಾಗಿ ಲಿಂಗದಿಂದ ಜನಿಸಿದ ಬ್ರಹ್ಮಾಂಡ ಪಿಂಡಾಂಡ ರೂಪ ಜಗತ್ತು ಲಿಂಗದಲ್ಲಿಯೆ ಲೀನವಾಗಿ ಲಿಂಗತ್ವವನ್ನು ಸಾರ್ಥಕಗೊಳಿಸುತ್ತಿದೆ. ಶುಕ್ರ ದಿಂದಾದ ಚೈತನ್ಯದಲ್ಲಿ ಸಕಲ ಸಾಹಿತ್ಯವಿರುತ್ತದೆ. ಆ ಚೈತನ್ಯ ನವ್ಯವಾಗಿಯೆ ಇರು ತ್ತದೆ. ಈ ದೃಷ್ಟಿಯಿಂದ ಅಂಗ ಹಳಬ. ಲಿಂಗ ಹೊಸಬ"

ಮೇಲೆ ಸ್ಥೂಲವಾಗಿ ಹೇಳಿದ ಬ್ರಹ್ಮಾಂಡ ಪಿಂಡಾಂಡಗಳನ್ನು ವಿಭಾಗಿಸಿದರೆ ನವಲಿಂಗ ಸಕೀಲ ಸಾಹಿತ್ಯ ೨೧೬ ಆಗುತ್ತವೆ. ಒಂದೊಂದು ಲಿಂಗಕ್ಕೆ ಇಪ್ಪತ್ತು ನಾಲ್ಕರಂತೆ ಒಂಬತ್ತು ಲಿಂಗಕ್ಕೆ ಈ ನವಲಿಂಗ ಸಾಹಿತ್ಯ ೨೧೬ ಆಗುತ್ತವೆ. ಈ ಇಪ್ಪತ್ತು ನಾಲ್ಕು ಸಕೀಲಗಳು ಒಂದೊಂದು ಗ್ರಂಥದಲ್ಲಿ ಒಂದೊಂದು ರೀತಿಯಾಗಿರು ವುದರಿಂದ ಶ್ರೀಗಳವರು ತಮಗೆ ಸರಿಗಂಡುದನ್ನು ಮಾತ್ರ ಸ್ವೀಕರಿಸಿದ್ದಾರೆ. ಈ

ಇಪ್ಪತ್ತುನಾಲ್ಕು ಸಕೀಲಗಳು ಎರಡು ಸರಿಭಾಗವಾಗಿ ಹನ್ನೆರಡು ಮಾರ್ಗ
ಕ್ರಿಯೆಗೂ, ಉಳಿದ ಹನ್ನೆರಡು ಮೀರಿದ ಕ್ರಿಯೆಗೂ ಸೇರುತ್ತವೆ. ಮಾರ್ಗಕ್ರಿಯೆ
ಗಳು ಸ್ಥೂಲಾಚರಣೆಗಳು. ಭಕ್ತ, ಮಹೇಶ ಪ್ರಸಾದಿ ಸ್ಥಲಗಳಿಗೆ ಸಂಬಂಧಪಟ್ಟವು.
ಮೀರಿದ ಕ್ರಿಯೆಯು ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಿಗೆ ಸಂಬಂಧಿಸಿದ ಅಂತ
ರಂಗದ ಆಚರಣೆಗೆ ಸೇರುತ್ತದೆ. ಶ್ರೀಗಳವರ ವಾಣಿಯಲ್ಲಿ ಹೇಳುವುದಾದರೆ "ಮಾರ್ಗ
ಕ್ರಿಯೆ ಸಕ್ಕರೆ, ಮೀರಿದ ಕ್ರಿಯೆ ಆ ಸಕ್ಕರೆಯೊಳಗಿನ ಸವಿ. ತೋರಿಕೆಗೆ ಭಿನ್ನವಾಗಿ
ಸಿದ್ದರೂ ತಾತ್ತ್ವಿಕದಲ್ಲಿ ಅಭಿನ್ನ."

ಈ ಇನ್ನೂರು ಹದಿನಾರು ನವಲಿಂಗ ಸಕೀಲ ಸಾಹಿತ್ಯವನ್ನು ಒಂದೊಂದನ್ನಾಗಿ
ವಿವರಿಸಿ, ಒಂದೊಂದಕ್ಕೆ ಇಪ್ಪತ್ತುನಾಲ್ಕರಂತೆ ನವಲಿಂಗಗಳಿಗೆ ಹಂಚುವ ರೀತಿಯನ್ನು
ತಿಳಿಸುವುದೇ ಈ ಗ್ರಂಥದ ಉದ್ದೇಶ. ಇವೆಲ್ಲವನ್ನೂ ಈ ಚಿಕ್ಕ ಲೇಖನದಲ್ಲಿ ತಿಳಿಸು
ವುದು ಸಾಧ್ಯವೇ ಇಲ್ಲ.

ಗ್ರಂಥದಲ್ಲಿ ೨೧೬ ಸಕೀಲಗಳಲ್ಲಿ ಪ್ರತಿಯೊಂದನ್ನೂ ವಿವರಿಸಿ ಅವುಗಳ ಸ್ವರೂಪ
ದರ್ಶನ ಮಾಡಿಸಿಕೊಟ್ಟಿದ್ದಾರೆ ಮಹಾ ಸನ್ನಿಧಿಯವರು. ಇವುಗಳ ಪೈಕಿ ನವಸಂಜ್ಞೆ
ಯಲ್ಲಿ ಒಂದಾದ ಅಪ್ರಮಾಣ ಸಂಜ್ಞೆಯ ವಿವರಣೆಯೊಂದನ್ನು ಮಾತ್ರ ಇಲ್ಲಿ ಕೊಡ
ಲಾಗಿದೆ. ಕ್ಲಿಷ್ಟವಾದ ತತ್ತ್ವವನ್ನು ಸಣ್ಣ ಸಣ್ಣ ವಾಕ್ಯಗಳಲ್ಲಿ ಹೃದಯಂಗಮವಾಗು
ವಂತೆ, 'ಸುಲಿದ ಬಾಳೆಯ ಹಣ್ಣಿ'ನಂತೆ ಎಷ್ಟು ಸುಲಭವಾಗಿ ತಿಳಿಸಬಲ್ಲರು, ಬರೆಯ
ಬಲ್ಲರು ಎಂಬುವಕ್ಕೆ ಈ ವಿವರಣೆ ಸಾಕ್ಷಿ. ಅಲ್ಲದೆ ಶ್ರೀಗಳವರಿಗಿರುವ ಆಳವಾದ ಶಾಸ್ತ್ರ
ಜ್ಞಾನಕ್ಕು ಇದು ನಿದರ್ಶನ.

**ಅಪ್ರಮಾಣ ಸಂಜ್ಞೆ :**

"ಅದು ಅಳತೆಗೆ ಎಟಕುವದಲ್ಲ. ಋಜುವಾತಿಗೆ ನಿಲುಕುವದಲ್ಲ. ಶಾಸ್ತ್ರಕ್ಕೆ
ಸಾಧ್ಯವಲ್ಲ. ಅದು ಅಪ್ರಮಾಣ. ಪ್ರಮಾಣವು ಚಿತ್ತಗತ ಧರ್ಮ. ಜಡವಸ್ತು
ಗತ ಪರಿಮಿತಿ. ಪ್ರಪಂಚದ ವಸ್ತುಗಳು—ಪ್ರಪಂಚಿಯ ಗುಣ ಧರ್ಮಗಳು ಪ್ರಮಾ
ಣಕ್ಕೆ ನಿಲುಕುತ್ತವೆ, ಆ ಪರಮಾರ್ಥ ವಸ್ತು ಯಾವ ಪ್ರಮಾಣಕ್ಕೂ ನಿಲುಕದು.
ಶಾಸ್ತ್ರ ಪ್ರಮಾಣವು ಶಾಬ್ದಿಕವಾದುದು. ಶಬ್ದಾತೀತ (ನಿಶ್ಶಬ್ದ)ವಾದ ಆ ವಸ್ತು
ಶಬ್ದ ಪ್ರಮಾಣಕ್ಕೆ ನಿಲುಕುವುದೆಂತು ? ಪ್ರತ್ಯಕ್ಷ ಅನುಮಾನ ಆಗಮವೆಂದು
ಪ್ರಮಾಣ ತ್ರಿವಿಧ. ಪ್ರಮಾಣಗಳು ಎಂಟರವರೆಗೂ ಬೆಳೆದಿವೆ. ಇವೆಲ್ಲವುಗಳಲ್ಲಿ ಈ
ಮೂರೇ ಮುಖ್ಯ. ಇತರರು ಹೇಳುವ ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ,
ಐತಿಹ್ಯ, ಸಂಭವ—ಈ ಅಯ್ದು ಪ್ರಮಾಣಗಳು ಈ ಮೂರರಲ್ಲಿಯೆ ಅಡಕವಾಗುತ್ತವೆ.
ಆದ್ದರಿಂದ ತ್ರಿವಿಧ ಪ್ರಮಾಣಗಳ ಪರಿಹಾರವಾದರೆ ಸಾಕಾಗುತ್ತದೆ. ಈ ಮೂರರಲ್ಲಿ

ಆಗಮ (ಶಬ್ದ) ಪ್ರಮಾಣಾತೀತತ್ವ ಪ್ರತಿಪಾದನೆಯಾಗಿದೆ. ಪ್ರಮೆಗೆ ಅಂದರೆ ಜ್ಞಾನಕ್ಕೆ ಸಾಧನವಾದುದೆ ಪ್ರಮಾಣ. ಭ್ರಮೆ ಅಜ್ಞಾನಗಳ ಆವರಣಗಳನ್ನು ಅತಿಗಳೆವುದೇ ಪ್ರಮಾಣ. ಈ ಆವರಣಗಳೇ ಆ ಪರವಸ್ತುವಿಗಿಲ್ಲ. ಹೀಗಿರುವಾಗ ಪ್ರಮಾಣ ಗಮ್ಯವಾಗದು. ಪ್ರಮಾಣ ಸಂಜ್ಞೆಯತಾಳದು. ಇಂದ್ರಿಯ ಗೋಚರವೇ ಪ್ರತ್ಯಕ್ಷ ಪ್ರಮಾಣ. ಪ್ರತಿಜ್ಞಾ ಹೇತು ದೃಷ್ಟಾಂತರೂಪ ಅನುಮಾನ ಪ್ರಮಾಣವೂ ಪ್ರತ್ಯಕ್ಷವನ್ನಾಶ್ರಯಿಸಿದ ಮತ್ತೊಂದು ಬಗೆ. ಮೂಲ ವಸ್ತುವಿನ ಸಂಬಂಧದ ಮತ್ತೊಂದಂಶವನ್ನು ಕಂಡು ಊಹಿಸುವ ಬೌದ್ಧಿಕ ಪ್ರಮಾಣವೆ ಅನುಮಾನ. ಬುದ್ಧೀಂದ್ರಿಯಾತೀತವಾದ ಆ ವಸ್ತು ಅನುಮಾನ ಪ್ರತ್ಯಕ್ಷ ಪ್ರಮಾಣಗಳಿಗೂ ಅತೀತವೆಂಬುದು ಸ್ವತಃ ಸಿದ್ಧವಾದ ವಿಷಯ. "ದ್ರಷ್ಟೃ ದರ್ಶನ ದೃಶ್ಯಾನಾಂ ವಿರಾಮೋ ಯತ್ರ ವಾ ಭವೇತ್" ಎಂಬಂತೆ ದ್ರಷ್ಟೃತ್ವ ದರ್ಶನತ್ವ ದೃಶ್ಯತ್ವ ಧರ್ಮಗಳೇ ಇಲ್ಲದ ಆ ವಸ್ತು ಅಪ್ರಮಾಣವೇ ಸರಿ. ಪ್ರಮಾಣಕ್ಕೆ ಬೇಕಾದ ಸಾಹಿತ್ಯವೆಲ್ಲ ಇಲ್ಲಿ ಲ್ಲಿಯೆ ನಿಂತುಹೋಗುತ್ತವೆ. ಭಕ್ತಸ್ಥಲಕ್ಕೆ ಅಂಗವ ನಿಲ್ಲಿಸಿ, ಮಹೇಶ್ವರ ಸ್ಥಲಕ್ಕೆ ಆತ್ಮವ ನಿಲ್ಲಿಸಿ, ಪ್ರಸಾದಿ ಸ್ಥಲಕ್ಕೆ ಪ್ರಾಣವ ನಿಲ್ಲಿಸಿ ಪ್ರಾಣಲಿಂಗಿಯ ಸ್ಥಲಕ್ಕೆ ಇಂದ್ರಿಯಗಳ ನಿಲ್ಲಿಸಿ, ಶರಣ ಸ್ಥಲಕ್ಕೆ ವಿಷಯಂಗಳ ನಿಲ್ಲಿಸಿ, ಐಕ್ಯ ಸ್ಥಲಕ್ಕೆ ಅಂತಕರಣಗಳ ನಿಲ್ಲಿಸಿ ಮೇಲಾದ ಪರಿಣಾಮ ತೃಪ್ತಿ–ಸ್ಥಲಕ್ಕೆ ತಾನೇ ತಾನಾದ ಮಹದೆಚ್ಚರವೇ ಪ್ರಾಣವಾಗಿರ್ಪ ನಿಷ್ಕಲಂಕನೆಂಬುದೀಗ ಅಪ್ರಮಾಣ ಸಂಜ್ಞೆ ಎಂಬ ಶಬ್ದಕ್ಕರ್ಥ. ಇದರ ಮೇಲೆ ಪ್ರಮಾಣ ಬೇಡ. ಅಪ್ರಮಾಣ ಸಂಜ್ಞೆಯು ಪ್ರಣವ ಸಂಜ್ಞೆಯೆಂದು ಕೆಲವೆಡೆ ಉದ್ಧೃತವಾಗಿದೆ."

"ಸಕೀಲಗಳು ಅಂಗಲಿಂಗಗಳ ಸಂಪೂರ್ಣ ಸ್ವರೂಪವನ್ನು ಚಿತ್ರಿಸುತ್ತವೆ. ಕ್ರಿಯಾಜ್ಞಾನಗಳನ್ನೂ ಭಕ್ತಿ ಶಕ್ತಿಗಳನ್ನು ವಿವರಿಸುತ್ತವೆ. ತರುವಿಸ್ತಾರವೆಲ್ಲವೂ ಬೀಜದಲ್ಲಿ ಅಡಗುವಂತೆ ಈ ಸಕೀಲಗಳ ವಿಸ್ತಾರವೆಲ್ಲ ನವಲಿಂಗಗಳಲ್ಲಿ ಅಡಗುತ್ತವೆ."

ಸಕೀಲುಗಳ ವಿವರಣೆಯ ನಂತರ 'ನವಲಿಂಗ ಚಕ್ರ'ದ ಪ್ರಕರಣವಿದೆ. ಇದು ತುಂಬ ಮನನೀಯವಾದ ಭಾಗವೆನ್ನಬಹುದು. ಈ ಗ್ರಂಥದ ಹೃದಯವೆಂದರೂ ಒಪ್ಪುತ್ತದೆ. ಸಕೀಲಗಳನ್ನು ೨೪ ರಂತೆ ವಿಂಗಡಿಸಿ ನವಲಿಂಗಗಳಲ್ಲಿ ಕೇಂದ್ರೀಕರಿಸುವುದೇ ನವಲಿಂಗ ಚಕ್ರರಚನೆಯ ಧ್ಯೇಯ. ಹೀಗೆ ಕೇಂದ್ರೀಕರಿಸಿ ನವಲಿಂಗ ವ್ಯೂಹಗಳನ್ನು ಆರಾಧಿಸುವ ಕ್ರಮ, ಆ ಆ ಚಕ್ರದಲ್ಲಿ ಅಂಗನು ಅಂಗತ್ವದಿಂದ ಲಿಂಗರೂಪಕ್ಕೆ ಬಂದು ಕೊನೆಗೆ ಮಹಾಲಿಂಗವಾಗುವ ರೀತಿ ಇಲ್ಲಿ ಉಕ್ತವಾಗಿದೆ. ಇದೇ ಅನುಭಾವಿಗಳು ಹೇಳುವ ಶಿವಯೋಗ. ಇಲ್ಲಿ ಶ್ರೀಗಳವರ ವಿವರಣಾ ಸಾಮಾರ್ಥ್ಯ, ಲೇಖನಕಲಾ ಕೌಶಲ್ಯ, ಶೈಲಿಯ ಸುಭಗತೆ ಚೆನ್ನಾಗಿ ವ್ಯಕ್ತವಾಗಿದೆ. ಮಾದರಿಗಾಗಿ ಸ್ವಲ್ಪಭಾಗವನ್ನು ಗಮನಿಸಬಹುದು.

**ನವಲಿಂಗ ಚಕ್ರ:**

"ಯದಾ ಭೂತ ಪೃಥಗ್ಭಾವಮೇಕಸ್ಥಮನುಪಶ್ಯತಿ।
ತತ ಏವಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ"

"ಇನ್ನೂರು ಹದಿನಾರಂಗ ವಿಸ್ತಾರಗೊಂಡ ತತ್ತ್ವಗಳನ್ನು ಒಂಬತ್ತು ಲಿಂಗಗಳಲ್ಲಿ ಒಟ್ಟುಗೂಡಿಸಿ ನೋಡುವುದೇ ನವಲಿಂಗ ಚಕ್ರ. ಚಕ್ರಪದ ಪ್ರಯೋಗವು ಗಮನಾರ್ಹವಾದುದು. ಬಂಡಿಯ ಗಾಲಿಯಲ್ಲಿ ಅನೇಕ ಅರಗಳು (ಹಲ್ಲುಗಳು) ಒಗ್ಗೂಡಿರುವ ಭಾವವನ್ನು ಸೂಚಿಸುವುದೇ ಚಕ್ರಪದ ಪ್ರಯೋಗ ಪ್ರಯೋಜನ. ಈ ವ್ಯೂಹರಚನೆಯಿಂದ ಪ್ರಯೋಜನವಿದೆ. ಮರವೆಲ್ಲ ಸೇರಿ ಬೀಜವಾಗುವುದರಲ್ಲಿ ಹೇಗೆ ಫಲಪ್ರಯೋಜನವಿದೆಯೋ ಹಾಗೆ! ಬಿಡಿ ಬಿಡಿ ಹೂವೆಲ್ಲ ಕೂಡಿ ಹಾರವಾದರೆ ಹೇಗೋ ಹಾಗೆ! ಜಲಕಣಗಳೆಲ್ಲ ಸೇರಿ ಜಲರಾಶಿಯಾದರೆ ಹೇಗೋ ಹಾಗೆ!........ ........ಕಾಳೆಲ್ಲ ಕೂಡಿ ರಾಶಿಯಾದರೆ ಹೇಗೆ ಪ್ರಯೋಜನವಿದೆಯೋ ಹಾಗೆ! ಹಲವಾರು ಜನ ಸೇರಿ ಸಂಘವಾದರೆ ಹೇಗೆ ಒಂದು ಶಕ್ತಿ ಸಂಭವಿಸುವುದೊ ಹಾಗೆ! ಸಕೀಲುಗಳನ್ನು ಅರಂತೆ ನವಲಿಂಗಗಳಿಗೆ ಹಂಚುವುದೆ ನವಲಿಂಗ ಚಕ್ರ. ಹೀಗೆ ಹಂಚಿ ನವಲಿಂಗ ವ್ಯೂಹಗಳನ್ನು ರಚಿಸಿ ಆರಾಧಿಸಿದರೆ ಎಲ್ಲ ಸಂಪತ್ತುಗಳಿಗೆ ಶ್ರೇಷ್ಠವಾದ ಪರಬ್ರಹ್ಮ ಸಂಪತ್ತು ಸಂಪ್ರಾಪ್ತವಾಗುತ್ತದೆ.

ತನ್ನಿಂದ ಹೊರಹೊಮ್ಮಿದ ವಿಸ್ತಾರ ವಿಶ್ವವನ್ನು ಮರಳಿ ತನ್ನೊಳಗೆ ತಂದುಕೊಳ್ಳುವುದೇ ಲಿಂಗದ ಕಾರ್ಯವೂ ಅಹುದು; ನಿಸರ್ಗದ ಕಾರ್ಯವೂ ಅಹುದು ಬಿಡಿಯಾಗಿ ರೂಹಿಸಿ ಇಡಿಯಾಗಿ ರಚಿಸುವುದೇ ಒಂದು ಕಲೆ, ಒಂದು ಸಂಸ್ಕೃತಿ. ಹರಹಿದಾಗ ಸಗುಣವಾಗುತ್ತದೆ, ಸಾಕಾರವಾಗುತ್ತದೆ. ತಿರೋಧಾನವಾಗಿಸಿಕೊಂಡಾಗ ನಿರ್ಗುಣವಾಗುತ್ತದೆ, ನಿರಾಕಾರವಾಗುತ್ತದೆ. ನಿರ್ಗುಣ ನಿರಾಕಾರತ್ವಗಳು ಬಾಹ್ಯದವೇ ಹೊರತು ಆಂತರಿಕಗಳಲ್ಲ. ನವಿಲು ತತ್ತಿಯ ನಿರಾಕಾರತ್ವವು ಹೇಗೋ ಹಾಗೆ! ವಿಕಾಸ-ಸಂಕೋಚಗಳೆರಡೂ ಲಿಂಗತತ್ತ್ವದ ದಿವ್ಯಲೀಲೆಗಳು.

ಒಟ್ಟಿನಲ್ಲಿ ಚಕ್ರವೆಂದರೆ ಯೋಗವೆಂತಲೂ ಲಿಂಗವೆಂದರೆ ಶಿವ ಎಂತಲೂ ಅರ್ಥವಿಸಬೇಕು. ಆಗ ಲಿಂಗಚಕ್ರವೆಂದರೆ ಶಿವಯೋಗವೆಂದು ಅರ್ಥವಾಗಿ ಲಿಂಗಚಕ್ರದ ಉದಾತ್ತ ಉದ್ದೇಶ ಉದ್ಘೋಷಿತವಾಗುತ್ತದೆ. ಬ್ರಹ್ಮಾಂಡವನ್ನೆಲ್ಲ ಪಿಂಡಾಂಡದಲ್ಲಿ, ಪಿಂಡಾಂಡವನ್ನೆಲ್ಲ ಪರಮ ಚೈತನ್ಯದಲ್ಲಿ ಪರ್ಯವಸಾನಗೊಳಿಸುವುದೇ ಲಿಂಗ ಚಕ್ರದ ನಿರ್ಣಯ. ಈ ಕಾರ್ಯ ಫಲಪ್ರಾಪ್ತಿಯ ಕಾರ್ಯ. ಬೀಜದಿಂದಾದ ಮರವೂ ಮರಳಿ ಬೀಜವೇ ಆಗಬೇಕಾದರೆ ಫಲವಾಗದೆ ಸಾಧ್ಯವೇ ಇಲ್ಲ. ವೃಕ್ಷವೈವಿಧ್ಯವೆಲ್ಲ ವಿಕಾಸವೆಲ್ಲ ಅಂಗಾಂಗವೆಲ್ಲ ಬೀಜರೂಪ ಲಿಂಗದಲ್ಲಿ ಏಕೀಭವಿಸದೆ ವಿಧಿಯಿಲ್ಲ. ಬೀಜಭೂತವಾಗಿ ತನ್ನ ಅಂತಃಶಕ್ತಿಯನ್ನೂ ನನ್ನ ವಿಕಾಸ ಕಳೆಯನ್ನೂ ಹೊಮ್ಮಿಸಿದರೆ

ಭೂಜ ಬೀಜವಾಗಿ ತನ್ನ ಯೋಗ ಶಕ್ತಿಯನ್ನು ತನ್ನ ಕ್ಷೇಮ ಪ್ರೇಮವನ್ನು ಹೊಮ್ಮಿ ಸುತ್ತದೆ. ಅಂತೆಯೆ ನವಲಿಂಗ ಚಕ್ರ ರಚನೆಯಲ್ಲಿಯೂ ಯೋಗಶಕ್ತಿಯೂ ಕ್ಷೇಮಾ ಸಕ್ತಿಯೂ ಪರಮ ಪ್ರಯೋಜನವಾಗಿವೆ.

ವಿಕಾಸದಲ್ಲಿ ಜೀವಯಾತ್ರೆ ಸಾಗಿರುತ್ತದೆ! ಸಂಕೋಚರೂಪ ಯೋಗ ಮಾರ್ಗದಲ್ಲಿ ದೇವಯಾತ್ರೆ ಸಾಗಿರುತ್ತದೆ. ಜೀವಯಾತ್ರೆಯಲ್ಲಿ ತನ್ನ ಶಕ್ತಿ ಹರಿದು ಹಂಚಿ ಹೋಗುತ್ತದೆ. ದೇವಯಾತ್ರೆಯಲ್ಲಿ ತನ್ನ ಶಕ್ತಿ ಸಂಚಯವಾಗುತ್ತದೆ. ಧಾರಣವೇ ಯೋಗಸಮಾಧಿಯ ಅಂತ್ಯಸಾಧನ. ಪ್ರಕೃತಿಶಕ್ತಿ ಪ್ರಸರಿಸಿದಷ್ಟು ನಿಶ್ಶಕ್ತವಾಗುತ್ತ ಹೋಗುತ್ತದೆ; ತನ್ನೊಳಗೆ ಧಾರಣವಾದಷ್ಟು ಸಶಕ್ತವಾಗುತ್ತದೆ. ಅಭ್ಯುದಯ ಸಾಮಗ್ರಿಯಾಗುತ್ತದೆ. ಆ ಅಖಂಡಶಕ್ತಿ ಹಲವು ಬಗೆಯಲ್ಲಿ ಹಂಚಿ ಹಂಚಿ ಖಂಡ ಖಂಡವಾಗುತ್ತ ಹೋದಂತೆ ಅತಿಸೂಕ್ಷ್ಮಗೊಳ್ಳುತ್ತದೆ. ಅತಿ ದುರ್ಬಲ ಗೊಳ್ಳುತ್ತದೆ. ಅಂತ್ಯಾವಸ್ಥೆಗೆ ಅನುವಾಗುತ್ತದೆ. ಆದ್ದರಿಂದ ಕಾರ್ಯೋಪಯುಕ್ತ ವಾಗುವಷ್ಟೇ ಹರಡಿ ಕಾರ್ಯವು ಕೊನೆಸಾಗಿದೊಡನೆ ಪ್ರಸಂಚೀಕರಣವಾದುದನ್ನು ಏಕೀಕರಿಸಲು ಪ್ರಯತ್ನವಾಗಬೇಕು. ಈ ಪ್ರಯತ್ನವನ್ನೆ ಅಧ್ಯಾತ್ಮಸಾಧನವೆಂದರು; ಶಿವಯೋಗವೆಂದರು; ಲಿಂಗಚಕ್ರವೆಂದರು.

ಚಕ್ರವೆಂದರೆ ಗತಿ ಎಂಬ ಅರ್ಥವೂ ಕಾಣಿಸಿಕೊಂಡಿದೆ. ಕಾಲಗತಿ ಎಂದು ಹೇಳುವಾಗ ಕಾಲಚಕ್ರ ಪದಪ್ರಯೋಗ ಅರಿಯದ್ದಲ್ಲ. ಕಾಲಚಕ್ರಕ್ಕೆ ಸಿಕ್ಕು ನುಚ್ಚು ನುರಿಯಾಗಿ ಹೋಗುವ ಶಕ್ತಿಯನ್ನು ಲಿಂಗಚಕ್ರಕ್ಕೆ ತಂದು ಲಿಂಗದಲ್ಲಿ ಲೀಯಗೊಳಿ ಸುವುದೇ ಲಿಂಗಚಕ್ರದ ಹೃದಯ. ಲಿಂಗಚಕ್ರದಲ್ಲಿ ಲೀನಗೊಳಿಸಿದರೆ ಲಿಂಗವು ಅದನ್ನು ತನ್ನಲ್ಲಿಯೇ ಇರಿಸಿಕೊಳ್ಳದು; ಕಾಲದಂತೆ ನಾಶಮಾಡದು. ಕಾಲದ ಕೈಗೆ ಸಿಕ್ಕಿದ್ದೆಲ್ಲ ನಾಶವಾಗುತ್ತದೆ ಎಂಬುದನ್ನು ಸೂಚಿಸಲು ಲ ಎಂಬ ಲಯ ಸೂಚಿ ಅಕ್ಷರ ಸಕೀಲವಿದೆ. ಆದರೆ ಲಿಂಗದಲ್ಲಿ ಲೀನವಾದುದೆಲ್ಲ ಮತ್ತೆ ನಮಗಾಗಿ ಹೊರ ಬರುತ್ತದೆಂಬುದನ್ನು ಗ ಕಾರವು ಸೂಚಿಸುತ್ತಿದೆ. ಕಾರಣ ಕಾಲಚಕ್ರಕ್ಕೆ ಸಿಕ್ಕದ ಮುನ್ನ ಲಿಂಗಚಕ್ರಕ್ಕೆ ಸಂಯೋಜಿಸುವುದೇ ವಿಚಾರ ಸಮ್ಮತ. 'ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂ. ಸಂ. ದೇವನ' ಎಂಬ ಬಸವಣ್ಣನವರ ವಚನಾನು ಭವವು ಇದನ್ನೇ ವಿಶದಪಡಿಸಿದೆ.

ಕಾಲ ಬೆಂಕಿಯಿದ್ದಂತೆ. ಲಿಂಗ ಬಿಸಿನೀರಿದ್ದಂತೆ! ಕಾಲದ ಕೈಯಲ್ಲಿ ಬಿದ್ದರೆ ಭಸ್ಮ. ಲಿಂಗದ ಕೈಯಲ್ಲಿದ್ದರೆ ತಾನೇ ಬ್ರಹ್ಮ. ಈ ಭೇದವರಿದು ಲಿಂಗಚಕ್ರದಲ್ಲಿ ಲೀನಗೊಳ್ಳುವ ಸಾಧನವನ್ನೆ ಸಾಧಿಸಬೇಕು "ಮಣಿಯನೆಣಿಸಿ ದಿನವ ಕಳೆಯಲು ಬೇಡ. ಕಣಿಯ ಪೂಜಿಸಿ ದಿನವ ಕಳೆಯಲು ಬೇಡ. ಕ್ಷಣವಾದರೂ ನಿಜದ ನೆನಹೇ

ಸಾಕು, ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೇ ಸಾಕು. ಬೆಂಕಿಯೊಳಗುಳ್ಳ ಬಿಸಿ ನೀರೊಳಗುಂಟೆ ಗುಹೇಶ್ವರಾ."

ತನ್ನಂತೆ ಮಾಡಿಕೊಳ್ಳುವ ಶಕ್ತಿ ಲಿಂಗಕ್ಕಿದೆ. "........ಶಿವಯೋಗಾನು ಭಾವವು ಏಕಾರ್ಥವಾಗಿ ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿ........". 'ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋಽ ಸಾವಸೌ ಪುರುಷಃ ಸೋಽಹಮಸ್ಮಿ' ಎಂಬೀ ಉಕ್ತಿಗಳು ಅದನ್ನೆ ಸಮರ್ಥಿಸಿವೆ.

ಗತಿ ಎರಡುಂಟು. ಒಂದು ಅಧೋಗತಿ ; ಇನ್ನೊಂದು ಊರ್ಧ್ವಗತಿ. ಕಾಲಚಕ್ರ ಗತಿಯು ಅಧೋಗತಿಯ ಕುರುಹು. ಲಿಂಗಚಕ್ರಗತಿಯು ಊರ್ಧ್ವಗತಿಯ ಹೆಗ್ಗುರುತು. ಆದರಿಂದ ಅಂತರ್ಗತ ನವಚಕ್ರೋಪಾಸನೆಯು ಅಧ್ಯಾತ್ಮಶಾಸ್ತ್ರದಲ್ಲಿ ಅತ್ಯಧಿಕಸ್ಥಾನ ವನ್ನು ಗಳಿಸಿವೆ. ಆಧಾರಗತ ಆಚಾರಲಿಂಗಚಕ್ರವನ್ನೇರಿದರೆ ಅದು ಸ್ವಾಧಿಷ್ಠಾನಗತ ಊರ್ಧ್ವಗುರುಲಿಂಗಚಕ್ರಕ್ಕೆ ಕರೆದೊಯ್ಯುತ್ತದೆ. ಹಾಗೆಯೇ ಮೇಲು ಮೇಲಕ್ಕೇರಿ ನಿಸ್ಸೀಮ ಪಶ್ಚಿಮಚಕ್ರಕ್ಕೇರಿ ಪರಮ ಪರಿಣಾಮದಲ್ಲಿರಿಸುತ್ತದೆ. ಅದುವೆ ಪರಮ ಶಿವಯೋಗ.

ಅಧೋಗತಿ ಹಾನಿ, ಊರ್ಧ್ವಗತಿ ವೃದ್ಧಿ ; ಉತ್ತಮೋತ್ತಮ ಸುಖ ಸಿದ್ಧಿ. ಇಲ್ಲಿ ನಾಸ್ತಿ ; ಇಲ್ಲಿ ಆಸ್ತಿ. ಇಲ್ಲಿ ಸೋಲು ; ಅಲ್ಲಿ ಗೆಲವು. ಇಲ್ಲಿ ಕೀಳು ; ಅಲ್ಲಿ ಮೇಲು. ಅಲ್ಲಿ ದುಃಸ್ಥಿತಿ ; ಅಲ್ಲಿ ಸುಸ್ಥಿತಿ. ಇಲ್ಲಿ ಭ್ರಾಂತಿ, ಅಲ್ಲಿ ಶಾಂತಿ. ಇಲ್ಲಿ ವಿರಸ, ಅಲ್ಲಿ ಸಮರಸ. ಇವನ್ನರಿತು ಆ ಊರ್ಧ್ವಗತಿಗೆ ಗಮಿಸಿಸುವುದೆ ಸರ್ವಕ್ಕೂ ಲೇಸು."

ಹೀಗೆ ಸಾಗುತ್ತದೆ ಈ ಪ್ರಕರಣದ ವಿಚಾರಧಾರೆ. ಇದನ್ನು ಓದಿ ಸವಿಯ ಬೇಕು ಇಲ್ಲಿ ಕೊಟ್ಟಿರುವುದು ಮಾದರಿ ಮಾತ್ರ.

೨೧೬ ಸಕೀಲುಗಳನ್ನು ನವಲಿಂಗಕ್ಕೆ ಇಪ್ಪತ್ತುನಾಲ್ಕರಂತೆ ಹಂಚುವ ರೀತಿ ಹೇಗೆ ಎಂಬುದಕ್ಕೆ ಶ್ರೀಶೈಲ ನಿಡುಮಾಮಿಡಿ ಪೀಠದ ಹಿಂದಿನ ಜಗದ್ಗುರುಗಳಾದ ಶ್ರೀ ಮರಿ ಶರಿ ಬಸವ ದೇಶಿಕೇಂದ್ರ ಮಹಾಸ್ವಾಮಿಗಳು ರಚಿಸಿದ ಒಂಬತ್ತು ವಚನಗಳು ಈ ಪ್ರಕರಣ ದಲ್ಲಿವೆ. ಇವುನಿಜಕ್ಕೂ ಅಮೂಲ್ಯ ವಚನಗಳು. ಇವುಗಳಲ್ಲಿ ಭಕ್ತಸ್ಥಲದ ಮೊದಲನೆಯ ವಚನವನ್ನು ಮಾತ್ರ ಇಲ್ಲಿ ಕೊಟ್ಟಿದೆ. ಹಿಂದೆ ಕೊಡಲಾಗಿರುವ ಸಕೀಲುಗಳ ಪಟ್ಟಿ ಯಲ್ಲಿ ಮಾರ್ಗಕ್ರಿಯೆ ಮತ್ತು ಮೀರಿದ ಕ್ರಿಯೆಗಳಲ್ಲಿ ಬರುವ ಮೊದಲನೆಯ ಸಾಲು ಗಳಿಗೆ ಹೋಲಿಸಿ ನೋಡಿದರೆ ಹಂಚುವ ಕ್ರಮ ಅರ್ಥವಾಗಬಲ್ಲುದು.

"ಗುದಸ್ಥಾನದಲ್ಲಿ ಆಧಾರಚಕ್ರ, ಪೃಥ್ವಿಯೆಂಬ ಮಹಾಭೂತ, ಪೀತವರ್ಣ, ಚತುಃಕೋಣ, ಚೌದಳ ಪದ್ಮ, ಆ ಪದ್ಮ ಸುವರ್ಣವರ್ಣ. ಅದರ ದಳದಲಿ ವ.ಶ. ಷ. ಸ. ಎಂಬ ನಾಲ್ಕಕ್ಷರ, ಆ ಕರ್ಣಿಕಾ ಮಧ್ಯದಲ್ಲಿ ನಕಾರವೆಂಬ ಬೀಜಾಕ್ಷರ, ಆ

ನಕಾರ ಪೀತವರ್ಣ, ಅದು ಪೆಣ್ದುಂಬಿನಾದ, ಅಲ್ಲಿ ಸದ್ರೂಪ ಆಚಾರಲಿಂಗ, ಅದಕ್ಕೆ ಪೀತವರ್ಣವನುಳ್ಳ ಸದ್ಯೋಜಾತ ಮುಖ. ನಿವೃತ್ತಿ ಕಲಾ ಪರಿಯಾಯ ನಾಮವುಳ್ಳ ಕ್ರಿಯಾಶಕ್ತಿ, ಆಶಕ್ತಿ ಪೀತ ವರ್ಣ, ಅಲ್ಲಿ ಕರ್ಮ ಸಾದಾಖ್ಯ, ಅನಾದಿಯೆಂಬ ಸಂಜ್ಞೆ, ಪಶ್ಚಿಮದಿಕ್ಕು, ಅಲ್ಲಿ ಋಗ್ವೇದವನುಚ್ಚರಿಸುತ್ತ, ಚಿತ್ತವೆಂಬ ಹಸ್ತದಿಂ ಸುಗಂದದ್ರವ್ಯ ವನು ಘ್ರಾಣವೆಂಬ ಮುಖಕ್ಕೆ ಶ್ರದ್ಧಾಭಕ್ತಿಯಿಂದ ಅರ್ಪಿಸುವಳು ಆ ಶಕ್ತಿ ! ಬ್ರಹ್ಮ ಪೂಜಾರಿ. ಶಕ್ತಿ ಡಾಕಿನಿ, ಭವನಧಿದೇವತೆ, ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ನಕಾರವೆಂಬ ಬೀಜಾಕ್ಷರ. ಅದು ಪ್ರಣವದ ತಾರಕಾಕೃತಿಯಲ್ಲಿಹುದು. ಓಂ ಓಂ ಓಂ, ನಾಂ ನಾಂ ನಾಂ ಎಂಬ ಬ್ರಹ್ಮನಾದ, ಆ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು. ಇದು ಭಕ್ತಿ(ಕ್ತ) ಸ್ಥಲ."

ಉಳಿದ ಎಂಟು ವಚನಗಳೂ ಇದೇ ಮಾದರಿಯಲ್ಲಿವೆ. ನವಲಿಂಗ ಚಕ್ರದ ವಿವರಣೆಯಾದ ಮೇಲೆ ನವಲಿಂಗಾರ್ಚನಕ್ರಮ, ಮತ್ತೊಂದು ಬಗೆಯ ಮಜ್ಜನಕ್ರಮ, ನವವಿಧ ಪ್ರಣವಗಳು, ನವಲಿಂಗಜಪ, ಜಪವಿಧಾನ, ಒಂಬತ್ತು ಮರಳಿ ಒಂದು, ಸಮಾಪ್ತಿ ನಿರುಕ್ತಿ ಮುಂತಾದ ಪ್ರಕರಣಗಳಿವೆ.

ಒಂಬತ್ತು ಮರಳಿ ಒಂದು–ಎಂಬ ಪ್ರಕರಣದಲ್ಲಿನ ವಿವರಣೆ ಗಮನಾರ್ಹ ವಾದುದು. ನವಲಿಂಗಗಳನ್ನೂ ಕರದಿಷ್ಟಲಿಂಗ ಒಳಕೊಂಡಿದೆ. ಹಿಂದೆ ತಿಳಿಸಿದ ಇನ್ನೂರು ಹದಿನಾರು ಸಕೀಲಗಳೆಲ್ಲ ಇಷ್ಟಲಿಂಗದಲ್ಲಿ ಸಹಿತವಾಗಿವೆ ಎಂಬುದು ಮನ ವರಿಕೆಯಾಗಲು ಚಿತ್ರವೊಂದಿದೆ. ಚಿತ್ರವನ್ನೂ ವಿವರಣೆಯನ್ನೂ ಹೋಲಿಸಿ ನೋಡ ಬಹುದು.

ಇಷ್ಟಲಿಂಗದ ಪೀಠದಲ್ಲಿ ಆಚಾರಲಿಂಗ, ಕಟಿಯಲ್ಲಿ ಗುರುಲಿಂಗ, ವರ್ತುಳದಲ್ಲಿ ಶಿವಲಿಂಗ, ಗೋಮುಖದಲ್ಲಿ ಜಂಗಮ ಲಿಂಗ. ನಾಳದಲ್ಲಿ ಪ್ರಸಾದಲಿಂಗ, ಮಸ್ತಕದಲ್ಲಿ ಮಹಾಲಿಂಗ, ಗೋಳಕದ ಮುಂಭಾಗದಲ್ಲಿ ನಿಷ್ಕಳಲಿಂಗ, ಗೋಳಕದ ಶಿಖಾಭಾಗದಲ್ಲಿ ನಿಶ್ಶೂನ್ಯಲಿಂಗ, ಗೋಳಕದ ಹಿಂಭಾಗದಲ್ಲಿ ನಿರಂಜನಲಿಂಗ ಅಡಕವಾಗಿವೆ. ಹೀಗೆ ಹೇಳುವುದರಿಂದ ಇನ್ನೂರು ಹದಿನಾರು ಸಕೀಲಗಳೂ ಈ ಇನ್ನೂರು ಹದಿನಾರು ಸಕೀಲ ಸ್ವರೂಪಗಳಾದ ಪಿಂಡಾಂಡ ಬ್ರಹ್ಮಾಂಡಗಳೂ ಇಷ್ಟಲಿಂಗವೊಂದರಲ್ಲಿಯೆ ಸಹಿ ತವಾದಂತಾಯಿತು. ಈ ಸಹಿತದ ಭಾವವಾದುದರಿಂದ ಇದು ಸಾಹಿತ್ಯವೆನಿಸಿತು. ಅಂತೆಯೇ ಈ ಇಷ್ಟಲಿಂಗವು ಮಂತ್ರಾಧ್ವ, ಪದಾಧ್ವ, ವರ್ಣಾಧ್ವ, ಭುವನಾಧ್ವ, ತತ್ತ್ವಾಧ್ವ ಎಂಬ ಷಡಧ್ವಗಳನ್ನೂ ಮೂವತ್ತಾರು ತತ್ತ್ವಗಳನ್ನೂ ಒಳಕೊಂಡ ಒಳ್ಪಿನ ಒಂದೇ ಒಂದು ಸಾಹಿತ್ಯವೆನಿಸಿದೆ. ಕಳೆಯುಳ್ಳ ಕರದಿಷ್ಟ ಸಾಹಿತ್ಯವಾಗಿದೆ. "ಲಿಂಗಮಧ್ಯೇ ಜಗತ್ ಸರ್ವಂ" ಎಂಬ ಮಾತು ಸಾವಿರ ಪಾಲಿಗೂ ಸತ್ಯವೆನಿಸಿದೆ. ಸರ್ವ ಸಾಹಿತ್ಯವೆನಿಸಿದೆ. ಚೈತನ್ಯ ಸಾಹಿತ್ಯ ವೆನಿಸಿದೆ.

ಲಿಂಗವು ಸಾಹಿತ್ಯ ಪದ ವಾಚ್ಯಕ್ಕೆ ಔಚಿತ್ಯವುಳ್ಳುದಾಗಿದೆ. ಸರ್ವ ಜಗತ್ ಸಾಮಗ್ರಿಯಿಂದ ಅದು ಸಹಿತವಾಗಿದೆ. ಸರ್ವಪರ ಬ್ರಹ್ಮ ಲಕ್ಷಣಗಳಿಂದ ಅದು ಸಹಿತವಾಗಿದೆ. ಇಷ್ಟಪದ ಪ್ರಯೋಗದಿಂದ ಅದು ಹಿತ ಸಹಿತವಾದುದೂ ಆಗಿದೆ, ಸರ್ವಹಿತವೂ ಆಗಿದೆ. ಆದ್ದರಿಂದ ಅದು ಸಾಹಿತ್ಯ."

ಗ್ರಂಥದ ಪರಿಶಿಷ್ಟದಲ್ಲಿ ನವವಿಧ ಪ್ರಸಾದಾರ್ಪಣ, ನವಲಿಂಗ ಜಪವಿಧಾನದ ಮತ್ತೊಂದು ಬಗೆ, ಹಸ್ತ ಪರುಷ ಮಂತ್ರ, ಲಿಂಗಕ್ಕೆ ಪ್ರಸಾದವರ್ಪಿಸುವ ಕ್ರಮ, ಇಷ್ಟ-ಪ್ರಾಣ-ಭಾವ ಲಿಂಗ ಸಮರಸ ಜ್ಞಾನ ಮುಂತಾದ ವಿಷಯಗಳು ನಿರೂಪಿಸಲ್ಪಟ್ಟು ಗ್ರಂಥ ಸಮಾಪ್ತವಾಗುತ್ತದೆ. ಇವೆಲ್ಲ ಮನನೀಯವಾದ ವಿಷಯಗಳೇ.

'ನವಲಿಂಗ ಸಾಹಿತ್ಯ' ಗ್ರಂಥದ ಸ್ಥೂಲ ಸಮೀಕ್ಷೆಯನ್ನು ಮಾತ್ರ ಈ ಲೇಖನದಲ್ಲಿ ಕೊಡಲಾಗಿದೆ. ವಿಮಾನದಲ್ಲಿ ಹಾರಾಡಿ ಬೆಂಗಳೂರು ನಗರವನ್ನು ಬಣ್ಣಿಸುವವನ ಬಣ್ಣನೆಯಂತಿದೆ ಇಲ್ಲಿನ ವಿವರ. ಗ್ರಂಥವನ್ನು ತಾಳ್ಮೆಯಿಂದ ಪೂರ್ಣವಾಗಿ ಅಭ್ಯಾಸಮಾಡಿದಲ್ಲದೆ ಈ ಗ್ರಂಥದ ಮಹತ್ತ್ವ ಅರಿವಾಗದು. ನವಲಿಂಗ ಸಾಹಿತ್ಯ ಗ್ರಂಥ ತತ್ತ್ವಾಭ್ಯಾಸಿಗಳಿಗೆ, ಮುಮುಕ್ಷುಗಳಿಗೆ ರನ್ನಗನ್ನಡಿಯಂತಹ ಗ್ರಂಥ, ಸಕಲಾಗಮ ಸಾರರೂಪಾದ ಲಿಂಗಾಂಗ ಸಮರಸದ ಅನುಭವವನ್ನು ನಿರೂಪಿಸುವ ಗ್ರಂಥ. ಶ್ರೀಗಳವರು ಈ ಗ್ರಂಥವನ್ನು ಸಿದ್ಧಗೊಳಿಸಲು ಶಿವಾಗಮಗಳು, ಸಿದ್ಧಾಂತ ಶಿಖಾಮಣಿ, ಶ್ರೀಕರಭಾಷ್ಯ, ಬ್ರಹ್ಮಸೂತ್ರ, ಶಿವಶರಣರ ಮತ್ತು ಶ್ರೀ ನಿಜಗುಣ ಶಿವಯೋಗಿಗಳ ವಚನಗಳು, ಶ್ರುತಿ, ಸ್ಮೃತಿ ಮತ್ತು ತೈತ್ತರೀಯ, ಕಠ, ಮಾಂಡೂಕ್ಯ, ಶ್ವೇತಾಶ್ವತರ, ಕೈವಲ್ಯ, ಮುಂಡಕ ಮುಂತಾದ ಉಪನಿಷತ್ತುಗಳ ಪ್ರಮಾಣ ವಚನಗಳ ಆಧಾರವನ್ನು ಕೊಟ್ಟಿದ್ದಾರೆ. ಇದು ಅವರ ಅಗಾಧ ಶಾಸ್ತ್ರಜ್ಞಾನಕ್ಕೆ ನಿದರ್ಶನ. ಶಾಸ್ತ್ರಗಳನ್ನು ಅಭ್ಯಸಿಸಬಹುದು, ಮನನ ಮಾಡಿಕೊಳ್ಳಬಹುದು. ಆದರೆ ಮನನ ಮಾಡಿದ್ದನ್ನು ಸಾಮಾನ್ಯರಿಗೂ ತಿಳಿಯುವಂತೆ ಸುಲಭ ಶೈಲಿಯಿಂದ ಹೇಳುವ ಹಾಗೂ ಬರೆಯುವ ಸಾಮರ್ಥ್ಯ ಎಲ್ಲರ ಸ್ವತ್ತಲ್ಲ. ತತ್ತ್ವಶಾಸ್ತ್ರ ಎಂದೂ ನೀರಸ. ಸಾಹಿತ್ಯದ ಇತರ ಪ್ರಕಾರಗಳಂತೆ ಸರಸವಲ್ಲ. ಇಂಥದನ್ನೂ ಲೇಖನಿಯಿಂದ ಸುರಸಗೊಳಿಸಿದ್ದಾರೆ ಶ್ರೀಗಳವರು. ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಮಹಾಸನ್ನಿಧಿಯವರು ಪರಮ ಶಿವಯೋಗಿಗಳು, ಶಿವಾನುಭಾವಿಗಳು, ಶಾಸ್ತ್ರಜ್ಞರು ಮೇಲಾಗಿ ಸಾಹಿತಿಗಳು, ವರಕವಿಗಳು, ಅವರ ಲೇಖನಿ ಮುಟ್ಟಿದುದೆಲ್ಲ ಪರುಷ. ಈ ಮಾತಿಗೆ ಅವರಿಂದ ರಚಿತವಾದ ಗ್ರಂಥಗಳೇ ಸಾಕ್ಷಿ. ದೃಷ್ಟಾಂತಕ್ಕೆ ಅವರ 'ಕಾಯಕ ಕಲೆ' ಎಂಬ ಗ್ರಂಥವೊಂದನ್ನು ಯಾರಾದರೂ ಪರಿಶೀಲಿಸಬಹುದು. ಕಾಯಕವೆಂಬುದು ಶರಣ ಜೀವನದ ಒಂದು ಭಾಗವೆಂದು ಸಾಮಾನ್ಯರ ನಂಬಿಕೆಯಿತ್ತು. ಆದರೆ ಅದರ ತ್ರ್ಯಕ್ಷರದ ಪುಟ್ಟ ಹೊಟ್ಟೆಯಲ್ಲಿ ಇಡಿಯ ಶಿವಾದ್ವೈತ ಸಿದ್ಧಾಂತವೇ ಕರಿಯು ಕನ್ನಡಿ

ಯೊಳಡಗಿದಂತೆ ಅಡಗಿ ಕುಳಿತಿರುವುದನ್ನು, ಹೊರಗೆಳೆದು ತೋರಿಸಿದರು ಶ್ರೀಗಳವರು, ಬಾಲಕೃಷ್ಣ, ತನ್ನ ಬಾಯ್ದೆರೆದು ಗೋಪಿಗೆ ಬ್ರಹ್ಮಾಂಡವನ್ನು ತೋರಿಸಿದಂತೆ. ರವಿ ಕಾಣದ್ದನ್ನು ಕವಿ ಕಂಡ ಎಂಬ ಮಾತು ಸನ್ನಿಧಿಯವರಿಗೆ ಅಕ್ಷರಶಃ ಒಪ್ಪುತ್ತದೆ. ಹಳೆಯದನ್ನು ಹೊಸ ನೋಟದಲ್ಲಿ ನೋಡುವ, ನೋಡಿದ್ದನ್ನು ಮಧುರ ಸುಂದರ ಶೈಲಿಯಲ್ಲಿ ಬರೆಯುವ ಕಲೆ ಅವರಿಗೆ ಸಿದ್ಧಿಸಿದೆ. ಶಿವಯೋಗ ಸಿದ್ಧರೂ ಹೇಗೋ ಸಾಹಿತ್ಯ ಸಿದ್ಧರೂ ಹೌದು. ಇಂಥವರು ಒಂದು ಧರ್ಮಪೀಠದಲ್ಲಿ ಮಂಡಿಸಿ ಧರ್ಮ ಪ್ರಚಾರವನ್ನು ಕೈಕೊಂಡಿರುವುದು ನಿಜವಾಗಿ ಕನ್ನಡಿಗರ ಭಾಗ್ಯ ಮತ್ತು ಪುಣ್ಯ. ಮಹಾಸ್ವಾಮಿಯವರ ಅಮೃತ ಹಸ್ತದಿಂದ ನಿರಂತರವಾಗಿ ಇಂತಹ ಸದ್ಗ್ರಂಥಗಳು ಹೊರಬಿದ್ದು ಜನತೆಯ ಹೃದಯ ಬೆಳಗಲಿ, ಬೆಳಗಿ ಪಳಗಲಿ.

---

## ಸನ್ನಿಧಿಯ ಸಾಹಿತ್ಯಜ್ಯೋತಿ

ಮಾನವ ಜೀವನಕ್ಕೆ ಸಂಸ್ಕೃತಿ ಸಾಹಿತ್ಯಗಳೆರಡೂ ಮುಖಕ್ಕೆ ಎರಡು ಕಣ್ಣುಗಳಿದ್ದಂತೆ! ಸಂಸ್ಕೃತಿ ಕಲಾಕೃತಿಯಾಗಬೇಕಾದರೆ ಸಾಹಿತ್ಯ ಶರೀರದಿಂದ! ಮಾನವನು ಮರ್ತ್ಯಲೋಕದಲ್ಲಿ ಅಮರ್ತ್ಯಲೋಕವನ್ನು ಸೃಷ್ಟಿಸಬೇಕಾದರೆ ಸಾಹಿತ್ಯ ಕ್ಷೇತ್ರದಲ್ಲಿ! ಮರಣಕ್ಕೀಡಾಗುವ ಮಾನವ ಅಮರನಾಗಬೇಕಾದರೆ ಸಾಹಿತ್ಯಾಮೃತ ಪಾನದಿಂದ! ಸಾಹಿತ್ಯ ಸುಧೆಯೇ ಸುಧೆ! ಬೇರೆ ಅದೊಂದು ಪಾನೀಯ ವಸ್ತುವಲ್ಲ. ಇದಕ್ಕೆ ಸಾಕ್ಷಿ ನುಡಿದಿದೆ.

'ಶ್ರೀಗುರು ವಚನದಿಂದಧಿಕ ಸುಧೆಯುಂಟೆ ?'

ಎಂಬೀ ನಿಜಚರಿತ ನಿಜಗುಣರ ನಿರುಪಮ ನುಡಿ! ವಚನಸುಧೆಯೇ ಕಾವ್ಯ ಅಥವಾ ಸಾಹಿತ್ಯ. ಭಾವದ ಬೆಳಸು, ಭಾಷೆಯ ಸೊಗಸು ಮೂಡಿ ಬಂದುದೇ ಸಾಹಿತ್ಯ. ಅದನ್ನು ರಚಿಸುವವನೇ ಕವಿ, ಸಾಹಿತಿ, ಶ್ರೀಗುರು ಅಥವಾ ಆತ್ಮದ್ರಷ್ಟಾ! ಸುಧೆಯು ಸವಿ–ಭವಿ ನುಡಿಯಲ್ಲಿದ್ದರೇನೆ ಅದು ಹಿತಸಹಿತವಾಗಿ ಸಾಹಿತ್ಯವೆನಿಸಿಕೊಳ್ಳುತ್ತದೆ ನುಡಿದುದೆಲ್ಲ ಸಾಹಿತ್ಯವಲ್ಲ; ಹಾಡಿದುದೆಲ್ಲ ಸಂಗೀತವಲ್ಲ. ಸಾಹಿತ್ಯವ ನುಡಿದ ಸಾಹಿತಿಯ ಸ್ವಾನುಭವದ ಕಣ್ಣು ತೆರದಿರಬೇಕು. ಕಾಣಿಸುವ ಸೃಷ್ಟಿಯ ಪ್ರತಿವಸ್ತುವಿನಲ್ಲಿ ಸಾಮಾನ್ಯರಿಗೆ ಕಾಣದಂತಿರುವ ಗುಣ ಸ್ವಭಾವಗಳನ್ನು ಶಕ್ತಿಗಳನ್ನು ತೇಜ ಓಜಗಳನ್ನು ಕಾಣುವ ಕಣ್ಣಿರಬೇಕು. ಇತರರಿಗೆ ಕಾಣಿಸುವ ಸಾರ್ಥಕ ಶಾಬ್ದಿಕ ಶಕ್ತಿಯಿರಬೇಕು. ಸಾಹಿತಿಯ ಅರಿವಿನ ಅಚ್ಚಿಗೆ ಅನುಕೂಲವಾದ ಶಬ್ದ ಸಂಪತ್ತಿಯೇ ಸೂರ್ಯಜ್ಯೋತಿ!

# ಕೈ ಮುಗಿವೆ ಶ್ರೀ ಗುರುದೇವ

ಶಿರವ ಬಾಗಿಸಿ ಕೈಯ ಮುಗಿವೆ ಶ್ರೀ ಗುರುದೇವ
ವಿರತಿ ವಾರಿಧಿ ಚಂದ್ರ ಸಾರ ಸದ್ಗುಣ ಸಾಂದ್ರ ||ಪ||

ರಂಜ ತೇಜವ ತಳೆದು ನೀನು ಮೆರೆದ ಮಹೇಂದ್ರ
ತೇಜ ಸಂಸ್ಕೃತಿ ಸಾರ ಸಾಹಿತ್ಯಗಳ ಕೇಂದ್ರ
ಓಜೆಯಿಂ ಸುತ್ತಿರುವೆ ತಮಿಳು, ಕನ್ನಡ, ಆಂಧ್ರ
ತೇಜವನು ಜನಕೀವ ವೀರ ಮಹಾಪುರುಷೇಂದ್ರ ||೧||

ಲೆಕ್ಕವಿಲ್ಲವು ನಿನ್ನ ಭಕ್ತ ಜನ ಕುಲ ಕೋಟಿ
ನಕ್ಕು ನೀತಿಯ ಕಲಿಸ ನಿನಗಾರು ಸರಿಸಾಟಿ
ಚೊಕ್ಕ ಮತ ಧರ್ಮಗಳ ಸಾರ ಸತ್ವದ ಊಟಿ
ಮಿಕ್ಕಿ ಮೆರೆದಿಹೆ ನೀನು ಕಾಮು, ಕ್ರೋಧವ ದಾಟಿ ||೨||

ಪಾವನಗೈದಿಹೆ ನೀನು ಸಕಲ ಭಕ್ತ ಸಮಾಜ
ಓವು ಚನ್ನಬಸವನ ಕರ್ಮಹರ ಗುರುರಾಜ
ಆವಗಂ ಸ್ಫೂರ್ತಿಸುವ ಭಕ್ತ ಕ್ಷಾತ್ರದ ತೇಜ
ಕಾವ ಶ್ರೀ ಶೈಲದ ಭಕ್ತ ಕುಲ ಗಿರಿರಾಜ ||೩||

—ಗೊ. ರು. ಚನ್ನಬಸವಪ್ಪ

ಎಸಳು-೬

# ವಚನ ಸಾಹಿತ್ಯ

[ದರ್ಶನ-೫]

ವಚನಾಂಜಲಿ
ವಚನ ಮಂಜರಿ
ವಚನ ವಲ್ಲರಿ (ಭಾಗ-೧)
ವಚನ ವಲ್ಲರಿ (ಭಾಗ-೨)
ಅಭಯವಾಣಿ (ನವ್ಯಶೈಲಿ)
(ಭಾಗ-೧)
ಅಭಯವಾಣಿ (ಭಾಗ-೨)

'ಸತ್ಯದ ಹಂಬಲು ಸಾಹಿತ್ಯವಾಗಿ, ಸತ್ಯಾನ್ವೇಷಣ ಸಿದ್ಧಾಂತವಾಗಿ, ಸತ್ಯ ಸಾಕ್ಷಾತ್ಕಾರವೇ ದರ್ಶನವಾಗಿ ನಮಗೆ ಆನಂದವುಂಟು ಮಾಡುತ್ತವೆ. ಎಂದು ವಚನಗಳನ್ನು ಕುರಿತು ಶ್ರೀ ಎಂ. ಆರ್. ಶ್ರೀ ಅವರು ಹೇಳಿರುವ ಮಾತು ಶ್ರೀ ಜ. ಚ. ನಿ. ಸನ್ನಿಧಿಯವರ ವಚನಗಳಿಗೆ ನೂರಕ್ಕೆ ನೂರರಷ್ಟು ಒಪ್ಪುತ್ತದೆ. ಶ್ರೀಗಳವರ ವಚನ ರಚನೆಯ ಶೈಲಿ ಸರಳ, ಸುಂದರ; ಭಾವಪೂರ್ಣ. ಅವು ಸಂಪ್ರದಾಯ ಮತ್ತು ನವ್ಯತೆಗಳ ಸಮ್ಮಿಲನ.

ಸನ್ನಿಧಿಯವರಿಗೆ ಬಾಲ್ಯದ ವಿದ್ಯಾಭ್ಯಾಸ ಕಾಲದಲ್ಲೇ ವಚನ ರಚನೆಯ ದೃಷ್ಟಿಯಿತ್ತೆಂದು ಹೇಳಿರುವ ಶ್ರೀ ಅ. ನ. ಕೃಷ್ಣರಾಯರ ನುಡಿಯು ಕುಡಿಯೊಡದಿರುವ ಬೆಡಗನ್ನು ಬೃಹತ್ ಪ್ರಮಾಣದಲ್ಲಿ ರಚಿತವಾಗಿರುವ ಸನ್ನಿಧಿಯವರ ವಚನ ರಾಶಿಯಲ್ಲಿ ಕಾಣಬಹುದು. ಅಲ್ಲಿ ಆತ್ಮಾನಂದದ ಜೊತೆಗೆ ಭಕ್ತರು ಬದುಕಲೆಂಬ ಕಾರುಣ್ಯಪೂರ್ಣ ಗುರಿಯೇ ಹೆಚ್ಚು ವ್ಯಕ್ತವಾಗುತ್ತದೆ.

ಹನ್ನೆರಡನೆ ಶತಮಾನದ ನಂತರ ಈ ಶತಮಾನದವರೆಗೂ ಆ ಬೆಳೆ ಅಷ್ಟಾಗಿ ಕಾಣಬರಲಿಲ್ಲ. ಇಪ್ಪತ್ತನೆ ಶತಮಾನದಲ್ಲಿ ಮತ್ತೆ ಆ ಕೃಷಿನಡೆಸಿ ಹೊಸ ವಚನಗಳ ಬೆಳೆಯನ್ನು ಸಂಪ್ರದಾಯವನ್ನು ಬಿಡದೆ ಪ್ರಗತಿ ಪಥದಲ್ಲಿ ನಡೆದು ನಾಡಿಗೆ ಕೊಟ್ಟವರಲ್ಲಿ ಶ್ರೀ ಸನ್ನಿಧಿಯವರೇ ಮೊದಲಿಗರೆಂಬುದು ಅಭಿಮಾನದ ಸಂಗತಿ. ಆ ದಿಸೆಯಲ್ಲಿ ಇತ್ತೀಚೆಗೆ ಅನೇಕ ವಚನಕಾರರು ಕನ್ನಡ ಸಾಹಿತ್ಯಕ್ಕೆ ಕಾಣಿಕೆ ಸಲ್ಲಿಸಿದ್ದರೂ ಶ್ರೀಗಳವರಷ್ಟು ಹೆಚ್ಚು ಸಂಖ್ಯೆಯಲ್ಲಿ ವಚನಗಳನ್ನು ರಚಿಸಿದವರಿಲ. ಸುಮಾರು 3000ಕ್ಕೂ ಮಿಕ್ಕು ವಚನಗಳ ರಚನೆಯೆಂದರೆ ಸಾಮಾನ್ಯವಲ್ಲ. ಅದು ಸಾಹಸದ ಮಾತು. ಪುರಾತನ ಯಾವ ವಚನಕಾರರ ವಚನಗಳೂ ಇಷ್ಟು ಸಂಖ್ಯೆಯಲ್ಲಿ ದೊರೆತಿಲ್ಲ.

# ಸಾಹಿತ್ಯ ಲೋಕಕ್ಕೆ "ವಚನ ಮಂಜರಿ" ಒಂದು ಮಹೋಪಕಾರ

**—ಶ್ರೀ ಅ. ನ. ಕೃಷ್ಣರಾಯ, ಬೆಂಗಳೂರು**

ಹನ್ನೆರಡನೆಯ ಶತಮಾನಕ್ಕೂ ಪೂರ್ವದಲ್ಲಿ ಕನ್ನಡನಾಡಿನಲ್ಲಿ ವಿಶಿಷ್ಟ ವಚನ ಸಾಹಿತ್ಯ ಸಂಪ್ರದಾಯ ಆರಂಭವಾಯಿತು. ಕ್ರಿ. ಶ. ೧೦೪೦ರಲ್ಲಿಯೇ ಜೇಡರ ದಾಸ ಮಯ್ಯ, ಮೆರೆಮಿಂಡಯ್ಯ, ಬಿಬ್ಬಬಾಚಯ್ಯ, ಏಲೇಶ್ವರದ ಕೇತಯ್ಯ, ಆದಯ್ಯ, ಹಾವಿನಹಾಳ ಕಲ್ಲಯ್ಯ, ಮಾದರ ಧೂಳಯ್ಯ ಮೊದಲಾದವರು ವಚನಗಳನ್ನು ರಚಿಸಿದ್ದರು. ಬಸವಾದಿ ಪ್ರಮಥರು ಆ ಸಂಪ್ರದಾಯವನ್ನೇ ಕೈಗೆತ್ತಿಕೊಂಡು ಅದಕ್ಕೆ ತಮ್ಮ ಪ್ರತಿಭೆ, ಪಾಂಡಿತ್ಯ, ಅನುಭವದ ಕುಂದಣವಿಟ್ಟು ವಚನಸಾಹಿತ್ಯ ವಿಪುಲವಾಗಿ ಬೆಳೆದು ಕನ್ನಡ ಸಾಹಿತ್ಯಶ್ರೀಯ ಕಂಠಾಭರಣವಾಗುವಂತೆ ಮಾಡಿದರು. ಉಪನಿಷತ್ ಸಾಹಿತ್ಯದಲ್ಲಿಯೂ, ಧಮ್ಮಪದಲ್ಲಿಯೂ, ಜಾತಕ ಕಥೆಗಳಲ್ಲಿಯೂ ವಚನಸಾಹಿತ್ಯದ ಮೂಲವನ್ನು ನಾವು ಕಾಣಬಹುದು. ಸಮಸ್ತ ಅನುಭವಸಾರವನ್ನು ಸೂತ್ರಪಾಯವಾಗಿ ನಾಲ್ಕು ಮಾತಿನಲ್ಲಿ ಅಡಗಿಸಿ, ಚಿರಸ್ಮರಣೀಯವಾದ ಬಗೆಯಲ್ಲಿ ನಿರೂಪಿಸುವ ವೈಖರಿ ಭಾರತೀಯರಿಗೆ ಹೊಸದಲ್ಲ. ಕನ್ನಡಕ್ಕೆ ಈ ಸಂಪ್ರದಾಯವನ್ನು ತಂದು ಅದನ್ನು ಅಸ್ವಾದೃಶವಾಗಿ ಬೆಳಸಿದ ಕೀರ್ತಿ ಬಸವಣ್ಣನವರು, ಅಲ್ಲಮಪ್ರಭುದೇವರು, ಅಕ್ಕಮಹಾದೇವಿಯವರಿಗೆ ಸೇರಬೇಕು.

ಈ ಶತಮಾನದ ಆದಿಯಲ್ಲಿ ಕನ್ನಡ ಸಾಹಿತ್ಯ ಪ್ರಪಂಚದ ನವೋದಯ ವಾಯಿತು. ಸಾಹಿತ್ಯದ ಗತಸಂಪ್ರದಾಯಗಳ ಪರಿಶೋಧವಾದುದಲ್ಲದೆ ನೂತನ ಸಂಪ್ರದಾಯಗಳ ಆವಿಷ್ಕಾರವೂ ಆಯಿತು. ಶ್ರೀ ಫ. ಗು. ಹಳಕಟ್ಟಿಯವರು ಪ್ರಮಥರ ವಚನಗ್ರಂಥಗಳನ್ನು ಕಾಲಗರ್ಭದಿಂದ ಹೊರೆಗೆಳೆದು ಪರಿಷ್ಕರಿಸಿ ಪ್ರಕಟಿಸಿ ಸಾಹಿತ್ಯ ಪ್ರಪಂಚಕ್ಕೆ ಮಹೋಪಕಾರ ಮಾಡಿದರು. ವಚನ ಸಾಹಿತ್ಯಾಭ್ಯಾಸ, ಪ್ರಸಾರ ಆರಂಭವಾಯಿತು.

ಒಂದು ಪರಂಪರೆಯನ್ನನುಸರಿಸಿದ ಧರ್ಮಪ್ರಸಾರಕ್ಕೆ ವಚನರೂಪ ಹೇಗೆ ಉಪಯೋಗವಾಯಿತೋ ಹಾಗೆ ಎಲ್ಲ ವಿಚಾರಗಳ ನಿರೂಪಣಕ್ಕೂ ವಚನರೂಪ ಪ್ರಯೋಜನವಾಗುತ್ತದೆಯೆಂಬ ಮನವರಿಕೆ ಕನ್ನಡಿಗರಿಗಾಗಲು ಸ್ವಲ್ಪ ಕಾಲಾವಕಾಶ ಬೇಕಾಯಿತು. ನಮಗೆ ತಿಳಿದಂತೆ ವಚನರೂಪವನ್ನು ಸಾಹಿತ್ಯಕ್ಕೆ ಬಳಸಿಕೊಂಡ ಮೊದಲಿಗರು ಶ್ರೀ ತಿರುಮಲೆ ತಾತಾಚಾರ್ಯ ಶರ್ಮರವರು. ಶ್ರೀ ಶರ್ಮರು ೧೯೩೫ರಲ್ಲಿ ದೇಶೀಯ ವಿದ್ಯಾಶಾಲಾ ಪತ್ರಿಕೆಯಲ್ಲಿ ವಚನಮಾರ್ಗವನ್ನವಲಂಬಿಸಿ ಕೆಲವು ಕಿರುಗತೆಗಳನ್ನು ಪ್ರಕಟಿಸಿದರು. ಅವರ ತರುವಾಯ ಶ್ರೀ ದಿವಾಕರ ರಂಗರಾಯರು, ಶ್ರೀ ಜೇರಿಗೆ ಬಸವಪ್ಪನವರು, 'ಹಾಪಿನಕೆರೆ ರಂಗಯ್ಯ'ನವರು ವಚನರೂಪವನ್ನು ಬಳಸಿಕೊಂಡರು. ಶ್ರೀ ಡಿ. ವಿ. ಗುಂಡಪ್ಪನವರ ಮಹಾಕಾವ್ಯ 'ಮಂಕುತಿಮ್ಮನ ಕಗ್ಗದ'ದ ಮೇಲೂ ವಚನ ಸಾಹಿತ್ಯರೂಪ ತನ್ನ ಪ್ರಭಾವ ಬೀರಿದೆ. ಶ್ರೀ ಜೇರಿಗೆ ಬಸವಪ್ಪನವರನ್ನುಳಿದು ಇತರರ ಮೇಲೆ ವಚನಸಾಹಿತ್ಯ ಪ್ರತ್ಯಕ್ಷ ಪ್ರಭಾವ ಬೀರಿರುವಂತೆ ಕಂಡು ಬರುವುದಿಲ್ಲ. ಈ ಮಾನ್ಯಸಾಹಿತಿಗಳು ವಚನಸಾಹಿತ್ಯ ಕ್ಷೇತ್ರದ ವ್ಯಾಪ್ತಿಯನ್ನು ವಿಸ್ತರಿಸಿ ಅದನ್ನು ಒಂದು ಸಂಪ್ರದಾಯದ ಆವರಣದಿಂದ ವಿಶಾಲಪ್ರಪಂಚಕ್ಕೆ ಕೊಂಡೊಯ್ದರು.

'ವಚನಾಂಜಲಿ' ಮತ್ತು 'ವಚನಮಂಜರಿ' ಗ್ರಂಥಗಳನ್ನು ಬರೆದಿರುವ ನಿಡುಮಾಮಿಡಿ ಸಂಸ್ಥಾನದ ಶ್ರೀಶೈಲ ಜ. ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ಸಂಪ್ರದಾಯವನ್ನು ಬಿಡದೆ ಪ್ರಗತಿಪಥದಲ್ಲಿ ಮುನ್ನಡೆದು ಸಾಹಿತ್ಯಲೋಕಕ್ಕೆ ಮಹೋಪಕಾರ ಮಾಡಿದ್ದಾರೆ. ವೀರಶೈವ ಸಂಪ್ರದಾಯದ ನುಡಿನುಡಿಗಳು, ಉಪಮೆಗಳು, ಗಾದೆಗಳು, ಕವಿ ಸಮಯಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದಾರೆ. ವಚನಗಳ ರಚನೆಯ ಕಟ್ಟುಕೂಡ ಪ್ರಮಥರ ಮಾರ್ಗವನ್ನೇ ಅನುಸರಿಸಿದೆ. ಇದರ ಜತೆಗೆ ತತ್ತ್ವನಿರೂಪಣೆಗೆ ಅತ್ಯವಶ್ಯಕವಾದ ಸಮಕಾಲೀನತೆ, ಪ್ರಾಗತಿಕ ಮನೋಭಾವ, ಸಮರಸ ದೃಷ್ಟಿಯನ್ನು ಬೆರಸಿದ್ದಾರೆ.

'ವಚನಮಂಜರಿ' ಆರು ಅಧ್ಯಾಯಗಳಿಂದ ಕೂಡಿ (ಪ್ರಾರ್ಥನೆ, ಪಿಂಡ-ಪಿಂಡಜ್ಞಾನ, ವೈಯಕ್ತಿಕ, ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ) [illegible] ವಚನಗಳನ್ನೊಳಗೊಂಡಿದೆ.

ಪ್ರಾರ್ಥನೆಯ ಅಧ್ಯಾಯದಲ್ಲಿ ಶ್ರೀಗಳವರು ಪಂಚಾಚಾರ್ಯರಿಗೆ ನಮಿಸಿ, ತಮ್ಮ ಪರಂಪರೆಯ ಗುರುಗಳಾದ ಪಂಡಿತಾರಾಧ್ಯರಿಗೆ ಭಕ್ತಿಯ ಕಾಣಿಕೆಯರ್ಪಿಸುತ್ತಾರೆ. ಶಿಷ್ಯನನ್ನು ಮರೆಯದೆ ಅವನನ್ನು ಜೀವನ್ಮುಕ್ತನನ್ನಾಗಿ ಮಾಡಿ ಜೀವರತ್ನನೆಂದೆನಿಸಿ ಎಂದು ಅಂಗಲಾಚಿ ಬೇಡಿಕೊಂಡಿದ್ದಾರೆ.

"ವಿದ್ಯಾವಾರಿಧಿ ಚಂದ್ರರೆ
ವಿಶ್ವಪ್ರಗತಿ ಪ್ರಭಾಕರರೆ, ವಿಶಿಷ್ಟಸಿದ್ಧಿ ಸಮನ್ವಿತರೆ,
ನಿಮ್ಮಾಳು ನಿಮ್ಮೊಳು ಬಿನ್ನವಿಸುವನು ;-ಕರುಣಿಸಿರೆ.
ವಿಲಯ ವಿಶ್ವದಲಿ ನಿಡುಗಾಲ ನಿಲ್ಲುವ ಬದುಕಾವುದು ಹೇಳಿರೆ,
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನಲ್ಲಿ
**ಬೇರಾವ ಭಾಗ್ಯಬೇಡ.**
**ಅನುಭಾವ ಅಮರ ಸಾಹಿತ್ಯವೊಂದನು ಕರುಣಿಸಿ ಸಲಹಿರೆ**
**ಇದುವೆ ಆನು ಬೇಡುವ ಭಾಗ್ಯ ಕೇಳಿರೆ."**

ಎರಡನೆಯ ಅಧ್ಯಾಯದಲ್ಲಿ ಭಗವಂತನ, ಅನಂತ, ಅನಾದಿ ವ್ಯಾಪ್ತಿಯನ್ನು, ಅವನ ಸಾಕಾರ ನಿರಾಕಾರ ಸ್ವರೂಪವನ್ನು ವರ್ಣಿಸುತ್ತಾ

"ಅಂಜನದ ನೆರವಿನಿಂದ ಮಣ್ಣೊಳಗಿನ ಹೊನ್ನು ತೋರುವಂತೆ
'ಎಕ್ಸರೇ' ನೆರವಿನಿಂದ ಗರ್ಭದ ಕಿರುಳು ಹುರುಳುಗಳ ಕಾಣುವಂತೆ
ದೇವ, ನಿಮ್ಮ ಅನುಭಾವ ಬಲದಿಂದ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ನಿಜನಿಲವು ನೋಟಕ್ಕೆ ನಿಂದಿತು ; ಭಾವಕ್ಕೆ ಬಂದಿತ್ತು."

ಎಂದು ಸೂಚಿಸಿದ್ದಾರೆ. ಕನ್ನಡ ನಾಡಭಕ್ತರಾದ ಶ್ರೀಗಳವರು ಕನ್ನಡ ನಾಡನ್ನು ಕುರಿತು ಹೇಳಿರುವ ವಚನ ಅವರ ಸ್ವದೇಶಾಭಿಮಾನದ ಕುರುಹಾಗಿದೆ.

"ಕರುನಾಡ ಸಿರಿಸೊಬಗುಗಳ ಹೇಳಲಳವೆ ಹೇಳಾ !
ನವಧಾನ್ಯ ನವರತ್ನಗಳ ನೆಲೆವೀಡು ಕರುನಾಡು.
ನವಸಿಧಿ ತವನಿಧಿಗಳ ತವರೂರು ಕರುನಾಡು.
ನವರಸ ನವರಂಗಗಳ ನೆಲೆವೀಡು ಕರುನಾಡು.
ಕರುನಾಡು ಭಾರತದ ಕರುಮಾಡ ನೋಡಾ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ."

ಮೂರನೆಯ ಅಧ್ಯಾಯದ ವೈಯಕ್ತಿಕ ವಚನಗಳಲ್ಲಿ ಶ್ರೀಗಳವರ ಸಾಧನ ಯೋಗದ ಚಿತ್ರ ಕಲಾಪೂರ್ಣವಾಗಿ ಸತ್ಯಪೂರ್ಣವಾಗಿ ಮೂಡಿದೆ.

"ಎನ್ನ ತನುವಿಂಗೆ ಆರೋಗ್ಯವನೀಯದೆ
ತೊಳಲಿಸಿದ ಕಾರಣವೇನಯ್ಯ.
ಎನ್ನ ಮನಕ್ಕೆ ಅರಿವನೀಯದೆ ಬಳಲಿಸಿದ ಬಗೆಯೇನಯ್ಯ.
ಎನ್ನ ಭಾವಕ್ಕೆ ಅನುಭಾವವೀಯದೆ ಅಳಲಿಸಿದ ಅಂತರಂಗವೇನಯ್ಯ."

ಎಂದು ಸಾಧಕ ಕೇಳುತ್ತಾನೆ. 'ದಿಟವ ನುಡಿದರೆ ಮೆಚ್ಚದೀ ಲೋಕ. ಮೆಚ್ಚಿ ನುಡಿಯಲಹುದೆ ?'

ಸಾಧಕನ ಪರೀಕ್ಷಾರ್ಥವಾಗಿ ಭಗವಂತ ಮಾಯೆಯ ಬಲೆಯನ್ನೊಡ್ಡಿದ್ದಾನೆ:

"ಪೀಠಾಧಿಕಾರದ ಬಲೆಯನೆಸೆದೆ. ಬಿದ್ದಿಹೆನು, ಬಳಲಿಹೆನು.
ಉತ್ಸವದ ಅಭಿಲಾಷೆ ಅಳವಟ್ಟಿತ್ತು. ವೈಭವದ ಆಸೆ ಆವರಿಸಿತ್ತು.
ಜನಜಂಗುಳಿಯ ಹಂಗಿಗ ನಾನಾದೆ.
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ನಿನ್ನ ಸಂಗ ಸವಿಯತೋರದೆ."

ಸಾಧಕ ಬಯಸುವುದು ಧನ, ಕನಕ, ಕೀರ್ತಿ, ಪ್ರತಿಷ್ಠೆಗಳನ್ನಲ್ಲ:

"ಎದೆಗೊಳದಲ್ಲಿ ದಯಾರಸವ ಹರಿಯಿಸು.
ಶಿರದರಮನೆಯಲ್ಲಿ ಮುತ್ತು ಮಾಣಿಕ್ಯವ ತುಂಬಿಸು.
ತನು ತೋಂಟದಲ್ಲಿ ತನಿವಣ್ಣುಗಳ ತೋರಿಸು
ಶ್ರೀ ಸಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ನಿಮ್ಮ ದಾನವನುಂಡು ದುಮ್ಮಾನ ನೀಗುವೆನು."

ತನ್ನತನದ ಅರಿವುಳ್ಳ ಸಾಧಕ ಪಟ್ಟಾಧಿಕಾರಿಯಾಗಿರಲಿ, ಚರಮೂರ್ತಿಯಾಗಿರಲಿ ಅವನು ಕರ್ತವ್ಯ ಭ್ರಷ್ಟನಾಗುವುದಿಲ್ಲ. ಭಗವಂತನಿಗರ್ಪಿತವಾದ ಅವನ ತ್ರಿಕರಣ, ಹೊಲಬುಗೊಂಡ ಲೋಕದ ವಿಲೋಭನೆಗಳಿಗೆ ತುತ್ತಾಗುವುದಿಲ್ಲ. ಪರಿಸ್ಥಿತಿಯ ಬಲೆಗೆ ಬಿದ್ದ ಸಾಧಕ ಧೃತಿಗೆಡದಂತೆ ಎಷ್ಟು ಎಚ್ಚರವಾಗಿ ಸಾಗಬೇಕೆಂಬುದನ್ನು ಶ್ರೀಗಳವರು ಮಾರ್ಮಿಕವಾಗಿ ಸೂಚಿಸಿದ್ದಾರೆ.

ಆತ್ಮಕಥನ ರೂಪವಾಗಿ ಶ್ರೀಗಳವರು ರಚಿಸಿರುವ ವೈಯಕ್ತಿಕ ವಚನಗಳಲ್ಲಿ ಅವರ ಸತ್ಯಪ್ರೇಮ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದೆ. ಶ್ರೀಗಳವರ ಶಿಕ್ಷಣ ವಿರಕ್ತ ವರ್ಗದವರಲ್ಲಿ ಆಯಿತು. ಅವರ ಆತ್ಮಸಂಸ್ಕೃತಿ ಬಸವಣ್ಣ, ಅಲ್ಲಮಪ್ರಭು, ಮಹಾದೇವಿಯಕ್ಕ, ಚನ್ನಬಸವಣ್ಣ ಮೊದಲಾದ ಪ್ರಮಥರ ದಿವ್ಯಚರಿತ್ರೆಗಳನ್ನಪ್ಪಿಕೊಂಡಿತು. ಶ್ರೀಗಳವರಿಗೆ ಗುರುವರ್ಗದ ಪೀಠಾಧಿಕಾರ ದೊರಕಿತು. ಗುರು ವಿರಕ್ತರಲ್ಲಿ ನೆಲಸಿರುವ ವಿನಾಕಾರಣವಾದ ಸಂಘರ್ಷಣೆ ಕೊನೆಗಾಣಬೇಕಾದರೆ ಶ್ರೀಗಳವರ ಪ್ರಯತ್ನದಿಂದಲೇ ಸಾಧ್ಯ. ಉಭಯಪಕ್ಷದ ಮಹನೀಯರನ್ನು ಏಕಪ್ರಕಾರವಾದ ಭಕ್ತಿಗೌರವದಿಂದ ಕಂಡು ಅವರಲ್ಲಿನ ಭಾವಸಮನ್ವಯವನ್ನು ಎತ್ತಿ ಹಿಡಿಯುವ ಘನ ಕೆಲಸದಲ್ಲಿ ಶ್ರೀಗಳವರು ಉದ್ಯುಕ್ತರಾಗಿದ್ದಾರೆ. ವೀರಶೈವ ಸಮನ್ವಯಾಚಾರ್ಯರಾದ ಶ್ರೀಗಳವರನ್ನು

"ಆಚಾರ್ಯವರ್ಗದವರೆಲ್ಲ ಎನ್ನ ಹೊರಗೆಂಬರು.
ವಿರಕ್ತವರ್ಗದವರೆಲ್ಲ ಎನ್ನ ಹೊರಗೆಂಬರು. ಇದು ದಿಟವೆ ?
ಆ ವರ್ಗ ಈ ವರ್ಗಗಳೊಳಗೆ ಅವರಿವರಿರಲಿ.
ಅಪವರ್ಗ [illegible]ರಲಿ. ಅನುಗ್ರಹಿಸಲಾರೆಯಾ ?"

"ಶರಣ ಸಾಹಿತ್ಯವನೆ ಬರೆದಿಹೆನೆಂಬರು.
ಬರೆದರೇನು ? ಭಾವಿಸುವಡೆ
ಶರಣರು ಲಿಂಗಾಂಗಿಗಳಲ್ಲವೆ ? ಅಷ್ಟಾವರಣ ನಿಷ್ಠರಲ್ಲವೇ ?
ಪಂಚಾಚಾರ ಪರಾಯಣರಲ್ಲವೆ ? ಷಟ್‌ಸ್ಥಲ ಸಂಪನ್ನರಲ್ಲವೇ ?
ಆಗಲಿ, ಆಗದಿರಲಿ ;
ಸಾಹಿತ್ಯಕ್ಕೆ ಭಿನ್ನಭೇದಗಳುಂಟೆ ? ಪಕ್ಷ ವಿಪಕ್ಷಗಳುಂಟೇ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ಗುಣಕ್ಕೆ ಮತ್ಸರವೇ ?

ಸಾಧಕನ 'ತನುವೆಂಬ ತೋಟದಲಿ ಅಂತಃಕರಣಂಗಳೆಂಬ ತುಂಬಿಗಳು ತುಂಬಿ ಝೇಂಕರಿಸುವಾಗ' ಅದರಲ್ಲಿ ಭಿನ್ನಭೇದ ಭಾವಗಳು, ಈರ್ಷೆರೋಷಗಳು, ಶೋಕ ಮೋಹಗಳು ಮನೆಮಾಡಲು ಶಕ್ಯವೇ ?

ಶ್ರೀಗಳವರ ಮನಃಶುದ್ಧಿಗೆ, ಅಂತರಂಗ ವಿಕಾಸಕ್ಕೆ, ಉದಾತ್ತ ವಿಚಾರವೈಭವಕ್ಕೆ ಅವರ ಸಾಹಿತ್ಯ ಭಕ್ತಿಯೇ ಕಾರಣವೆನ್ನಬಹುದು. ಸಾಹಿತ್ಯವನ್ನು ಕಡೆಗಾಣಿಸಿ ಕೇವಲ ಮತ ಪರಂಪರೆಯ ಕುರುಡುಜಾಡನ್ನೇ ಹಿಡಿದು ಶ್ರೀಗಳವರು ಹೋಗಿದ್ದರೆ ಅವರಲ್ಲಿ ಈ ಸಂಸ್ಕೃತಿ ನೆಲಸುತ್ತಿತ್ತೆಂದು ಧಾರಾಳವಾಗಿ ಹೇಳಲು ಬಾರದು. ಮತಕ್ಕೆ 'ನಾನು-ನನ್ನದು' ಎನ್ನುವ ಮಮಕಾರವಿದೆ; ಸಾಹಿತ್ಯದಲ್ಲಿ ಮಮಕಾರಕ್ಕೆ ಎಡೆಯಿಲ್ಲ. ಮತ ಹೇಳುತ್ತದೆ, 'ನನ್ನ ದಾರಿ ಹಿಡಿದು ನಡೆದರೇ ಮುಕ್ತಿ, ಅನ್ಯಮಾರ್ಗ ಗರ್ಹಣೀಯ.' ಸಾಹಿತ್ಯ ಹೇಳುತ್ತದೆ 'ಯಾವ ಮಾರ್ಗ ಹಿಡಿದುಹೋದರೂ ಚಿಂತೆಯಿಲ್ಲ. ಸತ್-ಚಿತ್-ಆನಂದ ಗುರಿ ಮುಟ್ಟಿದರೆ ಸಾಕು'. ಮತ ಗೌರವಿಸುವುದು ತನ್ನ ಪರಂಪರೆಯಲ್ಲಿ ಬಂದ ಆಚಾರ್ಯರನ್ನು ಮಾತ್ರ. ಸಾಹಿತ್ಯ ಗೌರವಿಸುವುದು ಎಲ್ಲ ಪರಂಪರೆಗಳ ಎಲ್ಲ ಆಚಾರ್ಯರನ್ನು. ಮತದ ಹೆಸರಿನಲ್ಲಿ ನಡೆಯುತ್ತಿರುವ ಹುಚ್ಚು ಹೋರಾಟ ಇಳಿಮುಖವಾಗಿ ಲೋಕ ಕಲ್ಯಾಣವಾಗಬೇಕಾದರೆ ಸಾಹಿತ್ಯದ ಪ್ರಭಾವ ವಿಸ್ತರಿಸಬೇಕು.

ಸಾಹಿತ್ಯಕ್ಕೆ ಜಾತಿಮತಗಳ ಸೋಂಕಿಲ್ಲ ; ದೇಶ, ಭಾಷೆಗಳ ಇತಿಮಿತಿಯಿಲ್ಲ ; ವಯಸ್ಸು, ಅಧಿಕಾರ, ಸಂಪತ್ತುಗಳ ಕಟ್ಟಿಲ್ಲ. ಫ್ರಾನ್ಸಿನ ಮಹಾಕವಿ ಮೋಲಿಯರ್ ಅದನ್ನು ಜನಪದ ರಾಜ್ಯವೆಂದು ಕರೆದಿದ್ದಾನೆ. ಶ್ರೀಗಳವರು ಸಾಹಿತ್ಯದ ವ್ಯಾಪ್ತಿಯನ್ನು ಕುರಿತು ಆಡಿರುವ ಮಾತು ಗಮನೀಯವಾಗಿದೆ.

"ಸೀಮೆ ರಾಜನಿಗಲ್ಲದೆ ರಸಜ್ಞನಿಗುಂಟೆ ?
ಸೀಮೆ ವಾರಿಧಿಗಲ್ಲದೆ ವಾಙ್ಮಯಕ್ಕುಂಟೆ ?
ಸೀಮೆ ರಸಾನ್ನಕ್ಕುಂಟಲ್ಲದೆ ರಸೋಕ್ತಿಗುಂಟೆ ?

ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ಸೀಮಾತೀತ ಸಾಹಿತಿ ; ಸೀಮಾತೀತ ಸಾಹಿತ್ಯ,"

ಶ್ರೀಗಳವರು ಸಾಹಿತ್ಯಮಾರ್ಗದಲ್ಲಿ ಅಧ್ಯಾತ್ಮವನ್ನಳವಡಿಸಿಕೊಂಡಿರುವ ರಸ ಯೋಗಿಗಳು.

"ಶಬ್ದ ಶುದ್ಧಿಯೆ ಮಂತ್ರಶುದ್ಧಿ ಕಂಡಯ್ಯ.
ನಿತ್ಯಾಭ್ಯಾಸವೇ ನಿತ್ಯಾನುಷ್ಠಾನ ಕಂಡಯ್ಯ.
ಸಾಹಿತ್ಯ ಸೇವೆಯೆ ಒಲವಿನ ಪೂಜೆ ಕಂಡಯ್ಯ.
ಕಾವ್ಯಾನಂದವೆ ಎನಗೆ ಪ್ರಸಾದ ಪರಿತೃಪ್ತಿ ಕಂಡಯ್ಯ."

"ಸಾಹಿತ್ಯ ಸಂಗ್ರಹವೆ ಕಾಮಧೇನುವೆನಗೆ.
ಸಾಹಿತ್ಯ ಸಂಗ್ರಹವೆ ಕಲ್ಪವೃಕ್ಷವೆನಗೆ
ಸಾಹಿತ್ಯಾಭ್ಯಾಸವೇ ಚಿಂತಾಮಣಿಯೆನಗೆ.
ಸಾಹಿತ್ಯಾಭ್ಯಾಸವೆ ಪರುಷದ ಕಣಿಯೆನಗೆ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಸಾಹಿತ್ಯವೆ ಪ್ರಾಣಶಕ್ತಿಯೆನಗೆ."

"ಸಾಹಿತ್ಯ ಸೇವೆಯೆ ಎನಗೆ ಭಾಗ್ಯದ ಭಂಡಾರ ನೋಡ.
ಸಾಹಿತ್ಯ ಸೇವೆಯೆ ಎನಗೆ ಪುಣ್ಯದ ಪುರುಳು ನೋಡ.
ಸಾಹಿತ್ಯ ಸೇವೆಯೆ ಎನಗೆ ಸೌಖ್ಯದ ಸದನ ನೋಡ.
ಸಾಹಿತ್ಯ ಸೇವೆಯೆ ಎನಗೆ ಐಕ್ಯದ ಆನಂದ ನೋಡ."

ಸಾಹಿತಿಯನ್ನು 'ನಾದಬಿಂದು ಕಲಾತ್ಮಕ ಸಿದ್ಧ'ನೆಂದು ಕರೆದು ಶ್ರೀಗಳವರು 'ಒಮ್ಮೆ ಸಾಹಿತ್ಯ ಸುಕ್ಷೇತ್ರದಲ್ಲಿ ವಿಹರಿಸಿದರೆ, ಒಮ್ಮೆ ಸಾಹಿತ್ಯ ರಸತೀರ್ಥವನ್ನು ಕೊಂಡರೆ ಮುಕ್ತಿ ಸುಖ ಒಮ್ಮೆಗೆ ಸಿದ್ಧಿಸುವುದು ಎಂದು ಹೇಳುತ್ತಾರೆ.

ಬಾಳನ್ನು ಏಕದೇಶೀಯವಾಗಿ ನೋಡುವವನಿಗೆ ಎಲ್ಲವೂ ವಿಕರ್ಷಕವಾಗುತ್ತದೆ ; ಅದನ್ನೇ ಅನೇಕದೇಶೀಯವನ್ನಾಗಿ ನೋಡುವವನಿಗೆ ಎಲ್ಲವೂ ಆಕರ್ಷಕವಾಗುತ್ತದೆ. ಸಮರಸವಿದ್ದಲ್ಲಿ ಮಾತ್ರ ಸಮದರ್ಶನ ದೊರೆಯುವುದು. ಶ್ರೀಗಳವರು ಶಾಸ್ತ್ರ-ಸಾಹಿತ್ಯಕ್ಕೆ ಕಲ್ಪಿಸಿರುವ ಸಂಬಂಧ ಸ್ವಾರಸ್ಯವಾಗಿದೆ.

"ಸಾರಸ್ವತ ಪ್ರಪಂಚವದು
ಶಾಸ್ತ್ರ-ಸಾಹಿತ್ಯ ಎಂಬುದಾಗಿ ಇತ್ತೆರನಾಗಿಹುದು ನೋಡ.
ಪ್ರಭುಹೃದಯುಳ್ಳುದೇ ಶಾಸ್ತ್ರ.
ಪ್ರಮದಾಹೃದಯುಳ್ಳುದೇ ಸಾಹಿತ್ಯ ನೋಡ."

ಸಾಂಸ್ಕೃತಿಕ ವಚನಗಳಲ್ಲಿ ನಮ್ಮ ನಿತ್ಯಜೀವನಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು, ಸಮಸ್ಯೆಗಳು ಘರ್ಷಣೆಗಳ ಬಗ್ಗೆ ಶ್ರೀಗಳವರು ಬಹು ಮಾರ್ಮಿಕವಾಗಿ

ನುಡಿದಿದ್ದಾರೆ. ಸಂಸ್ಕೃತಿಯೆಂದರೆ ಪುಸ್ತಕ ಪಾಂಡಿತ್ಯವಲ್ಲ. ಹಳೆಯ ಕತೆಯನ್ನು ಹೇಳಿಕೊಂಡು ಕೂಡುವುದಲ್ಲ. ನಮ್ಮ ಬಾಳು ನಮ್ಮ ಸಂಸ್ಕೃತಿಯ ಪ್ರತೀಕವಾಗಬೇಕು. ಆಚಾರ, ವಿಚಾರಗಳಿಗೆ ತಾದಾತ್ಮ್ಯವಿಲ್ಲದ ಬಾಳು ನಿರರ್ಥಕ, ನಿಷ್ಪ್ರಯೋಜಕ.

"ನಮ್ಮ ಆಡಳಿತಕ್ಕೆ ಬಂದಲ್ಲಿ
ದೇಶವನುದ್ಧರಿಸುವೆವೆಂದು ಭಾಷೆಯ ನೂಂಕುವರು ;
ವೇಷವ ಸೋಂಕುವರು ; ಮೋಸಕ್ಕೆ ಮೀಸಲಪ್ಪರು.
ನಾಶಕ್ಕೆ ಹೇಸರು. ಅಧಿಕಾರಾರೂಢರಾಗದೆ ಕೊಲ್ಲುವವರು
ಅಧಿಕಾರಿಗಳಾಗಿ ಕೊಲ್ಲದಿಹರೆ ಹೇಳಾ.?"

"ಜಾತಿವೈತ್ರಿಯ ಮಾತನಾಡುವರು. ವ್ಯಕ್ತಿವೈರವ ತ್ಯಜಿಸರು.
ಸ್ವಾರ್ಥವೃತ್ತಿಯ ನಿವೃತ್ತಿ ಮಾಡರು.
ಸಂಘಾಭಿಮಾನದ ಸಂಕುಚಿತ ಸ್ವಭಾವವ ನೀಗರು.
ಇನ್ನೆತ್ತಣ ಜಾತಿಮೈತ್ರಿ ? ಇನ್ನೆಂದಿಗೆ ಸಮುಸುಖಚೈತ್ರ ಹೇಳಾ?."

ಸ್ವಾತಂತ್ರ್ಯ ಸೂರ್ಯನು ಮೇಲೇರಿದಂತೆ
ಅತಂತ್ರಜೀವನದ ಕಳ್ತಲೆ ಕವಿದು ಬಪ್ಪುದಯ್ಯ.
ಸತ್ಯಾಗ್ರಹವು ಹೆಚ್ಚಿದಂತೆ ಸತ್ಯದ ನಿಗ್ರಹವು ಹೆಚ್ಚುತ್ತಿದೆಯಯ್ಯ.
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ,
ಆಹಾರದ ಯೋಜನೆ ನಡೆದಂತೆ
ನಿರಾಹಾರದ ಯಾಚನೆ ಮುನ್ನುಗ್ಗುತ್ತಿದೆಯಯ್ಯ.
ಇದೇನು ವಿಚಿತ್ರ ಹೇಳಯ್ಯ?"

"ಋಷ್ಯಾಶ್ರಮಗಳು ಕೃಷ್ಯಾಶ್ರಮಂಗಳಾಗಿಹವು.
ಸಂನ್ಯಾಸಿ ಮಠಗಳು ಸಂಸಾರಿ ಮನೆಗಳಾಗಿಹವು.
ಸಂನ್ಯಾಸ ಶಾಸ್ತ್ರಬೋಧೆ ನಡೆವಲ್ಲಿ
ಸಂತಾನಶಾಸ್ತ್ರಪ್ರಯೋಗ ನಡೆದಿಹುದು ನೋಡಾ."

"ಜಾತ್ಯಂಧರು ಹಳಬರು; ನೀತ್ಯಂಧರು ಹೊಸಬರು.
ಧರ್ಮಾತ್ಮರು ಹಳಬರು; ಕರ್ಮಾತ್ಮರು ಹೊಸಬರು.
ಹಳಬರಿಗೆ ನೀತಿಯ ನೆಲೆಯುಂಟು ;
ಹೊಸಬರಿಗೆ ನೀತಿಯೂ ಇಲ್ಲ. ಜಾತಿಯೂ ಇಲ್ಲ."

"ಬಡವರ ಮೇಲೆ ಭಾಗ್ಯವಂತರು,
ಬುದ್ಧಿಹೀನರ ಮೇಲೆ ಬುದ್ಧಿವಂತರು, ಪ್ರಮದೆಯರ ಮೇಲೆ ಪುರುಷರು,

ಒಡೆತನವ ತೋರುವುದು ನಾಗರಿಕ ಸಂಸ್ಕೃತಿಯಲ್ಲವಯ್ಯ.
ಎಲ್ಲರಲಿ ಆತ್ಮೈಕ್ಯತೆ ಮಾನವ್ಯಸಮತೆಗಳ ತೋರಿ
ತಾನಾಚರಿಪುದೆ ನಾಗರಿಕ ನಿಜ ಸಂಸ್ಕೃತಿಯಯ್ಯ"

ಆಧುನಿಕ ಯುಗ, ವೈಜ್ಞಾನಿಕ ನಾಗರಿಕತೆ, ಸ್ವಾತಂತ್ರ್ಯದ ತರುವಾಯ ಬಂದಿರುವ ಪರಿಸ್ಥಿತಿಯನ್ನು ಶ್ರೀಗಳವರು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಲೋಕದ ನೀತಿರಾಹಿತ್ಯವ್ಯವಹಾರವನ್ನು, ಸೀಮಾತೀತಸ್ವಾರ್ಥವನ್ನು, ರಾಕ್ಷಸೀ ಪ್ರವೃತ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಆದರೆ ಶ್ರೀಗಳವರು ನಿರಾಶಾವಾದಿಗಳಲ್ಲ. ನಮ್ಮ ನೈತಿಕಪತನ ಸ್ವತಃಸಿದ್ಧವಾಗಿದೆ. ನಮ್ಮ ಬಾಳು ಅಡ್ಡದಾರಿ ಹಿಡಿದು ವಿನಾಶದತ್ತ ಸಾಗುತ್ತಿದೆ. ಇದಕ್ಕೆ ಮುಕ್ತಿಯಿಲ್ಲವೇ ? ಸಹಸ್ರಾರು ವರ್ಷಗಳ ದಿವ್ಯ ಸಂಸ್ಕೃತಿಯಲ್ಲಿ ಬೆಳೆದು ಬಾಪ್ಪುವಿನ ಪುಣ್ಯಪ್ರಭಾವದಿಂದ ಪುಷ್ಟಿಗೊಂಡಿರುವ ಈ ನಾಡು ನಾಶವಾಗುತ್ತದೆಯೇ ? ನಾಶವಾಗಬೇಕೇ ? ಎನ್ನುವ ಪ್ರಶ್ನೆ–ತಳಮಳ ಭಾವುಕರ ಮನಸ್ಸಿಗಾಗುವುದು ಸಹಜ. ಶ್ರೀಗಳವರು ಭಾರತ ಉದ್ಧಾರವಾಗುವ ಬಗೆಯನ್ನೂ ಆಳವಾಗಿ ವಿಚಾರಮಾಡಿದ್ದಾರೆ.

"ವ್ಯಕ್ತಿವ್ಯಕ್ತಿಗಳಲಿ ಮತಮತಂಗಳಲಿ
ಸಂಘ ಸಂಸ್ಥೆಗಳಲಿ ವೈರವಳಿದು ಪ್ರೇಮವುದಿಸುವುದು ಬಪ್ಪುದೆ
ನಾಗರಿಕತೆಯ ಪ್ರಗತಿಯು ನೋಡಾ.
ಉಚ್ಚವರ್ಣದವರೆಂದು ಹೆಚ್ಚಿನ ಅಧಿಕಾರಿಗಳೆಂದು
ಸೋಮಾರಿಗಳಾಗದೆ ಸಾಹಂಕಾರಿಗಳಾಗದೆ
ವೃತ್ತಿ ವ್ಯವಸಾಯಗಳಲ್ಲಿ ಸಮಸ್ತರು ಶ್ರಮಿಸುವುದೆ
ನಾಗರಿಕತೆಯ ಪ್ರಗತಿಯು ನೋಡಾ.
ಅಧಿಕಲಾಭದಾಸೆ ಕೈಯಾಸೆಗಳ ಕಳಚಿ
ಸುಳ್ಳು ಕಳ್ಳ ವ್ಯಾಪಾರಗಳ ತ್ಯಜಿಸಿ
ಶಾಂತಿ ಸಹನ ಸಹಕಾರ ಸಮತಾಭಾವ–
ಶಿಷ್ಟಾಚಾರ ಸಂಪನ್ನರಾಗಿ ಸಚ್ಚರಿತ್ರರಪ್ಪುದೆ ಅದು
ನಿಜನಾಗರಿಕತೆಯ ಪ್ರಗತಿಯು ನೋಡಾ.
ಇಂತೀ ತ್ರಿವಿಧ ಆಚರಣಗಳೆ ನಾಗರಿಕನ ನಿಜರೀತಿ ನೋಡಾ,
ಸಹಜ ಪ್ರಗತಿ ನೋಡಾ."

"ಅಹಿಂಸೆಯೇ ಜೀವನ. ಸತ್ಯವೆ ದರ್ಶನ.
ಸೋದರತೆಯೇ ಶಿಕ್ಷಣ. ಇಂತಿವು ಮಾನವ ಲಕ್ಷ್ಯವಪ್ಪಡೆ
ವಿಶ್ವದ ಅಶಾಂತಿ ಕಾಷ್ಠಕ್ಕೆ ಬೇರೆ ಕಿಚ್ಚೇಕೆ ಹೇಳಾ?"

ಶ್ರೀಗಳವರು ತಮ್ಮ ಜೀವನಸಿದ್ಧಾಂತ, ಸತ್ಯದರ್ಶನವನ್ನು ಒಂದು ದಿವ್ಯವಚನದಲ್ಲಿ ಅಡಗಿಸಿದ್ದಾರೆ.

"ವಿಶ್ವವೆ ಮನೆ. ವಿಶ್ವೇಶ್ವರನೆ ತಂದೆ.
ವಿಶ್ವೇಶ್ವರಿಯೆ ತಾಯಿ. ವಿಶ್ವದ ಮಾನವರೆಲ್ಲ ಮಕ್ಕಳು ಕಂಡಯ್ಯ.
ಬಣ್ಣ–ಭಾಷೆ–ಧರ್ಮಕರ್ಮ, ದಿಕ್ಕು-ದೇಶಗಳಾವಾದಡೇನು ?
ಮಾನವ್ಯ ಭಾಂಧವ್ಯವೆ ವಿಶ್ವೈಕ್ಯದ ಜೀವಾಳ ಕಂಡಯ್ಯ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ."

ಶ್ರೀಗಳವರ ದಿವ್ಯಸಂದೇಶ ಎಲ್ಲರ ಹೃದಯದಲ್ಲಿಯೂ ಸುವರ್ಣಾಕ್ಷರಗಳಲ್ಲಿ ಉಲ್ಲಿಖಿತವಾಗಬೇಕು.

ಶ್ರೀ ಶ್ರೀಗಳವರ 'ವಚನಮಂಜರಿ' ಒಬ್ಬ ಸತ್ಯಶೋಧಕನೂ, ಲೋಕ ಕಲ್ಯಾಣರತನೂ, ಪುರೋಗಾಮಿಯೂ ಆದ ಸಾಧಕನ ದಿವ್ಯ ಚರಿತ್ರೆ. ಅವರ ನುಡಿಗಳಲ್ಲಿ ಸಿಡಿಲಿನ ಹೊಡೆತವಿದೆ, ಮಿಂಚಿನ ಪ್ರಕಾಶವಿದೆ, ತಾಯಿಯ ಪವಿತ್ರಪ್ರೇಮದ ಅಮೃತವರ್ಷವೂ ಇದೆ. ಹಿರಿಯ ಗುರುಪೀಠದಿಂದ ಶ್ರೀಗಳವರು ಅಧಿಕಾರವಾಣಿಯಿಂದ ದಿವ್ಯೋಪದೇಶ ಮಾಡಿದ್ದಾರೆ–ಅದಕ್ಕೂ ಹೆಚ್ಚಾಗಿ ಆಡಿದುದನ್ನು ಮಾಡಿ ತೋರಿಸುತ್ತಿದ್ದಾರೆ.

ಈಗ್ಗೆ ಸುಮಾರು ಮೂವತ್ತು ವರ್ಷಗಳ ಕೆಳಗೆ ಆರಂಭವಾದ ಶ್ರೀಗಳವರ ಸಾಹಿತ್ಯಸೇವೆ ಸತತ ಸಾಧನ, ಧ್ಯಾನ, ತಪಸ್ಸುಗಳ ಪ್ರಭಾವದಿಂದ ಸಿದ್ಧಿಸಿ ಲೋಕೋತ್ತರವಾದ ಫಲಗಳನ್ನು ನೀಡುತ್ತಿದೆ. ನಿಡುಮಾಮಿಡಿಯ ಮಾವಿನಮರ ಪೀಠದ ಗುರುಗಳೊಬ್ಬರ ಕರೆಗೆ ಓಗೊಟ್ಟು ಮಾಮಿಡಿಯನ್ನು ನೀಡಿದಂತೆ, ಶ್ರೀಗಳವರ ತಪೋವೃಕ್ಷ ಜನತೆಯ ಕರೆಗೆ ಓಗೊಟ್ಟು ಇನಿವಣ್ಣುಗಳನ್ನು ನೀಡುತ್ತಿದೆ. ಈ ಜ್ಞಾನವೃಕ್ಷಕ್ಕೆ ವಸಂತಲಕ್ಷ್ಮಿ ನಿತ್ಯಾನುಗ್ರಹ ಮಾಡಲಿ–ಶ್ರೀಗಳವರ 'ವಿಶ್ವೇಶ್ವರ ಪೂಜೆ' ನಿರಂತರವಾಗಿ ಸಾಗಿ ಲೋಕಕ್ಕೆ ಶಾಂತಿಯನ್ನು, ಕಾಂತಿಯನ್ನು, ಅನುಗ್ರಹಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಶ್ರೀ ಜ. ಚ. ನಿ. ಅವರ 'ವಚನವಲ್ಲರಿ'

—ಜಿ. ಸುಂದರೇಶನ್, ಎಂ. ಎ.

ಕನ್ನಡ ಸಾಹಿತ್ಯದಲ್ಲಿ ಏನಿದೆ ?-ಎಂದು ವಿಡಂಬನೆಯ ದನಿಯಲ್ಲಿ ಪ್ರಶ್ನೆ ಹಾಕಿದವರೊಬ್ಬರಿಗೆ—ಏನಿಲ್ಲ ?-ಎಂದು ಪ್ರಶ್ನೆಯ ಮೂಲಕವೆ ಉತ್ತರವನ್ನು ಹಿರಿಯರೊಬ್ಬರು ನೀಡಿದ್ದರಂತೆ ! ಅದೇ ಪ್ರಶ್ನೆಗೆ ನೇರವಾಗಿ ಪ್ರಾಮಾಣಿಕ ಉತ್ತರ ತಿಳಿಸುವುದಾದರೆ ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯವಿದೆ—ಎಂದೆನ್ನಬಹುದು. ಈ ಕಾರಣವೇ "ವಿಶ್ವಸಾಹಿತ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಅಮೂಲ್ಯ ವೈಶಿಷ್ಟ್ಯವೆಂದರೆ ವಚನ ಸಾಹಿತ್ಯ"—ಎಂದು ಪ್ರೊ. ಶಿ. ಶಿ ಬಸವನಾಳರು ಎತ್ತಿ ಸಾರಿದರು.

'ವಚನ' ಶಬ್ದಕ್ಕೆ ಮಾತು, ಹೇಳಿಕೆ, ಅಪ್ಪಣೆ, ಅಭಿವ್ಯಕ್ತಿ, ಸಮ್ಮತಿ, ನಿಯಮ ಎಂದೆಲ್ಲ ನಿಘಂಟಿನಲ್ಲಿ ಅರ್ಥವಿದೆ. ವಾಕ್, ಸೊಲ್ಲು, ಉಲಿ–ಸಂವಾದಿ ಶಬ್ದಗಳಾಗಿವೆ. ಅಣ್ಣನ ದೃಷ್ಟಿಯಲ್ಲಿ ವಚನವೆಂದರೆ ಮುತ್ತಿನ ಹಾರ. ಮಾಣಿಕ್ಯದ ದೀಪ್ತಿ, ಸ್ಫಟಿಕದ ಶಲಾಕೆ, ಸಂಗಮದೇವನ ಒಲವಿಗೆ ಒಳಗಾದ ನುಡಿ. ಪ್ರಭುವಿನ ದೃಷ್ಟಿಯಲ್ಲಿ "ಮಾತೆಂಬುದು ಜ್ಯೋತಿರ್ಲಿಂಗ" ಹರಿಹರನ ದೃಷ್ಟಿಯಲ್ಲಿ ವಚನವೆಂದರೆ 'ಗೀತ' ಶಿ. ಶಿ. ಬಸವನಾಳರ ದೃಷ್ಟಿಯಲ್ಲಿ ವಚನ ಗದ್ಯವೂ ಅಲ್ಲ, ಪದ್ಯವೂ ಅಲ್ಲ.–ಗದ್ಯ ಪದ್ಯದ ನಡುವಣ ಮಾದರಿಯ ಬಂಧ. "ಲಿಂಗಸೂತ್ರ ನಿರ್ಣಯ"ದಲ್ಲಿ ವಚನವನ್ನು "ಸೂತ್ರ"—ಎಂಬ ಅರ್ಥದಲ್ಲಿ ಪರಿಗಣಿಸಲಾಗಿದೆ. ಸಾಹಿತ್ಯ ದೃಷ್ಟಿಯಿಂದ ವಚನವು ಚಿತ್ತಾಕರ್ಷಕವಾದ ಒಂದು ಕಾವ್ಯರೂಪ; ರಮಣೀಯ ಮುಕ್ತಕ.

ಪ್ರಾಚೀನ ಚಂಪೂ ಕಾವ್ಯಗಳಲ್ಲಿಯೇ ವಚನ ಸುಳಿ ತೆಗೆದಿದ್ದರೂ ಆ ಶುಷ್ಕ ಗದ್ಯರೂಪವನ್ನು ಸಾಹಿತ್ಯದ ಒಂದು ವಿಶಿಷ್ಟ ರೂಪವನ್ನಾಗಿ ಮಾಡಿ, ಸ್ವಾನುಭವದ ಪರಿಣಾಮವನ್ನು ಸಾಹಿತ್ಯರೂಪಕ್ಕೆ ವೇಧಿಸಿದ ವೈಶಿಷ್ಟ್ಯ ಶಿವಶರಣರದಾಗಿದೆ. ತಮ್ಮ ಮತ್ತು ಇತರರ ಸಂಸ್ಕಾರ-ಉದ್ಧಾರವನ್ನಷ್ಟೇ ಅಲ್ಲ, ಸಾಹಿತ್ಯ ರೂಪಗಳನ್ನೂ ಸಂಸ್ಕ

ರಿಸಿದ ಶರಣರ ದೃಷ್ಟಿ ಅಪೂರ್ವ ನೂತನ, ಅರ್ಥಪೂರ್ಣ! ಸಂಸ್ಕಾರ ಬಾಳಿಗೆ ಎಷ್ಟು ಮುಖ್ಯವೋ ಬಾಳಿನ ಪ್ರತಿರೂಪವಾದ ಸಾಹಿತ್ಯಕ್ಕೂ ಅಷ್ಟೇ ಅಗತ್ಯವಲ್ಲವೆ?

ಶರಣರ ವಚನಗಳಲ್ಲಿ ಗದ್ಯದಲ್ಲಿ ಸ್ಫುಟವಾಗಿ ವ್ಯಕ್ತವಾಗುವ ವಿಚಾರದ ಹೆಚ್ಚಳವಿದೆ. ಪದ್ಯದ ರಸಭಾವಗಳ ಚೆಲುವಿದೆ. ಮಿಗಿಲಾಗಿ ದಿವ್ಯಸಂಸ್ಕೃತಿ ಇದೆ. ದೈವೀ ಸಾಧಕನ ಉನ್ಮಾದದಿಂದ ನಿಬ್ಬೆರಗಿನಿಂದ ಉಕ್ಕಿಬಂದ ಆನಂದಲಹರಿಯೇ ವಚನ. ರಸ-ಭಾವ ಗೀತಾಂಶಗಳು ನೆಲಸಿರುವ ಕಾರಣ ವಚನವು ಕಾವ್ಯ. ಮಹೋನ್ನತ ತತ್ವ ಪ್ರತಿಕ್ರಿಯೆಗಳ ವ್ಯಾವರ್ಣನೆ ಇರುವುದರಿಂದ ವಚನವು ದರ್ಶನ. ಅಂದಂದಿನ ಶಿವಾನುಭವದ ಈ ನವಗೀತಗಳಲ್ಲಿ ಸಾಧಕನ ಎದೆಯ ತುಡಿತ ಮಿಡಿತವಿದೆ. ಭಾವಗಳ ಮೊರೆತವಿದೆ. ಧ್ಯಾನದ ಆವೇಶವಿದೆ. ಕವಿಯ ರಸಾವೇಶವಿದೆ. ಯೋಗಿಯ ಉನ್ನತ ನಿಲವಿನ ದರ್ಶನವಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನ ಸಾಹಿತ್ಯ ಚರಿತ್ರೆ ಉಜ್ವಲ ಪರಂಪರೆಯ ಘನ ಅಧ್ಯಾಯ; ಘನ ಮನದ ಮಹಂತರ ಉದ್ಗೀಥ. ವಚನಸಾಹಿತ್ಯದ ಆದ್ಯ ಪ್ರವರ್ತಕ ಸದ್ಯಕ್ಕೆ ೧೧ ನೇ ಶತಮಾನದಲ್ಲಿದ್ದ ದಾಸಮಯ್ಯ. ದೇವರ ದಾಸಮಯ್ಯನವರ ವಚನಗಳಲ್ಲೇ ಉನ್ನತ ವಿಚಾರವೈಭವ, ಶಿವಾನುಭವ ಕಂಡುಬರುವುದರಿಂದಲೂ, "ಒಡಲೆಂಬ ಬಂಡಿಗೆ ಮೃಡ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ" —ಎಂದು ದಾಸಮಯ್ಯನವರೇ ವಚನಿಸಿರುವುದರಿಂದಲೂ—ವಚನಗಳ ಆರಂಭದ ಕಾಲ ೧೧ ನೇ ಶತಮಾನಕ್ಕಿಂತ ಇನ್ನೂ ಹಿಂದಕ್ಕೆ ಹೋಗುತ್ತದೆ. ಈ ಸಂಗತಿಯನ್ನು ಹಿರಿಯರು ಸಾಧಾರ ಸಹಿತ ಸಮರ್ಥಿಸಿದ್ದಾರೆ. ಸದ್ಯಕ್ಕೆ ೧೧ ನೇ ಶತಮಾನದ ದಾಸಮಯ್ಯನಿಂದ ಆರಂಭವಾದ ವಚನಪರಂಪರೆ, ೧೭ ನೇ ಶತಮಾನದ ಷಣ್ಮುಖ ಸ್ವಾಮಿಯವರೆಗೂ ನಿರಂತರವಾಗಿದೆ. ಆದರೆ ಮುಂದೆ ಏಕೋ ವಚನರೂಪ ಸುಳಿದಿಲ್ಲ. ೨೦ ನೇ ಶತಮಾನದಲ್ಲಿ ಶ್ರೀ ಜ. ಚ. ನಿ. ಅವರು ವೀರಶೈವ ಸಾಹಿತ್ಯದ ವಿಶಿಷ್ಟ ರೂಪವಾದ, ವಚನದ ಪುನರುತ್ಥಾಪನ ಉಜ್ಜೀವನ ಕಾರ್ಯವನ್ನು ಕೈಗೊಂಡು ಸಫಲರಾಗಿದ್ದಾರೆ. 'ಸಿದ್ಧಾಂತ ಶಿಖಾಮಣಿ'ಯನ್ನು ೧೬೦೦ ವಚನಗಳಲ್ಲಿ ಬರೆದು 'ಮಣಿ ವಚನಗಳು' ಎಂದು ಹೆಸರಿಸಿದ್ದಾರೆ. ಉಳಿದ ವಚನಮಂಜರಿ, ವಚನಾಂಜಲಿ, ವಚನವಲ್ಲರಿ, (ಭಾಗ ೧, ೨) ಎಲ್ಲ ಸೇರಿ ಸುಮಾರು ೩೫೦೦ ವಚನಗಳನ್ನು ಶ್ರೀ ಸನ್ನಿಧಿಯವರು ಸದ್ಯಕ್ಕೆ ನುಡಿಲೋಕಕ್ಕೆ ಸಲ್ಲಿಸಿದ್ದಾರೆ.

ಹೊಸ ಕಾಲದ ಛಂದೋರೂಪ, ತಂತ್ರ, ಲಯವಿಲಾಸಗಳಲ್ಲಿ ನೈಪುಣ್ಯವನ್ನು ಸಾಧಿಸಲು ಬಯಸುತ್ತಿರುವ ಈ ಕಾಲದಲ್ಲಿ-ಸಂಪ್ರದಾಯದ ಚಂಪೂರೂಪವನ್ನು, ವಚನ-ಶತಕ ಷಟ್ಪದಿ ರೂಪಗಳನ್ನು ಮರೆಯದೆ ಇದ್ದರೆ-ಹಳೆಯದೆಂದು ಹಳಿಯದೆ ಇದ್ದರೆ ಸಾಕು ಅದೆಷ್ಟೋ ಪಾಲು ನಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದೇವೆ ಎಂದೇ ನನ್ನ ಭಾವನೆ.

ಇಂಥ ಪರಿಸ್ಥಿತಿಯಲ್ಲಿ ಹಳೆಯ ರೂಪವನ್ನು ಹೊಸ ದೃಷ್ಟಿಯಿಂದ ಮೆರಗು ಕೊಟ್ಟು ಸಾರ್ಥಕ ಸಾಹಿತ್ಯ ಸೇವೆ ಮಾಡುತ್ತಿರುವ ಪೂಜ್ಯ ಜಗದ್ಗುರು ಶ್ರೀ ಚೆನ್ನ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರ 'ವಚನವಲ್ಲರಿ' ಯಂಥ ಕೃತಿಗಳನ್ನು ಕಂಡಾಗ ಹೂ ಬಿಟ್ಟ ಬನದಿಂದ ಬೀಸಿಬಂದ ತಂಗಾಳಿಗೆ ಮೈಯೊಡ್ಡಿದಂತಾಗುತ್ತದೆ. ಮನದ ಹರುಷ ಹೆಚ್ಚುತ್ತದೆ. ಈ ಮೊದಲೇ ಶ್ರೀ ಜ. ಚ. ನಿ. ಅವರು ವೀರಶೈವರ ಶ್ರೇಷ್ಠ ಗ್ರಂಥವಾದ 'ಸಿದ್ಧಾಂತ ಶಿಖಾಮಣಿ' ಯನ್ನು 'ಮಣಿಮುಕುರ' – ಎಂಬ ಹೆಸರಿನಲ್ಲಿ 'ಅಕ್ಕನ ಬಾಳು'-ಶ್ರೀಗಳವರ ಉತ್ಕೃಷ್ಟವಾದ ಕಾವ್ಯಮಯ ಗದ್ಯಶೈಲಿಯ ಪ್ರತೀಕವಾಗಿದ್ದರೆ, 'ನೆರೆದ ನೀರೆಂಬ ಪಾತ್ರವಂತೂ ಸಾಹಿತ್ಯ ಲೋಕದಲ್ಲಿ ಅತ್ಯಂತ ಸ್ಮರಣೀಯವಾದ ರಸಚಿತ್ರವಾಗಿದೆ. ವಚನಗ್ರಂಥಗಳ ಸಾಲಿನಲ್ಲಿ ವಚನವಲ್ಲರಿ (೧) ಮೂರನೆಯದು.

ಶ್ರೀ ಜ. ಚ. ನಿ. ಅವರದು ಪ್ರತಿಭಾಪೂರ್ಣವಾದ ಬದುಕು. ಸಾಹಿತ್ಯವನ್ನೇ ಶಿವಯೋಗಾನಂದದ ಪೆದ್ದಾರಿಯನ್ನಾಗಿ ಮಾಡಿಕೊಂಡ ಬದುಕು. ಪುರಾತನ ವಚನ ಪರಂಪರೆಗೆ ಇಂದು ಹೊಸಬೆಳಕು ಚೆಲ್ಲಿದ್ದಾರೆ. ತಾವೇ ಶರಣರ ನೆಲೆಯಲ್ಲಿದ್ದು, ಶರಣ ಸಂಸ್ಕೃತಿಗೆ ಅನುಗುಣವಾಗಿ ವಚನ ಸೃಷ್ಟಿಯನ್ನು ಸಂಪದ್ಭರಿತವಾಗಿ ಈ ಶತಮಾನದಲ್ಲಿ ಮಾಡಿರುವವರೆಂದರೆ ಶ್ರೀ ಜ. ಚ. ನಿ. ಸನ್ನಿಧಿ ಅವರು ಒಬ್ಬರೇ !

ಶ್ರೀ ಜ. ಚ. ನಿ. ಯವರು ದಾಸಿಮಯ್ಯನವರಂತೆ ದೇಶಸಂಚಾರ ಮಾಡುತ್ತಾ ಉಪದೇಶದಿಂದ ಜನತೆಯ ಧರ್ಮಪ್ರಜ್ಞೆಯನ್ನು ಜಾಗೃತಗೊಳಿಸುತ್ತಿದ್ದಾರೆ. ಬಸವ ನಂತೆ ಭಕ್ತಿಶೀಲರಾಗಿದ್ದಾರೆ. ಸಕಲ ಜೀವರಿಗೆ ಲೇಸನ್ನೇ ಬಯಸುವ ಸಾಹಿತ್ಯವನ್ನು ಸಮೃದ್ಧವಾಗಿ ಸೃಷ್ಟಿಸಿದ್ದಾರೆ. ಚೆನ್ನಬಸವನಂತೆ ಚಿನ್ನಿಧಿಯಾಗಿದ್ದಾರೆ. ಅಲ್ಲಯ್ಯನ ಬೆಳಕ ಚೆಲ್ಲಿದ್ದಾರೆ. ಈ ಪುರಾತನರೆಲ್ಲರ ವಚನ ಪ್ರಭಾವ ಹೃದಯ ಹರಕೆ ಶ್ರೀ ಜ. ಚ. ನಿ. ಅವರ ಬದುಕಿಗೆ ದಿವ್ಯ ಸ್ಫೂರ್ತಿ ನೀಡಿದೆ; ಅವರ ಸಾಹಿತ್ಯವನ್ನು ಸಾರ್ಥಕವಾಗಿಸಿದೆ.

ವ್ಯಕ್ತಿಯ ಬಹಿರಂಗ, ಅಂತರಂಗ ಜೀವನದ ಬಗೆಗೆ ವಿಚಾರಲಹರಿಯನ್ನು ಈಗಾಗಲೇ ಹೊರಬಂದಿರುವ ವಚನಾಂಜಲಿ, ವಚನಮಂಜರಿ ಕೃತಿಗಳು ಒದವಿಸಿದ್ದರೆ, 'ವಚನವಲ್ಲರಿ' (೧) ಯಲ್ಲಿ ವ್ಯಕ್ತಿಗತ ತತ್ತ್ವತ್ರಯದ ನಿರೂಪಣೆ ತುಂಬಿಬಂದಿದೆ.

ಮಾತು, ಮನ, ಮೆಯ್, ಗುರು-ಎಂಬ ವಿಷಯ ವಿಭಾಗಗಳು ೩೬೫ ವಚನ ಗಳನ್ನು ಒಳಗೊಂಡಿದೆ. 'ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ—ಎಂಬುದು ಶ್ರೀಗಳವರ ವಚನಾಂಕಿತ. "ದೇವನೊಬ್ಬ ನಾಮಹಲವು'—ಅಣ್ಣನ ಸತ್ಯವಾಣಿ ಯನ್ನು ನೆನಹಿಗೆ ತಂದುಕೊಡುವ ವಚನದಿಂದ ಕೃತಿ ಮೊದಲಾಗಿದೆ.

'ಶಿವಾನುಭವವೊಂದ ನಿತ್ತಡೆ ಬದುಕುವೆನಯ್ಯಾ'

ಎಂದು ತಮ್ಮ ಇಷ್ಟದೈವದಲ್ಲಿ ಬಿನ್ನವಿಸಿಕೊಂಡಿದ್ದಾರೆ; ಶಿವಾಗಮ ಸುರತರುವಿಗೆ ವಚನವಲ್ಲರಿಯನ್ನು ಹಬ್ಬಿಸಿದ್ದಾರೆ. ಮಾತು ಮೃದು ಮಧುರವಾಗಿರಬೇಕು;

ಮೂಲ ಮರ್ಮವನ್ನರಿತಿರಬೇಕು—ಎಂಬ ಸದ್ಭಾವನೆಗಳನ್ನು ಕಾಣಿಸಿರುವುದಲ್ಲದೆ ಶ್ರೀಗಳವರು ಶಬ್ದಪ್ರಪಂಚವನ್ನು ತಾತ್ವಿಕ ದೃಷ್ಟಿಯಿಂದ ನೋಡಿದ್ದಾರೆ.

ಮುಂದಿನ ಭಾಗದಲ್ಲಿ 'ಕನಸಿನಲ್ಲೊಂದು ಕಿರಿಗಂಟೆಯ ಕಂಡೆ'—ಎಂಬ ವಚನವು ಉತ್ತಮವಾಗಿದೆ. ಯಾವುದು ಕಥೆ ಹೇಳುವಂತೆ ಸೂಚಿತಗೊಂಡಿರುವ ಇಂಥ ವಚನಗಳು ಅಲೌಕಿಕ ಆವರಣವನ್ನು, ಬೆಳಕನ್ನು ಮನಸ್ಸಿಗೆ ತಂದುಕೊಡುತ್ತಿವೆ. 'ಅಕ್ಕಯ್ಯಾ, ನಾನೊಂದು ಕನಸ ಕಂಡೆ'—ಎಂಬ ಅಕ್ಕನವರ ಮಧುರಭಾವದ ವಚನವನ್ನು ನೆನಪಿಸಿಕೊಳ್ಳಬಹುದು.

'ವೈಯರ್' ವಿಭಾಗದಲ್ಲಿ ಆಳವಾದ ತತ್ತ್ವವಿಚಾರವು ಸರಳ ಸುಂದರವಾಗಿ ಹೊಮ್ಮಿ ಬಂದಿದೆ. ಶರೀರವನ್ನು ಅಲ್ಲಗಳೆದಿಲ್ಲ ಶಿವಶರಣರು. 'ಪ್ರಸಾದ ಕಾಯ' ವೆಂದು ಕರೆದಿದ್ದಾರೆ. ಗುರುಲಿಂಗಜಂಗಮ ತತ್ತ್ವಗಳು ಶರೀರದಲ್ಲಿ ಅಡಕವಾಗಿದೆ. ಇದನ್ನೇ ಶ್ರೀ ಜ. ಚ. ನಿ. ಅವರು,

> "ತನುವಿದು ತತ್ತ್ವದ ತವರು, ತತ್ಸಮ, ತನ್ಮಯ ನೋಡಾ
> ಲಿಂಗಾಂಗ ಸಾಮರಸ್ಯದ ಹೊಲಬಿದು, ತಿರುಳಿದು"

ಎಂದಿರುವರು.

ಕೊನೆಯ ಭಾಗದಲ್ಲಿ ಶ್ರೀ ಗುರುವನ್ನು ಭಾವ ತುಂಬಿ ಸ್ತುತಿಸಿರುವ ವಚನಗಳು ಬಂದಿವೆ. ಪ್ರಾಸಾದಿಕವಾಣಿಯಲ್ಲಿ ಒಳ ಅನುಭವವನ್ನು ಪ್ರಕಟಗೊಳಿಸಿದ್ದಾರೆ. ಭಾವದ ತೃಪ್ತಿಗೆ ಅನುಭಾವದ ಆಗರದಂತಿವೆ ಶ್ರೀ ಸನ್ನಿಧಿಗಳವರ ವಚನಗಳು.

> "ನಿನಗಾಗಿ ಬಂದೆ ಬಂದೆ, ಬಹು ದೂರ ಬಂದೆ ;
> ದೇಶಾಕಾಶಂಗಳ ಸುತ್ತಿ ಬಂದೆ.
> ಕೋಶ ಕೋಶಂಗಳ ಸುತ್ತಿ ಬಂದೆ.
> ಅಲ್ಲೆಲ್ಲಿಯು ನಿನ್ನ ಕಾಣದೆ ಬಂದೆ.
> ಪರಾಕಾಶದಲ್ಲಿರುವುದನಿಂದರಿದು ಬಂದೆ
> ಓ ತಂದೆ, ಆ ಎತ್ತರಕ್ಕೆ ಏರಲಾರೆ.
> ಎನ್ನ ಕೈವಿಡಿದು ಕರೆದುಕೊಳ್ಳಾ
> ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯ ಸಿಂಹಾಸನಾಧೀಶ್ವರ."

ಶ್ರೀ ಸನ್ನಿಧಿಯವರ ವಚನಗಳನ್ನು ಓದುವಾಗ ಸಮಕಾಲದವರೊಬ್ಬರು ಬರೆದದ್ದು ಎಂದೆನ್ನಿಸುವುದೇ ಇಲ್ಲ. ಪುರಾತನರ ವಚನ ಶೈಲಿ, ಭಾವತೀವ್ರತೆ, ಅನುಭಾವದ ಪ್ರಖರ ತೇಜ ಇಲ್ಲಿ ಕಂಡು ಬರುತ್ತಿವೆ. ಭಾಷೆಯಲ್ಲಿ ಕೃತಕತೆಯಿಲ್ಲ. ಬದುಕು ಕೃತಕವಾಗಿದ್ದರೆ ತಾನೆ ಭಾಷೆ ಕೃತಕವಾಗುವುದು ?

"ಓ ತಂದೆ ಆ ಎತ್ತರಕ್ಕೆ ಏರಲಾರೆ
ಎನ್ನ ಕೈವಿಡಿದು ಕರೆದುಕೊಳ್ಳಾ !

ಎಂಬ ಚರಣಗಳು

"ವೈರಾಗ್ಯದ ಸೋಪಾನದಿಂದ ಶ್ರೀ ಗಿರಿಯನೇರಿದೆ
ಕೈವಿಡಿದು ತೆಗೆದುಕೊಳ್ಳಾ ಚೆನ್ನಮಲ್ಲಿಕಾರ್ಜುನಾ"

ಎಂಬ ಅಕ್ಕನ ಆತ್ಮಗೀತವನ್ನು ನೆನಪಿಗೆ ತರುತ್ತವೆ.

"ನಿಮಗೆ ಎದೆಯಿಟ್ಟು ಎರಗುವೆ ಗುರುವೆ
ಎನ್ನ ಎದೆ ಹೂವನು ಅರಳಿಸು ದೇವ !
ಅದುವೆ ಎನ್ನ ಜೀವನ ವಿಕಾಸವಯ್ಯ."

ಈ ಚೆಲುಗನ್ನಡ ಚರಣಗಳು ಶ್ರೀ ಜ. ಚ. ನಿ. ಅವರ ಹಾಲುಹೃದಯವನ್ನು ಕಾಣಿಸಿವೆ; ಕನ್ನಡಿಸಿವೆ.

ಶ್ರೀ ಜ. ಚ. ನಿ ಅವರ ವಚನವಲ್ಲರಿ [೧, ೨] ವ್ಯಷ್ಟಿ, ಸಮಷ್ಟಿಯನ್ನು ಕುರಿತದ್ದು. ಸಮಷ್ಟಿಯ ಹಕ್ಕಿನೋಟ ಇಲ್ಲಿದೆ. ಜೀವ-ಜಗತ್ತು-ಈಶ್ವರ-ಈ ಸಮಷ್ಟಿ ತತ್ತ್ವತ್ರಯದ ನಿರೂಪಣೆ ೨೦೦ ವಚನಗಳಲ್ಲಿ ಬಂದಿದೆ. ಎಲ್ಲ ಧರ್ಮ ತತ್ತ್ವಗಳ ಒಕ್ಕಣೆಯೆಲ್ಲ ಜೀವ, ಜಗತ್ತು, ಈಶ್ವರನನ್ನು ಕುರಿತದ್ದೇ. ಬ್ರಹ್ಮ ಸತ್ಯ, ಜಗತ್ತು ಮಿಥ್ಯ ಎಂಬ ಭಾವವನ್ನು ಶಿವಶರಣರು ಮಾನಿಸುವುದಿಲ್ಲ. ಸ್ರಷ್ಟಾರನಂತೆ ಸೃಷ್ಟಿಯೂ ಸತ್ಯ, ಘನ. ಜೀವವು ಸಾಧನೆಯಿಂದ ದೇವನಾಗಬೇಕು. ಜೀವಹಂಸ ಪರಮಹಂಸನಾಗಬೇಕು. ಮಾನವಜನ್ಮ ದೊಡ್ಡದು. ಲಭ್ಯವಾಗಿರುವ ಈ ಜನ್ಮವನ್ನು ಸಾರ್ಥಕ ಪಡಿಸಿಕೊಂಡು ಮಾನವ ಮೂಜಗದೊಡೆಯನಾಗಬೇಕು ಎಂಬುದೇ ಶರಣರ ಎದೆಯ ಹಂಬಲ, ಕರುಳ ಸಂದೇಶ.

'Philosophers only think, they don't act '– ಎಂದು ಹೇಳಿಕೆಯೊಂದಿದೆ. ಈ ನುಡಿಗೆ ಅಪವಾದ ಶ್ರೀ ಜ. ಚ. ನಿ. ಅವರು 'ವಚನ ವಲ್ಲರಿ'ಯಲ್ಲಿ ಜೀವ ಜಗತ್ತು, ಈಶ್ವರ-ಈ ತತ್ತ್ವತ್ರಯಗಳ ನಿರೂಪಣೆ ಬುದ್ಧಿ ಪೂರ್ವಕವಾಗಿ ಬಂದಿಲ್ಲ. ನಡೆ-ನುಡಿಯಲ್ಲಿ ಅಳವಟ್ಟ ಸ್ವಾನುಭಾವವೆ ನುಡಿಬಳ್ಳಿ ಯಾಗಿ ಇಲ್ಲಿ ಕುಡಿವೊಡೆದಿದೆ. ತತ್ತ್ವತ್ರಯವನ್ನೆಲ್ಲಾ ವಚನವೊಂದರಲ್ಲಿಯೆ ಕಾಣಿಸುವ ಜಾಣ್ಮೆ, ಸ್ವಾನುಭವದ ಬಲುಮೆಯೆ ಸರಿ !

"ಆನೆಂಬುದು ಜೀವ ಕಂಡಯ್ಯ
ಆ ಜೀವಾನುಭವದೊಳಿಪ್ಪುದು ಜಗವು ಕಂಡಯ್ಯ
ಆ ಜೀವನ, ಜಗತ್ತುಗಳಿಗೆ ಮೂಲಾಧಾರವಾಗಿಪ್ಪುದೇ
ಜಗದೀಶ್ವರ ನೋಡಯ್ಯ,
ಶ್ರೀ ಸಿದ್ಧಮಾಪುರಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ ".

ಜೀವನ ವ್ಯಾಪಾರ ಅನಂತ. ಆಟ, ಕೋಟಲೆ ಅಪಾರ. ಆ ಕಾರಣವೆ ಇರಬೇಕು ಜೀವವನ್ನು ಕುರಿತೇ ನಿರೂಪಣೆ ವಿಸ್ತಾರವಾಗಿ ಬಂದಿದೆ. ಜೀವ ಸಂಬೋಧಿ ಮಾರ್ಮಿಕವಾಗಿದೆ. ಲೋಕದ ಡೊಂಕ ತಿದ್ದಲು ಹೋಗಬಾರದು. ತನ್ನ ತನು-ಮನಗಳನ್ನು ಸಂತೈಸಿಕೊಳ್ಳಬೇಕೆಂಬುದು ಬಸವನ ಅಪ್ಪಣೆಯಲ್ಲವೆ! ಆದೇಶಕ್ಕೆ ತಕ್ಕಂತೆ ಜೀವಸಂಬೋದವಿದೆ, ಜೀವಕ್ಕೆ ಪ್ರತಿಬೋಧವಿದೆ.

"ಅಜ್ಞಾನದ ಸಂಗ ಸಾಕೆನಗೆ,
ಅಕ್ರಿಯೆಯ ಸಂಗ ಸಾಕೆನಗೆ,
ಅಂಗಸಂಗವಿನ್ನು ಸಾಕೆನಗೆ, ಎನ್ನಾಳ್ದನೆ,
ಲಿಂಗಸಂಗವನೆ ಕರುಣಿಸಿ ಕಾಪಿಡಯ್ಯ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ".

ಸಾಧನೆಯಲ್ಲಿ ಜೀವ ತನ್ನ ಇರವ ಕಂಡಿದೆ. ಇರವ ಕಾಣದೆ ಅರಿವು ಮೂಡುವುದುಂಟೆ? ಇರವನ್ನು ಕಾಣುವುದೆ ಹಿರಿ ಅರಿವಲ್ಲವೆ! ಮುಂದೆ ಶ್ರೀ ಗುರುವಿನಲ್ಲಿ ಬರಿ ಅರಿವಿಗಾಗಿ, ಕೇವಲಾನಂದಕ್ಕಾಗಿ ಸಾಧಕ ಶರಣು ಹೋಗಿದ್ದಾರೆ.

"ದುರಾಶೆಯಿಂದೆನ್ನ ದೂರ ಮಾಡಯ್ಯ"
"ದೇಹದ ದಂದುಗ, ಜೀವದ ಜಂಜಡ ತೊಲಗಿಸಯ್ಯ"

ಎಂದು ಮೊರೆಯಿಟ್ಟದ್ದಾರೆ. ಜೀವದ ಉದ್ಧಾರ ಶ್ರೀ ಗುರು ಕಾರುಣ್ಯದಿಂದಲೇ ಎಂಬ ನಿಷ್ಠೆ, ಅನುಭವ ಕರಿಗೊಂಡು

"ಗುರು ಮೂಲೋಕದ ಗುರಿಕಾರ"

ಎಂಬ ಸತ್ಯವಾಣಿ ಶರಣ ಹೃದಯದಿಂದೆ ಹೊಮ್ಮಿದೆ. ತನ್ನನ್ನು ತುರೀಯಾತೀತದ ತೂಗುಯ್ಯಾಲೆಯಲ್ಲಿ ತೂಗಿದ' ಆ ಶ್ರೀ ಗುರುಚರಣವನ್ನು ಎಡೆಬಿಡದೆ ಶರಣ ಹೃದಯ ನೆನೆದಿದೆ; ಹಾಡಿದೆ.

ಜೀವಸೃಷ್ಟಿ ಬಾಧಕವಾಗಬಹುದು. ಜಗದೀಶನ ಸೃಷ್ಟಿ ಎಂದಿಗೂ ಮಿಥ್ಯವಲ್ಲ, ಬಾಧಕವಲ್ಲ. ಅದು ಎಂದಿಗೂ ಸತ್ಯ, ಸಾಧಕ. ಈ ಸತ್ಯದ ಸ್ವಾನುಭಾವದ ಒಕ್ಕಣೆ 'ಜಗತ್ತು' ವಿಭಾಗದಲ್ಲಿ ಸುಂದರವಾಗಿದೆ.

"ಪರಶಿವನ ಲೀಲಾವಿಕಾಸವೆ ಸೃಷ್ಟಿ
"ಚೈತನ್ಯ ಸ್ವರೂಪದಿಂದ ಜಗವೆಲ್ಲ ಜ್ಯೋತಿರ್ಮಯ"

ಈ ಅರಿವು ಆಳಕ್ಕಿಳಿದು, ಅನುಭಾವ ಅಳವಟ್ಟಾಗ ಆ ನೆಲೆಯಲ್ಲಿ.

"ಕೇಳದುದು ಕೇಳುತಿದೆ; ಕಾಣದುದು ಕಾಣುತಿದೆ; ನಿಲುಕದುದು ನಿಲುಕುತಿದೆ". "ಶಿವಶಕ್ತಿ ಜಗದೊಳಗಿಪ್ಪುದು
ಜಗದ ಶಕ್ತಿ ಶಿವನೊಳಗಿಪ್ಪುದು.

ಶಿವನುಳಿದು ಜಗವಿಲ್ಲ; ಸೊಗವಿಲ್ಲ.
ಇದು ಕಾರಣ ಆ ಪರಶಿವನ ಅರಿಯುವ ಬನ್ನಿರೇ !
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶನಲ್ಲಿ."

ಇದುವೆ ಜಗತ್ತಿನ ಒಕ್ಕಣೆಯಲ್ಲಿ ಶ್ರೀ ಜ. ಚ. ನಿ. ಅವರು ಸಹಸಾಧಕರಿಗಿತ್ತಿರುವ ಕರುಳ ಕರೆ!

ಕೊನೆಯ ಅಧ್ಯಾಯದಲ್ಲಿ ಸಚ್ಚಿದಾನಂದ ಸ್ವರೂಪಿಯ ಬಣ್ಣನೆ ಸಹಜವಾಗಿ ಬಂದಿದೆ.

"ಸ್ವಯಂಭೂ ನೀನೆ; ಶಂಭು ನೀನೆ
ಅನಾದಿ ನೀನೆ; ಆತ್ಮಸಿಧಿ ನೀನೆ; ಚೇತನ ನೀನೆ; ಚಿರಂತನ ನೀನೆ,
ಶ್ರೀ ನಿಡುಮಾಮಿಡಿ ಶ್ರೀ ಗಿರಿ ಸೂರ್ಯಸಿಂಹಾಸನಾಧೀಶ್ವರ
ಚಿದಂಬರ ನೀನೆ; ಚರೇಶ್ವರ ನೀನೆ".

ದೇವನ ನಿಲವನ್ನು ಗುರುತಿಸಿ ತನ್ಮಯಗೊಂಡು ಆನಂದದಲ್ಲಿ ಹೀಗೆ ಹಾಡಿರುವ ವಚನಗಳು ಅದೆಷ್ಟೋ ಇವೆ ಈ 'ವಚನ ವಲ್ಲರಿ'ಯಲ್ಲಿ.

"ತನುವೆಲ್ಲ ತುಂಬಿದಿಪ್ಪರೂಪನು ನೀನಯ್ಯ
ಮೂಲಾಧಾರ ಹೃದಯ ತ್ರಿಕೂಟದ ತನಕ ಹಬ್ಬಿದ ಹರಣರೂಪನು ನೀನಯ್ಯ
ಭ್ರೂಮಧ್ಯದಿಂ ಶಿಖಾಮಧ್ಯಕ್ಕೆ ಬೆಳಗುವ ಭಾವರೂಪನು ನೀನಯ್ಯ
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರಾ
ಪಶ್ಚಿಮ ಶಿಖಾಚಕ್ರದ ಪರಮನು ನೀನಯ್ಯ"

ಹೀಗೆ ಯೋಗದ ಪರಿಭಾಷೆಯಲ್ಲಿ ಪರಾತ್ಪರ ವಸ್ತುವಿನ ಬಣ್ಣನೆಯನ್ನು ಅಲ್ಲಲ್ಲಿ ಮಾಡಿದ್ದಾರೆ ಬಸವಣ್ಣನವರಂತೆ ಶ್ರೀ ಜ ಚ.ನಿ ಅವರು ಸಂಪ್ರದಾಯ ಪಾಲಕರು ; ಪ್ರಮಾಣ ಪ್ರಜ್ಞಾಪ್ರಿಯರು.

" ಬಡತನದ ಬಾಳುರಿಯಲ್ಲಿ ಬೆಂದೆನಯ್ಯ
ಕಡು ಭಾಗ್ಯವಂತಳ ಮಾಡಯ್ಯ "
" ಚನ್ನಿಗನೆ ನನ್ನಿಗನೆ !
ನಿನ್ನ ವಿರಹಾಗ್ನಿಯಿಂದುರಿದು, ಕಣ್ಣೀರ ಕೋಡಿ ಹರಿದು
ಬರಿದಾದುದೆನ್ನ ಕಣ್ದೊಣೆ; ದಯ ಬಾರದೇ ದೇವ ?"

'ಶರಣಸತಿ–ಲಿಂಗಪತಿ' ಭಾವದ ಚೆಲುವು ಇಂಥ ವಚನಗಳಲ್ಲಿ ಚಿಮ್ಮಿದೆ. ಬಸವಣ್ಣನವರು ಸಂಸ್ಕೃತ ಪ್ರಮಾಣಗಳನ್ನು ತಮ್ಮ ವಚನಗಳ ನಡುವೆ ಉದ್ಧರಿಸಿ, ಜನತೆಯಲ್ಲಿ ನಂಬಿಕೆ, ಶ್ರದ್ಧೆ, ನಿಷ್ಠೆ, ಬೇರೂರಲು ಆಸೆಪಟ್ಟಂತೆ ಶ್ರೀ ಜ. ಚ. ನಿ. ಅವರೂ ಸಹ,

" ಈಶ್ವರಃ ಶಿವ ಶಿವ " ಎಂದು " ಶಿವ ಏಕೋಧ್ಯೇಯಃ ಶಿವಂಕರಃ " ಎಂದು
ನಿಮ್ಮ ಹೊಗಳಿದೆ ಅಥರ್ವಶ್ರುತಿ

ಎಂದು ಪುರಾತನರ ಹಾದಿಯಲ್ಲಿ ಸಾಗಿ ವಚನಿಸಿದ್ದಾರೆ.

" ಅಷ್ಟವಿಧಾರ್ಚನೆ–ಷೋಡಶೋಪಚಾರವ ಮಾಡುವುದು
ಮಾಡಿದ ಪೂಜೆಯ ನೋಡುವುದಯ್ಯ
ಶಿವತತ್ತ್ವ ಗೀತವ ಪಾಡುವುದು ಶಿವನ ಮುಂದೆ ನಲಿದಾಡುವುದು
ಭಕ್ತಿ ಸಂಭಾಷಣೆಯ ಮಾಡುವುದು ನಮ್ಮ ಕೂಡಲಸಂಗನ ಕೂಡುವುದು "*
ಎಂದು ಬಸವೇಶನು ತನ್ನ ದಿನಚರಿಯನ್ನು ಕಾಣಿಸಿದಂತೆ,

" ಹೊತ್ತಾರೆ ಎದ್ದು ಗುರುಪಾವನನಾಮವ ನೆನೆವುದು
ಗುರುಪಾದಪದ್ಮಕ್ಕೆರಗುವುದು
ಸದಾಚಾರದ ಹೊನಲಾಗಿ ಹೊಂಗುವುದು
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರನ
ಹರಕೆಯ ಹೊದೆದು ಹಸನಾಗಿ ಬಾಳುವುದು "

ಎಂದು ಶ್ರೀ ಜ. ಚ. ನಿ. ಅವರು ತಮ್ಮ ದಿನಚರಿಯ ಬಗೆಯನ್ನು ಬಿಂಬಿಸಿದ್ದಾರೆ.

' ಶ್ರೀ ಗುರುವಚನದಿಂದಧಿಕ ಸುಧೆಯುಂಟೆ '—ನಿಜಗುಣರು
' ಮಾತೆಂಬುದು ಜ್ಯೋತಿರ್ಲಿಂಗ '—ಪ್ರಭು.
' ಆದ್ಯರ ವಚನ ಪರುಷ ಕಂಡಯ್ಯ '—
' ಗುರುಪಥವ ಮೀರಿ ಮಾಡುವ ನೇಮ ಸಲ್ಲವು, ಸಲ್ಲವು
ಇವು ನಿಮ್ಮ ನಿಜದೊಳಗೆ ನಿಲ್ಲವು ; ನಿಲ್ಲವು—ಬಸವ.

—ಶರಣರ ಈ ಬಗೆಯ ನಲ್ನುಡಿಗಳ ಚಂದ್ರಿಕೆಯಲ್ಲಿ ನೆನೆನೆನೆದು ಶ್ರೀ ಜ.ಚ.ನಿ. ಅವರ ಚಿತ್ತ ಚಕೋರ ಹರುಷದೊಳು ಓಲಾಡಿದೆ. 'ನಿನ್ನ ಬರವು ಎನ್ನ ಅಸುವಿನ ಬರವು ಬಾರಯ್ಯ' ಎಂದು ಅಕ್ಕ ಕೂಗಿ ಕರೆದಂತೆ ಇಷ್ಟದೈವವನ್ನು ಕರೆದಿದ್ದಾರೆ ; ನಿಜಾನಂದ ಪಡೆದ ಪರಿಯುನ್ನು ಚೆಲ್ನುಡಿಗಳಲ್ಲಿ ರೂಪಿಸಿದ್ದಾರೆ.

" ಅರಸನ ಕಂಡು ಅಡಕೆಯ ಕೇಳಿದಂತೆ " "ಹೆಬ್ಬುಲಿ ಹೆಗ್ಗಾಡಿನಲ್ಲಿ ಹೆದರಡಿಪ್ಪಂತೆ "—ಮುಂತಾದ ಉಪಮೆಗಳು ವಚನಗಳಲ್ಲಿ ಹದವರಿತು ಬಂದಿವೆ. ನಿಪ್ಪಾಳಿ ಬಾತೆ, ಅಲ್ಲರಿ, ಒಪ್ಪಚ್ಚಿ, ಹತ್ತುಗೆ—ಮುಂತಾದ ವಿರಳ ಪದಗಳು ಪ್ರಯೋಗವಾಗಿವೆ.

ಒಟ್ಟಾರೆ ಶ್ರೀ ಜ.ಚ.ನಿ. ಸನ್ನಿಧಿಯವರು ಈ ಶತಮಾನದ ಏಕೈಕ ಸತ್ವಶಾಲಿ ವಚನಸಾಹಿತಿಯಾಗಿದ್ದಾರೆ. ಸಂಖ್ಯೆ–ಸತ್ತ್ವ ದೃಷ್ಟಿಯಿಂದ ಸಾರ್ಥಕ ಸಾಹಿತ್ಯ ಒದಗಿಸಿದ್ದಾರೆ. ಶರಣರ ಕಂದರಾಗಿ ಬಾಳುವ ಹಂಬಲವುಳ್ಳವರಾಗಿದ್ದಾರೆ. ಪುರಾತನರ ವಚನರೂಪಕ್ಕೆ ವಿನೂತನ ಕಾಂತಿ ಚೆಲ್ಲಿದ್ದಾರೆ.

ಕರುಣೆಯ ಶ್ರೀಗಳವರ ಭಾಷೆಯಾಗಿದೆ; ಕರುಳೆ ಲೆಕ್ಕಣಿಕೆಯಾಗಿದೆ. ಶ್ರೀ ಸನ್ನಿಧಿಗಳವರ 'ವಚನವಲ್ಲರಿ' ಹೊನ್ನುಡಿಗಳ ಮಂಜರಿ ; ನಲ್ನುಡಿಗಳ ವಲ್ಲರಿ ಇಲ್ಲಿ ಒಳ್ನಡೆಯಿದೆ ; ಒಳ್ಗುರಿಯಿದೆ.

---

೨-೪-೧೯೬೩ರಂದು ಬೆಂಗಳೂರಿನ ಭ್ರಮರಾಂಬಾ ಬಳಗದ ವಚನವಲ್ಲರಿ ಉದ್ಘಾಟನಾ ಮಹೋತ್ಸವದಲ್ಲಿ ಮಾಡಿದ ಭಾಷಣ ಸಾರ.

* ಹರಿಹರನ ರಗಳೆಗಳಲ್ಲೂ ಈ ಬಗೆಯ ದಿನಚರಿ ಕಾಣುತ್ತದೆ.

## ವಚನಾಂಜಲಿ

ಆದಿಯಿಂದಲೂ ವಿಶೇಷವಾಗಿ ಅರಮನೆ ಗುರುಮನೆಗಳಲ್ಲಿ ಬೆಳೆದು ಬಾಳಿ ಬಂದ ಕನ್ನಡ ನುಡಿದೇವಿ ಅರಮನೆಗಳನ್ನು ಕಳೆದುಕೊಂಡ ಮೇಲೆ ಗುರುಮನೆಯೊಂದೇ (ಸಂಘ ಸಂಸ್ಥೆ ಹಾಗು ವೈಯಕ್ತಿಕ ಪ್ರಯತ್ನಗಳನ್ನುಳಿದು) ಆಕೆಗೆ ಆಶ್ರಯವಾಗಿ ಉಳಿದಿದೆ. ಗುರುಮನೆಯ ಪ್ರತೀಕರಾದ ಶ್ರೀಗಳು ಕನ್ನಡ ಸಾಹಿತ್ಯದೇವಿಯ ಭಾಂಡಾರವನ್ನು ತುಂಬಲು ಮುಂದಾಗಿರುವುದು ಅಭಿನಂದನಾರ್ಹವಾಗಿದೆ.

ಸಮಾಜದಲ್ಲಿ ರೂಢಮೂಲವಾಗಿರುವ/ಮೂಢನಂಬಿಗೆ, ಅಂಧ ಶ್ರದ್ಧೆ, ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣ ಮುಂತಾದುವುಗಳ ಇತಿಶ್ರೀಯಾಗಿ ಅವುಗಳ ಸ್ಥಳದಲ್ಲಿ ಸ್ವತಂತ್ರ ವಿಚಾರ. ಒಳಿತು ಕೇಡಿನ ಸರಿಯಾದ ತಿಳಿವಳಿಕೆಯುಳ್ಳ ವಿಚಾರಾತ್ಮಕವಾದ ಸಾಹಿತ್ಯ ಮೂಡಿ ಬರಬೇಕೆಂಬುದು ಶ್ರೀಗಳ ಮನೀಷೆಯಾಗಿದೆ. ಬಾಹ್ಯದ ಆಡಂಬರಕ್ಕಿಂತ ಆತ್ಮನ ಅರಿವಿನ ಪೂರಕವಾಗುವ ಪ್ರೇರಕ ಶಕ್ತಿಯಾಗಿ ಪರಿಣಮಿಸುವ ಜ್ಞಾನವನ್ನು ಸಂಪಾದಿಸುವುದು ಜೀವನದ ಪರಮಾದರ್ಶವಾಗಿದೆಯೆಂದು ಅವರ ಮನವರಿಕೆಯಾಗಿದೆ; ಅದೇ ಅರ್ಥವನ್ನು(ವಚನಾಂಜಲಿ)ಹಿಡಿಯುತ್ತಿದೆಯೆಂದರೆ ಅತಿಶಯೋಕ್ತಿಯಾಗಲಾರದು........

ಶ್ರೀಗಳವರು 'ಮನಸ್ಸಿಗೆ ಬಂದುದನ್ನು ಮಾತಿನಲ್ಲಿ ವಚನ ಶೈಲಿಯನ್ನು ಆರಿಸಿಕೊಂಡಿರುವುದು ಪ್ರಶಂಸನೀಯ. ಮೂಡಿಸಲು' ಇದರಲ್ಲಿ ಸಾಕಷ್ಟು ಯಶಸ್ಸ ಸಂಪಾದಿಸಿರುವುದೆಂಬುದು ಆನಂದದ ಸಂಗತಿ. ಶ್ರೀಗಳವರ ಸಾಹಿತ್ಯ ಸೇವೆ ನೂರ್ಮಡಿಯಾಗಿ ಬೆಳೆದು ಬರಲೆಂದು ಆಶಿಸುತ್ತೇನೆ.

೨೩–೨–೧೯೫೮ "ಎಂ. ಜಿ. ಬಿ." ಅಂಕುಶ

**ಪ್ರತಿಕಾಭಿಪ್ರಾಯಗಳು :**

## ವಿಚಾರ ಕ್ರಾಂತಿಯು ವಚನ ಮಂಜರಿ

ಈ ಗ್ರಂಥವು ೬ ಅಧ್ಯಾಯಗಳಿಂದ ಕೂಡಿ ೪೪೦ ವಚನಗಳುಳ್ಳದಾಗಿದೆ. ಅದರಲ್ಲಿ ಸಾಮಾಜಿಕ, ಸಾಹಿತ್ಯಕ ಸಾಂಸ್ಕೃತಿಕ ಈ ಮೂರು ಅಧ್ಯಾಯಗಳು ಸಮಸ್ತ ಭಾರತೀಯರಿಗೂ ಅನ್ವಯಿಸುವ ರೀತಿಯಲ್ಲಿ ಬೋಧಪ್ರದವಾಗುವಂತೆ ಅತ್ಯಂತ ಕಳಕಳಿಯಿಂದ ನಿರ್ದಾಕ್ಷಿಣ್ಯವಾಗಿ ಬರೆದವುಗಳಾಗಿವೆ ಒಂದೊಂದು ವಚನದಲ್ಲಿಯೂ ಸ್ಫೂರ್ತಿಯಿದೆ, ದಿಟವಿದೆ. ವಚನಗಳ ಶೈಲಿಯು ೧೨ನೇ ಶತಮಾನದ ಪ್ರಮಥರ ಶೈಲಿಯನ್ನು ಹೋಲುತ್ತದೆ ಆದರೂ ಅಲ್ಲಲ್ಲಿ ನಾವೀನ್ಯತೆ ಮಿನುಗುತ್ತದೆ. ಅಂದಿನ

ಸಮರ್ಥರು ಆ ಕಾಲಕ್ಕೆ ತಕ್ಕಂತೆ ವಚನಗಳನ್ನು ರಚಿಸಿ ಧರ್ಮಕ್ರಾಂತಿಯನ್ನು ಮಾಡಿದ್ದರೆ, ಇಂದು ಈ ಪ್ರಮಥಾಚಾರ್ಯರು ಇಂದಿಗೆ ತಕ್ಕಂತೆ ಈ ವಚನಗಳನ್ನು ರಚಿಸಿ ವಿಚಾರ ಕ್ರಾಂತಿಗೆ ಪುಟಕೊಟ್ಟಿದ್ದಾರೆ. ಪ್ರತಿಯೊಬ್ಬ ಕನ್ನಡಿಗನೂ ಅವಶ್ಯ ಸಂಗ್ರಹಿಸಿ ಅಭ್ಯಸಿಸಬೇಕಾದ ಗ್ರಂಥ.

**—ಅಮರವಾಣಿ, ಅಕ್ಟೋಬರ್ ೧೯೫೨**

## ವಚನ ಮಂಜರಿ

ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು ಪ್ರಾಚೀನ ವಚನಕಾರರ ಪ್ರಥದಲ್ಲಿ ನಡೆದು ಬಿಂದುವಿನಲ್ಲಿ ಸಿಂಧು ಸಮಾನ ಅನುಭವಗಳನ್ನು ಸುಂದರವಾಗಿ ಸಂಗ್ರಹಿಸಲು ಸಮರ್ಥರಾದ ಯಶಸ್ವಿ ವಚನಕಾರರು. ಅವರ ವಚನ ಸಂಗ್ರಹದಲ್ಲಿ ಇದು ಎರಡನೆಯದು ವೈಯುಕ್ತಿಕ ಸಾಮಾಜಿಕ ಎಂಬ ನಾಲ್ಕು ವಿಭಾಗಗಳಲ್ಲಿ ವಿಂಗಡಿಸಲ್ಪಟ್ಟ ಈ ಸಂಗ್ರಹದಲ್ಲಿ ಜನತೆಯ ಧಾರ್ಮಿಕ ಹಾಗೂ ಲೌಕಿಕ ಉದ್ಧಾರಕ್ಕಾಗಿ ಮಿಡಿಯುವ ಹೃದಯದ ಪರಿಚಯ ದೊರೆಯುತ್ತದೆ. ಒಂದುಪಥದ ಮಠದ ಅಧಿಪತಿಯಾಗಿದ್ದು ಹೃದಯವೈಶಾಲ್ಯವನ್ನು ಅವರು ಕಾಪಾಡಿಕೊಂಡಿದ್ದಾರೆ. ಇದರಲ್ಲಿರುವ ಅನೇಕ ವಚನಗಳು ಭಾಷಾ ಸೌಂದರ್ಯ ಮತ್ತು ಭಾವಶ್ರೀ ಇವೆರಡೂ ದೃಷ್ಟಿಯಿಂದ ಉತ್ತಮ ಸಾಹಿತ್ಯದ ಒರೆಗೆ ನಿಲ್ಲುತ್ತದೆ.

**—ಕರ್ಮವೀರ**

"ಪ್ರಾಚೀನ ವೀರಶೈವ ಸಾಹಿತ್ಯ ಪರಂಪರೆಯುಲ್ಲಿ ಹೇಗೆ ನಾವು ಹರಹರನ ಕೃತಿಗಳನ್ನು ನಿಸರ್ಗದತ್ತವಾದ ಕನ್ನಡಶೈಲಿಗೆ ಓದುತ್ತೇವೆಯೋ ಹಾಗೆ ಆಧುನಿಕರಲ್ಲಿ ಶ್ರೀಗಳವರ ಕೃತಿಗಳನ್ನು ಓದಬಹುದು. ಕನ್ನಡನುಡಿಯ ಜಾಡು, ಬಗೆ, ಭಾವನೆ ಒನಪು, ಲಾಸ್ಯ ಶ್ರೀಗಳವರಿಗೆ ಸಿದ್ಧಿಸಿದೆ. ಅವರ ಸಾಹಿತ್ಯ 'ಹೇಳದೆ ಧರ್ಮವ ಕಲಿಸುವ ಗುರುವಾಗಿ' ಅಪರೋಕ್ಷವಾಗಿ, ಅವ್ಯಕ್ತವಾಗಿ ನಮ್ಮ ಹೃದಯಿದಲ್ಲಿ ಧರ್ಮಧ್ವಜವನ್ನು ನೆಡುತ್ತದೆ. ಶ್ರೀಗಳವರು ಸಾಹಿತ್ಯಮಾರ್ಗದಲ್ಲಿ ಅಧ್ಯಾತ್ಮವನ್ನು ಅಳವಡಿಸಿಕೊಂಡಿರುವ ರಸಯೋಗಿಗಳು.

**—ಅ. ನ. ಕೃ.**

ಸನ್ನಿಧಿಯವರು ಈಗಾಗಲೇ ಉಚ್ಚವರ್ಗದ ಹಲವು ಗ್ರಂಥಗಳನ್ನು ಕನ್ನಡಿಗರ ಕೈಗಿತ್ತು ಸದ್ಯದ ಸಾಹಿತ್ಯ ಪ್ರಪಂಚದಲ್ಲಿ ಅಗ್ರಸ್ಥಾನ ಪಡೆದಿರುವರು. ಅಲ್ಲದೆ, ಸಾಹಿತ್ಯ ಸೌಂದರ್ಯೋಪಾಸಕರಿಗೆ ಪೂಜ್ಯರಾಗಿದ್ದಾರೆ; 'ಸಾಹಿತ್ಯ ಸಿಂಹಾಸನಾಧೀಶ್ವರರಾಗಿದ್ದಾರೆ.'

**ಶ್ರೀ ಮಹಾಂತ ದೇವರು**

'ಸಾಹಿತ್ಯರತ್ನ' ಬನಾರಸ.

# ವಚನವಲ್ಲರಿ

## ಭಾಗ–೧

ಇದೊಂದು ಶಿವಾಚಾರ್ಯರು ಬರೆದಿರುವ ಆಧುನಿಕ ವಚನಗಳ ಸಂಗ್ರಹ. ಇವರ "ವಚನಾಂಜಲಿ" "ವಚನಮಂಜರಿ"ಗಳು ಈಗಾಗಲೇ ಕನ್ನಡಿಗರ ಕೈ ಸೇರಿವೆ. ಈ ವಲ್ಲರಿಯ ಎರಡನೆಯ ಭಾಗವು ಮುಂದೆ ಬೆಳಕಿಗೆ ಬರಲಿದೆ.

ವೀರಶೈವ ಮತದ ಉದಾತ್ತ ತತ್ತ್ವಗಳನ್ನು ಸಾಮಾನ್ಯ ಜನರ ಮನಸ್ಸಿನಲ್ಲಿ ಬಿತ್ತಿ ಬೆಳೆಸಲು ಬಸವೇಶ್ವರ ಮೊದಲಾದ ಮತೋದ್ಧಾರಕರು ಪದ್ಯಗಂಧಿಯಾದ ಈ ವಚನ ಸಾಹಿತ್ಯವನ್ನು ಬೆಳೆಸಿದರು. ಗಹನವಾದ ಹಿರಿಯ ತತ್ತ್ವಗಳನ್ನು ಸರಳ ಮತ್ತು ಸಹಜ ಮನೆ ಮಾತುಗಳಲ್ಲಿ ನಿತ್ಯಜೀವನದೊಂದಿಗೆ ಬೆರೆಸಿಕೊಟ್ಟರು. ಗ್ರಂಥ ಕರ್ತರು ಅದೇ ಧಾಟಿಯನ್ನನುಸರಿಸಿ ತಮ್ಮ ಅಂಕಿತದಲ್ಲಿ ಈ ವಚನಗಳನ್ನು ರಚಿಸಿರುತ್ತಾರೆ.

ವೇದಗಳಂತೆ ಹಿಂಸಾತ್ಮಕ ಕಾರ್ಯಗಳಿಗೆ ಧರ್ಮದ ಮುದ್ರೆಯನ್ನೊತ್ತದೆ ಆಗಮ ಗಳು ಭಗವಂತನ ಪೂಜೆಗೆ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಬೋಧಿಸುತ್ತ ಬಂದವು. ಪರಶಿವನ ಪಂಚಮುಖಗಳಿಂದಲೂ ಹೊರಬಿದ್ದ ಇಪ್ಪತ್ತೆಂಟು ಆಗಮಗಳು ತೋರಿ ಕೊಟ್ಟ ತತ್ತ್ವಗಳೇ ವಚನ ಸಾಹಿತ್ಯದ ತಿರುಳು. ಚಂದ್ರ-ಚಂದ್ರಿಕೆಗಳಂತೆ ಕುಸುಮ ಕಂಪುಗಳಂತೆ ಓಜ-ತೇಜಗಳಂತೆ, ಆಗಮ ವಚನಗಳು ಬೆರೆತಿರುವುವು. ಶಿವಾಗಮ ಕಲ್ಪವೃಕ್ಷಕ್ಕೆ ಆದ್ಯಂತ ಹಬ್ಬಿರುವ ಲತೆಯೇ ವಚನವಲ್ಲರಿ.

ವ್ಯಷ್ಟಿ ತತ್ತ್ವತ್ರಯಗಳೆನಿಸಿದ ಮಾತು, ಮನ ಮತ್ತು ಮೈಗಳು ಭಗವಂತನ ಪೂಜೆಗೆ ಸಾಧನಗಳಾಗುವ ಬಗೆಯನ್ನು ದೇಶಿಕೇಂದ್ರರು ಇಲ್ಲಿ ಪ್ರತಿಪಾದಿಸಿ ತೋರಿಸಿ ದ್ದಾರೆ. ಈ ತ್ರಿಕರಣಗಳಿಂದ ಶುಭ ಶಿವನಾಮವನೆ ನೆನೆಯಬೇಕಾದುದು ಶಿವಭಕ್ತರ ಆದ್ಯ ಕರ್ತವ್ಯ. "ಹರ–ಗುರುಗಳಲ್ಲಿ ಬಿರುಕಿಲ್ಲ. ಗುರುವರನು ಹರನಲ್ಲದೆ ನರನಲ್ಲ. ಗುರುಲಿಂಗ-ಜಂಗಮವೆಂಬ ತ್ರಿವಿಧ ಸಂಪತ್ತಿಯೂ ಒಂದೆಂದು ಅರಿಯದವನೇ ಅಂಧ. ಶಿವಾನುಭವವೇ ಬದುಕಿನ ಸರ್ವಸ್ವ."

"ನಗೆ-ಹೊಗೆಗಳಿಗೆ ಸಿರಿ-ಉರಿಗಳಿಗೆ ಹಿರಿಮೆ ಕಿರಿಮೆಗಳಿಗೆ ಮಾತೇ ಮೂಲ." "ಹುಸಿಯ ನುಡಿಯಬಾರದು ನುಡಿದು ಹುಸಿಯಬಾರದು" ಇಚ್ಛೆಯಿಂದ. ಪರಾ, ಪರೆಯಿಂದ ಪಶ್ಯಂತಿ, ಪಶ್ಯಂತಿಯಿಂದ ಮಧ್ಯಮ, ಅದರಿಂದ ವೈಖರಿ ಹೀಗೆ ಹುಟ್ಟುವು ದರಿಂದ ಇಚ್ಛೆ ನಿಚ್ಚಟವಾಗಿರಬೇಕು. ಪ್ರಣವವೇ ವಿಜ್ಞಾನ ಬ್ರಹ್ಮ ಅದರಿಂದ ಚಿಚ್ಛಕ್ತಿ ಅದರಿಂದ ಚಿನ್ನಾದ. ಶಬ್ದ ಬ್ರಹ್ಮವೇ ಶಕ್ತಿಗಳಾರಕ್ಕೆ ಮೂಲ.

ದೇಹಮಮತೆ ಅಹಂಕಾರಕ್ಕೆ ಕಾರಣ. ಮನ ಮೆಚ್ಚಿದ ಮಸಣವೆ ಮಾಮನೆ. ಅರಿದಡೆ ಶರಣ, ಮರೆದಡೆ ಮಾನವ.

ದೇಹ ದೇಗುಲದಲ್ಲಿ ಸ್ಥೂಲಾಂಗದಲ್ಲಿ ಕುರುಹಾಗಿ ಸೂಕ್ಷ್ಮಾಂಗದಲ್ಲಿ ಸುಳುಹಾಗಿ, ಕಾರಣಾಂಗದಲ್ಲಿ ಹೊಳಹಾಗಿ ತೊಳಗುವ ಪರಶಿವನನ್ನು ಕಾಣಬೇಕು.

ರಾಮಾಯಣದ ಆಧ್ಯಾತ್ಮಿಕ ಸಮನ್ವಯ ವಿಚಾರ ಸ್ಫೂರ್ತಿಯನ್ನು ತೋರತ್ತದೆ. ಗ್ರಂಥಕರ್ತರ ಈ ವಚನಗಳಲ್ಲಿ ಜ್ಞಾನಸುಧೆಯೇ ಹರಿದಿದೆ.

—ಬೆಂಗಳೂರು ಬಾನುಲಿಯಿಂದ

ತಾ. ೨೩-೫-೫೯

## ವಚನವಲ್ಲರಿ

### ಭಾಗ–೨

ಇದೊಂದು ಆಧ್ಯಾತ್ಮಿಕ ಕೊಡಿಗೆ. ಶಿವಾದ್ವೈತ ತತ್ತ್ವದ ದೃಷ್ಟಿಯಿದೆ. ತತ್ತ್ವದ ತೊಡಕು ಇದ್ದರೂ ವಚನಗಳು ಕಾವ್ಯದ ಸೊಬಗು, ಸರಳತೆಯನ್ನು ಮರೆತಿಲ್ಲ. ಉಪಯೋಗವಾಗುವ ಗ್ರಂಥ. ಇಲ್ಲಿ ಜೀವ-ಜಗತ್ತು-ಈಶ್ವರ ತತ್ತ್ವ ಇವನ್ನು ವಚನರೂಪದಲ್ಲಿ ನಿರೂಪಿಸಲಾಗಿದೆ.

'ಓ ದೇವ ! ಈ ಜೀವ ಬಂದುದೆಲ್ಲಿಂದ ಹೇಳಾ !.........' ಎಂಬಲ್ಲಿ ಕೋಟಿ ಜನರ ಎದೆ ತುಡಿಯುತಲಿದೆ. ಗುರುವೇ ಪರಶಿವನ ಸ್ವರೂಪ. ಸಾಕ್ಷಾತ್ಕಾರಕ್ಕೆ ಗುರುವಿನ ಬೆಂಬಲ ಬೇಕೇಬೇಕು. ನೇತ್ರ ನೇಸರು ಒಂದಾದಂತೆ ಗುರುಶಿಷ್ಯ ಬಾಂಧವ್ಯ ಆತ್ಮ-ಅಂತರಾತ್ಮ ಪರಮಾತ್ಮನನ್ನು ಕುರಿತು ಯೋಚಿಸಿದ್ದಾರೆ. 'ಹಂಸ'-ಎಂಬಲ್ಲಿ 'ಹಂ' ಜೀವ, 'ಸ' ದೇವ-ಎಂದು ಜೀವ ದೇವ ಸಂಬಂಧ ಹೇಳಿದ್ದಾರೆ. ಅದೇ ಜಗತ್ತಿನ ಸೃಷ್ಟಿಯನ್ನು ಕುರಿತು ಯೋಚಿಸುವಲ್ಲಿ, ಜನತೆಯ ಪ್ರಗತಿಗಾಮಿ ದೃಷ್ಟಿಯನ್ನು ಮರೆತಿಲ್ಲ. ಗ್ರಾಮ ಸೇವೆಯೆ ಕೈಲಾಸಧಾಮ ಸೇವೆ........ಹೊಲವೆ ಆಶ್ರಮ, ನೇಗಿಲವೆ ಯೋಗ, ಉಳುವವನೆ ಯೋಗಿ—ಎಂದು ಎಚ್ಚರಿಸಿದ್ದಾರೆ. ಇದು ಇಂದಿನ ದಿನಮಾನಕ್ಕೆ ಸರಿಹೋಗುವ ಮಾತು.

> 'ಆನೆಂಬುದೇ ಜೀವ ಕಂಡಯ್ಯ
> ಆ ಜೀವಾನುಭವದೊಳಗಿಪ್ಪುದೆ ಜಗವು ಕಂಡಯ್ಯ
> ಆ ಜೀವ ಜಗತ್ತುಗಳಿಗೆ ಮೂಲಾಧಾರವಾಗಿಪ್ಪುದೇ
> ಜಗದೀಶ್ವರ ನೋಡಯ್ಯ........'

ಎಂಬಲ್ಲಿ ಜೀವ, ಜಗತ್ತು, ಈಶ್ವರವೆ ಅಖಂಡ-ತತ್ತ್ವಜ್ಞಾನ ಎಂದಿದ್ದಾರೆ.

'ಚಕೋರಂಗೆ ಬೆಳದಿಂಗಳೇ ಆಧಾರ. ನಂಬಿ ನೆಚ್ಚಿ ಬಾಳು ಬಾಳಿಲೆ ಜೀವ.... ಪ್ರಭು ರವಿಯುನೊಲ್ಲೆ........ತರಣಿಯ ಉದಯಕ್ಕೆ ತಾವರೆ ಅರಳುವಂತೆ....... ಎಂಬಲ್ಲೆಲ್ಲ ಲೋಕ ಪರಿಚಿತ ಕಲ್ಪನೆ ಅಲ್ಲಲ್ಲಿ ಬಂದಿವೆ.

'ಕಣ್ಣಿಗೆ ಕಾಂಬ ಬೆಳಕಿಂಗೆ ಮೂಲ ' ಈಥರ್ ' ಎಂಬಲ್ಲಿ ಶ್ರೀಯವರ ವೈಜ್ಞಾನಿಕ ದೃಷ್ಟಿ ಅರಿಯಬಹುದು. ಹಲವು ಕಡೆ ಗಾದೆ ಮತ್ತು ಜನತೆಯಾಡುವ ಮಾತು ಬಳಸಿರುವುದು ಮೆಚ್ಚತಕ್ಕ ಶೈಲಿ. ಅಲ್ಲಲ್ಲಿ ಕೆಲವೊಂದು ಪದಗಳಿಗೆ ಟಿಪ್ಪಣಿ ಕೊಟ್ಟಿದ್ದರೆ ಸಾಮಾನ್ಯ ಜನತೆಯ ದೃಷ್ಟಿಯಿಂದ ಅನುಕೂಲವಾಗುತ್ತಿತ್ತು. ಶ್ರೀಯವರು ಕನ್ನಡ ಜನತೆಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಕೊಡುತ್ತಿರಲಿ ಎಂದು ಬಯಸುತ್ತೇವೆ.

—ಬೆಂಗಳೂರು ಬಾನುಲಿಯಿಂದ ತಾ. ೬-೮-೬೩

---

## ಉಪ್ಪವಡಿಸಲೈತಂದಿಹನು

ನಿರುಪಮ ನಿರವಯಲ ಸುಖಸಮಾಧಿ ಸುಪ್ತಿಯಲಿ
ಪವಡಿಸಿದ ಆತ್ಮಕುಮಾರ,
ಕರುಳ ಬಂಗಾರ, ಕಣ್ಣ ಸಿಂಗಾರ–ಏಳು ಏಳಯ್ಯಾ;
ನಿನ್ನ ಎಚ್ಚರವೆ ಎನ್ನ ನಚ್ಚಿನ ಬಾಳು, ಮೆಚ್ಚಿನ ಬದುಕು.
ಅದೋ ಗುರುಕರುಣ ಕೋಕಿಲೆ ಕೂಗುತಿದೆ.
ಎನ್ನ ಮನವೆಂಬ ಗಿಳಿ ನಿನ್ನ ಮಂಗಳ ನಾಮವ ನುಡಿಯುತ್ತಿದೆ.
ಕರಣಕುಲಕಾಜಾಣಕಲರವ ಕೇಳುತಿದೆ.
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶನು,
ಉಪ್ಪವಡಿಸಲೈತಂದಿಹನು.

ಹೃದಯಾತ್ಮಕುಸುಮವರಳಿದೆ.
ಅದರ ಮಧುರ ಪರಿಮಳ ಹರಡಿದೆ.
ಸದ್ವಾಸನೆಯೊಡನೆ ಬೆಳಗಿನ ತಂಗಾಳಿ
ಒಯ್ಯನೊಯ್ಯನೆ ತೀಡುತಿದೆ. ಆ ತಂಗಾಳಿಯಲ್ಲಿ
ಅಂಗ ಭೃಂಗವೆದ್ದು ಓಂಕಾರ ಜೇಂಕಾರದೊಡನೆ
ತೇಲಿ ಬರುತಿದೆ ಶ್ರೀ ನಿಡುಮಾಮಿಡಿ ಶ್ರೀಗಿರಿ
ಸೂರ್ಯಸಿಂಹಾಸನಾಧೀಶನತ್ತ ತನ್ನ ಅರ್ಚನೆಗೆಂದು
ಬಂಡುದುಂಬಿದ ಹೂವಿಂಗೆ ಬರುತಿಹನು.

—ವಚನವಲ್ಲರಿ (ಭಾಗ–೨)

# ಆದಿಗುರು ಆದರ್ಶ ಆಶೀರ್ವಾದ

'ಅಚಲ ಶರಣ'

ಸೃಷ್ಟಿ ಸೃಜಿಸುವ ಅನಂತ ಸುಸಮಯಗಳು, ಮಾನವನು ಅವುಗಳನ್ನು ಜೀವನ ಪಾಠಗಳಂತೆ ತನ್ನ ಬದುಕಿಗೆ ತುಂಬಿಕೊಳ್ಳಲೆಂದು ಸಂಕೇತ ರೂಪವಾಗಿ ಹೇಳುವ ರೀತಿ ಇರಬೇಕು. ನಿತ್ಯ ನೈರ್ಮಲ್ಯದ ಡಿವ್ಯಸಾಕ್ಷಿಯೋ ಎಂಬಂತೆ ಅಲಂಕೃತ ಉಷೆಯು ನಿಸರ್ಗದ ದಾರ್ಶನಿಕ ಮೂರ್ತಭಾವವಲ್ಲವೇ ? ಅಲ್ಲದೆ ಆದರ ಕಲಾ ಕುಸುರಿಯ ನಿಸ್ಸೀಮ ನಿದರ್ಶನವಲ್ಲವೇ ? ಈ ಸನ್ನಿವೇಶದಲ್ಲಿ ಮಾನವನ ಸರ್ವ ವ್ಯಾಪಾರಗಳಲ್ಲಿ ಬೇಕಾದ ಏಕ ಸೂತ್ರತೆಯನ್ನು, ಸಮನ್ವಯವನ್ನು ಸೂಚಿಸುತ್ತ ಸಂಕೇತಾತ್ಮಕವೆನಿಸಿದೆ ನಿಸರ್ಗದ ನಿಡುನೋಟ. ನೋವು ನಲಿವು, ನಡೆವು ಎಡವು, ಸಹನ–ದಹನ, ಜೀವ-ಜನನ ಮರಣವು, ಜಡ-ಚೇತನ ಇವುಗಳೆಲ್ಲ ಜೀವಿಗಳಿಗಲ್ಲದೆ ಮತ್ತಾರಿಗೆ ? ಹೀಗೆ ಒಂದೆ, ಎರಡೇ ? ನೂರಾರು ಹೆಸರುಗಳಿಂದ ಕಿಂಚಿತ್ತು, ಬೃಹತ್ತಿನ ಮೂಲವಾಗಿದೆ-ಬಣವೆಯಲ್ಲಡಗಿದ್ದ ಬೆಂಕಿಯಂತೆ, ನೀರು ತಂತಿ–ಸೂಜಿಗಲ್ಲು ವಿದ್ಯುತ್ತಿಗೆ ಮೂಲವಾದಂತೆ. ಅಂದರೆ ಕಿಂಚಿತ್ತಿನಲ್ಲಿ ಬೃಹತ್ತು, ಬೃಹತ್ತಿನಲ್ಲಿ ಕಿಂಚಿತ್ತನ್ನು ಸಮನ್ವಯಿಸಿ ಮಹತ್ತಾದ ಸೃಷ್ಟಿಯು ಕಲಿಸುವ ಪಾಠಗಳು ಮಾನವನಿಗೆ ಮನ್ವಂತರಗಳ ಮಹತ್ವಪೂರ್ಣ ಕಲಿಕೆಗಳಾಗಿವೆ. ಜನಿಸಿ ಜೀವವಾದಂದಿನಿಂದ ಮೇಳವಿಸಿದ ಮಣ್ಣಿಗಾಗುವತನಕ ಈ ಶಿಕ್ಷಾಕ್ರಮ ನಡೆದು ಬದುಕಿನ ಅರ್ಥವನ್ನು ವಿಶದಗೊಳಿಸುವ ಈ ವಿಶಿಷ್ಟಯತ್ನ, ಮಾನವನ ಮುಂದೆ ವಿದಿತವಾಗಿದೆ. ಅದನ್ನು ಸಲಿಸಿಕೊಳ್ಳುವ ನಿರ್ಮಿಸಿಕೊಳ್ಳುವ ಸೌಭಾಗ್ಯ ಮಾನವನಿಗಲ್ಲದೆ ಮತ್ತಾವುದಕ್ಕೆ ಮೇಳವಾದೀತು ? ಅಂತೇ ಮಾನವನು ಸೃಷ್ಟಿಯ ಶ್ರೇಷ್ಠ ಪ್ರಥಮ ಶಿಷ್ಯ,–ಪುತ್ರ,–ಬೌದ್ಧಿಕವಾಗಿ !

ನೋವು ನಲವುಗಳ ಜೀವನ ಮಧ್ಯಾಹ್ನವನ್ನೂ ಸೃಷ್ಟಿಸಿ, ಬದುಕಿನ ಸಮಗ್ರತೆಗೆ ಪುಷ್ಟಿಗೊಟ್ಟ ಸೃಷ್ಟಿಚಾತುರ್ಯ ಅದಕ್ಕೆ ಭೂತ–ಭವಿಷ್ಯ–ವರ್ತಮಾನಕಾಲಗಳ ನಿರ್ಮಾಪಕಿಯ ಮಹಾಪಟ್ಟವನ್ನೂ ನಿಸರ್ಗಕ್ಕೆ ನಿರ್ದಿಷ್ಟಗೊಳಿಸಿದೆ. ಜೀವಕೋಟಿಯ ರಕ್ಷಣಾರಂಗದ ಮಹಾನಿರ್ದೇಶಕಳಂತೆ ಕಂಗೊಳಿಸುವ ಪ್ರಕೃತಿ, ತನ್ನ ಅಖಂಡ ತೇಜಸ್ಸಿನಿಂದ ಸರ್ವಪ್ರಭಾವಿಯಾಗಿ ಜೀವನದಲ್ಲಿ ಕಾಂತಿ ಕಂಗಳನ್ನು ಸೃಷ್ಟಿಸುವ ವಿಶಿಷ್ಟ ತೇಜೋವಾಹಿನಿಯಾಗಿ, ಜ್ಯೋತಿರ್ಗಂಗೆಯಂತೆ ಮೆರೆದಿದೆ. ಶಿಕ್ಷಾಕ್ರಮದ ಪೂರ್ಣದರ್ಶಿನಿಯಾಗಿದೆ; ಸ್ವಯಂಪ್ರತಿಜ್ಞಾಬದ್ಧವಾಗಿದೆ.

**ಪರಂಪರೆ :**

ನವನವೋನ್ಮೇಷಶಾಲಿನೀ ಸೃಷ್ಟಿಯು, ನಿರಂತರ ಉಪಾಸಕರಾಗಿ ಜೀವಂತ ಅನುಭಾವಿಗಳಾಗಿ, ಪ್ರಾಚೀನ ಋಷಿಗಳು ಸೃಷ್ಟಿಯ ಶ್ರೇಷ್ಠತಮ ಮಾರ್ಗದರ್ಶನವನ್ನು, ಮಹಾಗುರುವಿನ ಜ್ಞಾನದರ್ಶನವೆಂದು ನಮಿಸಿ ನುಡಿದರೇನೋ-ಶಿಕ್ಷಾಚಾರ್ಯ ಜಗಂಜ್ಯೋತಿಗೆ :

ಓಂ, ತತ್ಸತ್
ತಮ ಸೋಮಾ ಜ್ಯೋತಿರ್ಗಮಯ
.....................

—ಈ ಗೌರವ ಗುರುಗಾಯತ್ರಿಯು ವಿಜೃಂಭಿತ ಘೋಷಣೆ ಮಾಡುತ್ತ ಶ್ರೀ ಗುರು ಶ್ರೀ ಗುರುವನ್ನು ಹೀಗೂ ಕಂಡರೇನೋ ?

ಗುರುಬ್ರಹ್ಮಾ ಗುರುರ್ವಿಷ್ಣು ಗುರುದೇವೋ ಮಹೇಶ್ವರಃ
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರುವೇ ನಮಃ

ಇಂತಹ ಪರಂಪರೆ ಇಂದೂ ಸಜೀವವಾಗಿರುವ ಜೀವಂತ ಸಾಕ್ಷಿಗಳನೇಕ. ಅಂತಹ ಸಾಕ್ಷಿಯಾಗಿ ಶ್ರೀ ಜ. ಚ. ನಿ ಅವರ ವಚನಸಾಹಿತ್ಯದ ‘ಜೀವ’ ವಿಭಾಗದಲ್ಲಿ ಬಹು ಅರ್ಥಗರ್ಭಿತವಾಗಿ ಬಂದಿದೆ; ವಚನವೊಂದು :

ಅಜ್ಞಾನಾಂಧಕಾರದಲಿ ಹೊರಬಾರದಿದ್ದ
ಈ ಅಂಧಂಗೆ ನೀವೇ ಅಕ್ಷಿ ಗುರುದೇವ
ಈ ಅಸಹಾಯಕಂಗೆ ನೀವೇ ಸಾಕ್ಷಿ ಗುರುದೇವ
ನೀವೇ ರಕ್ಷಕ ಗುರುದೇವ! ನೀವಲ್ಲದಿನ್ನಾರೆನಗೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ!

ಗುರುವಿನ ಶ್ರೀ ಕರುಣೆಗಾಗಿ ಪ್ರಪತ್ತಿ ದೃಷ್ಟಿ ಮಾರ್ಗವಿದು. ಸಹೃದಯದ ಸಂಪೂರ್ಣ ಸೃಷ್ಟಿಯಾಗಿ ಸಹಸ್ರಗೊಂಡ ಈ ಭಾವನೆಗಳ ಪ್ರೇರಕಶಕ್ತಿ ಸಾಕಾರವೆಂದಾಗ,

ಗುರುವಿನ ಶಿಕ್ಷಣಪ್ರಭಾವ ಆಯಾ ಬಾಳಿನಲ್ಲಿದ್ದುದೇ ಹೌದು; ಇರುವುದೂ ಹೌದು. ನಿರಾಕಾರವೆಂದಾಗ ಹೃದಯದ ಮೇರೆಗೆ ನಿಲುಕುವಂತಹುದು. ಹೆಚ್ಚಾಗಿ ನಂಬಿಕೆಯೊಂದೇ ತಳಪಾಯವಾದರೂ ವಿಚಾರನಿಷ್ಠೆಗೇ ಅಳವಡದಿರುವ ವಿಷಯವೆಂಬುದು ಸಂಪೂರ್ಣ ಸತ್ಯವಲ್ಲ. ಅಂತು ಇವೆರಡರ ಸಾಕ್ಷಾತ್ಕಾರ-ಅನುಭವಗಳಿಗೆ ಪ್ರಯತ್ನಶೀಲತೆಯೇ ಹಾದಿ. ಆದರೆ ಇವೆಲ್ಲವೂ ಗುರುಮಾರ್ಗಾನುಕರಣ ಸಂಪ್ರದಾಯವೆನ್ನುವ ದೃಷ್ಟಿ, ಸಲ್ಲುವಂತಹುದಲ್ಲ. ಗುರುವಾಣಿಯಿಂದ ಸಂಪಾದಿಸಿದ ದರ್ಶನದೃಷ್ಟಿ ಒಂದು ಸೃಷ್ಟಿಯೂ ಹೌದು. ಇದು ಗುರುವಿನ ವ್ಯಕ್ತಿತ್ವದ ಅನಪೇಕ್ಷಣೀಯ ವಿಜೃಂಭಣೆಯಲ್ಲ. ಬದಲು ಸಹಜವಾದ ಅದ್ವೈತಾನುಸಂಧಾನ; ಅದ್ವೈತಾನುಸಕ್ತಿಯಲ್ಲ. ಜನಕದಿಂದ ಜನ್ಯಕ್ಕೆ, ಅಸ್ಪಷ್ಟತೆಯಿಂದ ಸುಸ್ಪಷ್ಟತೆಗೆ ಏರುವ ಸರ್ವೋದಯ ಮಾರ್ಗ.

ಇದು ಕಾರಣ, ಸೃಷ್ಟಿಯ ಗುರುಪೀಠಕ್ಕೆ ಸರ್ವಜೀವದುಗಳ ಶಿರಸಾಷ್ಟಾಂಗ ನಮಸ್ಕಾರಗಳು ಉಂಟಲ್ಲವೇ? ಈ ಆದಿಗುರುವಿನ ಶಿಕ್ಷಾಕ್ರಮವೂ ನೈಸರ್ಗಿಕವಾದುದೆ. ಈ ಬಗ್ಗೆ ವಿಶ್ಲೇಷಣೆ ನಡೆಸುವುದೇ ಸಧ್ಯಕ್ಕೆ ಸಲಿಸಿಕೊಳ್ಳಬೇಕಾದ ಅಂಶ. ಆ ವಿಶ್ಲೇಷಣೆಗೆ ನಿಲುಕುವ ಅಂಶಗಳಾದರೂ ಹೀಗೆನ್ನೋಣವೇ—

೧. ಬಾಳಿಗೊಂದು ಶಿಕ್ಷಣದೃಷ್ಟಿ, ೨. ಪಾತ್ರತೆ, ೩. ನೈಸರ್ಗಿಕ ಸಂದಿಗ್ಧತೆ (ನಾಶ-ರಕ್ಷಣೆ), ೪. ಶಿಕ್ಷಣ ವೈವಿಧ್ಯತೆ, ೫. ಬಾಳಿನ ಸಮಗ್ರತೆ, ೬. ಅಂತಿಮ ದೃಷ್ಟಿ-ಸೃಷ್ಟಿ ಎಂಬ ವಿವಿಧ ಘಟ್ಟಗಳಲ್ಲಿನ ವಿವೇಚನೆ, ನಮ್ಮ ವಿಶ್ಲೇಷಣೆಗೆ ಸಹಾಯಕವಾದಾವು. ಅದರ ಒಪ್ಪುತಪ್ಪುಗಳು ಆಯಾಯ ವಿಚಾರ ಸರಣಿಯ ನೆರವಿನಿಂದ ಜೀವ ಪಡೆಯಬಹುದಷ್ಟೆ.

**ಶಿಕ್ಷಣದೃಷ್ಟಿ :**

ನಿಸರ್ಗವು ನಿದರ್ಶಿಸಿರುವ ಶಿಕ್ಷಾಕ್ರಮವನ್ನು ಕೂಲಂಕಷವಾಗಿ ಕೆದಕಿ ನುಡಿದರು ಹಿರಿಯ ಶಿಕ್ಷಣತಜ್ಞರು—

ಬಾಳೇ ಒಂದು ಶಿಕ್ಷಣ. ಬಾಳಿಗಾಗಿ, ಬಾಳಿನಲ್ಲಿ ಶಿಕ್ಷಣ; ಅದೂ ಸಂಪೂರ್ಣ ಬದುಕಿಗಾಗಿ ಶಿಕ್ಷಣ.

'ಮಾನವಸ್ವಭಾವದಲ್ಲಿ ಕಂಡುಬರುವ ಅನಂತರೂಪಗಳಂತೆಯೇ, ಅವನಿಗೆ ಅನುಗುಣ ಶಿಕ್ಷಣವೀಯುವ ಸಮಸ್ಯೆಯೂ ಅನಂತಮುಖವಾಗಿದೆ'—ಎಂಬ ಅಭಿಪ್ರಾಯವನ್ನು ಸೂಚಿಸಿದವನು ಒಬ್ಬ ಮೇಧಾವಿ ಶಿಕ್ಷಣತಜ್ಞ ಪೆಸ್ಟಲಾಜಿ. ಅಂದಮೇಲೆ, ನಿಸರ್ಗದ ಪಾಠಶಾಲೆಯಲ್ಲೇ ಈ ಸಮಸ್ಯೆ ಜಟಿಲವಾಗಿದೆ ಮತ್ತು ಆ ಶಿಕ್ಷಾಕ್ರಮವೂ ನಮ್ಮ ಕುತೂಹಲವನ್ನು ಇಮ್ಮಡಿಗೊಳಿಸುವ ಗಮನಾರ್ಹ ಸಂಗತಿಯಾಗಿದೆ.

**ಪಾತ್ರತೆ :**

ಶಿಕ್ಷಣ ನೀಡುವ ಗುರುವಾಗಿ ನಿಸರ್ಗ ನಿಂತಾಗ ಮಾನವ ಆ ಶಿಕ್ಷಣಕ್ಕೆ ಎಷ್ಟು ಪಾತ್ರನಾದಾನು? ಅರ್ಥಾತ್ ಅವನ ಪಾತ್ರತೆ ಎಷ್ಟೆಂಬುದೇ ಆಗಿದೆ. ನಿಸರ್ಗ ನೀಡುವ ಅನುಭವಗಳನ್ನು ಸ್ವೀಕಾರಮಾಡಲೂ, ಪಾತ್ರತೆಯು ಅಭಾವವಾದರೆ ಯತ್ನ ಶೀಲತೆಯು ಅಲ್ಲಿ ಶೂನ್ಯವಾಗಿದ್ದಿರಬೇಕು. ಇನ್ನೊಂದು ದೃಷ್ಟಿಯಿಂದ ಹೇಳುವುದಾದರೆ, ಅನುವಂಶೀಯತೆಯು ಎನ್ನಬೇಕು. ಅದೇ ನೈಸರ್ಗಿಕ ರೀತ್ಯ ಪಾತ್ರತೆ ಎನ್ನುವುದು. ಅದಕ್ಕೆ ಪೋಷಕವಾಗಿ ಸುತ್ತಲಿನ ವಾತಾವರಣ-ಬೆಳೆಯುವ ಸನ್ನಿವೇಶವು ಸುಲಲಿತ, ಸುನಿಮಿತ್ತವಾದರೆ ಸಫಲತೆಗೆ ಸೋಪಾನವಿದ್ದಂತೆ. ಈ ಪಾತ್ರತೆಯು ವಿವಿಧ ಮಟ್ಟದಲ್ಲಿರುವುದು ಸಹಜ. ಈ ಪಾತ್ರತೆಗನುಗುಣವಾಗಿ ಮಾರ್ಗದರ್ಶನ ಮಾಡುವ ರೀತಿ ಕಲಾಕುಸುರಿಯ ಕೆಲಸ. ನಿಸರ್ಗವು ಇದನ್ನು ನಿರ್ವಹಿಸುವ ರೀತಿ ವೈಶಿಷ್ಟ್ಯಪೂರ್ಣ ಹಾಗೂ 'ಶಿಷ್ಯಾಧಿಚ್ಛೇತ್ ಪರಾಜಯಂ' ಎನ್ನುವಂತೆ, ತನ್ನ ಶಿಷ್ಯ-ಪುತ್ರನು ತನ್ನನ್ನೇ ಮೀರಿಸುವಷ್ಟು ಚೈತನ್ಯಪೂರ್ಣನನ್ನಾಗಿ ಮಾಡುವ ಹವ್ಯಾಸ ವಾದರೂ ನಿಸರ್ಗದ್ದೇ. ಅದೇ ಅದರ ಗುರುತ್ವಕ್ಕೆ ಸಲ್ಲುವ ಮಹಾ ಶ್ರೇಯಸ್ಸು. ಗೌರವ ಪ್ರತಿಷ್ಠೆ.

ನಿಸರ್ಗದ ಶಿಕ್ಷಣದಲ್ಲಿ, ಅದರ ಪ್ರತಾಪವಷ್ಟೇ ಪ್ರದರ್ಶಿತವಾಗುವುದಾದರೆ ಮಾನವನ ಕ್ರಿಯಾ ಪ್ರವೃತ್ತಿಯು ನಷ್ಟವಾದೀತು. ಜಡತ್ವಕ್ಕೆ ವೀಳೆಯ ಕೊಟ್ಟಂತಾದೀತು. ಆದರೆ ಇದೂ ನಿಸರ್ಗನಿಯಮಕ್ಕೆ ವಿರುದ್ಧ. ಅಂತೇ ಮಾನವನನ್ನು ಚೇತನದ ಪ್ರತಿನಿಧಿಯಾಗಿರುವಂತೆ ಶಿಕ್ಷಣವನ್ನು ಸದಾ ನೀಡುವ (ಸೃಷ್ಟಿಸುವ) ಮಹಾ ಕಾಯಕ ನಿಸರ್ಗದ್ದು. ಎಂದರೆ ಸತ್ಯವಿದೂರ ಸಂಗತಿಯೇ? ನಿಸರ್ಗದ ಸೋಲು ಎನ್ನುವುದಾದರೂ, ಶಿಶುವು ತಾಯನ್ನು ತನ್ನ ಲೀಲಾವಿನೋದಗಳಲ್ಲಿ ಸೋಲಿಸುವಂತಹ ರೀತಿಯದಷ್ಟೆ.

ಮಾನವನಿಗೆ ಪ್ರಕೃತಿ ನೀಡುವ ಶಿಕ್ಷಣವು, ಅವನ ಓರೆಕೋರೆಗಳನ್ನೇ ತಿದ್ದಿಸಿಕೊಳ್ಳುವಂತಹುದು. ಅಪರಿಮಿತವಾಗಿ ಹರಡಿಕೊಂಡಿರುವ ಮಣ್ಣನ್ನು ನಿತ್ಯ ಜೀವನಕ್ಕೆ ಉಪಯೋಗಿ ವಸ್ತುವನ್ನಾಗಿ ಮಾಡಿದ ಮಾನವನ ಯತ್ನವು, ನಿಸರ್ಗಕ್ಕೆ ನೀಡುವ ಗುರುಕಾಣಿಕೆಯಲ್ಲವೆ? ಅದಾವ ಕಾಲದಿಂದಲೋ ಬಿದ್ದಿದ್ದ ಬಂಡೆಗಳಿಗೆ ಒಂದು ಆಕೃತಿ ನೀಡಿ, ಜೀವ ಕಳೆಯನ್ನಿತ್ತು ತನ್ನ ಪ್ರಾಣವನ್ನೇ ಮುಡಿಪಿಟ್ಟು ಕಾಣಿಸುವ ಶಿಲ್ಪಿ, ನಿಸರ್ಗದ ಧನ್ಯ ಶಿಶು-ಶಿಷ್ಯನಲ್ಲವೇ?

**ಮಾನವನ ಕಲಾದೃಷ್ಟಿ**

ಮಾನವ ಬೆಳೆದಂತೆ, ತನಗೆ ದೊರಕುವ ಸನ್ನಿವೇಶ, ಸಂದರ್ಭಗಳೆಂಬ ಪರಿಕರಗಳನ್ನು ತನ್ನ ಬೆಳವಣಿಗೆಗೆ ಅನುಕೂಲ ಹಾಗೂ ಅನುಗುಣವಾಗುವಂತೆ ಬಳಸಿ

ಕೊಂಡು ಬದುಕಿನ ಹಾದಿಯಲ್ಲಿ ತೃಪ್ತಿಪಡೆಯಬೇಕೆನ್ನುವ ಈ ಮಾನವ ದೃಷ್ಟಿ ಸರ್ವಥಾ ನಿಮೀಲಿತವಲ್ಲ. ಬದಲು ಸೂಕ್ಷ್ಮದಲ್ಲಿ ಸೂಕ್ಷ್ಮವನ್ನು ಗುರುತಿಸುವ ಅವನ ದೃಷ್ಟಿ ಮಣ್ಣಮರೆಯ ದೇಗುಲದಲ್ಲಿನ ಮಾಣಿಕ್ಯವನ್ನು ಕಾಣಬಹುದು. ಆವಿಷ್ಕಾರ ಪ್ರವೃತ್ತಿ ತೋರಬಲ್ಲದು, ನಿಯುಕ್ತವಾಗಬಲ್ಲುದು. ಇಷ್ಟಲ್ಲದೆ ನಿಸರ್ಗದ ಬನತೊರೆ ಗಳನ್ನು ತನ್ನ ತಾಂತ್ರಿಕಜ್ಞಾನ ಪರಿಣತಿಗೆ ಅಳವಡಿಸಿ, ಅನುಕೂಲದ ಜೊತೆಗೆ, ಕಲಾ ಸೃಷ್ಟಿಯ ಮಯೂರ ನರ್ತನವನ್ನೂ ತೋರಿಸಬಲ್ಲ ಮಾನವ. ಅಂದರೆ ನಿಸರ್ಗದ ಮೇಲೆ ತನ್ನ ಜಯಪತಾಕೆಯನ್ನು ಹಾರಿಸಿ, ಅದರ ಶರಣಾಗತಿಯನ್ನು ಸಾರುವ ಯತ್ನ ಅವನದೇ ಎಂಬ ಸಂದೇಹವೂ ಬಾರದಿರದು. ಇದಕ್ಕೆ ಶ್ರೀ ಜ. ಚ. ನಿ. ಯವರ ವಚನವಲ್ಲರಿಯ 'ಜೀವ' ವಿಭಾಗದಲ್ಲಿನ ವಚನವೊಂದು ಉತ್ತರ ರೂಪದಲ್ಲಿ ಬಹು ಸುಂದರವಾಗಿ ಮೂಡಿದೆ—

ಇಂದಿನ ಮಾನವನ ಪ್ರತಿನವಶೋಧನ ಪ್ರಕೃತಿಯ ಅನುಕರಣ ಕಾಣಾ
ಬಾನುಲಿಯ, ಬಾನೋಟಂಗಳ ಕಂಡುದೆಂತು ಹೇಳಾ ?
ಇದನರಿಯದೆ ವಿಜ್ಞಾನಿಯೆಂದು ಗರ್ವಿಸುವುದೇಕೆ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ
ಇಂದಿನ ವಿಜ್ಞಾನಿಯದು ಪಕೃತಿಗುರುವಿನ
ಮುಂದೆ ಬಾಲಾಕ್ಷರಾಭ್ಯಾಸ ನೋಡಾ !

ಆದರೆ ನಿಸರ್ಗ ಇದಕ್ಕೆ ಅವಕಾಶವಿತ್ತಿಲ್ಲವೆನ್ನೋಣವೇ?ನಿಸರ್ಗವಾದರೂ ಶರಣಾ ಗತವಾದಂತೆ ತೋರಿಸಿಕೊಳ್ಳುವುದಷ್ಟೆ. ಅದಕ್ಕೆ ಮಾನವನ ಯಾವ ಕೃತಿಯೂ ಒಂದು ರೀತಿಯ ಶಿಶುಲೀಲೆ. ಶಿಶುವಿನ ವಿವಿಧ ಲೀಲೆಗಳನ್ನು ನೋಡಿ ಆನಂದಿಸುವ ಅಪೂರ್ವ ಸುಸಂಧಿಯನ್ನು ನಿಸರ್ಗವಾದರೂ ನಷ್ಟಮಾಡಿಕೊಳ್ಳಲಿಚ್ಛಿಸುವುದೇ ? ಮಾನವ ಪ್ರಕೃತಿಯನ್ನು ಶಿಶುವಿನಂತೆ ತಿದ್ದಲೆಳಸುವನು. ಪ್ರಕೃತಿ ಅವನಿಂದ ತಿದ್ದಿಸಿ ಕೊಳ್ಳುವಾಗ ಮಾಡುವ ತಪ್ಪನ್ನು ತಿದ್ದುವಳು. ತನ್ನ ಸೃಷ್ಟಿಯಲ್ಲಿನ ದೋಷವನ್ನು ತಾನು ತಿದ್ದಿಕೊಳ್ಳುವಳು.

ಮಾನವ ಪ್ರಕೃತಿಯ ಕರುಣೆಯ ಕಂದನಾದಾಗಲೇ ಇವೆಲ್ಲವೂ ಸಾಧ್ಯ. ಅಂತೆಯೆ ಶ್ರೀ ಜ. ಚ. ನಿ. ಅವರೂ ತಮ್ಮ ಅಪೂರ್ವ ಅನುಭವವನ್ನು ಹೀಗೆ ಸೆರೆಹಿಡಿ ದಿದ್ದಾರೆ :

"....ನೀನೆನ್ನನು ಕರುಣೆಯ ಕಂದನಾಗಿಸಿಕೊಂಡ ಕಾರಣ ಬದುಕಿದೆ;
ಬೆಳಗ ಕಂಡೆ ಕಾಣಾ;
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಂಹಾಸನಾಧೀಶ್ವರ !"
ಇಂತಹ ಪಾತ್ರತೆಯನ್ನು ಪಡೆಯದ ಮಾನವನ ಬಕು ಬದುಲು ಶೂನ್ಯ

## ನಿಸರ್ಗದ ಸಂದಿಗ್ಧತೆ (ನಾಶ-ರಕ್ಷಣೆ) :

ಮಾನವನ ವಿವೇಕ ಹಾದಿಗೆಟ್ಟಾಗ, ವಿಶಿಷ್ಟ ರೀತಿಯಿಂದ ಆ ಡೊಂಕನ್ನು ನಿಸರ್ಗವು ತಿದ್ದುವುದುಂಟು. ವರ್ಡ್ಸ್‌ವರ್ತ್ ಕವಿಯು ನುಡಿದಂತೆ 'Nature is red in her tooth & claw' – ಎಂಬುದು ಸಹಜ. ಆದರೆ ಇದು ಸದಾ ಅವಳ ಅವಸ್ಥೆಯುಳ್ಳವೆನ್ನುವುದಾದರೆ ಈ ಅವಸ್ಥೆಯು ಅಷ್ಟು ಕಾಲಕ್ಕಾದರೂ ಏಕೆ ಬೇಕು? ರೌದ್ರಾವತಾರದ ಪ್ರತಾಪವೇಕೆ? ಒಂದೇ, ಎರಡೇ – ಮಹಾಪೂರ, ಕ್ಷಾಮ, ರೋಗ-ರುಜಿನ.. ....ರಾವುದಿಲ್ಲ? ಇವೆಲ್ಲವೂ, ತೃಪ್ತಿಯ ಬದುಕಿಗೆ ಒಂದು ವಿಧದಲ್ಲಿ ಸವಾಲಲ್ಲವೇ? ಅದರೆ ಮಾನವನು ಮೂಡಿಸಿದ ವೈಜ್ಞಾನಿಕ ವೈಪರೀತ್ಯದ ಅವಿವೇಕಕ್ಕೆ ನೀಡಿದ ಎಚ್ಚರಿಕೆಯಲ್ಲವೇ ಈ ಘಟನೆಗಳು? ಮತ್ತೊಂದು ದೃಷ್ಟಿಯಿಂದ ನೋಡುವುದಾದರೆ, ತಾನು ಕೊಡುವ ಈ ಸವಾಲುಗಳನ್ನು ಎದುರಿಸುವ ವಿಶ್ಲೇಷಿಸುವ ಶಕ್ತಿ ತನ್ನ ಸೃಷ್ಟಿಯೊಂದಕ್ಕೆ ಬರದಿದ್ದರೆ ಪೂರ್ಣತೆಯ ಹಾದಿಯಲ್ಲಿ ಒಂದು ಎಡವುಗಲ್ಲು ಎಂದು ನಿಸರ್ಗದ ಭಾವವಿರಬೇಕು ಎನ್ನಿಸುತ್ತದೆ. ಮಾನವ ಅಪರಿಪೂರ್ಣನೆಂದರೂ, ಇಂತಹ ಶಕ್ತಿಯಿಂದ ವಂಚಿತನಾದಾಗ, ಅಪರಿಪೂರ್ಣತೆಗೆ ಮತ್ತೂ ಮೊತ್ತವಾದಂತಲ್ಲವೇ?

## ಶಿಕ್ಷಣ ವೈವಿಧ್ಯತೆ

ಇನ್ನು ನಿಸರ್ಗ ನೀಡುವ ಶಿಕ್ಷಣದ ವೈವಿಧ್ಯತೆಗಳೆಂದರೆ, ಮಾನವ ಗಳಿಸಿಕೊಂಡಿರುವ ವಿಶಿಷ್ಟ ವ್ಯಕ್ತಿತ್ವಗಳೇ ಆಗಿವೆ. ಕವಿ, ವಿಜ್ಞಾನಿ, ಸಂಗೀತಗಾರ, ಶಿಲ್ಪಿ........ ಹೀಗೆ ವಿವಿಧ ವ್ಯಕ್ತಿಗಳ ಉದಾಹರಣೆಯಿಂದ ಸೃಷ್ಟಿಯ ವೈಶಿಷ್ಟ್ಯವನ್ನು ಕಾಣಬಹುದು.

ಕವಿಯ ಪ್ರತಿಭೆ, ಶಿಲ್ಪಿಯ ಚಾತುರ್ಯ, ಜೀವ-ಚೈತನ್ಯಭಾವ, ವಿಜ್ಞಾನಿಯ ವಿಶ್ಲೇಷಣ, ಸಂಶ್ಲೇಷಣ ಶಕ್ತಿ, ಸಂಗೀತಗಾರನ ಕಂಠಮಾಧುರ್ಯ........ ಎಲ್ಲವೂ ಪ್ರಕೃತಿದತ್ತವೇ. ಆದರೆ ಇವುಗಳ ಸಂಸ್ಕಾರ ಮೇಲ್ಮೆಯು ಆಯಾ ವ್ಯಕ್ತಿಯ ಸಾಧನಾಶಿಷ್ಟತೆಯನ್ನು ಅವಲಂಬಿಸಿದೆ. ಅಂದರೆ ಮಾನವ ಬಾಳಿನಲ್ಲಿ ಸುಸಂಸ್ಕಾರ, ಕಲಾದೃಷ್ಟಿ-ಸೃಷ್ಟಿ, ಸಮನ್ವಯ ದೃಷ್ಟಿ ಇತ್ಯಾದಿಗಳ ಬೆಳವಣಿಗೆಯೇ ನಿಸರ್ಗ ನೀಡುವ ಶಿಕ್ಷಣದ ಗುರಿ ಇರಬೇಕು. ಮಾನವ ಇಲ್ಲಿ ಕೇವಲ ಸಾಧನಮಾತ್ರನಾಗದೆ, ವಿಶಿಷ್ಟ ವ್ಯಕ್ತಿತ್ವವನ್ನು ತುಂಬಿಕೊಳ್ಳುವನಾದರೆ, ಅದು ಜೀವನ ಬಾಳಿಗೆ ಒಂದು ಸಿಂಗಾರ, ಬದುಕು ಬಂಗಾರ. ಇಂದು ಸೃಷ್ಟಿಯ ಸಹಜ ಶಿಲ್ಪ. ಶಿಷ್ಯ, ಮಾನವ.

ಈಗ ಉದಾಹರಿಸಿದ ಅಷ್ಟು ವ್ಯಕ್ತಿಗಳೂ ಒಂದು ವಿಶೇಷ ಸಂದರ್ಭದಲ್ಲಿ ಹೇಗೆ ವರ್ತಿಸುವರೆಂದು ನೋಡೋಣ—ಸಮುದ್ರದ ಅಲೆಗಳ ಏರಿಳಿತವು, ಸಮುದ್ರಜಲದ ತೇರಿಸಂತೆಯೂ, ಅದೇ ಜಲವು ದಂಡೆಯಲ್ಲಿ ಕವಿಯು ನಿಂತಾಗ, ಕಾಲಿಗೆ ಬಡಿದು

ಕೆಳಗಿಳಿಯುವಾಗ, ಪಾಪದ ಪಾದುಕೆಗಳನ್ನು ಕೊಂಡೊಯ್ದಿತೇನೋ, ಅದಕ್ಕಾಗಿ ಕಾಲುಗಳು ಮರಳಿನಲ್ಲಿ ಕೆಳಗಿಳಿಯಿತೇನೋ, ಹೀಗೆಯೇ ಬಾನಿನಲ್ಲಿ ಮಿಂಚನ್ನು ಕಂಡಾಗ, ಜ್ಯೋತಿ ಶರಧಿಯಿಂದ ತಪ್ಪಿ ಕತ್ತಲ ಬಾನಿಗೆ ಹಾರಿದ್ದ ಕಾಂತಿ ಮತ್ಸ್ಯವು ಮತ್ತೆ ತನ್ನ ತಾಣಕ್ಕೆ ಜಿಗಿಯಿತೇನೋ....ಎನ್ನುವ ಭಾವನೆಗಳು ಕವಿಯವು. ಹೀಗೆ ಹೃದಯ ಹಿಮಾಲಯದ ಭಾವನಾ ಗಂಗೋತ್ರಿಯಲ್ಲಿ ಜನಿಸಿದ ಅಮೃತ ರಸ ಗಂಗೆಯಲ್ಲಿ ಮೀಯುವ, ಮೀಯಿಸುವ ಚೈತನ್ಯ ಕವಿಗೆ ಎಲ್ಲಿಂದ, ಯಾರಿಂದ ಒದಗಿ ಬಂತು ?

ಅದೇ ಶಿಲ್ಪಿಗೆ, ಸಮುದ್ರದ ಅಲೆಗಳು ಕೊಂಡೊಯ್ದು ತಂದ ಮರಳಿನ ಪ್ರತಿಯೊಂದು ಕಣವೂ 'ಸಾಲಿಗ್ರಾಮ' ಸೃಷ್ಟಿಯಾಗಿ ಕಾಣಬಹುದು. ಅಲ್ಲದೆ ಜಡದಲ್ಲೆ ಚೇತನವನ್ನು, ಕಲೆಯನ್ನು, ಜೀವಕಳೆಯನ್ನು ಕಂಡು ಕಾಣಿಸುವ ಈ ಶಕ್ತಿಯ ಉಗಮವಾವುದು ?

ವಿಜ್ಞಾನಿಯಾದರೋ ಅದೇ ಸಮುದ್ರದ ಅಲೆಗಳ ಏರಿಳಿತವನ್ನು ಕಂಡು ಅದಕ್ಕೆ ಕಾರಣ ಚಂದ್ರನ ಆಕರ್ಷಣೆ ಎಂದಾನು; ಭೂಮಿಯ ತಿರುಗಣೆಯ ಫಲ ಎಂದಾನು. ನ್ಯೂಟನ್ನನಿಗೆ ಮರದ ಮೇಲಿಂದ ಬಿದ್ದ ಸೇಬು ಗುರುತ್ವಾಕರ್ಷಣೆಯ ಫಲವೆನ್ನಿಸಿತು. ಸೂರ್ಯನ ಬಳಿ ಬೆಳಕು ಮಳೆಯ ಹನಿಯಲ್ಲಿ ವರ್ಣವಿಭಜನೆಯಾಗುವ ಫಲ-ಕಾಮನಬಿಲ್ಲು, ಎಂದು ವಿಜ್ಞಾನಿಯು ಹೇಳಿಯಾನು. ಅಂತೇ ನಿಸರ್ಗದ ಚಾತುರ್ಯ ಸೃಷ್ಟಿಗೆ ಅವನೊಂದು ಸೋದಾಹರಣೆ.

ಸಂಗೀತಗಾರ, ಸಮುದ್ರದ ದಂಡೆಯಲ್ಲಿ ನಿಂತು ಅಲೆಯ ಗಾನವನ್ನು ಆ ಅಲೆಗಳಲ್ಲಿ ಆಲಿಸಬಲ್ಲ, ಅದರಲ್ಲಿ ತನ್ಮಯನಾಗಿ ವಿಶಿಷ್ಟ ಸ್ವರ ಸಾಂದ್ರತೆಯನ್ನು ಕಾಣಬಲ್ಲ. ಸಂಗೀತ ಸರಸ್ವತಿಯ ಒಂದು ನರ್ತನವೆನ್ನಬಲ್ಲ ; ಪ್ರತಿಯೊಂದರಲ್ಲೂ ಸಂಗೀತ ಕೇಳುವ, ಹಾಡುವ ವಿಶಿಷ್ಟ ಶಕ್ತಿ ಅವನದು. ಇದು ಯಾರ ನೀಡಿಕೆ ?

ನಿಸರ್ಗದ ಶಿಕ್ಷಣ ರಂಗದ ಸಾಧಕರಾಗಿ, ವಿಶಿಷ್ಟ ಶಕ್ತಿಗಳಿಂದ ಆವಾಹಿತರಾಗುವ ಈ ವ್ಯಕ್ತಿಗಳು ನಿಸರ್ಗದ ಅತ್ಯುತ್ತಮ ಶಿಷ್ಯಕೋಟಿಯಲ್ಲವೆ ? ಇದು ನಿಸರ್ಗ ನೀಡುವ ಶಿಕ್ಷಣ ವೈವಿಧ್ಯತೆ. ಈ ವೈವಿದ್ಯತೆಯನ್ನು ಪಡೆದ ಬಾಳು ಸಿದ್ಧ ; ಸಫಲ ! ಇದನ್ನು ಆಧುನಿಕ ಆಕರ್ಷಕ ವಚನಕಾರರಾದ ಶ್ರೀ ಜ. ಚ. ನಿ. ಅವರು ತಮ್ಮ ಮೇಲಿನ ವಚನದಲ್ಲಿ ಸೂತ್ರಪ್ರಾಯವಾಗಿ ಚಿತ್ರಿಸಿದರು.

**ಬಾಳಿನ ಸಮಗ್ರತೆ (ಸಂಸ್ಕಾರ) :**

ಮಾನವ ಜೀವಿಗಾಗಿ ಹೀಗೆ ವಿಶಿಷ್ಟ ರೀತಿಯ ಶಿಕ್ಷಾಕ್ರಮವನ್ನು ನಿಸರ್ಗ ರೂಪಿಸಿದ್ದೇಕೆ ?....ನಿಸರ್ಗ ಅನಂತರೂಪಿ. ಆದರೂ ಭಿನ್ನತೆಯಲ್ಲಿ ಐಕ್ಯತೆಯನ್ನು ಕಾಣಿಸುವ ವಿಶಿಷ್ಟ ಶಕ್ತಿ. ನಿತ್ಯನೂತನತೆ ಅವಳ ಸೌಭಾಗ್ಯ ಸಂಕೇತ; ನಿತ್ಯನೈರ್ಮಲ್ಯ

ಅವಳ ಸುಂದರ ಬಯಕೆ; ಸಮರಸವೇ ಅವಳ ಸುವ್ಯವಸ್ಥೆಯ ಸುಫಲಶೃತಿ. ಅಂದ ಮೇಲೆ ಬಾಳಿನಲ್ಲಿ ಸಮಗ್ರತೆ ಬೇಕು. ತುಂಬು ಜೀವನ ತುಂಬಿ ಹರಿಯಬೇಕು ಎಂಬುದೇ ಆಕೆಯ ಸದಿಚ್ಛೆ. ಸಂಸ್ಕಾರವಿಲ್ಲದೆ ಹೋದಾಗ-ಶಿಕ್ಷೆ ಇಲ್ಲದೇ ಹೋದಾಗ, ಸಮಗ್ರತೆಗೆ ಕುಂದುಗಳು ಆವರಿಸಿಯಾವು. ಜಡವೆಂದು ಬಿದ್ದಿದ್ದ ಕಲ್ಲಿಗೆ ಒಂದೊಂದು ಸಂಸ್ಕಾರವಿತ್ತಾಗ ಒಂದೊಂದು ಕಲೆ ಅದರಲ್ಲಿ ಮೇಳವಿಸೀತು. ಶಿಲ್ಪಿಯ ಕೈಗೆ ಸಿಕ್ಕಿ ಶಿವಲಿಂಗವಾದೀತು, ಶ್ರೀ ಗುರುವಿನ ಪ್ರಸಾದಕ್ಕೆ ನಿಲುಕಿ ಆತ್ಮಲಿಂಗವಾದೀತು. ಶಿಲೆಯೇ ಹೀಗೆ ಚೈತನ್ಯದಾಗರವಾಗುವುದಾದರೆ ಮಾನವ ಇದೇ ಸಂಸ್ಕಾರಕ್ಕೊಳಗಾದಾಗ ಮಹಾಲಿಂಗವಾಗನೇ? ಬಾಳಿನ ಸಮಗ್ರತೆಗೆ ಬೇಕಾದ ಸುಸಂಸ್ಕಾರಗಳನ್ನೂ ನಿಸರ್ಗ ತನ್ನ ಶಿಕ್ಷಾಕ್ರಮದಲ್ಲಿ ನಿಯೋಜಿಸಿದೆ. ನೈತಿಕ ನೈರ್ಮಲ್ಯ, ಸಹೃದಯ ಶಿಷ್ಟತೆ, ಕ್ರಿಯಾಶೀಲತೆ, ಸಮರಸಶೀಲತೆ, ಜ್ಞಾನಸೌಷ್ಠವ, ವಿಶ್ವಕಾರುಣ್ಯ ಇತ್ಯಾದಿಗಳ ಚಾಲನೆಯೇ ಆ ಸಮಗ್ರತೆಗೆ ಪುಷ್ಟಿದಾಯಕ ಅಂಶ.

**ಅಂತಿಮ ದೃಷ್ಟಿ-ಸೃಷ್ಟಿ**

ನಿಸರ್ಗದ ಶಿಷ್ಯನಾಗಿ ಪಡೆದ ಶಿಕ್ಷಣಕ್ಕೆ ಅವನು ಸಲ್ಲಿಸಬೇಕಾದ ಗುರುಕಾಣಿಕೆ ಎಂದರೆ ಚೈತನ್ಯಪೂರ್ಣ, ಸಂಸ್ಕಾರಮಯ ಬಾಳನ್ನು ಬಾಳುವುದೇ ಆಗಿದೆ. ಈ ದೃಷ್ಟಿಯಿಂದ ಮಾನವ ನಿಸರ್ಗದ ಸೃಷ್ಟಿ–ದೃಷ್ಟಿ–ತುಷ್ಟಿ. ಅಂದರೆ ಇವುಗಳ ತ್ರಿವೇಣಿ ಸಂಗಮ, ನಿಸರ್ಗ ಇವೆಲ್ಲಕ್ಕೂ ಉಗಮ. ಅವಳು ಗುರುವೂ ಹೌದು. ಶಿಷ್ಯಳೂ ಹೌದು. ಅದೊಂದು ವಿಶಿಷ್ಟ ಸನ್ನಿವೇಶ ಭಂಗಿ. ಮಾನವನನ್ನು ಮಹಾ ಸಂತಾನವಾಗಿ ಪಡೆದಾಕೆ, ಮಹಾಶಿಷ್ಯನನ್ನಾಗಿ ಮಾಡಿಕೊಂಡು ಮಹಾಬಾಳನ್ನು ಬಾಳಲೆಂದು ಹರಸುವ ಮಹಾಗುರು. ನಿರಂತರವಾದ ಅವಳ ಈ ಗೃಷ್ಟಿ ಒಂದು ಪರಮಪಾವನ ಮಹಾಪಥ. ಅಂತೇ ಮಾನವ ಅಲ್ಲಿ ಇಲ್ಲಿ ಎಲ್ಲಿಯೂ ಅಲ್ಲದೆ ನಿಸರ್ಗದ ತೊಟ್ಟಿಲಲ್ಲಿ ಬೆಳೆದು ಬಂದರೇನೇ ಅವನಿಗೆ ಬಾಳು ಸಫಲತೆ ಎಂದನಿಸಾದೀತು; ಲೀಲೆ ಎಂದಾದೀತು. ಇಂತಹ ಭಾವವೊಂದು ಶ್ರೀ ಜಿ. ಚ. ನಿ. ಅವರ 'ಕಾರುಣ್ಯ ಕಿರಣ'ದಲ್ಲಿ 'ಹೃದಯ ಧ್ಯೇಯ'ವನ್ನು ವಿವರಿಸುವಾಗ ಸರಳ ಸುಂದರ ಶಬ್ದಗಳಲ್ಲಿ ಜೀವನದ ಮಹಾತತ್ವವೊಂದಾಗಿ ಮೂಡಿ ಬಂದಿರುವ ವೈಶಿಷ್ಟ್ಯವೆಂದರೆ ಹೀಗೆ :

> "ಮಾನವ ಹೃದಯ ಇಲ್ಲಿ ಎಲ್ಲಿ ವಾಸಿಸಿದರೂ ಸುಖವಿಲ್ಲ. ಅದು
> ಅದರ ನಿಜ ನಿವಾಸದಲ್ಲಿ ಇದ್ದರೆ ಅದಕ್ಕೆ ನೆಮ್ಮದಿ. ಅದರ ನಿವಾಸ
> ಅದು ಎತ್ತರದ್ದು. ಅಲ್ಲಿದ್ದರೇನೆ ಅದಕ್ಕೆ ಸತ್ಯಸುಖ ವಿಲಾಸ.
> ಅದೇ ಅದರ ಸಕೀಲ. ಅದೇ ಆ ಲಿಂಗಲೀಲ"

—ಇಂತಹ ಲೀಲೆಗೆ ಕಾರಣಕರ್ತಳು ಪ್ರಕೃತಿ.

ಈ ಮಹಾದೇವಿಯ ಪೂಜೆಯಲ್ಲಿ ಮಾನವ ಸಲ್ಲಿಸಬೇಕಾದ ಸರ್ವೋತ್ತಮ ಗುರುಕಾಣಿಕೆಯೆ ಅವನು ಪರಿಪೂರ್ಣತೆಯ ಎಡೆಗೆ ಇಡುವ ಹೆಜ್ಜೆಗಳು. ಈ ಪೂಜೆ

ಯಲ್ಲಿ ಹೃದಯದಾರತಿಯನ್ನು ಬೆಳಗಿ, ಶಿರಸಾಷ್ಟಾಂಗ ನಮಸ್ಕಾರವನ್ನು ಸಲ್ಲಿಸುವಾಗ ಮಾನವ ತನ್ನ ಬಾಳನ್ನು ಅದೆಷ್ಟು ಧನ್ಯವೆಂದು ಹರುಷಿಸದೆ ಇದ್ದಾನು ! ಇಂತಹ 'ನವನವೋನ್ಮೇಷಶಾಲಿನೀ' ಪ್ರಕೃತಿಯನ್ನು 'ಆದಿಗುರು'ವನ್ನಾಗಿ ಪಡೆದ ಮಾನವ ಮಹಾಘನ. ಅವನು ಪಡೆದ ಜ್ಞಾನ, ಮಹಾಧನ–ಅಕ್ಷಯ ಧನ.

ಈ ಮಾನವ ಶಿಶುವಿಗಾಗಿ ಇರುವ ಆಕೆಯ ನಿರಂತರ ಸಂವೇದನೆಯು, ಮಾತಿನ ರೂಪವನ್ನು ತಾಳುವುದಾದರೆ ಹೀಗೆ ಹೇಳಬಹುದೇನೋ—

> "ಮಗು, ನಿನ್ನ ಬಾಳಿಗೆ ಹೂವು ಹಣ್ಣುಗಳಾಗಬೇಕೆ ? ಹಾಗಿದ್ದರೆ ನೀನು ಮರದಂತೆ ಬಾಳು. ನೆಲದಲ್ಲಿ ಬೇರು ಬಿಡು. ಮುಗಿಲಲ್ಲಿ ರೆಂಬೆ ಹರಡು. ಪ್ರಪಂಚದಲ್ಲಿ ಕಾಲಿಡು ; ಇದು ರೀತಿ. ಪರಮಾರ್ಥ ದಲ್ಲಿ ಮೊಗವಿಡು ; ಇದು ನೀತಿ. ಐಹಿಕ ಪ್ರಗತಿಯಾಗಲಿ ; ಆಮುಷ್ಮಿಕ ಸದ್ಗತಿಯಾಗಲಿ."

—ಸೃಷ್ಟಿಯ ಇಂತಹ ಸಂವೇದನೆಯನ್ನೇ ಶ್ರೀ ಜ. ಚ. ನಿ. ಅವರೂ ತಮ್ಮ ಶಿಷ್ಯಕೋಟಿಯನ್ನು ನೆನೆದು 'ಅಭಯವಾಣಿ'ಯಲ್ಲಿ ಹರಿಸಿದರು ಎಂಬುದಕ್ಕೆ ಸಾಕ್ಷಿ ಯಾಗಿ ಮೇಲಿನ ಅವರ ಸಾಲುಗಳೇ ನಿಂತಿವೆ.

ಜನಿಸಿದ ಜೀವಕ್ಕೆ, ನಿಸರ್ಗವು ಹೀಗೆ ಆದಿಗುರುವಾದಂತೆ ದೀಕ್ಷಾಸಂಸ್ಕಾರ ನೀಡಿ ದ್ವಿಜತ್ವಕ್ಕೇರಿಸುವ ಶ್ರೀಗುರುವು ಐಹಿಕ ಬಾಳಿಗಷ್ಟೇ ಅಲ್ಲ, ಆಮುಷ್ಮಿಕ ಬಾಳಿಗೂ ಆದಿಗುರುವಲ್ಲವೆ? ಇಂತಹ ಸದ್ಭಾವನೆಗೆ ಪೂರಕವಾಗಿ ಶ್ರೀ ಜ.ಚ.ನಿ. ಅವರ ಸಂಸ್ಕಾರ, ದೇವದೃಷ್ಟಿ, ಇತ್ಯಾದಿ ಪ್ರೌಢಗ್ರಂಥಗಳು ಸೋದಾಹರಣೆಗಳಾಗಿ ನಿಂತಿವೆ ಮತ್ತು ನಾಡಿನಲ್ಲಿ ಇಂದು ಸಾಹಿತ್ಯ ಸೇವೆಯನ್ನು ಮಾಡುವ ಗುರುಗಳಲ್ಲಿ ಶ್ರೀ ಜ. ಚ. ನಿ. ಅವರು ಅದ್ವಿತೀಯವಾದ ಸಾಹಿತ್ಯ ಸೇವೆಯನ್ನು ಮಾಡಿ 'ಆದಿಗುರು'ತ್ವಕ್ಕೆ ಸಲ್ಲುವವ ರಾಗಿದ್ದಾರೆ. ಇವರಿತ್ತ ಅಮರಕೃತಿಗಳು ಆದರ್ಶ ಆಶೀರ್ವಾದಗಳಾಗಿವೆ.

ನಿಸರ್ಗದ ಈ ಇಹಪರ ಸಿದ್ಧಿಯ ದೃಷ್ಟಿಗೆ–ಭವಿಷ್ಯವೃಷ್ಟಿಗೆ, ಮಾನವ ಜೀವ ಅದೆಷ್ಟು ಜನ್ಮಗಳನ್ನೆತ್ತಿ ತನ್ನ ಪಾತ್ರವನ್ನು ಸರಿದೂಗಿಸಬೇಕೋ ? ಅಂತು ಸೃಷ್ಟಿಯ ಈ ಕಾರ್ಯ ಚಿರಂತನ ; ಮಾನವ ಯತ್ನವೂ ನಿರಂತರ. ಪೂರ್ಣ ಜೀವನವೇ ಸೃಷ್ಟಿಯ ಅನುದಿನ ಗಮನ ; ಆದಿಗುರುವಿನ ಆದರ್ಶ ಆಶೀರ್ವಾದ ವಚನ.

---

# ಆಧ್ಯಾತ್ಮದ ಬೆಳಕು

ಶ್ರೀ ಶ್ರೀಶೈಲ ಸಿದ್ಧರಾಮಿಡಿ ಜಗದ್ಗುರುಗಳು ಬರೆದಿರುವ 'ಅಭಯವಾಣಿ' ಶ್ರೀ ದಿವಾಕರ ರಂಗರಾಯರ 'ಅಂತರಾತ್ಮನಿಗೆ' ಮತ್ತು ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಯವರ 'ರಂಗಯ್ಯನ ವಚನಗಳು' ಮುಂತಾದುವನ್ನು ನೆನಪಿಗೆ ತರುವ ಕೃತಿ.

ವಚನಗಳ ಶೈಲಿಯಲ್ಲಿ ಬರೆದಿರುವ ಈ ಕೃತಿಯಲ್ಲಿ ಮನಸ್ಸನ್ನು ಕುರಿತ ನೂರು ಮಾತುಂಟು. ಮಗುವಿಗೆ ಹೇಳುವ ಹಿತೋಕ್ತಿಯಂತಿರುವ ಈ ನಯವಾದ ಮಾತುಗಳಲ್ಲಿ ಕಾವ್ಯದ ಚೆಲುವು,ಆಧ್ಯಾತ್ಮದ ಬೆಳಕು ಬೆರೆತುಕೊಂಡಿರುವುದು ಒಂದು ಸೊಗಸು. ಇಲ್ಲಿ ಹೆಚ್ಚಾಗಿ ಹೊಳೆಯುವ ತತ್ತ್ವ ಶಿವಾದ್ವೈತ. ಆದರೆ ಸತ್ಸಾಧನೆ ಕುರಿತು ಬರುವ ಹುತ್ತುನುಡಿ ಲೋಕಕ್ಕೆ ಅನ್ವಯಿಸುವ ಮಾತು ; 'ಅನಾಚಾರದಿಂದ ಆಚಾರದತ್ತ ಸಾಗು ; ಅವಿಚಾರದಿಂದ ವಿಚಾರದತ್ತ ಸಾಗು ; ಅಪೂರ್ಣದಿಂದ ಪೂರ್ಣದತ್ತ ಸಾಗು; ಪರಮಾತ್ಮನೆ ನೀನಾಗು'–ಇಂಥ ಮಾತು ಯಾರಿಗೆತಾನೆ ವಿಹಿತವಲ್ಲ ?

ಸಂಯುಕ್ತ ಕರ್ನಾಟಕ
೪–೨–೧೯೬೩

## ಸಿರಿ ನುಡಿಯ ಹಿರಿ ಹೊನಲು

ತಾಯ್ನುಡಿಯ ಸೇವೆಯಲಿ ತತ್ತ್ವಮಯ ಭಾವದಲಿ
ತ್ಯಾಗಮಯ ಜೀವನದೆ ಸವೆಯುತಿದೆ ಶರೀರ ;
ನಿತ್ಯ ಸಾಹಿತ್ಯ ಕರ್ತವ್ಯದೊಳು ಕರಿಗೊಂಡು
ಕರಕರಗಿ ಕೊರಕೊರಗಿ ಕೃಶವಾಗಿ ಕನ್ನಡದ
ಚಲ್ವನುಡಿ ರಸದೌತಣವ ರಚಿಸುತಿದೆ ವಿಚಾರ !

ಬಗೆಯರಳಿ ಒರೆದುದೆಲ್ಲ ತಿಳಿಗನ್ನಡದ ಸಾಹಿತ್ಯ ;
ಅದನು ಮನವಿಟ್ಟು ಓದಿದರೆ ಅದೆಲ್ಲ ರಸಮಯ ತತ್ವ. !
ಕಣ್ಣಿಟ್ಟ ಕಂಡಲ್ಲಿ ನಗುತಿರುವ ನುಡಿಯರಳು,
ಮೈಮರೆದು ಈಸಲದು ಸಿರಿ ನುಡಿಯ ಹಿರಿ ಹೊನಲು !

—ಜಗದಾಂಬ

——— :o: ———

ಎಸಳು-೭

# ಕವನ ಸಾಹಿತ್ಯ

[ದರ್ಶನ-೬]

ಅಕ್ಕನ ಲಾವಣಿ
ಚಂದ್ರಾವತಿ (ಖಂಡಕಾವ್ಯ)
ಹೊನ್ನುಹಕ್ಕಿ
ರನ್ನಚುಕ್ಕಿ
ಹೂಗೊನೆ
ಹಾಲ್ಕೆನೆ
ಹೂ ಬೊಗಸೆ
ನಿವೇದನ
ಗುರು ಗೀತಾಂಜಲಿ
ಭಾವ ಗೀತಾಂಜಲಿ
ಸಂವೇದನ

ಸನ್ನಿಧಿಯವರ ಕವನ ಸಾಹಿತ್ಯದಲ್ಲಿ ಲಯಬದ್ಧ ತಾಳಬದ್ಧ ಕವನಗಳಿದ್ದಂತೆ ನವ್ಯ ಕಾವ್ಯಗಳ ಶೈಲಿಯನ್ನೂ ಹೊಂದಿರುವ ಕವನ ಗಳಿವೆ. ಶೈಲಿಯೇನೇ ಇರಲಿ ಅವರ ಪ್ರತಿ ಯೊಂದು ಕವನದಲ್ಲೂ ಕಾವ್ಯ ಸೌಂದರ್ಯ, ಭಾವ ಮಾಧುರ್ಯ ತುಂಬಿ ತುಳುಕುತ್ತದೆ.

ಸನ್ನಿಧಿಯವರು ತಮ್ಮ ಕವನ ಸಂಗ್ರಹ ಗಳಿಗೆ ಹೆಸರಿಡುವುದೇ ಒಂದು ಬೆಡಗು. 'ಹೊನ್ನ ಹಕ್ಕಿ' 'ರನ್ನ ಚುಕ್ಕಿ'ಗಳು ಒಂದು ಗುಂಪಾದರೆ 'ಹೂಗೊನೆ' 'ಹಾಲ್ತೆನೆ' 'ಹೂ ಬೊಗಸೆ'ಗಳು ಮತ್ತೊಂದು ಗುಂಪು.

ಇತ್ತೀಚಿನ 'ನಿವೇದನ' ಮತ್ತು 'ಗುರು ಗೀತಾಂಜಲಿ'ಗಳು ಅನೇಕ ಕಾವ್ಯ ಪ್ರೇಮಿಗಳ ಮೆಚ್ಚುಗೆ ಗಳಿಸಿವೆ. 'ಸಂವೇದನ'ವೂ ಅಷ್ಟೇ ಅರ್ಥಪೂರ್ಣ.

ಇದುವರೆಗೂ ೫೦೦ಕ್ಕೂ ಹೆಚ್ಚು ಕವನ ಗಳನ್ನು ರಚಿಸಿ ಕಾವ್ಯ ಜೀವಿಗಳಿಗೆ, ಗಮಕಿ ಗಳಿಗೆ, ಭಾವಗೀತಾ ಪ್ರೇಮಿಗಳಿಗೆ ರಸದೌತಣ ನೀಡಿದ್ದಾರೆ ಶ್ರೀ ಸನ್ನಿಧಿಯವರು.

ಶ್ರೀಗಳವರು ತಮ್ಮ ಸಾಹಿತ್ಯ ಕೃಷಿಯ ಆರಂಭದ ದಿನಗಳಲ್ಲೇ ಬರೆದ 'ಅಕ್ಕನ ಲಾವಣಿ' ಹತ್ತಾರು ಬಾರಿ ಮುದ್ರಣ ಕಂಡು ಕನ್ನಡ ನಾಡಿನ ಮನೆ ಮನೆಯ ಮಕ್ಕಳ ಮತ್ತು ಮಹಿ ಳೆಯರ ನಾಲಗೆಯ ಮೇಲೆ ನಲಿದಾಡುತ್ತಿದೆ.

ಶ್ರೀ ಸನ್ನಿಧಿಯವರ ಕವನಗಳು ಭಾವುಕ ರಿಗೆ ಭಕ್ತಿಯನ್ನು, ಉತ್ಸಾಹಿಗಳಿಗೆ ಸ್ಫೂರ್ತಿ ಯನ್ನು, ಸಾಧಕರಿಗೆ ಸಿದ್ಧಿಯನ್ನು ಕೊಡುವ ಅಮೃತ ಬಿಂದುಗಳು ಅವುಗಳನ್ನು ರಚಿಸಿ ಶ್ರೀ ಸನ್ನಿಧಿಯವರು ಕಾವ್ಯರ್ಷಿಗಳಾಗಿದ್ದಾರೆ!

# ಚಂದ್ರಾವತಿ-ಸೌಂದರ್ಯದರ್ಶನ.

ಟಿ. ಕೇಶವಭಟ್ಟ, ಎಂ. ಎ.,
ಬೆಂಗಳೂರು

ಕನ್ನಡದ ಸಾಹಿತ್ಯೋದ್ಯಾನ ನಿರಂತರ ಪ್ರವರ್ಧಮಾನವಾಗಿ ಬಂದಿದೆ. ಶಬ್ದ-ಅರ್ಥ-ಭಾವ ಲಕ್ಷಣಾದಿಯಿಂದ ಕೂಡಿದ ಕಾವ್ಯನಾಟಕಾದಿ ರಸ್ಯ ವಿಷಯಗಳೇ ಇಲ್ಲಿ ಫಲಪುಷ್ಪಸಂಪತ್ತುಗಳು. ಉದ್ಯಾನದಲ್ಲಿರುವ ಮರಗಿಡಬಳ್ಳಿ, ನನೆಕೊನೆ, ಹೂ ಮಿಡಿ ಕಾಯಿ ಹಣ್ಣುಗಳು ಕೇವಲ ಸಸ್ಯಸಂಪತ್ತುಗಳು ; ಅವು ಋತುಮಾನಕ್ಕೆ ತಕ್ಕಂತೆ ಒಂದೆಡೆ ಹೊಸಹೊಸತಾಗಿ ಕಾಣುವಂತೆ ಇನ್ನೊಂದೆಡೆ ಹಳತಾಗಿ ಬೀಳುತ್ತವೆ. ಆದರೆ ಸಾಹಿತ್ಯೋದ್ಯಾನದ ಉತ್ಪನ್ನಗಳು ಸತ್ಫಲ ಪುಷ್ಪಗಳು—ಶಾಶ್ವತವಾದುವು. ಇಲ್ಲಿ ಮುಗುಳು ಮುಗುಳೇ ; ಅರಳಿದ ಹೂ ಯಾವಾಗಲೂ ಅರಳಿದ್ದು ಮಗಮಗಿಸುವುದು ; ಮುಸುಕಾಗದು, ಬಾಡದು. ಆಯ್ದು ಕೊಯ್ದಂತೆ ಅಕ್ಷಯವೆನಿಸುವುದು ; ಋಧಾಳಿ ಬಂದು ಕುಡಿದು ಬತ್ತಿಹೋಗದ ಮಕರಂದವನ್ನುಳ್ಳುದು. ಇದರ ಎಸಳು ಹಳತಾಗದು, ಉದುರದು, ಹುಳುಕೊರೆಯದು. ಹೊಸ ಹೂಗಳು ಅರಳಿದಂತೆ ಸಂಖ್ಯಾಭಿವೃದ್ಧಿ, ಸುವಾಸನೆಯ ಸಮೃದ್ಧಿ, ಆನಂದ ಸಿದ್ಧಿ. ಇಂತಹ ಭವ್ಯ ಸಾಹಿತ್ಯೋದ್ಯಾನದ ಸುಮನೋರಾಜಿಯಲ್ಲಿ ಒಂದೆನಿಸಿದೆ—ಈ ಸ್ವಚ್ಛಕಳೆಯ ಅಚ್ಚಬಿಳಿಯ ಆರೆಸಳ ಚೆಲ್ವ ಮಲ್ಲಿಗೆ ಹೂ "ಚಂದ್ರಾವತಿ" ಎಂಬ ಖಂಡಕಾವ್ಯ.

ಈ ಕಾವ್ಯದ ವಸ್ತು ಚಿಕ್ಕದು. ಆದರೂ ಚೊಕ್ಕದಾಗಿ ಪುಣ್ಯ-ಭಕ್ತಿ-ನೀತಿ ಕಮನೀಯತೆಗಳ ತ್ರಿವಿಕ್ರಮಕ್ಕೆ ವಾಮನಸ್ವರೂಪವಾಗಿದೆ. ಶ್ರೀಶೈಲದ ಶ್ರೀ ಮಲ್ಲಿಕಾರ್ಜುನಲಿಂಗ ಪ್ರತಿಷ್ಠಾಪನೆಯ ಪುಣ್ಯಕರ ಆಖ್ಯಾಯಿಕೆ ಇದರ ಕಥಾವಸ್ತು. ಮಲ್ಲಿಕಾರ್ಜುನಲಿಂಗಕ್ಕೆ ಅನುಪೂರ್ವಿಕೆಯಾಗಿ ಶ್ರೀಶೈಲಲಿಂಗ, ಪರ್ವತಲಿಂಗ, ಎಂಬಿವು ಹೆಸರುಗಳು. ಶಿಲಾದಮುನಿಯ ಪುತ್ರನಾದ ಪರ್ವತನು ಮಾಡಿದ ತಪದಿಂದ 'ಪರ್ವತಲಿಂಗ'ವೆಂದೂ 'ವಸುಮತಿ' ಎಂಬ ಋಷಿಕನ್ಯೆ ಈ ಸ್ಥಳದಲ್ಲೇ ಶಿವನ

ನ್ನೊಲಿಸಿದುದರಿಂದ "ಶ್ರೀಶೈಲ ಲಿಂಗ" ಎಂದೂ ಹೆಸರಾದ ಪೂರ್ವಕಥಾಸೂಚಿ ಈ ಕಾವ್ಯದಲ್ಲಿದೆ. ಇದೇ ಲಿಂಗಕ್ಕೆ ಲೋಕಸ್ತುತವಾಗಿ "ಮಲ್ಲಿಕಾರ್ಜುನಲಿಂಗ" ಎಂಬ ಅಭಿಧಾನ ಪಾತ್ರತೆಗೆ ಕಾರಣಳು ಈ ಕಾವ್ಯಕಥೆಯೊಡನೆ ಬರುವ ಸುಗುಣವತಿ, ಭಕ್ತಿವತಿ "ಚಂದ್ರಾವತಿ". ಆಕೆಯದೇ ಇಲ್ಲಿ ಕಾವ್ಯಾಭಿಧಾನ.

ಚಂದ್ರಾವತಿಯ ಜನಕನು ಶ್ರೀಶೈಲಪ್ರಾಂತವನ್ನಾಳುತ್ತಿದ್ದ ಮಹಾರಾಜಾ ಚಂದ್ರಗುಪ್ತನು. ಇವನು ಶಿವಭಕ್ತನು, ಪೀರಚರಿತನು, ಸಾರಭರಿತನು, ನೀತಿನಿರತನು. ಶ್ರೀಶೈಲದ ಸೂರ್ಯಸಿಂಹಾಸನದ ಜಗದ್ಗುರುಗಳ ಶಿಷ್ಯನು. ಸತ್ಯವಂತ, ನ್ಯಾಯಶಾಲಿ ಗೋಭಕ್ತನು. ಚಂದ್ರಗುಪ್ತನು ತನ್ನ ಗೋವುಗಳ ರಕ್ಷಣೆಗೆ ಗೋಪಾಲನೋರ್ವನನ್ನು ನೇಮಿಸಿದ್ದನು. ಒಂದು ದಿನ ರಾಜನ ಗೋವೃಂದದಲ್ಲಿ ಕರೆವ ಹಸುವೊಂದು ಬೆಟ್ಟದಿಂದ ಬಂದಿರಲಿಲ್ಲ. ಗೋಪಾಲಕನು ಮರುದಿನ ತಾನೇ ಎಚ್ಚರಿಕೆ ವಹಿಸಿ ಪರೀಕ್ಷಿಸಲು ಅದೇ ಹಸು ಶ್ರೀಶೈಲದ ಒಂದು ಶಿವಲಿಂಗದ ಮೇಲೆ ಸ್ವತಃ ಕ್ಷೀರಾಭಿಷೇಕ ಮಾಡುತ್ತಿತ್ತು. ಈ ವಾರ್ತೆಯನ್ನು ಗೋಪಾಲಕನು ಚಂದ್ರಗುಪ್ತನಿಗೆ ತಿಳಿಸಿದನು. ಇದನ್ನು ಕೇಳಿದ ಸಹಜ ಶಿವಶರಣೆ ಚಂದ್ರಾವತಿ ಶಿವಲಿಂಗದರ್ಶನೋತ್ಕಂಠೆಯಾದಳು.

ಮರುಮುಂಜಾನೆ ಚಂದ್ರಗುಪ್ತನೂ ಚಂದ್ರಾವತಿಯೂ ಶ್ರೀಶೈಲಕ್ಕೆ ಬಂದು ಅದೇ ಶಿವಲಿಂಗವನ್ನು ಮಲ್ಲಿಕಾಪುಷ್ಪಗಳಿಂದ ಅರ್ಚಿಸಿದರು. ಚಂದ್ರಾವತಿ ಭಕ್ತಿಪರವಶೆಯಾಗಿ ಶಿವಲಿಂಗೋಪಾಸನೆಯನ್ನು ಕೈಕೊಂಡು ನಿತ್ಯವೂ ಮಲ್ಲಿಗೆ ಹೂಗಳಿಂದ ಅರ್ಚಿಸುತ್ತ ಹಲವು ವರ್ಷಗಳನ್ನೇ ಕಳೆದಳು. ಒಮ್ಮೆ ಶಿವರಾತ್ರಿಯಂದು ಆಕೆಯ ಅನನ್ಯಭಕ್ತಿಗೆ ಮೆಚ್ಚಿ ಶ್ರೀ ಶಿವನು ಸ್ವಸ್ವರೂಪವನ್ನು ಮರೆಮಾಡಿ ಸುಂದರ ತರುಣನಾಗಿ ಬಳಿಗೆ ಬಂದನು. ಚಂದ್ರಾವತಿಗೆ ದಾಂಪತ್ಯಜೀವನವನ್ನು ಸ್ವೀಕರಿಸಲು ಪ್ರೇರಿಸುತ್ತ ಮಲ್ಲಿಗೆ ಹೂಗಳನ್ನು ಕಲ್ಲಿಗೆ ಇಡುವುದಕ್ಕಿಂತ ಸಿರಿಮುಡಿಯಲ್ಲಿ ಧರಿಸುವುದೇ ಸಾರ್ಥಕವೆಂದು ಹೇಳಲು, ಆಕೆ ಸಿಟ್ಟಾಗಿ ಆ ತರುಣನನ್ನು ಜರೆದಳು. ಕೊನೆಗೆ ತರುಣನು ಶಿವಸ್ವರೂಪನಾಗಿ ವರಗಳನ್ನು ಬೇಡು ಎನ್ನಲು ಚಂದ್ರಾವತಿ ಹೀಗೆನ್ನುವಳು— "ಶಿವರಾತ್ರಿಯಿಂದ ಚೈತ್ರ ಪೌರ್ಣಮಿಯವರೆಗೆ ಪರ್ವತಲಿಂಗದಲ್ಲಿ ನೆಲಸಿ, ಭಕ್ತರಿಗೆ ಪುಣ್ಯ ಸೌಖ್ಯಗಳನಿತ್ತು ಕಾಪಾಡು. ಮಲ್ಲಿಗೆ ಹೂಗಳಿಂದ ಅರ್ಚಿಸಿದ ಪರಿಣಾಮವಾಗಿ ಮಲ್ಲಿಕಾರ್ಜುನನೆಂಬ ಹೆಸರನ್ನು ತಾಳು". ಶಿವನು ಆಕೆಯ ಇಷ್ಟವನ್ನು ಸಲ್ಲಿಸಿದನು. ಮುಂದೆ ಚಂದ್ರಾವತಿಯು ಭ್ರಮರಾಂಬೆಯ ಕೈಂಕರ್ಯವೊಂದನ್ನೇ ಜೀವನದ ಧ್ಯೇಯವಾಗಿಟ್ಟು, ಶ್ರೇಷ್ಠಭಕ್ತೆಯಾಗಿ ಸ್ತ್ರೀಲೋಕಕ್ಕೆ ಆದರ್ಶಳಾಗಿ ಬಾಳಿ ಮುಕ್ತಳಾದಳು ; ಮುಂದಿನ ಋಷಿಮುನಿ ಶರಣಶರಣೆಯರಿಗೆ ಪರಮ ಪುಣ್ಯಸ್ಥಾನವೆನಿಸಿದ ಶ್ರೀಶೈಲದ ಶ್ರೀ ಮಲ್ಲಿಕಾರ್ಜುನಲಿಂಗದ ಮಹಿಮೆಯ ಸಂಸ್ಥಾಪಕಳಾಗಿ ಕೀರ್ತಿಶರೀರೆಯಾದಳು – ಇದಿಷ್ಟು ಕಥಾವಸ್ತು.

ಇದೇ ಶ್ರೀ ಶೈಲ ಮಲ್ಲಿಕಾರ್ಜುನ ದೇವರನ್ನು ಶ್ರೀಶೈಲವಾಸೀ ವಿಭುವೆಂತಲೂ ಅದ್ರಿನಿಲಯನೆಂತಲೂ ಶ್ರೀ ಗಿರಿ ಮಲ್ಲಿಕಾರ್ಜುನನೆಂತಲೂ ಸಂಬೋಧಿಸಿ ಶ್ರೀ ಶಂಕರ ಭಗವತ್ಪಾದರು ತಮ್ಮ "ಶಿವಾನಂದಲಹರಿ" ಎಂಬ ಭಕ್ತಿಸ್ತೋತ್ರದಲ್ಲಿ ಮೂರು ವೃತ್ತ ಗಳಲ್ಲಿ ಚಿತ್ರಿಸಿ ಸ್ತುತಿ ಮಾಡಿದ್ದಾರೆ. ಅವುಗಳಲ್ಲಿ ಶ್ಲೇಷರೂಪಕದ ಒಂದು ವೃತ್ತವಿದು–

ಸಂಧ್ಯಾರಂಭವಿಜೃಂಭಿತಂ ಶ್ರುತಿಶಿರಸ್ಥಾನಾಂತರಾಧಿಷ್ಠಿತಂ
ಸಪ್ರೇಮ ಭ್ರಮರಾಭಿರಾಮಮಸಕೃತ್ ಸದ್ವಾಸನಾ ಶೋಭಿತಂ
ಭೋಗೀಂದ್ರಾಭರಣಂ ಸಮಸ್ತ ಸುಮನಃ ಪೂಜ್ಯಂ ಗುಣಾವಿಷ್ಕೃತಂ
ಸೇವೇ ಶ್ರೀ ಗಿರಿಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಂ ||

ಇದೇ ಶ್ರೀ ಶೈಲದ ಮೂಲದಲ್ಲಿಯೇ ಶ್ರೀ ಸೂರ್ಯಸಿಂಹಾಸನದ ಜಗದ್ಗುರು ಪೀಠವು ನೆಲೆವಡೆದು ಶ್ರೀವೀರಶೈವಮತದ ಉದ್ಧಾರವಾಗಿದೆ. ಈ ಜಗದ್ಗುರು ಪರಂಪರೆ ಯಲ್ಲಿ ಬಂದ ಸಾರಸ್ವತ ತಪೋಧನರೂ "ಅಭಿನವ ಪಂಡಿತಾಚಾರ್ಯ" ಬಿರುದಾಂಕಿತರೂ ಆಗಿರುವ ಶ್ರೀ ಜ. ಚ. ನಿ. ಶ್ರೀಗಳವರು ಸ್ವತಃ ಶ್ರೀ ಭವಾನೀದೇವಿಯ ಸಂಸ್ತುತಿ ಪೂರ್ವಕ ಭಕ್ತಿಭಾವದಿಂದ ರಚಿಸಿ ಅರ್ಪಿಸಿದ ಆರೆಸಳ ಮಲ್ಲಿಗೆಯಿದು 'ಚಂದ್ರಾವತಿ' ಕಾವ್ಯ. ಚಂದ್ರಾವತಿಯು ಶಿವನಿಗೆ ಅರ್ಪಿಸಿದ ಮಲ್ಲಿಗೆಯಂತೆ, ಶ್ರೀ ಮಲ್ಲಿಕಾರ್ಜುನ ದೇವರ ಪ್ರಸಾದರೂಪದಂತೆ, ಶ್ರೀ ಶಿವನ ಜಟಾ ಜೂಟದಿಂದಿಳಿದು ಬಂದ ಸುರತಟಿ ನಿಯಂತೆ ಇದು ಪಾವನವೆನಿಸುವುದರಲ್ಲಿ ಅಚ್ಚರಿಯಿಲ್ಲ.

ಈ ಕಾವ್ಯವಸ್ತುವಿನ ಮೂಲವು ಪಾಲ್ಕುರಿಕೆ ಸೋಮನಾಥನ (ಕ್ರಿ. ಶ. ೧೨೦೦) ಪಂಡಿತಾರಾಧ್ಯ ಚರಿತ್ರಾಂತರ್ಗತವಾಗಿದೆಯೆಂದೂ ಆದ್ದರಿಂದ ಇದು ಕಾಲ್ಪನಿಕ ಕಥೆಯಲ್ಲ, ಕಟ್ಟು ಕಥೆಯಲ್ಲವೆಂದೂ ಪೂಜ್ಯ ಕವಿವರ್ಯರೆಂದಿದ್ದಾರೆ.

ಇದರಲ್ಲಿ ಚಂದ್ರಾವತಿಯ ನಿಚ್ಚಟದ ಭಕ್ತಿಯನ್ನು ಶಿವನು ಕಪಟ ಯುವಕ ವೇಶದಿಂದ ಬಂದು ಕೆಣಕಿ ಪರೀಕ್ಷಿಸುವ ಕಥಾಂಶವು ಗಿರಿಜಾಕಲ್ಯಾಣದ ಕಥಾಭಾಗ ವನ್ನು ಹೋಲುತ್ತಿದೆ. ಅಲ್ಲಿ ಶಿವನು ಕಪಟವಟುವಾಗಿ ತಪಸ್ವಿನೀ ಪಾರ್ವತಿಯ ಬಳಿಗೆ ಬಂದು ಶಿವನಿಂದಾತ್ಮಕವಾದ ಚುಚ್ಚುಮಾತುಗಳನ್ನಾಡಿ, ಕೊನೆಗೆ ಆಕೆಯ ಮನಃಸ್ಥೈರ್ಯದ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಇಷ್ಟಾರ್ಥವನ್ನು ಕೊಡುವನು. ಆ ಛಾಯೆ ಇಲ್ಲಿದೆ. ವರ್ಣನೆಯಲ್ಲಿಯೂ ಕೆಲವೆಡೆ ಪೂರ್ವಕವಿಗಳ ಪ್ರಭಾವವು ಇಣು ಕಿದೆ. ಈ ಕಾವ್ಯಕುಸುಮದಲ್ಲಿ ಪ್ರಾರ್ಥನೆಗೇ ಮೀಸಲಾದ ಮೊದಲನೆಯ ಎಸಳಿನಲ್ಲಿ ಜಗಜ್ಜನನಿ ಭವಾನಿಯ ಸ್ತುತಿಯ ಪಂಕ್ತಿಗಳಿವು —

ಸರಸತಿಗೆ ವಾಣಿಶಕ್ತಿಯನಿತ್ತವಳ್ ನೀನೆ
ಹರಿಸತಿಗೆ ಲಕ್ಷ್ಮಿಶಕ್ತಿಯನಿತ್ತವಳ್ ನೀನೆ
ಸ್ಮರಸತಿಗೆ ರೂಪಶಕ್ತಿಯನಿತ್ತವಳ್ ನೀನೆ
ಸುರಶಚಿಗೆ ಕ್ಷಾತ್ರಶಕ್ತಿಯನಿತ್ತವಳ್ ನೀನೆ

ಈ ಅಭಿವ್ಯಕ್ತಿ "ಶ್ರೀಪತಿಗೆ ಸೊಬಗಂ, ಉಡುಪತಿಗೆ ಶಾಂತಿಯನು, ವಾಣೀ ಪತಿಗೆ ಚಾತುರ್ಯಮಂ ........" ಇತ್ಯಾದಿಯಾಗಿ ಕೊಟ್ಟವನೆಂದು ಪಂಪಾ ವಿರೂಪಾಕ್ಷ ನನ್ನು ಕಾವ್ಯಾರಂಭದಲ್ಲಿ ಸ್ತುತಿಸಿರುವ ಕವಿ ರಾಘವಾಂಕನ ಭಾವಾನುಸರಣದಂತಿದೆ. ಚಂದ್ರಾವತಿಯು ಭಕ್ತಿ ಬಾವದಲ್ಲಿ ಮುಳುಗಿ ಗಿಡಬಳ್ಳಿಗಳೊಡನೆ "ನಿಮ್ಮಲ್ಲಿ ಕೆಂಜೆಡೆಯ ಎನ್ನೊಡೆಯ ಬಂದಿಹನೆ ಪೇಳಿರೇ" ಎನ್ನುವಲ್ಲಿ ಅಕ್ಕಮಹಾದೇವಿಯು "ಚಿಲಿಮಿಲಿಯೆಂ ದೋದುವ ಗಿಳಿಗಳಿರಾ ನೀವು ಕಂಡಿರೇ" ಎಂದು ಚೆನ್ನಮಲ್ಲಿಕಾರ್ಜುನನಿಗಾಗಿ ಹಾತೊರೆಯುವ ಭಾವಚ್ಛಾಯೆ ಕಾಣಿಸಿದೆ. ಹೀಗೆ ಒಂದೊಂದೆಡೆ ಪೂರ್ವಪರಿಚಿತ ವಾದ ಅರ್ಥಗಳೇ ಬಂದರೂ ಸನ್ನಿವೇಶಾನುಗುಣವಾದ ರಸಸಂಪರ್ಕದಿಂದ ಇಲ್ಲಿ ಇವು ಹೊಸತಾಗಿ ಕಾಣುತ್ತವೆ – ವಸಂತಕಾಲದ ವೃಕ್ಷಗಳಂತೆ !

ದೃಷ್ಟಪೂರ್ವಾ ಅಪಿಹ್ಯರ್ಥಾಃ ಕಾವ್ಯೇ ರಸಪರಿಗ್ರಹಾತ್
ಸರ್ವೇ ನವಾ ಇವಾ ಭಾಂತಿ ಮಧು ಮಾಸ ಇವದ್ರುಮಾಃ

ಎಂಬ ಧ್ವನ್ಯಾಲೋಕದ ಉಕ್ತಿ ಇಲ್ಲಿಗೆ ಅನ್ವಯಿಸುತ್ತದೆ.

ಕಾವ್ಯಕ್ಕೆ ಶೋಭಾಕರಧರ್ಮವೆನಿಸುವ ಅಲಂಕಾರಗಳಿಂದ ಕೂಡಿದ ಪ್ರಕೃತಿ ವರ್ಣನೆ ಈ ಚಿಕ್ಕ ಕಾವ್ಯದಲ್ಲಿ ಸುಂದರವಾಗಿ ಬಂದಿರುವುದು ನಮ್ಮ ಅವಲೋಕನಕ್ಕೆ ಹೊಳೆಯುತ್ತದೆ. ಇಲ್ಲಿ ಎರಡನೆಯ ಎಸಳು ಶ್ರೀಶೈಲದ ವರ್ಣನೆ. ಶ್ರೀ ಶೈಲದಲ್ಲಿ ನಳನಳಿಸಿ ಬೆಳೆದ ಮರಗಳು ಕವಿ ಮಾಂತ್ರಿಕತೆಯಿಂದ ಜಂಗಮಗಳೇ ಆಗಿವೆ—

"........ಚಿಗುರೆಲೆಯುಟ್ಟು, ಮೇಣ್‌ಕೆಲಂ
ನೆರಹೊನ್ನಿನೋಲ್ ಹೊಳೆವ ಹಣ್ಣೆಲೆಯುಡಿಗೆಯುಟ್ಟು
ಭಾಳದೊಳ್ ಪುಷ್ಪಚಯಮೆಂತೆಂಬ ಪರಿಶುಭ್ರ
ಭಸಿತವಿಟ್ಟು ತೊಳಗುವ ತ್ರಿಪುಟಿಯೊಳ್ ತಿಲಕದಂ
ತಿಸೆದಿರ್ಪ ಭೃಂಗದಾ ಬಟ್ಟಿಟ್ಟು, ಕಪ್ಪಾದ
ಹಕ್ಕಿಹಿಂಡುಗಳ ಜಡೆಮುಡಿಗಟ್ಟಿ, ಝೇಂಕಾರ
ದೋಂಕಾರ ಜಪಂಗೆಯ್ಯುತ್ತ ಪುಷ್ಪಪರಾಗ
ಭಸ್ಮಾಂಗದಿಂದೊಸೆದು ಕೈಲಾಸಕ್ಕೈತರುವ
ತವಸಿಗಳ ತಿಂತಿಣಿಯ ತೆರದಂತೆ ತೋರುವುದು"

ಈ ಶ್ರೀಶೈಲ ವರ್ಣನೆಯಲ್ಲಿ ದೃಶ್ಯ ಸೌಂದರ್ಯ ಮಾತ್ರವಲ್ಲ, ಭಾವಸೌಂದರ್ಯ ಮಹಿಮಾ ಸೌಂದರ್ಯಗಳು ಅಡಕವಾಗಿವೆ.

ಪ್ರಕೃತಿವರ್ಣನೆ ಪ್ರಭಾತವರ್ಣನೆಗಳಂತೆ ವ್ಯಕ್ತಿಜೀವನ ವರ್ಣನೆಯಲ್ಲಿಯೂ ವರ್ಣನಾ ಕ್ರಮದಲ್ಲಿಯೂ ಕೃತಿರಚನೆಯು ಹಿರಿಮೆಯಿದೆ. ಚಂದ್ರಾವತಿಯ ಜನನದ

ಸಂದರ್ಭದಲ್ಲಿ ಪೂರ್ವಕವಿಕೃತಿಗಳಂತೆ ತಾಯಿಗೆ ಮಕ್ಕಳ ಬಯಕೆ, ಗರ್ಭದಾರಣೆ, ದೋಹದ, ಪ್ರಸವ, ನಾಮಕರಣ–ಮುಂತಾದ ಸಾಂಪ್ರದಾಯಿಕ ವರ್ಣನಾಕ್ರಮ ದಿಂದ ಗ್ರಂಥವಿಸ್ತರಣದ ಗೋಜಿ ಇಲ್ಲಿಲ್ಲ. ಚಂದ್ರಾವತಿ ಓರ್ವ ಕಾರಣ ಕನ್ಯೆ. 'ಚಂದ್ರನಲ್ಲಿ ಚಂದ್ರಿಕೆ ಸಿಂಧುವಿನಲ್ಲಿ ಮುತ್ತು' ಸಹಜವಾಗಿ ಜನಿಸುವಂತೆ ಗುಪ್ತ ವಂಶವನ್ನು ವ್ಯಕ್ತವಂಶವನ್ನಾಗಿಸಲು ರಾಜವಂಶವನ್ನು ಋಷಿವಂಶವನ್ನಾಗಿಸಲು ಈಕೆ ಹುಟ್ಟಿದಳು. ಅವಳ ಪೆಂಪು, ರೀತಿ, ನೀತಿ, ಗಾಡಿ, ಮೋಡಿ, ನಡತೆ—ಎಲ್ಲವೂ ಅನ್ಯಾದೃಶ. ಶಿವಭಕ್ತಿಪರಾಯಣೆಯಾದ ಆಕೆಯ ಭಕ್ತಿಯ ರೂಪಕವಿದು —

> ಹೃದಯದಾ ಭೂಮಿಯೊಳ್ ಭಕ್ತಿರಸವನೆರೆದು
> ಹದವಾಗಿ ಪಂಚಾಕ್ಷರಿಯ ಬೀಜವದು ಮೊಳೆಯೆ
> ಬುದ್ಧಿಯೊಳ್ ಸುಜ್ಞಾನ ಪುಷ್ಪವದು ನನೆ ಬಿರಿಯೆ
> ಸದ್ಭಾವದೊಳನುಭಾವದಾ ನರುಗಂಪುಗಿಯೆ
> ಜೀವಿಪಳ್ ಹರಕರುಣೆಯ ಫಲಮಂ ಪಡೆದು
> ಸೇವಿಪಳ್ ವರಮುಕ್ತಿಯ ರಸಮಂ ನಲಿದು"

ಈ ಕಾವ್ಯ ಕುಸುಮದ ನಾಲ್ಕನೆ ಎಸಳಿನಲ್ಲಿ ಗೋಧನದ ವಿಸ್ತೃತ ವರ್ಣನೆ ನಮ್ಮ ಮನಸ್ಸನ್ನು ಇನ್ನೊಂದು ಪವಿತ್ರ ಭಾವನೆಯ ಕಡೆಗೆ ಸೆಳೆಯುತ್ತಿದೆ. ಗೋವಿ ನಂತಹ ಪವಿತ್ರಜೀವಿ ಇನ್ನೊಂದಿಲ್ಲ. ಈ ಪವಿತ್ರತೆ ಕೇವಲ ಭಾವನಾತ್ಮಕವಲ್ಲ; ವೈಜ್ಞಾ ನಿಕವೂ ವ್ಯಾವಹಾರಿಕವೂ ಆಗಿದೆ. ಈ ಹಸು ತಾಯ ಮೇಲ್ಮೆಯನ್ನು ಓದಿದಂತೆಲ್ಲ ಗೋಮಾಹಾತ್ಮ್ಯದ ಕಥೆಗಳು ಕಣ್ಣಿಗೆ ಕಟ್ಟುತ್ತವೆ. ಸಂಸ್ಕೃತದ ಪದ್ಮ ಪುರಾಣದಲ್ಲಿ ಬರುವ ಸರಸ್ವತೀ ನದಿಯ ಮಾಹಾತ್ಮ್ಯದಲ್ಲಿರುವ ವ್ಯಾಘ್ರ–ಗೋಸಂವಾದ, ಇತಿಹಾಸ ಸಮುಚ್ಚಯ ಗ್ರಂಥದ ಬಹುಲೋಪಾಖ್ಯಾನದಲ್ಲಿರುವ ಬಹುಲಾ-ಕಾಮರೂಪೀಸಂವಾದ ಹಾಗೂ ಕನ್ನಡದ ಅಜ್ಞಾತ ಜನಪದ ಕವಿಯೋರ್ವನು ರಚಿಸಿರುವ 'ಗೋವಿನ ಹಾಡು' ಇವುಗಳಲ್ಲೆಲ್ಲ ಬರುವ ಗೋಮಾಹಾತ್ಮೆಯ ಅಂಶಗಳು ಇಲ್ಲಿ ಸ್ಫುರಿಸಿಕೊಂಡಂತೆ ತೋರುತ್ತವೆ. ಗೋವು ಎಂಬ ಹೆಸರು ಬಂದಲ್ಲೆಲ್ಲ ಶ್ರೇಷ್ಠತೆ, ಪವಿತ್ರತೆ, ಪುಣ್ಯಗಳು ಹಾಸುಹೊಕ್ಕಾಗಿವೆಯೆಂಬುದು ಈ ಚಂದ್ರಾವತೀ ಕಾವ್ಯದ 'ಗೋಧನ' ಎಂಬ ಅಧ್ಯಾಯದಲ್ಲಿ ಬರುತ್ತದೆ. ಕೊನೆಗೆ ಸಾರಭೂತವಾಗಿ ಹೇಳಿದುದಿದು —

> ಧೇನುವಿಂ ವ್ಯಕ್ತಿಯುನ್ನತಿ ದೇಶದುನ್ನತಿ
> ಧೇನುವಿಂ ವಿಶ್ವದುನ್ನತಿ ಶಾಶ್ವತದುನ್ನತಿ
> ಧೇನುವಿಂ ಸಕಲ ಮಾನುಷವರ್ಗಕೆ ಸದ್ಗತಿ
> ಧೇನುವಿಂ ಪ್ರಕೃತಿ ಪ್ರಗತಿ ಮತಿಮಹೋನ್ನತಿ"

ಸತ್ಕವಿಕೃತಿಗಳು ಸತ್ಪ್ರೇರಣೆಯಿಂದಲೇ ರಚಿತವಾಗುತ್ತವೆ. ಮಾನವ ಜನಾಂಗಕ್ಕೆ ಉಪಾದೇಯವೆನಿಸುವ ತತ್ವನಿರೂಪಣ ಸನ್ಮಾರ್ಗದರ್ಶನಗಳೇ ಅಂತಹ ಪ್ರೇರಣೆಯೆನ್ನಬಹುದು. ಆದುದರಿಂದಲೇ ಶ್ರೇಷ್ಠ ಕೃತಿಗಳಲ್ಲಿ ಕಾವ್ಯಧರ್ಮಕ್ಕೂ ಧರ್ಮಕ್ಕೂ ಆಸರೆಯಿರುತ್ತದೆ. ಅಮಂಗಲಪರಿಹಾರ, ಆನಂದ, ಉಪದೇಶ-ಎಂಬುವನ್ನು ಲಾಕ್ಷಣಿಕವಾಗಿ ಅಭಿವ್ಯಕ್ತಗೊಳಿಸುವ ಅಂತಃಪ್ರೇರಣೆಯಿಂದ ಸತ್ಕವಿಗಳು ತಮ್ಮ ಕೃತಿಗಳಲ್ಲಿ ಲೋಕೋತ್ತರವೆನಿಸುವ ಪಾತ್ರಗಳ ನಡೆನುಡಿಗಳಿಂದ ನುಡಿಯುವರು. ಪ್ರಸ್ತುತ ಕೃತಿಯಲ್ಲಿ ಚಂದ್ರಾವತಿ ನುಡಿದ ಕೆಲವು ಉಕ್ತಿಗಳು ಅಂಥವೆಂದು ಹೇಳಬಹುದು —

"ಕೆಡುವ ಕಡು ನೋಪಿಗೆಡೆಯಪ್ಪ ಮೈ ಚೆಲುವಿಂಗೆ
ಕೆಡದಿರ್ಪ ಭಾವದಾ ಚೆಲುವು ಮಿಗಿಲಲ್ಲವೇಂ"
"ಮೃತ್ಯುವಿಗೆ ತುತ್ತಾಗುವೀ ದುಃಖ ಜೀವನಕೆ
ಮೃತ್ಯುಂಜಯನೊಲುಮೆಯಾ ಬಾಳು ಮಿಗಿಲಕ್ಕೆ"
"ಸಲ್ಲದಿದು ದೇವನಂ ಕಲ್ಲೆಂದು ಪೇಳುವರೆ"
"ತರವಲ್ಲ ಪರಪುರುಷನೊಡನಾಟ ಸ್ತ್ರೀಯರ್ಗೆ"

ಚಂದ್ರಾವತಿಯು ಭಕ್ತಿಯಿಂದ ಶಿವನನ್ನೊಲಿಸಿ ಆತನಲ್ಲಿ ಭೌತಿಕ ಭಾಗ್ಯವನ್ನಾಗಲೀ ಕೈಲಾಸವನ್ನಾಗಲೀ ಕೇಳಲಿಲ್ಲ. ತಾನೊಬ್ಬಳು ಸುಖಪಡಬಹುದಾದ ಸ್ವಾರ್ಥಕ್ಕೆ ಬಲಿಯಾಗದೆ ಲೋಕಕ್ಕೆ ಸೌಖ್ಯಾವಹವಾಗುವಂಥ ವರ ಬೇಡಿದಳು. ಇದು ಆ ಶಿವಶರಣೆಯ ಆದರ್ಶ ಗುಣ; ಕೃತಿಕಾರರು ಮೆಚ್ಚಿ ತಿಳಿಸಿದ ಜೀವನ ತತ್ವದ ಅಮೃತ ಕಣ !

ಚಂದ್ರಾವತೀ ಕಾವ್ಯದ ಕುರಿತು ಇಷ್ಟನ್ನು ವಿವೇಚಿಸಿದ ಮೇಲೆ ಇದರ ಛಂದೋವಿಷಯವನ್ನೂ ಒಂದಿಷ್ಟು ಪ್ರಸ್ತಾಪಿಸದಿರಲು ಸಾಧ್ಯವಿಲ್ಲ. ಈ ಕಾವ್ಯದ ಛಂದಸ್ಸು "ಲಲಿತರಗಳೆ" ಎಂದಿದೆ ಕವಿವಾಣಿ ! ಪ್ರತಿಯೊಂದು ಪಾದದಲ್ಲಿ ಐದು ಮಾತ್ರೆಗಳ ನಾಲ್ಕು ಗಣಗಳು ಲಲಿತದ ಸಾಮಾನ್ಯ ಲಕ್ಷಣ. ಈ ಲಕ್ಷಣವು ಇಲ್ಲಿ ಹೆಚ್ಚಿನ ಪಾದಗಳಲ್ಲಿ ಅಸ್ತಿತವಾಗುವುದಾದರೂ ಕೆಲವೆಡೆ ಪಾದಗಳ ಒಟ್ಟು ಮಾತ್ರೆಗಳ ಸಂಖ್ಯೆಯಲ್ಲಿ ಮಾತ್ರ ಈ ಲಕ್ಷಣವಿದೆ. ಕನ್ನಡದ ದೇಶೀಯ ಛಂದದಂತೆ ಕೆಲವೆಡೆ ಅಕ್ಷರಗಳನ್ನು ಸಂಕ್ಷೇಪಿಸಿ ಅಥವಾ ವಿಕ್ಷೇಪಿಸಿ ಉಚ್ಚಾರಣೆ ಮಾಡಿ ಮಾತ್ರೆಗಳನ್ನು ಸಮಗೊಳಿಸಬೇಕಾಗಿ ಬರುವ ಪ್ರಮೇಯಗಳೂ ಇವೆ. ಇದರಿಂದ ಕವಿಗಳು ಇಲ್ಲಿ ಪೂರ್ವಲಕ್ಷಣಗಳನ್ನೆ ಗುರಿಯಾಗಿಟ್ಟು ಅನುಸರಿಸದೆ ತಮ್ಮದೇ ಆದ ಲಯಪ್ರಧಾನವಾದ ನಡೆಯನ್ನು ಪ್ರಕಟಪಡಿಸಿದ್ದಾರೆ; ಅಥವಾ ವಚನಕಾರರೂ ಆಗಿರುವ ಶ್ರೀಗಳವರು ತಮ್ಮ ವಚನರಚನೆಯ ಪ್ರಭಾವವನ್ನು ಇಲ್ಲಿ ಬೀರಿದ್ದಾರೆ-ಎನ್ನಬಹುದು. ರಗಳೆಯ ರಚನೆಯಲ್ಲಿ ಇದೊಂದು ಹೊಸ ಮಾರ್ಗವೆನ್ನಬಹುದು. ಒಂದೆರಡು ಪಾದಗಳನ್ನು ಇಲ್ಲಿ ಉದಾಹರಣೆಯಾಗಿ ಉಲ್ಲೇಖಿಸಲಾಗಿದೆ —

'ಹಿಮಾಲಯ ಸಂಜನಿತೆ ಹರಹಸ್ತ ಸಂಕಲಿತೆ'

'ಸದ್ಭಾವದೊಳನುಭಾವದಾ ನರುಗಂಪುಗೆಯ್'

ಝಂಪತಾಳದ ಗತಿಗೆ ಒಡಂಬಡಬೇಕಾಗಿರುವ ಲಲಿತರಗಳೆಗೆ, ಇಂತಹ ಕಡೆ ಜಗಣದಿಂದ ಪ್ರಾರಂಭವಾಗುವ ಗಣಿತವೆ ಎಡವುತ್ತದೆ.

'ಓಂಕಾರ ಜಪಂಗೆಯ್ಯುತ್ತ ಪುಷ್ಪಪರಾಗ'

ಇಲ್ಲಿ ಎರಡನೆಯ ಮೂರನೆಯ ಗಣಗಳು ಸೇರಿ ಸಂಯುಕ್ತ ಗಣವಾಗಿದೆ.

'ದಾಕ್ಷಾಯಿಣಿಯೆ ದುರ್ಗೆಯೆ ದುರಿತಸಂಹಾರಿಣಿಯೆ'

ಈ ಪಾದದಲ್ಲಿ ಮೂರನೆಯ ಗಣದಲ್ಲಿ ಒಂದಕ್ಷರವನ್ನು ಸಂಕ್ಷೇಪಿಸಬೇಕಾಗುತ್ತದೆ.

'ಗುಪ್ತವಂಶದ ಚಂದ್ರಗುಪ್ತಂ ಪರಮನೃಪಂ'

ಇಂತಹ ಪಾದಗಳು ಲಯಕ್ಕೂ ಗಣನಿಯಮಕ್ಕೂ ಸರಿಯಾಗಿ ಹೊಂದಿಕೆಯಾಗಿ ಸುಂದರವಾಗಿವೆ.

ಇಂತಹ ಪಾದೋದಾಹರಣಗಳಿಂದ ಈ ಕೃತಿಯ ಛಂದೋಲಕ್ಷಣವನ್ನು ತಿಳಿಯಬಹುದು. ಗಣನಿಯಮವು ಸರಿಯಾಗಿದ್ದು ತಾಳಕ್ಕೆ ಏನೂ ಎಡವದಂತಿರುವ ಗತಿಯನ್ನು 'ಅನುಗತ ಲಯ' (Running thythm) ಎನ್ನಬಹುದು–ಇಂತಹ ಲಯ ಈ ಕೃತಿಯಲ್ಲಿ ಬಹಳವಾಗಿದೆ. ಈ ಅನುಗತ ಲಯದಲ್ಲಿಯೇ ಒಳಗೊಳಗೆ ಲಯವು ಗೋಚರಿಸಿದರೆ, ಅದನ್ನು "ಅಂತರ್ಗತ ಲಯ" (Intrnal rhythm) ಎನ್ನಬಹುದು–ಇದೂ ಇಲ್ಲದೆ, ಮೇಲೆ ಉದಾಹರಿಸಿದ ಕೊನೆಯ ಪಂಕ್ತಿ ಅಂಥದು. ಇನ್ನು ಕೆಲವೆಡೆ ಗುರು ಲಘುಗಳ ಸ್ಥಾನ ವ್ಯತ್ಯಾಸದಿಂದ "ಧೀಂಕೃತ ಲಯವೂ" (Syrung rhtym) ಇದರಲ್ಲಿ ಅಲ್ಲಲ್ಲಿ ಗೋಚರಿಸುತ್ತಿದೆ–ಎಂಬುದೂ ಮೇಲಿನ ಉದಾಹರಣಗಳಿಂದ ಸ್ಪಷ್ಟವಾಗುತ್ತದೆ.

ಇದರಿಂದ ಒಟ್ಟಿನಲ್ಲಿ ಈ 'ಚಂದ್ರಾವತೀ ಕಾವ್ಯ'ವು ಒಂದು ಸಹಜ ಕವಿತೆ; ಪ್ರಯತ್ನ ಕವಿತೆಯಲ್ಲ. ಚಂದ್ರಾವತಿಯ ಜನನದಂತೆಯೇ ಇದರದೂ ಜನನ. ಅಲ್ಲಿ ಆಕೆ 'ರಾಜತೇಜಕೆ ಬ್ರಹ್ಮತೇಜಮಂ ತುಂಬಲು, ಗುಪ್ತ ಕುಲಕ್ಕೆ ಹೊಸ ಜಸವನ್ನು ವ್ಯಕ್ತಗೊಳಿಸಲು ಸರ್ವಮಂಗಳೆಯೇ ರೂಹುಗೊಂಡಂದದಿಂ' ಹುಟ್ಟಿದಳು. ಅದೇ ಉದ್ದೇಶಗಳೊಡನೆ ಕನ್ನಡಿಗರ ಕುಲಕ್ಕೆ ಹೊಸ ಜಸವನ್ನು ಉಂಟುಮಾಡಲು ಚಂದ್ರಾವತಿಯೇ ರೂಪತಾಳಿದಂತೆ ಕೃತಿ ಮೈ ತಾಳಿದೆ. ಆದುದರಿಂದಲೇ ಸಾಹಿತ್ಯದ ಮತ್ತು ರಚನೆಯ ದೃಷ್ಟಿಗಳಿಂದ ಇದು ವೈಶಿಷ್ಟ್ಯವುಳ್ಳ ಕಾವ್ಯ.

---

# “ರನ್ನಚುಕ್ಕಿ” ಅವಲೋಕನ

ಶ್ರೀ ಅಮ್ಮೆಂಬಳ ಶಂಕರ ನಾರಾಯಣ ನಾವಡ
ಕೋಟೆಕಾರು

“ಕಾವ್ಯಂ ಯಶಸೇಽರ್ಥಕೃತೇ
ವ್ಯವಹಾರವಿದೇ ಶಿವೇತರ ಕ್ಷತಯೇ ॥
ಸದ್ಯಃ ಪರನಿರ್ವೃತಯೇ
ಕಾಂತಾ ಸಮ್ಮಿತತಯೋಪದೇಶಯುಜೇ ॥”

ಎಂದು ಪ್ರಾಚೀನ ಆಲಂಕಾರಿಕರು ಕಾವ್ಯ ಪ್ರಯೋಜನವನ್ನು ಪೃಥಕ್ಕರಿಸಿ ಪ್ರತಿಪಾದಿಸಿರುವರು. ಕೀರ್ತಿಲಾಭ, ಧನಸಂಗ್ರಹ, ವ್ಯವಹಾರಜ್ಞಾನ, ಅಶುಭ ನಿವೃತ್ತಿ, ಪರಾನಂದ, ಕಾಂತೆಯಂತೆ ಮಧುರೋಪದೇಶ–ಇಷ್ಟು ಸತ್ಕಾವ್ಯ ಪ್ರಯೋಜನವೆಂಬುದು ಇದರ ತಾತ್ಪರ್ಯ.

ಪ್ರಸ್ತುತ ಶೂನ್ಯ ಸಿಂಹಾಸನಾಧೀಶ್ವರರೂ, ಚನ್ನಬಸವರಾಜರೂ ಆದ ಗೂಳೂರಿನ ಸಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ದೇಶಿಕೇಂದ್ರ ಶಿವಾಚಾರ್ಯರು ಸಾಹಿತ್ಯದಿಂದ ತಮಗೇನಾದರೂ ಸ್ವಾರ್ಥಸಿದ್ಧಿಯಾಗಬೇಕೆಂಬ ಬಯಕೆಯಿಲ್ಲವಾದರೂ ಶಿಷ್ಯಾನುಗ್ರಹಕ್ಕಾಗಿ ಸಾಹಿತ್ಯೋಪಾಸನೆಯನ್ನು ಕೈಕೊಂಡು, ಗದ್ಯಪದ್ಯಾದಿ ವಿವಿಧ ಸಾಹಿತ್ಯ ಸೃಷ್ಟಿಯಲ್ಲಿ ತನ್ಮಯರಾಗಿರುವರು.

“ಶ್ರೀ ಪ ಚ ಸಿ.” ಎಂಬ ಕಾವ್ಯನಾಮದಿಂದ ವಿಖ್ಯಾತರಾದ ಸ್ವಾಮೀಜಿಯವರು ಕಾವ್ಯ, ಕವಿತೆ, ವಚನ, ವಿಮರ್ಶೆ ಮೊದಲಾದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲೂ ಕೈಯಾಡಿಸುತ್ತಾ, ಅವರ ನಾನಾ ಮುಖಗಳನ್ನು ಸಾಕ್ಷಾತ್ಕರಿಸಿಕೊಂಡು ತವಸಿಸ ತೊಡಗಿದರು. ಅವರ ಒಂದು ಅಭಿವ್ಯಕ್ತಿಯೇ ಈ “ರನ್ನಚುಕ್ಕಿ” ಕವನ ಸಂಕಲನ !

ಈ ಸಂಗ್ರಹದಲ್ಲಿರುವ ಪ್ರಾರಂಭದ " ರನ್ನ ಚುಕ್ಕಿ"ಯಿಂದ ಹಿಡಿದು, ಕೊನೆಯ "ಗಂಗೆ–ಗೌರಿ"ಯವರೆಗೆ ಮೂವತ್ತಾರು ಕವನಗಳೆಂದರೆ ಶ್ರೀ ಶ್ರೀ ಜ.ಚ ನಿ. ಅವರ ಭಾವಾಕಾಶದಲ್ಲಿ ಮೂಡಿ ಮಿನುಗುತ್ತಿರುವ ವಿವಿಧ ನಕ್ಷತ್ರಮಾಲೆಗಳು.

ಇವರ ಕವನಗಳಲ್ಲಿ ಕ್ಲಿಷ್ಟತೆಯು ತಲೆಹಾಕಿಲ್ಲ. ಪ್ರತಿಯೊಂದು ಕವನವೂ ಬಹಿರಂತಸ್ಫುರದ್ರಸವಾದ ದ್ರಾಕ್ಷಾಪಾಕದಿಂದ ಕೂಡಿದ್ದು ಸಹಜ ಸುಂದರವಾಗಿದೆ. ಸರಳತೆಯೂ ಸುಲಭತೆಯೂ ಇವರ ಕವಿತೆಗಳಿಗೆ ತೊಡವುಗಳಾಗಿ ಪರಿಣಮಿಸಿವೆ. "ಮೂರು ನುಡಿ "ಗಳನ್ನು ಬರೆದ ತರುಣ ಸಾಹಿತಿ ಶ್ರೀ ಎಚ್. ವಿ. ಚಂದ್ರಶೇಖರರು ಈ ವಿಷಯವನ್ನು ಈ ರೀತಿ ಸ್ಪಷ್ಟೀಕರಿಸಿರುವರು.

"ಸರಳವಾದ ವಿಷಯಗಳನ್ನು ಸರಳವಾಗಿಯೇ ಹೇಳುವುದು ಸುಲಭ; ಕ್ಲಿಷ್ಟವಾದ ವಿಷಯುಗಳನ್ನು ಕ್ಲಿಷ್ಟವಾಗಿಯೇ ಹೇಳುವುದೂ ಸುಲಭ; ಆದರೆ ಕ್ಲಿಷ್ಟವಾದ ವಿಷಯುಗಳನ್ನು ಸರಳವಾಗಿ ಹೇಳುವುದು ಮಾತ್ರ ಸುಲಭವಲ್ಲ. ನಿಜಕ್ಕೂ ಹೇಳಬೇಕೆಂದರೆ ಅದೊಂದು ಸಾಹಸ. ಆ ಸಾಹಸವನ್ನು ಕೈಕೊಂಡು ಯಶಸ್ವಿಗಳಾಗಿರುವುದರಿಂದಲೇ ಶ್ರೀಶ್ರೀ ಜ. ಚ. ನಿ. ಯವರು ಕಾವ್ಯಪ್ರೇಮಿಗಳ ಮೆಚ್ಚಿಗೆಗೆ ಪಾತ್ರರಾಗಿರುವುದು."

ಈ ಕವನಸಂಕಲನವನ್ನು ಆದ್ಯಂತವಾಗಿ ಓದುತ್ತಾ ಓದುತ್ತಾ ಮೇಲಿನ ಮಾತುಗಳ ಯಥಾರ್ಥತೆಯನ್ನು ಮನಗಾಣಬಹುದು.

ಇದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಸಾಲುಗಳನ್ನು ಗಮನಿಸಬೇಕು :

ತಮ್ಮ ಹೃದಯಕ್ಕೆ ನುಡಿನೀರೆಯನ್ನು ಆಹ್ವಾನಿಸುತ್ತಾ—

ಬ್ರಹ್ಮಸತಿ ನೀನಾಗಿ ವಿಷ್ಣುಶ್ರೀ ನೀನಾಗಿ
ಶಿವಶಕ್ತಿ ನೀನಾಗಿ ಜಗಭರಿತೆಯಾದೆ.

ಶಿವಶಕ್ತಿಯೊಂದಾಗಿ ಇಪ್ಪಂತೆ ಒಪ್ಪುವರೆ
ಕವಿಶಕ್ತಿಯೊಂದಾಗಿ ಬಾಳೋಣ ಬಾರೆ !
ಬೆಳಗೋಣ ನೀರೇ !!

ಶಿವಾದ್ವೈತ ಭಾವವೆಂಬ ಕ್ಲಿಷ್ಟ ವಿಷಯವನ್ನು "ಕಂಡೆ ಕೂಡಿಕೊಂಡೆ" ಎಂಬ ಕವಿತೆಯಲ್ಲಿ ಈ ರೀತಿ ನಿರೂಪಿಸಿರುವರು :

ಶ್ರವಣ ಕೇಳಿ ಮನನ ಕಂಡೆ ಸತ್ತು ಕೂಡಿ ಚಿತ್ತು ಕಂಡೆ
ನಿಧಿಧ್ಯಾಸವೂಡಿ ಕಂಡೆ ಸದಾನಂದ ಕೂಡಿಕೊಂಡೆ.

ಗುರುವಿನ ಮಹತ್ವವನ್ನು ಸುಲಭವಾಗಿ ಈ ರೀತಿ ದರ್ಶನ ಮಾಡಿಸಿರುವರು :

ನರನ ಹೃದಯು ಮಧುರ ವೀಣೆ
ಬೇರೆ ನುಡಿಸುವವರ ಕಾಣೆ

ಗುರುವದನ್ನು ಮಿಡಿಯಬಲ್ಲ
ಪೊರೆವ ಹಾಡ ನುಡಿಸಬಲ್ಲ.

ಭಕ್ತಿರಾಗ ಹೇಳಬಲ್ಲ
ಮುಕ್ತಿ ಪದಕೆ ನಡಿಸಬಲ್ಲ.

ಜಗನ್ಮಾತೆಯು ಸರ್ವವ್ಯಾಪಿನಿ, ಸರ್ವಕಾರಣ ರೂಪಿಣಿ, ಜೀವನ ಸಂಜೀವಿನಿ ಯೆಂಬ ಮಹಾಭಾವದ ಸಮನ್ವಯವನ್ನು ಸ್ವಾಮಿಗಳವರು 'ಕಿರಿದರೊಳು ಪಿರಿದು ಅರ್ಥವನ್ನು ಅರಿಪುವ' ಕವಿಗುಣದಿಂದ ಜಡಿಸಿದವರು "ಜಗನ್ಮಾತೆ" ಕವನದ :

ಜಗದ ಉದಯ ನೀನೆ ಜಗದ ಪ್ರಳಯ ನೀನೆ
ಜಗದ ಗತಿಯು ನೀನೆ ಜಗದ ಸ್ಥಿತಿಯು ನೀನೆ

ಜಗದ ಬಲವು ನೀನೆ ಜಗದ ಛಲವು ನೀನೆ
ಜಗದ ಗೆಲವು ನೀನೆ ಜಗದ ಒಲವು ನೀನೆ.

ಎಂಬ ಸಾಲುಗಳನ್ನು ಮನನ ಮಾಡುವಾಗ ಮಾರ್ಕಂಡೇಯ ಪುರಾಣದ "ಸಪ್ತಶತೀ" ಯೆಂಬ ದೇವೀ ಮಹಾತ್ಮ್ಯೆಯಲ್ಲಿ ಸತ್ವರಜಸ್ತಮೋಗುಣಾತ್ಮಕಳಾದ ಪರಬ್ರಹ್ಮ ಸ್ವರೂಪಿಣಿಯ ನಿರೂಪಣೆಯ ನೆನಪಾಗುವುದು.

ಇವರ ಆಧ್ಯಾತ್ಮಿಕ ಕವನಗಳು ತಾತ್ವಿಕ ನೆಲೆಯಲ್ಲಿ ಅನುಭಾವ ಮಾರ್ಗದಲ್ಲಿ ಸಾಗಿರುವುದನ್ನು ನಾವು ನೋಡಬಹುದು.

"ಭಕ್ತಿ–ಮುಕ್ತಿ" ಯೆಂಬ ಕವನದಲ್ಲಿ ಭಕ್ತಿಗೂ ಶಕ್ತಿಗೂ ಇರುವ ನಿಕಟ ಸಂಬಂಧವು ಹೃದ್ಯವಾಗಿ ನಿರೂಪಿತವಾಗಿದೆ :

ಭಕ್ತಿ ಜೀವ ರಸವ ಝರಿಯು, ಮುಕ್ತಿ ದೇವ ರಸದ ತೊರೆಯು
ಭಕ್ತಿಯೆನ್ನ ಬಾಳ ಸಿರಿಯು, ಮುಕ್ತಿ ನಿನ್ನ ಮೇಳ ಪರಿಯು.
ಭಕ್ತಿಯಿರುವೆ ಜೀವ ಕಿರಣ, ಮುಕ್ತಿಯಿರುವೆ ದೇವ ಕರುಣ
ಎನ್ನ ಭಕ್ತಿ ನಿನಗೆ ಚರಣ, ನಿನ್ನ ಮುಕ್ತಿ ನನಗೆ ಹರಣ.

"ನಿನಗಾಗಿ ನವೆಯುವೆನು" ಎಂಬ ಕವಿತೆಯಲ್ಲಿ ಶರಣನ ಆರ್ತಭಾವವೂ, ಸರ್ವ ಸಮರ್ಪಣವೆಂಬ ಉದಾತ್ತ ಭಕ್ತಿಯೂ ಪರಾಕಾಷ್ಟದಲ್ಲಿ ಕಾಣಿಸಿಕೊಂಡಿವೆ :

ನಾನೆಂದು ನಿನ್ನೊಡನೆ ಒಂದಾಗಿ ನಲಿಯುವೆನು
ನೀನೆ ಪ್ರಾಣವನುದಿನ ನಿನಗಾಗಿ ನವೆಯುವೆನು

ಪವಡಿಸುವ ವೇಳೆಯಲಿ ತಳಿರಡಿಯ ನೆನೆಯುವೆನು
ಬ್ರಾಹ್ಮೀ ಮುಹೂರ್ತದಲಿ ನಾಮಮಂ ಸ್ಮರಿಸುವೆನು

ಅಭ್ಯಾಸಕಾಲದಲಿ ಕೀರ್ತಿಯಂ ಪಾಡುವೆನು
ಅರ್ಚಿಸುವ ಸಮಯದಲಿ ಮಂತ್ರಮಂ ಜಪಿಸುವೆನು.

ಅರ್ಪಣದ ಹೊತ್ತಿನಲಿ ಮೊದಲ ತುತ್ತದು ನಿನಗೆ
ಅಲಂಕರಿಸಿಕೊಳ್ಳುವೊಡವೆಯದು ಮೊದಲು ನಿನಗೆ
ಆಡುತಿಹ ಆಟವದು ಮೊದಲು ವಿಾಸಲು ನಿನಗೆ
ನೋಡುತಿಹ ನೋಟದಲಿ ನೀನೆ ತೋರುವೆಯೆನಗೆ.

ಮುಂದೆ ಅದೇ ಪದ್ಯದಲ್ಲಿ ಅನುಭಾವಿ ಶಿವಶರಣೆ ಮಹಾದೇವಿಯಕ್ಕನು ಸಿದ್ಧಿ ಪಡೆದ ಮಧುರಭಕ್ತಿಯು ರಮ್ಯವಾಗಿ ರಸಸ್ಯಂದಿಯಾಗಿ ಹರಿದು ಬಂದಿದೆ. "ಜೀವ ಸತಿ, ಲಿಂಗಪತಿ" ಎಂಬ ತಾದಾತ್ಮ್ಯಭಾವವು ಮಧುಮಧುರವಾಗಿ ಒಡಮೂಡಿದೆ :

ನಿನ್ನಡಿಗೆ ಶರಣೆನುವೆ ನೀನೊಲಿಯೆ ನಾ ನಲಿವೆ
ತಳುವೇಕೆ ತೋರಯ್ಯ ತೆಗೆದಪ್ಪಿ ನಲಿಸಯ್ಯ
ತಾಳೆ ನಿನ್ನಯ ವಿರಹ ಬಾಳವೆನ್ನಯ ಹರಣ
ನಿನ್ನನೇ ಬಯಸುವೆನು ಬೇಗದಲಿ ಬಾರಯ್ಯ.

ನೀನೆನ್ನ ಗತಿಮತಿಯು ನೀನೆನ್ನ ಮನಶ್ರುತಿಯು
ನೀನೆನ್ನ ಸಿರಿಸೊಗವು ನೀನೆನ್ನ ಚಿರಯುಗವು
ನಾನೆಂದು ನಿನ್ನೊಡನೆ ಒಂದಾಗಿ ನಲಿಯುವೆನು
ನೀನೆಂದು ಬರುವೆಯೋ ನಿನಗಾಗಿ ನವೆಯುವೆನು.

ಶ್ರೀ ಬಸವಣ್ಣನವರು ತಮ್ಮ ಭಕ್ತಿಭಾವವನ್ನು ವಚನದಲ್ಲಿ ತೋಡಿಕೊಂಡಂತೆ ಶ್ರೀ ಜ. ಚ. ನಿ. ಯವರು ತಮ್ಮ "ಹೃದಯ ಗೀತೆ" ಯೆಂಬ ಕವನದಲ್ಲಿ ತಮ್ಮ ಸೂರ್ಯಸಿಂಹಾಸನದ ಜಗದ್ಗುರುವಿನ ಕುರಿತು ಹೀಗೆ ಹಾಡಿರುವರು :

ಎನ್ನ ಹೃದಯವೆ ತಂತಿ, ಎನ್ನ ಕಾಯವೆ ತಾಯಿ
ಕೊರಳು ದಂಡಿಗೆ, ಮಿಡಿದು ನುಡಿಸು ಪ್ರಭುವೆ.

ಹೃದಯ ಹಂಬಲ ಹರಿಸು, ಕಾಯಕೇ ಬಲ ಬರಿಸು
ಆತ್ಮ ದುರ್ಬಲವಳಿಸು ಜಗದ್ಗುರುವೆ.

ನವಯುಗದ ನವಮನ್ವಂತರದ ನವಭಾವವು ಅವರ "ಬೆಳಗಲಿ!" ಎಂಬ ಕವನದಲ್ಲಿ ಸುಸ್ಪಷ್ಟವಾಗಿ ಮೂಡಿ ನಿಂತಿದೆ. ಇದರಲ್ಲಿ ಅವರ ಹೃದಯ ವೈಶಾಲ್ಯವನ್ನು ಗುರುತಿಸಬಹುದು.

ಜಾತಿಭೂತವು ಓಡಿಹೋಗಲಿ
ಜ್ಯೋತಿ ವ್ಯಾಪ್ತಿಯು ಮೂಡಿ ಬೆಳಗಲಿ

ನೀತಿರೀತಿಗಳಿದಿಯಸಾಳಲಿ
ಸಂಸ್ಕೃತಿಯು ಪ್ರಗತಿಯನು ಸಾರಲಿ.

ಮಾತಿನ ವೀರರು ಉತ್ತರಕುಮಾರರಂತೆ ಕೃತಿಯಲ್ಲಿ ಹಿಂದೆ. ಅಂಥವರನ್ನು ಹೀಯಾಳಿಸಿ "ಮಾತಿನ ಮನೆ" ಎಂಬ ರಸಗವನದಲ್ಲಿ ಈ ರೀತಿ ವಿಡಂಬನೆಗೆ ಗುರಿ ಮಾಡಿರುವರು :

ಮಾತಿನ ಮನೆಯ ಮಾಡಿ
ಕೃತಿ ದೂಡಿ ಕೃತಕಗೂಡಿ
ನೀತಿಯನು ಬೋಧಿಸುವ ರೀತಿಯನು
ಮತಿಗೆಟ್ಟು ಬಾಳಹುದು ಮತಿವಂತಿಕೆಯ ನಟಿಸಿ !

ಅದೇ ಪದ್ಯದಲ್ಲಿ ಆತ್ಮ ಸಂಯಮವಿಲ್ಲದೆ ಬೂಟಾಟಿಕೆಯಿಂದ ಮೆರೆಯುವರನ್ನು ಮಾತಿನ ಮೊನೆಯಿಂದ ಚುಚ್ಚಿ ನುಡಿದಿರುವರು :—

ಮನವನ್ನು ತಿದ್ದದಲೆ
ಮೈಯನ್ನು ತಿದ್ದಿಯೇಂ ?
ಮತಿಯನ್ನು ತೊಳೆಯದಲೆ ನೀತಿಯನು ಪೇಳಿಯೇಂ
ಮನವನ್ನು ಕಟ್ಟದಲೆ ಮಾತನ್ನು ಕಟ್ಟಿಯೇಂ ?

ಶಿವನ ಪತ್ನಿಯರಾದ "ಗಂಗೆ-ಗೌರಿ"ಯರ ನಿಲುಮೆಯ ಕುರಿತು ಕವಿಗಳು ತಮ್ಮ ಪುಸ್ತಕದ ಕೊನೆಯ ಕವನವಾಗಿ ಬರೆಯುತ್ತಾ, ಅದಕ್ಕೊಂದು ಹೊಸ ಅರ್ಥವನ್ನು ಹಚ್ಚಿರುವರು.

ಅರಿವೆಂಬ ಗಿರಿಯಲ್ಲಿ ಹೊಮ್ಮಿ ಹರಿವಳು ಗಂಗೆ
ಈರೇಳು ಭುವನ ಜೀವಿಗಳ ಜೀವನ ತುಂಗೆ

ಹಾಗೆಯೇ ಮುಂದುವರಿಯುತ್ತಾ,

ಗಂಗೆ ತಾಂ ತಿಳಿನೀರು, ಗೌರಿ ತಾಂ ವಸುಂಧರೆ
ನೀರು ನೆಲಗಳನುಳಿದು ಜಗವಿದೇಂ ಬಾಳುವುದೇ ?

ಎಂದು ರೂಪಿಸಿ, ಅವರಿಬ್ಬರನ್ನು ಇನ್ನೊಂದು ರೀತಿಯಲ್ಲಿ ರೂಪಿಸುತ್ತಾರೆ.

ಗಂಗೆ ಜ್ಞಾನದ ಬೆಳಕು, ಗೌರಿ ಸತ್ಕ್ರಿಯೆ ಬದುಕು.
ಜ್ಞಾನ ಕ್ರಿಯೆಗಳನುಳಿದು ಜಗವಿದೇಂ ಬದುಕುವುದೇ ?

ಕೊನೆಗೆ ಅವರಿಬ್ಬರನ್ನು ಕವಿಯು ಹೀಗೆ ಪ್ರಾರ್ಥಿಸುವರು. ಇಲ್ಲಿ ಭಕ್ತಿಯ ಪರಾಕಾಷ್ಠೆಯನ್ನು ಪರಿಕಿಸಬಹುದು.

ಓ ಗಂಗೆ, ಓ ಗೌರಿ ನೀವಲ್ತೆ ಪರಿಕಿಸಲು,
ಜಗ ಪೊರೆವ ಯುಕ್ತಿ ಶಕ್ತಿ ಸ್ವರೂಪಾತ್ಮರು.
ಮೂಲೋಕ ಮಾತೆಯರೆ, ಮೂಲೋಕ ಖ್ಯಾತೆಯರೆ
ಸಾಲೋಕ್ಯ ಸಾಮಿಪ್ಯ ಸಾರೂಪ್ಯ ದಾತೆಯರೆ,
ನಮಿಸುವೆನು ನಲಿನಲಿದು, ನುತಿಸುವೆನು ಒಲಿದೊಲಿದು,
ಸುಜ್ಞಾನ ಸತ್ಕ್ರಿಯೆಗಳೊಲಿದಿತ್ತು ಪಾಲಿಸಿರೆ!

ಈ ಗಂಗೆ-ಗೌರಿಯರ ಮೂಲಕ ಶಿವಸಾಯುಜ್ಯವನ್ನು ಪಡೆಯುವುದೇ ತಮ್ಮ ಜೀವನ ಧ್ಯೇಯವೆಂಬ ಭರತ ವಾಕ್ಯವನ್ನು ಅದೇ ಕವನದ ಕೊನೆಗೆ ಹೃದಯಂಗಮವಾಗಿ ನಿರೂಪಿಸಿರುವರು:

ಗಂಗೆ-ಗೌರಿಯು ನೆಪದೆ ಜ್ಞಾನಕ್ರಿಯೆಗಳನಿತ್ತು
ನೀರು ನೆಲಗಳನಿತ್ತು ಪೊರೆದಭವ ಪೊಡಮಡುವೆ.
ಸಾಯುಜ್ಯ ಪದವಿಯನು ಪಡೆಯಲ್ಕೆ ಹೇ ದೇವ,
ಆಯುಷ್ಯವಿರುವನ್ನೆಗಂ ನಿನ್ನ ನಾಂ ಬೇಡ್ವೆ.

ಶ್ರೀ ಜ. ಚ. ನಿ. ಅವರು ದೇವರ ದಾಸಮಯ್ಯ, ಶಿವಶರಣೆ ದುಗ್ಗಳೆ, ಭಾಷ್ಯಾಚಾರ್ಯರು, ಬಸವನಾಳರು, ಪಂಚಾಚಾರ್ಯರು, ಕರಿಬಸವ ಸದ್ಗುರು-ಮೊದಲಾದ ತಮ್ಮ ಪ್ರೀತಿಯ ವ್ಯಕ್ತಿಗಳ ಕುರಿತು ಮನತುಂಬಿ, ಎದೆಯಾರೆ ಬಣ್ಣಿಸಿ, ಕವನ ಕಟ್ಟಿ ಹಾಡಿ ನಲಿದಿರುವರು.

"ಏರಿ ನಿಂದುದೆ ಲೇಸು" ಎಂಬ ತಮ್ಮ ಆತ್ಮಗತ ಕವನದಲ್ಲಿ ತಮ್ಮ ಹೃದ್ಗತವನ್ನು ಕವಿಗಳು ಈ ರೀತಿ ಹಾಡುತ್ತಾ, ಆತ್ಮಧನ್ಯತೆಯನ್ನು ಹೊರಗೆಡಹಿರುವರು.

ಸೂರ್ಯ ಸಿಂಹಾಸನವನ್ನೇರಿ ನಿಂದುದೆ ಲೇಸು
ಸೇವೆಯನು ಸಲ್ಲಿಸುವ ಭಾಗ್ಯವೆಮಗಾಯ್ತು.
ಐಶ್ವರ್ಯ ವೈಭವವು ತಾನಿಲ್ಲದಿರಲೇಂ?
ಸಾರಸ್ವತದೊಲುಮೆಯೆ ಸೌಭಾಗ್ಯವಾಯ್ತು.

ಹೀಗೆ ಮುಂದುವರಿಯುತ್ತಾ, ತಮ್ಮ ಭವಿಷ್ಯವನ್ನು ಹೀಗೆ ರೂಪಿಸಿರುವರು!

ಮುಂದೆಂದಿಗಳಿಯದಿಹ ಸಾಹಿತ್ಯ ಜೀವನವು
ಎಡೆಬಿಡದೆ ಸಂತಸದಿ ತಾ ಸಾಗುತಿರಲಿ!

ಸಾಹಿತ್ಯ ರಸಿಕರಂದ ಸಹೃದಯ ಶಿಷ್ಯರ ಪರಮಾರ್ಥ ಪದದ ಅನುಗ್ರಹಕ್ಕಾಗಿ, ಬ್ರಹ್ಮಾನಂದ ಸೋದರ ಕಾವ್ಯಾನಂದದ, ಆಸ್ವಾದಕ್ಕಾಗಿ ಶ್ರೀ ಜ. ಚ. ನಿ ಅವರ ಕಾವ್ಯಗಂಗೆಯು ಸಲೀಲವಾಗಿ ಓತಪ್ರೋತವಾಗಿ ಹಾಡುತ್ತಾ ಹರಿಯಲಿ ಎಂದು ಹಾರೈಸುವೆನು.



## ಅಭಿಪ್ರಾಯಗಳು :

### ತತ್ತ್ವ ಚಿಂತನೆಯ "ರನ್ನಚುಕ್ಕಿ"

ಈ ಕವನ ಸಂಕಲನದಲ್ಲಿ ಕವಿ–ಗುರುಗಳು 'ಕ್ಷಾಮವನು ಕಂಡು' ಕೆರಳಿದ್ದಾರೆ; 'ಗಂಗೆ ಗೌರಿ,' 'ಭಕ್ತಿ–ಮುಕ್ತಿ'ಗಳೆಂಬ ಕಪ್ಪೆಗಳನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡಿದ್ದಾರೆ. 'ರನ್ನ ಚುಕ್ಕಿ'ಯನ್ನು ನೋಡಿ, 'ಅವರು ಬಾಳುವರು!' ಎಂದು ಹೇಳಿ 'ಸೋಲು–ಗೆಲುವು'ಗಳನ್ನು ಒರೆ ಹಚ್ಚಿ, 'ಗುರು ನುಡಿಸಬಲ್ಲ'ನೆಂದು ಪ್ರತಿಪಾದಿಸಿ ಓದುಗರ ವಿಚಾರಶಕ್ತಿಗೆ ಒಳ್ಳೆಯ ವ್ಯಾಯಾಮ ಮಾಡಿಸಿದ್ದಾರೆ. 'ನುಡಿ ನೀರೆ ನೀ ಬಾರೆ!' ಎಂದು ಕರೆದು, 'ನೀನೊಲಿಯೆ ನೀನುಂಟು' ಎಂದು ಕೊರಗಿ, 'ನಿನಗಾಗಿ ಸವೆಯುವೆನು' ಎಂದು ಕರಗಿ, 'ಹೇಳು ಕೆಳದಿ!' ಎಂದು ಬೇಡಿ, 'ನಿನಗೆ ಚನ್ನವೇ ?' ಎಂದು ಕಾಡಿ, 'ಹೃದಯ ಗೀತೆ'ಯನ್ನು ಹಾಡಿ ರಸದೌತಣವನ್ನು ನೀಡಿದ್ದಾರೆ.

ಒಟ್ಟಿನಲ್ಲಿ: ತತ್ತ್ವ ಚಿಂತನೆ, ರಸ ಪ್ರತಿಪಾದನೆ–ಎರಡೂ ಒಮ್ಮೆಗೇ ಬೇಕೆನ್ನುವ ಕಾವ್ಯ ಪ್ರೇಮಿಗಳಿಗೆ 'ರನ್ನ ಚುಕ್ಕಿ' ಒಂದು ಒಳ್ಳೆಯ ಉಣಿಸು !

**ಹೆಚ್. ವಿ. ಚಂದ್ರಶೇಖರ್**

---

### 'ಹೊನ್ನು ಹಕ್ಕಿ'

ಇದೊಂದು ಕವನ ಸಂಗ್ರಹ. ಕವಿತೆಗಳ ಶೇಖರಣವನ್ನು 'ಹೊನ್ನು ಹಕ್ಕಿ' ಎಂದು ಕರೆದಿರುವುದು ತುಂಬ ಒಪ್ಪತಕ್ಕದ್ದೆ. ಹೊನ್ನಿನಷ್ಟು ಬೆಲೆಯ ವಿಚಾರಗಳೇ ಕವಿತ್ವಕ್ಕೆ ಅರ್ಹವಾದ ಸಂಗತಿಗಳು. ಕವಿತ್ವ ವಿಚಾರಗಳು ಮನೋರಾಜ್ಯದ ಮೇಲೆ ಹಕ್ಕಿಹಾರಿ ಹೋಗುವಂತೆ ಹರಿದು ಹೋಗಬೇಕು. ಆಗಲೇ ಮನಸ್ಸು ಹರ್ಷವಾಗುವುದು. ಹರ್ಷಚಿತ್ತ ನವಕವಿತೆಗಳನ್ನು ಉಕ್ಕಿಸೀತು. ಸೂರ್ಯಸಿಂಹಾಸನಾಧೀಶ್ವರರೂ ಚನ್ನಬಸವರಾಜರೂ ಆದ ಗೂಳೂರಿನ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ದೇಶೀಕೇಂದ್ರ ಶಿವಾಚಾರ್ಯರು ತಮಗೆ ಯಥಾವಿಧಿ ಒದಗುತ್ತಿರುವ ಪಾದಪೂಜೆ, ಪಾದಸೇವೆ ಇವೇ ಮುಂತಾದ ಷೋಡಶೋಪಚಾರ ತಲ್ಲೀನರಾಗಿ ಆಗಾಗ್ಗೆ ತೋರಿದೆರಡು ಉಪದೇಶವಿತ್ತುಕೊಂಡು ಕಾಲಹಾಕಬಹುದಾಗಿದ್ದರೂ ಆ ನೀರಸ ಮಾರ್ಗಬಿಟ್ಟು ಗುರುಪೀಠಕ್ಕೆ ಲಭಿಸಿದ ಸಾಹಿತ್ಯಾಭ್ಯಾಸವನ್ನು ಸಾಹಿತ್ಯಾಭಿಮಾನಕ್ಕೆ ಪರಿವರ್ತಿಸಿಕೊಂಡದ್ದರಿಂದಲೇ ಅವರ ಹೃತ್ ಕಮಲದಿಂದ ಈ ಹೊನ್ನು ಹಕ್ಕಿ ಹಾರಿಬಂದದ್ದು; ಇಂಥ ಹಕ್ಕಿಗಳು ಅಂಥ ಹೃದಯದಲ್ಲಿ ಗೂಡ ಮಾಡಿಕೊಳ್ಳುವುವು. ಈ ವಿಧ ಹಕ್ಕಿಗಳು ಆ ಗೂಡಿನಲ್ಲಿ ಇನ್ನೂ ಎಷ್ಟಿವೆಯೋ ಬಲ್ಲವರಾರು ?

—'ಕಂಠಿ'

[ಪ್ರಜಾವಾಣಿ]

## ಬಾಡದ ‘ ಹೂಗೊನೆ ’

ನಳಿನಳಿಸಿ, ಚಿಗುರುತ್ತ ಚಿಗುರುತ್ತ, ಕಂಪನ್ನು ಬೀರುತ್ತ ಬೀರುತ್ತ ಸಂಥೆಯ ಸೋನೆಯನ್ನು ಸೂಸುತ್ತ ಸೂಸುತ್ತ ನಮ್ಮನ್ನತ್ತ ಎಳೆದೆಳೆದು, ಮತಿಯಂ, ಸಮತೆಯಂ, ಪ್ರೇಮಮಂ ಅನುಗೊಳಿಸುವದು.

ಬಾಡದ ಹೂಗೊನೆಗಳೆರಡು ಕೈಸೇರಿ ತೃಪ್ತಿಯಾಗಿ ಒಡನೆಯೆ ಶಿವಾರ್ಪಣ ವಾಗದುಳಿಯುವದೇ ? ಆ ಕಮನೀಯವಾದ ಅಕ್ಕಳಿಯಡಿರುವ ಗೊನೆಗಳು ತನಿವಣ್ಣು ಗಳನ್ನು ಗೌಪ್ಯವಾಗಿ ಕಚ್ಚಿಕೊಂಡು ಬಂದಿವೆ. ಆ ಅಪೂರ್ವ ಮೃದುಮಧುರವಾದ ಫಲಗಳಲ್ಲಿ ರಸವಿದೆ, ಭಾವವಿದೆ, ಔಚಿತ್ಯವಿದೆ, ಸರಳತೆಯಿದೆ, ಸಹಜತೆಯಿದೆ, ಮುಂದೋಟವಿದೆ, ವೈವಿಧ್ಯವಿದೆ, ಸುಭಗತೆಯಿದೆ. ಸಾಲದುದಕ್ಕೆ ಪ್ರತಿಭೆಯು ಅಲ್ಲಲ್ಲಿ ಸುಳಿಯುತ್ತ ಮಂಗಲವನ್ನು ಪ್ರಸನ್ನಗೊಳಿಸುವದಲ್ಲದೆ ಬೆರಗುಂಟುಮಾಡಿ ತನ್ನತ್ತ ಸಳಸೆಳೆದು ಬಿಗಿಬಿಗಿದು ತಣಿಸುತ್ತಿದೆ.

—ಮಹಾರುದ್ರಪ್ಪಾ ಮಹಾಲಿಂಗಪ್ಪಾ ಮಿರ್ಜಿ
ಹುಬ್ಬಳ್ಳಿ

## ಕವನ ಕಮಲಗಳ ‘ಹೂಗೊನೆ’

“ಹೊನ್ನು ಹಕ್ಕಿ”–“ರನ್ನ ಚುಕ್ಕಿ” ಎಂಬೆರಡು ಕವನ ಸಂಗ್ರಹ ಪುಸ್ತಕಗಳು ಈಗಾಗಲೇ ಜನಪ್ರಿಯವಾಗಿ ಕವನಗಳು ಜನರ ನುಡಿಗಳಲ್ಲಿ ನಲಿದಾಡುತ್ತಿರುವ ಸಮಯದಲ್ಲಿಯೇ ಈ “ಹೂಗೊನೆ”ಯನ್ನು ಶ್ರೀ ಸ್ವಾಮಿಗಳು ಹಾಡುಗಬ್ಬಿಗರಿಗೆ ಸಮರ್ಪಿಸಿದ್ದಾರೆ. ಸ್ವಾನುಭವ ಸಮುದ್ರದಲ್ಲಿ ಲಹರಿಗಳಂತೆ ಉಕ್ಕಿ ಹೊರಹೋಟ ಇದರಲ್ಲಿನ ಕವನಕಮಲಗಳು ಕಮನೀಯ ಜ್ಞಾನ ಬೋಧಕಗಳಾಗಿವೆ. ಒಂದು ನೂರೆಂಟು ವಿಧಧ ಬಣ್ಣದ ಸೊಂಪಿನ ಕವನ ಕಮಲಗಳು ಈ ಹೂಗೊನೆಯಲ್ಲಿ ಅರಳಿ ಕಂಪನ್ನು ಬೀರುತ್ತಲಿವೆ. ಸ್ವಾರಸ್ಯವಾದ ಭಾವಗರ್ಭಿತ ಭಾವಗೀತೆಗಳು ಈ ಗ್ರಂಥ ದಲ್ಲಿ ತುಂಬಿ ತುಳುಕುತ್ತವೆ. ಹೂಗೊನೆಯ ಬಂಡನ್ನು ಮಾನವ ದುಂಬಿಗಳು ಮನ ವಾರೆ ಸವಿಯಬಹುದು. ಕನ್ನಡ ಭೃಂಗಗಳು ಝೇಂಕರಿಸುತ್ತ ಹೂಗೊನೆಯನ್ನು ಮುತ್ತಲಿ.

—ಸುಖಾಶ್ರಯ ಪ್ರಬೋಧಾ

## ಸನ್ನಿಧಿಯ ಪ್ರತಿಭೆಗೆ ಸಾಕ್ಷಿ

ಶ್ರೀ ಶೈಲ ಸಂಸ್ಥಾನದ ಶ್ರೀಗಳಾದ ಚನ್ನಬಸವರಾಜ ದೇಶಿಕೇಂದ್ರರ ಸಾಹಿತ್ಯ ಸೇವೆಯು ಬಹುಮುಖವಾದುದು. ಅವರ ಹಲವಾರು ಕೃತಿಗಳು ಈಗಾಗಲೇ ಕನ್ನಡಿಗರ ಮುಂದಿವೆ. ವಚನ ಸಾಹಿತ್ಯ, ನಾಟಕ, ಚರಿತ್ರೆ, ಕವನ, ಕಾವ್ಯಗಳೇ ಮೊದಲಾದ ಕ್ಷೇತ್ರಗಳಲ್ಲಿ ಶ್ರೀಗಳವರು ವ್ಯವಸಾಯ ಮಾಡುತ್ತಾ ಬಂದಿದ್ದಾರೆ. ಪ್ರಕೃತ 'ಹಾಲ್ಕೆನೆ' ಯಲ್ಲಿ ಅನೇಕ ವಿಷಯಗಳನ್ನು ಕುರಿತಾದ ಕವನಗಳಿವೆ... ಅಲ್ಲಲ್ಲಿ ಶ್ರೀಗಳವರ ಪ್ರತಿಭೆ ಹೊಮ್ಮುತ್ತಿದೆ.

ಶ್ರೀಶೈಲ ಶ್ರೀಗಳವರು ಪ್ರತಿಭಾಸಂಪನ್ನರು. ಅವರ ಪ್ರತಿಭೆಗೆ ಈ ಕವನ ಸಂಗ್ರಹವೇ ಸಾಕ್ಷಿಯಾಗಿದೆ. ಸರಳವೂ ಸುಲಭವೂ ಲಲಿತವೂ ಆದ ಈ ಕವನ ಸರ್ವ ಸಂಗ್ರಹ ಯೋಗ್ಯವಾದುದು. ಕ್ಷಣಿಕ ಸಾಹಿತ್ಯವೇ ವಿಶೇಷವಾಗಿ ನಿರ್ಮಾಣವಾಗುತ್ತಿರುವ ಈ ಕಾಲದಲ್ಲಿ ಆತ್ಮೋದ್ಧಾರಕ್ಕೆ ನೆರವಾಗಬಲ್ಲ ಕೃತಿಗಳನ್ನು ಯಾರಾದರೂ ಆದರದಿಂದ ಸ್ವಾಗತಿಸಬೇಕು. ಜಗತ್ತನ್ನು ಮಿಥ್ಯಾತತ್ವವೆಂಬ ಅಜ್ಞಾನಾಂಧಕಾರ ಆವರಿಸಿದಾಗ ಮಠಾಧಿಪತಿಗಳೂ, ಗುರುಹಿರಿಯರೂ, ವಿಭೂತಿ ಪುರುಷರೂ ಮುಂದೆ ಬಂದು ಜನತೆಯನ್ನು ಸನ್ಮಾರ್ಗಕ್ಕೊಯ್ಯುವ ಪಥವನ್ನು ತೋರಿಸಬೇಕು. ಅಂತಹ ಕಾಲ ಈಗ ಸನ್ನಿಹಿತವಾಗಿದೆ. ಶ್ರೀಗಳವರ ಈ ತೆರನ ಸಾಹಿತ್ಯ ಸೇವೆ ನಿರಂತರವಾಗಿ ನಡೆಯಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

—**ಕನ್ನಡ ನುಡಿ**

[ಜನವರಿ, ೧೯೫೨]

## ಏಕಾಂತ ಚಿಂತನೆಯ ಫಲ

'ಹಾಲ್ಕೆನೆ' ಶ್ರೀಗಳವರ ನಾಲ್ಕನೆಯ ಕವನ ಸಂಗ್ರಹ. ಸಖರಾಯ ಪಟ್ಟಣದ ಹಾಲುಸ್ವಾಮಿ ಮಠಾಧ್ಯಕ್ಷರಾದ ಶ್ರೀ ಷ. ಬ್ರ. ಸದಾಶಿವ ಶಿವಾಚಾರ್ಯ ಸನ್ನಿಧಿಯ ಅರವತ್ತು ವರ್ಷಗಳ ಮಹೋತ್ಸವದ ಸವಿ ನೆನಪಿಗಾಗಿ ಅರ್ಪಿಸಿದ ಅರವತ್ತು ಅನುಭಾವ ಗೀತೆಗಳ ಮಾಲಿಕೆ.

ಹಾಲಿನ ಕೆನೆ 'ಹಿರಿದಾದ ಆಹಾರ,' 'ಆತ್ಮ ಪುಷ್ಟಿಗೆ ಭಂಡಾರ,' 'ಹಾಲ್ಕೆನೆಗೆ ಹಿರಿದು ವಚನಾಮೃತಸಾರ' ಎನ್ನುತ್ತಾರೆ ಕವಿ. ಧಾರ್ಮಿಕ ಆವರಣದಲ್ಲಿ ಸೇರಿಕೊಂಡಿರುವ ಕವಿ ಏಕಾಂತವಾಗಿ ಚಿಂತನೆ ಮಾಡಿ ಸರಳ ಶೈಲಿಯಲ್ಲಿ ಎರಕ ಹೊಯ್ದ ಬಗೆ ಬಗೆಯ ಶಿವಭಕ್ತಿ ಭಾವ ಗೀತೆಗಳಿಲ್ಲಿವೆ. ಅನುಭಾವದ ದೃಷ್ಟಿಯಿಂದ ಮಾತ್ರವಲ್ಲದೆ ಕವಿತೆಯ ದೃಷ್ಟಿಯಿಂದಲೂ ಉತ್ಕೃಷ್ಟವಾದ ಕೆಲವು ಗೀತೆಗಳಿವೆ.

ಮೂರು ಬಾಗಿಲ ತೆರೆದು ನಿಂತಿರುವೆ
ಮೂರು ಕಣ್ಣುಳ್ಳವನೆ ಬರುವೆ ಬಂದಿರುವೆ

ಎಂದು ಮೊದಲಾಗುವ ಗೀತವಂತೂ ಮನೋಹರವಾಗಿದೆ. ಇವರ ಸೌಂದರ್ಯ ದೃಷ್ಟಿ–

ಚಿತ್ತಾಗಿ ಚೆಲುಗೆಡಿಸುವ ಮಸಿಯಾಗದಿರು ;
ಚಿತ್ತರವ ಬರೆವ ಚಲುವೆಸೆವ ಮಸಿಯಾಗು

ಎಂದು ಬದುಕಿಗೆ ಎಚ್ಚರ ನೀಡುತ್ತದೆ. ಒಟ್ಟಾರೆ ಇಲ್ಲಿನ ಕವನಗಳು ಸಹೃದಯರಿಗೆ ಪ್ರಿಯವೆನಿಸುವುದರಲ್ಲಿ ಸಂದೇಹವಿಲ್ಲ.

—ಕೆ. ಎಸ್. ನ.
(ಪ್ರಜಾವಾಣಿ)

## ಆಧ್ಯಾತ್ಮಿಕ ಕವನ ಸಂಕಲನ

### 'ನಿವೇದನ'

ಈ ಸಂಕಲನದ ೬೧ ಕವನಗಳಲ್ಲಿ ಶ್ರೀ ಜ. ಚ. ನಿ. ಅವರ ಆತ್ಮನಿವೇದನೆಯು ಮೂಡಿಬಂದಿದೆ. ಇಲ್ಲಿಯ ಕವನಗಳು ತಮ್ಮ ಆರಾಧ್ಯ ಗುರುದೇವನೆದುರು ಮತ್ತು ಜನತಾ ಜಗದೀಶನ ಮುಂದೆ ಇರಿಸಿದ ನಂದಾದೀಪವಾಗಬೇಕೆಂಬುದು ಕವಿಯ ಹಂಬಲವಾಗಿದೆ. ಮನದ ವೇದನೆಯನ್ನು ಕಳೆದುಕೊಳ್ಳುವುದು 'ನಿವೇದನ'ದ ಗುರಿ; ಬಾಳು ಭಾರವೆನಿಸಿದಾಗ ಹೃದಯವನ್ನು ಹಗುರುಗೊಳಿಸಲು ಇಲ್ಲಿಯ ಕವನಗಳನ್ನು ರಚಿಸಲಾಯಿತು – ಎಂದು ಈ ಸಂಕಲನದ ಪೀಠಿಕೆಯಲ್ಲಿ ಹೇಳಲಾಗಿದೆ. ಪರಶಿವನಲ್ಲಿ ಸ್ವಾನುಭವದಿಂದ ಸಂಪೂರ್ಣ ಶರಣಾಗತನಾಗುವ ದಿವ್ಯಪಂಥದ ಪ್ರಥಮ ಪದಾರ್ಪಣವೆಂದು ಚಿತವಾಗಿರುವ ಈ ಕೃತಿಯು ಆಧುನಿಕ ಕನ್ನಡದಲ್ಲಿ ವಿರಳವಾಗಿರುವ ಆಧ್ಯಾತ್ಮಿಕ ಕವನ ಸಂಕಲನವಾಗಿದೆ. "ಜೀವ–ಶಿವನಾಗಿ ಕಾವ್ಯದರ್ಶನದಲ್ಲಿ ಕಾಣುವಂತಾಗುವುದು ಕಾವ್ಯದ ಆದರ್ಶ ; ಕಾವ್ಯದ ಸಾರ್ಥಕ್ಯ"–ಎಂಬುದು ಇಲ್ಲಿಯ ಗುರಿಯಾಗಿದೆ. ಆಧುನಿಕ ಕನ್ನಡ ಕಾವ್ಯದ ವಸ್ತು ಅಭಿವ್ಯಕ್ತಿಗಳು ಪ್ರಯೋಗಶೀಲವೆಂದು ಹಲದೆರನಾಗಿ ಸಾಗಿರುವ ಈ ಕಾಲದಲ್ಲಿ ಮೇಲ್ಕಂಡ ಗುರಿಯಿಂದ ಪ್ರೇರಿತವಾಗಿ ಆಧ್ಯಾತ್ಮಿಕ ಮೌಲ್ಯಗಳಿಂದ ಕೂಡಿದ ಇಂತಹ ಕವನಗಳ ಸೃಷ್ಟಿ ಅಪೇಕ್ಷಣೀಯವೇ ಆಗಿದೆ.

ಧಾರ್ಮಿಕ ಗ್ರಂಥಗಳ ಪ್ರಯೋಜನ ಪಡೆದು ಆಧುನಿಕ ಕನ್ನಡ ಸಾಹಿತ್ಯಕ್ಕೆ ಹಲವಾರು ಕೃತಿಗಳನ್ನು ಕಾಣಿಕೆಯಾಗಿತ್ತ ಪೂಜ್ಯ ಶ್ರೀಗಳವರು ಜೀವಾನುಭವವೇ ಈ 'ನಿವೇದನ'ಕ್ಕೆ ಮೂಲ ವಸ್ತುವೆಂದು ಹೇಳಿದ್ದಾರೆ. ಜೀವ ಭಾವವ ತೊಲಗಿಸಿ, ಭಾವಸಮಾಧಿಯೊಳಿರಿಸೆಂದು ಗುರುವಿಗೆ ಮೊರೆ ಹೋಗುವ, ನಿಜಸುಖವೆ ನೀನೆಲ್ಲಿ ಅಡಗಿರುವೆ ಎಂಗು ಪರಿತಪಿಸುವ, ಗುರುವಿನ ನೆರವು ಅರಿವು, ಕುರುಹುಗಳಿಂದ ಬಾಳಿನ

ಪರಮುಗುರಿಯನ್ನು ಸಾಧಿಸಬೇಕೆನ್ನುವ ಕೂಗು ಈ ಸಂಕಲನದಲ್ಲಿ ಪ್ರಧಾನವಾಗಿ ಕೇಳಿ ಬರುತ್ತಿದೆ. ಹೃದಯಾಂತರಾಳದಿಂದ ಹೊರಹೊಮ್ಮುವ ಇಂತಹ ಭಾವದಿಂದಾಗಿ ಕೆಲವು ಸುಂದರ ಭಾವಗೀತೆಗಳು ಇಲ್ಲಿ ಮೂಡಿಬಂದಿವೆ. ಕವನಗಳ ಸಂದರ್ಭಸೂಚಿ ಯಿಂದ ಕವನಗಳ ಆಶಯುವನ್ನು ಸ್ಪಷ್ಟಗೊಳಿಸಲಾಗಿದೆ. ಜೀವ–ದೇವರೀರ್ವರೊಂದೇ ಎಂಬ ಭಾವದಿಂದ ಪ್ರೇರಿತವಾಗಿ—

'ಎನ್ನ ನಿನ್ನ ಭಾವ–ಭಾಷೆ ಲಯದಲಿ, ಕಟ್ಟಿಹೆ ನೀ ಕಾವ್ಯ ನಯದಲಿ'

–ಎಂದು ಒಡನುಡಿಯುವ ಈ ಕವಿಯು ಆಧುನಿಕ ಕನ್ನಡ ಕಾವ್ಯಕ್ಕೆ

ಅಂಗಸುಖ ರಾಗರಸ, ಲಿಂಗಸುಖ ಯೋಗರಸ, ಅಂಗ ಲಿಂಗ ಸಮರಸ–

ಎಂಬ ಹೊಸ ಧ್ವನಿಯನ್ನು ತಂದಂತಿದೆ.

**— ಸ. ಸ. ಮಳವಾಡ**

# ಯತಿ ಜೀವನದ 'ನಿವೇದನ'ಯೋಗ

**—ಶ್ರೀ ಆರ್. ಜಿ. ಕುಲಕರ್ಣಿ**

ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಅವರ "ನಿವೇದನ"ವೆಂಬ ಕವನ ಸಂಕಲನವು ಆಧುನಿಕ ಕನ್ನಡ ಸಾಹಿತ್ಯದ ವಿಮರ್ಶಾ ಪ್ರಪಂಚಕ್ಕೆ ಒಂದು ಸವಾಲಿ ದ್ದಂತಿದೆ. ಯತಿಜೀವನದ ಅಂತರಂಗದರ್ಶನ ಕನ್ನಡ ಸಾಹಿತ್ಯದಲ್ಲಿ ಬಹು ವಿರಳ ವಾಗಿದೆ. ಕನ್ನಡ ಭಾಷೆಯ ಕೆಚ್ಚು ಕ್ರಾಂತಿಗಳನ್ನು ಕಾಯ್ದುಕೊಂಡು ಯತಿ ಜೀವನದ ಶುಚಿ–ರುಚಿಗಳನ್ನೂ, ಒಲವು ನಿಲವುಗಳನ್ನೂ ; ಕಳವಳ–ಕಾರುಣ್ಯ ಸಾಧನಗಳನೂ ಕಾಣಬೇಕಾದರೆ ಇಂಥ ಕವನ ಸಂಕಲನಗಳನ್ನು ಗಮನಿಸಬೇಕಾಗುತ್ತದೆ.

### ರಸಿಕರಲ್ಲ, ರಸಯೋಗಿ

ಜೀವನದಲ್ಲಿ ವಿಕೃತ ವಿಲಾಸವನ್ನು ಸುಖವೆಂಬ ಭ್ರಾಂತಿಯಲ್ಲಿರುವ ಅಜ್ಞರಂತೆ ಸಾಹಿತ್ಯದಲ್ಲಿಯೂ ರಸಾನುಭೂತಿ ಎಂದರೆ ಅತೃಪ್ತ ಕಾಮವಾಸನೆಗಳ, ವಿಕೃತ ಭಾವೋದ್ರೇಕಗಳ ಚಿತ್ತಕ್ಷೋಭವೆಂದು ಭಾವಿಸಿದ ಭ್ರಾಂತವಿಮರ್ಶಕರೂ ಉಂಟು ; ಸಾಮಾಜಿಕ–ರಾಜಕೀಯ ಕ್ರಾಂತಿಕಾರರು–ಕ್ರಿಯಾನಿಷ್ಠರು ಸಾಹಿತಿಗಳನ್ನು ನಿರುಪ ಯೋಗಿ ಕನಸುಗಾರರು–'ಲೋಟಸ್ ಈಟರ್ಸ್'– ಎಂದು ಕರೆವುದುಂಟು.

ಆದರೆ "ನಿವೇದನ"ದಂಥ ಕವನ ಸಂಕಲನ ಕಂಡಾಗ ನಾವು ಇನ್ನೊಂದು ತಪ್ಪು ಮಾಡುತ್ತೇವೆ. ಯತಿಗಳು ಕವನ ಸಂಕಲನ ಪ್ರಕಟಿಸಿದರೆ ಅದರಲ್ಲಿ ವೇದಾಂತ ತುಂಬಿದೆ ಎಂದು ಅಲಕ್ಷ್ಯ ಮಾಡುತ್ತೇವೆ.

ಈ ತಪ್ಪನ್ನು, ಆದಷ್ಟು ಬೇಗನೆ ಶುದ್ಧ ಸಾಹಿತ್ಯ ವಾದಿಗಳು ತಿದ್ದಿಕೊಂಡು 'ಅಂತರಂಗದ ಪ್ರಜ್ಞಾ ವಿಕಾಸ' ಇಂಥ ಕವನ ಸಂಕಲನಗಳಲ್ಲಿರುವದೆಂದು ಕಾಣಬೇಕಾ ಗಿದೆ. ಬಾಳಿನ ಸಾಮರಸ್ಯದ ಕೇಂದ್ರವನ್ನು ಅರಸುತ್ತ ಸಾಗಿದ ಜೀವವು ಅಂಥ

ಕೇಂದ್ರದ ದರ್ಶನದಿಂದ, ಇಲ್ಲವೆ ಆ ಕೇಂದ್ರ ದರ್ಶನ ಮಾಡಿಸುವ ಜ್ಞಾನಿಯೂ-ಗುರುವಿನ-ಭಕ್ತಿಯಿಂದ ತನ್ನ ಹೃದಯ ನಿವೇದನೆ ಮಾಡಿಕೊಳ್ಳುತ್ತಾನೆ.

ಇಂಥ ನಿವೇದನೆಯಲ್ಲಿ ಎಲ್ಲ ಭಾವಗಳು ಅದೊಂದು ನಿರ್ಲಿಪ್ತ-ನಿರಹಂಕಾರದ ನೆಲೆಗೇರಿ ಸಾರ್ವಜನಿಕ ಕಲ್ಯಾಣದ ಪ್ರಾರ್ಥನಾ ರೂಪಪಡೆಯುತ್ತದೆ.

ಈ ಬಗೆಯ ಪ್ರಾರ್ಥನಾಶಕ್ತಿ ಶ್ರೀ ಜ. ಚ. ನಿ. ಅವರಂಥ ಯತಿಗಳಿಗೆ ಸಹಜವಾಗಿರುತ್ತದೆ. ಸನ್ಯಾಸ ಜೀವನದ ಸ್ವಾಭಾವಿಕ ಸಾಧನೆ-ಸಂತತ ಶುಚಿ ಜೀವನದ-ರುಚಿ ಸಂಸಾರದ ಅಭಿವ್ಯಕ್ತಿಯು ಈ ಕಾವ್ಯದಲ್ಲಿ ಕಂಡುಬರುತ್ತದೆ.

ಈ ದೃಷ್ಟಿಯಿಂದ 'ನಿವೇದನ'ಗಳಂಥ ಕೃತಿಗಳು ಕೇವಲ ಸಾಹಿತ್ಯ ವಿಮರ್ಶಕರ ಚರ್ಚಾವಿಷಯಗಳಲ್ಲ; ಮನೋವಿಜ್ಞಾನಿಗಳ ಆಳವಾದ ಅಭ್ಯಾಸದ ವಸ್ತು ವಿಶೇಷಗಳಾಗುತ್ತವೆ.

ಶ್ರೀ ಜ. ಚ. ನಿ. ಅವರು ವಾಕ್‌ಶಕ್ತಿಯನ್ನು ಮಾತ್ರ ಪಡೆದ ಕವಿಗಳಲ್ಲ; ಸುಕುಮಾರ ವ್ಯಕ್ತಿತ್ವದ ಸ್ವವಿಮರ್ಶೆಯ ಸೂಕ್ಷ್ಮ ಪ್ರಜ್ಞೆ ಪಡೆದ ಕವಿಗಳು. ಅವರಿಗೆ ರಸಾನುಭೂತಿಯಿಂದ ರಸಯೋಗ. ಅವರು ಬಳಸುವ ಪಾರಿಭಾಷಿಕ ಪದಗಳ ಹಿಂದೆ ಕಳಕಳಿಯ ಲೋಕ ಕಲ್ಯಾಣದ ಶುದ್ಧಭಾವವು ನಿರ್ಲಿಪ್ತ ರಸವೇದನೆಯಾಗಿ ಮೇಲೇಳುತ್ತದೆ.

"ಮಗುವೊಂದು ಮಾತೆಯಲ್ಲಿ ಮೊರೆಯಿಟ್ಟು ಪಡೆವುದೇನನ್ನು? ಮಾತೆಯ ಜೀವನ ಸಾರಸರ್ವಸ್ವನಾದ ಕ್ಷೀರ ಮಾತ್ರವನಲ್ಲ-ಅವಳ ಅಪಾರ ಹೃದಯವನ್ನೇ; ಅನುಪಮ ಅನುಕಂಪವನ್ನೇ; ಅಸದೃಶ ಅನುಗ್ರಹವನ್ನೇ!"

ಇಂಥ ಮಾತಿನಲ್ಲಿ ಯತಿಗಳು ಹೇಗೆ ಸಾಮಾನ್ಯ ಅನುಭವವನ್ನು ಅಂತರ್ದರ್ಶನದ ಗವಾಕ್ಷವನ್ನಾಗಿ ಮಾರ್ಪಡಿಸುತ್ತಾರೆಂಬುದನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ಶ್ರೀಗಳ "ನಿವೇದನ" ಯೋಗವನ್ನು ಸಾರಸ್ವತಲೋಕ ಅರಿಯ ಬಯಸುತ್ತದೆ.

"ಮಣ್ಣಿಗೆ ಬಿತ್ತಿದ ಬೀಜವ ಮಣ್ಣೇ ತಿನಬೇಕೆ?
ಮುಗಿಲೇ ತಿನಬೇಕೆ? ತನಗೊದಗಿದ ಮೃಷ್ಟಾನ್ನವ
ತಾನೇ ತಿನಬೇಕೆ? ತಾವೇ ಉಣಬೇಕೆ?"

ಇಂಥ ಚರಣಗಳಲ್ಲಿ ಬಹು ಪ್ರಭಾವಯುತವಾಗಿ ತ್ಯಾಗಭಾವದ ಅನಿವಾರ್ಯ ಪ್ರಮಾಣ ದರ್ಶನ ಮಾಡಿಸುತ್ತಾರೆ-ಈ ಯತಿಗಳು.

ಅದರಂತೆ ಅವರ "ಮೇಲೇಳು ಓ ಜನನಿ" ಎಂಬ ಪದ್ಯ ತುಂಬ ಅರ್ಥ ಪೂರ್ಣವಾಗಿ ರಾಗಮಧುರವಾಗಿ ಮಂತ್ರದಂತೆ ಕಂಪಿಸುತ್ತದೆ. ಭಕ್ತಿ-ನಿವೇದನೆ-ಸ್ವಯಂ ಸಂತೃಪ್ತವೆಂಬ ಅರ್ಥ ನೀಡುವ ಇಲ್ಲಿಯ ಗೀತೆಗಳು ಸರಿಯಾಗಿ ಮನನವಾದರೆ ಹೃದಯಂಗಮವಾಗಿ ರಸಹೃದಯದಲ್ಲಿ ನಿವೇದನ ಯೋಗಭಾವವನ್ನು ಉದಯಿಸುವ ಶಕ್ತಿ ಪಡೆದಿವೆ.



# ಶ್ರೀ. ಜ. ಚ. ನಿ. ಅವರ ಶ್ರೀಮಂತ ಕೃತಿ 'ಗುರು ಗೀತಾಂಜಲಿ'

ಶ್ರೀ ಎಂ. ಜಿ. ನಾಗರಾಜ (ಅಚಲಶರಣ್), ಬೆಂಗಳೂರು.

ಗುರುರ್ಮಾತಾ, ಗುರುಃ ಪಿತಾ ಗುರುರ್ದೇವೋಹಿ ಬಾಂಧವಃ
ಗುರುಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ
ಗುರುಃ ಸಾಕ್ಷಾತ್ ಪರಂ ಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ।
—ಪ್ರಾಚೀನ ಕಾಲದಿಂದಲೂ ಗುರುಸ್ತೋತ್ರ ನಡೆದು ಬಂದದ್ದು ಹೀಗೆ.

ಗುರುವಿನ ಈ ವಿಶಿಷ್ಟ ಗುಣಗಳ ಹಿನ್ನೆಲೆಯಲ್ಲಿ ಶ್ರೀ. ಜ. ಚ. ನಿ ಅವರ ಹೃದಯ ನಡೆದು ಬಂದ ದಾರಿ–'ಗುರು ಗೀತಾಂಜಲಿ'. ದಾರಿ'ಯಾದರೋ ಬಲು ಸುಂದರವಾಗಿದೆ ವಿವಿಧ ಕಲಕಲ ನಾದದ ಪಕ್ಷಿಗಳು ಅಲ್ಲಿ ಹಾಡುತ್ತಿವೆ. ಇಂತಹ ದಾರಿಯಲ್ಲಿ ಸಾಗುವವರಿಗೆ, ಮನ ಶುದ್ಧವಿರಬೇಕು; ಕಾವ್ಯಹೃದಯ ಬೇಕು; ಸೈಪು ಮಿಗಿಲಾಗಬೇಕು.

ಶ್ರೀ. ಜ. ಚ. ನಿ ಅವರ ಮಾತುಗಳಲ್ಲೇ ಹೇಳುವುದಾದರೆ; "ಈ 'ಗುರು ಗೀತಾಂಜಲಿ' " ಕವನಕ್ಕೆ ಕವನ; ಸ್ತವನಕ್ಕೆ ಸ್ತವನ; ಇವನ್ನು ಹಾಡಿದವರಿಗಿಲ್ಲ ಭವ ಬಂಧನ" ಇದು ಬಲು ಸಹಜವಾದ ಮಾತು ಎನಿಸುತ್ತದೆ, ಕವನಗಳನ್ನು ಆಸ್ವಾದಿಸಿದ ಮೇಲೆ. ಅಂತೇ ಈ 'ಗುರುಗೀತಾಂಜಲಿ'ಯನ್ನು—

"ಎಷ್ಟು ಸಲ ನೆನೆದರೂ ತೀರದು. ಎಷ್ಟು ಉನ್ನತವಾಗಿ ಭಾವಿಸಿದರೂ ತೀರದು. ಅರಿದಷ್ಟೂ ಆಳ ಅದರ ಅರ್ಥ. ಆರೋಗಿಸಿದಷ್ಟೂ ಅಪ್ಯಾಯನ ಅದರ ತೀರ್ಥ".—ಅಂದಮೇಲೆ "ಆತ್ಮಗುರುವಿನ ಅಮೃತಮಯ ಈ ಸ್ತೋತ್ರ ತೀರ್ಥವನ್ನು ಆರೋಗಿಸಬೇಕು.

ಶ್ರೀ. ಜ. ಚ. ನಿ ಸನ್ನಿಧಿಯವರು, ಹಾರಿಸಿದ 'ಹೊನ್ನು ಹಕ್ಕಿ', ತೋರಿಸಿದ 'ರನ್ನ ಚುಕ್ಕಿ' ನಿವೇದಿಸಿದ 'ಹೂಗೊನೆ' ಮತ್ತು 'ಹಾಲ್ಕೆನೆ' ಅಲ್ಲದೆ 'ನಿವೇದನ' ಎಂಬ

ಹೆಸರಿನ ಕವನ ಸಂಗ್ರಹಗಳಿಂದ ಆಯ್ದ ಮುತ್ತುಗಳೊಡನೆ. ಹೊಸವುಗಳನ್ನು ಪೋಣಿಸಿ, ಕಟ್ಟಿದ ಮುತ್ತಿನ ಹಾರ 'ಗುರು ಗೀತಾಂಜಲಿ'.

ಶ್ರೀ ಗುರುವಿನ ಸ್ತುತಿ ಎಂದರೆ ಸನ್ನಿಧಿಯವರಿಗೆ ಅದೊಂದು ಆನಂದದ ರಸಾನುಭವ; ಅನುದಿನ ಆ ಕಾಯಕದ ಸಾನುಭವ. ಸನ್ನಿಧಿಯವರ ಹೃದಯ ಕೈಲಾಸದ ಕಾವ್ಯ ಗಂಗೋತ್ರಿ ಕಾವ್ಯ ಗಂಗೆಯಾಗಿ ತುಂಬಿ ತುಂಬಿ ಹರಿದಿದ್ದಾಳೆ. ಸಕಲ ಬದುಕನ್ನು ಪಾವನ ಗೈದಿದ್ದಾಳೆ. ಅಂತೇ ಶ್ರೀಗುರುವಿನ ಮಹತ್ತಿನ ಬಗ್ಗೆ ಹಾಡಿ-ಪಾಡಿ, ನಲಿದು-ಒಲಿದು, ಗೆಲಿದು-ಸಂದು ವಿವಿಧ ಭಾವ ಸರಸ್ವತಿಯ ಭಂಗಿ ಳಾಗಿ, ತಾವೇ ತಾವಾಗಿ ಹೃದಯ ಗೀತೆಗಳು ಸನ್ನಿಧಿಯವರಿಂದ ಹರಿದು, ಹರಡಿ ಹಾರಿವೆ ಎತ್ತರಕ್ಕೆ; ನಿರಂತರಕ್ಕೆ. ಈ ಸಂಗ್ರಹದ ಗೀತೆಗಳಲ್ಲಿ ಕಡೆದಿಟ್ಟ ನವೀನ ಶಬ್ದಾರ್ಥ ಸೃಷ್ಟಿಯು ಮನಸ್ಸನ್ನು ಚೇತೋಹಾರಿಯನ್ನಾಗಿ ಮಾಡುತ್ತದೆ. ಹೊಸ ಭಾವದ, ಹೊಸ ರಾಗದ, ಹೊಸ ಹಾದಿಯೊಂದು 'ಸ್ತವನಮಾರ್ಗ'ದಲ್ಲಿ ಮೈವೆತ್ತು ಬಂದಿರುವುದು ಈ ಕವನ ಸಂಗ್ರಹದ ವಿಶೇಷ ಆಕರ್ಷಣೆ.

ಆರಂಭಿಕ ಕವನ 'ಓಂ,ನಮೋಗುರುವೆ'-ದಲ್ಲಿ ಗುರುವಿನ ಶ್ರೀ ಶಕ್ತಿಯ ಗುಣ ಗಾನವನ್ನು ಕೇಳಿದರೆ, 'ವಚನಗೀತ'ದಲ್ಲಿ ಸಾಕ್ಷಾತ್ಕಾರದ ಹಾದಿಯನ್ನು ಕಾಣುತ್ತೇವೆ.

'ಅರ್ಚಿಸಲಿಲ್ಲ ಅಂತಃಕರಣದಿ'-ಸರಳವಾಗಿ, ಸುಂದರವಾಗಿ ಚೊಕ್ಕವಾಗಿ ಮೂಡಿ ರುವ ಕವನ ಪ್ರಸ್ತುತ ಸಮಾಜಕ್ಕೆ ಹಿಡಿದ ಕನ್ನಡಿಯಂತಿದೆ. ಅಂತೇ ಕರ್ತವ್ಯ ಚ್ಯುತನಾಗಿ, ಶ್ರೀಗುರುವಿನ ಕೃಪೆಗಾಗಿ ಬಯಸುವುದು ಲೇಸಲ್ಲ ಎಂಬ ಭಾವನೆಯನ್ನು ವ್ಯಕ್ತಗೊಳಿಸಿರುವ ಸಾಲುಗಳು:

"ಮನಸಂಸ್ಕಾರವ ಪಡೆಯುದ ಮುನ್ನ
ತನು ಸಂಸ್ಕಾರವ ಪಡೆದರದೇಂ ಚೆನ್ನ?

ಇನ್ನು 'ವಚನಸ್ತವನ' ಎಂಬುದರಲ್ಲಿ ಪೀಠದ ಹಿರಿಯ ಗುರುಗಳೊಬ್ಬರಾದ ಶ್ರೀ ವಿರೂಪಾಕ್ಷ ದೇಶಿಕೇಂದ್ರರ ಗರಿಮೆಯನ್ನು, ಬಿಂದುವಿನಲ್ಲಿ ಸಿಂಧುವನ್ನಡಗಿಸಿದಂತೆ, ಮೂಡಿಸಿ, ಕವನದ ಜಾಣ್ಮೆಯ, ಆಶ್ಚರ್ಯದಾಯಕ ನಡೆಯನ್ನು ತೋರಿದ್ದಾರೆ. 'ಸ್ತವನ'ರಚನೆಯ ಕಾಲಕ್ಕೆ ಸನ್ನಿಧಿಯವರ ಹೃದಯವೂ ಕುಣಿಯತೊಡಗಿರಬೇಕು. ಅಂತೇ ಅವರೂ ಹಾಡಿದರು-"ಹಾಡಿರೋ ನಾಲಗೆ ದಣಿಯದೆ ವಿರೂಪಾಕ್ಷ ಗುರುವರನ" ಎಂಬುದಾಗಿ ಅರುಹಿದರು. ಅಂತೇ, ಇದು ಭಾವ ಸುಂದರ, ಪೂರ್ಣಸಂಗೀತಮಯ ಸ್ತವನವಾಗಿದೆ.

ಹೃದಯ ನುಡಿದದ್ದು ಹೃದಯಕ್ಕೆ ಸಾಗುವ ಕಾರಣ 'ಹೃದಯಗೀತ'ನುಡಿಯುವ 'ನಾ ನುಡಿದುದೇ ಕಾವ್ಯ' ನೀನೊಲಿದುದೇ ದಿವ್ಯ' ಸಾಲುಗಳು ನೂರು ಪಾಲಿಗೆ ಸತ್ಯ. ಅಲ್ಲದೆ ಗರಿಬದ್ಧವಾಗಿ ಮೂಡಿಸಿ ಹೇಳುತ್ತಾರೆ ಸನ್ನಿಧಿಯವರು ಹೀಗೆ:

"ಇದುವೆ ಕೊರಳಿನ ಗಾಥ, ಇದುವೆ ಕರುಳಿನ ಗೀತ
ಇದನೆ ಕರುಣಿಸಿ ಕಾಪಿಡಯ್ಯ ನಾಥ"

ಸಹೃದಯನನ್ನು ತಣಿಸುತ್ತದೆ. ವೈಶಿಷ್ಟ್ಯಪೂರ್ಣ ಸಾಲುಗಳ ಅಕ್ಷಯ ಭಾವವೀಣೆಯಂತೆ ಈ ಕವನದ ವಾಣಿ ಮಿಡಿಯುತ್ತದೆ.

ಕಾವ್ಯದ ಒಂದು ಹೊಸ ಬಗೆಯನ್ನು ತೋರುವ ಕವನ,– 'ಪೂರ್ಣವೆನಿಸು ತಂದೆ' ಸೂಕ್ಷ್ಮಪ್ರಜ್ಞೆಗೆ, ಕವನದ ಮೊದಲ ಸಾಲುಗಳೇ ನೇರ ಸಾಗುವಂತೆ, ಭಕ್ತಿಯ ಲಲಿತ ನುಡಿಗಳು, ಪ್ರತಿಪದ್ಯದ ಮೊದಲ ಸಾಲುಗಳಲ್ಲಿ ಮೂಡಿವೆ. ಓದುಗರನ್ನು ನಂತರ ಅನುಭೂತಿಗೆಳೆಸುತ್ತದೆ; ಸೂಕ್ಷ್ಮಪ್ರಜ್ಞೆಯನ್ನು ಅರಳಿಸುತ್ತದೆ; ವ್ಯಾಪಕವಾಗುತ್ತದೆ ಈ ಕವನದ ಶಕ್ತಿ. ಈ ಕವನ, ಸರಳ ಹೃದಯದ ಅತ್ಯುತ್ತಮ ನಿವೇದನೆ; ಸನ್ನಿಧಿಯವರ ಸಮಕಾಲೀನ ಪ್ರಜ್ಞೆಯ ಒಂದು ಸೋದಾಹರಣೆ.

"ಮೂಡಿಬಾ ಗುರುವೆ, ಮೂಡಿಬಾ ಮೂಡಣದ ಮುಂಬೆಳಗಾಗಿ
ಮಂತ್ರ ದೀಕ್ಷೆಯಲಿ ನಿಂದು ಮನದ ಮಾಯಾ ಮಲವ
ಕಳೆದು ಕಣ್ಣರಳಿಸು ತಂದೆ."

ಇನ್ನು ಗಾಂಭೀರ್ಯಕ್ಕೆ, ಛಂದೋಶಕ್ತಿಗೆ, ಭಾವ ಶ್ರೀಮಂತಿಕೆಗೆ, ಅರ್ಥಗೌರವಕ್ಕೆ, ಅಚ್ಚುಕಟ್ಟಿಗೆ, ಯಾವುದರಲ್ಲೂ ಲೇಶಮಾತ್ರವೂ ದೋಷವಿಲ್ಲದ ಉತ್ಕೃಷ್ಟವಾದ ಕವನ. 'ಗುರುವಗಸ್ತ್ಯ' ಅಗಸ್ತ್ಯಶಕ್ತಿ ಒಂದು ಮಹಾಶಕ್ತಿ, ದಿವ್ಯಶಕ್ತಿ. ಈ ಕವನದ ಶಕ್ತಿಯೂ ಹಾಗೆಯೆ. ಹೆಸರಿಗೆ ತಕ್ಕಂತೆ ಶಕ್ತಿಯುಳ್ಳ ಕವನ. ಶ್ರೀಗುರುವಿನ ಶಕ್ತಿಯನ್ನು ಕುರಿತು ಬಂದ ಸಾಲುಗಳು :

"ಓ, ಗುರುವೆ ಎನ್ನೊಳಗೆ ಎದೆಯೆತ್ತಿ ನಿಂತಿರುವ
ಹಮ್ಮೆಂಬ ವಿಂಧ್ಯಾದ್ರಿ ಮಸ್ತಕವ ಮೆಟ್ಟಿರುವೆ"
.....................................................
ಉರಿದುದ್ದ ಹಿರಿದುದ್ದ ಬೆಳೆದುಬ್ಬಿಸುತಿದ್ದ
ಸಂಸಾರ ಸಾಗರವ್ರಿಕ್ಷಿತ ಮಾಡಿ ನೀನ್
ಬಿಕ್ಕಿಸದೆ ಲೆಕ್ಕಿಸದೆ ಕರತಳದೊಳ್ ಹಿಡಿದಿರುವೆ
ಭಕ್ತಿರಸ ಗಂಗೆಯನು ಎದೆಯೆಂಬ ಹರಿಸಿರುವೆ.
..................................... ....
ವಾತೆಂಬ ವಾತಾಪಿ ರಕ್ಕಸನ ಜೀರ್ಣಿಸಿದ
ಓಗುರುವೆ ನೀನೆ ನಿಜವಾಗಿ ಎನಗಗಸ್ತ್ಯ.

'ನಲಿಸು ನಲಿಸು' ಎಂಬ ಕವನದಲ್ಲಿ, ಶ್ರೀ ಗುರುವಿನೊಡನೆ ಸಾಮರಸ್ಯಕ್ಕಾಗಿ ಹಾತೊರೆವ ಜೀವದ ನುಡಿಗಳು,–

"ಎನ್ನ ಕಾಯ ಕರ್ಪೂರವ ಮಾಡು' ನಿನ್ನ ಕಾರ್ಯಕರಣ ಜ್ಯೋತಿಯನಂಟಿಸು;
ಎನ್ನ ಕರಣ ಶ್ರೀಗಂಧವ ತೀಡು, ನಿನ್ನ ಚರಣ ಯುಗಳಕೆ ಗಂಧವ ಲೇಪಿಸು."

ವಿಶ್ವ ಚೇತನದಲ್ಲಿ ಐಕ್ಯವಾಗುವ ಹೆಬ್ಬಯಕೆಯನ್ನು ಸುಂದರವಾಗಿ ಮೂಡಿಸಿರುವ ಕವನವಿದು.

'ನಿಡುಮಾಮಿಡಿಯ ನೋಡಿ'–ಎಂಬ ಕವನದಲ್ಲಿ, ಶಿವ ಚಿಂತನ, ಗುರು ಚಿಂತನ ಹಾಗು ನಿಸರ್ಗ ಚಿಂತನಗಳ ಸಾರಸ್ವತ ಸಮನ್ವಯವನ್ನು ಕಾಣುತ್ತೇವೆ. ನಿಸರ್ಗದ ನಿಜಸುಖ ನೋಟದಲ್ಲಿ ಆಧ್ಯಾತ್ಮಿಕ ವೈಭವದ ವೈಖರಿಯನ್ನು ಕಾಣಿಸುತ್ತಾರೆ ಸನ್ನಿಧಿಯವರು. ಈ ಕವನದಲ್ಲಿ ಓದುವವರ, ಕೇಳುವವರ ಕಿವಿ, ಹೃದಯುಗಳೆರಡಕ್ಕೂ ಕಾವ್ಯದ ರಸಾನುಭವದ ಜೊತೆಗೆ, ಗುರುಭಾವದ ಗಾಂಭೀರ್ಯವನ್ನೂ ತುಂಬಿಕೊಡುವ ಕವನವಿದು. ಅಂತೇ ಸನ್ನಿಧಿಯವರ ಹೃದಯದಿಂದ ಚಿಮ್ಮಿರುವ ಸಾಲುಗಳು–

"ನಿಡುಮಾಮಿಡಿ ನಡುಬಯಲಿನ ಪಡು ಬೆಟ್ಟದ ಮೇಲೆ
ನಿಡುಗಾಲದ ಕೋಡ್ಗಲ್ಲಿನ ಮೃಡಶಾಸನ ಲೀಲೆ.
ಕರಿಕಲ್ಲೊಳು ಮೆಯ್ವೆತ್ತಿದ ಬೃಹದಕ್ಷರ ಶ್ರೇಣಿ,
ಹಿರೆಹಿಂಗದೆ ಹಿರಿಹರುಷದೆ ನಿಂದೋದಿತು ವಾಣಿ. !"

ಗುರು ಚಿಂತನೆಯ ಗಾಂಭೀರ್ಯ, ಪ್ರಾಸದ ವಿಶಿಷ್ಟ ಅನುಸಂಧಾನ, ಕವನದ ಮೋಹಕ ಗತಿ ಗಮನ, ಎಂತಹವರ ಮನಸನ್ನಾದರೂ ಸೆರೆಹಿಡಿಯುತ್ತದೆ; ಇಂತಹ ಗುರು 'ಗುರುವಗಸ್ತ್ಯ'ನಲ್ಲದೆ ಮತ್ತಾರು ?

ಗುರುಪೂಜೆಯ ಸಮಯದಲ್ಲಿ, ಮಂಗಳಗೀತೆಗಳಿಗಾಗಿ ಪರಿತಪಿಸುತ್ತಿದ್ದ ಶಿಷ್ಯ ಸಮೂಹಕ್ಕೆ ಸನ್ನಿಧಿಯವರು ಕರುಣಿಸಿರುವುದೇ ಗುರು 'ಮಂಗಳಗೀತೆ'ಗಳಾಗಿವೆ.

ಹೀಗೆ 'ಗುರುಗೀತೆ'ಗಳನ್ನು ಓದುತ್ತ, ಹಾಡುತ್ತ, ನಮ್ಮ ಭಕ್ತಿಯು ವಿಕಾಸವಾಗುತ್ತ ಸಾಗುತ್ತದೆ. ಅಂದರೆ ನಾವು ಗುರುಕರುಣೆಯ ಸರೋವರದಲ್ಲಿ ಅರಳಿದ ಭಕ್ತಿಯ ಪುಷ್ಪಗಳನ್ನು ತೆಗೆದುಕೊಂಡು, ಪೂಜಿಸಲು, ಮೆಟ್ಟಲು ಮೆಟ್ಟಲಾಗಿ ಹತ್ತಿ 'ಚೆಲ್ವ ಗುರುರಾಯನ ಕರುಣಾಲಯ'ಕ್ಕೆ ಸಾಗುತ್ತೇವೆ. ಅಂತೇ ಈ ಕವನ ಸಂಗ್ರಹದ ಹಿರಿಮೆ ಘನವಾದುದು.

'ಗುರು ಗೀತಾಂಜಲಿಯ ಕವಿ'– ಶ್ರೀ ಗುರು ಕವಿ.

ಆಧ್ಯಾತ್ಮಿಕ ಸಾಹಿತ್ಯದಲ್ಲಿ ಶ್ರೀ ಜ. ಚ. ನಿ. ಸನ್ನಿಧಿಯವರದು ಸಹಸ್ರ ಸವ್ಯಸಾಚಿ ಶಕ್ತಿ, ಅದ್ವಿತೀಯ ಶಕ್ತಿ. 'ಅಧ್ಯಾತ್ಮ'ವನ್ನು ಕಾವ್ಯದ ರಸಾನುಭವಕ್ಕೆ ಸೌಷ್ಠವಕ್ಕೆಳಸಿ ಪಂಡಿತ ಪಾಮರರಿಬ್ಬರಿಗೂ ಅನುವು ಮಾಡಿ, ಸಮನ್ವಯ ಸಾಧಿಸಿ ತೋರಿದ ಸನ್ನಿಧಿಯವರ ಕೃತಿ–'ಗುರುಗೀತಾಂಜಲಿ.'

ಅಂತೇ ಇದು ಆಧ್ಯಾತ್ಮಿಕ ಸುಂದರ ಭಾವವನ್ನು ದ್ವಿಗುಣಿಸುವ ಶ್ರೀಮಂತ ಕವನ–ಸ್ತವನ ಸಂದೋಹ.

ಆತ್ಮದರಿವನ್ನು ಪಡೆವ ಹೆಬ್ಬಯಕೆಯುಳ್ಳ ಆಧ್ಯಾತ್ಮಿಕ ಕವಿಯ ಮನದಾಳದಿಂದ ಹೊರಹೊಮ್ಮಿ, ಶ್ರೀ ಗುರು ಚರಣಗಳೆಡೆಗೆ ಸಮರ್ಪಿತವಾಗುವ ಈ ೬೫ ಕವನಗಳಲ್ಲಿ ಬಗೆಬಗೆಯ ಬಗೆಗಳಿಂದಲೂ ಆತ್ಮವಿಕಾಸವನ್ನೇ ಕುರಿತು ಹಾಡಿಕೊಂಡಿದ್ದಾಗಿದೆ.

## ನಿವೇದನ : ಮತ್ತು ಗುರು ಗೀತಾಂಜಲಿ :

ಕವಿಯೇ ಹೇಳುವಂತೆ : "ಗುರುದೇವನೆದುರಿಗಿರಿಸಿದ ನಂದಾದೀಪ, ಈ ನಿವೇದನ. ಈ ನಂದಾ ದೀವಿಗೆಯ ದೀಪ್ತಿಯಲ್ಲಿ ಬಾಳಿನ (ಒಳ?) ನೋವು-ನಲಿವುಗಳು ಹೆಕಡಿವೆ....ತಪ್ಪೇ ಇರಲಿ, ಒಪ್ಪೇ ಇರಲಿ, ಅದನ್ನೆಲ್ಲ ಆತನಿಗೊಪ್ಪಿಸಿಬಿಟ್ಟರೆ ಆಯಿತು. ಅದು ನಮ್ಮಲ್ಲಿ ಉಳಿಯದ ಮೇಲೆ ಅದರ ಪರಿಣಾಮ ನಮಗಾಗದು" ಎಂಬ ಮಾತಿನ ಸೂತ್ರವನ್ನು ಇಲ್ಲಿಯ ಪ್ರತಿಯೊಂದು ಕವನ ಕುಸುಮದಲ್ಲಿಯೂ ಕಾಣಬಹುದಾಗಿದೆ.

ಸಾಂಸಾರಿಕ ಸುಖ-ದುಃಖಗಳನ್ನು ಮೀರಿದ ಆನಂದವನ್ನು ಆರ್ಜಿಸಲೆಂದು ಹಾತೊರೆಯುತ್ತಿರುವ ಜೀವನ ಸ್ಪಂದನ ಇಲ್ಲಿಯ ಪ್ರತಿಪದ್ಯಗಳಲ್ಲೀಯೂ ಒಂದಿಲ್ಲೊಂದು ರೂಪದಲ್ಲಿ ಮೂಡಿ ನಿಂತಿದೆ. ಇಂಥಲ್ಲಿ ಮಾತು-ರೀತಿ-ಕಟ್ಟು-ಛಂದಗಳನ್ನು ನಿರೀಕ್ಷಿಸುವುದು ಸಾಧುವಲ್ಲ.

"ನಿವೇದನ"ದ ಕವಿಗಳಾದ ಶ್ರೀ ಜ. ಚ. ನಿ ಅವರೇ, ನಿವೇದನದ ನಂತರ ದೊರಕೊಂಡ ಗುರುವನ್ನು, ಗುರುಪೀಠದ ಗುರುಗಳನ್ನು ಕುರಿತು, ಸ್ತುತಿಸಿದ ಪದ್ಯಗಳ ಸಂಕಲನವಿದು. ಗುರುಗೀತಾಂಜಲಿ "ಓಂ ನಮೋ ಗುರುವೇ" ದಿಂದ ಪ್ರಾರಂಭವಾಗಿ, "ಬೆಳಗುವೆ ಕರ್ಪರತಿಯ" ವರೆಗೆ ಹರಿದು ಬಂದಿವೆ ಈ ಗುರು ತತ್ವದ ಗೀತಾಂಜಲಿ.

ಕವಿ ಹೇಳುವಂತೆ: "ಈ ಗುರುಗೀತಾಂಜಲಿ ಕವನಕ್ಕೆ ಕವನ ;ಸ್ತವನಕ್ಕೆ ಸ್ತವನ" ಎಂಬ ಮಾತಿನ ಸತ್ಯತೆಯನ್ನು ಇಲ್ಲಿಯ ಪ್ರತಿ ಕವನದಲ್ಲಿಯೂ ಕಾಣಬಹುದು.

"ಶಿಶುವಿನ ಸೃಷ್ಟಿಗೆ ತಾಯಿ-ತಂದೆಗಳ ಅವಶ್ಯಕತೆ ಎಷ್ಟಿದೆಯೋ, ಅಷ್ಟೇ ಮಾನವನ ಮಾನವತೆಗೆ ಮಹಗುರುವಿನ ಅವಶ್ಯಕತೆಯಿದೆ....ಗುರುವೇ ತಾಯಿ, ಗುರುವೇ ತಂದೆ, ಗುರುವೇ ಸಕಲ ಸರ್ವಸ್ವ....ಗುರುದರ್ಶನ ಪರಮ ಬೋಧೆ, ಗುರು ಚರಣವೇ ಗಾಯತ್ರಿ" ಇಂತಹ ಅನನ್ಯ ಭಕ್ತಿಯಿಂದ ಬರೆದ ಕವನಗಳಿವು. ಬರೆದವರೂ "ಗುರು" ಸ್ಥಾನದಲ್ಲಿರುವವರೇ !

"ಗುರು ದರ್ಶನ, ಗುರು ಪೂಜನ, ಗುರು ಧ್ಯಾನ್ಯಗಳಂತೆ, ಗುರುಸ್ತವನವೂ ಘನಕ್ಕೆ ಘನ! ಅದೇ ಅಂತರಂಗ ಸ್ನಾನ ಗುರುದೇವನನ್ನು ನೋಡಿ, ಹಾಡಿ, ಹರುಷಿಸುವುದಕ್ಕಿಂತ ಬೇರೆ ತಪವಿಲ್ಲ, ಜಪವಿಲ್ಲ! ಬೇರೆ ಯೋಗವಿಲ್ಲ. ಕ್ಷೇಮವಿಲ್ಲ; ಬೇರೆ ಸಿರಿಸಂಪದವಿಲ್ಲ" ಈ ಭಾವ ಭಕ್ತಿ ತನ್ಮಯತೆಯಿಂದ ಹಾಡಿಕೊಂಡ ಪದ್ಯಗಳಿವು. ಇದೇ ಭಾವದಿಂದಲೇ ಓದುಗರೂ ಓದಿಕೊಂಡಾಗ, "ದಿವ್ಯ ದೀಪ್ತಿ ಹೊಮ್ಮಿ ಬೆಳಗಿ, ಚೆಲುವು ತೋರಲ್ಲದದೊಳಗೆ : ನವ್ಯಜ್ಞಪ್ತಿ ತೋರಿತೊಳಗೆ, ನಲವಿನೊಲುವೆಯೊದಗುಗೆ" ಎಂಬ "ಆರತಿ"ಯನ್ನು ನಾವೂ ಅನುಮೋದಿಸುತ್ತೇವಲ್ಲದೆ, ಶ್ರೀ ಶ್ರೀ "ಜ. ಚ. ನಿ." ಅವರಿಂದ ನಿವೇದನ, ಗುರು ಗೀತಾಂಜಲಿಯಂಥ ಇನ್ನೂ ಅನೇಕ ಕವನ ಸಂಗ್ರಹಗಳು ಹೊರ ಬಂದು ಮುಮುಕ್ಷುಗಳಿಗೆ ದಾರಿದೀಪವಾಗಲೆಂದು ಹಾರಯಿಸುತ್ತೇವೆ.

—ಕರ್ಮವೀರ

ಜನಮನ ಪರಿವರ್ತನೆಗೆ ನಾಟಕ ಬಹು ಮುಖ್ಯ ಸಾಧನ. ಮನರಂಜನೆಯೊಂದೇ ನಾಟಕದ ಮುಖ್ಯ ಉದ್ದೇಶವಲ್ಲ. ಮನ ಪರಿವರ್ತನೆ ಮುಖ್ಯ ಆಶಯವಾಗಿರಬೇಕೆಂಬ ದೃಷ್ಟಿಯಿಂದ ರಚಿಸಿರುವ ಶ್ರೀ ಗ.ಚ.ನಿ. ಸನ್ನಿಧಿಯವರು 'ಗುರುವಿನ ಗೆಲುವು' ಮತ್ತು 'ಅಯ್ದಕ್ಕಿ ಮಾರಯ್ಯ' ನಾಟಕಗಳು ಚಿಕ್ಕವಾಗಿದ್ದರೂ ಪರಿಪೂರ್ಣವಾಗಿವೆ.

ಈ ನಾಟಕಗಳು ನಿಜವಾಗಿಯೂ ಧರ್ಮ ಸಾಹಿತ್ಯದ ವಿಶಿಷ್ಟ ರೂಪಕಗಳು. ಓದಲೂ ಸೊಗಸು, ಅಭಿನಯಿಸಲೂ ಸೊಗಸು. ದೃಶ್ಯ ನಾಟಕಗಳೂ ಆಗಿದ್ದಂತೆ ಶ್ರಾವ್ಯ ರೂಪಕಗಳೂ ಆಗಿವೆ. ಈ ಕೃತಿಗಳು.

ಚಾರಿತ್ರಿಕ ಹಾಗೂ ಐತಿಹಾಸಿಕ ವ್ಯಕ್ತಿಗಳನ್ನು ತಮ್ಮದೇ ಆದ ವಿನೂತನ ಪಾತ್ರಗಳನ್ನಾಗಿ ಸೃಷ್ಟಿಸಿ ಅವರಿಂದ ಉನ್ನತೋನ್ನತ ಧರ್ಮ ಸಂದೇಶವನ್ನು, ವ್ಯವಹಾರ ನೀತಿಯನ್ನು, ಸಾಮಾಜಿಕ ಆಚರಣೆಯನ್ನು ಸಾರಿಸಿದ್ದಾರೆ ಶ್ರೀ ಸನ್ನಿಧಿಯವರು.

ಬರೆದುದು ಎರಡೇ ನಾಟಕಗಳಾದರೂ ಅವು ಮಹತ್ವಪೂರ್ಣವಾದವು. 'ಗುರುವಿನ ಗೆಲವು' ಚಲನ ಚಿತ್ರಕ್ಕೆ ಅಳವಟ್ಟರೆ ಉತ್ತಮ ಚಿತ್ರವಾದೀತು. ಭಾವಪೂರ್ಣ ಪಾತ್ರ ಸೃಷ್ಟಿ ಸಮಸ್ಯೆಗಳ ಬಗೆಗೆ ಚಿಕಿತ್ಸಕ ದೃಷ್ಟಿ, ವಾಸ್ತವ ನಿರೂಪಣೆ, ಐತಿಹಾಸಿಕ ಪ್ರಜ್ಞೆ ಇವು ಶ್ರೀಗಳವರ ನಾಟಕ ಸಾಹಿತ್ಯದ ಜೀವಾಳ.

# ಆಯ್ದಕ್ಕಿ ಮಾರಯ್ಯ

## ಸಂಗೀತ ವಿದ್ವಾನ್

ಶ್ರೀ ಟಿ. ವಿ. ಮುತ್ತಾಚಾರ್ಯ, ಬಿ. ಎ., (ಆನರ್ಸ್) ತುಮಕೂರು

ಇಂದು ಭಾರತದಲ್ಲಿ ದರಿದ್ರ ನಾರಾಯಣರೇ ಅಧಿಕ ಸಂಖ್ಯೆ. ಭಾರತದಲ್ಲಿಯೇ ಏಕೆ, ವಿಶ್ವದ ಮಟ್ಟದಲ್ಲಿ, ಪರಿಶೀಲನೆ ಮಾಡಿದರು ಸಹ ಐವತ್ತುಕೋಟಿ ಜನರು ಹಸಿವಿನ ದವಡೆಗೆ ಸಿಕ್ಕಿದ್ದಾರೆ. ವಿಶ್ವಸಂಸ್ಥೆಯ ಆಹಾರ ಮತ್ತು ವ್ಯವಸಾಯ ಖಾತೆಯ ಅಧಿಕಾರಿ ಡಾ॥ ಬಿ. ಆರ್. ಸೇನ್ ಅವರ ಮಾತಿನಲ್ಲಿ "ಜಗತ್ತಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ಹತ್ತು ಹದಿನೈದರಷ್ಟು ಜನ ಕ್ಷುದ್ಬಾಧೆಗೆ ತುತ್ತಾಗಿದ್ದಾರೆ.... ಮಾನವಕುಲ ಎದುರಿಸಬೇಕಾದ ಬೃಹತ್ ಸಮಸ್ಯೆ ಇದು." ಬಹುಕಾಲದಿಂದ ಬೆನ್ನು ಹತ್ತಿದ ಈ ಬೃಹತ್ ಸಮಸ್ಯೆಯ ಬೇತಾಳವನ್ನು ಬಡಿದೋಡಿಸಲು ಇನ್ನೂ ಸಾಧ್ಯವಾಗಿಯೇ ಇಲ್ಲವಲ್ಲಾ ! ಕಾರಣವೇನು ? ಕಾರಣವಿನ್ನೇನೂ ಇಲ್ಲ, ನಾವು ಕಾಯಕತತ್ವವನ್ನು ಅರ್ಥಮಾಡಿಕೊಂಡು ಅದನ್ನು ಶರಣು ಹೋಗಿಲ್ಲ. ನಮ್ಮಲ್ಲಿ ಜ್ಞಾನವನ್ನು ಕುರಿತ, ವಿಜ್ಞಾನವನ್ನು ಕುರಿತ ಸಾಹಿತ್ಯವೇನೋ ಸಾಕಷ್ಟು ಬರುತ್ತಿದೆ. ಆದರೆ ಕ್ರಿಯಾತ್ಮಕವಾದ ವೃತ್ತಿ ಮೌಲ್ಯವನ್ನು ಕುರಿತ ಕಾಯಕ ಸಾಹಿತ್ಯ ತೀರ ಕಡಿಮೆಯಾಗಿದೆ. ಪೂಜ್ಯ ಶ್ರೀಗಳವರು ತಮ್ಮ "ಕಾಯಕ ಕಲೆ"ಯಲ್ಲಿ–

"ಧನ ಧಾನ್ಯಗಳು ಸಮೃದ್ಧಿಯಾಗಿ ಬೇಕಾಗಿರುವ ಭಾರತಕ್ಕೆ ಇದೀಗ ಬೇಕಾದುದು ಕರ್ಮನಿರಸನ ಮಾಡುವ ಶಂಕರರ ಅದ್ವೈತಮಾರ್ಗವಲ್ಲ; ಭಿಕ್ಷಾವೃತ್ತಿಯನ್ನು ರಕ್ಷಿಸಿದ ಬೌದ್ಧ ನಿರ್ವಾಣ ಮಾರ್ಗವಲ್ಲ; ಕಾಯಕತತ್ವವನ್ನು ಪೋಷಣ ಮಾಡಿದ ಬಸವಣ್ಣನ ಭಾಕ್ತಿಕ ಮಾರ್ಗ ಮತ್ತು ಕಾಯಕತತ್ವವನ್ನು ಪ್ರಸಾರಮಾಡಿದ ಕ್ರಿಯಾತ್ಮಕ ವಚನ ಸಾಹಿತ್ಯ" ಎಂದು ಹೇಳಿರುವುದು ಕಠೋರವಾದ ಕ್ರಾಂತಿಕಾರಕ ಸತ್ಯವನ್ನು ಎತ್ತಿಹಿಡಿಯುತ್ತಿದೆ.

"ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯ.
ಕೊಡುದೇವ, ಎನ್ನ ಕೈಯಲೊಂದು ಕರಿಕೆಯ!
ಮೃಡದೇವಾ, ಶರಣೆಂದು ಭಿಕ್ಷಕೆ ಹೋದರೆ–ಅಲ್ಲಿ
ನಡೆದೇವಾ, ಎಂದೆನಿಸು ಕೂಡಲ ಸಂಗಮದೇವಾ"

ಬಸವಣ್ಣನವರ ಈ ವಚನ ಕಾಯಕಯೋಗಿಯಾಗಿಯೇ ಮಾನವ ಸ್ವಾವಲಂಬನ ಜೀವಿಯಾಗಬೇಕೆಂಬ ಸಂದೇಶವನ್ನು ಸಾರುತ್ತಿದೆ.

"ಜ್ಞಾನಮಾರ್ಗಿಗಳು ಕರ್ಮವನ್ನು ಬೇಡೆನ್ನುತ್ತಾರೆ. ಯೋಗ ಮಾರ್ಗಿಗಳು "ಯುಕ್ತ ಚೇಷ್ಟಸ್ಯ ಕರ್ಮಸು" ಎಂದರೆ ಮಿತವಾದ ಕರ್ಮವಿರಲೆಂದು ಹೇಳುತ್ತಾರೆ. ವೈರಾಗ್ಯ ಮಾರ್ಗಿಗಳಂತೂ ಮೊದಲೇ ಮಾಡಲಾರರು. ಹೀಗಾಗಿ ಕ್ರಿಯೆಗೆ ಕ್ರಿಯಾತ್ಮಕ ಸಾಹಿತ್ಯಕ್ಕೆ ಪ್ರೋತ್ಸಾಹವೇ ಕಡಮೆಯಾಯಿತು". ನಿಜ, ಈಗೀಗ ವೃತ್ತಿ ಶಿಕ್ಷಣ ಮೂಲಶಿಕ್ಷಣಗಳನ್ನು ಕುರಿತು ಗ್ರಂಥಗಳು ಬರುತ್ತಿವೆ. ಆದರೆ ಕನ್ನಡದಲ್ಲಿ ಹೆಚ್ಚಾಗಿ ಬರುತ್ತಿಲ್ಲ. ಇದೊಂದು ಕೊರತೆ. ಆ ಕೊರತೆಯನ್ನು ಸಾಹಿತ್ಯಯೋಗಿಗಳಾದ ಪೂಜ್ಯ ಜ. ಚ. ನಿ. ಅವರು ಹೋಗಲಾಡಿಸಲು ಪಣ ತೊಟ್ಟಿರುವುದು ಕನ್ನಡಿಗರ ಸುದೈವ, ಇಂತಹ ಧೀರ ಪ್ರಯತ್ನದ ಫಲವಾಗಿ ಕಾಯಕ ನಿಷ್ಠರಾದ ಮಹಾಶರಣರ ಜೀವನ ಸಾರ ಪದ್ಯಗದ್ಯ ನಾಟಕಾದಿಗಳ ರೂಪದಲ್ಲಿ ಬೆಳಕು ಕಂಡು ಬೆಳಕು ತೋರಿಸುತ್ತಿವೆ.

ಗದ್ಯ ಪದ್ಯ ಕಾವ್ಯಗಳ ರಚನೆಯಲ್ಲಂತೋ ಅಂತೆಯೇ ನಾಟಕ ರಚನೆಯಲ್ಲೂ ಶ್ರೀಗಳು ಸಿದ್ಧಹಸ್ತರೆಂಬುದನ್ನು ಅವರ ಚಿಕ್ಕನಾಟಕ "ಆಯ್ದಕ್ಕಿ ಮಾರಯ್ಯ"ದಲ್ಲಿ ಕಾಣಬಹುದು.

"ಆಯ್ದಕ್ಕಿ ಮಾರಯ್ಯ" ಒಂದು ಪುಟ್ಟ ನಾಟಕ. ಅಲ್ಲಿ ನಾಟಕ ಕರ್ತರ ಗುರಿ ಅತ್ಯಂತ ಯಶಸ್ವಿ. ಅದು ನೀಡುವ ಸಂದೇಶ ಅಮರ; ಅನುಪಮ.

ಬಸವಣ್ಣ ಹೇಳಿದ "ಕಾಯಕವೇ ಕೈಲಾಸ" ಇಲ್ಲಿ ಒಂದು ಸಾಕ್ಷಿಚೇತನ. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಉಕ್ತಿ ಸುಪ್ರಸಿದ್ಧ. ನಾಟಕರೂಪದಲ್ಲಿ ಮತ್ತಷ್ಟು ಉಜ್ವಲವಾಗಿ, ಉನ್ನತವಾಗಿ, ಉದ್ಬೋಧಕವಾಗಿ ಶರಣರ ದಿವ್ಯಜೀವನವನ್ನು ನಿರೂಪಿಸಲು ನಾಟಕ ಉತ್ತಮಸಾಧನವೆಂಬುದು ಈ ನಾಟಕವನ್ನು ಓದಿದ ಮೇಲೆ ಓದುಗರಿಗೂ ನಾಟಕ ರಚನಾಸಕ್ತರಿಗೂ ಉಂಟಾಗುವ ಸ್ಫೂರ್ತಿಯ ಭಾವನೆ.

ಕಾಯಕ ನಿಷ್ಠರು ಹೆಚ್ಚು ಸಂಪಾದಿಸಕೂಡದು. ಕೂಡಿಡಬಾರದು. ಹೆಚ್ಚುವರಿ ಮನೆಯಲ್ಲಿರಲೇಬಾರದು. ಇರುವುದೆಲ್ಲಾ ಗುರುಲಿಂಗಜಂಗಮಕ್ಕೆ ಸಮರ್ಪಿತವಾಗಬೇಕು. ಅನುದಿನದ ಕಾಯಕವೇ ಅನುದಿನ ನಡೆಯಬೇಕು. ನಾಳೆಗಿರಲಿ, ನಾಡದ್ದಕ್ಕಿರಲಿ, ಈದಿನ ಕಾಯಕ ಬೇಡವೆಂದು ಹೇಳಿ ಸಂಗ್ರಹಿಸಿಟ್ಟುಕೊಳ್ಳಬಾರದು ಕುಳಿತುಣ್ಣಬಾರದು. ದುಡಿಮೆಯೇ ದೇವರು, ಲಭಿಸಿದಷ್ಟರಲ್ಲಿ ತೃಪ್ತಿಗೊಳ್ಳಬೇಕು. ಲಿಂಗಾ

ರ್ಪಿತವಾದ ಪ್ರಸಾದವನ್ನೇ ಸವಿಯಬೇಕು. ಪ್ರಸಾದವನ್ನು ಚೆಲ್ಲಬಾರದು. ತಿರಸ್ಕರಿಸಬಾರದು. "ಅನ್ನಂಬ್ರಹ್ಮಾ ತದ್ವಿದ್ಧಿ" ಎಂಬಂತೆ ಅನ್ನವೇ ಬ್ರಹ್ಮ, ಅದು ಪವಿತ್ರವಾದ ವಸ್ತು. ಆದ್ದರಿಂದ ಅನ್ನಬ್ರಹ್ಮಕ್ಕೆ ಯಾವರೀತಿಯಲ್ಲೂ ಅನ್ಯಾಯ ಅಪಚಾರಗಳು ನಡೆಯಬಾರದು.

ಆಯ್ದಕ್ಕಿ ಮಾರಯ್ಯನ ದಾಸೋಹ ಕಾಯಕಪೂರ್ಣವಾದ್ದು. ಕಾಳುಕಡಿಗಳನ್ನು ಆಯ್ದು ತರುತ್ತಿದ್ದ ಕಾಯಕವನ್ನು ನಡೆಸುತ್ತಿದ್ದುದರಿಂದಲೇ ಅವನಿಗೆ ಆಯ್ದಕ್ಕಿ ಮಾರಯ್ಯನೆಂಬ ಹೆಸರಾಯಿತು.

ಆಯ್ದಕ್ಕಿ ಮಾರಯ್ಯ ಒಬ್ಬ ಶಿವಶರಣ. ಈತ ಬಸವಣ್ಣನವರ ಸಮಕಾಲೀನ. ಹದಿನೈದನೆಯ ಶತಮಾನದ ಗೂಳೂರು ಸಿದ್ಧವೀರಣಾಚಾರ್ಯನ "ಶೂನ್ಯ ಸಂಪಾದನೆ"ಯಲ್ಲಿ ಮಾತ್ರ ಆಯ್ದಕ್ಕಿ ಮಾರಯ್ಯನ ವಿಚಾರ ಕಾಣಿಸಿಕೊಳ್ಳುತ್ತದೆ. ಇತರ ಉದ್ದಾಮ ಕವಿಗಳು ಈ ಶರಣನ ವಿಚಾರವಾಗಿ ಏಕೆ ಪ್ರಸ್ತಾಪಿಸಿಲ್ಲವೋ ತಿಳಿಯದಾಗಿದೆ. ಶೂನ್ಯ ಸಂಪಾದನೆಯು ಆಯ್ದಕ್ಕಿ ಮಾರಯ್ಯನ ವಿಚಾರವಾಗಿ ಹೀಗೆ ಹೇಳುತ್ತದೆ—ಪ್ರಭುದೇವರು, ಬಸವೇಶ್ವರ, ಸಿದ್ಧರಾಮ, ಚಾಚರಸ, ಮಡಿವಾಳ ಮಾಚಯ್ಯ ಮುಂತಾದವರು ಒಂದು ದಿನ ಅನುಭವ ಮಂಟಪದಲ್ಲಿ ಆರೂಢರಾಗಿದ್ದಾಗ ಆಯ್ದಕ್ಕಿ ಮಾರಯ್ಯ ಅಲ್ಲಿಗೆ ಬಂದು ಕಾಯಕದ ಮಹತ್ವವನ್ನು ನಿರೂಪಣೆ ಮಾಡುತ್ತಾನೆ. ದಾಸೋಹದ ಮೂಲಕ ಗುರುಲಿಂಗ ಜಂಗಮರನ್ನು ಸೇವಿಸಬೇಕಾದಲ್ಲಿ ಹೆಣ್ಣು, ಹೊನ್ನು, ಮಣ್ಣುಗಳೇ ಮೂಲವೆಂದು ವಾದ ಮಾಡುತ್ತಾನೆ. ಕೇವಲ ಕಾಯಕದಲ್ಲಿಯೇ ನಿರತನಾಗಿರುವುದು ಅಗಸ ನೀರಡಸಿ ನಿಂದಂತೆ ಆಗುವುದೆಂದೂ ಮಾಡುವ ಮಾಟದಿಂದಲೇ ಬೇರೊಂದನರಿಯಬೇಕೆಂದೂ, ಅರಿವಿಂಗೆ ನೆಮ್ಮಗೆ ಒಡಗೂಡಬೇಕೆಂದೂ ಅರಿವಿಂಗೆ ನೆಮ್ಮಗೆ ಕೂಡಿದ ಬಳಿಕ ಬಯಲಭ್ರಮೆಯ ಕಳೆದು ಗುಹೇಶ್ವರ ಲಿಂಗದಲ್ಲಿ ನಿಜಪದವನೈದುವುದೆಂದು ಪ್ರಭುದೇವರು ಮಾರಯ್ಯನನ್ನು ತ್ರಿವಿಧ ದಾಸೋಹದ ಕಡೆ ತಿರುಗಿಸುತ್ತಾನೆ ಅಂದಿನಿಂದ ಮಾರಯ್ಯ ಆಯ್ದ ಅಕ್ಕಿಯಿಂದ ಜಂಗಮ ದಾಸೋಹ ನಡೆಸುತ್ತ ಬರುವನು.

ಒಂದು ದಿನ ಆಸೆಗೆ ಪಕ್ಕಾಗಿ ಬಸವರಾಜದೇವರ ಮನೆಯಂಗಳದಿಂದ ಮಾರಯ್ಯ ಎಂದಿಗಿಂತ ಹೆಚ್ಚಾಗಿ ಅಕ್ಕಿಯನ್ನು ಆಯ್ದು ತರುತ್ತಾನೆ. ಆಗ ಮಹಾಸಾಧ್ವಿ ಮಡದಿ ಲಕ್ಕಮ್ಮ ಪತಿಯ ಅತ್ಯಾಸೆಯನ್ನು ಖಂಡಿಸಿ,

"ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?" "ಘನ ಶಿವಭಕ್ತರಿಗೆ ಬಡತನವಿಲ್ಲ" ವೆಂದೂ "ಭಾವಶುದ್ಧಿಯಿಲ್ಲದ ಭಕ್ತಿ ಹೋಯಿತು" ಎಂದೂ ನಿವೇದಿಸುತ್ತಾಳೆ. ಹೆಚ್ಚಾಗಿ ತಂದಿದ್ದ ಅಕ್ಕಿಯನ್ನು ಅಲ್ಲೇ ಸುರಿದು ಬನ್ನಿರೆಂದು ಅಟ್ಟುತ್ತಾಳೆ. ಮಡದಿಯ ಬೋಧನೆಯಿಂದ ಮಾರಯ್ಯನ ಮನ ಋಜುಮಾರ್ಗಗಾಮಿಯಾಗುತ್ತದೆ. ಕರ್ಮಜಾಲದಿಂದ ಮುಕ್ತನಾಗಿ ಅವನ ಚಿತ್ತ ಶುದ್ಧಭಕ್ತಿಯ ಕಡೆ ಹರಿಯುತ್ತದೆ.

ಪೂಜ್ಯಶ್ರೀಗಳವರು ತಮ್ಮ ನಾಟಕಕ್ಕೆ ಈ ಕತೆಯನ್ನೇ ಆಧಾರವಾಗಿಟ್ಟು ಕೊಂಡಿದ್ದಾರೆ. ಆದರೆ ನಾಟಕೋಚಿತವಾದ ಕೆಲವು ಹೊಸ ಮಾರ್ಪಾಟುಗಳು ಅವರ ಪ್ರತಿಭೆಗೆ ಸಾಕ್ಷಿಯಾಗಿ ಅಲ್ಲಿ ಠಾಣಿಸಿಕೊಂಡಿವೆ. ಶ್ರೀಗಳವರೇ ಅಪ್ಪಣೆ ಕೊಡಿ ಸಿರುವಂತೆ,

"ಆನಂದವನ್ನು ಬೀರಿ ಆಚರಣೆಯನ್ನು ತಿದ್ದಿ ಶ್ರೇಯಸ್ಸನ್ನುಂಟುಮಾಡುವುದೇ ನಾಟಕಗಳ ಮುಖ್ಯೋದ್ದೇಶ.....ನಾಟಕದ ರೀತಿ ರಚನೆಗಳು ಹೇಗಿದ್ದರೂ ಕರ್ತರ ಗುರಿ ಏನೆಂಬುದನ್ನು ವಾಚಕರು ವಿಮರ್ಶಕರು ಅರಿತರೆ ಅದೇ ಶ್ರಮಕ್ಕೂ ತಕ್ಕ ಫಲವೆಂದು ಭಾವಿಸುತ್ತೇವೆ" ಈ ಗುರಿ ನಿಜಕ್ಕೂ ಸಾಧಿತವಾಗಿದೆ ಈ ಪುಟ್ಟ ನಾಟಕದಲ್ಲಿ.

ಈ ಪುಟ್ಟ ನಾಟಕದಲ್ಲಿ ಶ್ರೀಗಳವರು ಮಾಡಿಕೊಂಡಿರುವ ಕೆಲವು ಮಾರ್ಪಾಟು ಗಳು ಮೆಚ್ಚುವಂತಹವೂ ಗಮನಾರ್ಹವೂ ಆಗಿವೆ. ಮಾರಯ್ಯನು ಲಕ್ಷದ ಎಂಭತ್ತಾರು ಸಾವಿರ ಗಣಂಗಳ ಆರೋಗಣೆಯನ್ನು ಒಪ್ಪಿಕೊಂಡಾಗ ಏನಾಯಿತೆಂಬುದು ಶೂನ್ಯ ಸಂಪಾದನೆಯಲ್ಲಿ ಕಂಡುಬರುವುದಿಲ್ಲ. "ಆಯ್ದಕ್ಕಿ ಮಾರಯ್ಯ"ದಲ್ಲಿ ಶ್ರೀಗಳವರು ಲಕ್ಕಮ್ಮನು ಎಲ್ಲ ಸಾಮಾನುಗಳನ್ನು ತನ್ನ ಅಮರೇಶ್ವರ ಲಿಂಗದ ತವರಾದ ಬಸವಣ್ಣ ನವರ ಮನೆಯಿಂದ ತರಿಸಿದಳೆಂದು ಮಾರ್ಪಡಿಸಿದ್ದಾರೆ. ಇದು ಗಂಭೀರ ಹಾಗೂ ಸಮಂಜಸವಾದ ಮಾರ್ಪಾಡೆಂದು ಹೇಳಬಹುದು. ಶೂನ್ಯ ಸಂಪಾದನೆಯಲ್ಲಿ ಮಾರಯ್ಯ ಮೊದಲು ಶಿವಸಾಯುಜ್ಯವನ್ನು ಪಡೆದನೆಂದು ಹೇಳಿದೆ. ಶಿವಶರಣೆ ಲಕ್ಕಮ್ಮ ವೈಧವ್ಯದಿಂದ ಲಿಂಗೈಕ್ಯಳಾಗುವುದು ಶೋಭಾಯಮಾನವಲ್ಲ. ಪತಿ ಬದುಕಿರುವಾಗಲೇ ಸತಿಯಾಗಿ ಶಿವೈಕ್ಯಳಾಗುವುದು ಶೋಭಾಯಮಾನ. ಶ್ರೀಗಳವರು ಮಾಡಿರುವ ಈ ಮಾರ್ಪಾಟು ಸಹ ಉಚಿತ, ಯೋಗ್ಯ.

ಈ ನಾಟಕದಲ್ಲಿ ಓದುಗರ ಹಾಗೂ ವಿಮರ್ಶಕರ ಹೃದಯವನ್ನು ಸೂರೆ ಗೊಳ್ಳುವ ಮಹಾಪಾತ್ರವೆಂದರೆ ಸತೀಮಣಿ ಶರಣೆ ಲಕ್ಕಮ್ಮ. ಈಕೆ ಸುಸಂಸ್ಕೃತ ಭಾರತೀಯ ಮಹಿಳೆಯ ಮಹಾಪ್ರತೀಕ. "ಕಾರ್ಯೇಷು ದಾಸೀ ಕರಣೇಷು ಮಂತ್ರೀ" ಎಂಬ ಉಕ್ತಿಯಂತೆ ಪತಿಯು ಕೈಗೊಂಡ ಕಾರ್ಯದಲ್ಲಿ ಆಸಕ್ತಿ ವಹಿಸಿ ನಿರ್ವಹಿಸುವವಳು ನಿಜವಾದ ಸತಿ. ಪತಿಗೆ ಬಗೆಹರಿಯದ ಸಮಸ್ಯೆಗಳಿದ್ದರೆ ಅವುಗಳಿಗೆ ಮಂತ್ರಿಯಂತೆ ಪರಿಹಾರವನ್ನು ಸೂಚಿಸುವವಳೇ ನಿಜವಾದ ಸತೀಮಣಿ. ಹೀಗೆ ಲಕ್ಕಮ್ಮ ಈ ನಾಟಕದಲ್ಲಿ ಪತಿಗೆ ತಕ್ಕ ಸತಿ. ಕಾರ್ಯದಲ್ಲಿ ದಾಸಿ, ಕರಣದಲ್ಲಿ ಮಂತ್ರಿ. ಆಧ್ಯಾತ್ಮ ವಿಚಾರದಲ್ಲಿ ಅವನಿಗೆ ಗುರು ಹಾಗೂ ದೈವ.

ಮಾರಯ್ಯ ಕೇವಲ ಕಾಯಕಪ್ರಿಯ. ಬಸವನು ಹೇಳುತ್ತಿದ್ದ ಜಂಗಮತತ್ವ ಅವನ ಮನಸ್ಸಿಗೆ ಒಪ್ಪದು. ಜಂಗಮದ ಆಧಿಕ್ಯವು ವಿಚಾರಶೂನ್ಯವಾದುದೆಂದು

ಅವನ ಭಾವನೆ. ಈ ಸಂದರ್ಭದಲ್ಲಿ ಲಕ್ಕಮ್ಮ ಬಸವನ ವಿಚಾರವಾಗಿ ಹೇಳುವ ಮಾತುಗಳು ಹೀಗಿವೆ :—

"ಎನ್ನಾಳ್ದನೇ, ಅವರು (ಬಸವಣ್ಣನವರು) ಬರೀ ಜಂಗಮದೇಳ್ಗೆಗಾಗಿಯಲ್ಲ, ಇಡೀ ಜನಾಂಗದ ಏಳ್ಗೆಗಾಗಿ ಜನ್ಮವೆತ್ತ ಮಹಾಪುರುಷರು. ಪರಿಶುದ್ಧವಾದ, ಪವಿತ್ರ ವಾದ ಅವರ ಹೃದಯಾಂತರಾಳದಲ್ಲಿ ಸಮಾಜ ಸುಧಾರಣೆಯ ನಿಜವಾದ ಕಳಕಳಿ ಯಿದೆ. ಅಜ್ಞಾನ ಆಶೆ ಮೋಹಗಳಿಂದ ಅಧೋಗತಿಗಿಳಿಯುವ ಜನಾಂಗವು ಮರಳಿ ಚೇತರಿಸಿಕೊಂಡು ಬೆಳೆದು ಬಾಳಬೇಕೆಂಬ ಹೆಬ್ಬಯಕೆ ಅವರ ಹೃದಯಾಕಾಶದಲ್ಲಿ ಹಬ್ಬಿದೆ. ದೇವಾ, ಜಗದ ಜನತೆಯ ಹಿತವೇ ಅವರ ಜೀವನದ ಗುರಿ ! ಪ್ರಾಣದ ಉಸಿರು ! ಆದರಿಂದ ಬಸವಣ್ಣನವರ ಬೆಳಕು ಇಡೀ ವಿಶ್ವವನ್ನೇ ಆವರಿಸಿಕೊಂಡಿದೆ. ಅರಸರ–ಆಳುಗಳ, ಹೆಂಗಸರ–ಹುಡುಗರ ಮನಸ್ಸನ್ನು ಆಕರ್ಷಿಸಿದೆ. ಶ್ರೀಮಂತರ–ಧೀಮಂತರ, ಯೋಗಿಗಳ–ತ್ಯಾಗಿಗಳ ಹೃದಯವನ್ನು ಸೆಳೆದಿದೆ. ಇಂತಹ ಮಹಾನು ಭಾವರ ವಿಷಯದಲ್ಲಿ ಕೂಲಂಕಷವಾಗಿ ಪರಿಶೀಲಿಸದೆ ನೀವು ಹೀಗೆಲ್ಲ ಮಾತನಾಡ ಬಹುದೇ ?"

ಲಕ್ಕಮ್ಮ ಹೇಳುವ ಈ ಆಣಿಮುತ್ತಿನಂತಿಹ ಮಾತು ಯಾರೇ ಆಗಲಿ ಬಸವೇ ಶ್ವರರ ವಿಚಾರವಾಗಿ ಕೂಲಂಕಷವಾಗಿ ತಿಳಿದೇ ತೀರಬೇಕೆಂಬುದಕ್ಕೆ ಒಂದು ಸ್ಫೂರ್ತಿ ಯುತ ಪೀಠಿಕೆ ಹಾಗೂ ಮುನ್ನುಡಿ.

ಅತಿಯಾದ ಆಸೆಗೆ ಪಕ್ಕಾಗಿ ಮಾರಯ್ಯ ಎಂದಿಗಿಂತ ಹೆಚ್ಚು ಅಕ್ಕಿಯನ್ನು ಮನೆಗೆ ತಂದಾಗ ನಡೆಯುವ ಸಂಭಾಷಣೆ ಈ ನಾಟಕ ಬಹಳ ರಸವತ್ತಾದ ಭಾಗ. ಲಕ್ಕಮ್ಮ (ಅಕ್ಕಿಯನ್ನು ಎವೆಯಿಕ್ಕಡೆ ನೋಡಿ ಬೆಚ್ಚಿ)-ಇದೇನು, ಈ ದಿನ ಇಷ್ಟೊಂದು ಅಕ್ಕಿ ? ಎನ್ನಾಳ್ದನೆ,

............ಎಂದಿನಂದವೆ ಸಾಕು. ಮತ್ತೆ ಕೊಂಡು ಹೋಗಿ ಅಲ್ಲಿಯೇ ಸುರಿ. ಮಾರಯ್ಯಪ್ರಿಯ ಅಮಳೇಶ್ವರ ಲಿಂಗಕೊಟ್ಟ ಕಾಯಕವೆ ಸಾಕು.

ಮಾರಯ್ಯ—(ಆವೇಗದಿಂದ) ಸಾಕು ಸಾಕು ಈ ಹಾಳು ಧರ್ಮ ! ಹೆಚ್ಚು ತಂದರೂ ಅಧರ್ಮ. ಕಡಮೆ ತಂದರೂ ಅಧರ್ಮ........ಪ್ರತಿದಿನ ಅರೆಹೊಟ್ಟೆ ಉಂಡು ಸಾಕಾಗಿದೆ. ಇರಲಿ ಹೋಗು.

ಲಕ್ಕಮ್ಮ—ಎನ್ನಾಳ್ದನೆ............ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿ ಗುಂಟೆ?........ಸಣ್ಣ ಪುಟ್ಟ ಆಸೆಗೊಳಗಾಗಿ ಆದರ್ಶ ಜೀವನವನ್ನೇ ಹಾಳುಮಾಡಿ ಕೊಳ್ಳುವುದೇ ?

ಮಾರಯ್ಯ—(ಮುನಿಸಿನಿಂದ)............ಹೊಟ್ಟೆ ತುಂಬ ಉಂಡರೆ ಆದರ್ಶ ಜೀವನಕ್ಕೆ ನೀರೆರೆದಂತಾಗುತ್ತದೆಯೆ ? (ಕತ್ತನಲುಗಿಸಿ) ಸಾಕು ಸುಮ್ಮನಾಗು.

ಲಕ್ಕಮ್ಮ—ದೇವಾ, ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ? ಈಸಕ್ಕಿಯ ಆಶೆ ನಮಗೇಕೆ ? ಈಶ್ವರನೊಪ್ಪ.

....................................

ಮಾರಯ್ಯ ನನಗೆ ಇನ್ನೂ ಈ ಕಷ್ಟ ನೋವುಗಳೆ ಬೇಡ. ಇಲ್ಲಿ ಬದುಕುವ ಬಾಳುವ ಆಶೆಯೇ ನನಗಿಲ್ಲ. ಕೈಲಾಸಕ್ಕೆ ತೆರಳುವೆನು. ದಾರಿಯ ತೋರು ದೇವಿ.

ಲಕ್ಕಮ್ಮ (ವಿಡಂಬಿಸಿ) ಮಾಡಿನೀಡಿ ಹೋದಿಹೆನೆಂಬಾಗಲೆ ಕೈಲಾಸ ವೇನು ಕೂಲಿಯೆ ?.... ದಾಸೋಹವೆಂಬ ಸೇವೆಯಬಿಟ್ಟು ಸಿರಿಸಲಾರದೆ ಕೈಲಾಸವೆಂಬ ಆಸೆ ಬೇಡ. ....?

ಲಕ್ಕಮ್ಮನ ಗುರುಸಹಜವಾದ ಗುಣಗಳ ಗುಂಫನದ ವಚನಗಳು ಮಾರಯ್ಯ ನನ್ನು ಮೂಕನನ್ನಾಗಿ ಮಾಡಿದವು. ಆ ಕಾವ್ಯಮಯ ವಾಣಿಯಲ್ಲಿ ಅವನ ಆತ್ಮ ಸಂಸ್ಕಾರ ಹೊಂದಿ ಪುಟವಿಟ್ಟ ಚಿನ್ನದಂತಾಯಿತು. "ಓದೇವಿ, ...... ನೀನು ನನ್ನ ಕೈಹಿಡಿದು ನನ್ನನ್ನೇ ಧನ್ಯನನ್ನಾಗಿ ಮಾಡಿದೆ" ಎಂದು ಮಾರಯ್ಯ ಅವಳನ್ನು ಬಿಗಿ ದಪ್ಪುವನು.

ವಿನಯಶೀಲೆಯಾದ ಲಕ್ಕಮ್ಮನಿಗೆ ಪತಿಯಲ್ಲಿ ಅನುಪಮವಾದ ಭಕ್ತಿಯಿತ್ತು. "ನಾನು ನಿಮ್ಮ ಕೈಹಿಡಿಯದಿದ್ದರೆ.... ಈ ಮಂಗಳ ಮಯವಾದ ಕಲ್ಯಾಣಕ್ಕೆ ಬರಲು ಸಾಧ್ಯವಿತ್ತೆ ?" ಎಂದು ಪತಿ ಭಕ್ತಿಯನ್ನು ತೋಡಿಕೊಳ್ಳುವಾಗ ಈಕೆ ಎಂತಹ ಗುಣಗಳ ಗಣಿ ಎಂದೆನಿಸುತ್ತದೆ.

ಅದು ಕಾರಣಗುಣವಿಂದು ತ್ರಿವಿಧ ದಾಸೋಹವೇ ಮಹಾಘನ ಲಿಂಗೈಕ್ಯವೆಂದು ಆಕೆ ಪತಿಗೆ ತಿಳಿಯ ಹೇಳಿದ ಮೇಲೆ ಮಾರಯ್ಯ ಆಕೆಯ ಇಚ್ಛೆಯಂತೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳಿಗೆ ನೈವೇದ್ಯಕ್ಕೆ ಆಹ್ವಾನಿಸುತ್ತಾನೆ. ಲಕ್ಕಮ್ಮನ ನೈಷ್ಠಿಕ ಭಕ್ತಿಯಿಂದ ಜಂಗಮಕ್ಕೆಲ್ಲಾ ತೃಪ್ತಿಕರವಾದ ಆರೋಗಣೆ ನಡೆಯುತ್ತದೆ.

ಹೀಗೆ ಮಹಾಸತಿ ಲಕ್ಕಮ್ಮನಿಂದ ಮಾರಯ್ಯ ಭಕ್ತಿಯ ಹೆದ್ದಾರಿಯಲ್ಲಿ, ಸಾಗಿ ನಿಜ ದಾಸೋಹಂಭಾವನ್ನು ಪಡೆಯುತ್ತಾನೆ. ತನ್ನ ಮಡದಿಯ ನಿಷ್ಠೆ, ನಿಷ್ಕಾಮ ಪ್ರವೃತ್ತಿ, ಧೈರ್ಯ ತನ್ನಲ್ಲೂ ಅಚ್ಚೊತ್ತಿ ನಿಲ್ಲುತ್ತವೆ.

"ಆಯ್ದಕ್ಕಿ ಮಾರಯ್ಯ" ಕನ್ನಡದಲ್ಲಿ ಒಂದು ಉತ್ತಮ ನಾಟಕ. ಶರಣರ ನಾಟಕಗಳನ್ನು ಈ ಶೈಲಿಯಲ್ಲಿ ಬರೆಯುವವರಿಗೆ ಈ ನಾಟಕವೊಂದು ದೊಡ್ಡ ಆದರ್ಶ. ಸಹೃದಯ ಕನ್ನಡಿಗರು ಈ ನಾಟಕವನ್ನು ರಂಗದ ಮೇಲೆ ಅಭಿನಯಿಸಿ ಜನಪ್ರಿಯ ಗೊಳಿಸಿದರೆ ಶ್ರೀಗಳವರ ಶ್ರಮ ಸಾರ್ಥಕವೆಂದೇ ಹೇಳಬೇಕು.

# ಶ್ರೀ ಜ. ಚ. ನಿ. ಅವರ ನಾಟಕ ಸಾಹಿತ್ಯ

—'ಅಚಲ ಶರಣ್'

'ಆಂಗಿಕಂ ಭುವನಂ ಯಸ್ಯ ವಾಚಿಕಂ ಸರ್ವವಾಙ್ಮಯಂ
ಆಹಾರ್ಯಂ, ಚಂದ್ರತಾರಾದಿ ತನ್ನುಮಸ್ಸಾತ್ವಿಕಂ ಶಿವಂ ||

—ಸಂಗೀತರತ್ನಾಕರ

ವಿವಿಧ ಕಲೆಗಳ ಸಂಯೋಜನ ಸಮನ್ವಯಗಳಿಂದ ರೂಪುಗೊಂಡ ನಾಟಕವು ನೀಡುವುದು ಆನಂದದ ಚಿಲುಮೆಯನ್ನು. ಅಲ್ಲದೆ ಲೋಕಚರಿತವನ್ನು ಸಾಮಾನ್ಯ ಜನಕ್ಕೂ ಜ್ಞಾನದ ಕೊಡಿಗೆ ಅದರ ಗುರಿ. ಬುದ್ಧಿಗೆ ಶಕ್ತಿ, ಹೃದಯಕ್ಕೆ ಆನಂದ ಆಗುತ್ತವೆ ನಮಗೆ ನಾಟಕದಿಂದ, ನಾಟಕವನ್ನು ನೋಡುವ ಪ್ರೇಕ್ಷಕರು, ಅದರಲ್ಲಿನ ಪಾತ್ರಗಳೊಂದಿಗೆ ಹೊಂದಿಕೊಂಡಾಗ, ಅದು ಉತ್ತಮ ನಾಟಕವಾಗುತ್ತದೆ.

ಈ ದೃಷ್ಟಿಯಿಂದ ಶ್ರೀ ಜ. ಚ. ನಿ. ಅವರ ನಾಟಕಗಳಾದ 'ಆಯ್ದಕ್ಕಿಯ ಮಾರಯ್ಯ ಹಾಗು ಗುರುವಿನ ಗೆಲವು'–ಗಳನ್ನು ನೋಡಿದಾಗ ಅವು ನಿಜವಾದ ನಾಟಕಗಳೆನಿಸುತ್ತವೆ.

ಎರಡು ನಾಟಕಗಳೂ, ಓದಿದರೆ ರುಚಿಸಬಲ್ಲ, ಆಡಿದರೆ ರಂಜಿಸಬಲ್ಲ ನಾಟಕಗಳಾಗಿವೆ. ಅವುಗಳನ್ನು ಒಂದೊಂದಾಗಿ ಗಮನಿಸುವಾಗ ಕಾಣಬರುವ ಅಂಶಗಳಿವು–

**ಆಯ್ದಕ್ಕಿ ಮಾರಯ್ಯ**

ಇದು ಒಂದು ಭಾವಪೂರ್ಣ ಏಕಾಂಕ ನಾಟಕ. ಕವಿ ಹೃದಯಕ್ಕೆ ಕಾವ್ಯಾನುಭವ, ಪ್ರೇಕ್ಷಕರಿಗೆ ಆನಂದಾನುಭವ, ಚಿಕಿತ್ಸಕ ದೃಷ್ಟಿಗೆ, ವಾಸ್ತವಿಕತೆ–ಇವೆಲ್ಲದರ ಸಮನ್ವಯನ್ನು ಕಾಣಬಹುದು.

ರಂಗಭೂಮಿಯ ನಾಟಕದಲ್ಲಿ, ಸಾಹಿತ್ಯ ಗೌಣವೆನ್ನುವವರಿಗೂ ಅಹಿತವೆನಿಸದಂತೆ, ಎಷ್ಟು ಬೇಕೋ, ಅಷ್ಟು, ಹಿತವಾಗಿ, ಮಿತವಾಗಿ ಒಪ್ಪವಾಗಿರುವ ನಾಟಕವಿದು.

‘ಶುದ್ಧ ಕಾಯಕದಿಂದ ಜಂಗಮಾರಾಧನೆ ನಡೆಸಬೇಕು’-ಎಂಬ ಸಂದೇಶವನ್ನು ಸಾರುವ ಈ ನಾಟಕವು ತನ್ನ ಗುರಿಯನ್ನು ನಿರ್ದಿಷ್ಟವಾಗಿ, ಸಕಾಲಿಕವಾಗಿ ಸೇರಿರುವುದು ಈ ನಾಟಕದ ಉತ್ತಮತೆಗೆ ಸಾಕ್ಷಿಯಾಗಿದೆ.

ನೋಟ ಒಂದರಲ್ಲಿ ನೀಡಿರುವ ದೃಶ್ಯದ ಹಿನ್ನೆಲೆ, ಪಾತ್ರಗಳ ಮನೋಧರ್ಮ, ನಡೆ ನುಡಿಗಳಿಗನುಗುಣವಾಗಿ, ಅರ್ಥಪೂರ್ಣವಾಗಿದೆ. ಜೀವನದಲ್ಲಿ ಸೊಬಗಿದೆ. ಆದರೆ ಎಡರೆಂಬ ಕತ್ತಲೆ ಮುಂದೆ ಹಾಯ್ದು ಬರುತ್ತದೆ. ಆಗ ಕಿರುಹಣತೆಯೆಂಬ ಮಾನವ ಯತ್ನವು-ಅರ್ಥಾತ್ ಬೆಳಕಿನ ರೂಪದಲ್ಲಿ ಬಂದು, ಆ ಕತ್ತಲೆಯನ್ನು ಪರಿಹರಿಸಬೇಕೆನ್ನುವ ಅರ್ಥದ ಸಂಕೇತವಾಗಿದೆ. ಈ ಸಂಕೇತ ನಾಟಕಕ್ಕೆ ಸೊಗಸಿದೆ.

ಈ ‘ನೋಟ’ದಲ್ಲಿ, ಶುದ್ಧಿ ಕಾಯಕವೊಂದನ್ನೇ ನಂಬಿದ ಮಾರಯ್ಯನಿಗೆ ಜಂಗಮದ ಸೇವೆಯ ಅವಶ್ಯಕತೆಯನ್ನು ಲಕ್ಕವ್ವ ತಿಳಿಸುತ್ತಾಳೆ. “ಶುದ್ಧ ಕಾಯಕ ನಡೆಸಿದರೂ, ನಡೆನುಡಿ ತಪ್ಪಿದರೆ, ತಿದ್ದುವವರು ಬೇಕಲ್ಲವೇ”-ಎಂದು ಲಕ್ಕವ್ವ ನುಡಿಯುತ್ತಾಳೆ. ಅಲ್ಲದೆ, ಆ ಬಗ್ಗೆ ಹೆಚ್ಚು ತಿಳಿದಿರುವವರಿಂದ ತಿಳಿದು, ನನಗೆ ಇನ್ನೂ ತಿಳಿಯುವಂತೆ ಮಾಡಿ ಎನ್ನುವ ಅವಳ ಭಾವ ಸೊಗಸಾಗಿದೆ. ಅಲ್ಲದೆ ಮಾರಯ್ಯನ ಜಿಜ್ಞಾಸೆಯನ್ನು ಅರಳಿಸುತ್ತಾಳೆ. ಈ ಜಿಜ್ಞಾಸೆಗೆ ಪೂರಕವಾಗಿ, ನೋಟ ಎರಡರಲ್ಲಿ ಪ್ರಭು, ಬಸವಣ್ಣ-ಇವರ ಪಾತ್ರಗಳು ಕಳೆಗೊಡುತ್ತವೆ. ಅಲ್ಲದೆ, ಇವು, ನಾಟಕದ ಸುಮುಖ ಬೆಳವಣಿಗೆಗೆ ಪೋಷಕವಾಗಿವೆ. ಚೊಕ್ಕವಾದ ಈ ಪಾತ್ರಗಳು ನುಡಿವ ಒಂದೊಂದು ಮಾತೂ ಜ್ಯೋತಿರ್ಲಿಂಗ; ಮುತ್ತಿನ ಹಾರ. ನೋಟ ಒಂದರಲ್ಲಿ ಮೂಡಿದ ಕುತೂಹಲ, ಆರಂಭವಾದ ಬುದ್ಧಿಯ ಕಾರ್ಯ ಮುಂದುವರಿಯುತ್ತಲೇ ನೋಟ ಎರಡನೆಯದರಲ್ಲಿ ಪ್ರೇಕ್ಷಕರನ್ನು ತಲ್ಲೀನಗೊಳಿಸುತ್ತವೆ.

ಈ ಜಿಜ್ಞಾಸೆಯಲ್ಲಿ ತಲ್ಲೀನರಾಗಿ, ಲೋಕವ ಇವರನ್ನು ಮರೆಯಬೇಡಿರೆಂಬ ಎಚ್ಚರಿಕೆಯಂತೆ, ಎರಡನೆಯ ನೋಟದ ಅಂತ್ಯದಲ್ಲಿ ಲಕ್ಕವ್ವನ, ನುಡಿಗಳು ಬಂದಿರುವುದು, ನಾಟಕ ತಂತ್ರದ ದೃಷ್ಟಿಯಿಂದ, ಬಲು ಸೂಕ್ತವಾಗಿದೆ ಒಂದು ರೀತಿಯ ಬಿಗಿಯ ವಾತಾವರಣದಲ್ಲಿದ್ದ ಪ್ರೇಕ್ಷಕರಿಗೆ ವಿರಾಮ ಸಿಕ್ಕಿದಂತಾಗುವುದು. ಅಲ್ಲದೆ ಇದು ಅವಶ್ಯಕ ಇಲ್ಲಿ.

ಲಕ್ಕವ್ವ, ಕಾಯಕದ ರೀತಿಯನ್ನು, ನಡೆಯಲ್ಲಿ ರೂಪಿಸುವಂತೆ ಗಂಡನಿಗೆ ಎಚ್ಚರಿಸಿ, ತನ್ನ ಸತಿಧರ್ಮವನ್ನು ಕೃತಿಯಲ್ಲಿ ಪ್ರದರ್ಶಿಸುವ ರೀತಿ, ಆ ಪಾತ್ರದ ಘನತೆ ತೋರುತ್ತದೆ. ನೋಟ ಮೂರು, ಇಂದಿನ ಸಮಾಜಕ್ಕೆ ಹಿಡಿವ ಕನ್ನಡಿ

ಯಂತಿವೆ. ಯಾವ ಸಮಸ್ಯೆಗಾಗಿ ಇಂದಿನವರು ವಿವಿಧವಾದಗಳ ಹೆಸರಲ್ಲಿ ಸೆಣಸಾಡಿ ನಾಗರೀಕರೆನಿಸಿಕೊಂಡು ಇನ್ನೂ ನಿಲುಗಡೆಗೆ ಬರದಿರುವಾಗ, ಅದೇ ಸಮಸ್ಯೆಯನ್ನು ಎಷ್ಟು ಸುಲಭವಾಗಿ ಶಿವ-ಶರಣೆಯರು ಪರಿಹರಿಸಿದ್ದರೆಂಬುದಕ್ಕೆ ಸಾಕ್ಷಿಯಾಗಿವೆ, 'ಮಾರಯ್ಯ-ಲಕ್ಕಮ್ಮ' ಅವರ ಸಂಸಾರ. ಇಂತಹ ಸಂಸಾರದ ಚಿತ್ರ ನೀಡಿರುವ ಈ ಮೂರನೆಯ ನೋಟ, ನಾಟಕಕಾರರ ಕಾಲಿಕ ಪ್ರಜ್ಞೆಯ ಸೂಕ್ತ ಪ್ರತಿನಿಧಿಯಾಗಿದೆ. ನಾಟಕ ಅರ್ಥಪೂರ್ಣವಾಗುವಂತೆ ಮಾಡಿದೆ. ಅಕ್ಕಿಯನ್ನು ಹೆಚ್ಚು ತಂದದ್ದು ಏಕೆ? ಎಂದು ಲಕ್ಕಮ್ಮ, ನುಡಿದು, 'ಸಣ್ಣ ಪುಟ್ಟ ಆಶೆಗಳಿಗೂ ಒಳಗಾಗುವುದು ಆದರ್ಶವಲ್ಲ'ವೆಂದು ಎಚ್ಚರಿಸುತ್ತಾಳೆ. ಗಂಡನನ್ನು "ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು ಎನ್ನುತ್ತಾಳೆ. ಮಾರಯ್ಯ ನಿರಾಶೆಗೊಂಡು, ಕೈಲಾಸಕ್ಕೆ ಹೋಗುವೆನು ಎಂದಾಗ,"

"ದೇವ, ಇದ್ದಿಹೆನೆಂಬ ಕಾಯದ ಅರಿಕೆ ಅಳಿಯದೆ, ಮಾಡಿಹೆನೆಂಬ ತವಕ ಹಿಂಗದೆ ಆಲಸಿಕೆಯಿಂದ ಕೈಲಾಸಕ್ಕೆ ಹೋಗುವೆನೆಂದರೆ ಅದೆಂದಿಗಾದರೂ ಸಾಧ್ಯವೆ" –ಎಂದು ಲಕ್ಕಮ್ಮ ಮಾರ್ಮಿಕವಾಗಿ ಪತಿಗೆ ನುಡಿಯುತ್ತಾಳೆ. ಹೀಗೆಯೇ ಈ ೩ನೇ ನೋಟದಲ್ಲಿ ಬರುವ ಲಕ್ಕಮ್ಮನ ಮಾತುಗಳು ಆರಿಸಿದ ಆಣಿಮುತ್ತುಗಳು. ಕಷ್ಟ ಸಾಧ್ಯವಾದ ತತ್ತ್ವದ ವಿಷಯವು ಸುಲಭ ಸಾಧ್ಯವಾಗಿ ತಿಳಿಯುವಂತೆ, ಮೂಡಿಸಿದ ೩ನೇ ನೋಟವು, ನಾಟಕಕಾರರ, ನಾಟಕ ರಚನೆಯ ನಿಸ್ಸಂದೇಹ ಶಕ್ತಿಯ ಪರಿಪೂರ್ಣ ಸಾಕ್ಷಿಯಾಗಿದೆ

ನೋಟ ನಾಲ್ಕರಲ್ಲಿ, ಬಂದಿರುವ ಹಿನ್ನೆಲೆ ದೃಶ್ಯ. 'ಮಿಣುಕು ಮಿಣುಕಾಗಿ ಉರಿಯುತ್ತಿರುವ ಹಣತೆ'–ಲಕ್ಕಮ್ಮನ ಎದೆಯ ದುಗುಡವನ್ನು ಸೂಚಿಸುವ ಸಂಕೇತವಾಗುತ್ತದೆ. ಆಕೆ. 'ನಿತ್ಯನೇಮವ್ರತ ಶೀಲ ಸಂಪನ್ನ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳಿಗೆ ನೇಮ ಸಲಿಸಿ, ಜಂಗಮಾರಾಧನೆಯನ್ನು ನಡೆಸುವ ಜಾಣ್ಮೆ ಮೆಚ್ಚುವಂತಹುದು. ಅದಕ್ಕೆ ಶ್ರೀಗಳವರು, ತಮ್ಮ ಊಹಾಶಕ್ತಿಯಿಂದ, ಸಂಶೋಧನ ಶಕ್ತಿಯಿಂದ, ಲಕ್ಕಮ್ಮನ ಪಾತ್ರದಲ್ಲಿ, ಜಾಣ್ಮೆಯನ್ನು ತೋರಿರುವುದು ಅವರ ಪ್ರತಿಮಾ ದೃಷ್ಟಿಯ ಪಕ್ವತೆಯ ಅರಿವಾಗುತ್ತದೆ.

ನೋಟ ೫ರಲ್ಲಿ, ಮಾರಯ್ಯ, ಲಕ್ಕಮ್ಮನ ಇಚ್ಛೆಯಂತೆ, ಬಸವಣ್ಣ ಹಾಗೂ ಜಂಗಮ ಸಮೂಹಕ್ಕೆ ಪ್ರಸಾದಕ್ಕೆಂದು ಹೇಳಿ ಬರುವ ಸಂಗತಿ, ನೋಟ ೬ರಲ್ಲಿ ಜಂಗಮರ ಹಾಸ್ಯಪೂರಿತ ಸಂಭಾಷಣೆ ನಾಟಕದ ಗತಿಗೆ ಪೂರಕವಾಗಿವೆ.

ನೋಟ ೭ರಲ್ಲಿ, ಜಂಗಮ ತಿಂತಿಣಿಗೆ ಪ್ರಸಾದ ಸಲ್ಲಿಸಿದ ನಂತರ ತೃಪ್ತಿಯಿಂದ, ಶಿವೈಕ್ಯಳಾಗುತ್ತಾಳೆ. ಅದು ಅವಳಿಗೆ ಸೂಕ್ತವಾದ ಶಿವೈಕ್ಯದ ರೀತಿ–ಮುತ್ತೈದೆ ಸಾವು. ಇಲ್ಲಿಯೂ ಪ್ರತಿಮಾ ಸೃಷ್ಟಿಯಾಗಿದೆ. ರಂಗದ ಮೇಲೆ ಅವಳು ಶಿವೈಕ್ಯಳಾಗುವ ದೃಶ್ಯವಿದೆ. ಸಾಮಾನ್ಯವಾಗಿ ರಂಗದ ಮೇಲೆ–ಹಿಂದಿನ ಸಂಪ್ರದಾಯ

ರೀತ್ಯಾ–ಸಾವನ್ನು ತೋರುವ, ಸಂಪ್ರದಾಯವಿಲ್ಲದಿದ್ದರೂ, ಇಂದಿನ ದೃಷ್ಟಿಯಲ್ಲಿ ಅದು ಭಾವ ಪ್ರಕಟಣೆಯ ಒಂದು ನೇರ ಮಾರ್ಗವೆನಿಸಿಸುವುದಿಲ್ಲವೆ?

ಈ ನಾಟಕದಲ್ಲಿ 'ಮಾರಯ್ಯ ಹಾಗೂ ಲಕ್ಕವ್ವ'–ಪಾತ್ರಗಳು ಆರಂಭದಿಂದ ಅಂತ್ಯದವರೆವಿಗೂ ಘನವಾಗಿವೆ. ಲಕ್ಕವ್ವನ ಪಾತ್ರ ಕಡೆದಿಟ್ಟ ಸುಂದರ ಮೂರ್ತಿ. "ಶುದ್ಧ ಕಾಯಕದಿಂದ ಜಂಗಮವನಾರಾಧಿಸಬೇಕು. ನನಗೆ ಬೇಕಾದುದು–ಬೇಡುವುದು ಭಕ್ತಿ"–ಎಂಬ ಆಕೆಯ ಮಾತುಗಳೇ, ಅವಳ ಪಾತ್ರದ ಪರಿಚಯ ಮಾಡಿಕೊಡಲು ಸಾಕು, ಇಡೀ ನಾಟಕದ ಜೀವ ಜೀವಾಳವಾಗಿ, ನುಡಿದಂತೆ ನಡೆವ ಕೃತಿಶೀಲೆ. ದಾರಿ ತಪ್ಪಿದಾಗ, ಪತಿಯನ್ನು ಎಚ್ಚರಿಸುವ ಸತಿ ಲಕ್ಕವ್ವ. ಈ ಪಾತ್ರವು, ಕನ್ನಡ ನಾಟಕ ಸಾಹಿತ್ಯಕ್ಕೆ, ಶ್ರೀ ಜ. ಚ. ನಿ. ಅವರು ನೀಡಿದ ಅತ್ಯುತ್ತಮ ಕಾಣಿಕೆಯಾಗಿದೆ.

ನಾಯಕನಾಗಿ ಮಾರಯ್ಯ ಕಂಗೊಳಿಸುತ್ತಾನೆ. ಉಳಿದ ಪಾತ್ರಗಳು, ಸಂದರ್ಭದ ಪ್ರಾಮುಖ್ಯತೆಗನುಗುಣವಾಗಿ ಮೂಡಿ ಬಂದು ನಾಟಕದ ಶೋಭೆಯನ್ನು ಹೆಚ್ಚಿಸಿವೆ.

**ರಂಗ ತಂತ್ರದ ದೃಷ್ಟಿಯಲ್ಲಿ :**

ಈ ನಾಟಕದ, ಭಾವಕ್ಕೇರಲು, ಹೃದಯ ಮಿಡಿಸಲು ಪ್ರತಿಭಾವಂತ ನಿರ್ದೇಶಕ ಹಾಗೂ ನಟರ ಅಗತ್ಯವಿದೆ. ಈ ನಾಟಕದಲ್ಲಿ ದೃಶ್ಯ ಸಂಯೋಜನೆಯನ್ನು, ಬೆಳಕು ಸಂಯೋಜನೆಯನ್ನು, ಅಳವಡಿಸಲು, ಸಾಕಷ್ಟು ಆ ದಿಶೆಯಲ್ಲಿ, ಅನುಭವದ ಅಗತ್ಯವಿದೆ. ಹಿನ್ನೆಲೆ ದೃಶ್ಯಗಳನ್ನು, ಎಚ್ಚರಿಕೆಯಿಂದ, ಅರ್ಥಪೂರ್ಣವಾಗಿ ಅಳವಡಿಸದಿದ್ದರೆ, ನಾಟಕಕ್ಕೆ ಅಪಚಾರವಾಗುತ್ತದೆ.

ನೋಟ ೧ರ ಆರಂಭದಲ್ಲಿ ದೃಶ್ಯ ಹಾಗು ಬೆಳಕಿನ ಸರಿಯಾದ ಸಂಯೋಜನೆಯಿಂದ, ಲಕ್ಕವ್ವನ ಮಾತುಗಳ ಛಾಪು ಪ್ರೇಕ್ಷಕರಿಗೆ ಹೆಚ್ಚು ಹಿಡಿಸುತ್ತದೆ; ಅರ್ಥಪೂರ್ಣವಾಗುತ್ತದೆ.

ದೃಶ್ಯ ೭ರಲ್ಲಿ, ಮಾರಯ್ಯ, ದಕ್ಷಿಣೆಯನ್ನು ತರಲು ಒಳಗೆ ಹೋಗುವುದು, ಆಗ ಲಕ್ಕವ್ವನಸ್ಥಿತಿ ಕಂಡು ಅವಳ ಬಯಕೆಯಂತೆ ಪ್ರಮಥರಿಗೆ ತಿಳಿಸಿದಾಗ, ಅವರು ಅವಳ ಬಳಿಗೆ ಸಾಗುವುದು. ದೃಶ್ಯದ ಈ ಭಾಗಗಳನ್ನು ತೋರಿಸಲು ಸೂಕ್ತರೀತಿಯನ್ನು ಕಂಡು ಕೊಳ್ಳುವುದು ಅವಶ್ಯಕವಾಗಿದೆ.

**ಗುರುವಿನ ಗೆಲವು :**

ಇದೊಂದು ಐತಿಹಾಸಿಕ ನಾಟಕ. ನಾಟಕದ ಉದ್ದಕ್ಕೂ ಐತಿಹಾಸಿಕ ಸನ್ನಿವೇಶವು ಸ್ವಲ್ಪವೂ ವಿಚಲಿತವಾಗದಂತೆ ಮೂಡಿಬಂದಿರುವುದು ಈ ನಾಟಕದ ಸಲ್ಲಕ್ಷಣವಾಗಿದೆ. ಯಾವ ಪೂರ್ವ ಗ್ರಹಕ್ಕೂ ಪಕ್ಕಾಗದೆ, ಪವಾಡಸಿದ್ಧಿಗಳನ್ನುಳಿದು, ನಿಷ್ಪಕ್ಷ

ಪಾತವಾಗಿ, ಐತಿಹಾಸಿಕ ಘಟನೆಯೊಂದನ್ನು, ಮನದುಂಬುವಂತೆ ನಾಟಕರೂಪದಲ್ಲಿ ಮೂಡಿಸಿರುವುದು, ಶ್ರೀ ಜ. ಚ. ನಿ. ಅವರ ಸಾಹಸ ಸಂಶೋಧನ ದೃಷ್ಟಿಗೆ, ನಾಟಕ ಸಾಹಿತ್ಯದ ಬಗ್ಗೆ ಇರುವ ಶ್ರೇಷ್ಠ ದೃಷ್ಟಿಗೆ, ಸಾಕ್ಷಿಯಾಗಿದೆ. ನಾಟಕದ ಜೀವಾಳವಾಗಿ ಸಹಜತೆ ಹಾಸು ಹೊಕ್ಕಾಗಿದೆ.

ರಾಜ್ಯವು ವಿಧರ್ಮೀಯರಿಂದಾಗಿ, ರಾಜ್ಯದ್ರೋಹಿಗಳಿಂದಾಗಿ ಅನ್ಯಾಕ್ರಾಂತ ವಾಗುವಾಗ, ಗುರುಪೀಠದ ಶಕ್ತಿ–'ಗುರು ಬಲ'ವು ಅಂತಹ ರಾಜ್ಯವನ್ನು ಕಾಪಾಡ ಬಲ್ಲದು. ದುಷ್ಟ ಶಕ್ತಿಗಳೆಲ್ಲ ಗುರುಬಲದೆದುರಿನಲ್ಲಿ ಧೂಳೀಪಟವಾಗುತ್ತವೆ. ಅಂತೇ 'ಗುರುವಿನ ಗೆಲವು'- ಎಂಬ ಸಂದೇಶವನ್ನು ಈ ನಾಟಕ ನೀಡುತ್ತದೆ.

ರಾಜಕಾರಣದ ದಂದುಗಕ್ಕಿಳಿಯದೆ, ಜನತೆಯ, ನಾಡ ಪ್ರಭುವಿನ, ನಾಡಿನ ಹಿತವನ್ನು ಕಾಯುವ ಇಂತಹ 'ಗುರುಪೀಠ'ಗಳು ಆದರ್ಶವಲ್ಲವೆ ? ಹಾಗೆ ಆದರ್ಶ ಪುರುಷರಾಗಿ ಬಾಳಿ ಹೋದ ಶ್ರೀ ಕರಿಬಸವ ದೇಶಿಕೇಂದ್ರರು ಈ ನಾಟಕದ ಜೀವಾಳ; ಅರಸನಿಗೆ ಒದಗಿದ ಅನಿರೀಕ್ಷಿತ ಸಂಕಟ ಸಮಯದಲ್ಲಿ, ತಮ್ಮ ಶ್ರೀಶಕ್ತಿಯಿಂದ ಸಹಾಯ ನೀಡಿದುದೇ ಈ ನಾಟಕದ ವಸ್ತು.

ನಾಟಕದ ಪೂರ್ವಕಥೆಯನ್ನು 'ಹಿನ್ನುಡಿ'ಯಲ್ಲಿ ನೀಡಿರುವುದು, ನಾಟಕವನ್ನು ಓದುವಾಗ ಹೆಚ್ಚು ರುಚಿಸಲು ಅನುಕೂಲವಾಗಿದೆ.

ದೃಶ್ಯ ಒಂದರಲ್ಲಿ ಈ ಪೂರ್ವಕಥೆಯ ಸೂಚನೆ ಬಂದಿರುವುದು, ನಾಟಕತಂತ್ರ ಪ್ರಜ್ಞೆಯ ಒಂದು ಒಳ್ಳೆಯ ಉದಾಹರಣೆ. ಈ ದೃಶ್ಯದಲ್ಲಿ, ರಾಜದೂತನು 'ಪವಾಡಪ್ಪ ನಾಯಕ'–ನಾಡಪ್ರಭುವಿಗೆ ಬಂದೊದಗಿದ ದುರವಸ್ಥೆಯನ್ನು ಶ್ರೀಗಳಿಗೆ ತಿಳಿಸಿ ಆ ಬಗ್ಗೆ ಮುಂದುವರಿಯಲು ಪ್ರಾರ್ಥಿಸುತ್ತಾನೆ.

ದೃಶ್ಯಾರಂಭದಲ್ಲಿ ಬರುವ ಶ್ರೀಗಳವರ ಮಾತುಗಳು, ಮುಂದಿನ ಘಟನೆಯನ್ನು ಸೂಚಿಸುವುವು. ಇದರಿಂದ ಪ್ರೇಕ್ಷಕರಲ್ಲಿ ಕುತೂಲಹವುಂಟಾಗಿ ನಾಟಕೋನ್ಮುಖರಾಗು ವರು. ರಾಜದೂತನಿಂದ ವಿಷಯಗಳನ್ನು ಗ್ರಹಿಸಿದ ಶ್ರೀಗಳು ರಾಜ್ಯರಕ್ಷಣೆಗಾಗಿ ಧೃಡ ನಿರ್ಧಾರ ಕೈಗೊಳ್ಳುತ್ತಾರೆ. ಈ ದೃಶ್ಯವು ಸುಲಲಿತವಾಗಿ ಸಾಗುತ್ತದೆ.

ದೃಶ್ಯ ಎರಡರಲ್ಲಿ 'ಸೂರ್ಯಸಿಂಹಾಸನ' ಪೀಠದ ಇತಿಹಾಸ ನಮ್ಮ ಕಣ್ಮುಂದೆ ನಿಲ್ಲುತ್ತದೆ. ಗುರುಬೋಧೆ ನೀಡಬಲ್ಲ ಶ್ರೀಗಳು 'ವೀರವಾಣಿ'ಯನ್ನು ಮೊಳಗಿ ಜನತೆ ಯನ್ನು-'ನೇಗಿಲಯೋಗಿ'ಯನ್ನು ಕಲಿತನದ ನಿಧಿಯನ್ನಾಗಿಸುತ್ತಾರೆ. ವಿಜಯದ ಕರ್ತೃಭಸ್ಮ ಹಚ್ಚಿ, ರಣರಂಗಕ್ಕೆ ಕಳುಹಿಸುತ್ತಾರೆ.

ಎರಡನೆ ದೃಶ್ಯವು, ನಾಟಕದ 'ಶಿಖರ' ದೆಡೆಗೆ ಸಮೀಪವಾಗುತ್ತದೆ. ಶ್ರೀಗಳ ಪಾತ್ರದ ಘನತೆಯು ಇಲ್ಲಿ ಸಾಕ್ಷಾತ್ಕಾರವಾಗುತ್ತದೆ. ಶ್ರೀ ಜ. ಚ. ನಿ. ಯವರ ಲೇಖನಿ ಯಲ್ಲಿ, ಇದು ಬಹಳ ಸಹಜವಾಗಿ ಮೂಡಿ ಬಂದಿದೆ.

ಏನು ಹೇಳಬೇಕೋ, ಏನು ಮಾಡಬೇಕೋ, ಅದನ್ನು ಅಚ್ಚುಕಟ್ಟಾಗಿ, ಅಳವಡಿಸಿಕೊಂಡಿರುವ ಎರಡನೇ ದೃಶ್ಯ ಸುಂದರವಾಗಿದೆ.

ದೃಶ್ಯ ಮೂರರಲ್ಲಿ, ಹಿಂದಿನ ದೃಶ್ಯಗಳಲ್ಲಿ ಕುತೂಹಲ ಹುಟ್ಟಿಸಿದ್ದ 'ರಾಮಾಜಿ'ಯ ಬಗ್ಗೆ ನಮಗೆ ಸ್ಪಷ್ಟ ಕಲ್ಪನೆ ಮೂಡುತ್ತದೆ, ಅವನು ಸರದಾರರುಗಳೊಡನೆ ಆಡುವ ಮಾತುಗಳಿಂದ.

ದೃಶ್ಯ ನಾಲ್ಕರಲ್ಲಿ, ಸೆರೆಯಲ್ಲಿರುವ 'ಪವಾಡಪ್ಪನಾಯಕ' ಹಾಗೂ ಅವನ ರಾಣಿ ರಾಜೇಶ್ವರಿಯು ಸಂಧಿಸುವ ಚಿತ್ರವಿದೆ- ನಿಷ್ಕಲ್ಮಷ ಹೃದಯದ ರಾಜನಿಗೆ ರಾಮಾಜಿಯ ಕುತಂತ್ರಗಳನ್ನೆಲ್ಲ ತಿಳಿಸುತ್ತಾಳೆ. ಅಲ್ಲದೆ ತನ್ನ ಸತ್ಯಸಂಕಲ್ಪವನ್ನೂ ತಿಳಿಸುತ್ತಾಳೆ. ಈ ದೃಶ್ಯದಲ್ಲಿ 'ನಾಯಕ'ನ ವೀರ ಕ್ಷಾತ್ರದೃಷ್ಟಿಯು, ನಮಗೆ ಅರಿವಾಗುತ್ತದೆ. ರಾಣಿ, ಅವನ ಪಾತ್ರಕ್ಕೆ ಕಳೆದುಂಬುತ್ತಾಳೆ. ಎರಡೂ ಪಾತ್ರಗಳೂ,ಪ್ರೇಕ್ಷಕರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ. ಈ ದೃಶ್ಯದಲ್ಲಿ ಬರುವ 'ಶುಭಸ್ವಪ್ನವು' ನಾಯಕನ ಮನೋಧರ್ಮ, ಶ್ರೀ ಕರಿಬಸವೇಂದ್ರರ ಭಕ್ತವಾತ್ಸಲ್ಯಗಳ ಸಂಕೇತವಾಗಿ ಮೂಡಿ ಬಂದಿದೆ: ಪಾತ್ರದ ಪೂರ್ಣತೆಗೆ ಅವಕಾಶವಾಗಿದೆ.

ಕೊನೆಯ ದೃಶ್ಯದಲ್ಲಿ, ಮೇಲೇರಿದ್ದ ಪ್ರೇಕ್ಷಕರ ಮನೋಪಕ್ಷಿ, ತಾನಿಂತ ನೆಲಕೆ ಸಹಜವಾಗಿ ಇಳಿಯುತ್ತದೆ. ಇದು ನಾಟಕದ ಸಾಫಲ್ಯತೆಗೆ ಪ್ರೇಕ್ಷಕರ ಮೇಲಿನ ಸತ್ಪರಿಣಾಮಕ್ಕೆ ಹೊಂದಿಕೊಂಡ ಅಂಶ.

ಶ್ರೀ ಕರಿಬಸವೇಂದ್ರರ ವಿಶಿಷ್ಟ ಗುಣಗಳನ್ನು 'ನಾಯಕ'ನಿಂದ ಹೇಳಿಸಿರುವ ಸಂದರ್ಭ ಬಲು ಸೂಕ್ತವಾಗಿದೆ. ಪ್ರೇಕ್ಷಕರ ಮನದುಂಬುತ್ತದೆ.

ಪಶ್ಚಾತ್ತಾಪದಿಂದ ದಗ್ಧವಾದ ವ್ಯಕ್ತಿ ರಾಮಾಜಿಯನ್ನು ಶ್ರೀಗಳು ಅಸೀಮ ಕರುಣೆಯಿಂದ ಕ್ಷಮಿಸುವರು. ಅಲ್ಲದ ಕಲುಷಿತ ಹೃದಯವನ್ನು ತೊಳೆಯಬಲ್ಲವನು, ಕಷ್ಟಗಳನ್ನು ಕಳೆಯಬಲ್ಲವನು ಶ್ರೀಗುರುವೊಬ್ಬನೇ.... ಅಂತೇ ಗುರುವಿನ ಗೆಲುವು ಎಂಬ ಸಂದೇಶದೊಡನೆ ನಾಟಕ ಮುಕ್ತಾಯವಾಗುತ್ತದೆ. ಇದು ನಾಟಕದ ಉದ್ದೇಶಕ್ಕನುಗುಣವಾಗಿ ಸೂಕ್ತ ಮುಕ್ತಾಯ.

ಈ ನಾಟಕದಲ್ಲಿ ಘನತೆಗೆ, ಗಾಂಭೀರ್ಯಕ್ಕೆ, ವಾತ್ಸಲ್ಯಕ್ಕೆ, ಶ್ರೇಷ್ಠತೆಗೆ, ಸರಿಸಾಕ್ಷಿಯಾಗಿ ಮೂಡಿರುವ ಸಲ್ಲಕ್ಷಣ ಪಾತ್ರ ಶ್ರೀ ಕರಿಬಸವ ದೇಶಿಕೇಂದ್ರರದು. 'ಪವಾಡಪ್ಪನಾಯಕ'ನ ಮಾತಿನಲ್ಲಿ, ಅವರದು 'ಶಾಪಾದಪಿ ಶರಾದಪಿ' ಪ್ರಭಾವ. ಇಂತಹ ಆದರ್ಶಗುರುವಿನ ಮುಂದೆ ಯಾರಾದರೂ ನತಮಸ್ತಕರಾಗಲೇಬೇಕು.

ರಾಜ ಹಾಗೂ ರಾಣಿಯರ ಪಾತ್ರಗಳು ನಾಟಕದ ಘನತೆಯನ್ನು ಎತ್ತಿ ಹಿಡಿಯುವ ಪಾತ್ರಗಳಾಗಿವೆ. ಸತ್ವಶಾಲೀ ಪಾತ್ರಗಳಾಗಿವೆ. ಸಂದರ್ಭಕ್ಕೆ ಸರಿದೂಗಿವೆ. ವಿಲಾಸವಾಗಿವೆ ರಾಜದೂತನ ಪಾತ್ರವು ಗುರು ಸನ್ನಿಧಿಯ ಸನಿಹಕ್ಕೆ ತಕ್ಕಂತ ಔಚಿತ್ಯ ಪೂರ್ಣವಾಗಿ ಮೂಡಿ ಬಂದಿದೆ.

ಉಳಿದೆಲ್ಲ ಪಾತ್ರಗಳೂ ನಾಟಕದ ಪೂರ್ಣತೆಗೆ ಸಹಾಯಕಾರಿಯಾಗಿವೆ.

## ರಂಗ ತಂತ್ರದ ದೃಷ್ಟಿಯಲ್ಲಿ

ರಂಗ ತಂತ್ರದ ದೃಷ್ಟಿಯಿಂದ 'ಆಯ್ದಕ್ಕಿಯ ಮಾರಯ್ಯ'ನಿಗಿಂತ 'ಗುರುವಿನ ಗೆಲುವ'ನ್ನು ಅಳವಡಿಸಿಕೊಳ್ಳುವುದು ಸುಲಭವೆನಿಸಿದರೂ, ಉಳಿದ ದೃಷ್ಟಿಯಲ್ಲಿ ಅವೆರಡನ್ನೂ ಹೋಲಿಸುವುದು ಸರಿ ಎನಿಸದು. ಕಾರಣ 'ಆಯ್ದಕ್ಕಿಯ ಮಾರಯ್ಯ'ನ ಭಾವಪುಷ್ಟಿ ಅರ್ಥ ಪುಷ್ಟಿಗಳ ವ್ಯಾಪ್ತಿ ಬೇರೆ. 'ಗುರುವಿನ ಗೆಲುವಿ'ನಲ್ಲಿ ಎಲ್ಲ 'ದೃಶ್ಯ'ಗಳ ಹಿನ್ನೆಲೆಗಳಿಗಾಗಿ ರಂಗಸಜ್ಜಿಕೆ ಸುಲಭವಾಗಿದೆ. ಒಂದು ದೃಶ್ಯದಿಂದ ಮತ್ತೊಂದು ದೃಶ್ಯ ಬದಲಾವಣೆಯೂ ಸರಾಗವಾಗಿ ನಡೆಯುತ್ತದೆ.

ದೃಶ್ಯ ನಾಲ್ಕರಲ್ಲಿ,'ಪವಾಡಪ್ಪನಾಯಕ'ನು'ಶುಭಸ್ವಪ್ನ,ದ ಬಗ್ಗೆ ಹೇಳುವುದನ್ನು ರಂಗದಲ್ಲಿ, ಅವನ ಗುರುಗಳೇ ಬಂದು ಹೇಳುವಂತೆ 'ನೆರಳಿನ' ಮೂಲಕ ತೋರಿಸಿದರೆ ಹೆಚ್ಚು ಪರಿಣಾಮಕಾರಿ–ಒಂದು ಒಳ್ಳೆಯ ಪ್ರಯೋಗಕ್ಕೆ ಅವಕಾಶವಿದೆ ಇಲ್ಲಿ.

ಈ ನಾಟಕಕ್ಕೂ, ಸಾಕಷ್ಟು ಅನುಭವವುಳ್ಳ ನಿರ್ದೇಶಕ ಹಾಗೂ ನಟರ ಅವಶ್ಯಕತೆ ಇದೆ. ಪಾತ್ರಗಳ ಸಂಭಾಷಣೆಯನ್ನು ಬಲು ಗಾಂಭೀರ್ಯದಿಂದಲೇ ನಡೆಸಬೇಕು. ಅಲ್ಲದೆ, 'ಶ್ರೀ'ಗಳು, ರಾಜ ಹಾಗು ರಾಣಿಯರ ಪಾತ್ರವನ್ನು ಅಭಿನಯಿಸುವವರು ಸಾಕಷ್ಟು ಎಚ್ಚರವಿಲ್ಲದೆ ಮುಂದುವರಿದರೆ, ನಾಟಕದ ಕಳೆ ಕೆಡಿಸಿ, ಪ್ರೇಕ್ಷಕರ ಸಹನೆ ಪರೀಕ್ಷೆ ಮಾಡುವ ದೋಷಕ್ಕೆ ಕಾರಣರಾಗಬಹುದು. ಆದ್ದರಿಂದ ಈ ಪಾತ್ರಳನ್ನು ಅಭಿನಯಿಸುವವರಿಗೆ ಜಾಣ್ಮೆ, ಪರಿಶ್ರಮ ಇದ್ದರೆ ನಾಟಕಕ್ಕೆ ನ್ಯಾಯ ದೊರತೀತು.

ಶ್ರೇಷ್ಠವಾದ, ಇಂತಹ ಒಂದು ಐತಿಹಾಸಿಕ ನಾಟಕ ಅದರಲ್ಲೂ ಒಂದು ಶ್ರೇಷ್ಠ ಮೂಲ ಗುರುಪೀಠದ ಇತಿಹಾಸವನ್ನೊಳಗೊಂಡದ್ದು ಎಂಬುದನ್ನು ಚಲನ ಚಿತ್ರದಸಮಾಜಕ್ಕೆ ತಿಳಿಸುವುದೊಳ್ಳೆಯದೇನೋ ನಿಜ. ಜೊತೆಗೆ ಸಮಾಜದ ಬಾಳಿನಲ್ಲಿ ಬಹು ಪೂರ್ವದಿಂದಲೂ ಹಾಸು ಹೊಕ್ಕಾಗಿರುವ ರಂಗಭೂಮಿಯಲ್ಲೂ ಇಂತಹ ನಾಟಕಗಳನ್ನು ಆಗಾಗ್ಯೆ ಆಡುವುದು, ವಿವಿಧ ಗ್ರಾಮಗಳಲ್ಲಿ, ಸ್ಥಳಗಳಲ್ಲಿ ಪ್ರದರ್ಶಿಸುವುದು ಪೀಠದ ಶಿಷ್ಯರಿಗೊಬ್ಬರಿಗೇ ಅಲ್ಲ, ಸಮಾಜದ ಜನಕ್ಕೆ ಒಂದು ಆದರ್ಶ ತೋರಿಸಿ ಕೊಟ್ಟಂತಾಗುವುದು. ಅಲ್ಲದೆ ಆಯಾಯಾ ಸ್ಥಳಗಳ, ವಿಶೇಷ ಶಕ್ತಿ, ಪ್ರತಿಭೆಯುಳ್ಳ ನಟರಿಗೆ ಅವಕಾಶವಾಗುವುದು.

ಅದರಿಂದ ನಾಟಕ ನೀಡುವ ಸಂದೇಶ ಹೆಚ್ಚು ಆಳವಾಗಿ ಜನದ ಮನದಲ್ಲಿ ಇಳಿಯಲು ಅನುಕೂಲವಾಗುವುದು. ಇಂತಹ ಎರಡು ಶ್ರೇಷ್ಠ ನಾಟಕಗಳನ್ನು ಕೊಟ್ಟ ಶ್ರೀ ಜ. ಚ. ನಿ. ಯವರು ಈ ದಿಶೆಯಲ್ಲಿ ಮತ್ತೆ ಗಮನ ಹರಿಸಿಲ್ಲವೆಂದು ಕಾಣುತ್ತದೆ. ಅದೇಕೋ ನಾವು ಕಾಣೆವು.

ಶ್ರೀ ಜ. ಚ. ನಿ. ಅವರ ಸತ್ವಪೂರ್ಣ ಲೇಖನಿ ಮುಂದೆ ಈ ದಿಶೆಯಲ್ಲಿ ಸ್ವಲ್ಪ ಗಮನ ಹರಿಸಿದರೂ ಅದು ನಮ್ಮ ಸುಯೋಗವಾದೀತು ; ಕನ್ನಡ ನಾಟಕ ಸಾಹಿತ್ಯ ಶಾರದೆಯ ಮುತ್ತಿನ ಹಾರಕ್ಕೆ ಮುತ್ತೊಂದು ಕಳೆ ಕೂಡಿ ಕೊಂಡೀತು.

# ನಾಟಕ ಸಾಹಿತ್ಯದ ಶ್ರೀ. ಜ. ಚ. ನಿ.

—ಶ್ರೀ ಹೆಚ್. ಜಿ. ಸೋಮಶೇಖರರಾವ್, ಎಂ. ಎ

ಆಧುನಿಕ ವಚನಕಾರರಲ್ಲಿ ಶ್ರೀ ಜ. ಚ. ನಿ. ಅವರು ಶ್ರೇಷ್ಠ ಬರಹಗಾರರೆನಿಸಿದ್ದಾರೆ. ಕಾವ್ಯ, ಕವನ, ಪ್ರಬಂಧಗಳು, ನಾಟಕ-ಹೀಗೆ ಸಾಹಿತ್ಯ ಪ್ರಪಂಚದಲ್ಲಿ ತಮ್ಮದೇ ಆದ ಸ್ಥಾನಮಾನಗಳನ್ನು ಗಳಿಸಿ, ಉತ್ತಮ ಪ್ರಗತಿ ಸಾಧಿಸಿದ್ದಾರೆ. ಸಾಹಿತಿಗಳಾದ ಶ್ರೀ ಚ. ಸುಂದರೇಶ ಅವರು ಒಂದೆಡೆ ಹೇಳಿದಂತೆ "ಶ್ರೀ ಜ. ಚ. ನಿ. ಅವರದು ಪ್ರತಿಭಾಪೂರ್ಣವಾದ ಬದುಕು; ಸಾಹಿತ್ಯವನ್ನೇ ಶಿವಯೋಗಾನಂದದ ಹೆದ್ದಾರಿಯನ್ನಾಗಿ ಮಾಡಿಕೊಂಡ ಬದುಕು." ಹೀಗೆ, ಆತ್ಮೋಪಾಸನೆಯ ಜೊತೆಗೆ, ಸಾಹಿತ್ಯೋಪಾಸನೆಯನ್ನೂ ಮಾಡುತ್ತಾ ಕನ್ನಡನಾಡು-ನುಡಿಗಳ ಬಗ್ಗೆ ಉತ್ತಮ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ ಶ್ರೀ ಜ. ಚ. ನಿ. ಅವರು.

ಶ್ರೀ ಜ. ಚ.ನಿ. ಅವರ ನಾಟಕಗಳಾದ 'ಆಯ್ದಕ್ಕಿ ಮಾರಯ್ಯ' ಮತ್ತು 'ಗುರುವಿನ ಗೆಲುವು' ಕುರಿತಾದ್ದು ಈ ಸಣ್ಣ ಲೇಖನ. ನಾಟಕ,ಜೀವನವನ್ನು ಪ್ರತಿಬಿಂಬಿಸುವ ಸಾಧನೆಯಷ್ಟೇ ಅಲ್ಲ; ಕೇವಲ ಹಲವಾರು ಘಟನೆಗಳನ್ನು ಒಳಗೊಂಡ ಮಾತಿನ ಸರಣಿಯ ಮಾಲೆಯಲ್ಲ; ಅದು ಜನಮನವನ್ನು ಆಕರ್ಷಿಸಿ, ವಿಚಾರಶೀಲವಾಗುವಂತೆ ಮಾಡುವುದಾಗಬೇಕು. ಇಂತಹ ಒಂದು ಮಹತ್ವಾಕಾಂಕ್ಷೆಯಿಂದ ರಚಿಸಿದವು ಮೇಲೆ ಹೇಳಿದ ಶ್ರೀ ಜ. ಚ. ನಿ. ಅವರ ಈ ನಾಟಕಗಳು.

'ಆಯ್ದಕ್ಕಿ ಮಾರಯ್ಯ' ಒಂದು ಏಕಾಂಕ ನಾಟಕ. ಈ ನಾಟಕಕ್ಕೆ ಶ್ರೀ ಅ. ನ. ಕೃ. ಅವರು ಚೆನ್ನಾಗಿ ಮುನ್ನುಡಿ ಬರೆದಿದ್ದಾರೆ. ಈ ನಾಟಕದಲ್ಲಿ ಕಾಯಕವೇ ಮಹತ್ವದ್ದು ಎಂದು ಭಾವಿಸಿದ್ದ ಮಾರಯ್ಯನಿಗೆ ತ್ರಿವಿಧಸಂಶೋಧದ ಕಡೆಗೆ ಗಮನ

ಸೆಳೆಯುತ್ತಾರೆ ಪ್ರಭುದೇವರು. ಆಯ್ದಕ್ಕಿಯಿಂದ ಒಬ್ಬೊಬ್ಬ ಜಂಗಮನ ಸೇವೆಮಾಡು ತ್ತಿರಲು, ಆಶೆಗೆ ಬಲೆಬಿದ್ದು ನಿತ್ಯಕ್ಕಿಂತ ಹೆಚ್ಚು ಅಕ್ಕಿ ಒಮ್ಮೆ ತರಲು, 'ಭಾವಶುದ್ಧ ವಿಲ್ಲದ ಭಕ್ತಿಹೋಯಿತು' ಎಂದು ಹೆಂಡತಿ ಲಕ್ಕಮ್ಮ ನುಡಿಯುತ್ತಾಳೆ. ಒಳ್ಳೆಯ ಮಾರ್ಗಕ್ಕೆ ಪತಿಯನ್ನು ತಿರುಗಿಸುತ್ತಾಳೆ. ತನ್ನ ಪತಿಯ ಇಚ್ಛೆಯಂತೆ ಸಾವಿರ ಸಾವಿರ ಗಣಂಗಳಿಗೆ ನೈವೇದ್ಯಕ್ಕೆ ಆಮಂತ್ರಿಸಿ ಅಲ್ಪನೂ, ನಿರ್ಧನಿಕನೂ, ಅಶಕ್ತನೂ ಆದ ತಾನು ಹೇಗೆ ನೈವೇದ್ಯ ಕೊಡಬೇಕು ಎಂದು ಯೋಚಿಸುತ್ತಿರಲು, 'ಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು" ಎಂದು ಪತಿಗೆ ಧೈರ್ಯ ಹೇಳುತ್ತಾಳೆ. ಬಸವಣ್ಣನವರ ಅನುಗ್ರಹದಿಂದ ಎಲ್ಲರಿಗೂ ನೈವೇದ್ಯವಾಗುತ್ತದೆ.

ಎಲ್ಲರಿಗೂ "ಶರಣರು ಬಡವರಲ್ಲ, ಘನಮಹಿಮರು" ಎಂಬುದನ್ನು ಅರಿವು ಮಾಡಿಕೊಡುತ್ತಾನೆ. ಹೀಗೆ ಘನಭಕ್ತಿಯನ್ನು ಲೋಕಕ್ಕೆ ಸಾರಿದ ಆಯ್ದಕ್ಕಿ ಮಾರಯ್ಯನ ಕಥೆಯನ್ನು ಮುಂದುವರಿಸಿ, ಮಾರಯ್ಯನ ಸತಿಯಾದ ಲಕ್ಕಮ್ಮನನ್ನು ಮಹಾವ್ಯಕ್ತಿಯಾಗಿಸಿ,ಲಕ್ಷ ತೊಂಭತ್ತಾರುಸಾವಿರಗಣಂಗಳ ಆರೋಗಣೆಯನ್ನು ನಿಷ್ಠೆ ಯಿಂದಮಾಡಿ, ತೃಪ್ತಿಹೊಂದಿ,ಎಲ್ಲಾ ಗಣಂಗಳಿದ್ದಹಾಗೆಯೇ ಶಿವೈಕ್ಯವಾಗುತ್ತಾಳೆ. ಧರ್ಮದ ಪುತ್ಥಳಿ, ಜಂಗಮಜೀವಿ, ಮಾರಯ್ಯನ ಭಾಗ್ಯಲಕ್ಷ್ಮಿಯಾಗಿದ್ದ ಲಕ್ಕವ್ವನ ಅಗಲಿಕೆಯಿಂದ ಮಾರಯ್ಯನಿಗೆ ಪ್ರಚಂಡ ವೇದನೆಯಾಯಿತು. ಆಕೆಯ ದೇಹ ವನ್ನುತನ್ನ ತೊಡೆಯಮೇಲಿಟ್ಟುಕೊಂಡು, ಬಸವರು ಇತರರು ಸಂತೈಸುತ್ತಿರಲು, ಮಾರಯ್ಯನು ದುಃಖದ ಒತ್ತಡದಿಂದ ಕೊನೆಗೆ ಮೂರ್ಛಿತನಾಗುವನು. ಅಲ್ಲಿಗೆ ತೆರೆಜಾರಿ ನಾಟಕ ಮುಗಿಯುತ್ತದೆ.

ನಾಟಕದಲ್ಲಿ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುವಂತಹ ಒಂದು ವ್ಯಕ್ತಿ ಯೆಂದರೆ ಲಕ್ಕಮ್ಮ. ಅವಳು ನಾಟಕದ ಉದ್ದಕ್ಕೂ ಆಡುವ ಮಾತುಗಳು ಅವಳ ಶುದ್ಧ ಜೀವನವನ್ನು, ಅಪಾರ ಜ್ಞಾನವನ್ನೂ ಸೂಚಿಸುವುದಾಗಿವೆ. ಇನ್ನೊಂದು ವಿಶೇಷವೆಂದರೆ ನಾಟಕದಲ್ಲಿ ಅಲ್ಲಲ್ಲಿ, ಸಂಭಾಷಣೆಯ ಮಧ್ಯೆ ಬಳಸಿರುವ ಉತ್ತಮ ವಚನಗಳು; ಇವು ನಾಟಕದ ಬೆಳವಣಿಗೆಯ ದೃಷ್ಟಿಯಿಂದಲೂ, ವಿಷಯದ ದೃಷ್ಟಿ ಯಿಂದಲೂ ಸೂಕ್ತವಾಗಿವೆ. ಅವುಗಳಲ್ಲಿ ಕೆಲವು ಹಾಡಲು ಯೋಗ್ಯವಾಗಿವೆ. (ರಾಗ ತಾಳಗಳ ಸೂಚನೆಗಳನ್ನು ಕೊಟ್ಟಿದೆ). ನಾಟಕದ ಮುಕ್ತಾಯ ಸೂಕ್ತವಾಗಿದೆ ಯಲ್ಲದೆ, ತುಂಬಾ ಪರಿಣಾಮಕಾರಿಯಾಗಿಯೂ ಇದೆ. ರಂಗಭೂಮಿಯ ಮೇಲೆ ಸಮರ್ಥ ನಟರಿಂದ ಬಹು ಚೆನ್ನಾಗಿ ಅಭಿನಯಿಸಲು ಯೋಗ್ಯವಾದುದು 'ಆಯ್ದಕ್ಕಿ ಮಾರಯ್ಯ' ನಾಟಕ.

## ೨. 'ಗುರುವಿನ ಗೆಲುವು'

ಶ್ರೀ ನಿಡುಮಾಮಿಡಿ ಶ್ರೀಶೈಲ ಸಿಂಹಾಸನದ ಗುರುಪರಂಪರೆಯಲ್ಲಿ ಬಂದ ಶ್ರೀ ಕರಿಬಸವ ದೇಶಿಕೇಂದ್ರರೇ ಈ ನಾಟಕದ ಮುಖ್ಯ ವ್ಯಕ್ತಿಯಾಗಿ ಬರುತ್ತಾರೆ. ಒಟ್ಟು ೮ ಮುಖ್ಯ ಪಾತ್ರಗಳನ್ನೊಳಗೊಂಡ ಈ ಏಕಂಕಾ ನಾಟಕವನ್ನು ಶ್ರೀ ಜ. ಚ. ನಿ. ಯವರು ತುಂಬಾ ಉತ್ತಮ ರೀತಿಯಲ್ಲಿ ರಚಿಸಿ, ಧರ್ಮೋದ್ಧಾರಣ, ಸಮಾಜೋದ್ಧಾರ ಜನತಾಸೇವೆಯೆಂಬ ರಂಗತ್ರಯಗಳಲ್ಲಿ ಗುರುಗಳೆನಿಸಿದವರು ಏನು ಸಾಧಿಸಲು ಶಕ್ಯ ಎಂಬುದನ್ನು ತೋರಲು ಪ್ರಭಾವಯುತವಾಗಿ ಬರೆದಿದ್ದಾರೆ. ಒಂದೊಂದು ಪಾತ್ರವೂ ಜೀವಂತಕಳೆಯಿಂದ,ಒಂದೊಂದು ವಿಶೇಷದಿಂದನಮ್ಮ ಮನಸ್ಸನ್ನು ಸೂರೆಗೊಳ್ಳುತ್ತವೆ.

ನಾಟಕಕಾರರು ತಮ್ಮ 'ಹಿನ್ನುಡಿ'ಯಲ್ಲಿ ನಾಟಕದ ಹಿನ್ನೆಲೆಯನ್ನು ದೀರ್ಘವಾಗಿ ಪ್ರಸ್ತಾಪಿಸಿದ್ದಾರೆ. ಅನಂತಪುರದ ಅರಸನಾಗಿದ್ದ ಪ್ರಸನ್ನನಾಯಕನು ತನ್ನ ಪ್ರೇಯಸಿಯೋರ್ವಳಿಂದಲೇ ಕೊಲೆಮಾಡಲ್ಪಟ್ಟು, ಅನಂತಪುರ ರಾಜ್ಯವು ಅರಾಜಕವಾಗಲು, ಅವನ ತಮ್ಮನೂ ಚಿಕ್ಕ ಪಟ್ಟಣದ ಅರಸನೂ ಆಗಿದ್ದ ಪವಾಡಪ್ಪ ನಾಯಕನು ಹಂಡೆ ಅನಂತಪುರದ ರಾಜ್ಯಭಾರವನ್ನು ವಹಿಸಿಕೊಳ್ಳುತ್ತಾನೆ. ಆಗ ರಾಮಾಜಿಯೆಂಬುವನು ಮಂತ್ರಿಯಾಗಿರುವನು. ರಾಜ್ಯದಲ್ಲಿ ಸಾಕಷ್ಟು ಸಂಪತ್ತೈಶ್ವರ್ಯಗಳಿರಲಿಲ್ಲ. ಇವರ ಮುಂದಿನ ಘಟನೆಗಳನ್ನು ಕುರಿತಾದ್ದೇ ಈ ನಾಟಕದ ಮೂಲವಸ್ತು.

ಮೊದಲದೃಶ್ಯದಲ್ಲೇ ಶ್ರೀಗಳವರು ರಾಜದೂತನೊಬ್ಬನಿಂದ ಹಂಡೆ ಅನಂತಪುರಕ್ಕೆ ಕಡಪದ ನವಾಬನ ಸರದಾರರು ಪೊಗದಿಯ ವಸೂಲಿಯ ನೆವದಲ್ಲಿ ಬಂದು, ಮಂತ್ರಿ ರಾಮಾಜಿಯೊಡನೆ ಒಳಸಂಚು ನಡೆಸಿ, ನಾಯಕರನ್ನು ಸೆರೆಹಿಡಿದಿದ್ದರೆಂದು ತಿಳಿದು, ನಾಡಿನ ಸ್ವಾತಂತ್ರ್ಯವೇ ಕಳೆದು ಪರದಾಸರಾಗುವ ಸಂಕಟ ಪರಿಸ್ಥಿತಿಯಿಂದ ಕನ್ನಡನಾಡನ್ನು ಉಳಿಸಲು ಯೋಚಿಸತೊಡಗುವರು.

ಎರಡನೇ ದೃಶ್ಯದಲ್ಲಿ ಪ್ರಜೆಗಳನ್ನೆಲ್ಲಾ ಒಟ್ಟುಗೂಡಿಸಿ, ಶ್ರೀಗಳವರು ತಮ್ಮ ವೀರವಾಣಿಯಿಂದ ಅವರಲ್ಲಿ ಕಲಿತನದ ಕೆಚ್ಚು ಎಬ್ಬಿಸಿ, ಅಭಿಮಾನ ಉಕ್ಕಿಬರುವಂತೆ ಮಾಡಿ, ಕೃಷಿಕರನ್ನು ಕಲಿಗಳನ್ನಾಗಿ ಹುರಿದುಂಬಿಸಿ, ರಾಜ್ಯಕ್ಕೆ ಬಂದಿರುವ ಕಂಟಕವನ್ನು ಹೋಗಲಾಡಿಸಲು ಪಣತೊಟ್ಟು ನಿಲ್ಲುವರು.

ಮೂರನೆಯ ದೃಶ್ಯದಲ್ಲಿ ಹಂಡೆ ಅನಂತಪುರದಲ್ಲಿಯೇ ಮಂತ್ರಿ ರಾಮಾಜಿಯು ಗೃಹದಲ್ಲಿ ಶತ್ರುಗಳೊಡನೆ ಗುಪ್ತಸಮಾಲೋಚನೆ ನಡೆಸುತ್ತಾನೆ. ದೃಶ್ಯ ನಾಲ್ಕರಲ್ಲಿ ಸೆರೆಮನೆಯಲ್ಲಿರುವ ಅರಸನನ್ನು ಸಂತಪ್ತಳಾಗಿರುವ ರಾಣಿ ರಾಜೇಶ್ವರಿಯು ಭೇಟಿಮಾಡುತ್ತಾಳೆ. ರಾಮಾಜಿಯು ರಾಜ್ಯದಾಹದ ಫಲವಾಗಿ ನಡೆಸುತ್ತಿರುವ ಕುತಂತ್ರವನ್ನು ಅರಸನ ಜೀವಕ್ಕೆ ಮುಳುವಾಗಬಹುದೆಂದು ಸಂಕಟದಿಂದ ಸೂಚಿಸು

ತ್ತಾಳೆ. ಈ ದೃಶ್ಯದಲ್ಲಿ ನಡೆಯುವ ಅರಸ ರಾಣಿಯರ ಸಂಭಾಷಣೆಯು ತುಂಬಾ ಪರಿಣಾಮಕಾರಿಯಾಗಿದೆ ಎನ್ನಲು ಅಡ್ಡಿಯಿಲ್ಲ. ಪ್ರೇಕ್ಷಕರ ಮನಸ್ಸನ್ನು ಕಲಕು ವಂತಹ ಸುಂದರ ಸನ್ನಿವೇಶವೊಂದನ್ನು ಕಲಾತ್ಮಕವಾದ ರೀತಿಯಲ್ಲಿ ಚಿತ್ರಿಸಿದ್ದಾರೆ. ದೃಶ್ಯದ ಕೊನೆಯಲ್ಲಿ ಶ್ರೀಗಳವರ ಹುರಿಯಾಳುತನದಲ್ಲಿಯೇ ಪ್ರಜೆಗಳೆಲ್ಲರೂ ಕೆಚ್ಚೆದೆ ಯಿಂದ ಕಾದಾಡುತ್ತಾ ಶತ್ರುಸೈನ್ಯ ಸಮೂಹವನ್ನು ಹೊಡೆದೋಡಿಸಿ, ಜಯಘೋಷ ಮಾಡುತ್ತಾ ಬರುವುದು ತುಂಬಾ ಸೂಕ್ತವಾಗಿದೆ.

ಇನ್ನು ಕೊನೆಯ ದೃಶ್ಯದಲ್ಲಿ, ಶ್ರೀಗಳವರು ಆಶೀರ್ವದಿಸಿ ನಾಡಿಗೆ ಸಕಲ ಸೌಭಾಗ್ಯವನ್ನು ಕೋರುವುದು. ಸೆರೆಹಿಡಿಯಲ್ಪಟ್ಟಿದ್ದ ರಾಮಾಜಿಗೆ ಸೂಕ್ತ ಬುದ್ಧಿ ವಾದವನ್ನು ಹೇಳಿ ಕ್ಷಮಿಸುವುದು.

ಹೀಗೆ ಐದು ದೃಶ್ಯಗಳುಳ್ಳ ಈ ನಾಟಕ ಮೊದಲು ಪ್ರಸ್ತಾಪಿಸಿದ "ಆಯ್ದಕ್ಕಿ ಮಾರಯ್ಯ" ನಾಟಕಕ್ಕಿಂತ ಹಲವಾರು ರೀತಿಗಳಲ್ಲಿ ಉತ್ತಮವಾಗಿದೆ ಎಂದು ನನ್ನ ಭಾವನೆ. ನಾಟಕಕಾರರು ಇತಿಹಾಸ ಗರ್ಭದಲ್ಲಿಯ ಒಂದೆರಡು ಘಟನೆಗಳನ್ನೇ ಅತ್ಯಂತ ಉತ್ತಮರೀತಿಯಲ್ಲಿ ಹೊಂದಿಸಿಕೊಂಡು, ರಂಗಭೂಮಿಯಮೇಲೆ ಜಯ ಪ್ರದವಾಗಿ ಪ್ರದರ್ಶಿಸಲು ಯೋಗ್ಯವಾಗುವ ರೀತಿಯಲ್ಲಿ ಘಟನಾವಳಿಗಳನ್ನೂ, ವಿವಿಧ ಪಾತ್ರಗಳ ನಿರೂಪಣೆಯನ್ನೂ, ಸೂರೆಗೊಳ್ಳುವ ಸಂಭಾಷಣಾ ಶೈಲಿಯನ್ನೂ ಉಪಯೋಗಿಸಿರುವ ಶ್ರೀಗಳವರ ಈ ನಾಟಕವು ರಂಗಭೂಮಿಯ ಪ್ರಯೋಗಕ್ಕೆ ತುಂಬಾ ಯೋಗ್ಯವಾಗಿರುವಂತೆ, ಹಿನ್ನೆಲೆಯನ್ನೂ ಉಪಯೋಗಿಸಿಕೊಂಡು ಬಹುಶಃ ಚಲನಚಿತ್ರಕ್ಕೂ ಅಳವಡಿಸಿಕೊಳ್ಳಲು ಉಪಯುಕ್ತವಾದ ವಸ್ತುವಾಗಿದೆ ಎಂದು ಹೇಳಲು ಅಡ್ಡಿಯಿಲ್ಲ.

ಒಟ್ಟಿನಲ್ಲಿ ಈ ನಾಟಕದಲ್ಲಿ ನಿರೂಪಣೆಯ ಪರಿಪಕ್ವತೆಯಿದೆ; ನಾಟಕದ ವಿವಿಧ ವ್ಯಕ್ತಿಗಳ ಒಳತೋಟಿಗಳನ್ನು ನಿರೂಪಿಸುವುದರಲ್ಲಿ ಚಮತ್ಕಾರವಿದೆ ; ಸಂಭಾಷಣಾ ಶೈಲಿ ಸೊಗಸಾಗಿದೆ ; ಪೋಷಕ ಪಾತ್ರಗಳು ಸತ್ವಶಾಲಿಗಳಾಗಿವೆ; ಅಭಿನಯ ಯೋಗ್ಯ ವಾಗಿದೆ.

ಈ ಎರಡು ನಾಟಕಗಳು ಶ್ರೀ ಜ.ಚ.ನಿ. ಅವರ ನಾಟಕ ಕರ್ತೃತ್ವದ ಕುಶಲತೆಯ ಕುರುಹುಗಳಾಗಿವೆ. ಶ್ರೀ ಶ್ರೀಗಳವರಿಂದ ಇಂತಹ ಇನ್ನೂ ಹಲವಾರು ನಾಟಕಗಳನ್ನು ನಿರೀಕ್ಷಿಸೋಣ.

---

# ಅಭಯ ನೀಡಿ !

ಶಿವಯೋಗ ಮಂದಿರದ ಶಿಲ್ಪರತ್ನರೆನಿಸಿ
ವಚನವಾಹಿಸಿ ಹರಿಸಿ ವಚನಾಂಜಲಿಯ ರಚಿಸಿ
ಯೋಗಶಾಸ್ತ್ರದ ತಿರುಳ "ಯೋಗಕ್ಷೇಮ" ದಲಿರಿಸಿ
ಸುಜ್ಞಾನ ಸುಧೆಯನ್ನು ಸವಿಯಗೊಳಿಸಿ
ಮಹನೀಯರಾಗಿರುವ ಮಮಕಾರ ಬಿಟ್ಟಿರುವ
ಕನಕ ಸಿಂಹಾಸನದಿ ಕಂಗೊಳಿಸುತ್ತಿರುವ
ಆಧ್ಯಾತ್ಮರಾಗಿರುವ ಅರವಿಂದರಂತಿರುವ
ಶ್ರೀ ನಿಡುಮಾಮಿಡಿಯ ಗುರು ಶ್ರೀ ಚನ್ನಬಸವ
ಸುಜ್ಞಾನರಾಗಿರುವ ವಿಜ್ಞಾನಸಪರಿತಿರುವ
ಸರ್ವರನು ಸಮತೆಯಲಿ ನೋಡಬಯಸಿರುವ
ಯೋಗವನ್ನರಿತಿರುವ ಭೋಗವನು ತ್ಯಜಿಸಿರುವ
ಕಾಮಕ್ರೋಧಗಳನು ಕಡೆಗಾಣಿಸಿರುವ
ಶಿವಾನುಭವಿ ತಾವು ಶೈವಭೋಗಿಯು ತಾವು
"ಅಣ್ಣನ ಬದುಕ"ನ್ನು ಅರಿತವರು ತಾವು
ಸತ್ಯವನೆ ನುಡಿಯೆಂದು ಸನ್ಮಾರ್ಗಪಥದಲ್ಲಿ ನಡೆಯೆಂದು
ಅನುಭವಾಮೃತಸಾರ ಸಾಹಿತ್ಯ ಸುಧೆಯನ್ನೆ ಕಾವ್ಯವೆಂದು
ಅನವರತ ತೋರಿಹರು ಕರುನಾಡಜನಕೆಂದು
ಕನಕ ಸೂರ್ಯಸಿಂಹಾಸನದಿ ಬಂದು
ಅಜ್ಞಾನ ಕತ್ತಲೆಯ ಸುಜ್ಞಾನದಿಂ ಹರಿಪ
ಸರ್ವರಲಿ ಸುಪ್ರೇಮಿ ಸಕಲರಿಗೂ ಹಿತಕಾಮಿ
ತವಪಾದ ಪದ್ಮದಲಿ ಭಕ್ತಿಯಲಿ ಬೇಡುವೆನು
ಎನಗಭಯ ನೀಡಿ ಎನ್ನ ಗುರುಸ್ವಾಮಿ !

—ಎಸ್. ಪಿ ರಾಮರಾಯ
ಗುಂಡಗಲ್ಲು

[ಎಸಳು-೧೦]

# ವಿಶ್ಲೇಷಣ ಸಾಹಿತ್ಯ

(ದರ್ಶನ-೯)

ಸೀಳ್ನುಡಿ

ಹೆಮ್ಮಗಳು

ಮುಪ್ಪಿನಾರ್ಯರ ಭಾವ ಪಾತ್ರಗಳು

ಕಾಯಿ ಹಣ್ಣು

ಬೇವು-ಬೆಲ್ಲ

ಬಿಲ್ಲ ಬಿನ್ನಾಣ

ಹೊಳಹು ಸುಳುಹು (ನವ್ಯಪ್ರಯೋಗ)

‘ಗುರು ಮುಟ್ಟಿದ್ದು ಗುಡ್ಡ’ ಎಂದು ನಮ್ಮ ಹಳ್ಳಿಯ ಜನ ಹೇಳುವುದನ್ನು ಕೇಳಿದ್ದೇವೆ. ಅಂತೇ ಸಾಹಿತ್ಯ ಸನ್ನಿಧಿ ಶ್ರೀ ಜ. ಚ. ನಿ. ಅವರ ಲೇಖನಿಯ ಅಮೃತ ಸ್ಪರ್ಶದಿಂದ ಕಾಳು ರಾಶಿಯಾಗಿದೆ. ಮಾತಿಗೊಂದು ಮಹತ್ವಕೊಡುವ ಮಹಾ ಕವಿ ಋಷಿಗಳು ಅವರು.

ಸಾಹಿತ್ಯ ಕ್ಷೇತ್ರದಲ್ಲಿ ವಿಶ್ಲೇಷಣ ಸಾಹಿತ್ಯಕ್ಕೆ ಉತ್ತಮ ಸ್ಥಾನವಿದೆ. ವಿಶ್ಲೇಷಣೆಗೆ ವಿಶೇಷ ಅನುಭವವೇ ಬೇಕು. ಅನುಭವಿಗಳಿಂದ ಮಾತ್ರ ವಿಶ್ಲೇಷಣ ಸಾಹಿತ್ಯ ಸೃಷ್ಟಿ ಸಾಧ್ಯ. ಶ್ರೀ ಸನ್ನಿಧಿಯವರ ವಿಶ್ಲೇಷಣ ಸಾಹಿತ್ಯವು ಬಹುತೇಕ ಶರಣರ ಸೂಳ್ನುಡಿಗಳನ್ನು ಕುರಿತು ಬರೆದುದೇ ಆಗಿದೆ.

‘ಅಣ್ಣನ ಬದುಕು,’ ‘ಅಣ್ಣಯ್ಯನ ಬೆಳಕು’ ‘ಅಕ್ಕನ ಬಾಳು’ ಕೃತಿಗಳಲ್ಲಿ ಶ್ರೀ ಸನ್ನಿಧಿಯವರ ವಿಶ್ಲೇಷಣ ಶಕ್ತಿಯ ದಿವ್ಯ ದರ್ಶನ ನಮಗಾಗುತ್ತದೆ. ಈ ದಿಸೆಯಲ್ಲಿ ರಚಿತವಾಗಿರುವ ಅವರ ಎಲ್ಲ ಕೃತಿಗಳೂ ಕನ್ನಡ ‘ವಿಶ್ಲೇಷಣ ಸಾಹಿತ್ಯ’ಕ್ಕೆ ಒಂದು ಸೊಬಗನ್ನು ಇತ್ತಿವೆ ಸವಿಯನ್ನು ತುಂಬಿವೆ.

## ವಚನ ಭಾಷ್ಯ "ಸೀಳ್ಗನ್ನಡಿ"

—ಶ್ರೀ ಓ. ಎಸ್. ಲಿಂಗಣ್ಣಯ್ಯ, ಬೆಂಗಳೂರು

ಕೆನೆಹಾಲು ಮಧುರ; ಜೇನು ರುಚಿ; ಸಕ್ಕರೆ ಸವಿ; ಮಲ್ಲಿಗೆ ಕಂಪು; ಎಳೆಗಾಳಿ ಹಿತ; ಬೆಳದಿಂಗಳು ತಂಪು ಎಂದು ಹೇಳಬೇಕೆ? ಎಂದ ಮೇಲೆ 'ಸೀಳ್ಗನ್ನಡಿ'ಗೇಕೆ ಮೇಲ್ಮಾತು ? ವಿಶ್ವ ಸೌಂದರ್ಯವನ್ನು ವರ್ಣಿಸಿ ಫಲವಿಲ್ಲ ; ನೋಡಿ ತಣಿಯಬೇಕು. ಆತ್ಮಾನಂದವನ್ನು ಹೇಳಿ ಸುಖವಿಲ್ಲ; ಅನುಭವಿಸಿ ನಲಿಯಬೇಕು. ಕಾವ್ಯ ಮಾಧುರ್ಯ ವಾದರೂ ಅಷ್ಟೆ. ಅದನ್ನು ನಿರ್ಮಿಸುವ ಹೃದಯ ಪರಿಪಕ್ವ;ಪರಿಪೂರ್ಣ. 'ನಾ ಋಷಿಃ ಕುರುತೇ ಕಾವ್ಯಂ' ಎಂದರು ಹಿರಿಯರು. ಅಂಥ ಕಾವ್ಯವನ್ನು ಓದಿ ಆನಂದಿಸುವ ಹೃದಯ ಸುಸಂಸ್ಕೃತ; ರಸಪೂರ್ಣ. ಕಾವ್ಯನಿರ್ಮಾಣ ಶಕ್ತಿ ಉತ್ತಮ ತಪಃ ಫಲ; ಕವಿತಾಸ್ಫೂರ್ತಿ ದೈವದತ್ತ ಅಂಶ. ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ, ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯವೆಲ್ಲರಿಗಿಲ್ಲ ಸರ್ವಜ್ಞ–ಎಂಬ ಮಾತು ಸತ್ಯಪೂರ್ಣ. ಪಾವನ ಭಾಗೀರಥಿ ಹುಟ್ಟುವುದು ಹಿಮಾಲಯದಲ್ಲಿಯೆ ; ನಿರ್ಮಲ ಸಾಹಿತ್ಯ ರಸಗಂಗೆ ಉದ್ಭವಿ ಸುವುದು ಸುಸಂಸ್ಕೃತ ಹೃದಯದಲ್ಲಿಯೆ !

ಸೀಳ್ಗನ್ನಡಿಯನ್ನು ಬರೆದವರುಜಗದ್ಗುರುಶ್ರೀಶೈಲನಿಡುಮಾಮಿಡಿ ಶ್ರೀಚನ್ನಬಸವ ರಾಜದೇಶಿಕೇಂದ್ರರು. ಇವರು ಶ್ರೀ ಶೈಲ ಪಂಡಿತಾರಾಧ್ಯ ಸಂಪ್ರದಾಯ ಸಿಂಹಾಸನಾ ಧೀಶ್ವರರು. ಆಧ್ಯಾತ್ಮ ಜೀವನ ಯೋಗಿಯಂತೆ ಸಾಹಿತ್ಯ ತಪಸ್ಸನ್ನು ಆಚರಿಸುತ್ತಿದ್ದಾರೆ. ಸಂಸ್ಕೃತ ಪಂಡಿತರು, ಕನ್ನಡ ವಿದ್ವಾಂಸರು. ತೆಲುಗು ಬಲ್ಲವರು, ಹಿಂದಿ ತಿಳಿದವರು. ಅಷ್ಟೇ ಅಲ್ಲ ಅವರು ಉತ್ತಮ ವಾಗ್ಮಿಗಳು, ಕಲಾಪೂರ್ಣ ವಿಮರ್ಶಕರು. ಪ್ರತಿಭಾ ವಂತ ಲೇಖಕರು. ಅವರದು ಹಿರಿಯ ಅನುಭವ. ಆಚಾರ್ಯ ಪೀಠದಲ್ಲಿ ಮಂಡಿಸಿ ಭಕ್ತರ ಶ್ರೇಯಸ್ಸನ್ನೂ ಜಗತ್ಕಲ್ಯಾಣವನ್ನೂ ಚಿಂತಿಸುತ್ತಿರುವ ಶ್ರೀ ಗುರು. ಇನ್ನೊಂದು ದೊಡ್ಡಗುಣ ಶ್ರೀ ಅವರಲ್ಲಿದೆ. ಅದು ಸರ್ವ ಸಮನ್ವಯ ದೃಷ್ಟಿ. ಈ ಗುಣದಿಂದ ವೀರಶೈವೇತರರಿಗಿಂತಲೂ, ವೀರಶೈವರಿಗೆ ಹೆಚ್ಚು ಉಪಕಾರ. ವೀರಶೈವರಲ್ಲಿ ಆಚಾರ್ಯ

ಪಂಥ, ವಿರಕ್ತಪಂಥ ಎಂಬ ಎರಡು ಮಾರ್ಗಗಳಾಗಿವೆ. ಮಾರ್ಗ ಎರಡಾದರೂ ಅವು ಸೇರುವುದು ಒಂದೇ ಗುರಿ, ಸಾಧಿಸುವುದು ಒಂದೇ ತತ್ವ. ಒಂದು ಜ್ಞಾನವಾಹಿನಿ ಇನ್ನೊಂದು ಕ್ರಿಯಾವಾಹಿನಿ; ಯಾವುದು ಹೆಚ್ಚು ? ಯಾವುದು ಕಡಿಮೆ ಎಂದು ತರ್ಕಿಸುವುದು ಹುಚ್ಚುತನ, ತಿಳುವಳಿಕೆ ಇಲ್ಲದ ಫಲ. ಈ ಅಂಶವನ್ನು ಸಮಾಜ ಎಷ್ಟು ಬೇಗ ಮನಗಂಡರೆ ಅಷ್ಟು ಕ್ಷೇಮ. ಈ ಮಾತು ಸಾಮಾನ್ಯ ಜನಕ್ಕೆ ಅಲ್ಲ; ಗುರು ಪೀಠ ವಿರಕ್ತ ಪೀಠಗಳಲ್ಲಿ ಸ್ವಾಮಿಗಳಾಗಿರುವವರಿಗೆ ಹೆಚ್ಚು ಅನ್ವಯಿಸುತ್ತದೆ. ನಿಜವಾಗಿಯೂ ಸಮಾಜದ, ಲೋಕದ ಶ್ರೇಯಸ್ಸಾಧನೆಗಾಗಿ ದುಡಿಯುವ ಶ್ರೀಗಳೆಂದರೆ ಅಂಥವರ ಸಂಖ್ಯೆ ಬಹಳ ಕಡಿಮೆ. ಇದು ಎಲ್ಲ ಸಮಾಜದಲ್ಲಿಯೂ ಕಾಣುವ ಕುಂದುಕೊರತೆ. ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರರಂಥಹ ಶ್ರೀಗಳವರು ಯಾವ ಸಮಾಜದಲ್ಲಿದ್ದರೂ ಪೂಜ್ಯರೆ; ಜಗದ್ವಂದ್ಯರೇ. ಇವರ ಗುರು ಜೀವನ ಆದರ್ಶಪ್ರಾಯ.

ನಮ್ಮ ಸಾಹಿತ್ಯ ರಾಜಾಶ್ರಯದಲ್ಲಿ ಬೆಳೆಯಿತು ; ಗುರುಮಠದ ಕೃಪೆಯಲ್ಲಿ ವರ್ಧಿಸಿತು. ಅನೇಕ ಮಠಾಧೀಶ್ವರರು ಸ್ವಯಂ ಕವಿಗಳು, ಲೇಖಕರೂ, ಗ್ರಂಥ ಕರ್ತರೂ ಆಗಿದ್ದರು. ಈ ಬಗೆಯ ಸೇವೆಯನ್ನು ವೀರಶೈವ ಮಠಾಚಾರ್ಯರೂ ಮತ್ತು ವಿರಕ್ತರೂ ನಡಸಿದರು. ತಮ್ಮ ಧರ್ಮ ಪ್ರಸಾರದ ವ್ಯಾಜದಿಂದ ಸಂಸ್ಕೃತ ಮತ್ತು ಕನ್ನಡ ವಾಙ್ಮಯವನ್ನು ಬೆಳಸಿದರು.

ಶ್ರೀ ಜಗದ್ಗುರು ಚನ್ನಬಸವರಾಜದೇಶಿಕೇಂದ್ರರು ಪಂಡಿತಾರಾಧ್ಯ ಪೀಠಾಧೀಶ್ವರರು. ವಿರಕ್ತರಲ್ಲಿ, ಪ್ರಮಥರಲ್ಲಿ ಅವರಿಗೆ ಗೌರವ ಭಾವನೆಯಿದೆ. ಅವರಲ್ಲಿ ಭೇದ ಭಾವವಿಲ್ಲ. ಅವರು ಮುಂಡಿಸುವ ಬೆಳ್ಳಿ ಪಾಲಕಿಯಲ್ಲಿ ಒಂದು ಕಡೆ ಲಿಂಗೋದ್ಭವ ಆಚಾರ್ಯಮೂರ್ತಿ–ಇನ್ನೊಂದು ಕಡೆ ಕಲ್ಯಾಣದ ಬಸವೇಶ್ವರಮೂರ್ತಿ–ಎಂಥ ಸಮನ್ವಯದೃಷ್ಟಿ! ಈ 'ಸೀಳ್ನುಡಿ' ಅವರ ಈ ಸರ್ವ ಸಮನ್ವಯ ಗುಣಕ್ಕೆ ಭೂಷಣ ಪ್ರಾಯವಾಗಿದೆ.

ಶ್ರೀಗಳವರ ಪೂರ್ವಾಶ್ರಮದ ಹೆಸರು ಶ್ರೀ ಅಡ್ನೂರು ಚಂದ್ರಶೇಖರದೇವರು. ಶಿವಯೋಗಮಂದಿರದಲ್ಲಿ ಇವರಿಗೆ ವಿದ್ಯಾಭ್ಯಾಸ ನಡೆಯಿತು- ಜ್ಞಾನದೀಕ್ಷೆಯಾಯಿತು. ಬೆಂಗಳೂರಿನಲ್ಲೂ ಕೆಲವುಕಾಲ ವಿದ್ಯಾರ್ಥಿದೆಸೆ ಕಳೆಯಿತು. ಅಂದಿನಿಂದಲೂ ಇವರಿಗೆ ಕನ್ನಡ ಸಾಹಿತ್ಯದಲ್ಲಿ ಅಪಾರ ಪ್ರೇಮ;ಅತ್ಯಾದರ. ಅವರು ಈಗಾಗಲೇ 'ಅಕ್ಕನಬಾಳು' 'ಅಕ್ಕನ ಲಾವಣಿ' ಮತ್ತು 'ಆಯ್ದಕ್ಕಿ ಮಾರಯ್ಯ' (ನಾಟಕ) ಇವುಗಳನ್ನು ಬರೆದಿದ್ದಾರೆ. ಕನ್ನಡಿಗರಿಗೆ ಸುಪರಿಚಿತರಾಗಿದ್ದಾರೆ. ಈ ಸೀಳ್ನುಡಿಯಲ್ಲಿರುವ ಲೇಖನಗಳನ್ನು ಅವರು ವಿದ್ಯಾರ್ಥಿ ಜೀವನವಲ್ಲಿದ್ದಾಗ ಬರೆದರು. ಇವು ಒಂದೊಂದೂ ಬಸವಣ್ಣನವರ ಅಮೃತವಾಣಿಯ ರಸಫಲದಂತಿವೆ.

ಇದು ಒಂದು ಹೊಸ ಬಗೆಯ ಹೊತ್ತಗೆ. ವಸ್ತು ಹಳೆಯದು ; ಹೇಳಿರುವ ರೀತಿ ಹೊಸದು. ಲೇಖಕರ ಪ್ರತಿಭೆ ಆ ಚಿಕ್ಕ ವಯಸ್ಸಿನಲ್ಲಿಯೇ ಮಾತು ಮಾತಿನಲ್ಲಿಯೂ ಮಿಂಚಿದೆ. ಅವರ ಶಾಸ್ತ್ರಾನುಭವ, ಸಾಹಿತ್ಯಾಭ್ಯಾಸ, ಪದ ವೈಖರಿ ಮತ್ತು ನಿರೂಪಣೆಯ ಬೆಡಗು ಎದ್ದು ಕಾಣುತ್ತವೆ. ಶೈಲಿ ಬಂಧುರವಾಗಿದೆ; ಸರಳವಾಗಿದೆ. ಮಾತಿನ ಓಟ ಬಲು ಚೆಂದ; ಬಸವಣ್ಣನವರ ನವನೀತವಿದ್ದಂತೆ 'ಸೀಳ್ನುಡಿ' ಬೆಣ್ಣೆಯ ಮುದ್ದೆಯಂತೆ ಸವಿ; ಇದನ್ನು 'ವಚನಭಾಷ್ಯ' ಎಂದು ಕರೆಯಬಹುದು. ಗಹನ ತತ್ವಗಳನ್ನು ಲೇಖಕರು ಸರಳವಾಗಿ ಹೇಳುತ್ತಾರೆ ; ನಗೆ ಬೆಡಗಿನಿಂದ ತಿಳಿಸುತ್ತಾರೆ. ರಸಿಕರು ಈ ಕೃತಿಯನ್ನು ಓದಿ ತಿಳಿಯಬೇಕು.

ಶ್ರೀಗಳವರು ನಿರಂತರ ಸಾಹಿತ್ಯ ಪರಿಪೋಷಕರು ; ಆಶ್ರಯದಾತರು. ಅವರ ಲೇಖನಿಯಿಂದ ಇಂಥ ಅನೇಕ ಉಪಯುಕ್ತ ಗ್ರಂಥಗಳು ಹೊರಬೀಳಲಿ. ಅವರ ವಾಙ್ಮಯ ತಪಸ್ಸು ನಿರ್ವಿಘ್ನವಾಗಿ ನಡೆಯಲಿ. ಎಲ್ಲ ಮಠಾಧೀಶ್ವರರು ಈ ರೀತಿ ಸಾಹಿತ್ಯಸೇವೆಗೆ ನಿಂತರೆ ಕನ್ನಡಕ್ಕೇನು ಬಂತು ಬಡತನ !



# ಸಾಸುವೆಯಲ್ಲಿ ಸಾಗರ

—ಶ್ರೀ ಸಿದ್ಧವೀರದೇವರು, ಹೊಸಮಠ, ಹುಬ್ಬಳ್ಳಿ.

ಈ "ಸೀಳ್ನುಡಿಯು" ಶಿಶುಸಂದೇಶವೆಂಬ ಹೆಸರಿನಲ್ಲಿ ಹಿಂದೆ ಶರಣ ಸಂದೇಶದಲ್ಲಿ ಬಂದ ಇಂದಿನ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳವರ ಬರೆಹ ಸಂಕಲನವು. ಇವುಗಳಲ್ಲಿ ಶರಣ ಸಂದೇಶದಲ್ಲಿ ಪ್ರಕಟವಾದವು ಮೊದಲಿನವೈದು. ಕೊನೆಯ ನಾಲ್ಕು ಪ್ರಬಂಧಗಳು ಈಚೆಗೆ ಬರೆದವುಗಳು. ಈ ಪ್ರಬಂಧಗಳು ಪ್ರಕಟವಾಗುವಾಗ ನಾನೂ ಚಾಚೂ ಬಿಡದೆ ಓದುತ್ತಿದ್ದೆನು. ಅಂದಿನಿಂದ ನನ್ನ ಮನಸ್ಸು ಇಂತಹ ಉತ್ತಮವಾದ ಬರಹಗಳಿಗೆ ಒಂದು ಗ್ರಂಥಸ್ವರೂಪವನ್ನು ಏಕೆ ಕೊಡಬಾರದು? ಎಂದು ಪ್ರಶ್ನೆಹಾಕುತ್ತಲೇ ಇತ್ತು. ನನ್ನ ಮನಸ್ಸು ಪ್ರಶ್ನೆ ಹಾಕುತ್ತಿದ್ದಂತೆ ನಾನು ಶ್ರೀಗಳನ್ನು ಆಗಿಂದಲೂ ಕೇಳುತ್ತಲೇ ಇದ್ದೆನು. ಆದರೆ ಶ್ರೀಗಳು ಮೌನವಾಗಿಯೇ ಇದ್ದರು. ನಾನು ಬಿಡಲಿಲ್ಲ ಬಲವಂತ ಮಾಡಿದೆನು. ಎಳೆತನದ ಬರೆಹದ ಸರಸತಿಗೆ ಯೌವನದ ಶೃಂಗಾರವೇಕೆ? ಎಂದರು. 'ನಿಜ' ಮಾಲೆಗಾರನ ಕೇಳಿ ನನೆ ಅರಳುವುದೇ? ಮೊಗ್ಗು ಅರಳುವುದು ಅದರ ನೈಸರ್ಗಿಕ ಧರ್ಮ. ಅವನ್ನಾಯ್ದು ಹಾರ ಕಟ್ಟುವುದು ಮಾಲೆಗಾರನ ವಶಕ್ಕೆ ಸೇರಿದ ಮಾತು-ಎಂಬುದನ್ನು ಪರ್ಯಾಯದಿಂದ ತಾವೇ ಒಪ್ಪಿದಂತಾಯಿತಲ್ಲಾ ಎಂದೆನು. ಶ್ರೀಗಳು ನಕ್ಕು ಈ ವಿಷಯದಲ್ಲಿ ನಿಮ್ಮ ಭಾವ ಹೇಗೋ ಹಾಗೆ ಎಂದು ಒಪ್ಪಿಗೆಯ ಉತ್ತರ ಕೊಟ್ಟರು. ಆ ಪ್ರಬಂಧಗಳನ್ನೇ ಹಾರ ಕಟ್ಟಿ ಹಾಗಕ್ಕೆ ಅಣಿ ಮಾಡಿದೆ.

ಈ ಸಂದರ್ಭದಲ್ಲಿ ಶ್ರೀಗಳ ವಿಚಾರವಾಗಿ ಸೂಕ್ಷ್ಮವಾಗಿ ನಾಲ್ಕಾರು ಪಂಕ್ತಿಗಳನ್ನು ಬರೆಯುವದು ಯುಕ್ತವಾಗಿದೆ. ಶ್ರೀಗಳು ಸಂಸ್ಥಾನಾಧಿಪತಿಗಳು ಅಷ್ಟೇ ಅಲ್ಲ; ವಿದ್ಯೆ ವಿನಯಗಳಿಂದ ಸೌಜನ್ಯ ಸೌಹಾರ್ದಗಳಿಂದ ಘನತೆ ಗೌರವಗಳಿಂದ ಎಲ್ಲರ ಮನಸ್ಸನ್ನು ಸೆಳೆಯುವ ಸಾಮರ್ಥ್ಯವನ್ನು ಪಡೆದಿದ್ದಾರೆ. ಶ್ರೀಗಳು ವಯಸ್ಸಿನಿಂದ

ಕಿರಿಯರಾದರೂ ಉತ್ಸಾಹಿಗಳು, ಕಾರ್ಯ ಕುಶಲರು, ಸಾಹಸಿಗಳು, ಸಾಹಿತಿಗಳು, ಬರಹಗಾರರು, ಕವನಗಳನ್ನು ಕಟ್ಟುವವರು, ಕತೆನಾಟಕಗಳನ್ನು ಬರೆಯುವರು; ವಾಗ್ಮಿಗಳು. ಮೇಲಾಗಿ ಸಣ್ಣಕ್ಕರಗಳನ್ನು ಬರೆಯುವುದರಲ್ಲಿ ಕನ್ನಡ ನಾಡಿನಲ್ಲಿಯೇ ಮೊದಲಿಗರು. ಇಂತು ಹಲವು ವಿಶಿಷ್ಟಶಕ್ತಿಗಳನ್ನು ಮೈಗೂಡಿಸಿಕೊಂಡಿದ್ದಾರೆ. ಒಂದೇ ಕಾರ್ಡಿನ ಒಂದು ಮಗ್ಗುಲಲ್ಲಿ ನಾಲ್ವತ್ತು ಸಾವಿರ ಅಕ್ಕರಗಳನ್ನು ಬರೆಯುವ ದೆಂದರೆ ಸಾಹಸದ ಮಾತು. ಇದು ಇವರ ಸಾಮರ್ಥ್ಯಕ್ಕೇನೇ ಸಲ್ಲುವ ಕುಸುರಿನ ಕೆಲಸ. ಇದೊಂದು ಕನ್ನಡ ನಾಡಿಗೇನೇ ಹೆಮ್ಮೆಯ ವಿಷಯ.

ಬಸವಣ್ಣನವರ ಸೊಳ್ನುಡಿಗಳು ತುಂಬಾ ಸೂತ್ರಪ್ರಾಯವಾದುವು. ಸಾಸಿವೆ ಯಲ್ಲಿ ಸಾಗರವನ್ನು ತುಂಬಿದಷ್ಟು ಪ್ರತಿಯೊಂದು ಪಂಕ್ತಿಯಲ್ಲಿ ಮಾತಿನಲ್ಲಿ ಗೂಢ ಮತ್ತು ಗಾಢವಾದ ಅರ್ಥವಿದೆ, ಅನುಭಾವವಿದೆ. ಆ ಅರ್ಥ ಹೊಳೆದರೆ ಅಲ್ಲಿ ಸೊಬ ಗಿದೆ, ಸೊಗಸಿದೆ. ಆ ಸೊಬಗನ್ನು ಸವಿಯಲು ಅಣ್ಣನು ತನ್ನ ಪ್ರತಿ ಮಾತಿನಲ್ಲಿಯೂ ರೂಪಕ ಉಪಮೆಗಳನ್ನು ರೂಪಿಸಿದ್ದಾನೆ. ಆತನ ವಚನವನ್ನು ಓದುವಾಗ ಕನ್ನಡ ಸಾಹಿತಿಗಳು "ಉಪಮಾ ಬಸವೇಶಸ್ಯ" ಎಂದು ಭಾವಿಸಿದರೆ ಅದು ಅತ್ಯುಕ್ತಿಯ ಮಾತಲ್ಲ. ಅಣ್ಣನು ವಚನಗಳೆಲ್ಲವನ್ನು ಅರ್ಥ ಪೂರ್ಣವಾಗಿಯೂ, ಮನೋಹರ ವಾಗಿಯೂ ಬಿತ್ತರಿಸಿದ್ದಾನೆ. ಶ್ರೀಗಳು ಅವುಗಳನ್ನು ಆಯ್ದಿದ್ದಾರೆ. ರಮ್ಯವಾದ ರೀತಿಯಲ್ಲಿ ಚತುರತೆಯಿಂದ ಚಿತ್ರಿಸಿದ್ದಾರೆ. ಬರಿ ರೇಖೆಯ ಚಿತ್ರಗಳಿಗೆ ಬಣ್ಣ ಬಳಿದು ಭಾವ ತುಂಬಿ ರಸ ಚಿಮುಕಿಸಿ ರಂಜನೆಗೊಳಿಸಿದ್ದಾರೆ. ಅರ್ಥವತ್ತಾಗಿ ವಿವರಿಸಿ ಜೀವಕಳೆ ತಂದಿದ್ದಾರೆ. ಇವರು ವಿವರಿಸುವ ರೀತಿ ಹೊಸತು.

ಕಾಂಚನವೆಂಬ ನಾಯಿಯ ನೆಚ್ಚಿ....ಎಂಬ ವಚನವನ್ನು ನಾವು ಅದೆಷ್ಟು ಸಲ ಓದಿಲ್ಲ; ಅರ್ಥ ಮಾಡಿಲ್ಲ! ಇದಕ್ಕೆ ಬರಹಗಾರರ ಬಿಚ್ಚಿದ ಅರ್ಥ-ಅಭಿಪ್ರಾಯಗಳು ನಮ್ಮ ಮಿದುಳಿನಲ್ಲಿ ಒಮ್ಮೆಯಾದರೂ ಸುಳಿದಿದ್ದವೆ ?ಹೊಳೆದಿದ್ದವೆ ?"ಚಿನ್ನದ ನಾಯಿ" ಎಂದು ತಲೆಕಟ್ಟು ಕಟ್ಟಿದಾಗಲೇ ನಾವು ಬರಹಗಾರರ ಬುದ್ಧಿ ಕೌಶಲ್ಯವನ್ನು ಕಾಣ ಬಹುದು. ಈ ಬರಹದಲ್ಲಿ ಇಂದಿನ ನಾಗರಿಕತೆಯ ನಾಯಿಯ ಅರ್ಥವಿಲ್ಲದ ವೈಭವ ವನ್ನು ಎತ್ತಿ ಆಡಿದ್ದಾರೆ. ಇದರಿಂದ ನಾಗರಿಕರ ಕಣ್ಣು ನಸುಗೆಂಪೇರಬಹುದು. ಆದರೆ ಸತ್ಯದ ಒರೆಗಲ್ಲಿಗೆ ನಿಂತಾಗ ಆ ತಿಕ್ಕಾಟದ ಬಿಕ್ಕಟ್ಟಿಗೆ ಯಾರೂ ಹೊರಗಾಗುವಂತಿಲ್ಲ.

"ಮಾಯಾ ಮಂಜರ" ಇದು ಮಾಯಾ ಮಂಜರವೇಸರಿ. ಮಂಜರ ಶಬ್ದಕ್ಕೆ ಅರ್ಥವನ್ನು ಪ್ರಹಸನ ಪೂರ್ವಕ ಮಾಡಿಕೊಡುವ ಬರಹಗಾರರ ಚಾತುರ್ಯವು ನಮಗೆ ಪ್ರಯಾಸವನ್ನುಂಟುಮಾಡುವುದಿಲ್ಲ. ಇಲ್ಲಿ ಬರುವ ಗಿಳಿಯು ಪುಣ್ಯ-ಕೀರ್ತಿಗಳಿಂದ ಸುಖ ಸೌಲಭ್ಯಗಳನ್ನು ಪಡೆದಿದ್ದರೂ ಅವನ್ನು ಚಿರಕಾಲ ಭೋಗಿಸುವ ಸೌಭಾಗ್ಯ

ಅದಕಿಲ್ಲ. ಅದರ ಪಂಜರ ಅದಕ್ಕೆ ಮೃತ್ಯು. ಅದರಂತೆ ಜೀವನೂ ಸಹ ಪುಣ್ಯ ಕೀರ್ತಿ ಗಳನ್ನು ತೊಟ್ಟು ಬಂದಿದ್ದಾನೆ. ದೇಹ ಪಂಜರವನ್ನು ಕಟ್ಟಿಕೊಂಡು ಬಂದಿದ್ದಾನೆ. ಆದರೆ ಅಳಿವ ಪಂಜರವನ್ನೆ ಭದ್ರವೆಂದು ನಂಬಿ ಮೋಹಿಸಿ ಚಿರಕಾಲ ಉಂಡುಟ್ಟು ಬದುಕಿ ಬಾಳುವ ಭಾಗ್ಯವಿಲ್ಲ. ಈ ಭಾಗ್ಯವನ್ನು ಕೊಚ್ಚಿಕೊಂಡು ಹೋಗುವ ಮಾಯೆ ಯನ್ನು ಮಂಜರಕ್ಕೆ ಹೋಲಿಸಿ ವಿವರಿಸಿ ಹೇಳುವ ಉದಾತ್ತಭಾವ, ಉನ್ನತ ಕಲ್ಪನೆ ಉಲ್ಲಾಸಜನಕ ನುಡಿ-ಇದನ್ನು ಓದಿಯೇ ತಿಳಿಯಬೇಕು.

"ಕಬ್ಬನದ ಕೋಡಗ" ಆರಂಭದಲ್ಲಿ ಕೋಡುಗ ಗುಂಪಿನ ಕುಚೇಷ್ಟೆಗಳ ಸಹಜ ವರ್ಣನೆಯನ್ನು ಓದುವಾಗ ನಾವು ಬೇರೊಂದೆಡೆ ಕಂಡ ಕಪಿ ಚೇಷ್ಟೆಗಳು ಕಣ್ಣಿಗೆ ಕಟ್ಟಿದಂತಿರುತ್ತದೆ; ಕೋತಿಗಳ ಹಿಂಡು ಎದುರಿಗೇನೆ ಓಡಾಡುವಂತೆ ಭಾಸವಾಗುತ್ತದೆ. ಮುಂದೆ ಓದುತ್ತ ಮಂಗನಿಗೂ ಮನಸ್ಸಿಗೂ ಇರುವ ಸಂಬಂಧ, ವ್ಯತ್ಯಾಸಗಳನ್ನು ಬಲು ಸೂಕ್ಷ್ಮವಾಗಿ ಅಳೆದಿದ್ದಾರೆ. ಮನದ ಚಪಲತೆ ವಿಫಲತೆ ಪಿಸಿಸತೆ ಹಾಳುತನ ಕೀಳುತನ ಮುಂತಾದುವುಗಳನ್ನು ಓದುಗರ ಮನಸ್ಸಿಗೆ ಅಚ್ಚೊತ್ತುವಂತೆ ಆಡಿದ್ದಾರೆ. ಅಣ್ಣನು ಕೋತಿಗೆ 'ಕೋಡಗ' ಎಂದು ಹೆಚ್ಚಾಗಿ ಬಳಸುವ ಮರ್ಮದ ಮೂಲವನ್ನು ಬೈಲಿಗಿರಿಸಿದ್ದಾರೆ. ಕೊನೆಗೆ ಕೋಡಗದ ರೂಪು ಕೀಳ್ತನಕ್ಕೆ ದಾರಣವೆಂಬುದನ್ನು ತಮ್ಮ ಸಹಜವಾದ ರಮ್ಯ ಗಮ್ಯ ಭಾಷೆಯಲ್ಲಿ ಬಿತ್ತರಿಸಿದ್ದಾರೆ.

"ಕಲ್ಲನಾಗರ" ಹಾವೆಂದರೆ ಅಂಜಿ ಹಂಜಿಯಾಗುವುದು, ಒರಲಿ ಓಡುವುದು ಜನರ ಸಹಜ ಸ್ವಭಾವ. ಆ ಸ್ವಭಾವಕ್ಕೆ ತಕ್ಕಂತೆ ಬರಹಗಾರರು ಮೊದಲು ಬಾಯ್ಬುಸ್ಸಿ ನಿಂದ ವಾಚಕರ ಅಂಜಿಸಿ ಅನಂತರ ಅದನ್ನು ಹೋಗಲಾಡಿಸಿ ಓಡುವವರನ್ನು ಹಾವಿನ ಹತ್ತಿರಕ್ಕೆ ಕರತಂದು ಬಿಟ್ಟುದು ಬರಹಗಾರರ ಕಡು ಜಾಣ್ಮೆಯ ಕುರುಹು. ನಾಗರ ಹಾವು ತ್ರಿಮೂರ್ತಿಗಳಿಗೆ ಹೇಗೆ ಕಾರಣವಾಗಿದೆ ? ಆದರೂ ಅದರ ದೇಹರಚನೆಯು ಎಷ್ಟು ವಿಚಿತ್ರವಾಗಿದೆ ? ಎಂಬುದು ನಮಗೆ ಮನದಟ್ಟಾಗುವಂತೆ ಬಲು ರುಚಿ ಟ್ಟಿ ಹೇಳಿದ್ದಾರೆ. ಇದಲ್ಲದೆ ಹಿಂದಿನಿಂದಲೂ ಬಂದ ಮೂಢ ಸಂಪ್ರದಾಯ, ಮೋ ಸ, ಸ್ವಾರ್ಥ, ಅಜ್ಞಾನಗಳನ್ನು ಎತ್ತಿ ಅಲ್ಲಗಳೆದಿದ್ದಾರೆ. ಏಳ್ಗೆಯನ್ನು ಎಣಿಸುವ ಜ ೦ಂ ಗಕ್ಕೆ ಬರೀ ಮೂಢಭಕ್ತಿಯೊಂದೇ ಸಾಲದು; ಗಾಢ ವಿಮರ್ಶೆಯೂ ಬೇಕೆಂದು : ತ್ತಿ ಹೇಳಿದ್ದಾರೆ. ಕಲ್ಲಿನಲ್ಲಿ ಕರಗುವ ಮನಸ್ಸನ್ನು-ಅರ್ಪಿಸುವ ಉಪಚಾರಗಳನ್ನು ಮೆಲ್ಲುವ ಪ್ರಾಣಿಗಳಲ್ಲಿ ಕರಗಿಸಿರಿ. ಉಪಚರಿಸಿರಿ. ಇಲ್ಲಿಲ್ಲದ ದೇವ ಅಲ್ಲಿಲ್ಲ, ಇಲ್ಲಿಲ್ಲದ ತೃಪ್ತಿ ಅಲ್ಲಿಲ್ಲ, ಎಂಬುದನ್ನು ತಮ್ಮ ಸ್ಫೂರ್ತಿಯಿಂದ ಮೂರ್ತಿಗೊಳಿಸಿದ್ದಾರೆ.

"ಹರಕೆಯ ಕುರಿಯು" ನಮ್ಮ ಜೀವನದಲ್ಲಿ ಹರಕೆಯೇನೆಂಬುದನ್ನು ಕೇಳಿ ಕೊಡುತ್ತಿದೆ. ಹೊಟ್ಟೆ ಹೊರೆವುದೇ ನಮ್ಮ ಹರಕೆಯಲ್ಲ; ಸಣ್ಣ ಪುಟ್ಟ ಆಸೆಗಳಿಗಾಗಿ ಬೀದಿಯ ಕಲ್ಲು-ಮಣ್ಣು ದೈವಗಳಿಗೆ ಮೂಕ ಪ್ರಾಣಿಗಳನ್ನು ಬಲಿದಾನ ಮಾಡುವುದು ಹರಕೆಯಲ್ಲ. ಕೆಟ್ಟ ಚಟಗಳಿಗೆ ತಮ್ಮ ದೇಹವ ಮುಡುಪಿಡುವುದು ಹರಕೆಯಲ್ಲ.

ಇವೆಲ್ಲ ಒಂದೊಂದು ಬಗೆಯ ಬಲಿದಾನಗಳೆ ಸಾಂಪ್ರದಾಯವಾದಕ್ಕೆ ಮೆಚ್ಚಿ, ಬಾಯಿಚ್ಛೆಗೆ ಕುರಿ ಕೋಣಗಳನ್ನು ಕೊಲ್ಲುವುದು ಯಾವ ಹರಕೆ? ಹಸಿದ ಬಸಿರಿಗಾಗಿ, ಸ್ವಾರ್ಥಿಗಳಾಗಿ, ಕಪಟಿಗಳಾಗಿ, ಕುಹಕಿಗಳಾಗಿ ಬಾಳುವುದು ಯಾವ ಹರಕೆ? ಇವೆಲ್ಲ ಪಶುವೃತ್ತಿ. ಬಲ್ಲಿದರಾದ ಮನುಷ್ಯರಿಗೆ ಸಲ್ಲುವ ಮಾರ್ಗವಲ್ಲ. ಕರಿಯಾಗಿ ಕುರಿಯಂತೆ ಬಾಳುವುದೆ? ಸಿಂಹವಾಗಿ ಸೀಳ್ನಾಯಿಯಂತೆ ಬೊಗಳುವುದೇ? ನರನಾದ ಮೇಲೆ ಲೇಸಾದ ಗುರಿ ಇರಬೇಕು. ಅಧ್ಯಾತ್ಮದ ಹರಕೆಯ ಪೂರೈಸಬೇಕು.

"ಕಾಡ ಬಸವ"ದಲ್ಲಿ–ಸಂಸಾರವು ಒಂದು ನಾಟಕ. ಸಂಬಂಧಿಗಳು ಪಾತ್ರಗಳು. ಜೀವನು ಸೂತ್ರಧಾರಿ. ಈತನು ಪಡೆಯತಕ್ಕ ಫಲ ಪಾಪ ಪುಣ್ಯಗಳು–ಎಂಬ ವಿಷಯವನ್ನು ನಮ್ಮ ಮನವು ಉನ್ಮನವಾಗುವಂತೆ ಉಪದೇಶಿಸಿದ್ದಾರೆ. ಸಂಸಾರದಲ್ಲಿ ಹೇಯಭಾವ ಹುಟ್ಟಿ ಜೀವನು ಬೇಸರಿಸುವಂತೆ ಬರೆದಿದ್ದಾರೆ. ತಂದೆ, ತಾಯಿ, ಮಡದಿ, ಮಕ್ಕಳು, ಸೋದರ ಸೋದರಿಯರು, ಆಪ್ತೇಷ್ಟರು ಎಷ್ಟರವರು? ಎಷ್ಟು ಸಂಬಂಧ ಉಳ್ಳವರು? ಎಂಬುದದನ್ನು ನಿರ್ದುಷ್ಟವಾದ ನಿದರ್ಶನಗಳೊಡನೆ ಸುಸ್ಪಷ್ಟಪಡಿಸಿದ್ದಾರೆ. ಆ ಜಾಲದ ಜಾಳಿಗೆಯನ್ನು ಹರಿದು ಜರಿದು ಜೀವನ ಮರವೆಯ ಪರೆಯನ್ನು ಹರಿದಿದ್ದಾರೆ. ಹಳೆಯ ರಗಟ (ವಿಷಯ)ಯನ್ನು ಹೊಸದಾಗಿಸಿ ಹೇಳಿದ್ದಾರೆ.

ಮಣ್ಣು ಬೆನಕನನ್ನು ಬಿಡಿಸಿ ಅಣ್ಣನ "ಬೆಣ್ಣೆಯ ಬೆನಕ" ನಲ್ಲಿಗೆ ನಮ್ಮನ್ನು ಒಳ್ಳೆ ಉಪಾಯದಿಂದ ಕರೆದೊಯ್ಯುತ್ತಾರೆ. ಕರೆದೊಯ್ಯುವಾಗ ನಮ್ಮ ಮನದ ಕಾಳಿಕೆಯನ್ನು ಕಳೆಯುತ್ತಾರೆ. ಎಸಗುವ ಮೋಸವನ್ನು ಎತ್ತಿ ತೋರಿಸುತ್ತಾರೆ. ಬರುವ ಕಷ್ಟ ನಷ್ಟಗಳಿಗೆ, ಪಡುವ ದುಃಖ ದುರವಸ್ಥೆಗಳಿಗೆ ಕಾರಣವನ್ನು ಕಾಣಿಸುತ್ತಾರೆ. ಸಾಮಾನ್ಯರನ್ನು ಸಗಣಿಯ ಬೆನಕನಿಗೂ, ಸುತ್ಪುರುಷರನ್ನು ಬೆಣ್ಣೆಯ ಬೆನಕನಿಗೂ ಹೋಲಿಸಿ ಉತ್ತಮ ವಿಷಯುವನ್ನು ವಿರಸಾಗದಂತೆ ಬಲು ಸುರಸಾಗಿ ಸೂರೆಗೊಳಿಸಿದ್ದಾರೆ.

"ಹಾಲ ತೊರೆಗೆ" ಎಲ್ಲರೂ ಹಾತೊರೆಯುವಂತೆ ತಮ್ಮ ಸಲಿಗೆಯ ಸರಸ ಸಲ್ಲಾಪದಲ್ಲಿ ಸೊಲ್ಲಿದುದಲ್ಲದೆ ಹಾಲತೊರೆಯ ವಿಚಾರ ತರಂಗಗಳನ್ನು ಬಹು ವಿಧವಾಗಿ ಎಬ್ಬಿಸಿದ್ದಾರೆ. ಪ್ರತಿ ಮಾತಿನಲ್ಲಿಯೂ ಹುರುಡಿದೆ, ಹುರುಳಿದೆ. ಮನದೆರೆದು ಓದಿದರೆ ಹಾಲ ತೊರೆಯು ಮೇಲ್ಪರಿದು ಹರಿಯುವ ಇಂಚರ ದನಿಯಿಂಪಿಗೆ ಕಿವಿ ಸೋಲುವವು, ಬಣ್ಣನೆಯ ಬಣ್ಣಕ್ಕೆ ಕಣ್ಣು ಅರಳುವುವು. ಭಾವಲಹರಿಗೆ ಹೃದಯ ಹಿಗ್ಗುವುದು. ಆ ಸ್ಫೂರ್ತಿಗೆ, ಆವೇಶಕ್ಕೆ, ಆ ಶಬ್ದ ಸೌಂದರ್ಯಕ್ಕೆ, ಆ ಅರ್ಥಧ್ವನಿಗೆ ಮೈನವಿರೇರುವುದು, ಬಾಯ್ನೀರು ಕರೆವುದು. ಹಾಲ ಹೊಳೆಯನ್ನು ಹರಿಸಿದ ಶಿವ ಶರಣರ ಮೇಲ್ಮೆಯು ಸಹಜ ರೀತಿಯಲ್ಲಿ ಪ್ರಕಟವಾಗಿದೆ. ಪ್ರಮೇಯವಾಗಿದೆ. ಅಣ್ಣನ ವಚನಾಮೃತ ನವನೀತದ ವರ್ಣನೆಯು ಕನ್ನಡದ ಕೆಚ್ಚನ್ನು ಕುದುರಿಸುತ್ತದೆ.

"ಕುಂಬಳ ಕಾಯಿ"ಯ ಕತೆ ಕನ್ನಡಿಗರಿಗಾಗಿಯೇ ಕಡೆಯದಾಗಿ ಹೇಳಿದ ಹಾಸಲುಗತೆ. ಕನ್ನಡಿಗರ ಆ ಸಂಬೋಧನೆಯಿಂದಲೆ ಕನ್ನಡದ ಕೆಚ್ಚು ಮೆಚ್ಚು ಉಕ್ಕಿ ಹೊರಸೂಸಿದಂತೆ ತೋರುತ್ತದೆ. ಕುಂಬಳಕಾಯಿ ಎಲ್ಲಿಂದ ಎಲ್ಲಿಯವರೆಗೆ ಉತ್ತಮೋತ್ತಮ ಸ್ಥಾನಗಳನ್ನು ಸಂಪಾದಿಸಿಕೊಂಡಿದೆಯೆಂಬುದನ್ನು ಸರಸವಾಗಿ ಹೇಳಿದ್ದಾರೆ. ಮುಂದೆ ಕುಂಬಳಕಾಯಿಯನ್ನು ವೈಮಾನಗಳಿಗೆ ಹೋಲಿಸಿದ ಹೋಲಿಕೆಯನ್ನು ಬರಹಗಾರರು ಕನ್ನಡ ನಾಣ್ಣುಡಿಯೊಡನೆ ಬಗೆದುಂಬುವಂತೆ ಬಣ್ಣಿಸಿದ್ದಾರೆ. ಕೊನೆಗೆ ದೀಕ್ಷೆಯ ವಿಚಾರವನ್ನು ದೀರ್ಘಕ್ಕೆಳೆಯದಂತೆ ಅರ್ಥವತ್ತಾಗಿ ಬಿತ್ತರಿಸಿ ಒಬ್ಬೊಗಸೆಯನ್ನು ಸುರಿದಾಯ್ತು ಎಂದು ಪೂರೈಸಿದ್ದಾರೆ. ಕಂಪುಳ್ಳ ಹೂ ಬೊಗಸೆ ಒಬ್ಬೊಗಸೆ ಯಿದ್ದರೆ ಸಾಲದೇನು ?

ಈ ಬರಹಗಳು ಕನ್ನಡದಲ್ಲಿ ಒಂದು ಹೊಸ ತರಹದ ಬರಹಗಳೆಂದೇ ಹೇಳಬೇಕು. ಇವುಗಳಲ್ಲಿ ಕಾವ್ಯವಾಣಿಯಿದೆ, ಕಥಾಂಶವಿದೆ, ನೀತಿಯ ವಿವರಣೆಯಿದೆ. ಅಧ್ಯಾತ್ಮದ ತಿರುಳು, ಭಾಷೆಯ ಬೆಡಗು, ಭಾವದ ಬೆಳಸು, ತಿಳಿನಗೆಯ ತೆರೆಗಳು, ಕಳೆ ಕಟ್ಟುವ ದೃಷ್ಟಾಂತಗಳೂ ಇವೆ. ಈ ಬರಹಗಳನ್ನು ಸಂಸ್ಕೃತದ ಹಿತೋಪದೇಶಕ್ಕೆ ತುಸು ಹೆಚ್ಚು ಕಡಿಮೆ ಸರಿ ಹೋಲಿಸಬಹುದು. ಇಂತಹ ನೂತನ ಬರವಣಿಗೆಗಳನ್ನು ಕನ್ನಡ ನುಡಿಯಲ್ಲಿ ಕಾಣುವಂತೆ ಮಾಡಿದುದಕ್ಕಾಗಿ ಶ್ರೀಗಳಿಗೆ ನನ್ನ ಕೃತಜ್ಞತೆಯ ವಂದನೆಗಳನ್ನು ಸೂಚಿಸುತ್ತೇನೆ.

---

## ಶ್ರೀ ಸನ್ನಿಧಿಯ ಅನುಭಾವ ವಾಣಿ

ಚಿತ್ತವೆಂಬ ಚಿನ್ನದ ತಟ್ಟೆಯಲ್ಲಿ
ಹೃದಯವೆಂಬ ಹೊಂದಾವರೆಯನಿಟ್ಟು,
ಭಕ್ತಿಜಲ-ಭಾವ ಭಸಿತಂಗಳನಿಟ್ಟು
ಕಾಯಕರ್ಪೂರ-ಜೀವಫಲಂಗಳನಿಟ್ಟು ಗುರುದೇವಂಗರ್ಪಿಸಿ
ಶ್ರೀಸಿದ್ಧುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶನಲ್ಲಿ
ಹೊಂಬೆಸುಗೆಯಾಗಿ ಹೊಂಪುಳಿಗೊಂಬ ಹೆಚ್ಚಳವನೇನೆಂಬೆ ?

# ಮುಪ್ಪಿನಾರ್ಯರ ಭಾವಪಾತ್ರಗಳು

—ಸಿ. ಕೆ. ವೆಂಕಟರಾಮಯ್ಯ, ಬೆಂಗಳೂರು

ಶ್ರೀಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಮಠಾಧಿಪತಿಗಳಾದ ಶ್ರೀ ಶ್ರೀಗಳವರು ಬರೆದಿರುವ ಮುಪ್ಪಿನಾರ್ಯರ ಭಾವಪಾತ್ರಗಳ ಬಗ್ಗೆ ಬರೆಯುವ ಗೌರವವು ನನಗೆ ಲಭಿಸಿದೆ. ಇದಕ್ಕಾಗಿ ನನ್ನ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ನಮ್ಮ ದೇಶದ ಮಠಾಧಿಪತಿಗಳು ಗ್ರಂಥ ರಚನೆ, ಧರ್ಮೋದ್ಧರಣ, ಭಾಷಾಸೇವೆ ಮುಂತಾದ ಸತ್ಕಾರ್ಯಗಳಲ್ಲೇ ನಿರತರಾಗಿ ಸಮಾಜದ ಅಭ್ಯುದಯಕ್ಕೂ ಶ್ರೇಯಸ್ಸಿಗೂ ಕಾರಣರಾಗಿರುವುದು ಹಿಂದಿನಿಂದ ನಡೆದು ಬಂದಿರುವ ಸತ್ಸಂಪ್ರದಾಯ. ಅದನ್ನು ಅವಲಂಬಿಸದಿರುವವರ ಸಂಖ್ಯೆಯೇ ಹೆಚ್ಚಿರುವ ಈಗಿನ ಸಮಯದಲ್ಲಿ ನಿಡು ಮಾಮಿಡಿ ಮಠದ ಶ್ರೀ ಶ್ರೀಗಳವರು ಅದನ್ನು ಉತ್ಸಾಹದಿಂದ ಪಾಲಿಸಲಾರಂಭಿಸಿ ಗ್ರಂಥರಚನೆ ಮಾಡುತ್ತಿರುವುದು ಕನ್ನಡಿಗರೆಲ್ಲರಿಗೂ ಹೆಮ್ಮೆ ಸಂತೋಷಗಳನ್ನುಂಟು ಮಾಡಿದೆ. ಶ್ರೀ ಶ್ರೀಗಳವರು ದೈವಭಕ್ತಿ, ಸೌಶೀಲ್ಯ, ಪಾಂಡಿತ್ಯ, ಸೌಜನ್ಯ, ಭಾಷಾ ಭಿಮಾನ ಮುಂತಾದ ಸದ್ಗುಣಗಳಿಂದ ತಮ್ಮ ಪರಿಚಯ ಲಾಭವನ್ನು ಹೊಂದಿದವರೆಲ್ಲರ ಪ್ರೀತಿ ಗೌರವಗಳಿಗೂ ಪಾತ್ರರಾಗಿದ್ದಾರೆ. ಶ್ರೀ ಶ್ರೀಗಳವರು "ಮುಪ್ಪಿನಾರ್ಯರ ಭಾವ ಪಾತ್ರಗಳು" ಎಂಬ ಈ ಗ್ರಂಥವನ್ನು ಶ್ರದ್ಧೆಯಿಂದ ರಚಿಸಿದ್ದಾರೆ. ಮುಪ್ಪಿನ ಷಡಕ್ಷರಿಯ ಕವನಗಳೂ, ಗೀತಗಳೂ, ರಸಭರಿತವಾಗಿವೆ; ಸರಳ ಸುಂದರವಾಗಿವೆ. ಆತನ "ತಿರುಕ" ಎಂಬ ಕವನವನ್ನೋದಿ ತಲೆದೂಗದ ಸಹೃದಯನಿಲ್ಲ. ಆತನ "ಸಕಲ ಕೆಲ್ಲಕೆ ನೀನೆ ಅಕಳಂಕ ಗುರುವೆಂದು" ಎಂಬ ಗೀತವನ್ನು ಓದಿ, ಆತನ ಹೃದಯ ವೈಶಾ ಲ್ಯವನ್ನು ಮನಗಂಡು, ಆತನನ್ನು ಕೊಂಡಾಡದವರಿಲ್ಲ. ಅವನ್ನು ಯಾವ ನಾಡಿನವ ರಾದರೂ ಓದಿ ಮನನಮಾಡಿ ಪ್ರಯೋಜನ ಹೊಂದಬಹುದಾಗಿದೆ. ಆತನ ಕವನಗಳ ರಸವಾಣಿಗಳು ಗೂಢವಾದ ಅರ್ಥಸಂಕೇತದಿಂದಲೂ ಕೂಡಿರುವುದರಿಂದ ಸರ್ವಾದರಣೀ

ಯವಾಗಿವೆ. ತಾನು ತಿಳಿಸಲಿಚ್ಛಿಸುವುದನ್ನು ಹೃದಯಂಗಮವಾಗಿ ವರ್ಣಿಸುವ ಸಾಮರ್ಥ್ಯವೂ ಆತನಿಗುಂಟು. "ಒಡೆದ ಗಡಿಗೆ ಹರಿದ ಜೋಳಿಗೆಡದ ಕೈಯ್ಯ ಮುರಿದ ಕೋಲು । ಹಿಡಿದು ಊರನೆಲ್ಲ ತಿರಿದು ತಂದು ನೋಡಲು ॥" ಎಂಬ ತಿರುಕನ ವರ್ಣನೆಯು ಅದಕ್ಕೊಂದು ನಿದರ್ಶನವಾಗಿದೆ. "ಪ್ರಾರ್ಥನೆ", "ನೆರೆದ ನೀರೆ", "ತಿರುಕ" ಮತ್ತು ಸೇವಕ ಎಂಬ ನಾಲ್ಕು ಕವನಗಳೂ ಸ್ವಾರಸ್ಯವಾಗಿಯೂ ಇವೆ; ಬೋಧಪ್ರದವಾಗಿಯೂ ಇವೆ. "ನೆರೆದ ನೀರೆ" ಎಂಬ ಕವನವು 'ಶಿವ-ಪತಿ ; ಶರಣ-ಸತಿ" ಎಂಬ ತತ್ತ್ವವನ್ನು ಮಧುರ ಭಾವದ ಶಿವಾರಾಧನೆಯನ್ನು—ಕಾಂತಾ ಸಮ್ಮಿತಿಯಲ್ಲಿ ಚಿತ್ರಿಸುತ್ತದೆ.

ಮುಪ್ಪಿನ ಷಡಕ್ಷರಿಯ ರಸವಾಣಿಗಳನ್ನು ಶ್ರೀ ಶ್ರೀಗಳವರು ವಾಚಕರಿಗೆ ಪರಿಚಯಮಾಡಿ ಕೊಡುವುದಕ್ಕಾಗಿ ಈ ಗ್ರಂಥವನ್ನು ಬರೆದು, ಕನ್ನಡಿಗರಿಗೆ ದೊಡ್ಡದೊಂದು ಉಪಕಾರಮಾಡಿದ್ದಾರೆ. ಶ್ರೀ ಶ್ರೀಗಳವರು ಇತೋಽಪ್ಯಧಿಕವಾಗಿ ಇನ್ನೂ ಅನೇಕ ಉತ್ತಮ ಗ್ರಂಥಗಳನ್ನು ರಚಿಸಿ ಉಪಕರಿಸುವಂತೆ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

---

## ಶ್ರೀಗಳವರ ಅಭಯವಾಣಿ

ಕಂದಾ ! ಭಯವೇ ಬಂಧನಕ್ಕೆ ಕಾರಣ. ಭಯವೇ ದುಃಖಕ್ಕೆ ಕಾರಣ. ಭಯವೇ ವಿಗತಿಗೆ ಕಾರಣ. ಭಯದ ಬಿಡುಗಡೆಯೇ ಮುಕ್ತಿಗೆ ಮೂಲ ಕಾರಣ. ಭಯ ಅಪಾಯ ; ಅಭಯ ಉಪಾಯ ! ಅಂತೆಯೇ ನೀನು ಅಭಯವಂತನಾಗು ಮಗು !

ಓ ಶಿಶುವೆ ! ಸಜ್ಜನರು ಸನ್ಮಾನಿಸಲಿ, ದುರ್ಜನರು ಅವಮಾನಿಸಲಿ. ನೀನು ಹಿಗ್ಗಿ ಕುಗ್ಗದೆ ಸಮಭಾವದಿಂದಿರು. ಸಿರಿಬರಲಿ, ಉರಿಬರಲಿ ಸಮಭಾವದಿಂದಿರು. ಇದುವೆ ಜೀವನ್ಮುಕ್ತಿ ಕಂದಾ ! ಜೀವವಿರುವಲ್ಲೆಲ್ಲಾ ಶಿವನನ್ನು ಕಾಣು ಕಂದಾ !

# ಭಾವಪಾತ್ರಗಳ ಸೂತ್ರ ಶೈಲಿ

**—ತಾರಿಣಿ ಸುಂದರೇಶನ್.**

ಶ್ರೀ ನಿಜಗುಣಶಿವಯೋಗಿಗಳ ಸಮಕಾಲೀನರಾದ ಮುಪ್ಪಿನಾರ್ಯರು ವಿಖ್ಯಾತರಾದ ಹಾಡುಗಬ್ಬಕಾರರು. ಕೊಳ್ಳೇಗಾಲದ ಶಂಭುಲಿಂಗ ಬೆಟ್ಟದ ಬಳಿ ಇವರ ನಿವಾಸವಿತ್ತೆಂದು ತಿಳಿದು ಬಂದಿದೆ. 'ಸುಬೋಧ ಸಾರ'ವು ಮುಪ್ಪಿನಾರ್ಯರ ಶಿವಶಾಸ್ತ್ರದ ಅನುಭವವನ್ನು ಬಿಂಬಿಸುವ ಗೀತಕೃತಿ. ಶ್ರೀ ಜ. ಚ. ನಿ. ಗಳವರ 'ಮುಪ್ಪಿನಾರ್ಯರ ಭಾವಪಾತ್ರಗಳು'—ಎಂಬ ಹೊತ್ತಗೆಗೆ 'ಸುಬೋಧಸಾರ'ವೇ ಆಧಾರ.

ಭಕ್ತಿಜೀವನ ಸಾಧನೆಯಲ್ಲಿ ಮುಪ್ಪಿನಾರ್ಯರು ತಳೆದ ಭಾವಪಾತ್ರ ಹಲವಾರು. ಶ್ರೀ ಜ. ಚ. ನಿ. ಸನ್ನಿಧಿಗಳವರು ತಮ್ಮ ಬಗೆಗಣ್ಣಿನಿಂದ ಇವುಗಳನ್ನು ಕಂಡಿದ್ದಾರೆ; ಭಾವದ ಬಣ್ಣದಿಂದ ಭಕ್ತಿ ಕುಂಚಿಕೆಯಲ್ಲಿ ಚಿತ್ರಿಸಿದ್ದಾರೆ. ಶಿವಮಯ ಪ್ರತಿಭೆಯಿಂದ ಅರಳಿವೆ ಈ ನುಡಿಚಿತ್ತಾರಗಳು.

ಮೂಲಕವಿಯಾದ ಮುಪ್ಪಿನಾರ್ಯರು, ಪ್ರಾರ್ಥಕ–ಹೆಮ್ಮಗಳು–ತಿರುಕ–ಸೇವಕ ಈ ಪಾತ್ರಗಳ ನಿರ್ವಾಹಕರಾಗಿದ್ದಾರೆ. ಚಿತ್ರಣಕಾರ್ಯ ಶ್ರೀ ಜ. ಚ. ನಿ. ಸನ್ನಿಧಿಗಳವರದು. ಶ್ರೀ ಸನ್ನಿಧಿಗಳವರ ಪಾತ್ರಚಿತ್ರಣದಲ್ಲಿ ದಿವ್ಯಜೀವನದ ಬಗೆ–ಬಿನ್ನಾಣವಿದೆ. ಭಕ್ತಿಪರ ವಿಮರ್ಶೆಯಿದೆ. ಶಿವಾನುಭವ ತತ್ತ್ವವು ಸೂತ್ರಶೈಲಿಯಿಂದ ಪ್ರಕಾಶಗೊಂಡಿದೆ.

೧

ಮೊದಲ ಪ್ರಾರ್ಥಕನ ಪಾತ್ರವು ಪರಮಾರ್ಥದೃಷ್ಟಿಯಿಂದ ಸೊಬಗು ತಳೆದ ಪಾತ್ರವಾಗಿದೆ.

"ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳುತಿರಲರಿದೆನು ॥ ಪ ॥

"ಪ್ರಪಂಚದಲ್ಲಿ ಪ್ರಾರ್ಥಕರು ಬೇಕಾದಷ್ಟು ಜನ ಇದ್ದಾರೆ. ಆದರೆ ಈ ಮಟ್ಟದವರು ತೀರ ವಿರಳ. ಅಕಳಂಕ ಗುರುವಾದ ದೇವನನ್ನು ಕವಿಯು ಪ್ರಾರ್ಥಿಸಿದ್ದಾನೆ. ಈತ ನಿಜವಾದ "ಪ್ರಾರ್ಥಕ"-ಎಂದು ತಿಳಿಸಿ, ಮುಪ್ಪಿನಾರ್ಯರ ಕಾಯಕ, ವಾಚಕ, ಮಾನಸಿಕ ಪ್ರಾರ್ಥನೆಯ ಪರಿಯನ್ನು ಶ್ರೀ ಜ. ಚ. ನಿ. ಸನ್ನಿಧಿಗಳವರು ವಿವರಿಸಿದ್ದಾರೆ. "ಸುಖದುಃಖಗಳಲ್ಲಿಯೂ ಇಮ್ಮನವಾಗದೆ ನೆಮ್ಮುಗೆಯಿಂದ ನೆನೆವುದೇ ಮಾನಸಿಕ ಪ್ರಾರ್ಥನೆ"ಯೆಂದು ಶ್ರೀಗಳವರು ತಿಳಿಸಿದ್ದಾರೆ.



ಹೆಮ್ಮಗಳ ಪಾತ್ರದ ಚೆಲ್ವಿಕೆಯಂತೂ ಗ್ರಂಥದ ಹಿರಿಮೆಯನ್ನು ಹೆಚ್ಚಿಸಿದೆ. ರಸಿಕರ, ಅಧ್ಯಾತ್ಮಿಗಳ ಮನದಲ್ಲಿ ಹೆಮ್ಮಗಳ ನಿಲುವು ಅಚ್ಚಳಿಯದೆ ಉಳಿಯುತ್ತದೆ. ಇದೊಂದು ಮನೋರಮ್ಯ ಪಾತ್ರ. 'ಶರಣಸತಿ ಲಿಂಗಪತಿ' ಎಂಬ ಮುನ್ನಿನವರ ತತ್ವ್ತವೇ ಹೆಮ್ಮಗಳ ಬಾಳಿನ ಸೂತ್ರವಾಗಿದೆ.

ಹೆಮ್ಮಗಳ ಒಲವಿನ ಬಾಳನ್ನು ಚಿತ್ರಿಸುವುದರ ಮೂಲಕ ಕವಿಯ ಬೆಡಗು, ಭವ್ಯಭಾವ, ದಿವ್ಯ ಅನುಭಾವವನ್ನು ಶ್ರೀ ಜ. ಚ. ನಿ. ಸನ್ನಿಧಿಗಳವರು ಬಣ್ಣಿಸಿದ್ದಾರೆ. ಕವಿಯ ನಿಲವು ಗಂಗೆಯಂತಹ ಗರತಿಯ ನಿಲವಾಗಿದೆ. ಶಿವಷಡಕ್ಷರಿಯೇ ನಲ್ಲ; ಮುಪ್ಪಿನಾರ್ಯರೇ ಹೆಮ್ಮಗಳು.

'ಹೆಮ್ಮಗಳು ನಾ ನಿಮ್ಮ । ನಮ್ಮಗೊಂಡಿರುವೆನೈ ।
ಗಮ್ಮನೇ ಎನ್ನವನು ಕರೆಯ ಬನ್ನಿ ॥

ಈ ಪಲ್ಲವಿಯ ಅಂತರಂಗಿಕ ನಲ್ಮೆ, ಚೆಲುವನ್ನು ಶ್ರೀಗಳವರು ಕಾಣಿಸಿದ್ದಾರೆ

"ನೀರ ಹೊಳೆಯಲಿ ನಿಂದು । ದಾರಿಯನು ನೋಡುವೆನು ।
ಬಾರದಿರೆ ಮನದೊಳಗೆ ಕರಗಿ ಕೊರಗಿ ॥
ಆರೈದು ಮತ್ತೊಮ್ಮೆ । ದೂರ ದೃಷ್ಟಿಯನಿತ್ತು ।
ಸಾರಿ ನೋಡುವೆ ನಿಲುಕಿ ಅಳಲಿ ಬಳಲಿ ॥

ಹೆಮ್ಮಗಳ ಈ ನಿಲವು ಮನವನ್ನೆ ಕರ್ಗಿಸುವಂಥದು. ತನ್ನವರಿಗಾಗಿ ಅದೆಷ್ಟು ಕಾತರ ! ಉತ್ಸಾಹ !

ಹೆಮ್ಮಗಳು ಶರಣರ ಮನೆಮಗಳು ; ಕುಲವಧು ಶಿವಷಡಕ್ಷರಿ ನಲ್ಲನ ಸಂಬಂಧ ಜನುಮ ಜನುಮಗಳಿಂದ ಸಂಸಿದ್ಧವಾಗಿ ಹೆಮ್ಮಗಳಿಗೆ ಒದಗಿದೆ. ತಿಳಿವೆಳಗಿನ ತಿಂಗಳ ಸುಂದರನಿಗಾಗಿ ಈಕೆ ತವಕಗೊಂಡಿದ್ದಾಳೆ, "ತಂದು ತೋರೆ ಎನ್ನ ಮನಘನಪ್ರಿಯನ ಇಂದು ಧರ ಕಡುಚೆಲ್ವ ಮನದತ್ತ ಸುಳಿಯನು"-ಎಂದು ಗೆಳತಿಯಲ್ಲಿ ಬಿನ್ನವಿಸಿಕೊಂಡಿದ್ದಾಳೆ.

ಹೆಮ್ಮಗಳ ವಿಕಳಾವಸ್ಥೆಯು ಮಹದೇವಿಯ ವಿಪ್ರಲಂಭ ಶೃಂಗಾರವನ್ನು ನೆನಹಿಗೆ ತರುತ್ತಿದೆ. "ಭಕ್ತಿ ಬಲಿತು ಭಾವ ಬೆರೆದು ಬಂದಾಗಲೇ ಹೆಮ್ಮಗಳ ಪಾತ್ರ ಪರಿಪೂರ್ಣವಾಗುತ್ತದೆ. ಪರಮಾತ್ಮಪ್ರೀತ್ಯಾಸ್ಪದವಾಗುತ್ತದೆ. ಹರನ ಹೃದಯವನ್ನು ದ್ರವಿಸಿದವಳು ಈ ಹೆಮ್ಮಗಳು"–ಶ್ರೀ ಸನ್ನಿಧಿಗಳವರ ಈ ನುಡಿಗಳು ಸಹಜವಾಗಿವೆ.

೩

ಯಾಚನೆಗಿಂತ ಹೀನವಾದ ಬದುಕು ಇನ್ನೊಂದಿಲ್ಲ. ಹೀಗಿರುವಾಗ ಮುಪ್ಪಿನಾರ್ಯರು ತಿರುಕನಾಗಲು ಬಯಸಿರುವುದೇಕೆ ? ಇದು ಸೋಜಿಗವೆನಿಸಬಹುದು. 'ಒಡೆದ ಗಡಿಗೆ, ಹರಿದ ಜೋಳಿಗೆಡದಕೈಯ ಮುರಿದ ಕೋಲು ಹಿಡಿದು ಊರನೆಲ್ಲ' ತಿರಿದು ತರುವ ತಿರುಕನ ವೇಷ ಮುಪ್ಪಿನಾರ್ಯರದಾದರೂ, ಆವೇಶ ಮಾತ್ರ ಭಕ್ತನದಾಗಿದೆ. ಆದರ್ಶ ತಿರುಕನು ಈತ. ತನ್ನ ಸಂರಕ್ಷಿಸುವ ಧರ್ಮಭಿಕ್ಷವೆ ಈ ತಿರುಕನ ಬಯಕೆ. ಒಮ್ಮೆಯಾದರೂ ಭಿಕ್ಷವನ್ನು ಇಲ್ಲೆನ್ನದ ನಿರ್ಮಲರಾದ ಶರಣರಲ್ಲಿ ಭಿಕ್ಷೆ ಬಯಸಿದ್ದಾನೆ. ಬಸವನಲ್ಲಿ ಭಕ್ತಿಭಿಕ್ಷೆ, ಸಿದ್ಧರಾಮನಲ್ಲಿ ಶಿವಯೋಗಭಿಕ್ಷೆ, ಮಹಾದೇವಿಯಲ್ಲಿ ನಿರ್ವಾಣಭಿಕ್ಷೆ, ಅಜಗಣ್ಣನಲ್ಲಿ ಗಂಭೀರಭಿಕ್ಷೆಯನ್ನು ಕವಿ ಬೇಡಿದ್ದಾನೆ. ಬೇಡಿದರೆ ಶರಣರನ್ನು ಬೇಡಬೇಕು. ತಿರುಕನ ಪಾತ್ರ ತಳೆದರೆ ಮುಪ್ಪಿನಾರ್ಯರಂತಹ ಗುಣಶೀಲ ತಿರುಕನಾಗಬೇಕು. ಅಂತೂ ತಿರುಕನ ಪಾತ್ರವು ಮಾರ್ಮಿಕವಾಗಿದೆ. ಇದರ ಚಿತ್ರಣವನ್ನು ಸಹಜ ಸುಂದರವಾಗಿ ಶ್ರೀ ಸನ್ನಿಧಿಗಳವರು ಒದಗಿಸಿದ್ದಾರೆ.

೪

ಹರನೆ ನಾ ನಿಮ್ಮಲ್ಲಿ ವರವ ಬೇಡುವೆನೊಂದ
ಶರಣರಿಗೆ ಭೃತ್ಯನಾಗಿರಿಸೆನ್ನನು

ಕಿಂಕರನಾಗಿಯೇ ಶಂಕರನನ್ನು, ಶರಣರನ್ನು ಸೇವಿಸುವ ಸೇವಕನ ಭಾವ ಪಾತ್ರವೂ ಚಿರನೂತನ ತತ್ತ್ವವನ್ನೆ ಕಾಣಿಸಿದೆ. ಶರಣರ ಅಂಗಳವನ್ನು ಗುಡಿಸಿ ಅವರ ಬಾಗಿಲ ಕಾಯ್ದು, ಆಶ್ರಯದಲ್ಲಿರುವ ಸೇವಕನ ಚಿತ್ರಣವನ್ನೂ ಮಿಗಿಲಾಗಿ ಶ್ರೀಸನ್ನಿಧಿಗಳವರು ಒದಗಿಸಿದ್ದಾರೆ.

ಒಟ್ಟನಲ್ಲಿ 'ಮುಪ್ಪಿನಾರ್ಯರ ಭಾವಪಾತ್ರಗಳು' ಮನೋರಂಗದಲ್ಲಿ ಒಮ್ಮೆ ಸುಳಿದರೆ ಸಾಕು, ತನ್ನ ಹೊಳಹನ್ನು ಬೀರಿ ನೆಲೆ ನಿಲ್ಲುವ ಚಿತ್ರಗಳಾಗಿವೆ. ಭಾವಕ್ಕೆ, ಭಕ್ತಿದೃಷ್ಟಿಗೆ ನಿಲುಕುವ ಪಾತ್ರಗಳಾಗಿವೆ. ಕವಿಹೃದಯ ಧರ್ಮವನ್ನು ಸಂಕ್ಷಿಪ್ತವಾಗಿ ಅಡಕವಾಗಿ ಮನೋಹರವಾಗಿ ತಿಳಿಸುವ ಸೂತ್ರ ಶೈಲಿಯಿಂದ ಈ ಪಾತ್ರಗಳನ್ನು ಚಿತ್ರಿಸಿರುವುದು ಶ್ರೀ ಸನ್ನಿಧಿಗಳವರ ಗ್ರಂಥದ ವೈಶಿಷ್ಟ್ಯವಾಗಿದೆ.

---

# ಚಿರಂತನ ಚೇತನ ಮೂರ್ತಿ ಶ್ರೀ ಜ. ಚ. ನಿ

ಶ್ರೀಗಳವರ ಸಾಹಿತ್ಯ ಸೃಷ್ಟಿ, ಹಾಳೆಗಳಮೇಲೆ ಹರಿದು ಹೊಲಸಾಗಿ, ಹಾಳಾಗಿ ಹೋಗುವ"ಶವಸೃಷ್ಟಿ"ಯಲ್ಲ ಶುಚಿ ರುಚಿಯೊಡನೆ ರಸವತ್ತಾಗಿ, ಬುದ್ಧಿ-ಮನ ಹೃದಯಕ್ಕೆ ತುಷ್ಟಿ ಪುಷ್ಟಿಯನ್ನೀಯುವ, ಸುಂದರ ಶಾಶ್ವತ ಮಂಗಲಮಯ "ಶಿವಸೃಷ್ಟಿ" !

ನುಡಿ, ಮೃದು-ಮಧುರ ! ಭಾವ, ರಸ-ಜೇನು ! ಈ ಸೂಕ್ಷ್ಮ ಶರೀರದಲ್ಲಿಯ ಈ ಸಾಹಿತ್ಯ ಶಕ್ತಿಯ ಸಂಚಯದ ಸಂಚಾರ, ಬರವಣಿಗೆಯ ಚಿತ್ತರಣೆಯಲ್ಲಿ ಅದೆಂಥ ಅಮೋಘ !ಅನುಭವದ ಅಮರತೆಯು, ಚೆಲವು ಒಲಿಪಿ ನಿಲುಪಿನೊಡನೆ, ಬರಹಗಳುದ್ದಕ್ಕು ಮೂಡಿನಿಂತಿದೆ; ಮಿಡಿದು ನಿಂತಿದೆ ! ಅದರಲ್ಲಿ ಗುಡುಗು ಮಿಂಚಿನ ಪ್ರಖರತೆ ಇಲ್ಲ. ನಿತಾಂತ ಪ್ರಶಾಂತತೆಯ ಪ್ರಸನ್ನತೆ ಇದೆ !

ಗದ್ಯವಾಗಲೀ-ಪದ್ಯವಾಗಲೀ ಹೃದ್ಯವಾಗುವಂತೆ, ನಯ-ಬಂಧುರ-ಸುಂದರವಾಗಿ ಸಾಧಿಸಿದ ಸಿದ್ಧರಲ್ಲಿ ಇವರೊಬ್ಬರು ಸಿದ್ಧಮಹಾಪುರುಷರು ! ಋಷಿ ಜೀವನದ-ರಸಭಾವದ ಕೃಷಿ, ಹದಗೊಂಡು, ಹುಲುಸಾಗಿ, ನವೀನತೆಯ ರಮಣೀಯತೆಯಿಂದ, ಕಣ್ಣು-ಮನ ಮೆಚ್ಚುವಂತೆ ಬೆಳೆದು ಬಲಿತು ಬಂದಿದೆ! ಬೆಳಕು ತಂದಿದೆ ! ಕನ್ನಡಕೆ ಕಂಣಿಟ್ಟು. ಕೈಗೆ ಕನ್ನಡಿ ಕೊಟ್ಟು ಕವಿತ್ವಕ್ಕೆ "ಕವಿತನದ" ಕೆಚ್ಚು ಕಮನೀಯತೆಯ ಕೊಟ್ಟ ಕಾರಣಿಕರಿವರು !

ಕುಶಲಶಿಲ್ಪಿಯ ಕೈ ಕೆಲಸದ ಕುಸುರಿನಕ್ಕಿಂತಲೂ ಶ್ರೀಗಳವರ ಪ್ರಸಿದ್ಧ ಪ್ರಸಾದ ಹಸ್ತದ ಒಕ್ಕಣಿಕೆಯ ರಚನೆಯ ವಚನ-ಕವನ-ಕಥೆ-ಚರಿತ್ರೆ-ವಿಮರ್ಶಾ ಸಾಹಿತ್ಯಗಳ ಸಾರಸೌಂದರ್ಯದ ಕಮನೀಯತೆಯು ಆದರಣೀಯ, ಅನುಕರಣೀಯ. ಧರ್ಮ ಕರ್ಮಗಳ ಸಮನ್ವಯದ, ಶುದ್ಧಾಂತಃಕರಣದ ವಿಚಾರಧಾರೆ,ಪ್ರತಿ-ಪುಟ ಪುಟಗಳಲ್ಲಿ ಸ್ಫುಟಗೊಂಡು ಸ್ಫೂರ್ತಿ ರಸಬುಗ್ಗೆ ಚಿಮ್ಮಿದೆ! ಶ್ರೀಗಳವರ ಸಂದರ್ಶನ ಸಾನಿಧ್ಯದಲ್ಲಿ ತ್ರಿವೇಣಿ ಸಂಗಮಸ್ನಾನದ ಪವಿತ್ರ ಪಾವನತೆ ಇದೆ !

ಸಿರಿನಾಡಿನ ಹಿರಿಯ ಗಿರಿ ಪೀಠಕೆ ಗುರುವಾಗಿ, ಕನ್ನಡ ಸಾರಸ್ವತ ಲೋಕಕ್ಕೆಲ್ಲ "ಸಾಹಿತ್ಯ ಶಿರೋಮಣಿ"ಗಳಾಗಿ, ಚಿರಂತನ ಚೇತನ ಮೂರ್ತಿಗಳಾಗಿ ಶೋಭಿಸುವ ಪೂಜ್ಯ ಶ್ರೀಗಳವರ ದಿವ್ಯ ಚರಣಾರವಿಂದಗಳಿಗೆ ಭಕ್ತಿಪೂರ್ವಕ ಅನಂತ ಪ್ರಣಾಮಗಳು.

ಮುನಿಕುಮಾರ ಪಟ್ಟಣ ಶೆಟ್ಟಿ.
ಸಿಂದಗಿ.

ಎಸಳು-೧೦

# ಸಮೀಕ್ಷಾತ್ಮಕ ಸಾಹಿತ್ಯ

[ದರ್ಶನ-೯]

ಅಕ್ಕನ ಬಾಳು
ಅಣ್ಣನ ಬದುಕು
ಅಲ್ಲಯ್ಯನ ಬೆಳಕು
ಸಮ್ಯಜ್ಞಾನಿ ಚೆನ್ನಬಸವಣ್ಣ

ಅರಿವನ್ನು ಅಂತರಂಗದ ಜ್ಯೋತಿ ಎಂದು ಕರೆಯುತ್ತಾರೆ ಅನುಭಾವಿಗಳು. ಹೃದಯಾಂತರಾಳದಲ್ಲಿ ಇಂತಹ ಜ್ಯೋತಿಯನ್ನು ಬೆಳಗಿಸಿಕೊಂಡಿದ್ದ ಮಹಾ ವಿಭೂತಿಗಳು ಅಕ್ಕಮಹಾದೇವಿ, ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ ಮುಂತಾದ ಶರಣರು. ಆ ಮಹಾನುಭಾವರ ಅಂತರಂಗದ ಜ್ಯೋತಿಯನ್ನು ಜನಸಾಮಾನ್ಯರಿಗೆ ತಮ್ಮ ಸಮೀಕ್ಷೆಯ ಮೂಲಕ ಗುರುತಿಸಿ ತೋರಿಸಿಕೊಟ್ಟಿದ್ದಾರೆ ಶಿವ ಸಾಹಿತಿ ಶ್ರೀ ಜ. ಚ. ನಿ ಅವರು.

ಸಮೀಕ್ಷಾತ್ಮಕ ಸಾಹಿತ್ಯವು ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಾಕಾರ. ಕನ್ನಡಸಾಹಿತ್ಯದಲ್ಲಿ ಸಮೀಕ್ಷಾತ್ಮಕ ಸಾಹಿತ್ಯವು ಹೆಚ್ಚು ಬೆಳೆಯಬೇಕೆಂಬುದಕ್ಕೆ ಶ್ರೀಗಳವರಸಾಹಿತ್ಯವು ಉತ್ತೇಜಕರವಾಗಿದೆ. ಸಮೀಕ್ಷಾತ್ಮಕ ಸಾಹಿತ್ಯರಚನೆಗೆ ತುಂಬು ಅನುಭವವಿರಬೇಕು; ಪಾರದರ್ಶಕ ದೃಷ್ಟಿ ಇರಬೇಕು. ಶರಣ ಸಾಹಿತ್ಯಕ್ಕೆ ಮತ್ತೊಂದು ಹೆಸರಿನಂತಿರುವ ಶ್ರೀ ಸನ್ನಿಧಿಯವರು ಅಕ್ಕನ ಬಾಳನ್ನು, ಅಣ್ಣನ ಬದುಕನ್ನು, ಅಲ್ಲಯ್ಯನ ಬೆಳಕನ್ನು, ಚೆನ್ನಬಸವಣ್ಣನ ಸಮ್ಯಜ್ಞಾನವನ್ನು ಆ ಶರಣರ ನುಡಿಗಳ ಮೂಲಕವೇ ಸಮಗ್ರವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ಈ ಕೃತಿಗಳಲ್ಲಿ ಶ್ರೀಗಳವರ ಸಮೀಕ್ಷಾತ್ಮಕ ದೃಷ್ಟಿಯ ದರ್ಶನ ನಮಗಾಗುತ್ತದೆ.

ಶರಣರ ಅಂತಃಪ್ರೇರಣೆಗಳನ್ನು ಸಂಗ್ರಹಿಸಿ, ಸಮನಿಸಿಕೊಂಡು ಭಕ್ತರು ತಮ್ಮ ಜೀವನ ದೃಷ್ಟಿಯನ್ನು ರೂಪಿಸಿಕೊಳ್ಳಲೆಂಬ ಆಶಯದಿಂದ ಶ್ರೀಗಳವರು ಸೃಷ್ಟಿಸಿರುವ ಈ ಅಮೂಲ್ಯ ಸಾಹಿತ್ಯ ಕೃತಿಗಳು ಕನ್ನಡ ಸಾಹಿತ್ಯಕ್ಕೆ ಒಂದು ಸೊಬಗನ್ನು ಇತ್ತಿವೆ, ಸವಿಯನ್ನು ತುಂಬಿವೆ!

# ಅಕ್ಕನ ಬಾಳು ಮತ್ತು ಸಾಹಿತ್ಯ

—ಪುಲಿಕೇಶಿ

ಶಿವಶರಣ—ಶರಣೆಯರ ದಿವ್ಯ ಜೀವನವನ್ನು ಆದರ್ಶ ರೀತಿಯಲ್ಲಿ ದರ್ಶಿಸು ವುದು, ಅವರ ಮಾಹಾತ್ಮ್ಯವನ್ನು ಉತ್ತಮ ಮಟ್ಟದಲ್ಲಿ ಚಿತ್ರಿಸುವುದು ಸಾಮಾನ್ಯ ಕಾರ್ಯವಲ್ಲ. ಅವರ ನಡೆ ನುಡಿಗಳನ್ನು ಮೈಗೂಡಿಸಿಗೊಂಡು, ಸ್ವಯಂ ಅನು ಭಾವಿಗಳಾಗಿ, ಒಳಗಣ್ಣಿನಿಂದ (ಅಂತರಿಂದ್ರಿಯದಿಂದ) ಸಮೀಕ್ಷಿಸುವ ಮಹತ್ಕಾರ್ಯ ವೆಸಗಿದ್ದಾರೆ ಪೂಜ್ಯ ಶ್ರೀ ಜ. ಚ. ನಿ. ಅವರು.

ಪೂಜ್ಯ ಹಳಕಟ್ಟಿಯವರನ್ನು ಬಿಟ್ಟರೆ, ಶಿವಶರಣ—ಶರಣೆಯರ ವಚನಗಳ ಪವಣಿಕೆಯಿಂದಲೇ, ಅವರ ಜೀವನ ಚಿತ್ರಣವನ್ನು ಮೊದಲು ಬಿತ್ತರಿಸಿರುವವರೆಂದರೆ ಪೂಜ್ಯ ಶ್ರೀಶೈಲ ಜಗದ್ಗುರುಗಳವರು. ಅದರಲ್ಲಿಯೂ ಅವರು ಪ್ರಕಟಿಸಿದುದಕ್ಕಿಂತ ಹೆಚ್ಚು (೫೨) ಅಕ್ಕನ ವಚನಗಳನ್ನು ಸಂಗ್ರಹಿಸಿ ಈ ಕೃತಿಯಲ್ಲಿ ಸಂದರ್ಭೋಚಿತ ವಾಗಿ ಪವಣಿಸಿದ್ದಾರೆ. ಅಕ್ಕನ ಕೃತಿಗಳಾದ 'ಯೋಗಾಂಗತ್ರಿವಿಧಿ', ಸೃಷ್ಟಿಯ ವಚನ, ಷೋಡಶಸ್ಥಲ ನಿರ್ದೇಶವಚನ, ಕೊರವಂಜಿ ಹಾಡು, ಆರತಿ ಹಾಡು, ಸುಮನ ಸಾರಾಯ ಶರಣ (ಎಲ್ಲಕ್ಕೂ ಚನ್ನಮಲ್ಲಿಕಾರ್ಜುನನ ಅಂಕಿತವಿದೆ) ಎಂಬ ಪದ್ಯ— ಇವನ್ನೂ ಮಹಾಸ್ವಾಮಿಗಳವರು ಪೂರ್ವಾಶ್ರಮದಲ್ಲಿಯೇ ವಿರಚಿಸಿದ 'ಶ್ರೀ ಮಾದೇವಿ ಯಕ್ಕನ ಲಾವಣಿ' ಯನ್ನೂ ಜೊತೆಗೂಡಿಸಿರುವುದು ಹಲವು ಭಕ್ಷ್ಯಗಳ ರೂಪದ ಪದಾರ್ಥವನ್ನು ಏಕತ್ರ ಸಂಪಾದಿಸಿ, ಶುದ್ಧೀಕರಿಸಿ ದೇವನಿಗೆಡೆಮಾಡಿ ತನ್ಮೂಲಕ ಪ್ರಸಾದವನ್ನಾಗಿ ಮಾಡಿದ ಪವಿತ್ರ ಕಾರ್ಯದಂತಾಗಿದೆ.

ಪರಿಚಯದಲ್ಲಿ ಶ್ರೀಗಳವರು ಪ್ರಸ್ತಾಪಿಸಿರುವ ಅಕ್ಕನ 'ಮದುವೆಯ ಮಾತು' ಪ್ರಸಂಗದಲ್ಲಿ—ಅಕ್ಕನು ವಿವಾಹದ ಬಂಧನಕ್ಕೊಳಗಾದವಳಲ್ಲ—ಎಂಬ ಅಂಶ ಬಹು ಜನಪ್ರಿಯವಾದುದಾಗಿದೆ. ಅಷ್ಟೇ ಅಲ್ಲ; ಆ ಮಹಾತಾಯಿಯ ಆರು ಶ್ರೇಷ್ಠ ವಚನಗ ಳಿಂದ ಅವನ್ನು ಅತ್ಯುತ್ತಮ ರೀತಿಯಲ್ಲಿ ಸಮರ್ಥಿಸಿರುವುದು—ವಿವಾಹ ಪರ ವಾದಿಸು

ವವರ ಬಾಯಿ ಮುಚ್ಚಿಸುವಂತಿದೆ. ಅವರ ಮಾತಿನಿಂದಲೇ ಆ ವಿಷಯ ವಿವರ ಕೇಳೋಣ : '....ಮದುವೆಯ ಮಾಡಿಕೊಂಡು ಮದುವೆಯ(ಯಾದ) ಗಂಡನನ್ನು ಮನ ಬಂದಂತೆ ಬಿಟ್ಟು ಹೋಗುವುದು ಭಾರತ ಸಂಸ್ಕೃತಿಯ ಗೃಹಸ್ಥ ಧರ್ಮಕ್ಕೆ ಸ್ವಾಭಾವಿಕವೆ, ಸಹಜವೆ; ಪ್ರಾಕೃತಿಕವೆ ? ಅಕ್ಕನಂತಹ ಹಿರಿಯರು ಈ ಅಪಾ ಮಾರ್ಗವ ತೋರಿದರೆ ಲೋಕದ ಸಾಮಾನ್ಯ ಜನತೆಯ ಗತಿಯೇನು ?....ಮದುವೆ ಗಾಗಿ ಮೊದಲೇ ಹಾಕಿಕೊಂಡ ಮೂರು ಒಪ್ಪಂದಗಳೇ ವಿನಹ, ಮದುವೆಯಾದನಂತರ ಮೂರು ಒಪ್ಪಂದಗಳ ಪರೀಕ್ಷೆಯಲ್ಲ; ಇದು ಅನವಶ್ಯ ; ಅನವಸರ.... ಅಕ್ಕನ ಮದುವೆಯ ಮಾತು ಮನವೊಪ್ಪದ ಮಾತು....; ಇತ್ಯಾದಿ.

'ಅಕ್ಕನ ಬಾಳು ಮತ್ತು ಸಾಹಿತ್ಯ' ಎಂಬ ಶಿರೋನಾಮೆಯುಳ್ಳ ಈ ಹೊತ್ತಿಗೆ ಯಲ್ಲಿನ ಮೊದಲ ಭಾಗದಲ್ಲಿ ೨೨ ಉಪಭಾಗಗಳೂ, ದ್ವಿತೀಯ ಭಾಗದಲ್ಲಿ ೩೧ ವಿಷಯವಿಭಾಗಗಳೂ ಇರುತ್ತವೆ. ಎರಡನೆಯ ಭಾಗವು ಮಹಾಸ್ವಾಮಿಯವರಿಂದ ಸಂಪಾದಿತವಾದುದರಿಂದ ಅರ್ಥವತ್ತಾದ ವಿವರಣೆಯನ್ನು ಕೊಟ್ಟಿರುವ ಪ್ರಥಮ ಭಾಗವನ್ನು ಯಥಾಮತಿ ಸಮೀಕ್ಷಿಸೋಣ. ಬಹಳ ಮಟ್ಟಿಗೆ ಸ್ವಾಮೀಜಿಯವರ ಪದಪುಂಜಗಳನ್ನೇ ಉದ್ಧರಿಸಿದರೆ, ಅವರು ನೀಡಿರುವ ಅಂಕಿ—ಅಂಶಗಳನ್ನೇ (facts and figours) ಓದುಗರ ಮುಂದಿಟ್ಟರೆ ಸಮೀಕ್ಷೆ ಹೆಚ್ಚು ಪುಷ್ಟಿಕರವೆನಿಸೀತು!

## ಅಕ್ಕನ ಬಾಳು

ಅಕ್ಕನ ಜೀವನವು ಮುಖ್ಯವಾಗಿ ಎರಡು ಬಗೆಯಾಗಿದೆ. ಒಂದು ಆಧ್ಯಾತ್ಮಿಕ; ಇನ್ನೊಂದು ಸಾಹಿತ್ಯಾತ್ಮಕ.

"ಅಜ ಕೋಟಿ ವರುಷದವರೆಲ್ಲರೂ ಹಿರಿಯರೇ ?........ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು", 'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ...."—ಚನ್ನಬಸವಣ್ಣನವರ ಈಮೇಲಿನ ವಚನಗಳಿಂದ ವಚನ ವಾಙ್ಮಯ ಹಾಗು ಆಧ್ಯಾತ್ಮಿಕ ಪ್ರಪಂಚಗಳಲ್ಲಿ ಅಕ್ಕನಿಗೆ ಸರಿದೊರೆಯಾದ ಸ್ಥಾನ ಲಭ್ಯವಾಗಿರುವುದನ್ನು ಶ್ರೀಗಳವರು ಗುರ್ತಿಸಿ ತೋರಿಸಿರುವರಲ್ಲದೆ, ಅವಳ ಜೀವನಾವ ಲೋಕನವು (ಅವಳ) ವಚನಗಳಿಂದ ಮಾತ್ರವೇ ತೃಪ್ತಿಕರವಾಗಿ ತುದಿಗಾಣಬಲ್ಲು ದೆಂದು ಸಮರ್ಥಿಸಿದ್ದಾರೆ ಈ ಕೃತಿಯುದ್ದಕ್ಕೂ.

## ಒಳ ಬಾಳು

.....ಮೊದಲು ತನ್ನ ವ್ಯಕ್ತಿತ್ವವನ್ನೇ ತಾನು ಗುರ್ತಿಸಿಕೊಳ್ಳದವನು ಎರಡನೆಯದಿನ್ನೇನರಿಯ ಬಲ್ಲನು ? .... ಗ್ರೀಕರಾದರೂ 'ನಿನ್ನನರಿತುಕೋ' ಎಂದು ಹೇಳುವರು. ನಾನು ಎಂಬುದಕ್ಕೆ ಜಡವಾದ ಜಗತ್ತಾಗಲಿ, ಪಂಚಭೂತಾತ್ಮಕ ದೇಹ

ವಾಗಲಿ, ಅಂತಃಕರಣ ಚತುಷ್ಟಯವಾಗಲಿ ಲಕ್ಷ್ಯವಾಗಲಾರವು. ಇವುಗಳನ್ನೆಲ್ಲ ವ್ಯಾಪಿಸಿಕೊಂಡು ಇವುಗಳನ್ನು ಮೀರಿ ಆಚೆಗಿರುವ ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಚೈತನ್ಯವೇ ನಾನು. ಇದನ್ನರಿಯಲು ಹವಣಿಸಿ ಹೆಣಗಿದ ಜೀವನವೇ ಆಧ್ಯಾತ್ಮ ಜೀವನ ....

ಈ ಪ್ರಕರಣದಲ್ಲಿ ನಾನಾರು? ಅಧ್ಯಾತ್ಮ ಎಂದರೇನು?.... ಎಂಬ ಮುಖ್ಯ ವಿಷಯಗಳ ಸೂತ್ರರೂಪವಾದ ವಿವರಣೆ (definitions) ಗಳ ಮೂಲಕ ಮಾರ್ಗದರ್ಶನ ಮಾಡಿದ್ದಾರೆ.

"....ಆತ್ಮಸುಖದ ಮುಂದೆ ವಿಷಯ ಸುಖವು ಅಮೃತದ ಮುಂದೆ ಆಮ್ಲ ವಿದ್ದ ಹಾಗೆ. ಅಂತರಂಗದಲ್ಲಿ ಆತ್ಮಾನಂದದ ಸೆಲೆ ಒಮ್ಮೆ ಒಡೆಯಿತೆಂದರೆ ಪ್ರಾಪಂಚಿಕ ಕ್ಷಣಿಕ ಬಯಕೆಗಳಿಗೆ ಆತನು (ಆದರ್ಶಜೀವನು) ಬಾಯ್ನೀರು ಕರೆಯನು. ಮಾಯದ ಮಾಟಕ್ಕೆ ಮೈಯೊಡ್ಡನು, ಕಾಯದ ಕಾಟಕ್ಕೆ ಮನಸೋಲನು" –ಎಂಥ ಸೊಗಸಾದ ವಿಷಯ ವಿಶ್ಲೇಷಣೆಯಿದು! ಸಾಮಾನ್ಯರಿಗೂ ಮನವರಿಕೆಯಾಗುವ ರೀತಿಯಲ್ಲಿ ಗೂಢ ವಿಷಯಗಳನ್ನು ಸುಲಭವಾದ ಮಾತುಗಳಲ್ಲಿ ತಿಳಿಸುವ ಯತ್ನನಡೆಸಿದ್ದಾರೆ; ಯಶಸ್ವಿಯಾಗಿದ್ದಾರೆ.

ಅಕ್ಕಗಳ ಆ ಆಧ್ಯಾತ್ಮಿಕ ಜೀವನಾಂಬುಧಿಯ ಬೆಡಗನ್ನು ಕಾಣಬೇಕೆಂಬುದೇ ಈ ಬರಹಗಾರನ ಉದ್ದೇಶ–ಎಂದು ತಮ್ಮ ಪವಿತ್ರ ಗುರಿಯತ್ತ ನಮ್ಮ ಗಮನವನ್ನು ಸೆಳೆದಿದ್ದಾರೆ.

**ಅಕ್ಕನ ಹುಟ್ಟು**

....ಆಧ್ಯಾತ್ಮಿಕ ಶಿಶುವಾಗದ ಹೊರತು ಆತ್ಮಾನಂದವನ್ನು ಅನುಭವಿಸಲು ಸಾಧ್ಯವಿಲ್ಲ.... ಈತನು ಎಲ್ಲ ವಿಷಯ ವಾಸನೆಯುನ್ನಳಿದು ಆತ್ಮವಾಸನೆಯಿಂದ ಜನಿಸಬೇಕು. ಎಲ್ಲ ಅವಯವಗಳೂ ಆತ್ಮನೋಟ, ಆತ್ಮಧ್ವನಿ, ಆತ್ಮಸ್ಪರ್ಶ, ಆತ್ಮತೃಪ್ತಿಗಳಿಂದ ಕೂಡಿಕೊಂಡಿರಬೇಕು. ಹೀಗೆ ಆಧ್ಯಾತ್ಮಿಕರಸದಿಂದ ಪರಿಪೂರ್ಣವಾದ ಪರಿಪುಷ್ಟವಾದ ಅಂಗನಾಗಿ, ಗುರುವಿನಿಂದ ಜನಿಸುವುದೇ ಅಧ್ಯಾತ್ಮದ ಹುಟ್ಟು. ಈ ಹುಟ್ಟನ್ನು ಸಾಧಿಸಿದಳು ಆ ಶರಣೆ ಮಹಾದೇವಿ....ಎಂದು ವಿವರಿಸಿ, "ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ...." ಎಂಬ ಅಕ್ಕನ ವಚನವನ್ನು ಸಮನ್ವಯಿಸಿದ್ದಾರೆ.

**ಅಕ್ಕನ ಬೆಳವಣಿಗೆ**

....ಆಧ್ಯಾತ್ಮಿಕ ಶಿಶುವಾದರೂ ಗುರುಗಳ, ಮಹಾನುಭಾವಿಗಳ ಆತ್ಮಜ್ಞಾನಾದಿ ಆಹಾರದಿಂದಲೇ ಬದುಕಿ ಬಾಳಬೇಕು; ಉಳಿದು ಬೆಳೆಯಬೇಕು '....ಅನ್ನಂ ಬ್ರಹ್ಮೇತಿ ವಿಜಾನಿಯಾತ್' ಎಂಬ ಶ್ರುತಿಯಂತೆ ಈ ಲೌಕಿಕ ಜೀವನು ಬದುಕಲು ತಾಯಿಯ ಹಾಲು, ಹಸುವಿನ ತುಪ್ಪ, ಕಬ್ಬಿನ ಸಕ್ಕರೆಗಳೇ ಬ್ರಹ್ಮ

ಸ್ವರೂಪವಾಗಿದ್ದರೆ, ಆಧ್ಯಾತ್ಮಿಕ ಜೀವನಿಗೆ ಗುರುವಿನ ಜ್ಞಾನಾಮೃತವೆಂಬ ಹಾಲು, ಅದರಿಂದ ತನ್ನಲ್ಲಿ ಜನಿಸುವ ಆತ್ಮವಾಸನೆಯು ಕಂಪುದುಪ್ಪ, ಆತ್ಮಾನಂದ ಅಥವಾ ಸಮರಸಾನಂದವೆಂಬ ಸವಿಸಕ್ಕರೆ ಇವೇ ಅನ್ನರೂಪ ಬ್ರಹ್ಮಗಳಾಗಿವೆ.

—ಈರೀತಿ ಲೌಕಿಕಾಲೌಕಿಕ ಬೆಳವಣಿಗೆಯ ತಾರತಮ್ಯವನ್ನು "ಬೆಳೆದೆನು.... ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆ...." ಎಂಬ ಅಕ್ಕನ ವಚನದೊಂದಿಗೆ ಮೇಳವಿಸಿ ಸ್ಪಷ್ಟಪಡಿಸಿದ್ದಾರೆ.

**ಅಕ್ಕನ ಮದುವೆ**

"........ಜೀವನದಲ್ಲಿ ಒಂದು ವಿಶಿಷ್ಟ ಸುಖರಸವನ್ನು ಪಡೆಯಬಹುದಾದರೆ ಅದು ಸತಿ–ಪತಿಯಲ್ಲಿಯೆ. ಆ ಅಚ್ಚೊತ್ತಿದಂತಹ ಸುಖವು, ತಾಯಿ-ಮಗು, ಗುರು ಶಿಷ್ಯ ಮೊದಲಾದ ಇನ್ನಾವ ಸಂಬಂಧದಲ್ಲಿಯೂ ಸಿಕ್ಕಲಾರದು. ಆದುದರಿಂದಲೇ ನಮ್ಮಲ್ಲಿ ಶರಣಸತಿ ಲಿಂಗಪತಿ ಎಂಬ ಉತ್ಕೃಷ್ಟವಾದ ಉದಾರವಾದ ತತ್ತ್ವವನ್ನು ನಮ್ಮ ಪೂರ್ವಜರು ತಂದು ತುಂಬಿದ್ದಾರೆ....ಕನ್ಯೆ ಮೆಚ್ಚಿದ ವರನೇ ಅವಳ ಸೌಭಾಗ್ಯ ಸ್ವರೂಪನು. ಆತನಿಗೆ ಅವಳನ್ನು ಕೊಟ್ಟು ಬಿಡಬೇಕು. ಅದೇ ಸುಖವಿವಾಹ. ಅದು ವಿರುದ್ಧವಾದರೆ ಅದೇ ವಿಷಮ ವಿವಾಹವಾಗಿ ಪರಿಣಮಿಸುವುದು. ಕನ್ಯೆ ಧೀರಳಾದರೆ ಇದನ್ನೊಪ್ಪಳು...."

—ಇಲ್ಲಿ ಆಧ್ಯಾತ್ಮಿಕ (Spiritual) ಹಾಗೂ ಕಾವ್ಯ ಪ್ರಜ್ಞೆ (Poetic conciousness)ಗಳ ಜೊತೆಗೆ ಶ್ರೀಗಳವರಿಗಿರುವ ಸಾಮಾಜಿಕ ಪ್ರಜ್ಞೆ (Social concuiosness) ಕೂಡ ನಮಗೆ ಮನದಟ್ಟಾಗುತ್ತದೆ.

ಇಂತಹ ಮನವೊಲಿದ ಗಂಡನನ್ನು ವರಿಸುವ ಸನ್ನಿವೇಶ ಅಕ್ಕನಿಗೆ ಬಂದೊದಗಿದುದನ್ನೂ, ಆಕೆಯು ತಾಯಿ-ಗೆಳತಿಯರೊಂದಿಗೆ ತನ್ನಳಲ ತೋಡಿಕೊಂಡ ಬಗೆಯನ್ನೂ, ತನ್ನ ಸ್ವಾಮಿ ಮೈದೋರದಿರಲು ಆಕೆಗೆ ಒದಗಿದ ವಿರಹ ವೇದನೆಯನ್ನೂ "ಸಾವಿಲ್ಲದ ಕೇಡಿಲ್ಲದ...., ಗಿರಿಯಲ್ಲದೆ....ಚನ್ನಮಲ್ಲಿಕಾರ್ಜುನಯ್ಯ, ನಾಹುಟ್ಟಿದೊಡನೆ....ಲಿಂಗಸ್ವಾಯತವ ಮಾಡಿದನಾಗಿ...., ಒಮ್ಮೆ ಕಾಮನ ಕಾಲ ಹಿಡಿವೆ.... ....ಎಲ್ಲರಿಗೆ ಹಂಗಿತಿಯಾದೆನವ್ವಾ, ಅರಿಸಿನವನೇ ಮಿಂದು...., ಕಳವಳದ ಮನವು ತಲೆಕೆಳಗಾದುದವ್ವಾ ...., ಬಂಜೆ ಬೇನೆಯರಿಯಳು...., ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದು ಕನಸು ಕಂಡೆ...., ಉದಯದಲೆದ್ದು ನಿಮ್ಮ ನೆನೆವೆನಯ್ಯ...." ಈ ವಚನಗಳ ಮೂಲಕ ಅಭಿವರ್ಣಿಸಿದ್ದಾರೆ.

**ಕೌಶಿಕನ ಕಣ್ಣು**

ಮಲ್ಲಿಕಾರ್ಜುನನಲ್ಲಿ ತಲ್ಲೀನಳಾದ, ಮೂಜಗವನ್ನೇ ಮೋಹಗೊಳಿಸುವ ಅಕ್ಕನನ್ನು ಅಂದು ಊರೊಳು ವೈಹಾಳಿಗೆ ಬಂದ ಕೌಶಿಕನು ಕಂಡು, ಮಾರನ

ಅರಳಂಬಿಗೆ ತುತ್ತಾದನು. ....ದಂಡನೀತಿಯಿಂದ ದೋರ್ಬಲದಿಂದ ಒಂದು ರಾಜ್ಯವನ್ನೇ ಆಳುವ ಅಳುಕಿನಲ್ಲಿಡುವ ಆ ಅರಸನು, ಅನೀತಿಯಿಂದ ಆತ್ಮಬಲಹೀನತೆಯಿಂದ ಒಬ್ಬ ಅಬಲೆಯನ್ನು ಸಹ ಆಳದಷ್ಟು ಅಳುಕಿಸದಷ್ಟು ಅಬಲನಾದನು....ಆತ್ಮಬಲಕ್ಕೆ ಇಂತಹ ಕ್ಷಾತ್ರಬಲವು ತಲೆ ತಗ್ಗಿಸಲೇಬೇಕು.... ಅವಳು ಅಂಗದಿಂದ ಅಬಲೆಯಾಗಿದ್ದರೂ, ಆತ್ಮಬಲದಿಂದ ಸಬಲೆಯಾಗಿದ್ದಳು. ಅಂತಹ ಆತ್ಮವೀರಳ ಕೆಚ್ಚೆದೆಯ ಮುಂದೆ ಕೌಶಿಕ (ಗೂಬೆ) ಬಂದರೇನು ? ಕೇಸರಿ ಬಂದರೇನು ? ಭವಿಯಾದ ಕೌಶಿಕದೊರೆಯನ್ನು ಕಣ್ಣೆತ್ತಿ ನೋಡದ ಮಾದೇವಿಯನ್ನು ಕುರಿತು ತಾಯಿಯು-ಮಗಳೇ ! ಭವಿಯನೊಲ್ಲದಿದ್ದರೆ ಭಕ್ತನನ್ನಾದರೂ ಮದುವೆಯಾಗು. ಹೆಣ್ಣುಮಕ್ಕಳಿಗೆ ಪತಿಯೇ ಪರದೈವ....ಎಂದು ಮುಂತಾಗಿ ಉಪದೇಶ ಮಾಡುವಳು. ಅದನ್ನು ಕೇಳಿ ಅಕ್ಕನು-ತಾಯಿಾ,.... ತಮಗಿಲ್ಲದ ಈ ಲೋಕದ ಗಂಡರು ನನಗೇನು ಕೊಡಬಲ್ಲರು ? ಮುಂದೆ ಅವರು ಕೊಡುವದಿರಲಿ, ನೀವೀಗ ಕೊಡುವ ಅನ್ನ-ಬಟ್ಟೆಗಳೂ ಬೇಡ ;....ಇದೋ ತೆಗೆದುಕೋ ನಿನ್ನ -ಬಟ್ಟೆಗಳನ್ನು ; ಉಚ್ಚಿಕೋ ನಿನ್ನ ಅಲಂಕಾರಗಳನು—ಎಂದು ಆಚಣದಲ್ಲಿಯೇ ಉಟ್ಟ ಉಡಿಗೆಯನ್ನೂ ತೊಟ್ಟ ತೊಡಿಗೆಗಳನ್ನೂ ತೆಗೆದೊಗೆದು ಲಗ್ನಕ್ಕೆ ಒಪ್ಪದೆ ನಗ್ನಳಾಗಿ ಹೊರಟು, ಶೋಕಿಸುವ ತಾಯನ್ನೂ ಉಚಿತ ವಚನಗಳಿಂದ ಸಂತೈಸಿ, ಎಲ್ಲರಿಗೂ ನಮಸ್ಕರಿಸಿ....ಬಲಾತ್ಕಾರದಿಂದ ಉಡುತಡಿಯ ಪುಣ್ಯವೇ ಒಂದು ಮೂರ್ತಿಮತ್ತಾಗಿ ಹೋಗುವಂತೆ ಹೋಗಿಬಿಡುವಳು....

—ಈ ಭಾಗದಲ್ಲಿ ಶ್ರೀಗಳವರ ಕಥೆ ಹೇಳುವ ಶೈಲಿ ಎಷ್ಟು ಹಿತಮಿತವಾಗಿ, ಮನೋಹರವಾಗಿ ಇರುತ್ತದೆಂಬುದು ಸಹೃದಯರಿಗೆ ಗೋಚರವಾಗದಿರದು. ಇಲ್ಲಿನ ಕಥಾ ವಿಷಯಕ್ಕನುಗುಣವಾಗಿ ಹೆಣೆದಿರುವ ಲೋಕಾನುಭವ (ಹೆಣ್ಣು ಮಕ್ಕಳಿಗೆ ಕೆಡುಕು—ಕೆಟ್ಟ ಹೆಸರು ಒದಗಿಬಂದೀತೆಂದು ಹೆದರಿ ಸಾಂತ್ವನಗೊಳಿಸಲು ಯತ್ನಿಸಿ, ವಿಫಲರಾದಾಗ ತುಂಬುದುಃಖದಿಂದ ಶೋಕಿಸುವ ತಾಯಿ—ಕೆಳದಿಯರ ಪ್ರಲಾಪಾದಿ ಚಿತ್ರಣ) ಎಂತಹವರನ್ನಾದರೂ ಬೆರಗುಗೊಳಿಸುವಂತೆ ಒಡಮೂಡಿದೆ. ಇಲ್ಲಿ "ಅಯ್ಯ ಮೂಲಾಹಂಕಾರವಿಡಿದು ಕುಲಭ್ರಮೆ,....ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತ್ತಯ್ಯ ಚನ್ನಮಲ್ಲಿಕಾರ್ಜುನ, ಹಸಿವಾದಂತೆ ಭಿಕ್ಷಾನ್ನಗಳುಂಟು...., ಬೆಟ್ಟದ ಮೇಲೊಂದು...., ಕಿಡಿಕಿಡಿ ಕೆದರಿದಡೆ...., ಎನ್ನ ಮನವ ಮಾರುಗೊಂಡನವ್ವಾ....", ಈ ವಚನಗಳನ್ನು ಸಂಯೋಜಿಸಿದ್ದಾರೆ.

**ಕಾನನ ಜೀವನ**

ಮಹಾದೇವಿಯು ಮನೆಯನ್ನು ಬಿಟ್ಟು ಕಾನನವನ್ನು ಸೇರಿದ್ದರೂ ಅವಳ ಮನಸ್ಸು ಮಾತ್ರ ಕಾಡನ್ನು ಸೇರಿರಲಿಲ್ಲ. ಅದು ಚೆಲುವ ಚನ್ನಮಲ್ಲಿಕಾರ್ಜುನನಲ್ಲಿ ಸೇರಿದ್ದಿತು....ಎದುರಿಗೆ ತಿಳಿತಿಳಿಯಾಗಿ ಹರಿಯುವ ಭದ್ರೆ. ಚೆನ್ನಾಗಿ ದಿಟ್ಟಿಸಿ

ಮನಸ್ಸಿನಲ್ಲಿ ಹೀಗೆ ಯೋಚಿಸುತ್ತಾಳೆ : ಇದು ಸಾಗರವನ್ನು ಸೇರಬೇಕೆಂಬ ಭದ್ರೆ. ನಾನು ಮಲ್ಲಿಕಾರ್ಜುನನ್ನು ಕೂಡಬೇಕೆಂಬ ರುದ್ರೆ. 'ಸಮಾನ ಶೀಲ ವ್ಯಸನೇಷು ಸಖ್ಯಂ, 'ಎಂಬಂತೆ ಇಂದು ರುದ್ರೆ-ಭದ್ರೆಯರ ಸಮಾಗಮದಲ್ಲಿ ಒಂದು ಸಖ್ಯವಿದೆ, ಸ್ನೇಹವಿದೆ—ಎಂದು ಯೋಚಿಸುತ್ತ ಸುತ್ತಲೂ ಇಣಿಕಿಸುತ್ತಾಳೆ....ಪ್ರಕೃತಿಯ ನೋಟದಿಂದ ಪೂಜೆಗೆ ಮನವೆಳಸಿ ಅನುವಾಗಿದ್ದಾಳೆ. ತೊರೆಯ ನೀರೊಡನೆ ತನ್ನ ಮನೋಜಲವನ್ನು ಬೆರಸಿ ಲಿಂಗಕ್ಕೆ ಮಜ್ಜನವ ಮಾಡಿದ್ದಾಳೆ. ವನಕುಸುಮಗಳೊಡನೆ ತನ್ನ ಸುಗುಣ ಕುಸುಮಗಳನ್ನೂ ಧರಿಸಿದ್ದಾಳೆ. ಹಕ್ಕಿಗಳ ಹಾಡಿನೊಡನೆ ತನ್ನ ಅಕ್ಕರೆಯ ಅಮರವಾಣಿ(ವಚನ)ಯನ್ನು ಬೆರಸಿ ಹಾಡಿದ್ದಾಳೆ....

—ಇಲ್ಲಿನ ಶ್ರೀಗಳವ ಕಲ್ಪನೆ ಆಸ್ವಾದ್ಯಕವಾದುದು; ಅತ್ಯಂತ ಸುಂದರವಾದುದು ತದನುಗುಣವಾಗಿಯೇ "ಸಜ್ಜನಳಾಗಿ ಮಜ್ಜನಕ್ಕೆರೆವೆ,....ಆಲಿಸೆನ್ನ ಬಿನ್ನಪವ.... ಅಯ್ಯಾ ನೀ ಕೇಳದರೆ ಕೇಳು....ಆವಾಗಳೂ ಎನ್ನ ಮನ ಉದರಕ್ಕೆ ಹರಿವುದು...., ಪುಣ್ಯಪಾಪಂಗಳನರಿಯದ ಮೊದಲು...., ಚಲಿಮಿಲಿಯೆಂದೋದುವ ಗಿಳಿಗಳಿರಾ.... ಅರಸಿ ಕೊಳಲಿದರಿಲ್ಲ...."ಎಂಬ ಅಕ್ಕನ ಯುಕ್ತ ವಚನಗಳನ್ನು ಕೋದು....ಸಂಗನ ಬಸವಣ್ಣನ ಶ್ರೀಪಾದವ ಕಂಡು ಬದುಕುವೆನು....ಎಂಬ ಅವಳ ನಿರ್ಧಾರದೊಂದಿಗೆ ಪ್ರಕೃತ ಅಧ್ಯಾಯವನ್ನು ಮುಗಿಸಿದ್ದಾರೆ.

### ಕಲ್ಯಾಣದ ಪಯಣ

ಅಕ್ಕನು ಇಂದು ಕಲ್ಯಾಣ ಮಾರ್ಗದಲ್ಲಿ ಕಾಲಿಟ್ಟಿದ್ದಾಳೆ. ಅಂದು ನೋಡುವವರಿಗೆ ಕಲ್ಯಾಣವೆಂಬುದು ಊರಲ್ಲ; ಅಕ್ಕನ ವಿವಾಹಕ್ಕಾಗಿ ರಚಿಸಿದ ಕಲ್ಯಾಣ ಮಂಟಪ. ಎಷ್ಟೋ ಶರಣೆಯರು ಅಕ್ಕರೆಯಿಂದ ಅಕ್ಕನಿಗೆ ಒಳ್ಳೊಳ್ಳೆ ವಸ್ತ್ರಾಭರಣಗಳನ್ನು ತಂದು ಕೊಡಹೋದರೂ, ಅಕ್ಕನು ಮುಟ್ಟುವಳೆ ?....ಬಹುದಿನದ ಬಯಕೆ ಇಂದು ಕೈಗೂಡಿತು. ಅಕ್ಕನ ಆನಂದಕ್ಕೆ ಪಾರವೇ ಇಲ್ಲದಂತಾಯಿತು.

—ಇಲ್ಲಿಯೂ ಶ್ರೀಗಳವರ ಕಲ್ಪನೆ, ಮದುವೆಯ ವಿಜೃಂಭಣೆ, ಹೆಣ್ಣು ಮಕ್ಕಳು ಒಡವೆಗಳ ಕೊಡುವ ಸಂದರ್ಭೋಚಿತ ನಡೆವಳಿ....ಎಷ್ಟು ಭವ್ಯವಾದುದು. "ಸಂಗದಿಂದಲ್ಲದೆ....ಕಲ್ಯಾಣವೆಂಬುದಿನ್ನಾರಿಗೂ....,ಈ ವಚನಗಳು ಪ್ರಕೃತ ಪ್ರಕರಣದಲ್ಲಿ ಸೇರಿವೆ.

### ಮನೆ (ನ) ದುಂಬಿಸುವ ಕಾರ್ಯ

....ನಮ್ಮ ಮಹಾದೇವಿಯು ಮಲ್ಲಿಕಾರ್ಜುನನನ್ನೇ ತನ್ನ ಮನೆಗೆ (ಮನಕ್ಕೆ ಬರಮಾಡಿಕೊಳ್ಳುತ್ತಾಳೆ....ಅಕ್ಕನಿಗೆ ಎಂದೂ ಇಲ್ಲದ ಸೀಮಾತೀತವಾದ ಸಂತಸದ ದಿನ....ಏಕಾಂತ ವಾಸದಲ್ಲಿ ಮಹಾದೇವಿಯು ಮಲ್ಲಿಕಾರ್ಜುನನಿಗೆ ತನಗಾದ ಆನಂದ

ವನ್ನೂ ಆತನೊಲ್ಮೆಗಾಗಿ ಹಿಂದೆ ಕಷ್ಟಪಟ್ಟ ತನ್ನ ಪರಿಯನ್ನೂ ಹೇಳಿಕೊಳ್ಳಲು ಆರಂಭಿಸಿದ್ದಾಳೆ....ತಮ್ಮಿರ್ವರ ಒಲುಮೆಯನ್ನೂ ದೃಢಪಡಿಸುತ್ತಾಳೆ.

—ಇಲ್ಲಿ ಶ್ರೀಗಳವರು ಕೊಟ್ಟಿರುವ ಉಪಮೆಗಳು (ಸೂಜಿಯನ್ನು ಸೂಜಿಗಲ್ಲೆಳೆವಂತೆ....ಮುಂತಾಗಿ), ಮನೆ(ನ) ದುಂಬಿಸುವಿಕೆಯ ಸುಂದರ ಕಲ್ಪನೆ, 'ನೀನು ಕರುಣಿಯೆಂಬುದು ನಾನು ಬಲ್ಲೆ–ನೀನಿರಿಸಿದಂತಿಪ್ಪೆ-ನೀನೇ ಬಲ್ಲೆ'-ಎಂಬ ಆಕರ್ಷಣೀಯ ಮಾತುಗಳನ್ನು ಗುರ್ತಿಸಿರುವುದರ ಜಾಣ್ಮೆ ನಮ್ಮನ್ನು ತಲೆದೂಗಿಸದಿರವು. "ಇಂದೆನ್ನ ಮನೆಗೆ ಗಂಡ ಬಂದಿಹ....,ಅರಲುಗೊಂಡ ಕೆರೆಗೆ...., ಹಗಲು ನಾಲ್ಕು ಜಾವ...., ತನು ನಿಮ್ಮ ರೂಪಾದ ಬಳಿಕ...., ನಾನು ನಿನಗೊಲಿದೆ...." ಎಂಬೀ ವಚನಗಳು ಈ ಪ್ರಸಂಗದಲ್ಲಿ ಯೋಜಿತವಾಗಿವೆ.

**ಅಕ್ಕನ ಬಂಧು–ಬಳಗ :**

ಶ್ರೀ ಜ. ಚ. ನಿ. ಅವರು ಬಂಧುಗಳೆಂದರೆ ಯಾರು ಎಂಬುದನ್ನು ಮನನಂಬುಗುವ ರೀತಿಯಲ್ಲಿ ನಿರ್ದೇಶಿಸಿರುವರಲ್ಲದೆ, ಅಕ್ಕನ ಬಾಂಧವರನ್ನು ಅವಳ ಮಾತಿನಲ್ಲಿಯೇ '....ಅವ್ವ ನೀಲಮ್ಮನ...., ಎನ್ನಂತೆ ಪುಣ್ಯಗೈದವರುಂಟೆ ? ...." ವಚನಗಳ ಮೂಲಕ ಗುರುತಿಸಿ ನಮಗೂ ವಿವರಿಸಿದ್ದಾರೆ.

ಅಕ್ಕನ ತವರೂರು ಕಲ್ಯಾಣ. ಅಕ್ಕನ ಮನೆ ಬಸವಣ್ಣನವರ ಮಹಾ ಮನೆ. ತಾಯಿ ನೀಲಮ್ಮ—ತಂದೆ ಬಸವಣ್ಣ. ಅಣ್ಣ ಕಿನ್ನರಯ್ಯ, ಪ್ರಭು ಮಾವ; ಗಂಡ ಮಲ್ಲಿಕಾರ್ಜುನ. ಉಳಿದ ಶಿವಶರಣ—ಶರಣೆಯರೆಲ್ಲ ಬಾಂಧವರು.

**ಅಕ್ಕನ ಬಂಧು ವಾತ್ಸಲ್ಯ :**

ತಾನು ಬಹುದಿನ ತಿರುಗಿ, ತಪಿಸಿ ತೊಳಲಿ ಬಳಲಿ ಬೆಂಡಾದರೂ ದೊರೆಯದ ಗಮ್ಯಗುರಿಯನ್ನು ಇಂದು ಈ ಶರಣರು ಹಸ್ತಗತ ಮಾಡಿಕೊಟ್ಟುದಕ್ಕಾಗಿ ಅಕ್ಕನು 'ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ' ಎಂದು ಹೇಳಿ ಅನ್ಯಾದೃಶವಾದ ತನ್ನ ಬಂಧುವಾತ್ಸಲ್ಯವನ್ನು ತೋರ್ಪಡಿಸಿದ್ದಾಳೆ.

—ಇಲ್ಲಿ ನಮ್ಮ ಸಂಸ್ಕೃತಿಯ ಪ್ರತೀಕಗಳಲ್ಲಿ ಒಂದಾದ—ಬಹುಮುಖ್ಯವಾದ—ಉಪಕಾರಸ್ಮರಣೆ (ಕೃತಜ್ಞತೆ) ಯರ್ಪಿಸಿರುವುದನ್ನು ಎತ್ತಿ ಹಿಡಿದು ತೋರಿದ್ದಾರೆ ಕೃತಿಕಾರರು. 'ಕಾಮನ ಗೆಲಿದೆನು ಬಸವಾ...., ಮರ್ತ್ಯಲೋಕದ ಭಕ್ತರ....,ಎಲ್ಲ ಎಲ್ಲವನರಿದು ...., ಬಸವಣ್ಣನ ಮನೆಯ...., ಒಡಲಿಲ್ಲದ ನುಡಿಯಿಲ್ಲದ ...." ಈ ವಚನಗಳು ಯುಕ್ತ ರೀತಿಯಲ್ಲಿ ಸೇರಿರುತ್ತವೆ.

**ಶ್ರೀ ಶೈಲ ಗಮನ :**

ಗಂಡನೂರಿಗೆ ಹೊರಡಲನುವಾದ ಮಹಾದೇವಿಯನ್ನು ಕಳುಹಲು ಎಲ್ಲ ಶರಣ-ಶರಣೆಯರೂ ನೆರೆದು ಬರುವರು. ಅವರನ್ನು ಕುರಿತು ಅಕ್ಕನು : .... ನಿಮ್ಮಿಂದ ಇಂತಹ ಬಾಳುವೆಗೆ ಬಂದೆ. ಶರಣರೇ ಮುಂದಾವರೂ ನಿಮ್ಮ ಮುಂಡೆಗೆ ಹೂವುತಾಪೆ

ನಲ್ಲದೆ ಹುಲ್ಲು ತಾರೆನು .... ಇಲ್ಲಿ ಇಡಿಯ ಸ್ತ್ರೀಸಮಾಜಕ್ಕೆ (ಬಾಳುವ) ಸಂದೇಶ ವನ್ನು ಶ್ರೀಗಳವರು ಗುರ್ತಿಸಿರುವುದಲ್ಲದೆ, ಶರಣರೊಂದಿಗಿನ ಅಗಲಿಕೆಯ ವೇದನೆ ಯನ್ನೂ ವಚನಗಳ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

**ಶ್ರೀ ಗಿರಿಯ ಆರೋಹಣ:**

ಶರಣರನಗಲಿ ಶ್ರೀಶೈಲಕ್ಕೆ ಬಂದ ಮಹಾದೇವಿಯು ಶ್ರೀ ಗಿರಿಯನೇರಿ ಚನ್ನ ಮಲ್ಲಿಕಾರ್ಜುನನ ಕೈವಿಡಿಯಲೆಳಸುವ ಸೊಗಸನ್ನೂ, ತನ್ನ ಚನ್ನನ ಚಲುವನ್ನು ನೋಡಿ ಆನಂದಿಸಿದ ರೀತಿಯನ್ನೂ ಅಕ್ಕನ 'ಮೂಲದ್ವಾರಂ ಬೇರವ....,ಹೊಳೆವ ಕೆಂಜೆಡೆಗಳ....,ಈ ವಚನಗಳನ್ನು ಉದ್ಧರಿಸಿ ವಿವರಿಸುತ್ತಾರೆ.

—ಇಲ್ಲಿ 'ಗಂಡಗಂಡರೆಲ್ಲರ ಹೆಂಡಹೆಂಡರಾಗಿ ಆಳುವ ಗುರುವನ ಕಂಡೆ' ಎಂಬ ಮಾತಿನಲ್ಲಿನ 'ಶರಣ ಸತಿ—ಲಿಂಗ ಪತಿ'ಯೆಂಬ ಸಿದ್ಧಾಂತ ಸತ್ಯವೆಂಬುದನ್ನೂ, 'ಜಗ ದಾದಿ ಶಕ್ತಿಯೊಳು ಬೆರಸಿ ಒಡನಾಡುವ' ಎಂಬಲ್ಲಿರುವ 'ಶಕ್ತಿವಿಶಿಷ್ಟಾದ್ವೈತ'ಮತದ ವೈಶಿಷ್ಟ್ಯವನ್ನೂ ನಮಗೆ ಸ್ಪಷ್ಟವಾಗಿತಿಳಿಯ ಪಡಿಸಿದ್ದಾರೆ.

**ಅಕ್ಕನ ಐಕ್ಯ :**

ಈ ಪ್ರಸಂಗದ ಪ್ರಾರಂಭದಲ್ಲಿ ಕರ್ಮವಾಸನೆಯನ್ನೂ ಅದರಿಂದಾಗುವ ಪರಿ ಣಾಮವನ್ನೂ ಎಂತಹವರಿಗೂ ತಿಳಿಯುವಂತೆ ಪ್ರಸ್ತಾಪಿಸಿರುವ ಶ್ರೀಗಳವರು 'ಎನ್ನ ಮಾಯದ ಮದವ....,ಕ್ರಿಯೆಯುಳ್ಳೊಡಂತೊಂದಾಸೆ....,ಅಂಗಸಂಗದಲ್ಲಿ....,ಲಿಂಗ ವೆನ್ನೆ ಲಿಂಗೈಕ್ಯವೆನ್ನೆ....'ಎನ್ನುವೀ ಅಕ್ಕಗಳ ವಚನಗಳ ಸಂಯೋಜಿಸಿ, ಮಹಾ ದೇವಿಯು ಮಲ್ಲಿಕಾರ್ಜುನನಲ್ಲಿ ಬೆರೆದ ಬಗೆಯನ್ನು ನಿರೂಪಿಸಿದ್ದಾರೆ.

**ಅಕ್ಕನ ಭಕ್ತಿ :**

ಇಲ್ಲಿ ಅಕ್ಕನ ನಿರಹಂಭಾವ ಭಕ್ತಿಗೆ "ಆಯುತ ಸ್ವಾಯುತ....,ಮತ್ತು ಬಸ ವಣ್ಣನ ಮನೆಯ ಮಗಳಾದ ಕಾರಣ...."ಎಂಬ ವಚನ, ನಿಷ್ಕಾಮ ಭಕ್ತಿಗೆ "ಅಯ್ಯಾ ನೀ ಕೇಳದಿರೆ ಕೇಳು ಕೇಳದಿರ್ದಡೆ ಮಾಣು...." ಎನ್ನುವ ವಚನ, ಅಹಿಂಸಾ ಭಕ್ತಿಗೆ "ಜಾಲಗಾರನೊಬ್ಬ ಜಲವ ಹೊಕ್ಕು...." ಎಂಬೀ ವಚನ, ಸರ್ವಾರ್ಪಣ ಭರಿತವಾದ ಅನನ್ಯ ಭಕ್ತಿಗೆ "ನಚ್ಚುಗೆ ಮನ ನಮ್ಮಲ್ಲಿ...." ಎಂಬ ವಚನ–ಇವನ್ನು ಉದ್ಧರಿಸಿರು ವರಲ್ಲದೆ, ಹರಿಹರ ಚಾಮರಸ ಸಿದ್ಧವೀರಣ್ಣೊಡೆಯರು ಕ್ರಮವಾಗಿ ಅವಳನ್ನು ಭಕ್ತಿ ಭರಿತೆ, ಭಕ್ತಿಯ ಬಳ್ಳಿ, ಭಕ್ತಿಯಭಾಗ್ಯ–ಎಂದು ಬಣ್ಣಿಸಿರುವುದನ್ನೂ ಓದುಗರ ಮುಂದಿಟ್ಟಿದ್ದಾರೆ.

**ಅಕ್ಕನ ಜ್ಞಾನ :**

ಅಕ್ಕನ ಜ್ಞಾನವು ಅಗಾಧವಾದುದು ; ಅದ್ವಿತೀಯ ವಾದುದು....ಅ ವ ಳ ಮಾತುಗಳು ತುಸು; ಅವುಗಳ ಬೆಳಗು ದೊಡ್ಡದು ....

—ಹೀಗೆಂದ ಸ್ವಾಮಿಜಿಯವರು ದ್ವೈತಿ, ಅದ್ವೈತಿ, ಹಠಯೋಗಿಗಳೇ ಮುಂತಾದ ದಾರ್ಶನಿಕರೊಡನೆ ಅಕ್ಕನ ಜ್ಞಾನವನ್ನು ತೂಗಿನೋಡಿ "ಶೀಲಶೀಲ ವೆಂತೆಂಬಿರಯ್ಯ...., ತನುಕರಗದವರಲ್ಲಿ...., ನಾಹಂ ಕೋಹಂ ಭ್ರಮೆ...., ವನವೆಲ್ಲ ನೀವೆ...., ಅರಿವು ಸಾಧ್ಯವಾಯಿತ್ತೆಂದು...., ಈಳೆ ನಿಂಬೆ ಮಾವು...." ಈ ವಚನ ಗಳನ್ನು ಉದಾಹರಿಸಿ, ಅಕ್ಕನವೇ ಆದ ಯೋಗಾಂಗ ತ್ರಿವಿಧಿಯ ಪದ್ಯಗಳಿಂದ ಯೋಗಿಯಾರು ? ನಿಜವಾದ ಯೋಗವಾವುದು ? ಅಕ್ಕನು ಆಚರಿಸಿದ ಯೋಗವೆಂತ ಹದು ?–ಎಂಬೀ ಪ್ರಶ್ನೆಗಳಿಗೂ ಉತ್ತರವಿತ್ತಿದ್ದಾರೆ. ಮತ್ತೂ ಅವಳ ಕೆಲವು ವಚನ ಗಳ ಮೂಲಕ ಅಕ್ಕನು 'ಶಿವಜ್ಞಾನ ಸಂಪನ್ನೆ', 'ಸ್ವಾನುಭವ ಸಾಗರ' ಎಂದು ಹರಿಹರ–ಸಿದ್ಧವೀರಣ್ಣೊಡೆಯರಿಂದ ಹೊಗಳಿಸಿಕೊಂಡುದು ನ್ಯಾಯವಾಗಿದೆಯೆಂದು ಸಮರ್ಥಿಸಿದ್ದಾರೆ.

**ಅಕ್ಕನ ವಿರತಿ :**

"ಸಂಸಾರವೆಂಬ ಹಗೆಯಯ್ಯ ತಂದೆ...., ಆವಾಗಲೂ ಎನ್ನ ಮನ-ಉದರಕ್ಕೆ ಹರಿವುದು ...., ಬಿಟ್ಟೆನೆಂದರೆ ಬಿಡದೀ ಮಾಯೆ...., ಚಿನ್ನಕ್ಕರಿಸಿನ....-ಮನೆ ಮನೆ ತಪ್ಪದೆ ...., ಕಾಯುಕರ್ರನೆ ಕಂದಿದರೇನು ?.... ಅರಿಯದವರೊಡನೆ...., ಭವಿಸಂಗ ವಳಿದು ...." ಅಕ್ಕನ ಈ ವಚನಗಳನ್ನು ಉದ್ಧರಿಸಿರುವ ಈ ಅಧ್ಯಾಯದಲ್ಲಿ ಗ್ರಂಥ ಕರ್ತರು ವಿರತಿ ಎಂದರೇನು ? ಅಕ್ಕನ ವಿರತಿ ಎಂತಹುದು ? ಎಂಬ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ಕೊಟ್ಟು ಅನೇಕರಿಗೆ ಸಹಜವಾಗಿರುವ ಸಂಶಯವನ್ನು ದೂರಮಾಡಿ ದ್ದಾರೆ. ಅವರೀನುಡಿಗಡಣವನ್ನು ಕೇಳಿರಿ :

"ವಿರತಿಯು ಆತ್ಮೋದ್ಧಾರಕ್ಕಾಗಿಯೇ ಹೊರತು ಅನ್ಯರ ವಿಡಂಬನೆಗಾಗಿ ಅಲ್ಲ ; ಆತ್ಮ ಅಹಂಕಾರಕ್ಕಲ್ಲ. ತನ್ನಂತೆ ಪರರನ್ನು ಬಗೆದು ಅವರ ಆಗುಹೋಗುಗಳನ್ನು ವಿಚಾರಿಸಿ ಅವರನ್ನೂ ತನ್ನ ಮಟ್ಟಕ್ಕೆ ಎಳೆದೊಯ್ಯಬೇಕು, ತನ್ನ ಸುಖದ ಲವಲೇಶ ವನ್ನಾದರೂ ಅವರಿಗೂ ನೀಡಬೇಕು. ತನ್ನಾತ್ಮದ ತಿಳಿವನ್ನು ಅವರಿಗೂ ತಿಳಿಸಬೇಕು. ಅದುವೇ ವಿರತಿ ...."

**ಅಕ್ಕನ ಮಾಯಾವಾದ :**

ಮಾಯೆ ಎಂದರೇನು ? ಎಂಬ ಪ್ರಶ್ನೆಗೆ ಉತ್ತರವನ್ನು ಓರೊರ್ವರೊಂ ದೊಂದು ತೆರನಾಗಿ ಹೇಳಿರುವುದನ್ನು ಪ್ರಸ್ತಾಪಿಸಿದ ಕೃತಿಕಾರರು 'ಅಕ್ಕನು ಎಲ್ಲಕ್ಕೂ ಮೂಲವಾದ ಅಜ್ಞಾನವೇ ಮಾಯೆಯೆಂದು ಪರ್ಯಾಯದಿಂದ ತಿಳಿಸುತ್ತಾಳೆ' ಎನ್ನು ವರು. "ಆವಾಗಳೂ ಎನ್ನ ಮನ ಉದರಕ್ಕೆ ಹರಿವುದು........, ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನ...., ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ....

ಬಿಟ್ಟೆನೆಂದರೆ ಬಿಡದೀ ಮಾಯೆ...., ಹರಿಯ ನುಂಗಿತ್ತು ಮಾಯೆ...." ಎಂಬ ಅವಳ ವಚನ ಮಾಲಿಯನ್ನುದ್ಧರಿಸಿ ಹೀಗೆ ಅಪ್ಪಣೆ ಕೊಡಿಸುತ್ತಾರೆ: ಮಾಯೆಯು ಯಾವ ದೇವ ಮಾನವರನ್ನೂ ಬಿಟ್ಟಿಲ್ಲ. ಅನ್ನಕ್ಕೊಳಗಾದವರೆಲ್ಲರೂ ಅದಕ್ಕೆ ಗುರಿ. ಅದನ್ನು ಕಳೆಯಬೇಕಾದರೆ ಅನ್ನದಲ್ಲಿರುವ ಪದಾರ್ಥತ್ವವನ್ನು ಕಳೆದು ಪ್ರಸಾದವನ್ನಾಗಿ ಮಾಡಿಕೊಂಡರೆ ಆ ಮಾಯೆಯು ತಾನೇ ಮಾಯವಾಗುತ್ತದೆ

**ಅಕ್ಕನ ಏಕೇಶ್ವರವಾದ :**

–ಏಕೇಶ್ವರವಾದವು ಸಂಕುಚಿತವಾದ ಸ್ವಾರ್ಥಯುತವಾದ ವಾದವೆಂದು ಕೆಲವರ ಅಭಿಪ್ರಾಯ. ಆದರೆ ಅದುವೇ ಸರ್ವ ಸಮತಾಭಾವಕ್ಕೂ ಒಕ್ಕೂಟಕ್ಕೂ ಮೂಲ ಬೀಜವೆಂದು ನಮ್ಮ ಶರಣರ ಅಭಿಪ್ರಾಯ.

ಇದಕ್ಕೆ ಸೂಕ್ತ ವಿವರಣೆ ಕೊಟ್ಟ ಶ್ರೀಗಳವರು "ಕಾಮ ಬಲ್ಲಿದನೆಂದರೆ ಉರುಹಿ ಭಸ್ಮವ ಮಾಡಿದ........, ನಚ್ಚುಗೆ ಮನ ನಿಮ್ಮಲ್ಲಿ ..." ಎಂಬೀ ಅಕ್ಕನ ವಚನಗಳನ್ನು ಆಯ್ದು ಶಿವನ ಸರ್ವೋತ್ಕೃಷ್ಟತ್ವವನ್ನೂ ಅಕ್ಕನ ಐಕ್ಯದ ಏಕೇಶ್ವರ ಪವಿತ್ರ ಮಂತ್ರ ಜಪವನ್ನೂ ಸ್ಪಷ್ಟೀಕರಿಸಿದ್ದಾರೆ.

**ಅಕ್ಕನ ಅಷ್ಟಾವರಣ ನಿಷ್ಠೆ :**

ಸಾಕಷ್ಟು ದೀರ್ಘವಾಗಿರುವ ಈ ಪ್ರಕರಣದಲ್ಲಿ ಎಂಟು ಆವರಣಗಳಾದ ಗುರು-ಲಿಂಗ-ಜಂಗಮ-ಭಸ್ಮ-ರುದ್ರಾಕ್ಷಿ-ಮಂತ್ರ-ಪಾದೋದಕ-ಪ್ರಸಾದಗಳೆಲ್ಲಕ್ಕೂ ಅಕ್ಕನ ವಚನಗಳನ್ನು ಕ್ರಮವಾಗಿ ಆಯ್ದು ಸಮನ್ವಯಿಸಿ ತಮ್ಮ ವ್ಯಾಖ್ಯಾನವನ್ನೂ ಸೂಕ್ತ ರೀತಿಯಲ್ಲಿ ಪವಣಿಸಿದ್ದಾರೆ.

**ಅಕ್ಕನ ಕಾವ್ಯಜೀವನ :**

ಅಕ್ಕನು ನಡೆದ ಆದರ್ಶ ಮಾರ್ಗದಂತೆಯೇ ಅವಳು ನುಡಿದ ಭಾಷೆಯೂ ಆದರ್ಶವಾಗಿದೆ.... ವ್ಯಾಮೋಹ ರಹಿತವಾದ ಉಚ್ಚ ಜೀವನದಲ್ಲಿ ಅಮೋಘವಾದ ಆತ್ಮಶಕ್ತಿಯು ತಲೆದೋರುತ್ತದೆ. ಆ ಆತ್ಮ ಶಕ್ತಿಯೇ ಅಮರವಾದ ಕವಿ ವಾಣಿಯಾಗಿ ಹೊರ ಹೊಮ್ಮುತ್ತದೆ.... ಹೀಗೆ ಜನಾಂಗದ ಜೀವನವನ್ನು ಮಾರ್ಗವಿಸುವುದೇ ಮಹಾಕಾವ್ಯ. ಅಂತಹ ಕಾವ್ಯವನ್ನು ಕಟ್ಟುವವನೇ ನಿಜವಾದ ಕವಿ; ಮಹಾಕವಿ. ....ನಮ್ಮ ಅಕ್ಕನು ಈ ಪಂಕ್ತಿಗೆ ಸೇರಿದವಳು. ಅವಳು ಮಹಾ ಋಷಿ ಕವಿಯಿತ್ರಿ.... –ಹೀಗೆ ಶ್ರೀಗಳವರು ಅಕ್ಕನ ಕಾವ್ಯ ಶಕ್ತಿಯ ಹೆಚ್ಚಳವನ್ನು ವಿವರಿಸುತ್ತಾ ತಮ್ಮನ್ನು ತಾವೇ ಮರೆಯುವುದು ಇಲ್ಲಿ ಕಂಡು ಬರುತ್ತದೆ. ಇನ್ನೊಂದು ಬಹು ಸುಂದರವಾದ ಪ್ರಬಂಧವೆನಿಸಬಲ್ಲುದಾಗಿದೆ.

"ನಿನ್ನ ಮನವ ಮಾರುಗೊಂಡೆನವ್ವಾ.... ಚನ್ನಮಲ್ಲಿಕಾರ್ಜುನನ ಒಲುಮೆ ಯುವಳಾನು" ಎಂದು ಅಕ್ಕನು ಭಕ್ತಿಯಲ್ಲಿ ಹಾಡಿದಳು; ಆ ದೇವದೇವನಲ್ಲಿ ಕೂಡಿದಳು.

ಸ್ವಾಮಿಾಜಿಯವರು ಇನ್ನೂ ಮುಂದುವರಿದು ನಿರೂಪಿಸುತ್ತಾರೆ— "ಅವಳ ಹೃದಯವು ಪಕ್ವವಾದಂತೆ ಅವಳ ನುಡಿಯೂ ಹದಗೊಂಡಿತ್ತು.... ಅವಳ ವಚನವು ಬೆಲ್ಲದ ಅಚ್ಚು, ಅಮೃತದ ಫಲ!"

**ಅಕ್ಕನ ಉಳುಮೆ :**

ಅಕ್ಕನು ಎಂದೆಂದಿಗೂ ಬಿಡದಿರುವ ಬಾಳಿಗಾಗಿ, ವಿಷಯಗಳನ್ನು ತೊರೆದು ವಿರತಿಯನ್ನು ಮರೆ ಹೊಕ್ಕಳು.... ನಶ್ವರವಾದ ದೇಹ ಮೋಹವನ್ನು ಕಿತ್ತು ಶಾಶ್ವತ ತಾದ ಚನ್ನಮಲ್ಲಿಕಾರ್ಜುನನಲ್ಲಿ ನಿಮ್ಮಳವಾದ ದೇಹವನ್ನಿತ್ತಳು.... ಬಾಳಿನಲ್ಲಿ ಬದುಕ ಬೇಕಾದರೆ ತನ್ನತನವನ್ನು ಅರಿಯಲು ಅಳವಡಿಸಿಕೊಳ್ಳಲು ಹೆಣಗಬೇಕು.... ಬರೀ ಮಲ್ಲಿಕಾರ್ಜುನನಲ್ಲಿಯೇ ಅಲ್ಲ, ಎಲ್ಲ ಕನ್ನಡಿಗರ ಹೃದಯದಲ್ಲಿಯೂ ಉಳಿದಳು. ಉಳಿಯುವಳು.... ಅವಳ ಆ ಬಾಳಿನ ನಡೆ-ನುಡಿಗಳೇ ನಮಗೆ ಇಂದಿನ ಮುಂದಿನ, ಜೀವನದ ಪಲ್ಲವಿ. "ದೇವಿಯ ಮಾತೆ ಮಾತು ಮಹದೇವಿಯ ಬಾಳುವೆಯೆಬಾಳು ಪುರ್ವಿ ಯೊಳ್" ಎಂದು ಹರಿಹರದೇವನೊಡನೆ ದನಿಗೂಡಿ, ಹಾಡಿ ಹರುಷಗೊಳ್ಳಬೇಕು.

–ಈ ರೀತಿಯಲ್ಲಿ ಪ್ರಥಮಭಾಗವಾದ ಅಕ್ಕನ ಬಾಳಿನ ಕೊನೆಯ ಅಧ್ಯಾಯದ ವಿವರಣೆಯನ್ನೂ ಸ್ವಾರಸ್ಯವಾಗಿಯೇ ನಿರೂಪಿಸಿದ್ದಾರೆ - ಶ್ರೀ ಜ.ಚ.ನಿ ಸನ್ನಿಧಾನ ದವರು. ಒಟ್ಟಿನ ಮೇಲೆ ಅವರೀ ಕೃತಿಯನ್ನು ಸಮಿಾಕ್ಷಿಸುವಾಗ ಅವರ ನುಡಿ ಮುತ್ತುಗಳಲ್ಲಿ ಯಾವುದನ್ನು ಆಯ್ದು - ಕಾಯ್ದು ಇಡುವುದು; ಯಾವುದನ್ನು ಆಯದೆ ಬಿಡುವುದು? ಎಂಬ ಸಂಕಷ್ಟ ಪ್ರಾಪ್ತವಾಗುವುದು ಸರ್ವೇ ಸಾಮಾನ್ಯ. ಎಲ್ಲ ನುಡಿಗಡಣವೂ ಅತಿ ಮುಖ್ಯ ಭಾಗವೆನಿಸಿದಾಗ, ಅತಿ ಸಂಗ್ರಹ ಮಾಡುವುದು ನಿಜಕ್ಕೂ ಕಷ್ಟದ ಕೆಲಸ.

ಇಪ್ಪತ್ತೇಳು ವರ್ಷಗಳ ಹಿಂದೆಯೇ (ಕ್ರಿ.ಶ. 1939ರಲ್ಲಿ) ಈ ಪುಸ್ತಕವನ್ನು ರಚಿಸಿ, ಕನ್ನಡಿಗರನ್ನು ಉಪಕೃತರನ್ನಾಗಿ ಮಾಡಿ ಶ್ರೀ ಗಳವರು ಕೃತಕೃತ್ಯರಾಗಿದ್ದಾರೆ.



# ನೂತನ ಶೈಲಿಯ ನೂತನ ದೃಷ್ಟಿಯ ನೂತನ ಗ್ರಂಥ

ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ

"ಅಣ್ಣನ ಬದುಕು" ಹೊಸಮಾದರಿಯ ಗ್ರಂಥ; ಅಲ್ಲಿ ಕಾಣಬರುವ ದೃಷ್ಟಿ ಹೊಸದು. ಕಡೆಗೆ ಬಸವಣ್ಣನವರ ತಂದೆ ತಾಯಿಗಳಾರು? ಅವರ ಜನ್ಮಸ್ಥಳ ಯಾವುದು? ಎಂಬ ವಿಷಯಗಳನ್ನು ಪ್ರಸ್ತಾಪಿಸದೆ ನೇರವಾಗಿ ಬಸವಣ್ಣನವರ ವಚನಗಳನ್ನು ಉದಾಹರಿಸುತ್ತ ಅವರ ಬಾಲ್ಯದ ಬದುಕಿನಿಂದ ಹಿಡಿದು ಜವ್ವನದ ಬದುಕು ಮತ್ತು ಚರಮ ಜೀವನದ ಬದುಕುಗಳನ್ನು ಶ್ರೀಗಳವರು ನಮ್ಮ ಮುಂದಿಟ್ಟಿದ್ದಾರೆ. ಇಲ್ಲಿ ಬಸವಣ್ಣ ಹುಡುಗನಾಗಿ ಆಟವಾಡುತ್ತಾನೆ, ಪಾಠ ಕಲಿಯುತ್ತಾನೆ; ತರುಣನಾಗಿ ಸುಳಿಯುತ್ತಾನೆ, ಸೋಂಪಿಯನ್ನು ಹಿಡಿಯುತ್ತಾನೆ, ಯೌವನಸ್ಥನಾಗಿ ಶಸ್ತ್ರಾಭ್ಯಾಸ ಮಾಡುತ್ತಾನೆ; ಜೇಟಿಯನ್ನಾಡುತ್ತಾನೆ ; ಪ್ರೌಢನಾಗಿ ಮಂತ್ರಿಯಾಗುತ್ತಾನೆ, ಸೇನಾಧಿಪತಿಯಾಗುತ್ತಾನೆ. ನವಿವ ಚೆಲುವೆಯಾಗಿ ವಿರಣಿಪಿಯಾಗುತ್ತಾನೆ, ಕೂಡಲ ಸಂಗಮದೇವನಲ್ಲಿ ಲೀನವಾಗುತ್ತಾನೆ. ಲೌಕಿಕದ ಹಲವು ಕಾಯಕಗಳಲ್ಲಿ ಪರಿಣಿತನಾಗಿ ಕಾಯಕದಿಂದ ಅಧ್ಯಾತ್ಮಸಾಧನೆ ಮಾಡುತ್ತಾನೆ ಬಸವಣ್ಣನವರು ತಮ್ಮ ವಚನಗಳಲ್ಲಿ ಹೇಳಿರುವ ಹಲವು ಉಪಮಾನಗಳನ್ನು ದೃಷ್ಟಾಂತಗಳನ್ನು ಚಮತ್ಕಾರವಾಗಿ ಉಪಯೋಗಿಸಿಕೊಂಡು ಬಸವಣ್ಣನವರ ಅನುಭವ ಸರ್ವತೋಮುಖವಾದುದು ಎಂಬುದನ್ನು ಗ್ರಂಥಕರ್ತರು ತೋರಿಸಿಕೊಟ್ಟಿದ್ದಾರೆ. ಅವರ ಬೋಧೆ ಹೃದಯಂಗಮವಾದುದು, ಐಹಿಕ ಮತ್ತು ಆಮುಷ್ಮಿಕಗಳೆರಡಕ್ಕೂ ಬೆಳಕು ನೀಡುವಂಥದ್ದು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಬಸವಣ್ಣನವರ ವಚನಾಮೃತವನ್ನು ಬಯಸುವವರಿಗೆ ಇಲ್ಲಿ ಹಬ್ಬದೌತಣವಾಗುತ್ತದೆ. ವಚನಗಳನ್ನು ತಂತಮ್ಮ ಇಷ್ಟಗಳಿಗೆ ತಕ್ಕಂತೆ ಹೊಂದಿಸಿಕೊಳ್ಳಬಹುದೇ? ವಚನಗಳು ಸಂದರ್ಭೋಚಿತವಾಗಿ, ಹರಿಹರನು "ಆಗಳಾಗಳಿನ ಶಿವಾನುಭವಕ್ಕೆ ನವಗೀತಮಂ ಪಾಡಿ" ಎಂದು ಹೇಳಿರುವಂತೆ ಹೃದಯದಿಂದ ಹೊರಹೊರಟಿರುವಾಗ ಈ ಸಂದರ್ಭಗಳಿಂದ ಬಹಿಷ್ಕರಿಸಿ ನಮ್ಮ ವ್ಯಾಖ್ಯಾನ

ಗಳಿಗೆ ತಪ್ಪಾಗಿಯೋ ನೆಪ್ಪಾಗಿಯೋ ಹೊಂದಿಸಿಕೊಳ್ಳಬಹುದೇ ? ಎಂಬುದೊಂದು ಪ್ರಶ್ನೆಯನ್ನು ತಜ್ಞರು ಕೇಳಬಹುದು. ಈ ವಿಚಾರದಲ್ಲಿ ಹಿಂದಿನ ಗ್ರಂಥಕಾರರು ಏನು ಮಾಡಿದ್ದಾರೆ ಎನ್ನುವುದನ್ನು ನೋಡುವುದು ಒಳ್ಳೆಯದು. ಉದಾಹರಣೆಗೆ ಒಂದು ವಚನವನ್ನು ತೆಗೆದುಕೊಳ್ಳೋಣ.

ಮೇರುಗುಣವನರಸುವುದೇ ಕಾಗೆಯಲ್ಲಿ ?
ಪರುಷಗುಣವನರಸುವುದೇ ಕಬ್ಬುನದಲ್ಲಿ ?
ಸಾಧು ಗುಣವನರಸುವದೇ ಅವಗುಣಿಯಲ್ಲಿ ?
ಚಂದನಗುಣವನರಸುವುದೇ ತರುಗಳಲ್ಲಿ ?
ಸರ್ವಗುಣ ಸಂಪನ್ನ ಲಿಂಗವೇ! ನೀನೆನ್ನಲ್ಲಿ ಅವಗುಣವನರಸುವುದೇ ಕೂಡಲ ಸಂಗಮದೇವ ?

ಮೇಲಿನ ವಚನವನ್ನು ಪಾಲ್ಕುರಿಕೆ ಸೋಮನಾಥನು ತೆಲುಗು ಬಸವ ಪುರಾಣ ದಲ್ಲಿ ಹೆಚ್ಚು ಕಡಮೆಯಾಗಿ ಉದಾಹರಿಸಿದ್ದಾನೆ. ಅದನ್ನು ಭೀಮಕವಿಯೂ ಬಸವ ಪುರಾಣದಲ್ಲಿ ಉದಾಹರಿಸಿದ್ದಾನೆ. ಇವರಿಬ್ಬರೂ ಈ ವಚನ ವನ್ನು ಮೋಳಿಗೆ ಮಾರಯ್ಯನ ಕಥೆಯಲ್ಲಿ ತಂದು ಕೊಂಡಿದ್ದಾರೆ. ಮಾರಯ್ಯನ ಮನೆಗೆ ಬಸವಣ್ಣನವರು ವೇಷಾಂತರದಿಂದ ಹೋಗಿ ಆ ಬಡ ಭಕ್ತನನ್ನು ಅನುಗ್ರಹಿಸ ಬೇಕೆಂದು ಆತನಿಲ್ಲದ ವೇಳೆಯಲ್ಲಿ ಆತನ ಹೆಂಡತಿಗೂ ತಿಳಿಯದಂತೆ ಮಜ್ಜನಶಾಲೆ ಯಲ್ಲಿ ಹೊನ್ನಿನ ಎರಡು ಚೀಲಗಳನ್ನು ಇರಿಸಿ ಬಂದರು. ಮಾರಯ್ಯ ಮಧ್ಯಾಹ್ನಕ್ಕೆ ಮನೆಗೆ ಹಿಂದಿರುಗಿ ಮಜ್ಜನ ಶಾಲೆಯಲ್ಲಿದ್ದ ಚೀಲಗಳನ್ನು ನೋಡಿ ಹೆಂಡತಿಯನ್ನು ವಿಚಾರಿಸಿದನು. ಆಕೆಗೆ ಬಂದಿದ್ದ ಜಂಗಮ ಬಸವಣ್ಣನವರೆಂದು ತಿಳಿಯದು. ಯಾರೋ ಅಯ್ಯಗಳು ಬಂದಿದ್ದರೆಂದು ಆಕೆ ಹೇಳಿದಳು ಬಂದಿದ್ದವರು ಬಸವಣ್ಣನವರೆಂದು ಊಹಿಸಿ ನಾವು ಬಡವರೆಂದುತಿಳಿದು ಬಸವಣ್ಣ ತನ್ನ ಸಿರಿತನವನ್ನು ಮೆರೆದನಲ್ಲವೇ ಎಂದು ಖೇದ ಪಟ್ಟುಕೊಂಡು ಜಂಗಮ ಪಾದೋದಕದಿಂದ ಕಟ್ಟಿಗೆಗಳನ್ನೆಲ್ಲ ಸುವರ್ಣದಂಡಗಳಾಗಿ ಪರಿವರ್ತಿಸಿ ಜಂಗಮರಿಗೆ ದಾನಮಾಡಿದನು. ಅವನು ಬಸವಣ್ಣನವರ ಮನೆಗೆ ಒಂದು ಅವನ್ನು ತೋರಿಸಿದನು. ಆಗ ಬಸವಣ್ಣನವರು ಭಯಗ್ರಸ್ತರಾಗಿ ಮಾರಯ್ಯನ ಮನೆಗೆ ಹೋಗಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಮುಂದೆ ಹೇಳಿರುವ ಪದ್ಯಗಳು ಬರುತ್ತವೆ.

ಅವನಿಯೊಳು ಲೋಹದ ಗುಣವನರಸುವುದೆ
ಪರುಷ ಕನಕಗಿರಿಯರಸುವುದೇ
ಕಾಗೆಯ ಗುಣವನಯ್ಯಾ ಸುಗುಣನಿಧಿ ನೀವು
ಅವಗುಣಂಗಳಿಗಿಕ್ಕೆಯಾಂ ನೀ। ವವಧರಿಸುವೆನ್ನಲ್ಲಿ ಸದ್ಗುಣ
ನಿವರವರಸಿದೊಡುಂಟೆ ಮೋಳಿಗೆ ಮಾರಿದೇವಯ್ಯ ॥

ಎಲವದಲಿ ಫಲವುಂಟೆ ಅವಿಗೆ
ಯೊಳಗೆ ತಣ್ಪುಗಳುಂಟೆ ಕುಪ್ಪಟೆ
ಯೊಳಗೆ ತಾವರೆಗೆಡ್ಡೆ ಹುಟ್ಟುವುದೆ ಧರೆಯೊಳೆಂದು ।
ಶಿಲೆಯೊಳುಂಟೇ ಮೃದುವರಸಲಂ
ಬಿಲದೊಳುಂಟೇ ಬೆಣ್ಣೆ ಕರುಣ
ಸುಲಭ ಹೊಲಗೇರಿಯೊಳುಂಟೇ ವೇದಘೋಷಣವು ॥

ಮೊದಲನೆಯ ಪದ್ಯದಲ್ಲಿರುವುದು ಹಿಂದೆ ಉದಾಹರಿಸಿರುವ ವಚನಭಾಗ ಎನ್ನುವುದು ಸ್ಪಷ್ಟವಷ್ಟೆ.

ಸಿಂಗಿರಾಜ ಪುರಾಣದಲ್ಲಿ ಬಿಜ್ಜಳನ ನೂರುಜನ ಹೆಂಡತಿಯರನ್ನು ನಿಜ ಜಂಗಮರನ್ನಾಗಿ ಬಸವಣ್ಣನವರು ಪರಿವರ್ತಿಸಿ ಪವಾಡವನ್ನು ಮೆರೆದ ಸಂದರ್ಭದಲ್ಲಿ ಮೇರುಗುಣವನರಸುವುದೇ ಕಾಗೆಯಲ್ಲಿ.... ಎಂಬ ವಚನ ಉದಾಹೃತವಾಗಿದೆ. ಶಿವಲಾಂಛನಗಳನ್ನು ಧರಿಸಿ ರಂಗಸ್ಥಲದ ಮೇಲೆ ಬಂದ ಬಹುರೂಪಿಸಿಂಗನೆಯರು ನಿಜ ಜಂಗಮರೇ ಆದರು ಎಂಬುದು ನಿದರ್ಶನ ತೋರುವ ಸಂದರ್ಭ. ಆದರೆ ವಚನದ ಕೊನೆಯಲ್ಲಿರುವ "ಸರ್ವಗುಣ ಸಂಪನ್ನ ಲಿಂಗವೇ!...." ಮೊದಲಾದುವನ್ನು ಸಿಂಗಿರಾಜನು ಕೈಬಿಟ್ಟಿದ್ದಾನೆ.

ಆದ್ದರಿಂದ ವಚನಗಳು ಹೊರಬಿದ್ದ ಸಂದರ್ಭ ಎನ್ನುವುದು ಆಯಾ ಗ್ರಂಥಕಾರರ ಇಷ್ಟವನ್ನನುಸರಿಸಿ ಹೊಂದಿಕೆಯಾದ ಕಥಾ ಸಂದರ್ಭ ಎಂದು ಹೇಳಬೇಕಾಗುತ್ತದೆ. ಈಚಿನ ಗ್ರಂಥಕಾರರು–ಅವರಲ್ಲಿ ನಾನೂ ಒಬ್ಬನಾಗಿದ್ದೇನೆ–ವಚನಗಳನ್ನು ಯಥೋಚಿತವಾಗಿ ಆರಿಸಿಕೊಂಡು ಜೋಡಿಸಿಕೊಂಡು ವ್ಯಾಖ್ಯಾನಮಾಡುತ್ತ ಸಂಬಂಧಗಳನ್ನು ಕಲ್ಪಿಸುತ್ತ ಒಂದು ಸಮಗ್ರ ಚಿತ್ರವನ್ನು ಕೊಡಲು ಪ್ರಯತ್ನಪಟ್ಟಿರುವುದು ಪ್ರಬಲವಾದ ದೋಷವೇನೂ ಅಲ್ಲ. ಹಿಂದಿನವರಿಗೆ ಕಥೆ ಮುಖ್ಯವಾಗಿದ್ದರೆ ಈಗಿನವರಿಗೆ ಬಸವಣ್ಣನವರ ಚಿತ್ತವೃತ್ತಿ, ಮನಸ್ಸಿನ ಹೋರಾಟ, ಸಂಪ್ರದಾಯ ಶರಣರೊಡನೆ ಬಡಿದಾಟ, ಹಿಡಿದ ಗುರಿ, ಸಾಧಿಸಿದ ಕಾರ್ಯ–ಇವುಗಳೆಲ್ಲ ಮುಖ್ಯವಾಗಿ ಕಂಡುಬಂದು ಆ ವಚನಗಳನ್ನೇ ಉಪಯೋಗಿಸಿಕೊಂಡಿರುತ್ತಾರೆ. ಹೀಗೆ ಉಪಯೋಗಿಸಿಕೊಂಡಿರುವುದು ಎಷ್ಟರಮಟ್ಟಿಗೆ ಸಾರ್ಥಕವಾಗಿದೆ? ಅದರಲ್ಲಿ ಎಷ್ಟರಮಟ್ಟಿಗೆ ಅವರು ಜಯಶೀಲರಾಗಿದ್ದಾರೆ–ಎನ್ನುವ ಚಿಕಿತ್ಸಕ ದೃಷ್ಟಿಯಿಂದ ಈಗಿನ ಗ್ರಂಥಗಳನ್ನು ನಾವು ನೋಡಬೇಕಾಗಿದೆ.

ಶ್ರೀಗಳವರು ಬಸವಣ್ಣನವರ ವಿಚಾರದಲ್ಲಿ ಒಂದು ಅಮೂಲ್ಯವಾದ ಗ್ರಂಥವನ್ನು ರಚಿಸಿದ್ದಾರೆಂದು ನಿಸ್ಸಂದೇಹವಾಗಿ ಹೇಳಬಹುದು. ಬಸವಣ್ಣನವರನ್ನು ನಂದೀಶ್ವರಾವತಾರರೆಂದು ಗೌರವಿಸಿ ಸಾಧನೆಯಿಂದ ಅವರ ಆತ್ಮ ಪರಿಪಕ್ವವಾಗಬೇಕಾದ ಆವಶ್ಯಕತೆಯಿರಲಿಲ್ಲವೆಂದೂ ಅವರು ಹೇಳಿರುವ ಆತ್ಮ ನಿವೇದಾತ್ಮಕವಾದ ವಚನಗಳು ಲೋಕಾನುಗ್ರಹಾರ್ಥವಾಗಿ ಹೊರತು ಅವರಲ್ಲಿ ಯಾವ ಬಗೆಯ ಲೋಪ

ದೋಷಗಳೂ ಇರಲಿಲ್ಲವೆಂದೂ ಕೆಲವರು ಸಂಪ್ರದಾಯಸ್ಥರು ಹೇಳುವುದುಂಟು. ಸಾಮಾನ್ಯವಾಗಿ ಮಠಾಧೀಶ್ವರರಾಗಿ ಪ್ರವಚನ ಮಾಡುವವರೂ ಈ ಸಂಪ್ರದಾಯ ದಿಂದ ಬಿಡುಗಡೆ ಹೊಂದುವುದು ಕಷ್ಟ. ಆದರೆ ಶ್ರೀಗಳವರು ಬಿಡುಗಡೆ ಹೊಂದಿ ಬಸವಣ್ಣನವರ ಸಾಧನೆಯನ್ನೂ ಸಿದ್ಧಿಯನ್ನೂ ಚಿತ್ರಿಸಿದ್ದಾರೆ. ಮನೋವಿಶ್ಲೇಷಣ ದೃಷ್ಟಿಯಿಂದ ಬಸವಣ್ಣನವರನ್ನೂ ಅವರ ಕಾರ್ಯಕಲಾಪಗಳನ್ನೂ ನೋಡಬೇಕಾದ ಮತ್ತು ಚಿತ್ರಿಸಬೇಕಾದ ಆವಶ್ಯಕತೆ ಈಗಿನ ಕಾಲದಲ್ಲಿ-ಭರತ ಖಂಡಕ್ಕೆ ಸ್ವಾತಂತ್ರ್ಯ ಲಭಿಸಿ ನಾವು ಸ್ವತಂತ್ರ ಜನಾಂಗವಾಗಿ ರೂಪುಗೊಳ್ಳುತ್ತಿರುವ ಈ ಕಾಲದಲ್ಲಿ ಹೆಚ್ಚಾಗಿದೆ.

ಯಜ್ಞಯಾಗಾದಿ ಹಿಂಸಾಕರ್ಮಗಳು ಮಾನ್ಯತೆಯನ್ನು ಎಂದೋ ಕಳೆದು ಕೊಂಡವು ; ಆತ್ಮ ಯಜ್ಞವನ್ನೇ ವಿವರಿಸಿ ಬೃಹದಾರಣ್ಯಕೋಪನಿಷತ್ತು ಮೊದಲಾ ದವು ಹೇಳಿವೆ. ನೀತಿಯು ನೆಲೆಗಟ್ಟಿನ ಮೇಲೆ ಸಮಾಜ ವ್ಯವಸ್ಥೆಯಾಗಬೇಕೆಂಬು ದನ್ನು ನಮ್ಮ ಪ್ರಾಚೀನರೂ ಹೇಳಿದ್ದಾರೆ. ಉದಾತ್ತವಾದ ನೀತಿಯನ್ನೂ, ಧರ್ಮ ವನ್ನೂ, ಸನಾತನವೆಂದೂ ಕರಣೀಯವೆಂದೂ ರಾಮಾಯಣಾದಿಗಳಲ್ಲಿ ಸಾರಿದ್ದಾರೆ. ಕರ್ಮ ಭಕ್ತಿ ಜ್ಞಾನಗಳ ಸಾಮರಸ್ಯದಿಂದ ಆತ್ಮೋದ್ಧಾರವೆಂದೂ, ಜನತೋದ್ಧಾರ ವೆಂದೂ ಮಹಾ ವಿಭೂತಿಗಳು ಪ್ರತ್ಯಕ್ಷ ನಿದರ್ಶಿಸಿದ್ದಾರೆ. ಆದರೆ ಉದಾತ್ತ ತತ್ವ ಗಳೆಲ್ಲ ಗ್ರಂಥಗಳಲ್ಲಿವೆ ; ಅವುಗಳ ಅನುಷ್ಠಾನ ಕೆಲವರು ಮಹಾ ವಿಭೂತಿಗಳಲ್ಲಿ ಮಾತ್ರ ಕಂಡುಬರುತ್ತದೆ. ಭೂಲೋಕದ ಈ ಮಾನವ ಸಮಾಜ ಎಂದಿನಂತೆಯೇ ಡೊಂಕು ಕೊಂಕುಗಳಿಂದ ತುಂಬಿಕೊಂಡಿದೆ. ಆದ್ದರಿಂದ ಬಸವಣ್ಣನಂಥವರು ಆಗಾಗ್ಗೆ ಜನ್ಮವೆತ್ತಿ ಸ್ವಮತೀಯರಿಗೂ ಪರಮತೀಯರಿಗೂ ಮಾರ್ಗದರ್ಶನ ಮಾಡಬೇಕಾದ ಅವಶ್ಯಕತೆ ಇದ್ದೇ ಇದೆ.

ಶ್ರೀಗಳವರು ವಚನಗಳ ವ್ಯಾಖ್ಯಾನ ಮಾಡಿರುವ ಶೈಲಿ ಅಡಕವಾಗಿ ಮನೋ ಹರವಾಗಿ ಅರ್ಥಗರ್ಭಿತವಾಗಿದೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಟ್ಟಿದೆ. “ಲಿಂಗಕಲೆ ಅಂಗದಲ್ಲಿ ವೇಧಿಸುವುದು ಸತ್ತಮೇಲಲ್ಲ ಜೀವಿಸಿರುವಾಗಲೇ ವೇಧಿಸ ಬೇಕು, ಜೀವನ್ಮುಕ್ತರಾಗಬೇಕು. ಇದನ್ನು ಪ್ರತಿಪಾದಿಸುವುದೇ ಅಣ್ಣನ ತತ್ವಮಯ ವಾದ ಕಬ್ಬಿನ ತೋಟ. ಇದೆಲ್ಲವೂ ಆತನ ಆ ತೋಟದ ಅನುಭವದ ನೋಟ. ಬಸವಿದೇವಿಯ ತನು ಮಡಕೆಯಾದರೂ ಹೊರಬಳಕೆಯಿಲ್ಲದ್ದು. ಜೀವ ಸುಯಿಧಾನ ಹೆಳಸದ್ದು. ಸಮತೆ ಜಲ ಸಿಹಿಯಾದದ್ದು—ಅಜಡವಾದದ್ದು. ಕರಣ ಕಟ್ಟಿಗೆಗಳು ಭವ ದಾವಾಗ್ನಿಯ ಸೋಂಕಿಲ್ಲದವು. ಸಟ್ಟುಗ ಕಿಲುಬಾಗದ್ದು. ಪರಿಣಾಮದೋಗರ ಮರಳಿ ಹಸಿವಾಗಿಸದ್ದು. ಇನ್ನೇನಾಗಬೇಕು ?”

ಒಟ್ಟಿನಲ್ಲಿ ನೂತನ ಶೈಲಿಯ ನೂತನ ದೃಷ್ಟಿಯ ಈ ನೂತನ ಗ್ರಂಥವನ್ನು ಎಲ್ಲರೂ ಓದಿ ಲಾಭ ಪಡೆಯಬಹುದಾಗಿದೆ. ಬಸವಣ್ಣನವರ ವಿಚಾರದಲ್ಲಿ ಹೀಗೆ ಸಾಹಿತ್ಯ ಬೆಳೆಯುತ್ತಿರುವುದು ಶುಭ ಸೂಚಕವಾಗಿದೆ.

“ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿಯೆಂಬ ಹಣ್ಣಾಯಿತ್ತು. ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದೆತ್ತಿ ಕೊಂಡ.”

ಮಾನವನ ಬಾಳು ಹೀಗಾಗಲಿ, ಜನಾಂಗದ ಬಾಳು ಹೀಗಾಗಲಿ ಎಂದು ಹಾರೈಸುತ್ತೇನೆ.

[‘ಅಣ್ಣನ ಬದುಕು’ ಮುನ್ನುಡಿಯಿಂದ]

---

# ಸರಸ್ವತೀ ದೇವಿಗೊಂದು ದಿವ್ಯಾಭರಣ

**ಶ್ರೀ ಕೆ. ಎಸ್. ಧರಣೇಂದ್ರಯ್ಯ,**
ಬೆಂಗಳೂರು

ಶ್ರೀ ಶೈಲನಿಡುಮಾಮಿಡಿ ಸ್ವಾಮಿಗಳವರು ಬರೆದಿರುವ 'ಅಣ್ಣನ ಬದುಕು' ಗ್ರಂಥವನ್ನು ಅವಲೋಕಿಸುವ ಭಾಗ್ಯವು ನನ್ನ ಪಾಲಿಗೆ ಬಂತು. ಆಸಕ್ತಿಯಿಂದೋದಿದೆನು. ಶ್ರೀ ಬಸವಣ್ಣನವರ ಜೀವನ ರಹಸ್ಯವನ್ನೂ ಉದಾತ್ತ ಭಾವಗಳನ್ನೂ ಆಧ್ಯಾತ್ಮಿಕ ಮನೋಧರ್ಮವನ್ನೂ ಶ್ರೀಗಳವರು ಶ್ರೀ ಬಸವಣ್ಣನವರ ವಚನ ಸುಧಾಧಾರೆಯ ಹನಿಗಳಲ್ಲಿ ಚಿತ್ರಿಸಿದ್ದಾರೆ. ಶ್ರೀ ಬಸವಣ್ಣನವರ ಜೀವನವು ಯಾವಾಗಲೂ ಎಲ್ಲರಿಗೂ ಹೊಸತು. ಅದರ ಬೇರೆ ಬೇರೆ ಭಂಗಿಯನ್ನು ಪ್ರತ್ಯೇಕ ಪ್ರತ್ಯೇಕ ದೃಷ್ಟಿಯಿಂದ ನೋಡಿದ ಭಾವುಕರು ತಮಗೆ ದೊರೆಯಬಹುದಾದ ಒಂದು ಚಿತ್ರದ ಸಿರಿನೋಟವನ್ನು ತಮ್ಮ ಬಗೆಗೆ ಬಂದಂತೆ ಹೊರಗೆಡಹಲು ಸಾಧ್ಯವಿದೆ. ತಾಜಮಹಲ್ ಕಟ್ಟಡವು ಜಗತ್ತಿಗೆ ಯಾವಾಗಲೂ ಹೊಸತು. ಶ್ರೀ ಗೋಮಟೇಶ್ವರ ಮೂರ್ತಿಯು ಕಲೋಪಾಸಕನಿಗೂ, ತತ್ವಜ್ಞಾನಿಗೂ, ಸಾಹಿತಿಗೂ ಸರ್ವದಾ ನವೋನವೀನವಾಗಿ ತೋರುವುದು ಪ್ರಾತಃಕಾಲದಂತೆ; ಸಮುದ್ರದಂತೆ ಈ ನವ್ಯತೆಯು, ಭವ್ಯತೆಯು ಬಸವಣ್ಣನವರ ವಚನವಾಹಿನಿಯಲ್ಲಿ ಕಂಡುಬರುತ್ತದೆ.

ಬಸವಣ್ಣನವರ ಜೀವನ ವೈವಿಧ್ಯವನ್ನು ಮನಗಂಡ ಶ್ರೀಗಳವರು ಆತನ ವಚನವಾರಿಧಿಯಲ್ಲಿ ಮುಳುಗಿ ಅಲ್ಲಿ ಸಿಕ್ಕಿದ ರತ್ನಗಳನ್ನು ಸವಿನುಡಿಯಲ್ಲಿ ಕುಂದಣಿಸಿ ಸರಸ್ವತೀದೇವಿಗೆ ಒಂದು ದಿವ್ಯಾಭರಣವನ್ನು ತೊಡಿಸಿರುತ್ತಾರೆ. ಬಸವಣ್ಣನವರ ವಚನಗಳೆಲ್ಲವನ್ನೂ ಓದಿ ಅವುಗಳ ಸಾರವನ್ನು ಆಸ್ವಾದಿಸುವುದು ಎಲ್ಲ ಜನರಿಗೂ ಸಾಧ್ಯವಿಲ್ಲ. ಪ್ರಾಯಶಃ ಪ್ರಾಪಂಚಿಕ ವ್ಯವಹಾರಗಳಲ್ಲಿ ಮಗ್ನರಾದ ಜನರಿಗಂತೂ ಈ ಸಾಹಿತ್ಯ ಸಮುದ್ರವನ್ನೀಸುವುದು ದುಸ್ಸಾಧ್ಯವೇ ಸರಿ. ಅಂತಹ ಜನರಿಗೆ ಒಂದು ಸಾಹಿತ್ಯದ ಸವಿಯೂಟವನ್ನು ಒದಗಿಸುವ ಕಾರ್ಯವು ಅಭಿನಂದನೀಯ

ವಾದುದು. ಶ್ರೀಗಳವರು ಬಸವಣ್ಣನವರ ಜೀವನವನ್ನು ನಾಲ್ಕು ಭಾಗ ಮಾಡಿ ಬಾಲ್ಯ–ಯೌವನ–ಚರಮ ಬೋಧೆ ಎಂದು ಕರೆದಿದ್ದಾರೆ. ಲೌಕಿಕ ಶಬ್ದಗಳಲ್ಲಿ ಪರಮಾರ್ಥವನ್ನು ಬೋಧಿಸಿದ್ದಾರೆ. ಮಕ್ಕಳಿಗೆ ಗಿಳಿ, ನವಿಲು, ಮರ್ಕಟ, ಕರಿ, ಕುರಿ ಈ ಮಾತುಗಳು ಆಕರ್ಷಕವಾಗಿವೆ. ಶೃಂಗಾರ ರಸಿಕರಿಗೆ ಸೌಂದರ್ಯೋಪಾಸನೆ, ಕನ್ನಡಿ, ತಂಬೂರಿ, ತರುಲತೆಗಳು-ಈ ಶಬ್ದಗಳು ಆಪ್ಯಾಯಮಾನವಾಗಿವೆ. ತತ್ವ ಜ್ಞಾನಿಗಳಿಗೆ ಸ್ಮರಣ-ಅರ್ಚನ-ವಂದನ-ಆತ್ಮನಿವೇದನ ಈ ಶಬ್ದಗಳು ಹೃದಯವನ್ನು ಅರಳಿಸುತ್ತವೆ.

ಕನ್ನಡ ಸಾಹಿತಿಗಳಿಗೆ :

"ಚೇಳಿಂಗೆ ಬಸುರಾಯಿತ್ತೆ ಕಡೆ
ಬಾಳಿಗೆ ಫಲವಾಯಿತ್ತೆ ಕಡೆ
" ಜಾತಿವಿಡಿದು ಸೂತಕವನರಸುವರೆ
ಜ್ಯೋತಿವಿಡಿದು ಕತ್ತಲೆಯನರಸುವರೆ.
"ಹಬ್ಬಕ್ಕೆ ತಂದ ಹರಕೆಯಕುರಿ
ತೋರಣಕ್ಕೆ ತಂದ ತಳಿರಮೇಯಿತ್ತು.
"ಹಡಕಿಗೆ ಮೆಚ್ಚಿದ ಸೊಣಗವು
ಅಮೃತದ ರುಚಿಯ ಬಲ್ಲುದೇ. ?
"ವ್ಯಾಧನೊಂದು ಮೊಲನ ತಂದರೆ
ಸಲುವ ಹಾಗಕ್ಕೆ ಬೆಲೆಗೈವರಯ್ಯ ;
ನೆಲನಾಳ್ವನ ಹೆಣನೆಂದರೆ
ಒಂದಡಕೆಗೆ ಕೊಂಬುವರಿಲ್ಲ ನೋಡಯ್ಯ"

ಮೊದಲಾದ ಅನುಭವೋಕ್ತಿಗಳು ಅವರ ಹೃದಯವನ್ನು ವಿಕಾಸಗೊಳಿಸುವುವು ವೀರಶೈವನಿಗೆ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು ಮೂರ್ತರೂಪದಲ್ಲಿ ಕಂಡ ಲಿಂಗಾಂಗ ಸಾಮರಸ್ಯಕ್ಕೆ ಬೆಳಕನ್ನೀಯುವುವು.

ಬಸವಣ್ಣನವರ ಬೋಧೆ ಎಂದರೆ ಸರ್ವಸಾಮಾನ್ಯವಾದುದು ವಿಶ್ವ ವಿಶಾಲವಾದುದು. ಬುದ್ಧದೇವನು ಜಾತ್ಯತೀತವಾದ ಒಂದು ಸಮಾಜವನ್ನು ಕಟ್ಟಿ ಜನಜೀವನದ ನೈತಿಕ ಮಟ್ಟವನ್ನು ಮೇಲಕ್ಕೆತ್ತಲು ತನ್ನ ಇಡಿಯ ಜೀವನವನ್ನು ಮೀಸಲಾಗಿಟ್ಟನು. ಜನರು ಜಾತ್ಯಂಧತೆಯನ್ನು ಬಿಟ್ಟು ಗುಣೈಕಪಕ್ಷಪಾತಿಗಳಾದರು. ಹಿಂಸೆಯನ್ನು ಪೂಜೆಗೆ ಅಂಗವಾಗಿ ಮಾಡಿದ್ದ ಮಾನವನು ಕಣ್ದೆರೆದು ಅಹಿಂಸಾ ಧರ್ಮವನ್ನವಲಂಬಿಸಿದರು. ಉಚ್ಚ-ನೀಚ ಭಾವನೆಯು ಕುಸಿದು ಬಿದ್ದು ಹೋಯಿತು. ಮಾನವಕುಲದ ಹಕ್ಕು ಬಾಧ್ಯತೆಗಳನ್ನು ಹಿಡಿದೆತ್ತಿದ ಮಹತ್ವದ ಗೌರವವು ಬುದ್ಧದೇವನ ಪಾಲಿಗೆ

ಹೋಗುತ್ತದೆ. ಇದೇ ತತ್ವವನ್ನು ಬಸವಣ್ಣನವರು ಕನ್ನಡ ನಾಡಿನಲ್ಲಿ ಸಾರಿದರು. ಮಾನವ ಜಾತಿಗೆ ಬೇಕಾದ ಧರ್ಮವನ್ನು ಭೋಧಿಸಿದರು. ಜಾತಿಯ ಹುಚ್ಚನ್ನು ಜನತೆಯ ತಲೆಯಿಂದಿಳಿಸಿದರು.

"ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ॥"

ಎಂಬ ತತ್ವವನ್ನು ಜನತೆಗೆ ಸಾರಿ ಜನ್ಮ ಜಾತಿಯ ಹುಚ್ಚಿಗೆ ವಿವೇಕೋದಯವೆಂಬ ಮದ್ದನ್ನು ಕೊಟ್ಟರು.

"ವ್ಯಾಸ ಬೋಯಿತಿಯ ಮಗ
ಮಾರ್ಕಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು
ಅಗಸ್ತ್ಯ ಕಬ್ಬಿಗ ಕಶ್ಯಪ ಕಮ್ಮಾರ
ಕೌಂಡಿಲ್ಯ ನಾಯಿಂದ"

ಎಂಬ ವಿಷಯವನ್ನು ಸ್ಪಷ್ಟಪಡಿಸಿ "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" ಎಂಬ ಗೀತೋಕ್ತಿಯನ್ನು ಸಾರ್ಥಕಪಡಿಸಿದರು.

"ಉತ್ತಮಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತರದ ಹೊರೆಯ ಹೊರಿಸದಿರಯ್ಯಾ"

ಎಂದು ನೊಂದು ಹೇಳಿದರು.

"ದಯೆಯಿಲ್ಲದ ಧರ್ಮವಾವುದಯ್ಯಾ
ದಯವೇ ಇರಬೇಕು ಸಕಲ ಜೀವರಾಶಿಗಳಲ್ಲಿ
ದಯವಿಲ್ಲದವನ ಒಲ್ಲನಯ್ಯಾ ನಮ್ಮ ಕೂಡಲಸಂಗಮದೇವಾ"

ಎಂದು ಅಹಿಂಸಾ ಧರ್ಮವನ್ನು ಜಗತ್ತಿಗೆ ಬೋಧೆ ಮಾಡಿ ಮಹದುಪಕಾರ ಮಾಡಿದರು. ಇಂತಹ ಒಂದು ಬದುಕಿನ ದಿಗ್ದರ್ಶನವನ್ನು ಶ್ರೀಶೈಲನಿಡುಮಾಮಿಡಿ ಗುರುವರ್ಯರು ಹೊಸ ರೀತಿಯಲ್ಲಿ ಚಿತ್ರಿಸಿ ಕನ್ನಡ ಜನತೆಯ ಚಿರಕೃತಜ್ಞತೆಗೆ ಪಾತ್ರರಾಗಿರುತ್ತಾರೆ.

ಈ ಹೊತ್ತಗೆಯು ಜನರ ಕೈಗನ್ನಡಿಯಾಗಲಿ!

## ಸಮ್ಯಜ್ಞಾನಿ ಚೆನ್ನಬಸವಣ್ಣ
## ಮುಮುಕ್ಷುಗಳಿಗೆ ಒಂದು ಉಪಯುಕ್ತ ಗ್ರಂಥ

ಚೆನ್ನ ಬಸವಣ್ಣನ ಜ್ಞಾನ, ಆತನ ವ್ಯಕ್ತಿತ್ವ ಅಮೇಯ. ಅವನಿಗೆ ಯಾರೂ ಸಾಟಿಯಿಲ್ಲ. ಚೆನ್ನಬಸವಣ್ಣನೇ ಚೆನ್ನಬಸವಣ್ಣನಿಗೆ ಸಾಟಿ ಹೇಮಗಿರಿಗೆ ಹಿಮಕಣವು ಸಾಟಿಯಾದೀತೆ ? ಆತನ ಆ ಜ್ಞಾನದ ಉಜ್ವಲಸೀಮೆಗೆ ಗೀಟನ್ನೆಳೆಯುವುದು ಸಾಧ್ಯ ವಾದೀತೆ ? ಕ್ಷಣ ಜೀವನ ಮತ್ತು ಕಾರ್ಯದ ಮಹತಿ ತಿಳಿಯಲು ಸಹಾಯವಾಗುವಂತೆ ಶ್ರೀಗಳವರು ಈ ಕಿರುಹೊತ್ತಿಗೆಯನ್ನು ರಚಿಸಿ ಕನ್ನಡಿಗರ ಕೈಯಲ್ಲಿತ್ತಿದ್ದಾರೆ. ಚನ್ನಬ ಸವಣ್ಣ ಕೇವಲ ಜ್ಞಾನಿಯಲ್ಲ; ಸಮ್ಯಜ್ಞಾನಿ. ಈಮಾತನ್ನು ಮಹಾದೇವಿಯಕ್ಕ ಕೂಡ ಒಪ್ಪಿಕೊಂಡಿದ್ದಾರೆ. ವಚನ ವಿಶೇಷಗಳ ಮೂಲ ಚನ್ನಬಸವಣ್ಣ. "ಅರಿವು, ಆಚರಣೆ ಚನ್ನಬಸವಣ್ಣನ ವಚನದ ಎರಡು ಕಣ್ಣುಗಳು. ಈ ಎರಡು ಕಣ್ಣೋಟಕ್ಕೆ ಪರ ವಸ್ತು ಒಂದೇ ಪರಿತೃಪ್ತಿ. ಗ್ರಂಥದ ಉದ್ದಕ್ಕೂ ಚನ್ನಬಸವಣ್ಣನ ಸಮ್ಯಜ್ಞಾನ ವನ್ನೆ ನಿರೀಕ್ಷಿಸಬಹುದು. ನಿರತಿಶಯ ಆನಂದ ಪಡೆಯಬಹುದು". ಮುಮುಕ್ಷುಗಳಿಗೆ ಇದೊಂದು ಉಪಯುಕ್ತ ಪುಸ್ತಕವಾಗಿರುವುದು.

**—ನವಯುಗ**

**೨೯–೪–೫೨**

## ಅಸದೃಶ ವ್ಯಕ್ತಿತ್ವ ನಿರೂಪಣೆ

ಮಹಾ ತಪಸ್ವಿಗಳೂ,ತೇಜಸ್ವಿಗಳೂ ಆದ ಶ್ರೀಗಳವರು ಬರೆದ ಈ ಚಿಕ್ಕ ಹೊತ್ತಿ ಗೆಯ ವಿಮರ್ಶೆಯನ್ನು ಮಾಡುವುದು ಸುಲಭ ಕೆಲಸವಲ್ಲ. ಶ್ರೀ ಚನ್ನಬಸವಣ್ಣನ ವರ ವಚನಗಳನ್ನು ಆಳವಾಗಿ ಅಭ್ಯಾಸಮಾಡಿ ಬರೆದ ಈ ಹೊತ್ತಿಗೆಯಲ್ಲಿ ನಾವು ಮುಖ್ಯವಾಗಿ ಶೈವಧರ್ಮದ ವಿಕಾಸವಾದ ಲಿಂಗವಂತ ಮತದ ಐತಿಹಾಸಿಕ ವಿವೇಚನೆ ಯನ್ನು ಕಾಣಬಹುದು. ಚನ್ನಬಸವಣ್ಣನ ಅಲೌಕಿಕ ಜ್ಞಾನ ಹಾಗು ಅಸದೃಶ ವ್ಯಕ್ತಿತ್ವವನ್ನು ಅವರ ವಚನಗಳಲ್ಲಿಯೇ ನಿರೂಪಿಸಿದ ಶ್ರೀಗಳವರ ಶೈಲಿಯಲ್ಲಿ ಒಂದು ನಾವೀನ್ಯತೆಯಿದೆ. ವೀರಶೈವ ಸಿದ್ಧಾಂತ ಸಾಹಿತ್ಯ, ಸಂಸ್ಕೃತಿಗಳ ಅಭ್ಯಾಸ ಮಾಡುವವ ರಿಗೆ ಇದೊಂದು ಸಹಾಯಕ ಗ್ರಂಥವಾಗುವುದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ.

ಹೆಸರು ಪಡೆದ ಎಲ್ಲ ವಚನಕಾರರ ಬಗ್ಗೆ ಇಂಥ ಹೊತ್ತಿಗೆಗಳ ಅಭಾವ ಕನ್ನಡ ದಲ್ಲಿ ಬಹಳವಿದೆ. ಆ ಅಭಾವ ಬೇಗನೆ ಕಡಿಮೆ ಆದಷ್ಟು ಕನ್ನಡಸಾಹಿತ್ಯ ಸಂಸ್ಕೃ ತಿಗೆ ಒಳಿತು.

**ಎಂ. ಎಸ್. ವೀರಾಪೂರ**

# ವಿಮರ್ಶಾತ್ಮಕ ಕೃತಿ ಸಮ್ಯಜ್ಞಾನಿ ಚೆನ್ನಬಸವಣ್ಣ

ಶ್ರೀ ಎಂ. ಜಿ. ನಾಗರಾಜ, ಬೆಂಗಳೂರು.

ನಿಡುಮಾಮಿಡಿ ಶ್ರೀ ಶೈಲ ಸಂಸ್ಥಾನದ ಜಗದ್ಗುರುಗಳಾದ—ಪೂಜ್ಯ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು ತಮ್ಮ ನೀಳ ಅಭ್ಯಾಸದ ಫಲವಾಗಿ ಶಿವಶರಣ ಚನ್ನಬಸವಣ್ಣನ ಜೀವನ ಸುಡಿಗಳ ಬಗ್ಗೆ ವಿವರಾತ್ಮಕ ಹಾಗೂ ವಿಮರ್ಶಾತ್ಮಕವಾದ ಲೇಖನ ಮಾಲೆಯೊಂದನ್ನು ಬರೆದು, ಜನಸಾಮಾನ್ಯಕ್ಕೆ ತಿಳಿವಳಿಕೆ ನೀಡುವ ಗ್ರಂಥರೂಪದಲ್ಲಿ ದಯಪಾಲಿಸಿದ್ದಾರೆ. ಅರವತ್ತು ಪುಟಗಳ ಈ ಪುಸ್ತಕದಲ್ಲಿ ಎರಡು ಭಾಗಗಳಿದ್ದು ಮೊದಲನೆಯದರಲ್ಲಿ ಮತಾಚಾರಕ್ಕೆ ಸಂಬಂಧಪಟ್ಟ ೫೯ ವಿಚಾರಗಳ ಬಗ್ಗೆ ಅಭಿಪ್ರಾಯ, ನಿರ್ಣಯವನ್ನು ತಿಳಿಸಿದ್ದಾರೆ. ಎರಡನೆಯ ಭಾಗದಲ್ಲಿ ಐತಿಹಾಸಿಕ ಅಂಶಗಳ ಬಗ್ಗೆ ವಿವರಿಸಿದ್ದಾರೆ. ಪೀಠಿಕಾರೂಪವಾಗಿ ಚನ್ನಬಸವಣ್ಣನ ಜನನದ ಬಗ್ಗೆಯೂ, ಮುಕ್ತಾಯ-ರೂಪವಾಗಿ ಶೃತಿ ಪ್ರಾಮಾಣ್ಯಗಳ ಬಗ್ಗೆಯೂ ವಿವರಿಸಿದ್ದಾರೆ.

ಭಾರತೀಯರಲ್ಲಿ ಹಿಂದಿನಿಂದ ಗುರು-ಹಿರಿಯರಲ್ಲಿ ನಿಶ್ಚಲಭಕ್ತಿ, ಧರ್ಮ ಗ್ರಂಥಗಳಲ್ಲಿ ಸಂಶಯರಹಿತ ಬುದ್ಧಿ ಬೆಳೆದು ಬಂದಿದೆ. ಹೀಗಾಗಿ ಗುರುಗಳು ಹೇಳಿದ, ಧರ್ಮಗ್ರಂಥಗಳಲ್ಲಿ ಹೇಳಿದ ವಿಚಾರಗಳ ಬಗ್ಗೆ ಇದನ್ನು ಏಕೆ ಮಾಡಬೇಕು ? ಎಂಬುದಾಗಿ ಪ್ರಶ್ನಿಸದೆ ಹಾಗೆ ನಡೆದುಕೊಳ್ಳುವ ಸಂಪ್ರದಾಯ ಬಂದಿದೆ. ಆದರೆ ಇಂದಿನ ವಿಜ್ಞಾನಯುಗದಲ್ಲಿ ಹಾಗಲ್ಲದೆ ಕಾರಣವನ್ನು ಕೊಡದೆ ಹೀಗೆ ಮಾಡಿ ಎಂದರೆ ಜನ ತಮ್ಮ ಒಪ್ಪಿಗೆಯನ್ನು ಸೂಚಿಸುವುದಿಲ್ಲ. ಆದ್ದರಿಂದ ಇಂದು ಹಳೆಯ ಶುಭ-ಆಚಾರಗಳ ಸದುದ್ದೇಶಗಳನ್ನು ಸಾಮಾನ್ಯರಿಗೆ ವಿವರಿಸುವಕಾರ್ಯ ಅತ್ಯಗತ್ಯವಾಗಿದೆ. 'ಬೆಂಕಿ ಮುಟ್ಟಬೇಡಿ' ಎಂದರೆ ಸಾಕಾಗಿತ್ತು ಹಿಂದಿನ ಕಾಲದಲ್ಲಿ. "ಬೆಂಕಿ ಮುಟ್ಟಬೇಡಿ; ಏಕೆಂದರೆ ಅದು ಸುಡುತ್ತದೆ" ಎಂದು ಹೇಳಬೇಕಾದ ಕಾಲ ಇದಾಗಿದೆ. ಹೀಗೆ ಹೇಳಿದಾಗ ಮಾತ್ರ, ಜನಕ್ಕೆ ಆಚಾರದ ಬಗ್ಗೆ ಆಸ್ಥೆ ಮೂಡುತ್ತದೆ. ಈ ದಿಶೆಯಲ್ಲಿ

ಶ್ರೀಗಳವರು ಪ್ರಮಾಣಿಸಿ, ಕಾರಣಗಳನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಅಂಥಾ ಅವ್ಯಕ್ತವಾದ ಕಾರಣಗಳನ್ನು ಸುವ್ಯಕ್ತಗೊಳಿಸಿ, ಮನಸಿನ ಸಂಶಯವನ್ನು ಕಳೆಯುವಂತೆ ಮಾಡಿದ್ದಾರೆ; ಆಚಾರದಲ್ಲಿ ಮನಸ್ಸು ಆಸ್ಥೆ ತಳೆಯುವಂತೆ ಮಾಡಿದ್ದಾರೆ.

ಉದಾಹರಣೆಗೆ 'ರಂಗವಲ್ಲಿಯ' ಬಗ್ಗೆ ಬರೆದ ಲೇಖನವನ್ನು ನೋಡಬಹುದು. ಮನೆಯ ಮುಂದೆ ರಂಗವಲ್ಲಿಯನ್ನು ಇಡಬೇಕೆಂದು ಹೇಳಿದರು ಹಿರಿಯರು. ಅವರಂತೆ ಮಾಡಿದರು ಜನ. ಈಗ ಏಕೆ ಇಡಬೇಕು ? ಇಡದಿದ್ದರೆ ಏನಾಗುತ್ತೆ ?' ಎಂದು ಕೇಳುವ ಚಟ-ರೂಢಿ ಬಂದಿದೆ. ಅದಕ್ಕೆ ಸಮಂಜಸ ಉತ್ತರ ದೊರೆತಾಗ "ಹೌದು ನೀವು ಹೇಳುವುದು ಸರಿ" ಎಂದು ಒಪ್ಪಿಕೊಳ್ಳುತ್ತದೆ ಜನತೆ. ಅಂಥಾ ಕಾರಣವನ್ನು ಉದ್ದೇಶವನ್ನು ವಿವರಿಸುತ್ತಾ ಹೀಗೆ ಬರೆಯುತ್ತಾರೆ ಶ್ರೀ ಶ್ರೀಗಳವರು ....ರಂಗವಲ್ಲಿಯ ಉದ್ದೇಶವೇನೆಂಬುದನ್ನು ಮಾತ್ರ ತಿಳಿದವರು ಅಪರೂಪ. ಏತಕ್ಕೆ ಹಾಕಬೇಕು ? ಹಾಕುವುದರಿಂದ ಫಲವೇನು ? ಎಂದು ಕೇಳಿದರೆ ಉತ್ತರ ದೊರೆಯುವುದು ತೀರ ವಿರಳ. ದೊರೆತರೂ ಅಂದಕ್ಕಾಗಿ ಎಂದು ತೃಪ್ತರಾಗುವುದೆಷ್ಟೋ ಅಷ್ಟೆ. ಅಂದವೂ ಫಲವೇನೋ ಸರಿಯೆ. ಆದರದು ಗೌಣ. ಅದಕ್ಕಿಂತಲೂ ಮಿಗಿಲಾದ ಮುಖ್ಯವಾದ ಬೇರೊಂದು ಫಲವುಂಟು. ಆ ಫಲವು ಈ ವಚನದಲ್ಲಿ ಉಕ್ತವಾಗಿದೆ. ಪೃಥ್ವಿಯ ಪೂರ್ವಾಶ್ರಯವು ಸಮ್ಮಾರ್ಜನೆ ರಂಗವಲ್ಲಿಯಿಂದ ಹೋಯಿತ್ತು. ಅಪ್ಪುವಿನ ಪೂರ್ವಾಶ್ರಯ ಮಂತ್ರ ವಿಭೂತಿಯಿಂದ ಹೋಯಿತ್ತು. ಷಡ್ಭೂತಗಳಲ್ಲಿಯೂ ಪೂರ್ವಾಶ್ರಯ ದೋಷಗಳುಂಟು. ಅವನ್ನು ಕಳೆಯದೆ ಕೈಗೊಂಡ ಕ್ರಿಯೆಗೆ ಕಳೆಯೇರಲಾರದು. ಶುಭವಾಗಿ ಸುಸೂತ್ರವಾಗಿ ಕಡೆಗಾಣಲಾರದು. ಆದುದರಿಂದ ಮಂತ್ರ–ವಿಭೂತಿ, ಧೂಪ–ದೀಪ, ಸ್ತುತಿ-ಗೀತೆ, ಧ್ಯಾನ–ಮೌನಗಳಿಂದ ಕ್ರಮವಿಡಿದು ಕಳೆಯಬೇಕೆಂದು ಹೇಳಿದೆ."

ಈ ವಿವರಣೆಯನ್ನು ಓದಿದ ಯಾವನಾದರೂ ಅವೆಲ್ಲವನ್ನು ಆಚರಣೆಗೆ ತರಲು ಖಂಡಿತ ಪ್ರಯತ್ನಿಸುತ್ತಾನೆ. ಹೀಗೆ ಶ್ರೀ ಶ್ರೀಗಳವರು ಹಿಂದಿನ ವಚನಗಳನ್ನು ಇಂದಿನ ಜನರೂ ಅರ್ಥ ಮಾಡಿಕೊಳ್ಳುವಂತೆ, ಅವರ ತತ್ತ್ವವನ್ನು ಅರಿಯುವಂತೆ ವಿವರಿಸಿದ್ದಾರೆ.

ಈ ವಿಭಾಗದಲ್ಲಿ ಗುರು–ಲಿಂಗ–ಜಂಗಮ ಭಕ್ತಿ ; ಪೂಜೆ–ಪ್ರಸಾದ, ದ್ವೈತಾದ್ವೈತಾಚರಣೆ, ಭಾವ–ಭಕ್ತಿ, ಲಿಂಗೈಕ್ಯ ಆಚಾರ–ಅನಾಚಾರ ಈ ವಿಚಾರಗಳ ಬಗ್ಗೆ ಸಮ್ಯಜ್ಞಾನಿ ಚನ್ನಬಸವಣ್ಣನ ವಿಚಾರಗಳನ್ನು, ಸ್ಫುಟವಾದ ಮಾತುಗಳಲ್ಲಿ ವಿವರಿಸಿದ್ದಾರೆ.

'ಮಿಂಚಿನ ಮಾತುಗಳು' ಎಂಬ ಶಿರೋನಾಮೆಯಲ್ಲಿ ಮುತ್ತಿನಂಥಾ ಮಾತುಗಳನ್ನು ಒಂದೆಡೆ ಸಂಗ್ರಹಿಸಿ ಕೊಟ್ಟಿರುವುದು ನಾಗಾಲೋಟದ ಈ ಕಾಲದ, ತಾಳ್ಮೆಯಿಲ್ಲದ ಜನ ಸಾಮಾನ್ಯಕ್ಕೆ ಅತ್ಯಂತ ಉಪಕಾರಿಯಾಗಿದೆ. ಚನ್ನಬಸವಣ್ಣನ ವಚನಗಳ ಗಾಂಭೀರ್ಯವನ್ನೂ ವಿಚಾರಧಾರೆಯನ್ನೂ ಅರಿಯಲು ಸಹಕಾರಿಯಾಗಿದೆ.

ಶ್ರೀ ಶ್ರೀಗಳವರು ಇಂದಿನ ಸಮಾಜದ ಲೋಪದೋಷಗಳನ್ನು ಸೂಚಿಸಿ ಖಂಡಿಸಿದ್ದಾರೆ. "ನಿರಾಭಾರಿ ದೀಕ್ಷಾಕಾರ್ಯಗಳನ್ನು ಮಾಡಕೂಡದು....ಇದನ್ನರಿಯದೆ ಕೆಲ ಜಂಗಮರು ನಾವೇಕೆ ದೀಕ್ಷೆಯ ಮಾಡಬಾರದೆಂದು ವಾದಿಸುತ್ತಾ ಒಳಗೊಳಗೆ ದೀಕ್ಷೆಯ ಮಾಡುತ್ತ, ಪ್ರತಿ ಫಲಾಕಾಂಕ್ಷೆಯಿಂದ ಆತ್ಮ ಶಿಷ್ಯ ವೃತ್ತಿಯನ್ನು ಹೆಚ್ಚಿಸಿಕೊಳ್ಳುವ ಅಕ್ರಮ ವೃತ್ತಿಗೆ ಒಳಪಟ್ಟಿದ್ದಾರೆ. ಇದು ತತ್ವಕ್ಕೂ ಶಿವಶರಣರ ದೃಷ್ಟಿಗೂ ಎಂತಹ ವಿರೋಧವೆಂಬುದನ್ನು ಈ ವಚನದಿಂದಾದರೂ "ಅರಿತರೆ ಲೇಸು, ಅಂಗೀಕರಿಸಿದರೆ ಒಳಿತು; ಎಂದು ವಚನವನ್ನು ಉದಾಹರಿಸಿ ಹೇಳಿದ್ದಾರೆ (ಪುಟ ೧೯) ಆಚಾರ–ಆರೋಗ್ಯಗಳಿಗೆ ಮಾರಕಗಳಂತಿರುವ ಹೋಟೆಲುಗಳ ಬಗ್ಗೆ ಎಚ್ಚರಿಸಿದ್ದಾರೆ. "ಹೋಟಲುಗಳು ಈ ಕಾಲದಲ್ಲಿ ಭವಿಪಾಕಕ್ಕೆ ಬಾಯಿ ಬಿಡುವ ಅಣ್ಣಗಳಿಗೆಲ್ಲ ಚನ್ನಬಸವಣ್ಣನ ಅಪ್ಪಣೆಯಂತೆ ಪುನ್ನರಕವಾಸವು." ಪುನರ್ಜನ್ಮವು ಕಟ್ಟಿಟ್ಟ ಬುತ್ತಿ. ಇದನರಿತು ಲಿಂಗವಂತರು ಬಲು ಎಚ್ಚರದಿಂದಿರಬೇಕು" ಹೀಗೆ ಅಲ್ಲಲ್ಲಿ ಜನರ ಲೋಪದೋಷಗಳನ್ನು ಬಿಚ್ಚು ಮನಸಿನಿಂದ, ಮನಸಿಗೆ ಚುಚ್ಚುವಂತೆ ನುಡಿದು ಸಮಾಜ ಸುಧಾರಣೆಗಾಗಿ ಶ್ರಮಿಸಿದ್ದಾರೆ.

ಸ್ವಾಮಿಗಳವರ ಶೈಲಿ ಬೇಗ ಮನಸಿಗೆ ಹಿಡಿಸುವಂಥದಾಗಿದೆ. ವೇದಾಂತ–ತತ್ವದಂಥಾ ಕ್ಲಿಷ್ಟ ವಿಚಾರವನ್ನು ಸುಲಭಗ್ರಾಹ್ಯ ಭಾಷೆಯಲ್ಲಿ ಬಿಡಿಸುವುದು ಮಾನವನಲ್ಲಿನ ದೈವಾಂಶ ಪ್ರಚೋದನೆಗೊಂಡಾಗ ಮಾತ್ರ ಸಾಧ್ಯ ಎಂಬುದನ್ನು ನಾವು ಇಲ್ಲಿ ಕಾಣಬಹುದು. ಒಂದೊಂದು ಮಾತು ಎಷ್ಟೋ ಅರ್ಥಗರ್ಭಿತ; ನೋಡಿ :— "ಈತನು ಬರೀ ಬಸವನಲ್ಲ, ಚನ್ನಬಸವ! ಬಸವಣ್ಣ ಹೃದಯವನ್ನು ಕರಗಿಸುತ್ತಾನೆ; ಚನ್ನಬಸವಣ್ಣ ಮೆದುಳನ್ನು ಮೆರಗಿಸುತ್ತಾನೆ" "ರುಚಿ ಗೆದ್ದವನೆ ಋಷಿ" ಬೆಳೆದು ಹೆಮ್ಮರವಾದ ಮತವೃಕ್ಷಕ್ಕೆ ಗುರುವೇ ತಾಯಿಬೇರು. ಶಿಷ್ಯರೆ ಶಾಖೋಪಶಾಖೆಗಳು"

ವಿವರಣೆಯ ಭಾಗವೂ ಅಷ್ಟೇ. ಸುಲಭ ಗ್ರಾಹ್ಯತೆ ಇದೆ. ಐಕ್ಯದ ಬಗೆಗೆ ಕೊಟ್ಟಿರುವ ಈ ವಿವರಣೆ ಉದಾಹರಣೆಯಾಗಿದೆ– "ಐಕ್ಯವೆಂದರೆ ಸುಖ ದುಃಖಗಳ ಸಮರಸ; ಸತಿಪತಿ ಭೇದದ ಸಮನ್ವಯ - ಬೇಕು ಬೇಡೆಂಬ ಬಯಕೆಗಳ ಉಪರತಿ; ಹಸಿವು ತೃಷೆಗಳ ಉಪಶಾಂತಿ, ಮಾನಾಪಮಾನಗಳ ವಿಲಯ, ಲಾಭಾಲಾಭಗಳಲಿ ನಿರ್ಭಯ, ಜಯಾಪಜಯಗಳ ಸಮತ್ವ, ಗುರು ಶಿಷ್ಯ ಭಾವದ ಏಕತ್ವ, ಆಶೆ-ನಿರಾಶೆಗಳ ನಿವೃತ್ತಿ. ಇನ್ನೂ ತಿಳಿಯಾಗಿ ಹೇಳಬೇಕೆಂದರೆ ಸಂತೃಪ್ತಿ (ಪುಟ ೨೪)– ಇದಕ್ಕಿಂತ ಸುಲಭವಾದ ವ್ಯಾಖ್ಯೆಯನ್ನು ಇನ್ನೆಲ್ಲಿಯಾದರೂ ನೋಡ ಸಿಗುವುದು ಕಷ್ಟ.

ಕೆಲವು ಸಂದರ್ಭಗಳಲ್ಲಿನ ವ್ಯಾಖ್ಯೆ ತಿಳಿದವರಿಗೆ 'ಸಾಕಷ್ಟು' ಆಗಿದ್ದರೂ ಸಾಮಾನ್ಯರಿಗೆ ಇನ್ನೂ ಹೆಚ್ಚಿನ ವಿವರಣೆ ಬೇಕಾಗಿತ್ತು ಎನಿಸುತ್ತದೆ. (ಶ್ರೀ ಗಳವರು ಮುನ್ನುಡಿಯಲ್ಲಿ 'ಸಮಗೂ ಅತೃಪ್ತಿಯೇ' ಎಂದು ಸೂಚಿಸಿ, ಈ ಕಾರ್ಯವನ್ನು ಮುಂದುವರಿಸುವ ಯೋಗ ಒದಗಿ ಬರಲೆಂದು ಆಶಿಸಿದ್ದಾರೆ). ಏಕೆಂದರೆ ಈಗಿನಷ್ಟೇ

ವ್ಯಾಖ್ಯಾನದಿಂದ ಸಂಶಯ ಹಾಗೆಯೇ ಉಳಿಯುತ್ತದೆ. ಉದಾ : ತಂದೆ ಗುರುವಾಗ ಲಾರ- ತಾಯ್ತಂದೆಯರೇ ಪ್ರಥಮ ಗುರು ಎಂಬ ಭಾವನೆ ಬೇರೂರಿರುವ ಮನಸಿಗೆ ಈ ಮಾತು ಹಿಡಿಸುವುದಿಲ್ಲ, ಸತ್ಯ ದೂರವಾಗಿ ಕಾಣುತ್ತದೆ (ಪುಟ : ೧೩) ? ಹಾಗೆಯೇ ಪುಟ ೭ ರಲ್ಲಿ ಷಡ್ಭೂತಗಳ ಬಗ್ಗೆ ಮಾತು ಬಂದಾಗ ಸಾಮಾನ್ಯವಾಗಿ ಪಂಚಭೂತಗಳೆಂದೇ ತಿಳಿದವರಿಗೆ ಷಡ್ಭೂತ ಯಾವುದು ಎನಿಸುತ್ತದೆ.

ಶ್ರೀ ಸ್ವಾಮಿಗಳವರು ತಮ್ಮ ವಿವರಣೆಯಲ್ಲಿ ಚನ್ನ ಬಸವಣ್ಣನವರ ವಚನಗಳ ಜೊತೆಗೆ ಅಕ್ಕಮಹಾದೇವಿ, ಬಸವಣ್ಣ ಮೊದಲಾದವರ ವಚನಗಳನ್ನೂ ಉದಾಹರಿ ಸಿರುವುದು ಉಪಯುಕ್ತವಾಗಿದೆ.

ಹಿಂದಿನ ಜನ ವಿಜ್ಞಾನ ದೃಷ್ಟಿಯ ಕಡೆಗೆ ಹೇಗೋ ಹಾಗೆ ಐತಿಹಾಸಿಕ ಅಂಶಗಳ ಕಡೆಗೂ ಸಾಕಷ್ಟು ಗಮನವನ್ನು ನೀಡುತ್ತಿರಲಿಲ್ಲ (ಈ ತರಹೆಯ ವಿಚಾರಧಾರೆ ಇಂಗ್ಲೀಷರ ಸಂಪರ್ಕದಿಂದ ತಾನೆ ಬೆಳೆದು ಬಂದದ್ದು ?) ಈಗ ಆ ಅವಶ್ಯಕತೆ ಇದ್ದು ಆ ದಿಶೆಯಲ್ಲಿ ಶ್ರೀ ಗಳವರು ದಾರಿ ತೋರಿದ್ದಾರೆ.

ವೀರಶೈವವು ಎಂದಿನದು ? ಈ ಮತ ಎಂದಿನದು ? ಈ ಹೆಸರು ಎಂದಿನದು ? ಪೂರ್ವಾಚಾರ್ಯರು ಯಾರು ? ಈ ವಿಚಾರಗಳ ಬಗ್ಗೆ ಪೂರ್ಣ ಸಂಶೋಧನೆಯನ್ನು ನಡೆಸಬೇಕಾಗಿದೆಯೆಂದು ತಿಳಿಸಿ, ಇದುವರೆಗೆ ತಿಳಿದು ಬಂದಿರುವ ಕೆಲವು ಮುಖ್ಯಾಂಶ ಗಳನ್ನು ಹೇಳಿ, ತಮ್ಮ ಅಭಿಪ್ರಾಯವನ್ನೂ ಕೊಟ್ಟು ಮಾರ್ಗದರ್ಶನ ಮಾಡುತ್ತಾ, ಮುಂದಿನ ಸಂಶೋಧನಾ ಕಾರ್ಯಕ್ಕೆ ಬೆಳಕನ್ನು ನೀಡಿದ್ದಾರೆ. "ಇಂದಿನ ಸಾಮಾಜಿಕ ಸಂದೇಹಗಳಿಗೂ ಸಮಸ್ಯೆಗಳಿಗೂ ಈ ಬರೆಹವು ಸ್ವಲ್ಪ ಸಮಾಧಾನಕಾರಕವಾದಲ್ಲಿ ಪಟ್ಟ ಪರಿಶ್ರಮ ಸಾರ್ಥಕ' ಎಂದು ಮುಕ್ತಾಯ ಮಾಡಿದ್ದಾರೆ. ಓದುಗರ ಸಂಶಯಾದಿಗಳು ಪರಿಹಾರ ಮಾರ್ಗವನ್ನು ಪಡೆಯಬಹುದು, ಈ ಪುಸ್ತಕವನ್ನು ಶ್ರದ್ಧಾ ಭಕ್ತಿಗಳಿಂದ ಓದಿ ವಿಚಾರ ಮಾಡಿದರೆ ಎಂದು ನಿಸ್ಸಂಶಯವಾಗಿ ಹೇಳ ಬಹುದು.

ಶ್ರೀ ಜ.ಚ.ನಿ. ಯವರು ತಮ್ಮ ಈ ಪುಸ್ತಕದ ಮೂಲಕ ಶರಣರ ಪಾವಿತ್ರ್ಯ ವನ್ನು ಬೋಧಿಸಿ, ಅವರ ಸಾಧನೆಯ ಮೇಲ್ಪಂಗ್ತಿಯನ್ನು ತಿಳಿಸಿ, ಶರಣರನ್ನು ಹಾಗೂ ಪರವನ್ನು ನಂಬುವ ಎಲ್ಲ ಜನರ ಮನಸಿಗೆ 'ಆಧ್ಯಾತ್ಮದ ಗರುಡಿ'ಯಲ್ಲಿ 'ವ್ಯಾಯಾಮ' ವನ್ನು ಕೊಟ್ಟು ಅವರನ್ನು ಜೆಟ್ಟಿ 'ಸಬಲ'ರನ್ನಾಗಿ ಮಾಡಿದ್ದಾರೆ. ಇಂಥಾ ಪುಸ್ತಕ ಗಳನ್ನು ಮತ್ತೆ ಮತ್ತೆ ಓದುವುದರಿಂದ ಚಿತ್ತಶುದ್ಧಿಯಾಗುತ್ತದೆ, ಧರ್ಮಾಚರಣೆಯಲ್ಲಿ ಶ್ರದ್ಧೆ ಬೆಳೆಯುತ್ತದೆ. ಚಿತ್ತಶುದ್ಧಿ ಹಾಗೂ ಧರ್ಮಾಚರಣೆಯಿರುವ (ಇದನ್ನೇ ಜ್ಞಾನ ಕರ್ಮಗಳ ಸಮ್ಮೇಳ ಎನ್ನುವುದು) ಮುಕ್ತಿ ಕಟ್ಟಿಟ್ಟ ಬುತ್ತಿ. ಇಲ್ಲಿ ಸಾಹಿತ್ಯದ

ಬೆರಗು, ಶ್ಲೇಷಾದ್ಯಲಂಕಾರಗಳ 'ಮಾಯಾಜಾಲ'ಕ್ಕೆ ಅವಕಾಶವಿಲ್ಲ. ವಿಚಾರ–ವಿಮರ್ಶೆಗಳ ವಿವೇಕಕ್ಕೆ ಇಲ್ಲಿ ಪ್ರಾಮುಖ್ಯತೆಯೇ ಹೊರತು, ವಿನೋದಕ್ಕಲ್ಲ.

ಒಟ್ಟಿನಲ್ಲಿ ಹೇಳುವುದಾದರೆ 'ಸಮ್ಯಜ್ಞಾನಿ ಚನ್ನಬಸವಣ್ಣ' ಪುಸ್ತಕವು ತತ್ವ ವಿಚಾರಕ್ಕೆ 'ಬಾಯಿಬಿಟ್ಟು' ಕುಳಿತವರಿಗೆ, 'ಯೋಗ್ಯ ಆಹಾರ'ವನ್ನು ಒದಗಿಸುತ್ತದೆ. ಇಂಥಾ ವಿವೇಕವಾಣಿಯನ್ನು ನೀಡಿದ ಸ್ವಾಮಿಗಳನ್ನು, ಆದರಿಂದ ಉಪಕೃತನಾದ ಪ್ರತಿಯೊಬ್ಬ ಕನ್ನಡಿಗನೂ ಕೊಂಡಾಡಲೇಬೇಕು. ಶ್ರೀ ಶ್ರೀ ಗಳವರ ಲೇಖನಿಯಿಂದ, ಇನ್ನೂ ಹೆಚ್ಚಿನ ವಿವರಣೆಗಳನ್ನೊಳಗೊಂಡ. ಚನ್ನಬಸವಣ್ಣನ ವಚನ ಸಂಗ್ರಹ ವನ್ನೊಳಗೊಂಡ, ವಿಸ್ತೃತ ಮುದ್ರಣ ಹೊರಬರುವಂತಾಗಲೆಂದು 'ಚಂದ್ರಶೇಖರ ಸ್ವಾಮಿ'ಯನ್ನು ಪ್ರಾರ್ಥಿಸೋಣ.



# ಬೆಳಕಿನಲ್ಲಿ ಬದುಕು

—ಶ್ರೀ ಸಾಗರ ಕೃಷ್ಣಾಚಾರ್ಯ

ಈ ಕೃತಿಗೆ ಚಿಕ್ಕದಾದರೂ ಚೊಕ್ಕದಾದ ಮುನ್ನುಡಿಯನ್ನು ಇತ್ತ ಈ ರಂಗನಾಥ ದಿವಾಕರರು ವಚನಕಾರರಲ್ಲಿ ಅಲ್ಲಯ್ಯ ಪ್ರಭುಗಳ ನಿಲುವು ಬಹಳೇ ಶ್ರೇಷ್ಠವಾದುದು. ಅವರು ಶೂನ್ಯ ಸಿಂಹಾಸನಾಧೀಶ್ವರರು. ಅನುಭವ ಮಂಟಪದ ಅಧ್ಯಕ್ಷರು. ಅವರ ವಚನಗಳು ಬೇರೆ ಬೇರೆ ಕಡೆಗೆ ವಿವಿಧ ರೀತಿಯಿಂದ ಈಗಾಗಲೇ ಪ್ರಕಟವಾಗಿದೆ. ಆದರೆ "ಅಲ್ಲಯ್ಯನ ಬೆಳಕು" ಎಂಬ ಪುಸ್ತಕದಲ್ಲಿ ಒಂದು ವೈಶಿಷ್ಟ್ಯವಿದೆ. ಅವರ ಅನೇಕಾನೇಕ ಮಹತ್ವದ ವಚನಗಳಿಗೆ ಇವರಲ್ಲಿ ಸುಂದರವಾದ ವಿವರಣೆ ಕೊಡಲಾಗಿದೆ. ಪ್ರಭುಗಳ ವಚನಗಳಲ್ಲಿ ಅನೇಕ "ಮುಂಡಿಗೆ" ಗಳುಂಟು. ಹಲವು ವಚನಗಳು ಮುಂಡಿಗೆಗಳಷ್ಟೇ ಗಡುಚಾದವುಗಳು. ಅವುಗಳನ್ನೆಲ್ಲಾ ಬಿಡಿಸಿ ಮುಚ್ಚಿದ ಬೆಳಕನ್ನು ಬೆಳಗುವ ಮಿಂಚಾಗಿ ಮಾಡಿ ನಮ್ಮ ಅಜ್ಞಾನವನ್ನು ಪರಿಹರಿಸುವ ಕೆಲಸವನ್ನು ಈ ಪುಸ್ತಕವು ಮಾಡುತ್ತಿದೆ. ವಚನ ವಾಙ್ಮಯದ ಅಭ್ಯಾಸಿಗಳಿಗೆ ಇದು ಒಳ್ಳೆಯ ಕೈದೀವಿಗೆ; ಎಂದು ಅಭಿಪ್ರಾಯಪಟ್ಟಿದ್ದಾರೆ. ಪ್ರಕಾಶಕರ ಮಾತಿನಲ್ಲಿ ಹೇಳಬೇಕಾದರೆ ಬೆಳಕು ದಿಗಂತ ವ್ಯಾಪ್ತಿಯಾಗಲು ದಿವಾಕರನ ದೀಪ್ತಿಯಂತೆ ಕಾರ್ಯಮಾಡಿದೆ –ಕೃತಿ ಮುನ್ನುಡಿ ಎರಡೂ ಸೇರಿ.

ಇನ್ನು 'ಅಲ್ಲಮ,' 'ಅಲ್ಲಯ್ಯ' ಎಂಬೀ ಹೆಸರುಗಳ ಬಗೆಗೂ ವಿವಾದವಿದೆ. ಆ ವಿವಾದ ಇಂದಿಗೂ ಬಗೆ ಹರಿದಿಲ್ಲ. ಶ್ರೀಗಳಾದ ಎಂ. ಆರ್. ಶ್ರೀನಿವಾಸಮೂರ್ತಿಗಳೂ, ಕಪಟ್ರಾಳ್ ಕೃಷ್ಣರಾಯರೂ ತಮ್ಮದೇ ಆದ ರೀತಿಯಲ್ಲಿ ವಾದ ಹೂಡಿದ್ದಾರೆ. 'ಅಲ್ಲಮ' ಶಬ್ದವೇ ಸಹಜವಾಗಿ ಬಳಸಿದ್ದುದನ್ನು ಎತ್ತಿ ಹಿಡಿದಿದ್ದಾರೆ. ಗ್ರಂಥಕರ್ತರು 'ಅಲ್ಲಮ' ಎಂಬುದು ಅಪಭ್ರಂಶರೂಪ 'ಅಲ್ಲಯ್ಯ' ಎಂಬುದೇ ನಿಜವಾದ ಹೆಸರು ಎಂಬುದನ್ನು ಸಮರ್ಥಿಸಿಕೊಂಡಿದ್ದಾರೆ. ಈ ವಾದಕ್ಕೆ ಇತಿಮಿತಿಯಿಲ್ಲ. ಮಥಿಸಿದಂತೆಲ್ಲ ನಿಜ ಸ್ವರೂಪ ಬೆಳಕಿಗೆ ಬಂದೀತು. ಸದ್ಯ ಇಲ್ಲಿ ಈ ವಾದ ಇಷ್ಟಕ್ಕೆ ನಿಲ್ಲಿಸಿ

ಕೃತಿಯನ್ನು ಒಳಹೊಕ್ಕು ನೋಡೋಣ. ನಮ್ಮವರೊಬ್ಬರು ಕೇಳಿಲ್ಲವೆ ? ಹೆಸರಿನಲ್ಲೇ ನಿದೆ ? ಎಂದು. ೧೪೨ ಪುಟಗಳಲ್ಲಿ ಅಡಕವಾದ ಈ ಕೃತಿ ನಾಲ್ಕು ದಿಕ್ಕುಗಳಿಂದ ಬೆಳಕನ್ನು ಚೆಲ್ಲುತ್ತದೆ. (೧) ಅಲ್ಲಯ್ಯನ ಬೆಳಕು, (೨) ಮೈ ಬೆಳಗು, (೩) ಮಾತಿನ ಬೆಳಗು, (೪) ಮನದ ಬೆಳಗು. ಕೊನೆಯಲ್ಲಿ ಈ ಎಲ್ಲ ಬೆಳಕುಗಳಿಗೂ ಸ್ಥಾಯಿಯಾದ ಬೆಳಕನ್ನೀವ ಕೆಲವು ಉಜ್ವಲ ವಚನಗಳೂ ಇವೆ. ಈ ಒಂದೊಂದು ಬೆಳಕೂ ಎಷ್ಟರ ಮಟ್ಟಿಗಿನ ಬೆಳಕನ್ನು ಕೊಡಬಲ್ಲವು. ಆ ಬೆಳಕು ನಮ್ಮ ಮೈ–ಮನ–ಮಾತುಗಳನ್ನು ಎಷ್ಟರ ಮಟ್ಟಿಗೆ ಪ್ರಕಾಶಿಸಬಲ್ಲುದು ಎಂಬುದನ್ನಿಲ್ಲಿ ನೋಡಬೇಕಾಗಿದೆ.

'ಅಲ್ಲಯ್ಯನ ಬೆಳಕು' ಎಂಬ ಭಾಗದಲ್ಲಿ ಅಲ್ಲಯ್ಯನ ದಿವ್ಯ ಅವತಾರದ ಅಗಾಧ ವಿಭೂತಿತ್ವದ ಅರಿವು ಕೆಲವು ವಚನಗಳ ಮೂಲಕ ಮಾಡಿಕೊಡಲಾಗಿದೆ. ಎಂಟು ನೂರು ವರುಷಗಳ ಆಚೆ ನಾಡಿನ ಜನ ಕಣ್ಣಿದ್ದೂ ಕುರುಡಾಗಿತ್ತು. ಅರಿವಿದ್ದೂ ಮರುಳಾಗಿತ್ತು. ಹಗಲಿನಲ್ಲಿ ಹಾದಿತಪ್ಪಿ ನಡೆವವರ ಸಂಖ್ಯೆ ಕಡಿಮೆ ಇರಲಿಲ್ಲ ಇಂಥ ಮತಿಗೆಟ್ಟ ಮೂಢರನ್ನು ತನ್ನ ಸ್ವಯಂ ಪ್ರಕಾಶದಿಂದ ಬೆಳಗಿದ ಮಹಾ ಮಹಿಮ ಅಲ್ಲಯ್ಯನೇ ಅಲ್ಲಮಪ್ರಭು. ಸೂರ್ಯನ ಬೆಳಕು ಒಳಗಿನ ಅಂಧಕಾರವನ್ನು ದೂರ ಮಾಡಲು ಕ್ಷ ಕಿರಣವಾಗಲಿಲ್ಲ.ಅಲ್ಲಯನಲ್ಲಿದ್ದ ಜ್ಞಾನ ಸೂರ್ಯ ಅಜ್ಞಾನಾಂಧಕಾರ ವನ್ನು ದೂರ ಮಾಡಲು ಸಾಮಾನ್ಯರಿಗಷ್ಟೇ ಸಹಾಯಕನಾಗಲಿಲ್ಲ ; ಅಣ್ಣ ಬಸವಣ್ಣ, ಚೆನ್ನಬಸವಣ್ಣ, ಮರುಳ ಶಂಕರದೇವ, ಸಿದ್ಧರಾಮ, ಮಡಿವಳಮಾಚಿತಂದೆ, ಮೋಳಿಗಿ ಮಾರಯ್ಯ ಮುಂತಾದ ಶಿವಶರಣರಲ್ಲಿದ್ದ ತಿಮಿರ ರಾಶಿಯನ್ನೂ ದೂರ ಮಾಡಿದನು. ಅಂತೆಯೇ ಭಕ್ತಿಪ್ರಿಯನೂ, ಶಾಂತಿ ಹೃದಯನೂ ಆದ ಬಸವಣ್ಣನಿಗೆ ಅಲ್ಲಯ್ಯನೆಂಬ ಬೆಳಗು ಪ್ರಳಯ ಕಾಂತಿಯಂತೆ ದೊಡ್ಡದಾಗಿ ಕಂಡರೂ ಅದು ಚಂದ್ರಕಾಂತಿಯಲ್ಲಿ ಪರಿವರ್ತಿತವಾಯಿತು. ಅಂತೆಯೇ ಆ ಬೆಳಗಿನ ಬೆಳುದಾವರೆಯೊಳಗೆಯೇ ಭೃಂಗನಾಗಿ ಬದುಕಿದ. ಬುದ್ಧಿಪ್ರಧಾನ ಜೀವಿಯೂ ಸಮ್ಯಕ್‌ಜ್ಞಾನಿಯೂ ಆದ ಚೆನ್ನ ಬಸವಣ್ಣ ಆ ಬೆಳಕನ್ನು ಕಂಡ ಬಗೆ ಈ ರೀತಿಯಿದೆ. ಸಂಸಾರ ಭ್ರಮೆಯ ಸಂಹರಿಸಿ ಅಚ್ಚೊತ್ತಿದ ಚಿಜ್ಜ್ಯೋತಿಯಂತಿದೆ. ಅಮೃತ ಕಿರಣದ ಸಮ್ಯಜ್ಜ್ಯೋತಿಯಂತಿದೆ. ಹೊಳೆವ ಮಾಣಿಕ್ಯದ ಬೆಳಗ ನಿಟ್ಟಿಸಿದಂತಿದೆ. ಅಂತೆಯೇ ಆತ ನತಮಸ್ತಕನಾಗಿ ನುಡಿದ ಬಗೆ ಇದು:

"ಇಲ್ಲದ ಸಂಸಾರ ಕಣ್ಣಮುಂದೆ ರೂಪಾಗಿ ಕಾಡುತಿರ್ದರೆ, ಸುಜ್ಞಾನವೆಂಬ ಅಂಜನವ ಹಚ್ಚಿ ಸಕಲ ಭ್ರಮೆಯೆಂಬ ಕತ್ತಲೆಯ ಕಳೆದು, ನಿಜಲಿಂಗ ಸಂಬಂಧವ ನೆಲೆಗೊಳಿಸಿ ನಿತ್ಯದಲ್ಲಿ ಅಚ್ಚೊತ್ತಿದನಾಗಿ ಕೂ. ಚ. ಸಂಗಯ್ಯನಲ್ಲಿ ಪ್ರಭುದೇವರ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು"ಪರಮ ಪ್ರಸಾದಿಯೂ ಪ್ರಸನ್ನಹೃದಯಿಯು ಆದ ಮರುಳ ಶಂಕರದೇವ ಪ್ರಭುವನ್ನು ಪರಂಜ್ಯೋತಿಯಾಗಿ ಕಂಡಿದ್ದಾನೆ. ಪ್ರಭುವಿನ ಕಾರುಣ್ಯ ಪ್ರಸಾದದಿಂದ ಪರಿ

ತೃಪ್ತನಾಗಿದ್ದಾನೆ; ಕೃತಾರ್ಥನಾಗಿದ್ದಾನೆ ಸಿದ್ಧರಾಮನ ಅಹಂಭಾವವಂತೂ ಆ ಸುಪ್ರಕಾಶ ಕಂಡ ಮೇಲೆ ತಂತಾನೇ ಹರಿದುಹೋಗಿದೆ. "ಶತಕೋಟಿ ಸೂರ್ಯರು ನಿಮ್ಮ ಬೆಳಗ ಕಾಣಲರಿಯರು" "ನಿಮ್ಮ ಜ್ಞಾನ ತೇಜದ ಮುಂದೆ ಎನ್ನ ಅರಿವು ಏತರನು ಹೇಳಯ್ಯ'' ಎಂದಿದ್ದಾನೆ. ಸಾಹಸಪ್ರಿಯನೂ, ಶಕ್ತಿ ಸಂಪನ್ನನೂ ಆದ ಮಡಿವಳ ಮಾಚಿದೇವ ಜ್ಞಾನದತ್ತಹೊರಳಿದ್ದು ಅಲ್ಲಯ್ಯನಿಂದ. ಆತ ಸಂಪಾದಿಸಿದ್ದು ಅಲ್ಪಜ್ಞಾನವಲ್ಲ, ಮಹಾಜ್ಞಾನ. ಅಲ್ಲಯ್ಯನ ನಿರಾಳ ಬೆಳಗಿನ ಬಿಳಿಯುಡಿಗೆಯು ಮಾಚಿದೇವನ ಮನಸ್ಸನ್ನು ಆಕರ್ಷಿಸಿದೆ. ಆದರೆ ಅದನ್ನು ನೇರವಾಗಿ ಅಲ್ಲಯ್ಯನಿಂದ ಅಪೇಕ್ಷಿಸಿದೆ, ಚೆನ್ನಬಸವಣ್ಣನ ಕೈಯಿಂದ ಪಡೆಯಲಪೇಕ್ಷಿಸಿದೆ. ಬೆಳಗಿಗೆ ಬೆಳಗು ಕೂಡಿಬಂದರೆ ಅದೇ ಒಂದು ಹಿರಿದಾದ ಶೋಭೆಯಲ್ಲವೇ ? ಅಂತೆಯೇ ಆತ "ಒಡಲೆ ಬಸವಣ್ಣ ಪ್ರಾಣವೇ ಚೆನ್ನಬಸವಣ್ಣ. ಎನ್ನ ಮಹಾಜ್ಞಾನವೆ ನೀವು ನೋಡಾ...."ಎಂದು ಮುಕ್ತ ಕಂಠದಿಂದ ಸಾರಿದ್ದಾನೆ. ಮೋಳಿಗಿ ಮಾರಯ್ಯ ಮೊದಲು ಕಾಶ್ಮೀರದರಸ. ತನ್ನ ರಾಜಭೋಗಭಾಗ್ಯಗಳನ್ನು ಬಿಟ್ಟು ಅನುಭಾವ ತತ್ತ್ವಕ್ಕೆ ಕಾಯಕದ ಮಹತ್ತ್ವಕ್ಕೆ ಮಾರುಹೋಗಿ ಕಲ್ಯಾಣಕ್ಕೆ ಬಂದು ನಿಂತಮಹಾಶರಣ.ಕಪಿಲವಸ್ತುವಿನ ಅರಸಾದ ಗೌತಮನುಬೋಧಿವೃಕ್ಷದಿಂದ ಬುದ್ಧನಾದಂತೆ ಮಾರಯ್ಯನು ಮೋಳಿಗಿ ಕಾಯಕದಿಂದ ಅಕ್ಷಯ ಸಿದ್ಧನಾಗುತ್ತಾನೆ. ಒಬ್ಬರ ಹಂಗಿಗೆ ಮುಖಸ್ತುತಿಗೆ ಮಾರುಹೋಗದ, ಕಂಡದ್ದನ್ನು ಕಂಡಂತೆ ನುಡಿಯಬಲ್ಲ ಮಾರಯ್ಯನ ಅಂತರಾಳದಿಂದ ಬಂದ ಮಾತಿದು: "ಆಹಾ ಎನ್ನ ಕಂಗಳ ಮನೆಯ ಮಾಡಿಕೊಂಡಿಪ್ಪ ನಿತ್ಯದ ಬೆಳಗೆ" ಹೀಗೆ ಅಲ್ಲಯ್ಯನ ಬೆಳಗನ್ನು ಕಂಡ ಶಿವಶರಣರು ತಮ್ಮದೇ ಆದ ರೀತಿ ವರ್ಣಿಸಿದ್ದಾರೆ. ಆ ಬೆಳಗಿಗೆ ಮಾರು ಹೋಗಿದ್ದಾರೆ. ಶರಣು ಎಂದಿದ್ದಾರೆ. ಇಷ್ಟೇ ಅಲ್ಲ ಆ ಜ್ಯೋತಿಯಿಂದ ಜ್ಞಾನವನ್ನೂ ಮಹಾ ಜ್ಞಾನವನ್ನೂ ತಮ್ಮ ತಮ್ಮ ಶಕ್ತ್ಯನುಸಾರ ಹೊಂದಿ ಪುನೀತರಾಗಿದ್ದಾರೆ. ಅಲ್ಲಯ್ಯನು ತಾನೇ ಕಂಡ ಮಹಾಬೆಳಗನ್ನು ಈ ರೀತಿ ವರ್ಣಿಸಿದ್ದಾನೆ:

> "ಎನ್ನ ಕರಸ್ಥಳದೊಳಗೊಂದು ಮಹಾಬೆಳಗ ಕಂಡೆನಯ್ಯ
> ಮಹಾಮಂಗಳ ನಿಳಯವಾಗಿ ತೋರುತ್ತಿದೆ. ಗುಹೇಶ್ವರಲಿಂಗದ
> ಕಂಗಳ ಕಾಂತಿಗಳು ಸಂಗನ ಬಸವಣ್ಣನ ಸಿವಾಳಿಸುತ್ತಿದ್ದವಯ್ಯ....
> ಎನ್ನ ಹೊರ ಒಳಗೆ ಸರ್ವಾಂಗ ಪರಮ ಪ್ರಕಾಶದೊಳು
> ಬೆಳಗುವ ಜ್ಯೋತಿಯ ಕಂಡೆ...."
>
> "ಘನ ಬೆಳಗು ಇಂತಾದುದೇನೆಂಬೆ ?"

ಈ ಎಲ್ಲ ಮಾತುಗಳಿಂದ ಬೆಳಗಿನ ಬೆಳಗು ಮಹಾಬೆಳಗು ಅಲ್ಲಯ್ಯ. ಆತನ ಮೈ ಮಾತು ಮನಗಳು ಜ್ಯೋತಿರೂಪವಾಗಿದ್ದುವು. ಆ ಬೆಳಕಿನ ಮೂರು ರೂಪಗಳನ್ನು

ಮುಂದಿನ ಮೂರು ಪ್ರಕರಣಗಳಲ್ಲಿ ಮೂಡಿಸಲು ಪ್ರಯತ್ನಿಸಿದ್ದಾರೆ ಲೇಖಕರು. (ಗ್ರಂಥಕರ್ತರು)

"ಮೈಬೆಳಗು" ಎಂಬಲ್ಲಿ ಸೊನ್ನಲಾಪುರದ ಸಿದ್ಧರಾಮನ ಮಮಕಾರವನ್ನು ಕಿತ್ತೊಗೆದು, ಕೆರೆ ಗುಡಿ ಕಟ್ಟಿಸುವುದನ್ನು ನಿಲ್ಲಿಸಿ, ಕಣ್ಣಕೋಪ ನಂದಿಸಿ, ಶುದ್ಧಸಾತ್ವಿಕ ಶಿವಯೋಗದ ದೀಕ್ಷೆಯಿತ್ತ ಪ್ರಸಂಗದ ವರ್ಣನೆಯಿದೆ. ಈ ಮೈ ಬೆಳಗಿನಿಂದ ಸಿದ್ಧರಾಮನ ಶರೀರದ ಮದ ಸಡಲಿದೆ. ಕಣ್ಣಿನ ಕತ್ತಲೆ ಹರಿದಿದೆ. ಮನದ ಮರವೆ ಮಾಯವಾಗಿದೆ. ಹಟಗಾರನಾಗಿದ್ದ ಆ ಹಮ್ಮಿನ ಸಿದ್ಧರಾಮನ ಬಾಯಿಂದ, "ನಿಮ್ಮ ತೇಜದ ಮುಂದೆ ಎನ್ನ ಕೋಪದ ಕಣ್ಣು ಏತರದು ನೋಡಯ್ಯ; ನಾನೇತರವನು ಹೇಳಯ್ಯ? ನಿಮ್ಮ ಜ್ಞಾನ ತೇಜದ ಮುಂದೆ ಎನ್ನ ಅರಿವೇತರದು ಹೇಳಯ್ಯ ?" ಎಂದು ಆಡ ಹಚ್ಚಿದೆ. ಅಲ್ಲಯ್ಯನ ಅದ್ಭುತ ಶಕ್ತಿಯನ್ನು ವರ್ಣಿಸುವ ಕೆಲವಚನಗಳಲ್ಲಿ ಕಾಯ ವಿದ್ದೂ ಅಕಾಯನ ಹಾಗೆ, ನಡೆದರೆ ಗತಿಯಿಲ್ಲ; ನಿಂತರೆ ಹೆಜ್ಜೆಯಿಲ್ಲ ಸುಳಿವಿನೊಳಗೊಂದು ಅತಿಶಯದ ಸುಳುಹು. ಬೆಳಗಿನೊಳಗೊಂದು ಅನುಪಮದ ಬೆಳಗು' ಎಂದು ವರ್ಣಿಸಲಾಗಿದೆ.

**ಮಾತಿನ ಬೆಳಗು** :— ಮಾತು ಜ್ಯೋತಿಯಾಗಿ ಬೆಳಗಬೇಕಾದರೆ ಶುದ್ಧ-ಆಚರಣೆ ಆವಶ್ಯಕ. ಅಲ್ಲದೆ ನಡತೆಯಲ್ಲಿ ಶುದ್ಧತೆ ಇರುವ ಹಾಗೆ ನುಡಿಯಲ್ಲಿ ಸರಳತೆ ತುಂಬಿರಬೇಕು ನೋಟದಲ್ಲಿ ಪವಿತ್ರತೆ, ಊಟದಲ್ಲಿ ಪರಿಮಿತಿ ಅಳವಟ್ಟಿರಬೇಕು. ಅಲ್ಲದ ನಡೆ, ಸಲ್ಲದ ಚಪಲತೆ, ಇಲ್ಲದ ಭ್ರಾಂತಿ ತ್ರಿಕರಣಗಳಲ್ಲಿ ತುಂಬಿದ್ದರೆ,ಮಾತಿನಲ್ಲಿ ಸತ್ಯದ ಬೆಳಕು ಮೂಡದು. ತತ್ತ್ವದ ಗಂಧ ತೋರದು. ಶಿವನಿಚ್ಛೆಯನರಿಯದೆ ಮಾತಾಡಬಾರದು. ಹಾಗೆ ಮಾತಾಡಿದರೆ ಗುಹೇಶ್ವರಲಿಂಗ ಮೆಚ್ಚಲಾರ. ಆದರೆ ನಾವಿಂದು ಹೆಚ್ಚಾಗಿ ಕಾಣುವುದೇನು ? "ಹಗಲನಿರುಳು ಮಾಡಿ ಇರುಳ ಹಗಲಮಾಡಿ ಆಚಾರವ ಅನಾಚಾರವ ಮಾಡಿ, ಅನಾಚಾರವ ಆಚಾರವ ಮಾಡಿ, ಭಕ್ತರ ಭವಿಯ ಮಾಡಿ ಭವಿಯ ಭಕ್ತರ ಮಾಡಿ ನುಡಿಯುವುದನ್ನು ! ಇದನ್ನು ಅಲ್ಲಮ ಪ್ರಭುಗಳು ಚೆನ್ನಾಗಿ ಹೀಗಳೆದು ಕೆರೆಯ ನೀರ ಕುಡಿದು ತೊರೆಯ ನೀರೆಂದು ಹೇಳುವವರ ಮಾತಿನಲ್ಲಿ ಯಾವ ಸತ್ವವಿದೆ? ಯಾವ ತತ್ತ್ವವಿದೆ ? ಅವರ ಮಾತುಗಳಿಂದ ಅವರಿಗೇನೇ ಪ್ರಯೋಜನವಿಲ್ಲವೆಂದು ಸಾರಿ, ಅವರು ಜ್ಞಾನಿಗಳಾಗಿದ್ದರೂ ಅವರಿಗೆ ನಿಜವಾದ ಸುಖವಿಲ್ಲವೆಂದು ಎಚ್ಚರಿಸಿದ್ದಾರೆ. ಅಲ್ಲಯ್ಯನ ಮಾತುಗಳಲ್ಲಿ ಒಂದು ಅದ್ಭುತ ಶಕ್ತಿಯಿದೆ, ಪ್ರತಿಪಾದಿಸುವ ಬಗೆ ಭಾವ ಗಮ್ಯವಾಗಿದೆ. ರೀತಿ ರಸವತ್ತಾಗಿದೆ. ಎಂತಹ ಗೂಢತತ್ತ್ವವನ್ನೂ ಸಹ ರೂಢಿಯ ನುಡಿಯಲ್ಲಿ ಹೇಳುವ ಜಾಣ್ಮೆ ಕರಗತವಾಗಿದೆ. ಕೆಳಗಿನ ವಚನದಲ್ಲಿ ಜ್ಞಾನಿಗೆ ಭವದ ಬಂಧನವಿಲ್ಲ. ಆತ ನಿತ್ಯ ಮುಕ್ತ. ಅಜ್ಞಾನಿಗೆ ಮಾತ್ರ ಪುನರ್ಜನ್ಮ ದುಃಖ ತಾಪತ್ರಯ ಮುಂತಾದುವು, ಎಂಬುದು ಎಷ್ಟು ಹೃದಯಂಗಮವಾಗಿ ವರ್ಣಿತವಾಗಿದೆ. ನೋಡಿರಿ: "ಕುಲದಲಧಿಕನು ಹೋಗಿ ಹೊಲಗೇರಿ

ಯಲ್ಲಿ ಮನೆ ಕಟ್ಟಿದರೆ ಕುಲಗೆಡದೆ ಇಪ್ಪ ಪರಿಯ ನೋಡಾ. ಆತನ ಕುಲದವರೆಲ್ಲರು ಮುಖವ ನೋಡಲೊಲ್ಲದಿದ್ದರೆ ಕುಲವುಳ್ಳವರೆಲ್ಲರು ಕೈವಿಡಿದರು ಕುಲಗೆಟ್ಟವನೆಂದು ತಿಳಿದು ವಿಚಾರಿಸಲು ಹೊಲೆಗೆಟ್ಟು ಹೋಯಿತ್ತು ಕಾಣಾ ಗುಹೇಶ್ವರಾ" ಇಂಥ ಅನೇಕ ಮುದ್ದಾದ ಮಾತುಗಳು, ಅರ್ಥಪೂರ್ಣವಾದ ಮಾತುಗಳು ಭಾವ ಗರ್ಭಿತ ಮುಂಡಿಗೆಗಳೂ ಅಲ್ಲಯ್ಯನ ಬೆಳಕಿನಲ್ಲಿ ವಿವರಣೆಗೊಂಡಿವೆ.

**ಮನದ ಬೆಳಗು:**"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ಮಾತೇ ಈ ಮನದ ಬೆಳಗಿನಲ್ಲಿ ಬಹು ವಿಸ್ತಾರವಾಗಿಯೂ ರಸವತ್ತಾಗಿಯೂ ವರ್ಣಿತವಾಗಿದೆ. "ವಾಕ್ಕು ಪಾಕವಾದೊಡೇನೋ ಮನ ಪಾಕವಾಗದನ್ನಕ್ಕರ?" ಎಂಬ ಮಾತಿನಿಂದ ಆರಂಭವಾದ ಈ ಭಾಗದಲ್ಲಿ ಮನಸ್ಸಿನ ಆಧಿಪತ್ಯ ಎಂಥದು ಎಂಬುದನ್ನು ವಿವರಿಸುತ್ತ, ಮನ ನಿಗ್ರಹಿಸದೆ ಇಂದ್ರಿಯಗಳನ್ನು ನಿಗ್ರಹಿಸುವುದು ಕಷ್ಟ; ನೋಡುವ ಆಲಿಸುವ, ರುಚಿಸುವ, ವಾಸಿಸುವ, ಸೋಂಕುವ ಪಂಚೇಂದ್ರಿಯಗಳನ್ನೂ ಜಯಿಸುವುದು ಆಗದ ವಿಷಯ. ಮನಸ್ಸನ್ನು ಗೆಲ್ಲಬೇಕು ಮೊದಲು. ಮನಸ್ಸನ್ನು ಜಯಿಸುವುದೆಂದರೆ ಉನ್ಮನವಾಗುವುದು. ಮನಸ್ಸಿಗೆ ಮುಖ್ಯವಾಗಿ ಇಬ್ಬರು ಮಕ್ಕಳಿದ್ದಾರೆ. ಮನಸಿಜನಾದ 'ಕಾಮ' ಗಂಡುಮಗು. ಮನಸಿಜೆಯಾದ "ಆಶೆ" ಹೆಣ್ಣುಮಗು. ಇವರಿಬ್ಬರ ಸಹಾಯದಿಂದ ಮನಸ್ಸು ಮದದಿಂದ ಕೊಬ್ಬುತ್ತದೆ. ಭವ ಪಾಶದಿಂದ ಬದ್ಧವಾಗುತ್ತದೆ. ಕ್ರೋಧದಿಂದ ಕೆರಳುತ್ತದೆ. ಮೋಹ ಮತ್ಸರಗಳಿಂದ ಹರಿಯುತ್ತದ. ಕಾಮ ಆಶೆಗಳ ವಿಷಯದಲ್ಲಿ ಅಲ್ಲಯ್ಯನು ಹೇಳಿದ ಮಾತಿದು. "ದೇವ ಗುರಿಯಾಗಿ ಲಯವಾಗಿ ಹೋದವರ ಕಂಡೆ, ನೀ ಗುರಿಯಾಗಿ ಹೋದವರ ಕಾಣೆ ಗುಹೇಶ್ವರಾ" ನಿಜವಾದ ಮಹಾತ್ಮರು ಮಾತ್ರ ದೇವರನ್ನು ಗುರಿಯಾಗಿಸುವವರು. ಅಂಥವರು ಎಷ್ಟು ಜನ ಸಿಕ್ಕಬಹುದು. ಆದಕಾರಣ ಅಲ್ಲಯ್ಯ, 'ಸುತ್ತಿಸುತ್ತಿ ಬಂದಡಿಲ್ಲ, ಲಕ್ಷಗಂಗೆಯ ಮಿಂದಡಿಲ್ಲ, ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದೊಡಿಲ್ಲ. ನಿತ್ಯ ನೇಮದಿಂದ ತನುವ ಮುಟ್ಟಿ ಕೊಂಡಡಿಲ್ಲ, ನಿಚ್ಚಕ್ಕೆ ನಿಚ್ಚ ನೆನೆವ ಮನವ, -ಅಂದಂದಿಗೆ ಅತ್ತಲಿತ್ತ ಹರಿವ ಮನವ ಚಿತ್ತದಲ್ಲಿ ನಿಲ್ಲಿಸಬಲ್ಲಡೆ ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗವು' ಎಂದು ಸಾರಿ ಸುಜ್ಞಾನದಿಂದ ಕೂಡಿದ ತದೇಕಚಿತ್ತವೇ ಮುಕ್ತಿಗೆ ಸೋಪಾನವೆಂದು ಅರುಹಿ, ಅಂಥ ದಿವ್ಯ ಜ್ಞಾನಿಗೆ ಮಾತ್ರ ಜ್ಯೋತಿಲಿಂಗದ ಸಾಕ್ಷಾತ್ಕಾರವಾಗಿ ಭವದ ಕತ್ತಲೆ ಹರಿದು ಹೋಗುತ್ತದೆ.' ಎಂಬ ಮಾತನ್ನು ಸ್ಪಷ್ಟಪಡಿಸಿದ್ದಾರೆ. ಒಟ್ಟಿನಲ್ಲಿ ಅಲ್ಲಮ ಪ್ರಭುವಿನ ತಪಸ್ಸು, ಜ್ಞಾನದ ಮಹತಿ, ವಿರತಿ ಇವುಗಳನ್ನರಿಯಲು ಸಾಮಾನ್ಯರಿಂದ ಸಾಧ್ಯವಿಲ್ಲ. ಅದೊಂದು ವಿಚಿತ್ರ ಬೆಳಗು ಕಣ್ಮನಗಳನ್ನು ತಣಿಸುವ ಬೆಳುಗು. ಅದೊಂದು ಅನೋಘವಾದ ಬೆಳಗು. ಶ್ರೀ ಗಳವರ ಮಾತಿನಲ್ಲೇ ಹೇಳುವುದಾದರೆ ಅದು ಇಂದಿಗೂ ನಂದದಂತಿದೆ. ಎಂದಿಗೂ ನಂದದಂತಿರಬಲ್ಲದು ಅವನ ಕಾಯ ಬೆಳಗಾಗಿ, ವಾಣಿ-ಬೆಳಗಾಗಿ ಭಾವ ಬೆಳಗಾಗಿ ಬೆಳಗಿನೊಳಗೆ ಬೆಳಗು ಬೆರೆದು

ಭವ್ಯಬೆಳಗಾಗಿ ಬೆಳ್ಳನೆ ಬೆಳಗಿದೆ, ಬೆಳಗುತಿದೆ. ಆ ಬೆಳಗಿನಲ್ಲಿ ಬಿಸಿಯಿಲ್ಲ, ತಂಪಿಲ್ಲ. ಆ ಜ್ವಾಲೆಯಲ್ಲ ಹೊಗೆಯಿಲ್ಲ. ಆ ಬೆಳಗಿಗೆ ಕಂದು ಕತ್ತಲೆಯಿಲ್ಲ. ಬೆಳಗಿನ ಕೊರತೆ ಯಿಲ್ಲ. ಅದು ಹಿರಿಬೆಳಗು ; ಸಿರಿಬೆಳಗು.

**ಮುಂಡಿಗೆಗಳು :**—ಅಲ್ಲಮ ಪ್ರಭುಗಳು ರಚಿಸಿದ ಅನೇಕ ವಚನಗಳು ಮುಂಡಿಗೆ ಯಂತಿವೆ. ಅವುಗಳಿಗೆ ಅರ್ಥ ಹಚ್ಚುವುದು ಕಠಿಣವಾದ ಕೆಲಸ. ಪೂಜ್ಯ ಶ್ರೀ ಶ್ರೀ ಜ. ಚ. ನಿಯವರು ಅವುಗಳಿಗೆ ಸುಲಭ ಗ್ರಾಹ್ಯವಾಗುವ ಹಾಗೆ ಅರ್ಥವನ್ನು ನಿರೂಪಿಸಿದ್ದಾರೆ. ಒಂದು ಉದಾಹರಣೆಯನ್ನಿಲ್ಲಿ ಕೊಡುತ್ತಿದ್ದೇನೆ: ಉದಕದೊಳಗೆ ಕಿಚ್ಚು ಹುಟ್ಟಿ ಸುಡುವುದ ಕಂಡೆ. ಗಗನದ ಮೇಲೆ ಮಾಮಸ ಕಂಡೆ.” ಪಕ್ಕವಿಲ್ಲದ ಹಕ್ಕಿ ಹಾರುವುದು ಹೆಚ್ಚಲ್ಲ. ಅದು ಹಾರಿದರೂ ಅದರ ಹಾರುವಿಕೆ ಸೀಮಿತ. ಬಾನಿ ನೆತ್ತರಕ್ಕೂ ಹಾರಿ ಬಾನಬಿತ್ತರವನೆಲ್ಲ ನುಂಗಿ ಬಯಲರೂಪಾಗುವ ಅಪೂರ್ವಶಕ್ತಿ ರೆಕ್ಕೆಯಿಲ್ಲದ ಹಕ್ಕಿಗೆ ಮಾತ್ರ ಸಾಧ್ಯ. ಆದರೆ ಆ ಹಕ್ಕಿ ಯಾವುದು ? ಎಂಬುದೇ ಪ್ರಶ್ನೆ. ಜೀವ ಹಂಸ, ಪರಮಹಂಸಗಳೆಂಬ ಎರಡು ಪಕ್ಷಿಗಳಲ್ಲಿ ಯಾವ ಪಕ್ಷಿಗೆ ಅಪೂರ್ವ ಶಕ್ತಿಯಿದೆ ಎಂಬುದನ್ನು ತಿಳಿದಾಗ ಈ ಒಗಟು ಬಯಲಾಗುತ್ತದೆ. ಪರಮ ಹಂಸ ಪಕ್ಷಿಯೇ ಈ ರೆಕ್ಕೆಯಿಲ್ಲದ ಹಕ್ಕಿ ಎಂದು ತಿಳಿದುಕೊಂಡಾಗ ಈ ಮುಂಡಿ ಗೆಯ ರಹಸ್ಯ ಬಯಲಾಗುತ್ತದೆ. ಇಂಥ ಅನೇಕ ಮುಂಡಿಗೆಗಳಿಗೆ ಸೂಕ್ತ ಅರ್ಥ ವನ್ನು ಕಲ್ಪಿಸಿ “ಅಲ್ಲಯ್ಯನ ಬೆಳಕನ್ನು” ನಿಜವಾದ ಬೆಳಕನ್ನಾಗಿಸಲು ಸಾಧ್ಯವಾದ ಪ್ರಯತ್ನ ಮಾಡಲಾಗಿದೆ.

### ಅಣ್ಣನ-ಬದುಕು

ಇದರ ಕರ್ತೃಗಳು ಶ್ರೀಶೈಲ ನಿಡುಮಾಮಿಡಿ ಶ್ರೀ ಶ್ರೀಗಳವರೆಂದು ಬೇರೆ ಹೇಳ ಬೇಕಾದುದೇನು. ಈ ಗ್ರಂಥಕ್ಕೆ ಹೆಸರಾಂತ ಸಾಹಿತಿಗಳೂ ಅಂದಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ವಚನ ವಾಙ್ಮಯ ವಿಶಾರದರೂ ಆಗಿದ್ದ ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ಮುನ್ನುಡಿಯೊಂದನ್ನು ಬರೆದಿದ್ದಾರೆ. ಈ ಗ್ರಂಥ ನಾಲ್ಕು ಸ್ಥೂಲವಾದ ಭಾಗಗಳಿಂದ ಕೂಡಿದೆ ೧) ಬಾಲ್ಯದ ಬದುಕು. ೨) ಜವ್ವನದ ಬದುಕು ೩) ಚರಮ ಜೀವನದ ಬದುಕು. ಮತ್ತು ೪) ಬೋಧೆ. ಲೌಕಿಕ ಶಬ್ದಗಳಲ್ಲಿ ಪರ ಮಾರ್ಥವನ್ನು ಬೋಧಿಸಿದ್ದಾರೆ. ಶ್ರೀ ಕಾ. ಸ. ಧರಣೇಂದ್ರಯ್ಯನವರು ತಮ್ಮ ‘ನಿವೇದನೆ’ಯಲ್ಲಿ ಹೇಳಿದ ಹಾಗೆ ಬಸವಣ್ಣನವರ ಜೀವನ ವೈವಿಧ್ಯವನ್ನು ಮನಗಂಡ ಶ್ರೀಗಳವರು ಆತನ ವಚನವಾರಿಧಿಯಲ್ಲಿ ಮುಳುಗಿ ಅಲ್ಲಿ ಸಿಕ್ಕಿದ ರತ್ನಗಳನ್ನು ತಮ್ಮ ಸವಿನುಡಿಯಲ್ಲಿ ಕುಂದಣಿಸಿ ಸರಸ್ವತೀದೇವಿಗೆ ಒಂದು ದಿವ್ಯಾಭರಣವನ್ನು ತೊಡಿಸಿರು ತ್ತಾರೆ. ಇದರಲ್ಲಿ ಮಕ್ಕಳಿಗೆ ಗಿಳಿ, ಮೊಲ, ಮರ್ಕಟ, ಕರಿ, ಕುರಿ ಈ ಮಾತುಗಳು ಆಕರ್ಷಕವಾಗಿವೆ, ಶೃಂಗಾರರಸಿಕರಿಗೆ ಸೌಂದರ್ಯೋಪಾಸನೆ, ಕನ್ನಡಿ, ತಂಬೂರಿ,

ತರುಲತೆಗಳು–ಈ ಶಬ್ದಗಳು ರುಚಿರವಾಗಿವೆ. ತತ್ತ್ವಜ್ಞಾನಿಗಳಿಗೆ ಸ್ಮರಣ, ಅರ್ಚನ, ವಂದನ, ಸಖ್ಯ, ಆತ್ಮನಿವೇದನ–ಈ ಶಬ್ದಗಳು ಹೃದಯುವನ್ನು ಅರಳಿಸುತ್ತವೆ. ಸಾಹಿತಿಗಳಿಗಂತೂ 'ಚೇಳಿಂಗೆ ಬಸುರಾಯಿತ್ತೆ ಕಡೆ; 'ಹಬ್ಬಕ್ಕೆ ತಂದ ಹರಕೆಯ ಕುರಿ, ತೋರಣಕ್ಕೆ ತಂದ ತಳಿರ ಮೇಯಿತ್ತು" ಮುಂತಾದ ಆಣಿಮುತ್ತುಗಳು ಅವರ ಹೃದಯವನ್ನು ವಿಕಾಸಗೊಳಿಸುವುವು. ವೀರಶೈವರಿಗೆ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳು ಹೊಸರೂಪದಲ್ಲಿ ಕಂಡು ಲಿಂಗಾಂಗ ಸಾಮರಸ್ಯಕ್ಕೆ ಬೆಳಕನ್ನೀಯುವುವು.

ಬಾಲ್ಯದ ಬದಕಿನಲ್ಲಿ ಆಟ, ಪಾಠ, ಆಸ್ತ್ರಾಭ್ಯಾಸ ಮುಂತಾದುವನ್ನು ವರ್ಣಿಸಿದರೆ, ಜವ್ವನದ ಬದುಕಿನಲ್ಲಿ ಮನೆ, ದೀಪ, ಬಾವಿ, ತೋಪು, ಪ್ರಾಣಿಪೋಷಣೆ, ಬೇಟೆಗಾರ, ಪರುಷ,ಪ್ರಾಣಿಗಳು, ಮಂತ್ರಿ, ಶರಣಸತಿ ಮುಂತಾದವುಗಳ ವಿವೇಚನೆಯಿದೆ. ಚರಮ ಜೀವನದ ಬದುಕಿನಲ್ಲಿ ಆತ್ಮಮನನ, ಆತ್ಮನಿವೇದನ, ಶ್ರವಣ, ಕೀರ್ತನ, ಸತ್ಯ, ಸಿಟ್ಟು, ಕುಟಿಲತೆ, ವಿನಯ ಸರಸತೆ, ವಿರಸ, ದಮೆ, ದಾನ, ದುರಾಶೆಬೇಡ, ಭಕ್ತಿ, ಮಾತು, ಮನಸ್ಸು ಮುಂತಾದುವುಗಳನ್ನು ಕುರಿತು ತಿಳಿವಳಿಕೆ ಕೊಡಲಾಗಿದೆ. "ಬೋಧೆ"ಯಲ್ಲಿ ಗಾರ್ಹಸ್ಥ್ಯಧರ್ಮಬೋಧೆ ಸತೀತ್ವಬೋಧೆ, ಪತಿಧರ್ಮಬೋಧೆ, ಸಾಮಾಜಿಕ ಬೋಧೆ, ಪ್ರಸಾದ, ಪಂಚಾಚಾರ ಮುಂತಾದ ವೀರಶೈವ ಆಚಾರ ವಿಚಾರಗಳನ್ನು ತಿಳಿಯಪಡಿಸಲಾಗಿದೆ. ಇವೆಲ್ಲವುಗಳನ್ನೂ ಬಸವಣ್ಣನವರ ವಚನಗಳ ಆಧಾರದ ಮೇಲೆಯೇ ವಿವರಿಸಲಾಗಿದೆ. ವಿವರಣೆ ಮಾತ್ರ ಸ್ವತಃ ಅವರದು. ತಮ್ಮದೇ ಆದ ರೀತಿಯಲ್ಲಿ ಮನಮುಟ್ಟುವ ಹಾಗೆ ವಿವರಿಸಿದ್ದಾರೆ. ಮಾನವನ ಬಾಳು ಹೇಗಾಗ ಬೇಕು ? ಜನಾಂಗದ ಬಾಳು ಹೇಗಿರಬೇಕು ? ಎಂಬುದನ್ನು ಬಹುಮಾರ್ಮಿಕವಾಗಿ ತಿಳಿಯಪಡಿಸಿದ್ದಾರೆ. ಗ್ರಂಥವನ್ನು ಒಳಹೊಕ್ಕು ನೋಡಿದಾಗಲೇ ಅದರ ಲಾಭ ಗೋಚರವಾಗುತ್ತದೆ. ಅವರು ಪಟ್ಟ ಶ್ರಮದ ಅರಿವು ಉಂಟಾಗುತ್ತದೆ.

**ಬಾಲ್ಯದ ಬದುಕು** :—ಪ್ರವೇಶ ಭಾಗದಲ್ಲಿ ಗ್ರಂಥಕರ್ತರು, ಅಣ್ಣನ ವಿಷಯದಲ್ಲಿ ಅನೇಕ ಗ್ರಂಥಗಳು ಜನ್ಮತಾಳಿವೆ. ಅವುಗಳಲ್ಲಿ ಆತನ ಗುಣಗಾನ ಮಾಡುವವು ಕೆಲವು, ಸಾಹಿತ್ಯ ಸೇವೆಯನ್ನು ಸೊಲ್ಲುವವು ಕೆಲವು, ರಾಜಕೀಯ, ಸಾಮಾಜಿಕ, ಔದ್ಯೋಗಿಕ ವಿಷಯಗಳನ್ನು ವಿವೇಚಿಸಿರುವವು ಬೇರೆ ಕೆಲವು, ಬಸವಣ್ಣ ಗುಣಿ, ಸಾಹಿತಿ, ಮಂತ್ರಿ, ಸಮಾಜ ಸುಧಾರಕ, ಉದ್ಯೋಗಪ್ರಸಾರಕ, ಉಚ್ಚನೀಚ ನಿವಾರಕ, ಸ್ತ್ರೀಸ್ವಾತಂತ್ರ್ಯಾಭಿಮಾನಿ, ಜ್ಞಾನಿ, ಹೀಗೆ ಸರ್ವೋನ್ನತವಾಗಿ ಬಾಳಿದ ಆತನ ಬದುಕು ಏನೇನಿತ್ತು. ಎಷ್ಟೆಷ್ಟಿತ್ತು ಎಂಬುದನ್ನು ಏಕೀಭವಿಸಿ ಹೇಳುವ ಹೊತ್ತಿಗೆ ವಿರಳವೆಂದೇ ಹೇಳಬೇಕು. ಅದು ಕಾರಣ ಸಾಧ್ಯವಾದಷ್ಟು ಆ ಕೆಲಸ ಮಾಡಬೇಕೆಂಬ ಸಂಕಲ್ಪವೇ ಈ ಕೃತಿಗೆ ಕಾರಣವೆಂದು ನುಡಿದಿದ್ದಾರೆ. ಈ ಗ್ರಂಥಕ್ಕೆ ಯಾವ ಪುರಾಣವೂ ಆಧಾರವಾಗಿಲ್ಲ. ಯಾವ ಪವಾಡವೂ ಸಾಧನವಾಗಿಲ್ಲ. ಬಸವಣ್ಣನು ತನ್ನ ಅಮೃತವಾಣಿಯಿಂದ ನುಡಿದ ವಚನಗಳಲ್ಲಿ ಆತನ ಬದುಕು ಹೇಗೆ

ರೂಪಿತವಾಗಿದೆ ? ಆ ಬದುಕಿನಿಂದ ಜನತೆಗೆ ಸಿಗತಕ್ಕ ಆದರ್ಶವೇನು ? ಎಂಬುದನ್ನು ವಿವರಿಸುವುದೇ ಈ ಗ್ರಂಥದ ಗುರಿ. ಬಸವಣ್ಣನ ಆಟದ ರೀತಿಯನ್ನು ಇಲ್ಲಿ ನೋಡೋಣ "ಬಿಳಿಯ ಕರಿಕೆಯ, ಕಣಿಗಿಲೆಲೆಯ ತೊರೆಯ ತಡಿಯ ಮಳಲತಂದು ಗೌರಿಯ ನೋನುವ ಬನ್ನಿರೇ ! ಚಿಕ್ಕಿ ಚಿಕ್ಕ ಮಕ್ಕಳೆಲ್ಲರೂ ನೆರೆದು ಅನುಪಮ ದಾನಿ ಕೂಡಲ ಸಂಗಮ ದೇವ ಗಂಡನಾಗಬೇಕೆಂದು" ಚಿಕ್ಕ ಚಿಕ್ಕ ಮಕ್ಕಳನ್ನು ಕರೆದು, ಕಲೆ ಹಾಕಿ ಮೇಲೆ ಹೇಳಿದಂತೆ ಎಲ್ಲ ಸಾಮುಗ್ರಿಗಳನ್ನೂ ಕಲೆ ಹಾಕಿ ಮಳಲಿನಿಂದ ಮಂಗಳಮೂರ್ತಿಯಾದ ಗೌರಿಯನ್ನು ಮಾಡಿದ್ದಾರೆ. ಭಕ್ತಿಯಿಂದ ಪೂಜಿಸಿ ಬೇಡಿದೊಡನೆ ತಂದುಕೊಡುವ ಗಂಡನನ್ನು ನಮಗೆ ಕರುಣಿಸು ಗೌರೀ–ಎಂದು ಬೇಡಿದ್ದಾರೆ. ಇದು ಲೌಕಿಕದ ಆಟ. ಆದರೆ ತಾತ್ತ್ವಿಕದ ಆಟ ಬೇರೆ. ಅಣ್ಣನು 'ಶರಣ ಸತಿ' ತತ್ತ್ವದಂತೆ ಹೆಕ್ಕಳದ ಹೆಣ್ಣು. ಲಿಂಗಪತಿಯೊಡನೆ ಇನ್ನೂ ವಿವಾಹವಿಲ್ಲದ ಕಮನೀಯ ಕನ್ಯೆ. ಆದ್ದರಿಂದ ತನ್ನ ಅಂತರಂಗಿಕ ಪರಾಶಕ್ತಿಯನ್ನು ತನ್ನ ಭಕ್ತಿ ತೊರೆಯಲ್ಲಿನ ಸದ್ಗುಣ ಸಮೂಹಗಳೆಂಬ ಮಳಲಿನಿಂದ ಗೌರಿಯ ಮೂರ್ತಿ ಮಾಡಿದ್ದಾರೆ. ಸಾತ್ತ್ವಿಕ ಭಾವವೆಂಬ ಬಿಳಿಗರಿಕೆಯನ್ನು ಶಮದಮಗಳೆಂಬ ಕಣಿಗಲೆಲೆಗಳನ್ನು ಧರಿಸಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಮುಂತಾದ ಉಳಿದ ಚಿಕ್ಕಮಕ್ಕಳೊಡಗೂಡಿ ಮನವಾರೆ ಪೂಜಿಸಿ, ಲಿಂಗಾಂಗ ಸಾಮರಸ್ಯರೂಪ ಅನುಪಮ ದಾನಶೀಲನಾದ ಕೂಡಲ ಸಂಗಮ ದೇವನು ತನಗೆ ಗಂಡನಾಗಬೇಕೆಂದು ಬೇಡಿಕೊಂಡಿದ್ದಾರೆ. ಆ ಅಮರ ಸೌಂದರ್ಯದ ನೋಟವೇ ಅವರ ಈ ಅಲೌಕಿಕ ಆಟದ ಗುರಿ.

ಜೀವನದ ಸಾಮಾನ್ಯ ವಿಷಯಗಳಿಗೂ, ಅಧ್ಯಾತ್ಮಕ್ಕೂ ಹೇಗೆ ಸುಮಧುರ ಸಂಬಂಧವನ್ನು ಕಲ್ಪಿಸಿ ತತ್ತ್ವಬೋಧೆಯನ್ನು ನೀಡುತ್ತಿದ್ದರೆಂಬುದನ್ನು ಈ ಕೆಳಗಿನ ಉದಾಹಾರುಣೆಯಿಂದ ಸುಲುಭವಾಗಿ ಉದಾಹರಿಸ ಬಹುದು. ಬಸವಣ್ಣನವರು ವಾಸಕ್ಕೆ ಒಂದು ಮನೆಯಿತ್ತು. ಅದು ಸ್ವಲ್ಪ ವಿಶಾಲವಾಗಿಯೂ ಇತ್ತು. ಅದರ ಸ್ವಚ್ಛತೆಗಾಗಿ ಇಬ್ಬರು ಕೈಯಾಳುಗಳನ್ನೂ ನಿಯಮಿಸಿದ್ದರು. ಅವರು ಅದರ ಸ್ವಚ್ಛತೆಯನ್ನು ಕಾಪಾಡಿಕೊಂಡಿರಲಿಲ್ಲ. ಅವರ ಈ ಅಲಕ್ಷ್ಯವನ್ನು ಕಂಡು ಅವರನ್ನು ದಂಡಿಸದೆ ಅವರ ಕರ್ತವ್ಯವನ್ನು ಅವರಿಗೆ ಈರೀತಿ ಬೋಧಿಸುತ್ತಾರೆ:

"ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ ? ಹೊಸ್ತಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ ? ತನುವಿನಲ್ಲಿ ಹುಸಿತುಂಬಿ ಮನದೊಳಗೆ ವಿಷಯ ತುಂಬಿ ಮನದೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವ." ಈ ಮಾತು ಕೇವಲ ಮನೆಯ ಸ್ವಚ್ಛತೆಗಾಗಿ ವಿವರಿಸಿದುದಲ್ಲ – ಆತ್ಮ ಬಲವನ್ನು ಕೋರುವವರು ತಂತಮ್ಮ ತನು ಮನಗಳನ್ನು ಹುಸಿ ವಿಷಯಗಳ ಅಧೀನವಾಗದಂತೆ ಜಾಗರೂಕತೆಯಿಂದ ನೋಡಿಕೊಳ್ಳುವುದು ಅತ್ಯವಶ್ಯ. ಮನೆಯೊಡೆಯನು ಉದಾಸೀನನಾದರೆ ಮನೆಗೆಲಸದ

ಮನುಷ್ಯರು ಸೋಮಾರಿಗಳಾಗಿ, ತಮ್ಮ ಕರ್ತವ್ಯದಲ್ಲಿ ಚ್ಯುತರಾಗುವಂತೆ ಆಧ್ಯಾತ್ಮ ಸಾಧನೆಯಲ್ಲಿ ಆತ್ಮ ನಿಯಂತ್ರಣ ಇಲ್ಲದಿದ್ದರೆ ತನು, ಕರಣ, ಮನ ಮುಂತಾದವುಗಳು ಮನಬಂದ ಹಾಗೆ ಹರಿದು ಹೋಗಿ, ಹದಗೆಟ್ಟು, ಬಲಗೆಟ್ಟು ಆತ್ಮದೌರ್ಬಲ್ಯವನ್ನು ಅಭಿವ್ಯಕ್ತಪಡಿಸುತ್ತವೆ-ಎಂಬ ಮಾತನ್ನು ಸ್ಪಷ್ಟಪಡಿಸುತ್ತದೆ.

ಆತ್ಮಬಲವುಳ್ಳವನೇ ಪರಮಾತ್ಮನನ್ನು ಪಡೆಯಲು ಸಮರ್ಥ. ಆತನ ತಪಸ್ಸು ಆತನನ್ನು ಇಷ್ಟ ಸಿದ್ಧಿಯ ಕಡೆಗೆ ಒಯ್ಯುತ್ತದೆ. ಆತ್ಮಜ್ಞಾನದಿಂದ ಆತ್ಮಸಾಕ್ಷಾತ್ಕಾರವಾಗುತ್ತದೆ ಎಂಬ ಮಾತು ಅವರ ಅನೇಕ ವಚನಗಳಿಂದ ವೇದ್ಯವಾಗುತ್ತದೆ. ಅಣ್ಣನ ಮನನ ನಿದಿಧ್ಯಾಸಗಳಿಗೆ ವಸ್ತುವಾದ ವಿಶ್ವರೂಪದ ವರ್ಣನೆಯನ್ನು ಕೇಳಿರಿ :—
ಎತ್ತೆತ್ತ ನೋಡಿದಡತ್ತ ನೀನೇ ದೇವ, ಸಕಳ ವಿಸ್ತಾರದ ರೂಹು ನೀನೇ ದೇವ, ವಿಶ್ವತೋ ಬಾಹು ನೀನೇ ದೇವ, ವಿಶ್ವತೋಚಕ್ಷು ನೀನೇ ದೇವ, ವಿಶ್ವತೋ ಮುಖ ನೀನೇ ದೇವ, ವಿಶ್ವತೋಪಾದ ನೀನೇ ದೇವ, ಕೂಡಲ ಸಂಗಮದೇವ,"

ಈ ರೀತಿ ಲೌಕಿಕ ಸಾಧನೆಗೂ ಪಾರಲೌಕಿಕದ ಮೆರಗನ್ನಿತ್ತು ಆತ್ಮಪರಿಪಾಕದ ಕಡೆಗೂ 'ದಾಸೋಹ' ಭಾವನೆಗೂ ಪುಟಕೊಟ್ಟು, ಆತ್ಮೋದ್ಧಾರದ ಜೊತೆ ಜನೋದ್ಧಾರಕಾರ್ಯವನ್ನು ಕೈಗೊಂಡ ಮಹಾ ಪುರುಷರ ಸಾಲಿನಲ್ಲಿ ಬಸವಣ್ಣನವರು ಅತ್ಯುತ್ತಮ ಸ್ಥಾನವನ್ನಲಂಕರಿಸಿದ್ದಾರೆ. ಅಣ್ಣನ ಬದುಕನ್ನು ಕುರಿತು ಹೇಳುವುದು ಇನ್ನೂ ಸಾಕಷ್ಟಿದೆ. ಆದರೆ ವಿಸ್ತಾರ ಭಯದಿಂದ ಮೊಟಕುಗೊಳಿಸಲಾಗಿದೆ.

ಒಟ್ಟಿನಲ್ಲಿ ಈ ಎರಡೂ ಕೃತಿಗಳು ವೀರಶೈವ ಮತದ ಪ್ರಕೃಷ್ಟ ತತ್ತ್ವಗಳನ್ನು ತಿಳಿಸಲು ಸಹಾಯಕವಾಗಿದ್ದು ಜಿಜ್ಞಾಸುಗಳಿಗೆ ಕೈದೀವಿಗೆಯಾಗಿವೆ. ಪ್ರಾಜ್ಞರಾದ ಶ್ರೀ ಶ್ರೀ ಗಳವರು ತಮ್ಮದೇ ಆದ ಮನೋಜ್ಞ ಶೈಲಿಯಲ್ಲಿ ಈ ಗ್ರಂಥಗಳನ್ನು ರಚಿಸಿ. ಸಾಮಾನ್ಯರೂ ಅರ್ಥಮಾಡಿಕೊಳ್ಳುವ ಹಾಗೆ ನಿರೂಪಿಸಿದ್ದಾರೆ. ವಿಚಾರಗಳು ನಾ ಮುಂದು ತಾ ಮುಂದು ಎಂದು ಹಂಬಲಿಸಿ ಬಂದಾಗ ಭಾಷೆಯ ಕಡೆಗೆ ಗಮನ ಕೊಡಲು ಒಮ್ಮೊಮ್ಮೆ ಸಾಧ್ಯವಾಗುವುದಿಲ್ಲ. ಆದರೂ ವಿಚಾರಧಾರೆ ಅವ್ಯಾಹತವಾಗಿ ಸಾಗಿದೆ. ಮನಮುಟ್ಟಿದೆ. ಅಲ್ಲಯ್ಯನ ಬೆಳಕಿನಲ್ಲಿ ವಿಷಯ ವಿವೇಚನೆ ಗಡುಚಾಗಿದ್ದರೂ ಸ್ವಾರಸ್ಯಪೂರ್ಣವಾಗಿದೆ. ಅಣ್ಣನ ಬದುಕಂತೂ ಸುಲಭಶೈಲಿಯಲ್ಲಿ ಬರೆದ ಒಂದು ಉತ್ಕೃಷ್ಟಕಾದಂಬರಿಯಂತಿದೆ. ವಚನಗಳಿಗಿತ್ತ ಅರ್ಥ ಅವರದೇ ಆಗಿದೆ. ವಚನಗಳನ್ನು ಮಥಿಸಿ ತೆಗೆದ ಬೆಣ್ಣೆ ಆಪ್ಯಾಯಮಾನವಾಗಿದೆ. ಶರಣರ ವಚನಗಳನ್ನು ಈ ರೀತಿ ಪರಿಶೋಧಿಸಿ ನಿಜಾರ್ಥವನ್ನು ಹೊರಗೆಡಹುವ ಗ್ರಂಥಗಳು ಎಷ್ಟು ಹೊರಟರೂ ಕಡಿಮೆ.

ಇಂತಹ ಗ್ರಂಥಗಳು ಇನ್ನೂ ಅನೇಕವಾಗಿ ಅವರಿಂದ ಹೊರಬರಲಿ. ಅವರ ಸ್ವರ್ಣ, ಹೀರಕೋತ್ಸವಗಳನ್ನು ಕಾಣುವ ಭಾಗ್ಯ ನಮ್ಮೆಲ್ಲರದಾಗಲಿ, ಎಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಕರ್ನಾಟಕದಲ್ಲಿ ಪತ್ರ ಸಾಹಿತ್ಯ ತೀರ ವಿರಳ. ಅದರಲ್ಲಿಯೂ ಭಾವಾತ್ಮಕ ಆಧ್ಯಾತ್ಮಿಕ ಪತ್ರ ಸಾಹಿತ್ಯ ಇನ್ನೂ ವಿರಳ. ಈ ದಿಸೆಯಲ್ಲಿ "ಕಾರಣ್ಯ ಕಿರಣ" ಕನ್ನಡ ಹೊಲಬಿನಲ್ಲಿ ಹೊಸ ಹೆಜ್ಜೆ. ಆದರೂ ಹೃದಯಾಕರ್ಷಕ ವಾಗಿದೆ. ಹೊಸ ಹೊಸ ಮಿಂಚಿನ ಮಾತುಗಳಿವೆ. ಹೃಸಯಾನುಭವದ ಹೊಂಪುಳಿ ಹೊರ ಹೊಮ್ಮಿದೆ. ಶೈಲ ಸುಂದರ ಭಾವ ಬೆಡಗಿನಿಂದ ತುಂಬಿದೆ.

'ಕಾರುಣ್ಯ ಕಿರಣ' ರಸಮಯವಾಗಿದೆ; ತೇಜೋಮಯವಾಗಿದೆ. ಮಾನವರ ಭಾವವೆಂಬ ಮರುಭೂಮಿಗಳನ್ನು ತೇವವಾಗಿಸುವ ಶಕ್ತಿ ಸಂಪನ್ನವಾಗಿದೆ. ಮನದ ಕಾಳಿಕೆಯನ್ನು ಕಳೆವ ಕಳೆಯಿದೆ.

ಇಂತಹ ಮಹತ್ವಪೂರ್ಣವಾದ ಪತ್ರ ಸಾಹಿತ್ಯವನ್ನು ಪ್ರಕಟಿಸಿದ ಬೆಂಗಳೂರಿನ ಅಕ್ಕಿಪೇಟೆಯ 'ಭ್ರಮರಾಂಬಾ ಬಳಗ' ಕೃತಕೃತ್ಯತೆಯನ್ನು ಪಡೆದಿದೆ, ಕನ್ನಡ ನಾಡಿನ ಕೀರ್ತಿಯನ್ನು ಗಳಿಸಿದೆ, ಕನ್ನಡಿಗರ ಮನ್ನಣೆಗೆ ಪಾತ್ರವಾಗಿದೆ.

# ಪತ್ರ ಸಾಹಿತ್ಯಕ್ಕೆ ದಿವ್ಯ ಮಾದರಿ

## ಕಾರುಣ್ಯ ಕಿರಣ

**—ಶ್ರೀ ಎಂ. ವಿ. ಸೀತಾರಾಮಯ್ಯ, ಬೆಂಗಳೂರು**

ಶ್ರೀ ಜ. ಚ. ನಿ. ಎಂಬ ಕಾವ್ಯ ನಾಮಶೋಭಿತರಾದ ಶ್ರೀಶೈಲ ಜಗದ್ಗುರು ಚನ್ನ ಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಸನ್ನಿಧಿಯವರ 'ಕಾರುಣ್ಯ ಕಿರಣ'ದ ಬಗೆಗೆ ಬರೆಯುವುದು ಕಷ್ಟ. ಕಾರಣ ಸ್ಪಷ್ಟ. ಶ್ರೀ ಶ್ರೀಗಳವರು 'ಅಕ್ಷರ' ಅನು ಭಾವಿ ; ನಾನೋ, ಅಕ್ಷರೋಪಜೀವಿ ! ಎಲ್ಲಿಂದೆಲ್ಲಿಗೆ ? ಆದರೂ, 'ಹೂವಿನೊಂದಿಗೆ ನಾರು ಸ್ವರ್ಗಕ್ಕೇರುವ'ಅವಕಾಶವನ್ನೇಕೆ ಬಿಟ್ಟುಕೊಡಬೇಕೆಂದು ಬಗೆದು, ಶ್ರೀಗಳವರ ಅನುಜ್ಞೆ–ನನ್ನೆಡೆಗೆ ಹರಿದು ಬಂದ ಒಂದು 'ಕಾರುಣ್ಯ ಕಿರಣ'–ಎಂದು ಹಿಗ್ಗಿ ಸ್ವಯಂ ಪ್ರಕಾಶಮಾನವಾದ ಈ 'ಕಿರಣ'ಕ್ಕೆ ನನ್ನ ಬರಹದ ಸೇವೆಮಾಡಹೊರಟಿದ್ದೇನೆ. ಆದರೆ, 'ತುಪ್ಪೇರಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ'? ಎಂಬ ಶಂಕೆ ಉಳಿದೇ ಇದೆ. ನನ್ನ ಈ ಮುಂದಿನ ನಾಲ್ಕು ನುಡಿಗಳಲ್ಲಿ ಹೊತ್ತಗೆಯ ಸುಳುಹು ಹೊಳಹು ಒಂದಿನಿತು ಹೊಳಕಿದ್ದರೆ ಅದು ಕೃತಿಯ ಮಹಿಮೆ ಹೊರತು ಕನ್ನಡಿಯ ಮಾರ್ಪೊಳಪಲ್ಲ.

ಆಂಗ್ಲ ಸಾಹಿತ್ಯದಲ್ಲಿ Epistle ಎಂಬ ಪತ್ರ ಸಾಹಿತ್ಯ ಪ್ರಕಾರವೊಂದಿತ್ತು. ಬಹು ಹಿಂದೆ ಇಂಗ್ಲೆಂಡಿನ ಕವಿಗಳು ತಮ್ಮ ಆಶ್ರಯದಾತನನ್ನು ಹೊಗಳಿ ಪದ್ಯ ಬರೆಯುತ್ತಿದ್ದ ಪತ್ರಗಳು ಈ ಜಾತಿಗೆ ಸೇರಿದವು. ಈ ಪದ್ಯಪತ್ರ ಪ್ರಕಾರ ಕ್ರಮೇಣ (ಸಹಜವಾಗಿಯೆ) ಅವಸಾನ ಹೊಂದಿತು. ಕೆಲವು ಈಚಿನ ಕವಿಗಳು ಈ ಪ್ರಕಾರ ವನ್ನು ವಿಡಂಬನೆಗೂ ಬಳಸಿಕೊಂಡದ್ದುಂಟು. ನಮ್ಮ ಭಾರತೀಯ ಕಾವ್ಯಗಳಲ್ಲಿ ಪದ್ಯರೂಪದ ಪತ್ರಗಳು ಅಲ್ಲಿ ಇಲ್ಲಿ ಹುದುಗಿಕೊಂಡಿವೆ, ಗದ್ಯದಲ್ಲಿ ಪತ್ರಲೇಖನ ಈಚಿನ ಬೆಳವಣಿಗೆ ಎನ್ನಬೇಕು. ಆಂಗ್ಲರೂ ಇತರ ಪಾಶ್ಚಾತ್ಯ ಜನಾಂಗಗಳವರೂ ಪತ್ರಲೇಖನವನ್ನು ಎಂದಿನಿಂದಲೂ ಒಂದು ಕಲೆಯಾಗಿ ಬೆಳೆಸಿಕೊಂಡು ಬಂದಿದ್ದಾರೆ.

ಪತ್ರ ಎರಡು ಹೃದಯಗಳ, ಮನಗಳ ನಡುವೆ ನಿರ್ಮಿಸಿದ ಭಾವಸೇತು ; ಒಂದು ಹೃದಯದಿಂದ ಇನ್ನೊಂದು ಹೃದಯಕ್ಕೆ ಬಿಟ್ಟ ಹೂಬಾಣ ಆಗಬಲ್ಲುದು ಅದು; ಉಕ್ಕಿನ ಬಾಣವೂ ಆಗಬಲ್ಲದು. ಹೃದಯಚ ಕೆರೆಯ ತೂಬು ಅದು, ಮನೋ ಮಂದಿರದ ತೆರೆದ ಕಿಟಿಕಿ. ಆತ್ಮೀಯತೆ ಅದರ ಪ್ರಧಾನ ಲಕ್ಷಣ. ಎಂಥ ಸರ್ವ ಸಾಮಾನ್ಯರ ಯೋಗಕ್ಷೇಮದ ಪತ್ರಗಳಲ್ಲಿ ಕೂಡ ಇನ್ನಾವ ಗುಣವಿರದಿದ್ದರೂ ಆತ್ಮೀಯತೆಯ ಅನುರಣನವಿರುತ್ತದೆ. ಪತ್ರ ಪ್ರಮುಖವಾಗಿ ಸಂಬೋಧನ ಸ್ವರೂಪ ದ್ದಾದ್ದರಿಂದ ಅದರಲ್ಲಿ ಹೃದಯದ ಕರೆ ಮೊರೆ, ರೇಗು ಕೂಗು, ಆದೇಶ ಸಂದೇಶ, ಆವೇದನ ನಿವೇದನ, ಮುಂತಾಗಿ ಎಲ್ಲ ಸ್ಥಾಯಿಭಾವಗಳ ಪ್ರಕಾಶನಕ್ಕೆ ಅವಕಾಶ ವಿದ್ದು, ರಸಪರ್ಯವಸಾಯಿಗಳಾಗುವುದರಿಂದ ಅವು ಕಾವ್ಯದ ಮಟ್ಟಕ್ಕೂ ಏರಬಹುದು. ಸ್ವಾನುಭವದ ಮನೋಜ್ಞ ನಿರೂಪಣೆ, ಕಂಡ ನೋಟಗಳ ರಮಣೀಯ ವರ್ಣನೆ ಇವೆಲ್ಲ ಪತ್ರಸಾಹಿತ್ಯಕ್ಕೆ ವಿಷಯಗಳು. ವಾಙ್ಮಯದಲ್ಲಿ ಪತ್ರಸಾಹಿತ್ಯದ ಸ್ಥಾನ ಇಂತಿರುವಲ್ಲಿ, ಸಾಹಿತಿಗಳ, ದಾರ್ಶನಿಕರ, ತತ್ತ್ವಜ್ಞಾನಿಗಳ, ಮಹಾರಾಜಕಾರಣಿಗಳ ಕೈಯಲ್ಲಿ ಪತ್ರ ಲೇಖನ ಸಾಹಿತ್ಯದ ಮಟ್ಟಕ್ಕೇರಿದರೆ ಅದರಲ್ಲಿ ಅಚ್ಚರಿಯೇನು ? ಒಂದು ಉದಾಹರಣೆಯನ್ನು ಕೊಡಬಹುದಾದರೆ, ಸ್ಯಾಮ್ಯುಯೆಲ್ ಜಾನ್‌ಸನ್ (Samuel Johnson) ಮಹಾಶಯನ Letter to a Noble Lord ಎಂಬ ಚರಿತ್ರಾರ್ಹ ಪತ್ರದ ಘನತೆ ಪ್ರಾಮುಖ್ಯತೆಗಳನ್ನು ಆಂಗ್ಲ ಸಾಹಿತ್ಯದ ವಿದ್ಯಾ ರ್ಥಿಗಳೆಲ್ಲ ಬಲ್ಲರು. ನಮ್ಮ ದೇಶದಲ್ಲಿ, ವಿವೇಕಾನಂದ, ಮಹಾತ್ಮಗಾಂಧಿ, ರವೀಂದ್ರ ನಾಥ ಟಾಗೂರ್, ಜವಹರಲಾಲ್ ನೆಹರು ಇವರು ಬರೆದು ಪ್ರಕಟವಾಗಿರುವ ಪತ್ರಗ ಳಿಗೆ ಸಾಹಿತ್ಯಕ ಮೌಲ್ಯದ ಜೊತೆಗೆ ಐತಿಹಾಸಿಕ ಮಹತ್ವವೂ ಲಭಿಸಿದೆ. ಎಷ್ಟೋ ವೇಳೆ ಕವಿಗಳ ಪತ್ರಗಳು ಅವರ ಜೀವನ ಚರಿತ್ರೆಯನ್ನು ಕಟ್ಟುವುದಕ್ಕೂ ಅವರ ಕಾಲದ ಸಾಹಿತ್ಯ ಸಮಸ್ಯೆಗಳನ್ನು ಅರಿತುಕೊಳ್ಳವುದಕ್ಕೂ ಸಹಾಯವಾಗಿವೆ. ಆಧು ನಿಕ ಕನ್ನಡ ವಾಙ್ಮಯದಲ್ಲಿ 'ಪತ್ರಸಾಹಿತ್ಯ' ಇನ್ನೂ ಅಂಕುರಾವಾಸ್ಥೆಯಲ್ಲಿದ್ದು, ಅವಶ್ಯವಾಗಿ ಬೆಳೆಯಬೇಕಾಗಿದೆ.

ಶ್ರೀ ಜ. ಚ. ನಿ. ಅವರ 'ಕಾರುಣ್ಯ ಕಿರಣ' ಕನ್ನಡದಲ್ಲಿ ಬಹು ವಿರಳವಾಗಿರುವ ಇಂತಹ ಪತ್ರಸಾಹಿತ್ಯಕ್ಕೆ ದಿವ್ಯಮಾದರಿ. ಇದರಲ್ಲಿ ಶ್ರೀಗಳವರು ಆಗಾಗ 'ಭ್ರಮ ರಾಂಬಾ ಬಳಗ'ವನ್ನು ಹರಸಿ ಬರೆದ ಓಲೆಗಳಿಂದ 'ಮುತ್ತಿನಂತಹ ಮಾತುಗಳನ್ನು' ಆಯ್ದು ಕೊಟ್ಟಿರುವ 'ಬಿಡಿ ಓಲೆ'ಗಳೂ ಸಂಕ್ರಾಂತಿ ಯುಗಾದಿ ಕಾಮನ ಹುಣ್ಣಿಮೆ ಮುಂತಾದ ವಿಶಿಷ್ಟ ಹಬ್ಬದ ದಿನಗಳಂದು ಆ ಹಬ್ಬಗಳ ಸಾಂಸ್ಕೃತಿಕ ನೆಲೆಬೆಲೆಗಳನ್ನೂ ತತ್ತ್ವಾರ್ಥಗಳನ್ನೂ ಮನಗಾಣಿಸುವ ಹಾಗೂ ವಿಶಿಷ್ಟ ತತ್ತ್ವೋಪದೇಶಕ್ಕೆ ವಿಷಾಸ ಲಾದ 'ಇಡಿ ಓಲೆ'ಗಳೂ ಇವೆ. ಹಾಗೆ ನೋಡ ಹೊರಟರೆ, ಎಲ್ಲ ಓಲೆಗಳೂ ಉಪ ದೇಶಾತ್ಮಕ ಎನ್ನಬೇಕು. ಭಾವಸಂಸ್ಕಾರವನ್ನೂ ಹೃದಯಸಂಸ್ಕಾರವನ್ನೂ ಪಡೆದು ಹೃದಯಸ್ಪರ್ಶಿಯಾದರೆ ಬುದ್ಧಿನಿಷ್ಠವಾದ ಉಪದೇಶ ಸಾಹಿತ್ಯವಾಗುತ್ತದೆ.

ಈ ಸಾಹಿತ್ಯಗುಣದ ರಜತ ರೇಖೆಗಳಿಂದ ರಂಜಿತವಾಗಿರುವುದರಿಂದ ಇಲ್ಲಿನ ಓಲೆಗಳು ಯಾರಿಗಾಗಿ ಉದ್ದಿಷ್ಟವೋ ಅವರಿಗೆ ಮಾತ್ರವಲ್ಲದೆ ಇತರರಿಗೂ ಉಪಾದೇಯವಾಗಿವೆ. ಆದಕಾರಣ, 'ಭ್ರಮರಾಂಬಾ ಬಳಗ'ದವರು ಈ ಓಲೆಗಳಿಂದ ತಮಗೆ ದೊರೆತ ಹೃದಯತುಷ್ಟಿ ಆತ್ಮಪುಷ್ಟಿಗಳನ್ನು ಕನ್ನಡಿಗರೊಂದಿಗೆ ಹಂಚಿಕೊಳ್ಳಲು ಮನಸ್ಸುಮಾಡಿ, ಈ ಓಲೆಗಳನ್ನು ಒಟ್ಟುಗೂಡಿಸಿ ಪ್ರಕಟಪಡಿಸಿರುವುದಕ್ಕಾಗಿ ಅಭಿನಂದನಾರ್ಹರಾಗಿದ್ದಾರೆ.

ಈ ಓಲೆಗಳು ವಚನಗಳಲ್ಲದಿದ್ದರೂ ವಚನಗಳ ಜಾಡಿನಲ್ಲಿ ಸಾಗಿವೆ. ಇವುಗಳನ್ನು ವಿಸ್ತೃತ ವಚನಗಳೆಂದರೂ ಸಂದೀತು. ವಚನ ಶೈಲಿಯ ಅಚ್ಚಗನ್ನಡತನ ಇಲ್ಲಿ ಬಿಚ್ಚುಬೀಸಾಗಿ, ಹೊಸಗನ್ನಡ ಧಾಟಿಗೆ ಹೊಂದಿಕೊಂಡು, ಅಚ್ಚಮಲ್ಲಿಗೆಯ ನರುಗಂಪಿನಂತೆ ಆಹ್ಲಾದಕರವಾಗಿವೆ. ಶ್ರೀಗಳವರ ಕನ್ನಡದ ಅಭಿಮಾನಕ್ಕೆ ಅವರ ನುಡಿಗಳೆ ಸಾಕ್ಷಿ :

"ಕನ್ನಡದಲ್ಲಿ ಕಂಪಿದೆ; ಕತ್ತುರಿಯಿದೆ. ಕಲ್ಲುಸಕ್ಕರೆಯ ಸವಿಯಿದೆ. ಕನ್ನಡ ಕಂದರು ಕನ್ನಡವನ್ನು ಕೈಹಿಡಿಯದಿದ್ದರೆ ಇನ್ನಾರು ಹಿಡಿದಾರು? ಇನ್ನಾರು ಸವಿದಾರು?"

ಕನ್ನಡಿಗರಿಗೆ ಅವರಿತ್ತಿರುವ ಕರೆ ಇದು :

"ಕನ್ನಡಿಗರು ಕನ್ನಡಿಗರಾಗಿಯೇ ಬಾಳಿ ಬೆಳಗಬೇಕು. ಕನ್ನಡಾಂಬೆಯ ಋಣಮುಕ್ತರಾಗಲು ಹೆಣಗಬೇಕು. ಮನೆಯಲ್ಲಿ ಇದ್ದೇ ಆದರೂ ಇದನ್ನು ಸಾಧಿಸಬಹುದಾಗಿದೆ. ಕನ್ನಡ ಅಕ್ಷರಗಳನ್ನೂ ಅಂಕಗಳನ್ನೂ ಬಳಕೆಗೆ ತರಬೇಕು. ಆದಷ್ಟು ಕನ್ನಡದ ನುಡಿಗಳನ್ನು ಬಳಸಬೇಕು."

ಕನ್ನಡ ನುಡಿಯೊಂದಿಗೆ ಹೆರನುಡಿಯನ್ನು ಅನಾವಶ್ಯಕವಾಗಿ ಬೆರಸಲು ಶ್ರೀಗಳವರು ಒಪ್ಪರು. "ಹವಳು-ಹರಳು-ಜೋಳಗಳನ್ನು ಕೂಡಿಸಬಹುದೆ?" ಎಂದು ಕಳಕಳಿಯಿಂದ ಪ್ರಶ್ನಿಸುತ್ತಾರೆ. ಶ್ರೀಗಳವರ ಈ ಉಕ್ತಿ, "ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ?" "ಮುತ್ತುಂ ಮೆಣಸುಂ ಕೋದಂತಿದೆ" ಎಂಬೀ ಪ್ರಾಚೀನ ಕವಿಗಳ ಕನ್ನಡದ ಪರಂಪರೆಯನ್ನೇ ಮುಂದುವರಿಸಿದೆ. ಇಂಥ ಕನ್ನಡದ ಕಲಿಗಳಿರುವವರೆಗೂ ಕನ್ನಡಕ್ಕೆ ಚ್ಯುತಿಯಿಲ್ಲ.

ಈ ಓಲೆಗಳ ಶೈಲಿ ಅನ್ಯಾದೃಶ, ಅನುಕರಣೀಯ. ಪದ್ಯಗಂಧಿಯಾದ ವಚನ ಶೈಲಿಯಲ್ಲಿ ಇದ್ದು, ಇವುಗಳ ಗದ್ಯದ ಗಾಡಿಯಲ್ಲಿ ಒಂದು ಹೊಸ ಗಮನವಿದೆ. ಪದ್ಯಲಯದಿಂದ ಭಿನ್ನವಾದ ಇಲ್ಲಿನ ಗದ್ಯಲಯವು ಛಂದೋವಿಮುಕ್ತವಾಗಿದ್ದರೂ, ಭಾವದ ಮಣಿತಕ್ಕೆ ತಕ್ಕಂತೆ ಪದಗಳ ಕುಣಿತದಿಂದ ತರಂಗಿತವಾಗಿ ಗತಿ ವೈವಿಧ್ಯದಿಂದ ಸಾಗುತ್ತದೆ.

ಇನ್ನು ಈ ಓಲೆಗಳ ಹುರುಳನ್ನು ತಿರುಳನ್ನು ಓದಿಯೇ ಸವಿಯಬೇಕು : ಸಾವಧಾನವಾಗಿ ಸವಿಯಬೇಕು. ಶ್ರೀಗಳವರು ಆತ್ಮೋಪಾಸನೆಯೊಂದಿಗೆ ಸಾಹಿತ್ಯೋಪಾಸನೆಯನ್ನೂ ಕೂಡಿಸಿಕೊಂಡಿದ್ದಾರೆ "ರಸೋ ವೈಸಃ" ಎಂಬುದನ್ನು ಅರಿತವರಾಗಿ, ಭಾವತಪಸ್ಸಿನೊಂದಿಗೆ ರಸತಪಸ್ಸನ್ನು ಮೇಳವಿಸಿಕೊಂಡಿದ್ದಾರೆ. ಇದರ ಫಲವೇ ಅವರು ಈವರೆಗೆ ಕನ್ನಡವ ಲೋಕಕ್ಕೆ ನೀಡಿರುವ ಹಲವಾರು ಬಾಡದ ಗ್ರಂಥ ಕುಸುಮಗಳು. ಪ್ರಕೃತ, ಶ್ರೀಗಳವರ ಕವಿ ಹೃದಯ ಓಲೆಯ ಸಂಕೋಲೆಯಲ್ಲಿ ಅರ್ಥ-ಭಾವ, ಅನುಭವ-ಅನುಭಾವ, ಜ್ಞಾನ-ಆನಂದ ಎಂಬ ಸಾಹಿತ್ಯ ಷಟ್‌ಸ್ಥಲದ ವಿಹಾರಿಯಾದ ಷಟ್ಪದಿಯು ಝೇಂಕಾರವನ್ನು ಸೆರೆಹಿಡಿದಿದ್ದಾರೆ; ತಾತ್ವಿಕ ಷಟ್‌ಸ್ಥಲದ ಓಂಕಾರನಾದ ಅದಕ್ಕೆ ಆಧಾರಶ್ರುತಿಯಾಗಿದೆ. ಆತ್ಮೀಯ ಸಭೆಗೆಂದು ಹೊಮ್ಮಿದ ಶ್ರೀಗಳವರು ಹೃದಯ ಗಾನ ಇಲ್ಲಿ ಎಲ್ಲರಿಗೂ ಲಭಿಸುವಂತಾಗಿದೆ.

ಈ ಓಲೆಗಳಲ್ಲಿ ಉಕ್ತವಾಗಿರುವ ಅನೇಕ ಸುಂದರ ಸೂಕ್ತಿಗಳಲ್ಲಿ ಇದು ಒಂದು :

"ಬರೆವ-ಬರೆದಿಡುವ ಕೆಲಸ ಅದು ಹೊಂಗೆಲಸ ; ಶಿಲಾಶಾಸನ."

ಶ್ರೀಗಳವರು ತಮ್ಮ ಈ 'ಹೊಂಗೆಲಸ'ದಿಂದ ಕನ್ನಡಿಗರನ್ನು ಚಿರಕಾಲ ಅನುಗ್ರಹಿಸುತ್ತಿರುತ್ತಾರೆ ಎಂಬ ದೃಢವಿಶ್ವಾಸ ನನಗಿದೆ.



# ಚಿರಂತನ ಪ್ರತಿಭಾಮಯ ಸಾಹಿತ್ಯ

ಶ್ರೀ ಹೆಚ್. ಎಸ್. ರೇಣುಕಪ್ರಸಾದ್

ಬೆಂಗಳೂರು

ಆಂಗ್ಲ ಸಾಹಿತ್ಯದಲ್ಲಿ ಪತ್ರಸಾಹಿತ್ಯ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಭಾರತೀಯ ಸಾಹಿತ್ಯ ಪರಂಪರೆಯಲ್ಲಿಯೂ 'ಪತ್ರ ಸಾಹಿತ್ಯ' ಮೂಡಿ ಬರುತ್ತಿದೆ. ಇದರಲ್ಲಿ ನಮಗೆ ನಮ್ಮ ನೆಚ್ಚಿನ ನಾಯಕ ನೆಹ್ರೂ ಅವರ "ಮಗಳಿಗೆ ತಂದೆಯು ಬರೆದ ಓಲೆಗಳು", ಸ್ವಾಮಿವಿವೇಕಾನಂದರ ಪತ್ರಸಾಹಿತ್ಯ ಇತ್ಯಾದಿ; ನಮಗೆ ಚಿರಂತನ ಪ್ರತಿಭಾಮಯ ಸಾಹಿತ್ಯ ಸಿಕ್ಕುತ್ತದೆ. ಈ ಸಾಲಿನಲ್ಲಿ ಕನ್ನಡ ಸಾಹಿತ್ಯಕ್ಕೆ, ವಚನ ವಾಙ್ಮಯಕ್ಕೆ ಚಿರಪರಿಚಿತರಾದ ಶ್ರೀ ಜ. ಚ. ನಿ. ಅವರ ಈ ಕೃತಿ 'ಕಾರುಣ್ಯ ಕಿರಣ' ಬೆಳಗಿ ಬಂದಿದೆ.

ಸಾಮಾನ್ಯಜೀವಿ ಪತ್ರದಲ್ಲಿ ತನ್ನ ದಿನನಿತ್ಯದ ಬಾಳಿನ ಚಿಂತನೆಯನ್ನು ಮಾಡಿಯಾನು. ಆದರೆ ಲೋಕವೆ ಮನೆಯಾಗಿ–ಜನಾಂಗವೆ ತನ್ನ ಬಳಗವಾಗಿ ಹೊಂದಿದ "ಸಂನ್ಯಾಸಿ" ಪತ್ರದಲ್ಲಿ ಬರೆವುದಾದರೂ ಏನು ? ಇದು ಸಾಮಾನ್ಯನ ತಲೆಯಲ್ಲಿ ಬಂದು ಹೋಗಬಹುದಾದ ಪ್ರಶ್ನೆ. ಆ ಪ್ರಶ್ನೆಗೆ ಉತ್ತರ "ಕಾರುಣ್ಯ ಕಿರಣ". ವಿಷವನ್ನು ಹೀರಿದವರಿಗೆ ಅಮೃತವನ್ನು ಎರೆದು, ಕಹಿಯನುಭವಿಸಿದವರಿಗೆ ಸಿಹಿಯನ್ನುಣಿಸಿ, ಆಧಾರ ಬೇಡಿದವರಿಗೆ ಸಾಧಾರನೆನಿಸಿ, ಜ್ಞಾನತೃಷೆಗೆ ಅನುಭವದ ಅಡಿಗೆಯನ್ನು ನೀಡಿ, ಆನಂದಕ್ಕೆ ಅಮೃತವನ್ನು ಸಮೀಚೀನಗೊಳಿಸಿದ ಸಾರಸರ್ವಸ್ವವೆ ಈ ಕಾರುಣ್ಯ ಕಿರಣವೆಂದರೆ–ಅತ್ಯುಕ್ತಿಯಾಗಲಾರದು.

ವೀರಶೈವ ಸಾರಸ್ವತ ಪ್ರಪಂಚದಲ್ಲಿ ಹಿರಿಯ ಪೀಠದ ಜಗದ್ಗುರುಗಳಾಗಿ ಸಾಹಿತ್ಯದಲ್ಲಿ ಹಿರಿತನವನ್ನೂ ಸಾಮಾಜಿಕ ಸೇವೆಯಲ್ಲಿ ವೈಶಾಲ್ಯವನ್ನೂ ಪಡೆದಿರುವ ಶ್ರೀ ಜ. ಚ. ನಿ ಅವರು ಪ್ರಕೃತ ಕಾರುಣ್ಯಕಿರಣದ ಮೂಲಕ ತಮ್ಮ ನುಡಿಮುತ್ತು

ಗಳನ್ನು ಪಸರಿಸಿದ್ದಾರೆ. ಈ ಪ್ರಸಾರಕ್ಕೆ ಮನಮಾಡಿ ಅವುಗಳನ್ನು ಪೋಣಿಸಿ ನುಡಿಭಂಡಾರಕ್ಕೆ ಅರ್ಪಿಸುವ ಮಹತ್ ಕಾರ್ಯವನ್ನು ಶ್ರೀಮತಿ ಗು. ಶಂಕರಮ್ಮ ಅವರು ನಡೆಸಿ ಸಾಹಿತ್ಯ ಪ್ರೇಮಿಗಳಿಗೆ ಮಹೋಪಕಾರವನ್ನು ಎಸಗಿದ್ದಾರೆ.

ಶ್ರೀ ಜ. ಚ. ನಿ. ಅವರ ಮಾತು ಮಾಣಿಕ್ಯದಂತೆ–ನುಡಿ ಸ್ಫಟಿಕದ ಶಲಾಕೆಯಂತೆ.

"ಚಿಂತಾಗ್ನಿ ಆರಲಿ, ಉತ್ತುಂಗತೆ ಉದಯಿಸಲಿ. ಸ್ವಾನುಭೂತಿ ಜ್ಯೋತಿ ಪ್ರಜ್ವಲಿಸಲಿ, ತಂಗರುಳು ತೀವಿ ಬರಲಿ, ಭಕ್ತಿಮಕರಂದ ತುಂಬಲಿ, ಹೃದಯ ವೀಣೆ ಮಿಡಿಯಲಿ, ಭಾವಶ್ರುತಿ ಜೊತೆಗೂಡಲಿ, ಶುಭಶೋಭೆ ಹಾಸುಹೊಕ್ಕಾಗಿ ಹೆಣೆಯಲಿ ಇದುವೆ ಈ ಸಲದ ಹೊಸ ಹಬ್ಬದ ಹೃದಯ ಹರಕೆ."

ಕಣ್ಣಿಗೆ ಮಣ್ಣೆರಚುವ ಬಾಳಿನಲ್ಲಿ ಬಾಳಬಾರದು, ಮಾನವೀಯತೆ ಇರುವುದು ಕಣ್ಣೀರಕೆಯಲ್ಲಿ. ಅದನ್ನೇ ಹಾಳುಮಾಡುವ ಬಾಳು ಅದೆಂತಹ ಬಾಳು. ?

ಕನ್ನಡನುಡಿ–ಸಾಹಿತ್ಯದ ಬಗ್ಗೆ ಜಗದ್ಗುರುಗಳು ಮನದುಂಬಿ ನುಡಿಯುತ್ತಾರೆ–

"ಕನ್ನಡದಲ್ಲಿ ಕಂಪಿದೆ, ಕಸ್ತುರಿಯಿದೆ, ಕಲ್ಲುಸಕ್ಕರೆಯ ಸವಿಯಿದೆ.
ಕನ್ನಡ ಕಂದರು ಕನ್ನಡವನ್ನು ಕೈಹಿಡಿಯದಿದ್ದರೆ ಇನ್ನಾರು ಹಿಡಿದಾರು ?
ಇನ್ನಾರು ಸವಿದಾರು ?"

ಪತ್ರಗಳಲ್ಲಿ ಹೃದಯದಿಂದ ಮೂಡಿಬಂದ ಸಮಯ ಸ್ಫೂರ್ತಿಯು, ಮಿಂಚಿನಂತೆ ಮೂಡಿಬರುವ ಮಿಂಚಿನ ಮಾಲೆಯನ್ನು ನಿಧಾನವಾಗಿ ಗ್ರಹಿಸಲು ಸಾಧ್ಯವಿಲ್ಲ. ಅಂತಹ ಮುತ್ತಿನ ಮಾತುಗಳು ನುಡಿ ಭಂಡಾರಕ್ಕೂ ಅನರ್ಘ್ಯ ರತ್ನಗಳು; ನಡೆಗೂ ದಾರಿ ದೀಪ.

ಈ 'ಕಾರುಣ್ಯಕಿರಣ'ವನ್ನು ಗುರುಮನೆಯಿಂದ ನಾಡಿನ ಜನಮನಕ್ಕೆ ತಲುಪಿಸುವ ಹರಿಕಾರರಾಗಿ ಶ್ರೀಮತಿ ಗು. ಶಂಕರಮ್ಮ ಅವರು ಉತ್ತಮ ಸೇವೆಯನ್ನೆಸಗಿದ್ದಾರೆ. ಅವರ ಮಾತಿನಲ್ಲಿಯೇ ಹೇಳುವಂತೆ,

ರನ್ನಕ್ಕಿಂತ ರಂಜನೆಯಾಗಿದೆ
ಮುತ್ತಿಗಿಂತ ಮನೋಹರವಾಗಿದೆ
ಮಧುರಕ್ಕಿಂತ ಮಧುರವಾಗಿದೆ

ಅಲ್ಲದೆ ಶರಣರ ಸೂಳ್ನುಡಿಯಂತೆ 'ಅಧರಕ್ಕೆ ಕಹಿ–ಉದರಕ್ಕೆ ಸಿಹಿ'ಯಾಗಿ ನಾಡವರನ್ನು ಚೇತನಗೊಳಿಸುತ್ತದೆ

ಎಸಳು-೧೩

# ಚಾರಿತ್ರಿಕ ಸಾಹಿತ್ಯ

[ದರ್ಶನ-೧೨]

ದೇವರ ದಾಸಮಯ್ಯ
ಕಾರಣಿಕ ಕುಮಾರ ಯೋಗಿ
ಯೋಗಿರಾಜ ಪ್ರಭುಕುಮಾರ
ಕರಿಬಸವೇಂದ್ರರ ಒಸಗೆ
ಯುಗಮಹಿಳೆ ದುಗ್ಗಳೆ
ಆದರ್ಶ ಶರಣೆ ಸುಗ್ಗಳೆ
ಚಂದ್ರಗುಂಡ ಶಿವಾಚಾರ್ಯರು
ನಿಜ ಸುಖಿ ಅಪ್ಪಣ್ಣ.
ಪ್ರತಿಭಾಸಿದ್ಧರು ಪಂಡಿತಾರಾಧ್ಯರು.
ಕರಿನಾಡ ಕರಿ ಬಸವೇಂದ್ರರು.

ಚಾರಿತ್ರಿಕ ಸಾಹಿತ್ಯ ರಚನೆ ಉಳಿದ ಸಾಹಿತ್ಯದಂತಲ್ಲ. ಅದಕ್ಕೆ ಪರಿಪೂರ್ಣವಾದ ಐತಿಹಾಸಿಕ ಪ್ರಜ್ಞೆ ಇರಬೇಕು. ಅಂತಹ ಪ್ರಜ್ಞೆಗೆ ಶ್ರೀ ಜ. ಚ. ನಿ. ಸನ್ನಿಧಿಯವರು ಅಮೂಲ್ಯ ಸಂಕೇತವೆಂದರೆ ಅತಿಶಯವಲ್ಲ. ಚಾರಿತ್ರಿಕ ವ್ಯಕ್ತಿಗಳ ಕಾಲಮಾನದ ಬಗೆಗೆ, ವ್ಯಕ್ತಿತ್ವದ ಬಗೆಗೆ ಬರೆಯಲು ಬೇಕಾದ ಆಧಾರಗಳು ನಮ್ಮಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸಿಕ್ಕುವುದಿಲ್ಲ. ದೊರೆತಷ್ಟು ಆಧಾರದ ಮೇಲೆ ಚರಿತೆಯನ್ನು ರಚಿಸುವುದು ಕ್ಲಿಷ್ಟವಾದ ಕೆಲಸ. ಆದರೂ ಶ್ರೀಗಳವರು ತಮ್ಮ ವಿಶಿಷ್ಟ ಸಾಮರ್ಥ್ಯದಿಂದ ಅಂತಹ ಕ್ಲಿಷ್ಟ ಕೆಲಸವನ್ನು ಸರಳ ರೀತಿಯಲ್ಲಿ, ಸಮರ್ಪಕವಾಗಿಮಾಡುತ್ತಿದ್ದಾರೆ.

ಅವರು ಇದುವರೆಗೆ ರಚಿಸಿರುವ ಹತ್ತು ಚಾರಿತ್ರಿಕ ಗ್ರಂಥಗಳಲ್ಲಿಯೂ ಜಾಣ್ಮೆಯಿಂದ ಕೂಡಿದ ಅವರ ಚೈತನ್ಯಪೂರ್ಣ ನಿರೂಪಣೆಯನ್ನು ನಾವು ಕಾಣುತ್ತೇವೆ. ಕಾಲಗರ್ಭವಲ್ಲಿ ಕಣ್ಮರೆಯಾಗಿ ಕೆಲವು ಕಾಲ ಕಳೆದನಂತರ ಸಂಪೂರ್ಣ ಮರೆತೇಹೋಗಬಹುದಾಗಿದ್ದಂತಹ ಅನರ್ಘ್ಯ. ಜೀವ ರತ್ನಗಳ ಬಗೆಗೆ ಬರೆದು ಚಾರಿತ್ರಿಕ ಸಾಹಿತ್ಯಕ್ಷೇತ್ರಕ್ಕೆ ಉಪಕಾರ ಮಾಡಿದ್ದಾರೆ ಶ್ರೀಗಳವರು.

ದೇವರ ದಾಸಮಯ್ಯನಂತಹ ಚಾರಿತ್ರಿಕ ಮಹಾ ಪುರುಷನ ಬಗೆಗೆ ಸಂಭಾವನಾ ಗ್ರಂಥವನ್ನು ಪ್ರಪ್ರಥಮವಾಗಿ ಪ್ರಕಟಿಸಿ ಸಂಭಾವನಾ ಗ್ರಂಥ ಪರಂಪರೆಗೆ ಹೊಸ ಹಾದಿ ಹಾಕಿಕೊಟ್ಟ ಕೀರ್ತಿ ಶ್ರೀ ಸನ್ನಿಧಿಯವರದು. ಅವರ 'ಕಾರಣಿಕ ಕುಮಾರಯೋಗಿ' 'ಯುಗಮಹಿಳೆ ದುಗ್ಗಳೆ' 'ಆದರ್ಶ ಶರಣೆ ಸುಗ್ಗಳೆ' 'ನಿಜ ಸುಖಿ ಅಪ್ಪಣ್ಣ' 'ಚಂದ್ರಗುಂಡ ಶಿವಾಚಾರ್ಯ, ಗ್ರಂಥಗಳ ಬಗ್ಗೆ ಬಂದಿರುವ ಅಭಿಪ್ರಾಯಗಳು ಶ್ರೀ ಗಳವರ ಚಾರಿತ್ರಿಕ ಸಾಹಿತ್ಯ ರಚನಾ ಕುಶಲತೆಗೆ ಸಾಕ್ಷಿಯಾಗಿವೆ.

## ಕಾರಣಿಕ ಕುಮಾರ ಯೋಗಿ

ಕನ್ನಡ ನಾಡಿನ ಕಾರಣ ಪುರುಷರ ಪಂಕ್ತಿಗೆ ಸೇರಿದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಹಾನಗಲ್ಲು ಕುಮಾರ ಸ್ವಾಮಿಗಳ ಪುಣ್ಯ ಜೀವನದ ಚರಿತ್ರೆಯಿದು. ಬರಿಯ ಭೌತಿಕ ಘಟನೆಗಳನ್ನು ವರದಿಮಾಡುವ ಶುಷ್ಕ ಚರಿತ್ರೆಯಲ್ಲ; ಓದುಗರ ಚಿತ್ತ ಭಿತ್ತಿಯ ಮೇಲೆ ಮಹಾಸ್ವಾಮಿಗಳ ಮೇರು ಉನ್ನತ ವ್ಯಕ್ತಿತ್ವವನ್ನು ನಿಚ್ಚಳವಾಗಿ ಮಂಡಿಸುವ ಭಿತ್ತಿ ಚಿತ್ರ.

ಸ್ವಾಮಿಗಳು ರಾಜಕೀಯ ರಂಗದಲ್ಲಿ, ಸಾಮಾಜಿಕ ರಂಗದಲ್ಲಿ, ಧಾರ್ಮಿಕ ರಂಗದಲ್ಲಿ ದುಡಿದರೂ ಅವರು ರಜೋಗುಣ ಪ್ರಧಾನರಾದ ರಾಜಕೀಯ ಸಾಮಾಜಿಕ ವ್ಯಕ್ತಿಗಳ ಡಾಂಭಿಕ ಧಾರ್ಮಿಕರಲ್ಲ. ಎಲ್ಲಕ್ಕೂ ಮೊದಲಾಗಿ, ಎಲ್ಲಕ್ಕೂ ಮಿಗಿಲಾಗಿ ಅವರು ಯೋಗಿಗಳು ! ಸ್ವಾಮಿಗಳಲ್ಲ ; ಸಂನ್ಯಾಸಿಗಳಲ್ಲ–ಶಿವಯೋಗಿಗಳು. ಜಡ ಜಗತ್ತಿಗಾಗಿ, ಜಡ ಜೀವಿಗಳಿಗಾಗಿ ಅವರು ದುಡಿಯಲಿಲ್ಲ. ಜಡ ಜಗತ್ತಿನಲ್ಲಿ ಅಂತರ್ಗತವಾಗಿರುವ, ಅಂತರ್ನಿಹಿತವಾಗಿರುವ ವ್ಯೃಥನ ಮಹಾಶಕ್ತಿಯ ಪುನ ರುದ್ಧಾರಕ್ಕಾಗಿ, ನರಜೀವಿಗೆ ಪರಶಿವ ತತ್ವ ಸಿದ್ಧಿಸಲಿಕ್ಕಾಗಿ–ಅವರ ತಪಸ್ಸು ! ಈ ಮಹೋದ್ದೇಶವೇ ಶಿವಯೋಗ ಮಂದಿರದ ಅಡಿಗಲ್ಲು. ಜಗತ್ತೆಲ್ಲವೂ ಶಿವಯೋಗ ಮಂದಿರವಾಗಬೇಕು. ಅನುಭವ ಮಂಟಪವಾಗಬೇಕು ಎಂಬುದು ಅವರ ಅಭೀಷ್ಟ ! ಮಹಾಸ್ವಾಮಿಗಳ ಜೀವನವನ್ನು ಸಮಗ್ರವಾಗಿ ಓದಿದ ಮೇಲೆ ಅನಿಸುತ್ತದೆ ಶ್ರೀ ಅರವಿಂದರ ಆಗಮನವನ್ನು ಮುನ್ನುಡಿದಿದೆ ಈ ಹಾನುಗಲ್ಲ ಹಾಲಹಕ್ಕಿ !

ಶ್ರೀ ಶೈಲ ನಿಡುಮಾಮಿಡಿ ಜಗದ್ಗುರುಗಳು ಕುಮಾರ ಸ್ವಾಮಿಗಳ ಚರಿತ್ರೆ ಯನ್ನು ಬರೆಯಲು ತುಂಬಾ ಸಮರ್ಥರು. ಅವರಿಗೆ ಇತರ ಸ್ವಾಮಿಗಳಿಗೆ ಇರದ ವಾಗ್ ವೈಖರಿಯಿದೆ, ಭಾವದ ಬಂಡವಾಳವಿದೆ. ಹೆಚ್ಚಾಗಿ ತಾವೇ ಅವರ ಜೀವನವನ್ನು ಕಂಡು ಅವರ ಆಶ್ರಮದಲ್ಲಿ ಇದ್ದು ಬೆಳೆದವರು. ಹೆಚ್ಚು ಶ್ರಮ ವಹಿಸಿ ಸ್ವಾಮಿಗಳ ಜೀವನದ ಲೌಕಿಕಾಂಕಗಳನ್ನು ಸಂಗ್ರಹಿಸಿ ಸುಂದರವಾಗಿ ನಿರೂಪಿಸಿದ್ದಾರೆ. ಕನ್ನಡ ವಾಚಕ ವೃಂದ ಸ್ವಾಮಿಗಳಿಗೆ ತುಂಬಾ ಆಭಾರಿ

**ರೈತ ಪತ್ರಿಕೆ, ಬಳ್ಳಾರಿ.9–5–51**

# ಕಾರಣಿಕ ಕುಮಾರ ಯೋಗಿ

ಸಾಧು ಪುರುಷರ ಜೀವನವನ್ನು ಕೇವಲ ಸಾಹಿತಿ ಬರೆಯಲಾರ ಶ್ರೀ ಚನ್ನ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ಶ್ರೀ ಕುಮಾರ ಯೋಗಿಗಳ ಶಿಷ್ಯರು. ಅವರ ಶಿಷ್ಯರೆಲ್ಲ ಶಿವಾಚಾರ್ಯರು, ಉನ್ನತ ಪಟ್ಟಕ್ಕೆ ಏರಿದವರು.

ಅಂಥ ಯೋಗಿಗಳಿಗೆ ಯೋಗಿಗಳ ತಿರುಳು ತಿಳಿಯುವುದು. ಈ ಗ್ರಂಥವನ್ನು ಸಾಹಿತಿಯೆಂದು ಬರೆದದ್ದಲ್ಲ. ಕೇವಲ ತಮ್ಮ ಮನಸ್ಸಿಗೆ ತಿಳಿದದ್ದನ್ನು ಸುಂದರ ಕನ್ನಡ ಭಾಷೆಯಲ್ಲಿ ಬರೆದಿರುವರು. ಯಾವ ಕಡೆಯಲ್ಲಿಯೂ ಇಲ್ಲದ ಅಲಂಕಾರ ಉಪಮೆಗಳಿಲ್ಲ ಆದರೂ ಇದು ಒಂದು ಉತ್ತಮ ಕಲಾ ಕೃತಿಯಾಗಿರುವುದು. ಕನ್ನಡದಲ್ಲಿ ಚಾರಿತ್ರಿಕ ಗ್ರಂಥಗಳು ಕಡಿಮೆ. ಇಂಥವು ಇನ್ನೂ ನೂರಾರು ಪುಸ್ತಕಗಳು ಬರಬೇಕು. ಶ್ರೀ ಸ್ವಾಮಿಗಳು ಉತ್ತಮ ಸಾಹಿತಿಗಳಿರುವರು. ಈ ಗ್ರಂಥ ಬರೆದು ಶ್ರೀ ಕುಮಾರ ಯೋಗಿಗಳ ಪರಿಚಯು ಕನ್ನಡಿಗರಿಗೆ ಮಾಡಿಕೊಟ್ಟಿದ್ದು ಪುಣ್ಯದ ಕೆಲಸ. ಕರ್ಣಾಟಕದಲ್ಲಿ ಅವರ ಮತ್ತು ಅವರಿಂದ ಲಾಭ ಪಡೆದವರ ಹೆಸರನ್ನು ತಿಳಿಯದವರು ವಿರಳ. ಆದರೂ ಅವರ ಸುಂದರ ಜೀವನವನ್ನು ಓದಬೇಕೆಂಬ ಲವಲವಿಕೆಯು ಎಲ್ಲರಿಗೂ ಇರುವುದು. ಆ ಆಶೆಯನ್ನು ಈಡೇರಿಸಿದ್ದಕ್ಕೆ ಕನ್ನಡಿಗರೆಲ್ಲರೂ ಮಹಾಸ್ವಾಮಿಗಳನ್ನು ಅಭಿನಂದಿಸಲೇಬೇಕು. ಈ ಮಹಾಸ್ವಾಮಿಗಳು ಕೇವಲ ಮಠಾಧಿಪತಿಗಳಲ್ಲದೆ ಉತ್ತಮ ಕನ್ನಡ ಸಾಹಿತಿಗಳೂ ಇರುವರು. ಕನ್ನಡ ನಾಡು ಈ ರೀತಿ ಗುರುಶಿಷ್ಯರನ್ನೂ ಪಡೆದು ತನ್ನ ಕೀರ್ತಿಯನ್ನು ಕಾಯ್ದು ಕೊಂಡಿರುವುದು ಒಂದು ಭಾಗ್ಯ.

ವಿಶಾಲ ಕರ್ಣಾಟಕ
3-3-51

Karanika Kumara Yogi

This is an inspiring account of a great Veerasaivacharya of the present century written by his disciple who is himself a Swamiji of repute. Sadashivayya, for that was the name of the Acharya (who was also known by his popular epithet as Kumara Yogi) was born in 1867 of very poor parents, in a village of Ranibennur taluk, Dharwar district. Very early in his childhood he had lost his father. He learnt his three R's under his grand-

father in a pial school. Along with his meagre schooling, he had to go about in the village from door to door with the begging bowl for supplementing the slender resources of the family. During one such rounds, he was taunted by an elderly person. That was the turning point in Sadashivayya's sublime life. Thence on, it was a burning desire in him to acquire great knowledge and serve humanity. He came across good souls like Rachayya and Basavappayya of Samala. He studied the six monumental works of the Nijagunashivayogi. He began to realise the importance of Ishta, Prana and Bhava Lingas and would never leave for a moment the company of "Kaivalya Paddhati" Unconsciously he was becoming a Veerasaiva mystic, While he was doing work as a teacher in Lingadahalli, one day his mother came to him and prevailed upon him to get married. The arguments set forth by him for taking up the vow of celibacy are classic. Then for about a decade Kumara Yogi wanders in search cf the right Guru. He spent many long years with the famous Sidharudha Swami of Hubli, but the real Guru who delivered him "the spiritual goods" was Yelandur Basavalingaswami. Thus initiated, he does penance in "Shambhu Betta". At the end of twelve years he realises the "truth". He goes into the world with spiritual gest and zeal to serve the suffering humanity. North Karnataka was his sphere of action. With his austere example of plain living and high thinking he woke the Veerasaiva society from its deep slumber and spurred it on to action. His

mystic musings, appreciation of true culture, effective mass contact magnetic personality, establishment of the great Sivayoga Mandir, pious life, and love of arts are some of the landmarks in his glorious career. In 1930 Kumara Yogi became united with the Lord (Lingaikya).

The prose style is good, Some of the incidents are moving and significant. The author has done justice to his subject.

Hindu
3-8-52 M. M. BHAT.

## ಯುಗಮಹಿಳೆ ದುಗ್ಗಳೆ

೧

"....ನೆರೆನಂಬೋ ನೆರೆನಂಬೊ ದಾಸ ದುಗ್ಗಳೆಯಂತೆ ..." ಭಕ್ತಿಯ ಮಾತು ಬಂದಾಗ ಭಕ್ತಿಭಾಂಡಾರಿಯೆನಿಸಿದ ಬಸವೇಶ್ವರನೇ ಬಹಳ ಗೌರವಾದರಗಳಿಂದ ನೆನೆವ ಹೆಸರು ದಾಸದುಗ್ಗಳೆಯದು. ಅಕ್ಕ ಮಹಾದೇವಿಗಿಂತ ಒಂದೂವರೆನೂರು ವರುಷ ಮೊದಲಿದ್ದ ದುಗ್ಗಳೆಗೆ ವೀರಶೈವ ಶರಣೆಯರಲ್ಲಿಯೆ ಮಹೋನ್ನತಸ್ಥಾನವಿದೆ ಆದರೆ ವೀರಶೈವ ಮತದ ಪುನರುತ್ಥಾನದ ಮಹಾ ಆಂದೋಲನದ ಕಾಲದಲ್ಲಿದ್ದವಳಾದ ಅಕ್ಕಮಹಾದೇವಿಗೆ ದೊರೆತ ಹೆಸರು, ಕೀರ್ತಿ, ದುಗ್ಗಳೆಗೆ ದೊರೆತಿಲ್ಲವೆಂಬುದು ನಿಜ. ಆದರೆ ಶಿವಭಕ್ತಿಯಲ್ಲಿ ಯಾರಿಗೂ ದ್ವಿತೀಯಳಲ್ಲದ ದುಗ್ಗಳೆ ಆದರ್ಶ ಸತಿಯಾಗಿ ಬಾಳಿದಳು. ಅವಳ ಬಗ್ಗೆ ಬರಬೇಕಾದಷ್ಟು ಸಾಹಿತ್ಯ ನಮ್ಮಲ್ಲಿನ್ನೂ ಬಂದಿಲ್ಲ. ದಾಸ ಮಯ್ಯನಂತಹ ಭಕ್ತಶ್ರೇಷ್ಠನ ಹೆಂಡತಿಯಾಗಿ ಬಾಳಿ ಅವನ ಜೀವನವನ್ನು ಬೆಳಗಿಸಿ ಅವನಿಗೆಷ್ಟೂ ಕಡಿಮೆಯಲ್ಲವೆನಿಸಿದ ಅವಳ ಈ ಪುಟ್ಟ ಚರಿತ್ರೆಯನ್ನು ಶ್ರೀ ಜ. ಚ. ನಿ ಚೊಕ್ಕಟವಾಗಿ ರಚಿಸಿದಾರೆ.

೨

ಈ ಗ್ರಂಥವು ಚಿಕ್ಕದಾದರೂ ಮಹತ್ವದ ಅನೇಕ ವಿಷಯಗಳಿಂದ ಕೂಡಿದ್ದು ಪುರಾತನ ಮಹಿಳೆಯೋರ್ವಳ ಜೀವನ ಚರಿತ್ರೆಯನ್ನು ನಿರೂಪಿಸಿರುತ್ತಾರೆ. ಶ್ರೀಗಳವರು ತಮ್ಮ ಪಳಗಿದ ಲೇಖನಿಯಿಂದ, ಮೂಲೆ ಕಸವಾಗಿ ಬಿದ್ದಿದ್ದ ಸಾಹಿತ್ಯರಾಶಿಯಿಂದ ದುಗ್ಗಳೆಯ ಜೀವನ ಚರಿತ್ರೆಯನ್ನು ಎತ್ತಿ ತೆಗೆದು ರಸಮಯವಾಗಿ

ಮಾಡಿ, ಜನತೆಯ ಮುಂದೆ ಒಂದು ಆದರ್ಶ ದಾಂಪತ್ಯ ಜೀವನವನ್ನು ತಂದು ನಿಲ್ಲಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿದ್ದ ಸ್ತ್ರೀಯರ ನಡವಳಿಕೆಯಲ್ಲಿ, ಈ ಇಪ್ಪತ್ತನೆಯ ಶತಮಾನದಲ್ಲೂ ಜನಾಂಗದ ಜೀವನವನ್ನು ಹದಗೊಳಿಸಬೇಕಾದ ಸಾಹಿತ್ಯ ವಿಪುಲವಾಗಿದೆ. ಶಿವಶರಣೆಯರಲ್ಲಿ ಅಗ್ರಗಣ್ಯಳಾದ ಅಕ್ಕಮಹಾದೇವಿಯು ಸಾಹಿತ್ಯದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿದ್ದರೆ, ಶಿವಶರಣೆ ದುಗ್ಗಳೆ ಮೂಲೆಗುಂಪಾಗಿದ್ದಾಳೆ. ಜೀವನದ ಎಲ್ಲಾ ಹಂತಗಳಲ್ಲೂ ಪತಿ (ದಾಸಮಾರ್ಯನೊಂದಿಗೆ) ಯೊಡನೆ ಬಾಳ್ವೆಮಾಡುತ್ತಾ, ವಿರತಿಯನ್ನು ಹೊಂದಿ ಸಂಸಾರವನ್ನು ತ್ಯಜಿಸದೆ, ಸಂಸಾರದಲ್ಲಿ ಬರುವ ಎಲ್ಲಾ ಎಡರು ತೊಡರುಗಳಲ್ಲೂ ಪತಿಯ ಭುಜಕ್ಕೆಭುಜ ಕೊಟ್ಟು, ಎಲ್ಲಾ ಶಿವಶರಣೆಯರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿದ್ದಾಳೆ. ಇಂತಹ ಪವಾಡ ಮಹಿಳೆಯನ್ನು ಚಿತ್ರಿಸಿದ್ದಾರೆ ಶ್ರೀಗಳು. ಪ್ರತಿಯೊಂದು ಪುಟದಲ್ಲೂ ಜೀವನದ ಆದರ್ಶಗಳ ಪ್ರತಿಬಿಂಬಿತವಾಗಿದ್ದು, ಪ್ರತಿ ಪುಟವೂ ಸುವರ್ಣ ಫಲಕದಂತೆ ಕಂಗೊಳಿಸುತ್ತಾ, ಮೊದಲಿನಿಂದ, ಕೊನೆಯವರೆಗೂ, ಒಂದೇ ಉಸಿರಿನಲ್ಲಿ ಓದಿ ಮುಗಿಸುವಷ್ಟು ಚೆನ್ನಾಗಿದೆ. ಸಾಮಾನ್ಯ ಸ್ತ್ರೀಯಂತೆ ಕಂಡರೂ ಶಿವಶರಣೆ ದುಗ್ಗಳೆ ತನ್ನ ಭಕ್ತಿ ಭಂಡಾರವನ್ನು ಕೊನೆಗೆ ತನ್ನ ಪುಣ್ಯ ಭಂಡಾರವನ್ನು ನಾಡಿಗೆ ಧಾರೆಯೆರೆದಳು. ಅಪ್ರತಿಮವಾಗಿ ನೀಡಿ ನೀಡಿ ಅನುಪಮವಾಗಿ ಬೆಳಗಿದಳು.

— "ಶಂಕರ"

ಕನ್ನಡ ನುಡಿ, ಮೇ, ೬೪

## ಆದರ್ಶ ಶರಣೆ ಸುಗ್ಗಳೆ

ವೀರಶೈವ ಸಾಹಿತ್ಯವನ್ನು ಸಾದ್ಯಂತವಾಗಿ ಅಧ್ಯಯನ ಮಾಡಿದಾಗ ಹಲವಾರು ಸಂದರ್ಭಗಳಲ್ಲಿ ಸುಗ್ಗಳೆಯ ಹೆಸರು ಬರುವುದನ್ನು ಕಾಣುತ್ತೇವೆ. ಕ್ರಿ. ಶ. ೧೧೮೮ ರ ತೊರೆಗಲ್ಲು ಶಾಸನ, ಕ್ರಿ. ಶ. ೧೧೦೭ ರ ನಿಡುಗುಂಡಿಶಾಸನ, ಕ್ರಿ. ಶ. ೧೧೭೬–೧೨೨೦ ರ ನಡುವಣ ಬೇಲೂರು ಶಾಸನಗಳಲ್ಲಿಯೂ ಸುಗ್ಗಳೆಯ ಹೆಸರು ಬಂದಿದೆ. ಸಿದ್ಧರಾಮನ ತಾಯಿಯ ಹೆಸರೂ ಸುಗ್ಗಲಾದೇವಿಯೇ! ಶ್ರೀ ಜ.ಚ.ನಿ. ಅವರು ೧೧ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿ ಬಾಳಿದ ವೀರ ಮಹಿಳೆ ಸುಗ್ಗಳೆಯನ್ನು ಕುರಿತು ಈ ಪುಸ್ತಕವನ್ನು ಬರೆದಿದ್ದಾರೆ. ಜೈನಮತಕ್ಕೆ ಸೇರಿದ ಜಯಸಿಂಹ ಚಕ್ರವರ್ತಿಯನ್ನು ವಿವಾಹವಾಗಿ ಅವನನ್ನು ತನ್ನ ಮತಕ್ಕೆ ಒಲಿಸಿಕೊಂಡು, ದೇವರ ದಾಸಮಯ್ಯನ ಆದರ್ಶ ಶಿಷ್ಯಳಾಗಿ, ಶಿವಮತ ಪ್ರಸಾರವನ್ನೂ ಸಮಾಜೋದ್ಧಾರವನ್ನೂ ಮಾಡಿ ಯಶಸ್ವಿಯಾದ ಸುಗ್ಗಳಾದೇವಿ ರಾಣಿರತ್ನವೆನಿಸಿದ್ದಾಳೆ. ದುಗ್ಗಳೆಯ ಕಾಲದಲ್ಲಿ ಜೀವಿಸಿದ್ದ ಈ ಕುಲಸತಿಯನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಒಂದು

ಪ್ರತ್ಯೇಕವಾದ ಪುಸ್ತಕವಿರಲಿಲ್ಲ. ಈ ಕೊರತೆಯನ್ನು ಶ್ರೀ ಜ. ಚ. ನಿ. ಪರಿಹರಿಸಿದ್ದಾರೆ. ಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವಂತಹ ಸರಳವಾದ ಭಾಷೆ ಮತ್ತು ಆಕರ್ಷಕವಾದ ಶೈಲಿ ಈ ಪುಸ್ತಕದ ವಿಶೇಷ ಗುಣಗಳಾಗಿವೆ.

**ಸಂಯುಕ್ತ ಕರ್ನಾಟಕ**
೨೮–೯–೬೪

# ಯುಗಮಹಿಳೆ ದುಗ್ಗಳೆ

ದೇವರ ದಾಸಮಯ್ಯನ ಪತ್ನಿಯಾಗಿ, ಶಿವಶರಣೆಯರಲ್ಲಿಯೂ ಶಿವಭಕ್ತರಲ್ಲಿಯೂ ಅಗ್ರಗಣ್ಯಳಾಗಿ, ಆದರ್ಶ ಸ್ತ್ರೀರತ್ನವಾಗಿ ಬಾಳಿ ಬೆಳಗಿದ ದುಗ್ಗಳೆಯನ್ನು ಕುರಿತು ವೀರಶೈವ ಸಾಹಿತ್ಯದಲ್ಲಿ ಹೆಚ್ಚು ಸಂಗತಿಗಳು ದೊರೆತಿಲ್ಲ. ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಚನ್ನಬಸವರಾಜ ದೇಶೀಕೇಂದ್ರ ಶಿವಾಚಾರ್ಯರು ದುಗ್ಗಳೆಗೆ ಸಂಬಂಧಿಸಿದಂತೆ ಲಭ್ಯವಿರುವ ಎಲ್ಲ ಸಾಹಿತ್ಯ ಮೂಲಗಳಿಂದ ವಿಷಯವನ್ನು ಸಂಗ್ರಹಿಸಿ ದುಗ್ಗಳೆಯ ಆದರ್ಶ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಗೊಬ್ಬೂರು ಗ್ರಾಮದ ಮಲ್ಲಿನಾಥ–ಮಹಾದೇವಿಯರಿಗೆ ಪುತ್ರಿಯಾಗಿ ಜನಿಸಿದ ದುಗ್ಗಳೆಯು ದಾಸಮಯ್ಯನು ಒಡ್ಡಿದ ಪರೀಕ್ಷೆಯಲ್ಲಿ ಯಶಸ್ವಿಯಾಗಿ ಅವನನ್ನು ವಿವಾಹವಾಗುತ್ತಾಳೆ. ತನ್ನ ಅನುಪಮ ಭಕ್ತಿಯಿಂದಲೇ ತನಗೆ ಅನುರೂಪನಾದ ಪತಿಯನ್ನು ಪಡೆದ ಈ 'ಆದರ್ಶ ನಾರಿ' 'ಕಾಯಕವೇ ಕೈಲಾಸ' ವೆಂದು ನಂಬಿ, ಕೌಟುಂಬಿಕ ಜೀವನದಲ್ಲಿ ಪ್ರಪಂಚ–ಪರಮಾರ್ಥಗಳ ಸುಂದರ ಸಮನ್ವಯವನ್ನು ಸಾಧಿಸುತ್ತಾಳೆ. ಮಹಿಳೆಯರಿಗೆ ಮಾರ್ಗದರ್ಶಕಳಾಗಿ ಬಾಳಿ, ಇಹ-ಪರ ಸಾಧನೆಯಲ್ಲಿ ಯಶಸ್ವಿಯಾದ ಸೌಭಾಗ್ಯಶಾಲಿ ದುಗ್ಗಳೆ, ಶ್ರೀ ಜ.ಚ.ನಿ ಅವರ ಕೃತಿಯನ್ನು ಓದಿದವರ ಅಂತರಂಗದಲ್ಲಿ ಅನಂತಕಾಲ ಉಳಿಯುತ್ತಾಳೆ. ಈ ಪುಟ್ಟ ಪುಸ್ತಕ ಸರ್ವದೃಷ್ಟಿಯಿಂದಲೂ ಸಂಗ್ರಹ ಯೋಗ್ಯ.

**ಸಂಯುಕ್ತ ಕರ್ನಾಟಕ**
೨೮–೯–೬೪

# ವಿಚಾರ ಭರಿತ ವಿಭೂತಿ

ಶಿವಾದ್ವೈತ ತತ್ತ್ವ ಪ್ರಚಾರಕ ಸಮಿತಿಯ ದ್ವಾದಶಮಹೋತ್ಸವ ಮತ್ತು ಗಿರಿಯಾಪುರದ ಕುಮಾರಾಶ್ರಮದ ಸಂಸ್ಥಾಪಕರಾದ ಭಾಷ್ಯಾಚಾರ್ಯ ಗುರುವರ್ಯ ಷ|| ಬ್ರ|| ಶ್ರೀ|| ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಷಷ್ಠ್ಯಬ್ದ ಮಹೋತ್ಸವಗಳ ಸಂದರ್ಭದಲ್ಲಿ ಶಿಷ್ಯ ಮಂಡಲಿಯವರು ಸಮರ್ಪಿಸಿರುವ ಈ ಸಂಭಾವನಾ ಗ್ರಂಥವು ಅತ್ಯಂತ ವಿಚಾರಣೀಯವೂ, ವಿದ್ವತ್ ಪೂರ್ಣವೂ ಆಗಿದೆ ಯೆಂದು ಹೇಳಲು ಹೆಮ್ಮೆಯಾಗುತ್ತದೆ. ಸದಾಚಾರ, ಸತ್ಯ ನಿಷ್ಠೆಗಳು ಸಂಸ್ಕೃತಿಯ ಜೀವಾಳವಾಗಿ ಉಳಿಯಲು ಶ್ರಮಿಸುವ ಯಾವ ಮಠಗಳೇ ಆಗಲಿ, ಮಠಾದಿಪತಿಗಳೇ ಆಗಲಿ ಎಂದೆಂದಿಗೂ ಪೂಜಾರ್ಹರೇ ಸರಿ. ಅವರು ಸಲ್ಲಿಸುವ ನಿಸ್ವಾರ್ಥವಾದ ಸೇವೆಗೆ ಅವರ ಭಕ್ತಾದಿಗಳು ಹಾಗೂ ಇತರ ಸಾಮಾಜಿಕರು ಹೃತ್ಪೂರ್ವಕವಾಗಿ ತಮ್ಮ ಭಕ್ತಿಯನ್ನು ಸಮರ್ಪಿಸುವುದು ಸಹಜವಾಗಿದೆ. ಇಂಥ ಸತ್ಪ್ರೇರಣೆಯಿಂದ ಕೂಡಿ, ಹಲವಾರು ವಿದ್ವಾಂಸರುಗಳ ಬೆಂಬಲವನ್ನು ಪಡೆದು, ಉಪಯುಕ್ತವಾದ ಹೆಬ್ಬೊತ್ತಿಗೆಯೊಂದನ್ನು ಕನ್ನಡಿಗರಿಗೆ ಕೊಡುಗೆಯಾಗಿ ನೀಡಿರುವ ಸಂಪಾದಕ ಸಮಿತಿಯವರ ಈ ಕಾರ್ಯವು ಸ್ತುತ್ಯವಾಗಿದೆ.

ಪ್ರಕೃತ ಗ್ರಂಥದ ಲೇಖನಗಳಲ್ಲಿ ಸಾಕಷ್ಟು ವೈವಿಧ್ಯವೂ ವಿತರಣೆಯೂ ಇದೆಯೆಂದು ಹೇಳಲು ಹರ್ಷವಾಗುತ್ತದೆ. ಮೊದಲನೆಯ ವಿಭಾಗದಲ್ಲಿ ಷ|| ಬ್ರ|| ಶ್ರೀ|| ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರ ಜೀವನ ಪರಿಚಯ, ಅವರ ಸಿದ್ಧಿ, ಸಾಧನೆ, ಶಿಷ್ಯ ವೃಂದದ ಮೇಲೆ ಅವರು ಬೀರುತ್ತಿರುವ ಪ್ರಭಾವ, ಅವರಿಂದ ಸ್ಥಾಪಿತವಾಗಿ ದಿನದಿನಕ್ಕೂ ಪ್ರವರ್ಧಿಸುತ್ತಿರುವ ಶ್ರೀಗುರು ಕುಮಾರಾಶ್ರಮದ ವರ್ಣನಾತ್ಮಕ ಪರಿಚಯ–ಇವೇ ಮೊದಲಾದ ವಿಚಾರಗಳನ್ನು ಕುರಿತು ಬೇರೆ ಬೇರೆ ಲೇಖಕರು ರಚಿಸಿದ ಬರಿಹಗಳೂ, ಕವಿತೆಗಳೂ ಅಡಕವಾಗಿವೆ. ಶ್ರೀ ಗೊ. ರು. ಚನ್ನಬಸಪ್ಪನವರು ಶ್ರೀಗಳವರನ್ನು ಕುರಿತು ಬರೆದಿರುವ ಪ್ರಪ್ರಥಮವಾದ

ಲೇಖನವಂತೂ ಅತ್ಯಂತ ಕಾವ್ಯಪೂರ್ಣವಾಗಿವೆಯೆಂದು ಹೇಳಲಾಶಿಸುತ್ತೇವೆ. ಮಧ್ಯೆ ಮಧ್ಯೆ ಲೇಖಕರು ಉದಾಹರಿಸಿರುವ ಸ್ಫೂರ್ತಿಯುತವಾದ ಕಿರುಗವಿತೆಗಳು ಈ ಲೇಖನದ ಒಂದು ವೈಶಿಷ್ಟ್ಯವೆನ್ನಬಹುದು. ಶ್ರೀಗಳವರ ಆಧ್ಯಾತ್ಮಿಕ ಸಾಧನೆ, ಗ್ರಂಥರಚನೆಗಳನ್ನು ಕುರಿತು ಬರೆದಿರುವ ಇತರ ಲೇಖನಗಳು ವಿಚಾರಭರಿತವಾಗಿವೆ. ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರವಲ್ಲದೆ "ಶ್ರೀ ಜ. ಚ. ನಿ." ಎಂಬ ಅಂಕಿತದಿಂದ ಸಾಹಿತ್ಯಕ್ಷೇತ್ರದಲ್ಲಿಯೂ ಸಂತತನಾಗಿ ಶ್ರಮಿಸುತ್ತಿರುವ ಶ್ರೀಮನ್ನಿಡುಮಾಮಿಡಿ ಸ್ವಾಮಿಗಳವರು ಈ ವಿಭಾಗದಲ್ಲಿ ಬರೆದಿರುವ ಹಲವು ಲೇಖನಗಳು ಆದರಣೀಯ ವಾಗಿವೆ. ಶಾಂತಿಧಾಮವೆನಿಸಿರುವ ಶ್ರೀಗುರು ಕುಮಾರಾಶ್ರಮದ ಮಹತ್ವವನ್ನು ತಿಳಿಸುವ ಲೇಖನ ಬಡಗನಾಡ ಹೇಮರೆಡ್ಡಿ ವೀರಶೈವರನ್ನು ಕುರಿತ ಪರಿಚಯಾತ್ಮಕ ಲೇಖನ ಮತ್ತು ಇವರಿಂದಲೇ ರಚಿತವಾದ ಪ್ರಕೃತೋಚಿತವಾದ ಕವನ ಗಳು ಒಪ್ಪುವಂತಿವೆ. "ಶಿವಾದ್ವೈತ ತತ್ವಪ್ರಚಾರಕ ಸಮಿತಿ"ಯವರು ಕಳೆದ ಹನ್ನೊಂದು ವರ್ಷಗಳಲ್ಲಿ ಕೈಕೊಂಡ ಕಾರ್ಯಕ್ರಮದ ವರದಿಯ ವಿವರವನ್ನೂ ಇಲ್ಲಿ ಕೊಡಲಾಗಿದೆ. ಸಾಹಿತ್ಯ ಮತ್ತು ಧಾರ್ಮಿಕ ಸಂಬಂಧವಾದ ಈ ಚಟುವಟಿಕೆ ಗಳು ಅತ್ಯಂತ ಸ್ತೋತ್ರಾರ್ಹವಾಗಿವೆ.

ಎರಡನೆಯ ವಿಭಾಗದಲ್ಲಿ ವೀರಶೈವಮತ ಮತ್ತು ಶಿವಶರಣರನ್ನು ಕುರಿತು ಹಲವಾರು ಲೇಖನಗಳಿವೆ. ವೀರಶೈವತತ್ವದ "ಅನಾದಿ-ಆದಿ"ಗಳನ್ನು ಸಂಶೋಧನಾ ತ್ಮಕವಾಗಿ ವಿಚಾರಮಾಡಲು ತೊಡಗಿರುವ ಪ್ರಯತ್ನವು ಗಮನಾರ್ಹವಾದು ದಾಗಿದೆ. ಡಾ|| ಬಿ. ಎಸ್. ಗದ್ದಗಿಮಠ ಅವರ "ಶಾಸನೋಕ್ತ ವೀರಶೈವರು" ಎಂಬ ಲೇಖನವು ವಿಚಾರಪ್ರದವಾಗಿದೆ. ಶ್ರೀ ಸಿದ್ಧಯ್ಯಪುರಾಣಿಕರು "ಕಡಲೂರು ಬಸವಲಿಂಗ ಶರಣರು" ಎಂಬ ತಮ್ಮ ಲೇಖನದಲ್ಲಿ, ಸುಪರಿಚಿತರಲ್ಲದ ಶಿವಶರಣ ರೊಬ್ಬರ ಕೀರ್ತನೆಗಳ ಮಹತ್ವವನ್ನು ಸಂಕ್ಷಿಪ್ತವಾಗಿ ಮಾಡಿಕೊಟ್ಟಿರುತ್ತಾರೆ. ಶ್ರೀ ಎಂ. ಜಿ. ನಂಜುಂಡಾರಾಧ್ಯರು "ಶಿವಾಚಾರ್ಯ ಸಾಹಿತಿಗಳು" ಎಂಬ ತಮ್ಮ ಲೇಖನದಲ್ಲಿ ಅನೇಕ ಉಪಯುಕ್ತವಾದ ಸಂಗತಿಗಳನ್ನು ಒಂದೆಡೆಯಲ್ಲಿ ಸಂಗ್ರಹಿಸಿ ಕೊಟ್ಟಿರುತ್ತಾರೆ. ಪ್ರಾಚೀನರೆನಿಸಿದ ಶಿವಾಚಾರ್ಯರು ಸಂಸ್ಕೃತ ಮತ್ತು ಕನ್ನಡ ಗಳಲ್ಲಿ ಬರೆದಿರುವ ಕೃತಿಗಳನ್ನು ಉದಾಹರಿಸಿರುವುದಲ್ಲದೆ, ಇಂದಿನವರೂ ಈ ಕ್ಷೇತ್ರ ದಲ್ಲಿ ಏನು ಮಾಡಿದ್ದಾರೆ ಎನ್ನುವುದನ್ನೂ ನಮ್ಮ ಗಮನಕ್ಕೆ ತಂದಿರುತ್ತಾರೆ. ಪ್ರಕೃತ ಲೇಖನದಲ್ಲಿ ಕೆಲವು ಗ್ರಂಥಗಳ ಸಂಕ್ಷಿಪ್ತ ಪರಿಚಯವನ್ನಾದರೂ ಕೊಟ್ಟಿದ್ದರೆ ಮತ್ತಷ್ಟು ಉಪಕಾರವಾಗುತ್ತಿತ್ತೆಂದು ಹೇಳಬಯಸುತ್ತೇವೆ. "ಶ್ರೀ ಜ. ಚ. ನಿ." ಗಳವರ "ವಚನ ರಚಿಸಿದ ಗುರುದೇವ-ಗುರುವೇವಿಯವರು" ಎಂಬ ಮತ್ತೊಂದು ಬರಹವೂ ಅನೇಕ ನೂತನಾಂಶಗಳಿಂದ ಕೂಡಿ ಗಣನೀಯವಾಗಿದೆ.

ಮೂರನೆಯ ವಿಭಾಗದಲ್ಲಿ ಸರ್ವಸಾಮಾನ್ಯವಾದ ಅನೇಕ ವಿಚಾರಗಳನ್ನು

ಕುರಿತು ನಲ್ವತ್ತು ಲೇಖನಗಳಿವೆ. ಸಾಹಿತ್ಯ ಸಮಾಜ, ವಿಜ್ಞಾನ, ಕಲೆ ಮೊದಲಾದ ಅಂಶಗಳು ಇಲ್ಲಿ ಪ್ರಧಾನವಾಗಿದ್ದರೂ, "ನಿಜಗುಣರ ಗೀತೆಗಳು", "ಸಿರಿಯಾಳನ ಕಥೆಯ ಐತಿಹಾಸಿಕತೆ" "ಋಷಿಕವಿ ಮುಪ್ಪಿನ ಷಡಕ್ಷರಿ, "ದೇವರ ದಾಸಮಯ್ಯ" ಮುಂತಾದ ಶರಣರ ಪ್ರಸಂಗವೂ ಇಲ್ಲಿ ಸಮಾವೇಶವಾಗಿವೆ. ಕನ್ನಡ ಸಾಹಿತ್ಯದ ವಿವಿಧ ಮುಖಗಳನ್ನು ವಿಮರ್ಶಿಸಿರುವುದಲ್ಲದೆ, ಅಸ್ಸಾಮಿ ಸಾಹಿತ್ಯ, ಗುಜರಾತಿ ಸಾಹಿತ್ಯ, ಆಧುನಿಕ ಮರಾಠಿ ಕಾವ್ಯ, ಆಧುನಿಕ ಹಿಂದೀ ಕಾವ್ಯ, ರಾಬರ್ಟ್ ಬರ್ನ್ಸ್ ಮುಂತಾಗಿ ಇತರ ಭಾಷೆಗಳ ಕಡೆಗೂ ನಮ್ಮ ಗಮನ ಬೀಳುವಂತೆ ಲೇಖನಗಳನ್ನು ಇಲ್ಲಿ ಅಳವಡಿಸಿರುವುದು ಈ ವಿಭಾಗದ ವೈವಿಧ್ಯಕ್ಕೆ ಗುರುತಾಗಿದೆ.

ಒಟ್ಟಿನಲ್ಲಿ ಕನ್ನಡ ನಾಡಿನ ಹಲವಾರು ಲೇಖಕರು ಇಲ್ಲಿ ವಿಚಾರಪ್ರದವಾದ ಲೇಖನಗಳನ್ನು ಬರೆದಿರುತ್ತಾರೆ. ಪ್ರಕೃತ ಉದ್ದೇಶಕ್ಕೆ ಅನುಗುಣವಾಗುವಂತೆ ವೀರಶೈವತತ್ವ ಮತ್ತು ಶಿವಶರಣರ ಮಹಿಮೆಗಳಿಗೆ ಮೀಸಲಾದ ಈ ಸಂಭಾವನಾ ಗ್ರಂಥವು ಈ ಬಗ್ಗೆ ತಿಳಿವಳಿಕೆಯನ್ನು ಬೆಳಸಿಕೊಳ್ಳಲು ಅತ್ಯಂತ ಉಪಯುಕ್ತವಾದ ಹೆಬ್ಬೊತ್ತಿಗೆಯಾಗಿದೆಯೆಂದು ಹೇಳಲು ಅಡ್ಡಿಯಿಲ್ಲ. ಓದುವವರ ಅಭಿರುಚಿ ಮತ್ತು ದೃಷ್ಟಿಗಳು ಸರ್ವದಾ ವಿಶಾಲವಾಗಿರುವಂತೆ ಇತರ ವಿಚಾರಗಳ ಕಡೆಗೂ ಗಮನ ನೀಡುವಂತಾಗಲೆಂಬ ಸದುದ್ದೇಶದಿಂದ ಮೂರನೆಯ ವಿಭಾಗವೊಂದನ್ನು ಜೋಡಿಸಿ ಕೊಟ್ಟಿರುವುದು ಸ್ವಾಗತಾರ್ಹವಾದುದು ಇಂಥ ಪ್ರಕಟನೆಯನ್ನು ಕೈಕೊಂಡು ನೆರವೇರಿಸುವ ಕಾರ್ಯವು ಎಷ್ಟು ಪ್ರಯಾಸಕರವೆಂಬುದನ್ನು ಈ ಕಷ್ಟ ವನ್ನು ಅನುಭವಿಸಿದವರು ಮಾತ್ರವೇ ಬಲ್ಲರು. ಆದರೆ ಪ್ರಕೃತ ಸಂಪಾದಕ ಮಂಡಲಿಯ ಅಧ್ಯಕ್ಷರಾದ ಶ್ರೀ ಸೂರ್ಯ ಸಿಂಹಾಸನಾಧೀಶ್ವರ ಜ. ಚ. ನಿ. ಸನ್ನಿಧಿ ಗಳವರು ಸ್ವತಃ ಬರೆಹಗಾರರಾಗಿರುವುದಲ್ಲದೆ, ಎಂಥ ಕಾರ್ಯಪಟುಗಳೆಂಬುದನ್ನು ಅರಿಯಲು ಈ ಪ್ರಕಟನೆಯೇ ಸಾಕ್ಷಿಯಾಗಿದೆ. ನಾನಾ ಭಾಷೆಗಳಲ್ಲಿ ಪ್ರಚಲಿತ ವಾಗಿರುವ ಭಕ್ತಿ ಸಾಹಿತ್ಯದ ತುಲನಾತ್ಮಕ ವಿವೇಚನೆ, ಕನ್ನಡದಲ್ಲಿಯೇ ಬಳಕೆಯಲ್ಲಿ ರುವ ಹರಿದಾಸ ಸಾಹಿತ್ಯ ಯತ್ತು ಶಿವಶರಣ ಸಾಹಿತ್ಯಗಳ ಸಮಾಲೋಚನೆಗಳನ್ನು ಕುರಿತ ಒಂದೆರಡು ಬರಹಗಳಾದರೂ ಇರಬಹುದಾಗಿತ್ತು ಎನ್ನಿಸುತ್ತದೆ.

ಸಂಪಾದಕ ಮಂಡಲಿಯ ಶ್ರಮವು ಸಾರ್ಥಕವಾಗುವಂತೆ ಈ ಸಂಭಾವನಾ ಗ್ರಂಥವು ಸಾಕಷ್ಟು ಜನಪ್ರಿಯವೂ, ಪ್ರಚುರವೂ ಆಗಲೆಂದು ಹಾರೈಸಿ, ಪ್ರಕಾಶನ ಸಮಿತಿಯವರಿಗೆ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸ ಬಯಸುತ್ತೇವೆ.

—ಪ್ರಬುದ್ಧ ಕರ್ಣಾಟಕ
ಜಿ. ವ. ರಾ.

## ಶಿವಾದ್ವೈತ ತತ್ವದ ಪ್ರೌಢಿಮೆ

ಚಿಕ್ಕಮಗಳೂರು ಜಿಲ್ಲೆ ಗಿರಿಯಾಪುರದ 'ಗುರುಕುಮಾರಾಶ್ರಮ'ದ ಸಂಸ್ಥಾಪಕರಾದ ಶ್ರೀ ಸದಾಶಿವ ಶಿವಾಚಾರ್ಯರ ಅರವತ್ತು ವರ್ಷದ ವರ್ಧಂತಿಯ ಸಂದರ್ಭದಲ್ಲಿ ಅವರಿಗೆ ಅರ್ಪಿತವಾದ ಅಭಿನಂದನಾ ಗ್ರಂಥ ಇದು. ಇದರ ಸಂಪಾದನೆ ಶ್ರೀ ಶೈಲ ನಿಡುಮಾಮಿಡಿ ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳ ನೇತೃತ್ವದಲ್ಲಿ ನಡೆದಿದೆ.

ಸದಾಶಿವ ಶಿವಾಚಾರ್ಯರು ವೈದುಷ್ಯಕ್ಕೂ ಶೀಲಕ್ಕೂ ಹೆಸರಾದವರು. ಅವರ ಹಲವಾರು ಕನ್ನಡ ಸಂಸ್ಕೃತ ಗ್ರಂಥಗಳಲ್ಲಿ ಅವರ 'ಕೈವಲ್ಯೋಪನಿಷತ್ ಸದಾಶಿವ ಭಾಷ್ಯಂ' ಎಂಬ ಸಂಸ್ಕೃತ ಗ್ರಂಥ ಪ್ರಸಿದ್ಧವಾದುದು. ಪಂಚಾಚಾರ್ಯ ಪೀಠಗಳಲ್ಲೊಂದಾದ ಉಜ್ಜಯಿನೀ ಪೀಠಕ್ಕೆ ಸೇರಿದ ಹಾಲುಸ್ವಾಮಿ ಮಠ (ಸಖರಾಯಪಟ್ಟಣ)ದ ಶ್ರೀ ಕುಮಾರಸ್ವಾಮಿಗಳ ಬಳಿ ಶಿಷ್ಯವೃತ್ತಿ ಮಾಡಿದ ಸದಾಶಿವ ಶಿವಾಚಾರ್ಯರು ತಮ್ಮ ಗುರುಗಳ ಸ್ಮಾರಕಕ್ಕೆಂದು 'ಗುರುಕುಮಾರಾಶ್ರಮ'ವನ್ನು ಗಿರಿಯಾಪುರದಲ್ಲಿ ಸ್ಥಾಪಿಸಿದುದಲ್ಲದೆ 'ಶಿವಾದ್ವೈತ ಪ್ರಚಾರಕ ಸಮಿತಿ'ಯೊಂದನ್ನು ಸಿದ್ಧಪಡಿಸಿ ಹನ್ನೆರಡು ವರ್ಷಗಳ ಕಾಲ ನಡೆಸಿಕೊಂಡು ಬಂದಿದ್ದಾರೆ. ಈ ದ್ವಾದಶ ಮಹೋತ್ಸವವೂ ಶಿವಾಚಾರ್ಯರ ಷಷ್ಟ್ಯಬ್ಧ ಮಹೋತ್ಸವದೊಂದಿಗೆ ಸೇರಿಕೊಂಡು ಬಂದಿದೆ.

ಅತ್ಯಂತ ಪ್ರಸನ್ನರಾದ, ವಿರಕ್ತರಾದ, ಲೋಕಕಲ್ಯಾಣ ಪರಾಯಣರಾದ ಮಹಾಪುರುಷರಿಗೆ ಹೀಗೆ ಅಭಿನಂದನೆ ಸಲ್ಲಿಸುವುದು ಸರಿಯಾದದ್ದೇ. ಅಭಿನಂದನಾ ಗ್ರಂಥದ ಪ್ರಮಾಣವೂ, ವಸ್ತುವೂ, ವ್ಯಾಪ್ತಿಯೂ ಅನುರೂಪವಾಗಿಯೇ ಇವೆ. ನಿಡುಮಾಮಿಡಿ ಸ್ವಾಮಿಗಳು ಈ ಉದ್ಯಮವನ್ನು ಬಹು ಚೆನ್ನಾಗಿ ನಿರ್ವಹಿಸಿದ್ದಾರೆ.

ಗ್ರಂಥದಲ್ಲಿ ಮೂರು 'ದಳ'ಗಳಿದ್ದು ಮೊದಲನೆಯದರಲ್ಲಿ ಗಿರಿಯಾಪುರ, ಶಿವಾಚಾರ್ಯರನ್ನು ಕುರಿತ ಲೇಖನಗಳೂ, ಎರಡನೆಯದರಲ್ಲಿ ವೀರಶೈವ ಧರ್ಮಕ್ಕೂ

ಶಿವಾದ್ವೈತ ತತ್ವಕ್ಕೂ ಸಂಬಂಧಿಸಿದ ಲೇಖನಗಳೂ, ನೂರನೆಯದರಲ್ಲಿ ವಿಭಿನ್ನ ವಿಚಾರಪರ ಲೇಖನಗಳೂ ಇವೆ. ಹಲವಾರು ಹಿರಿಯರು ಉತ್ತಮ ಲೇಖನಗಳನ್ನು ಬರೆದಿದ್ದಾರೆ. ಸಂಪಾದಕರಾದ ನಿಡುಮಾಮಿಡಿ ಸ್ವಾಮಿಗಳೇ ಹಲವಾರು ಬೋಧಪ್ರದ ಪ್ರಬಂಧಗಳನ್ನು ಬರೆದಿದ್ದಾರೆ. ಕನ್ನಡ, ಹಿಂದಿ, ಗುಜರಾತಿ, ಅಸ್ಸಾಮಿ ಸಾಹಿತ್ಯಗಳ ವಿಚಾರವಾಗಿ ಸ್ವಾರಸ್ಯವಾದ ಲೇಖನಗಳಿವೆ. ಐತಿಹಾಸಿಕ ದೃಷ್ಟಿಯ ಲೇಖನಗಳೂ ಕೆಲವಿವೆ. ಒಟ್ಟಾರೆ, ಗ್ರಂಥ ವೀರಶೈವ ಧರ್ಮದ ಹೆಗ್ಗಳಿಕೆಯನ್ನೂ, ಪ್ರಾಚೀನತೆಯನ್ನೂ, ಶಿವಾದ್ವೈತ ತತ್ವದ ಪ್ರೌಢಿಮೆಯನ್ನೂ ವಿವರಿಸಲು ಪ್ರಸಕ್ತವಾಗಿದೆ. ಜ. ಚ. ನಿ. ಅವರು ಬರೆದಿರುವ "ವಚನ ರಚಿಸಿದ ಗುರುದೇವ–ಗುರುದೇವಿಯರು" (ಪು. ೨೮೩ ಮುಂದೆ), ಎಂ. ಜಿ. ನಂಜುಂಡಾರಾಧ್ಯರ 'ಶಿವಾಚಾರ್ಯ ಸಾಹಿತಿಗಳು' ಪು. ೩೮೫), ಸ. ಸ. ಮಾಳವಾಡರು 'ಕನ್ನಡವನ್ನುದ್ಧರಿಸಿದ ಪುಣ್ಯಪುರುಷ ಧಾರವಾಡದ ಡೆಪ್ಯೂಟಿ ಚೆನ್ನಬಸಪ್ಪನವರ, ಮೇಲೆ ಬರೆದಿರುವ ಲೇಖನ (ಪು. ೫೩೬ ಇವು ಉಲ್ಲೇಖಾರ್ಹ.

ಉದ್ದೇಶ ಒಳ್ಳೆಯದಾಗಿದ್ದು ಉದ್ಯಮ ಸಾರ್ಥಕವಾಗಿದೆ ಎನ್ನಲಡ್ಡಿಯಿಲ್ಲ. ಹಿರಿಯ ವ್ಯಕ್ತಿಗೆ ಹಿರಿಯರೇ ಅರ್ಪಿಸಿದ ಹಿರಿಯ ಕಾಣಿಕೆ ಇದು.

**—ಎಸ್. ಕೆ. ಆರ್**



## ಸನ್ನಿಧಿಯ ಅಭಯವಾಣಿ

ಮಾನವನಿಗೆ ಮನವೇ ಸರ್ವಸ್ವ. ಮಾನವನ ಅದೃಷ್ಟ ಅನುಭವಿಸುವುದು ಅಪೇಕ್ಷಿಸುವುದು ಮನಸ್ಸಿನಿಂದ. ಮನವಿಲ್ಲದಿದ್ದರೆ ಮತ್ತಾವುದಿಲ್ಲ. ಮರ್ತ್ಯವೇ ಇಲ್ಲ. ಮನವೇ ಎಲ್ಲಕ್ಕೂ ಮೂಲ.

ಕಣ್ಣು ಕಾಂಬುದೊಂದು ಹೆಚ್ಚಲ್ಲ; ಮನಗಾಣಬೇಕು. ಮೈಗುಂದಿದರೂ ಮನಗುಂದದಿರಬೇಕು ಮನೆಯು ತಾಪವಿದ್ದರೂ ಮನಸ್ತಾಪವಿರಬಾರದು. ಮತ್ತೊಬ್ಬರ ಸಾಕ್ಷಿಗಿಂತ ಮನಃಸಾಕ್ಷಿ ಲೇಸು. ತನುವೃತ್ತಿಗಿಂತ ಮನೋವೃತ್ತಿ ಮೇಲಾಗಿರಬೇಕು. ಮಂಗಳಕಾರ್ಯವನು ಮನವಾರೆ ಮಾಡಬೇಕು. ಮೈಗಿಂತ ಮನ ಮಡಿಯಾಗಿರಬೇಕು.

## 'ವಿಭೂತಿ'ಯ ಸಂವಾದ ಸಾಹಿತ್ಯ

ಮತದೃಷ್ಟಿಯಲ್ಲಿ ಗಾಢ ವಿಶ್ವಾಸ, ಪಾಂಡಿತ್ಯ ಪೂರ್ಣ ವಿವೇಕ ಹಾಗೂ ಸತತ ಅನುಷ್ಠಾನಗಳಿರುವುದು ವ್ಯಕ್ತಿ ಜೀವನದ ಒಂದು ಅಗತ್ಯ, ಪರಮತಗಳ ಸತ್ಯಾಂಶ ಗ್ರಹಣ, ಪರಸ್ಪರ ಹಿತಸಂಬಂಧ ಹಾಗೂ ಪರಮತೀಯರು ವಿಷಯ ದಲ್ಲಿಯ ತೆರೆದ ಹೃದಯದ ಮೈತ್ರಿ—ಇವು ಭಾರತೀಯರ ಸಮಷ್ಟಿ ಜೀವನದ ಅಗತ್ಯ. ಇವೆರಡು ಅಗತ್ಯಗಳಲ್ಲಿ ಸಮತೂಕದ ನಿಲುವು ಸಾಧ್ಯವಾದಾಗಲೇ ಸಂವಾದ ಸಾಹಿತ್ಯದ ಉದಯವಾಗುತ್ತದೆ. ಆ ಸಮತೂಕದ ನಿಲುವು ಇಲ್ಲದಾಗ ಬರಿ 'ವಾದ ಸಾಹಿತ್ಯ' ಮೂಡುತ್ತದೆ. ಶಿವಾದ್ವೈತ ತತ್ವ ಪ್ರಚಾರ ಸಮಿತಿಯ ಸಂಸ್ಥಾಪಕರಾದ ಷ. ಬ್ರ. ಶ್ರೀ ಸದಾಶಿವ ಶಿವಾಚಾರ್ಯರ ಷಷ್ಟ್ಯಬ್ದಿ ಪೂರ್ತಿಯ ಕಾಲದಲ್ಲಿ ಅವರ ಸನ್ನಿಧಿಗೆ ಅರ್ಪಿಸಲಾದ "ವಿಭೂತಿ" ಎಂಬ ಬೃಹದ್ ಗ್ರಂಥದಲ್ಲಿ ಮೇಲೆ ಹೇಳಿದ ಸಂವಾದ ಸಾಹಿತ್ಯದ ಕಿರಣಗಳು ಮೂಡಿವೆ. ಮತಾತೀತವಾದ, ಸಾಹಿತ್ಯ, ಸಮಾಜ ಜೀವನ, ಭಾರತೀಯ ಸಂಸ್ಕೃತಿ ವಿಚಾರಗಳನ್ನು ಕುರಿತ ಪ್ರಾತಿನಿಧಿಕ ಲೇಖನಗಳಿವೆ. ಭಾರತದ ಸರ್ವ ಪ್ರಾಂತೀಯ ಸಾಹಿತ್ಯ ಚರಿತ್ರೆಯನ್ನೂ, ರವೀಂದ್ರರ ರಾಜಕೀಯ ವಿಚಾರಗಳನ್ನೂ ಶ್ರೀ ಮಾಸ್ತಿಯವರ ಸಮನ್ವಯ ವಿಚಾರಗಳನ್ನೂ ಈ ವಿಭೂತಿ ಯಲ್ಲಿ ಕಾಣುತ್ತೇವೆ. ಈ ಎಲ್ಲ ಲೇಖನಗಳಿಗೂ ಸ್ಫೂರ್ತಿ ನೀಡಿದ ಶ್ರೀ ಸದಾಶಿವಾಚಾರ್ಯರ ಕ್ರಿಯಾಶೀಲ ವ್ಯಕ್ತಿತ್ವದ ಪರಿಚಯವೂ ಸಮರ್ಥ ರೀತಿಯಲ್ಲಿ ಮೂಡಿದೆ. "ವಿಭೂತಿ ಪೂಜೆಯು" ಹೀಗೆ ನಾಡಿನ ವಿಚಾರಪ್ರವಾಹದ ಸಂಗಮಸ್ಥಳ ವಾಗುವುದು ಅಖಿಲ ಕರ್ನಾಟಕದ ದೃಷ್ಟಿಯಿಂದ ಅಗತ್ಯವಾದ ಸಾಹಿತ್ಯ ಪರಂಪರೆ ಯಾಗಿದೆ. ಅಪರಿಚಿತವಾದ ಅನೇಕ ಮಹಾನ್ ವಿಭೂತಿಗಳ ಪರಿಚಯ, ಸಂಶೋಧನಾತ್ಮಕ ಲೇಖನಗಳ ಸಂಗ್ರಹಗಳಿಂದ ಈ ಗ್ರಂಥ ಸಂಗ್ರಾಹ್ಯವಾಗಿದೆ.

## ಆರ್ಯ—ದ್ರಾವಿಡ ಐಕ್ಯ

ಆದರೆ ಪಾಶ್ಚಿಮಾತ್ಯರ ಅಲ್ಪ ಸಂಶೋಧನೆಯ ಫಲವಾಗಿ ಉದಯವಾದ "ಆರ್ಯ ದ್ರಾವಿಡ" ಜನಾಂಗದ ಭೇದದ ವಿಚಾರವು "ವಿಭೂತಿ"ಯಲ್ಲಿಯು ಅನೇಕ ಮಹತ್ವದ ಲೇಖನಗಳಿಗೆ ತಳಹದಿಯಾದ ಅಂಶವನ್ನು ಸಂಬಂಧಿಸಿದ ಶ್ರೀಗಳೆಲ್ಲರೂ ಗಂಭೀರವಾಗಿ ವಿವೇಚಿಸುವ ಕಾಲ ಬಂದಿದೆ.

ಶ್ರೀ ಅರವಿಂದ ಮಹರ್ಷಿಗಳಂಥ ಪ್ರಚಂಡ ಮೇಧಾವಿಗಳೂ, ಜ್ಞಾನ ಸಿದ್ಧರೂ ಈ ಸಮಸ್ಯೆಯನ್ನು ಆಳವಾಗಿ ಅಭ್ಯಾಸಮಾಡಿ "ಆರ್ಯ-ದ್ರಾವಿಡ" ಭೇದವು ಜನಾಂಗ ವಾದಿಯಲ್ಲವೆಂದೂ ವೇದಗಳಲ್ಲಿ ಆಧ್ಯಾತ್ಮಿಕಜ್ಞಾನ ಜ್ಯೋತಿ ಮತ್ತು ಆಧ್ಯಾತ್ಮ ವಿರೋಧಿ ತಮಸ್ಸುಗಳ ದ್ವಂದ್ವ ಕಾಣುವುದಲ್ಲದೆ ಆರ್ಯ ದ್ರಾವಿಡ ದ್ವಂದ್ವವಲ್ಲವೆಂದೂ ಸ್ಪಷ್ಟಗೊಳಿಸಿದ್ದಾರೆ. 'ಜ್ಯೋತಿಃ ಆರ್ಯಮ್' ಎಂಬುದನ್ನು ಶ್ರೀ ಅರವಿಂದರ ವಿವರಿಸುತ್ತ ಪ್ರಾಚೀನ ಭಾರತೀಯರು ಆಧ್ಯಾತ್ಮ ಸಾಧನೆಯಲ್ಲಿ ಕಂಡ ಬೆಳಕಿನ ಶಕ್ತಿಗಳೇ ಆರ್ಯಾಂಶವುಳ್ಳವೆಂದೂ ಅದಕ್ಕೆ ವಿರೋಧವಾದ ತಮಸ್ಸಿನ ಗಾಢಾಂಧಕಾರಿ ಶಕ್ತಿಗಳನ್ನು ಪಣಿ, ವೃತ, ದಸ್ಯು, ಇತ್ಯಾದಿ ಪದಗಳಿಂದ ವರ್ಣಿಸಿದರೆಂದೂ, ಅವರು ಆನ್ ದಿ ವೇದ (on the veda) ಎಂಬ ಗ್ರಂಥದಲ್ಲಿ ನಿಷ್ಕರ್ಷಿಸಿದ್ದಾರೆ

These Vrita, Panis, Atris, Rakshasas, Sambara, Vala, Namuchi are not Dravidian kings and gods, as the modern mind with its exaggerated historic sense would like them to be.

[ಆಧುನಿಕ ಬುದ್ಧಿವಂತರು ಅತಿಶಯೋಕ್ತಿಯಿಂದ ಕೂಡಿದ ಐತಿಹಾಸಿಕ ತಿಳಿವಳಿಕೆಯಿಂದ ಹೇಳುವಂತೆ, ಈ ವೃತ್ತರು, ಪಣಿಗಳು, ಅತ್ರಿಗಳು, ರಾಕ್ಷಸರು, ಶಂಬರ, ವಲ, ನಮುಚಿ ಇವರು ದ್ರಾವಿಡ ರಾಜರಲ್ಲ, ದ್ರಾವಿಡ ದೇವತೆಗಳಲ್ಲ].

—ಪುಟ ೫೪

ನಿಜವಾಗಿ ವಿಭೂತಿ ಪುರುಷರೆಲ್ಲರೂ ಆರ್ಯರು. ಆ ವಿಭೂತಿ ಶಿವನ ತೇಜಸ್ಸಿನ ಐಶ್ವರ್ಯವಾಗಿರಲಿ, ವಿಷ್ಣುವಿನ ತೇಜಸ್ಸಿನ ಪ್ರಕಾಶವಾಗಿರಲಿ, ಬ್ರಹ್ಮನ ಮಂತ್ರ ವೈಭವವಾಗಿರಲಿ. "ವಿಭೂತಿ" ಎಂಬುದು ಹೇಗೆ ಯಾವುದೇ ಕುಲ ಜನಾಂಗಕ್ಕೆ ಸಂಬಂಧಿಸಿಲ್ಲವೋ ಹಾಗೆ "ಆರ್ಯತ್ವವು" ಯಾವುದೇ ಕುಲಕ್ಕೆ ಮೀಸಲಾಗಿಲ್ಲ. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಆಧ್ಯಾತ್ಮಿಕ ಸಾಧಕರೆಲ್ಲ, ಆಧ್ಯಾತ್ಮ ಸಿದ್ಧರಾದ ವಿಭೂತಿಗಳೆಲ್ಲ ಆರ್ಯರು. ಆಧ್ಯಾತ್ಮಿಕ ಜ್ಯೋತಿಯನ್ನು ಕಳವು ಮಾಡುವಾತ, ಮುಚ್ಚಿಡುವಾತ ದಸ್ಯು, ಪಣಿ, ವಲ ಇತ್ಯಾದಿ ಹೆಸರಿನಿಂದ ಕರೆಯಲ್ಪಡುತ್ತಾನೆ. ಆದ್ದರಿಂದ ಕರ್ನಾಟಕದ ವೀರಶೈವ ವಿಭೂತಿ—ವೈಭವ, ಅಖಿಲ ಕನ್ನಡಿಗರ, ಅಖಿಲ ಭಾರತೀಯರ–ಸಮಸ್ತ ಆರ್ಯರ ವೈಭವ, ವೇದದ ಮಂತ್ರಗಳಂತೆ ದೈವಾಧಿಷ್ಠಾನವುಳ್ಳ ವಚನ

ಗಳನ್ನು ವಿರೋಧ ಮಾಡುವವರೇ 'ಬ್ರಹ್ಮದ್ವಿಷಃ ಅಂದರೆ ಮಂತ್ರದ್ವೇಷಿಗಳು 'they are demons and not dravidians, (ಅವರು ರಾಕ್ಷಸರು-ದ್ರಾವಿಡರಲ್ಲ.)

**ಸಂವಾದ ಸಂಪದ**

ವೀರಶೈವ ಜನಾಂಗದ ಜ್ಞಾನಮೂರ್ತಿಗಳು ಈ ದೃಷ್ಟಿಯಿಂದ ವೀರಶೈವ ಸಂಪದವನ್ನು ಕನ್ನಡಿಗರ ಮುಂದೆ ಇಡುವಂತಾದರೆ ಅದು ಭಾರತೀಯರ ಭಾಗ್ಯ ವಾಗುತ್ತದೆ. ಈ ಬೃಹದ್ ಗ್ರಂಥದ ಭಾಷಾ ಶೈಲಿ, ಸರ್ವ ಮತೀಯ ಲೇಖಕರ ವಿಚಾರ ಧಾರೆಗಳು ಸಹೃದಯದ ಅಂತಃಕರಣಗಳನ್ನು ಅರಳಿಸುತ್ತವೆ. ಈ ಲೇಖನ ಮಾಲಿಕೆಯಲ್ಲಿ ಶ್ರೀ ಸೂರ್ಯಸಿಂಹಾಸನಾಧೀಶ್ವರ ಜ. ಚ. ನಿ. ಅವರ ಲೇಖನಗಳು ಬಹು ಉನ್ನತಮಟ್ಟದ ಭಾಷಾ ಸಿದ್ಧಿಯನ್ನೂ ಪ್ರಗತಿಪರ ಮನೋಧರ್ಮವನ್ನೂ ಪ್ರಕಟಿಸಿವೆ. ಈ ಗ್ರಂಥದಲ್ಲಿ ಸಂದರ್ಶನ, ಸಾಮಾಜಿಕ ದರ್ಶನ, ಸಾಹಿತ್ಯದರ್ಶನ ವೆಂಬ ವಿಭಾಗ ಮಾಡಿದ್ದು ೬೨೩ ಪುಟಗಳ ಬೃಹತ್ ಗ್ರಂಥದ ಔಚಿತ್ಯವನ್ನು ಹೆಚ್ಚಿಸಿದೆ. ಅಲ್ಲಲ್ಲಿ ನಾಟಕೀಯ ಶೈಲಿ, ವಿಮರ್ಶೆಯಲ್ಲಿ ಪಕ್ಷಪಾತ ಕಂಡುಬಂದರೂ ಒಟ್ಟು ದೃಷ್ಟಿ ವಿಕಾಸ ಶೀಲವಾಗಿರುವದರಿಂದ ಸರ್ವಗ್ರಾಹ್ಯ ಗ್ರಂಥವಾಗಿದೆ ಈ ವಿಭೂತಿ. ಸ್ವಮತಾಭಿವೃದ್ಧಿಯ ಉತ್ಸಾಹ ಇನ್ನೂ ಹೆಚ್ಚಿಸ ಸಂವಾದ ಸಾಹಿತ್ಯವನ್ನು ನಿರ್ಮಿಸಿ ಸರ್ವಮತೀಯ ವಿಭೂತಿ ನಿರ್ಮಾಣಕ್ಕೆ ಈ ಗ್ರಂಥದ ಸಂಪಾದಕ ವರ್ಗದವರು ಕಾರಣರಾಗಲೆಂಬುದೇ ಕನ್ನಡಿಗರ ಹಾರೈಕೆ.

—ಶ್ರೀ ಆರ್. ಜಿ. ಕುಲಕರ್ಣಿ

---

"........ದಾನ ಮಾಡಲೆ ?-ಧನವಿಲ್ಲ. ಸೇವೆಮಾಡಲೆ ಶಕ್ತಿ-ಯಿಲ್ಲ. ಮಾತನಾಡಲೆ ?-ಮಾತು ಬಾರದು. ಬರೆದಾದರೂ ತೃಪ್ತಿ ಪಡಿಸಲೆ ?- ಆದಿ ಪ್ರಾಸ ಅಂತ್ಯ ಪ್ರಾಸ ನಾಸರಿಯೆ-ಎಂದು ಎದೆಗುಂದಿದರು ; ಮನ ಮರುಕವಿದು. ನಿನ್ನ ಸತ್ಯ ಸಂಕಲ್ಪವೊಂದೆ ಸಾಲದೆ ? ನಿನ್ನ ಆತ್ಮ ಒಲವೊಂದೆ ಸಾಲದೆ ? ನಿನ್ನ ಶ್ರವಣೇಚ್ಛೆಯೇ ಸಾವಿರಕ್ಕೆ ಸಾವಿರ ಕಾಣಿಕೆ ಕಂದಾ !"

—ಶ್ರೀ ಜ. ಚ. ನಿ
'ಅಭಯವಾಣಿ' ಯಿಂದ

# ವೈವಿಧ್ಯಪೂರ್ಣ ಉಪಯುಕ್ತ ಸಂಶೋಧನಾ ಲೇಖನಗಳ 'ವಿಭೂತಿ'

ಹಿಂದೆ ಕನ್ನಡ ನಾಡಿನಲ್ಲಿ ಕಾಳಾಮುಖಶೈವರು ಹಲವಾರು 'ಘಟಿಕಾಸ್ಥಾನ' (Universities)ಗಳನ್ನು ಸ್ಥಾಪಿಸಿ ಜ್ಞಾನಪ್ರಸಾರಕ್ಕಾಗಿ ಅವಿಶ್ರಾಂತರಾಗಿ ದುಡಿದು ಸಮಾಜದ ಗೌರವಾದರಗಳಿಗೆ ಪಾತ್ರರಾಗಿದ್ದರೆಂದು ಹಲವಾರು ಶಾಸನಗಳು ಹೇಳುತ್ತವೆ. ಅದರಿಂದ ಸ್ಫುರಣಗೊಂಡ ಬಸವಾದಿ ಪ್ರಮಥರು ಕನ್ನಡ ನಾಡನ್ನು 'ಕಲ್ಯಾಣ' ಪಥವತ್ತ ಒಯ್ದರು. ಅದೇ ಪರಂಪರೆಯಲ್ಲಿ ಬಂದ ವೀರಶೈವ ಮಠಾಧೀಶರುಗಳು ಇಂದು ಕನ್ನಡ ನಾಡು ನುಡಿಗಳ ಅಭಿವೃದ್ಧಿಗಾಗಿ, ಜ್ಞಾನ ಪ್ರಸಾರಕ್ಕಾಗಿ ತ್ರಿಕರಣಪೂರ್ವಕವಾಗಿ ಶ್ರಮಿಸುತ್ತಿರುವುದು ನಮ್ಮ ನಾಡಿನ ಸುದೈವ. ಅಂಥ ವಿಭೂತಿ ಪುರುಷರೊಬ್ಬರ ಸ್ಮಾರಕಾರ್ಥವಾಗಿ ಪ್ರಕಟವಾಗಿದೆ ಈ 'ವಿಭೂತಿ'. ಸಂದರ್ಶನ, ಸಾಮಾಜಿಕ ದರ್ಶನ, ಸಾಹಿತ್ಯದರ್ಶನ ಎಂದು ಮೂರು ದಳಗಳಲ್ಲಿ ಈ ಗ್ರಂಥ ವಿಭಕ್ತವಾಗಿದೆ. ಮೊದಲನೆಯ ದಳದಲ್ಲಿ ಶ್ರೀಸದಾಶಿವ ಶಿವಾಚಾರ್ಯರ ವ್ಯಕ್ತಿತ್ವ ಅವರ ಎತ್ತರಬಿತ್ತರಗಳನ್ನು ಕುರಿತ ಲೇಖನಗಳೂ ಕವಿತೆಗಳೂ ಇವೆ. ಎರಡನೆಯ ದಳದಲ್ಲಿ ಶೈವ ವೀರಶೈವ ದರ್ಶನಗಳಿಗಿರುವ ಆಳ ಅಂತರ, ಶಿವಾನುಭವ ಶಕ್ತಿವಿಶಿಷ್ಟಾದ್ವೈತದ ಪ್ರಾಚೀನತೆ, ಶಿವಶರಣರ ಸಮಾಜದರ್ಶನ, ಸಂಸ್ಕೃತವಾಙ್ಮಯದಲ್ಲಿ ಶಿವಾಚಾರ್ಯ ಸಾಹಿತಿಗಳು ಮೊದಲಾದ ವಿದ್ವತ್ಪೂರ್ಣ ಲೇಖನಗಳಿವೆ. ಮೂರನೆಯ ದಳವಾದ ಸಾಹಿತ್ಯ ದರ್ಶನದಲ್ಲಿ ಪರಂಪರೆ ಮತ್ತು ಪ್ರಯೋಗ, ಕಾವ್ಯ ಕವಿಯ ಅನುಭವ, ಕನ್ನಡವನ್ನುದ್ಧರಿಸಿದ ಪುಣ್ಯಪುರುಷರು, ಕನ್ನಡ ಸಾಹಿತ್ಯದಲ್ಲಿ ಸತ್ಕವಿಮಾರ್ಗ, ರಾಬರ್ಟ್‌ಬರ್ನ್ಸ್ ಮೊದಲಾದ ಬೆಲೆಯುಳ್ಳಲೇಖನಗಳಿವೆ. ಇದರ ಜೊತೆಗೆ ಅಸಾಮಿ ಮರಾಠಿ, ಗುಜರಾಥಿ, ಹಿಂದಿ ಭಾಷಾ ಸಾಹಿತ್ಯಗಳ ಇತಿಹಾಸ ಪ್ರವೃತ್ತಿಗಳ ಪರಿಚಯಾತ್ಮಕ ಲೇಖನಗಳೂ ಇವೆ. 'ಕನ್ನಡವನ್ನುದ್ಧರಿಸಿದ ಪುಣ್ಯಪುರುಷ' ಎಂಬ

ಲೇಖನದಲ್ಲಿ ಪ್ರೊ|| ಮಾಳವಾಡರು ಕನ್ನಡ ನವೋದಯದ ಮಂತ್ರದಾತರಾದ ಆಚಾರ್ಯ ಬಿ. ಎಂ. ಶ್ರೀ ಅವರಿಗೂ ಹಿಂದೆ ಮರಾಠಿಯ ಹಾವಳಿಗೆ ಸಿಕ್ಕಿದ್ದ ಉತ್ತರ ಕರ್ನಾಟಕದಲ್ಲಿ ಕನ್ನಡದ ದೀಪ ಹಚ್ಚಿ ನವೋದಯಕ್ಕೆ ತಳಹದಿ ಹಾಕಿದ ಕನ್ನಡದ ಹುಲಿ ಡೆಪ್ಯೂಟಿ ಚೆನ್ನಬಸಪ್ಪನವರ ವ್ಯಕ್ತಿತ್ವ ಕೃತಿತ್ವಗಳ ಪರಿಚಯ ಮಾಡಿಕೊಟ್ಟು ಕನ್ನಡ ಸಾಹಿತ್ಯ ಚರಿತ್ರೆಯ ಮೇಲೇ ಸಾಕಷ್ಟು ಬೆಳಕು ಚೆಲ್ಲಿದ್ದಾರೆ. ಈ ದೃಷ್ಟಿಯಿಂದ ಈ ಲೇಖನಕ್ಕೆ ಐತಿಹಾಸಿಕ ಮಹತ್ವವಿದೆ. ೨೦ ನೆಯ ಶತಮಾನದ ಆದಿ ಭಾಗದಲ್ಲಿ ಕನ್ನಡ ನಾಡು ನುಡಿಯ ನವೋದಯಕ್ಕೆ ಪ್ರೇರಕವಾದ ಶಕ್ತಿವ್ಯಕ್ತಿಗಳ ಬಗೆಗೆ ಸಾಕಷ್ಟು ಸಾಮಗ್ರಿ ಇವೆ. ಆದರೆ ೧೯ ನೆಯ ಶತಮಾನದಲ್ಲಿ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದರಾಬಾದು ಕರ್ನಾಟಕ ಮೊದಲಾದ ಭಾಗಗಳಲ್ಲಿ ಏನು ನಡೆಯಿತು ಎಂಬುದರ ಬಗೆಗೆ ಇನ್ನೂ ನಾವು ಕತ್ತಲೆಯಲ್ಲೇ ತೊಳಲುತ್ತಿದೇವೆ. ಮಾಳವಾಡರಂಥ ವಿದ್ವಾಂಸರಿಂದ ಈ ದಿಸೆಯಲ್ಲಿ ಇನ್ನೂ ಹೊಸ ಬೆಳಕು ಬೀಳಬೇಕಾಗಿದೆ. ಇದೇ ದಳವಲ್ಲಿರುವ ಮತ್ತೊಂದು ಅಮೂಲ್ಯ ಲೇಖನವೆಂದರೆ ಡಾ. ಶಿ. ಚ. ನಂದೀಮಠರ "ಚಂದ್ರ ಜ್ಞಾನಾಗಮ." ವಚನ ಸಾಹಿತ್ಯದ ಮೂಲ ಆಗಮಗಳು ಎಂದು ವಿದ್ವಾಂಸರ ಅಭಿಪ್ರಾಯ. ಆ ಆಗಮಗಳಿಗೂ ವಚನಗಳಿಗೂ ಇರುವಸಂವಾದವನ್ನು ತೋರಿಸುವ ಲೇಖನಗಳು ನಮ್ಮಲ್ಲಿ ಸಾಕಷ್ಟು ಬಂದಿಲ್ಲ. ಡಾ||ನಂದೀಮಠರ ಈ ಲೇಖನ ತಂತ್ರಶಾಸ್ತ್ರ, ಶಾಸನಗಳೇ ಮೊದಲಾದ ಆಧಾರಗಳ ಮೇಲೆ ವೀರಶೈವದರ್ಶನಕ್ಕೂ ಈ ಆಗಮಕ್ಕೂ ಇರುವ ಹೋಲಿಕೆಗಳನ್ನು ಅತ್ಯಂತ ಆಳವಾಗಿ ಪರಿಶೋಧಿಸಿ ಬಸವಪೂರ್ವ ವೀರಶೈವ ಧರ್ಮದ ಮೇಲೆ ಅ ಹೇಗೆ ಬೆಳಕನ್ನು ಚೆಲ್ಲಬಲ್ಲದೆಂಬುವನ್ನು ತೋರಿಸಿಕೊಟ್ಟಿದ್ದಾರೆ. ಈ ಲೇಖನ ಅವರ ಅವಿಶ್ರಾಂತ ಸಾರಸ್ವತ ತಪಸ್ಸಿನ ಫಲ. ಆದರೆ ಅದು ಇಷ್ಟಕ್ಕೇ ಮೊಟಕಾಯಿತೆ ಎಂಬ ಅತೃಪ್ತಿ ಮೂಡುತ್ತದೆ. ಈ ದಿಶೆಯಲ್ಲಿ ಅವರಿಂದ ಒಂದು ಹೆಬ್ಬೊತ್ತಿಗೆ ಬರಲಿ ಎಂದು ನಮ್ಮ ಕಳಕಳಿಯ ಬಿನ್ನಹ. ಇದೇ ದಳದಲ್ಲಿ ಇನ್ನೊಂದು ಉಲ್ಲೇಖನೀಯ ಲೇಖನ ಚನ್ನವೀರ ಕಣವಿಯವರ 'ರಾಬರ್ಟ್‌ಬರ್ನ್ಸ್'. ಶ್ರೀ ಕಣವಿಯವರು ಇಂಗ್ಲೀಷ್ ಸಾಹಿತ್ಯದ ಅತ್ಯಂತ ಜನಪ್ರಿಯ ಕವಿ ಬರ್ನ್ಸ್‌ನ ವ್ಯಕ್ತಿತ್ವ ಕತೃತ್ವವನ್ನು ಕವಿಸಹಜ ಶೈಲಿಯಲ್ಲಿ ಮಾರ್ಮಿಕವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. 'ಕನ್ನಡ ಸಾಹಿತ್ಯದಲ್ಲಿ ಸತ್ಕವಿಮಾರ್ಗ' ಎಂಬ ಲೇಖನದಲ್ಲಿ ಒಂದು ಬೃಹತ್‌ಪ್ರಬಂಧ (Thesis) ವಾಗಬಲ್ಲ ವಸ್ತುವನ್ನು ಶ್ರೀ ಮಹಾದೇವಪ್ಪನವರು ಸಮೀಚೀನವಾಗಿ ವಿವೇಚಿಸಿದ್ದಾರೆ. ಈ ಸಂಗ್ರಹದಲ್ಲಿ ಎದ್ದು ಕಾಣುವ ಅವ್ಯಕ್ತವ್ಯಕ್ತಿ ಎಂದರೆ ಶ್ರೀ ಜ. ಚ. ನಿ. ಅವರು. 'ಅನಾದಿ-ಆದಿ-ಆಧುನಿಕ ವೀರಶೈವರು' ಮೊದಲಾದ ಅವರ ಹಲವು ಲೇಖನಗಳು ಇಲ್ಲಿ ಒಳಗೊಂಡಿವೆ. ಐತಿಹಾಸಿಕ ಪ್ರಜ್ಞೆ ಮತ್ತು ಪ್ರಗತಿಪರವೂ ವಿಚಾರಶೀಲವೂ, ಪೂರ್ವ ಗ್ರಹದೂರವೂ ಆದ ಅವರ ಮನೋಧರ್ಮ, ಅವರ ಭಾಷಾಸಿದ್ಧಿ ಇವುಗಳಿಂದ ಅವರ ಲೇಖನಗಳು ಪ್ರಬುದ್ಧವಾಗಿವೆ. ಸಾಮಾ

ಜಿಕ ದರ್ಶನದಲ್ಲಿ ಉಳಿದ ಲೇಖನಗಳಲ್ಲೆಲ್ಲ ಸಾಂಪ್ರದಾಯಕವೇ ಹೆಚ್ಚು. ಅಲ್ಲಿ ಯಾವ ಹೊಸತೂ ಕಾಣದು.

ಇನ್ನೊಂದು ಮಾತು 'ಆರ್ಯದ್ರಾವಿಡ' ಎಂಬ ವರ್ಗೀಕರಣ ಪಾಶ್ಚಾತ್ಯರ ಅಪೂರ್ಣ ವ್ಯಾಸಂಗದ ಫಲ, ನಿಜವಾಗಿ ನೋಡಿದರೆ ಆರ್ಯದ್ರಾವಿಡ ಎಂಬ ಭೇದ ನಿರಾಧಾರ ಎಂಬ ಟೀಕೆ ಎದ್ದಿದೆ. ಆರ್ಯದ್ರಾವಿಡ ಎಲ್ಲರೂ ಒಂದೇ ಎನ್ನುವುದು ತತ್ತ್ವದ ಮಾತಾಯಿತು. ಆದರೆ ಭಾಷಾ ಶಾಸ್ತ್ರ, ಮಾನವ ಶಾಸ್ತ್ರ, ಇತಿಹಾಸ ಪ್ರಾಕ್ತನಶಾಸ್ತ್ರ ಮೊದಲಾದವುಗಳ ಇತ್ತೀಚಿನ ಸಂಶೋಧನೆಗಳನ್ನು ಅಲ್ಲಗಳೆಯುವುದು ಅಷ್ಟು, ಸುಲಭವಲ್ಲ. ಪಾಶ್ಚಾತ್ಯರ ಮಾತು ಹಾಗಿರಲಿ ಡಾ॥ ಸುನೀತಿ ಕುಮಾರ ಚಟರ್ಜಿ, ಕ್ಷಿತಿಮೋಹನ ಸೇನ್, ಮುಖರ್ಜಿ, ಮಜೂಂದಾರ್, ದೊದಲಾದ ಭಾರತೀಯ ವಿದ್ವಾಂಸರು ಆರ್ಯದ್ರಾವಿಡ ಬೇರೆ ಬೇರೆ ಜನಾಂಗಗಳು ಎಂಬುದನ್ನು ಸಾಧಾರವಾಗಿ ತೋರಿಸಿಕೊಟ್ಟಿದ್ದಾರೆ. ಈ ನಿಟ್ಟಿನಲ್ಲೇ ಡಾ॥ ನಂದೀಮಠ, ಶ್ರೀ ಜ. ಚ. ನಿ. ಮೊದಲಾದವರ ಬರವಣಿಗೆ ಸಮೀಚೀನವಾಗಿ ಸಾಗಿದೆ.

ಒಟ್ಟಿನಲ್ಲಿ ಶಿವಾದ್ವೈತ ಪ್ರಚಾರಕ ಸಮಿತಿಯವರು ಇಂತಹ ವೈವಿಧ್ಯ ಪೂರ್ಣವಾದ ಬೃಹತ್ ಗ್ರಂಥವನ್ನು ಪ್ರಕಟಿಸಿ ಕನ್ನಡ ಸಾರಸ್ವತ ಸಂಪತ್ತನ್ನು ಹೆಚ್ಚಿಸಿ ನಮ್ಮೆಲ್ಲರ ಅಭಿನಂದನೆಗೆ, ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ಸಮಿತಿಯಿಂದ 'ವಿಭೂತಿ' ಪೂಜೆ ಇದೇ ರೀತಿ ನಡೆದು ಕನ್ನಡ ಕೋಟಿಗೆಲ್ಲ ಅದರ ಪ್ರಸಾದ ದೊರಕಲಿ, ಸಹೃದಯರಿಗೆ ಅದರ ಆನಂದಾನು ಭೂತಿಯಾಗಲಿ ಎಂದು ಹಾರೈಸುವ.

ಮ. ಸು. ಕೃಷ್ಣಮೂರ್ತಿ

——

## ವಚನ ಸುಧೆ!

ಆರಾದಡೇನು ? ಆತ್ಮ ಗುರುಪುತ್ರರಾದವರ ಆದರಿಸುವೆ, ಆರಾಧಿಸುವೆ, ಅವರಡಿವಿಡಿದು ವಂದಿಸುವೆ ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯಸಿಂಹಾಸನಾಧೀಶ್ವರ ನೀವಲ್ಲಿರ್ಪ ಕಾರಣ !

———

# ಆರತಿಯು ನಿಮಗೆ

ಓ ಪೂಜನೀಯ ಶ್ರೀ ನಿಡುಮಾಮಿಡಿ
ಶ್ರೀ ಪರ್ವತ ರಾಜಮಣಿ ಖಚಿತ ಕನಕ
ಸೂರ್ಯ ಸಿಂಹಸನಾಧೀಶ್ವರ !

ಕವಿ ಮಂಡಳ ಕಳಾಮಣಿ, ಕವಿಸೂರ್ಯ,
ಶಿವಾನುಭಾವಿ, ವಿಶ್ವಗಣ್ಯ, ಮಹಾಚಾರ್ಯ
ಶ್ರೀ ಚೆನ್ನಬಸವರಾಜ ಶಿವಾಚಾರ್ಯ !

'ಸಂಸ್ಕಾರ' 'ಕಾರುಣ್ಯ ಕಿರಣ' ಗಳು
ನಿಮ್ಮಯ 'ದೇವದೃಷ್ಟಿ'ಯ ಐಸಿರಿ,
ಜಗದೊಳಗೆ 'ವಚನ ವಲ್ಲರಿ'ಯ ಸಿರಿ ;

ನುಡಿಯಲಿ 'ಅಭಯವಾಣಿ'ಯ ನೀತ್ತಿರಿ !
ಹಾರಿಸಿ 'ಹೊನ್ನ ಹಕ್ಕಿ' ತೋರಿಸಿ 'ರನ್ನ ಚುಕ್ಕಿ'
'ಹೂಗೊನೆ' 'ಹಾಲ್ಕೆನೆ' ನಿವೇದನ ಹರಗುರು ಪಾವಕೆ.
ಅರಳುತ ತಂದವು 'ಗುರುಗೀತಾಂಜಲಿ' ಗುರುವಂದನ,
ಹೊಂಗೆಲಸದ ಗಣಿ 'ಮಣಿಮುಕುರಂ' ಕಾವ್ಯದರ್ಶನ !

ಶ್ರೀಗುರುಕನಿಕರದೊಳು ರಾಜಿಸುವ ಗುರುರಾಜ
ಶಿವ ಬದುಕಿನೊಳು ಕರೆದಿರಿ 'ತವನಿಧಿ ದೇವದಾಸನ'
ಶಿವ ವನದೊಳು ಬಿತ್ತಿದಿರಿ 'ವಿಭೂತಿ'ಯ ಬೀಜ ಘನ

ಶಿವ ವನದೊಳು ಅರಳುತಿಹುದಿದೋ 'ದಾಸೋಹ' ಕುಸುಮ !
ಚಿರಕಾಲವು ಸಾಗಲಿ ಚಿನ್ಮಯ 'ದಾಸೋಹ' ಜಿಜ್ಞಾಸುಗಳಿಗೆ
ನಿಮ್ಮಯ ಬಾನಿನ ಬೆಳಗಿನೊಳಗೆ
ಪ್ರಾರ್ಥನೆ ನಮ್ಮದು ಇಹ ಶಿವ ಶಂಕರಗೆ
ಪ್ರತಿದಿನ ಹೃದಯದ ಆರತಿಯು ನಿಮಗೆ !

—ಸುಲೋಚನ ನಾಗರಾಜ್

ಎಸಳು-೧೪

# ಸಂಕೀರ್ಣ ಸಾಹಿತ್ಯ

[ದರ್ಶನ-೧೩]

ಕುರುಹು
ಸಾರಾಯ ಸಂಪತ್ ಚತುಷ್ಟಯ (ಸಂವಾದ ಸಾಹಿತ್ಯ)
ಭಕ್ತ ಭೂಮಿಕೆ (ಸಂವಾದ)
ಕಂಡ ಕಲ್ಯಾಣ
ಮುನ್ನುಡಿಗಳು
ಸಂದೇಶಗಳು
ಲೇಖನಗಳು

ಸಾಹಿತ್ಯ ಶಿವಾಚಾರ್ಯ ಶ್ರೀ ಜ. ಚ. ನಿ ಸನ್ನಿಧಿಯವರ ಸಾಹಿತ್ಯ ಕೃತಿಗಳನ್ನೆಲ್ಲ ವಿವಿಧ ಪ್ರಕಾರಗಳಾಗಿ ವಿಂಗಡಿಸಿದನಂತರ ಉಳಿದ ಸಾಹಿತ್ಯವನ್ನು ಸಂಕೀರ್ಣ ಸಾಹಿತ್ಯವೆಂದು ಕರೆಯಲಾಗಿದೆ. ಇತರ ಸಾಹಿತಿಗಳ ಗ್ರಂಥ ಗಳಿಗೆ ಅವರು ಬರೆದ ಮುನ್ನುಡಿಗಳು, ಸಭೆ ಸಮ್ಮೇಳನಗಳಲ್ಲಿ ನೀಡಿದ ಸಂದೇಶಗಳು, ಕನ್ನಡ ಪತ್ರಿಕೆಗಳಿಗೆ, ಸಂಭಾವನಾ ಗ್ರಂಥ ಗಳಿಗೆ ಕೊಟ್ಟ ಲೇಖನಗಳನ್ನು ಸಂಗ್ರಹಿಸಿದರೆ ಬಹುಶಃ ಸಹಸ್ರಾರು ಪುಟಗಳ ಹೆಬ್ಬೊತ್ತಿಗೆಯೇ ಆಗಬಹುದು. ಆ ಬಗ್ಗೆ ಪ್ರಯತ್ನವೂ ನಡೆದಿದೆ. ಆದರೆ ಪುಸ್ತಕ ಅವರ ಸಂಕೀರ್ಣ ಸಾಹಿತ್ಯದ ಪರಿಚಯಕ್ಕೆ ಪ್ರಾತಿನಿಧಿಕವಾಗಿ ಒಂದೆರಡು ಬರೆಹಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ.

ಬರೆಹ-ಭಾಷಣ-ಎರಡೂ ಕಲೆಗಳ ಸಿದ್ಧ ಪುರುಷರಾದ ಶ್ರೀ ಜ. ಚ. ನಿ ಸನ್ನಿಧಿಯವರು ನುಡಿದುದೆಲ್ಲ ಸಾಹಿತ್ಯವಾಗಿದೆ: ಅಡಿದುದೆಲ್ಲ ಸಂದೇಶವಾಗಿದೆ.

# ನಾಲ್ಕರ ನಿಲುವು

**—ಚ. ಸುಂದರೇಶನ್, ಎಂ. ಎ.,**

ಗುರು, ಲಿಂಗ, ಜಂಗಮ, ಪ್ರಸಾದವೇ ಸಾರಾಯ ಸಂಪತ್ ಚತುಷ್ಟಯ. ಭಕ್ತನ ಸುಜ್ಞಾನ ಪ್ರಕಾರವು ಈ ಸಂಪದದ ಸಾರ, ಮೂಲ. ಗುರುವಿನಿಂದ ಅರಿವು. ಲಿಂಗದಿಂದ ಕ್ರಿಯೆ; ಜಂಗಮದಿಂದ ಅನುಭವ, ಪ್ರಸಾದದಿಂದ ಆನಂದ ಪ್ರಾಪ್ತವಾಗುತ್ತವೆ.

ತಾಯಿ-ಕಂದರ ಸಂಭಾಷಣ ರೂಪದಲ್ಲಿ ಈ ಕೃತಿಯಿದೆ. ಚಿನ್ಮಯಿಯಾದ ಗುರುವೆ ಮಾತೆ. ಹೃನ್ಮಯಿಯಾದ ಶಿಷ್ಯನೆ ಕಂದ. ಧರ್ಮದೃಷ್ಟಿಯಿಂದ ಈ ತಾಯಿ-ಕಂದರ ಸಂಬಂಧ ಅಪೂರ್ವ. ಅತ್ಯುನ್ನತ ಈ ಕಂದ ಹೊಗಳಿಕೆಯನ್ನು ಬಯಸದು; ಸಂಸ್ಕಾರಶೀಲ ಶಿಶುವಿದು. ಸೃಷ್ಟಿ ಸಮರ್ಥನು ಶಿವನೆಂದು ತಾಯಿಯಿಂದ ತಿಳಿದರೂ ಶಿವನಿಗಿಂತ ಶ್ರೇಷ್ಠರಾದವರು ಯಾರೆಂಬುದನ್ನು ತಿಳಿಯಲು ಆಶಿಸಿದೆ ಈ ಮುದ್ದು ಮಗು. ಶಿವನಿಗಿಂತ ಶಿವಭಕ್ತರು ಅಧಿಕರೆಂದು ಗುರುಮಾತೆ ಅರುಹಿದ್ದಾಳೆ. ಕಂದನ ಶ್ರವಣಾಸಕ್ತಿಯು ತಾಯಿಯ ಕಥನ ಶಕ್ತಿಗೆ ಸ್ಫೂರ್ತಿಯ ನೆಲೆಯಾಗಿದೆ.

'ಅಂದಿಂಗೆ ಎಳೆಯ ನೀನು ಹಳೆಯ ನಾನು'-ಬಸವಣ್ಣನವರು

'ಗುರುದೇವತೆಯೊಳನುರಾಗವಿಹುದೇ ನಿಜಭಕ್ತಿ'-ನಿಜಗುಣರು

ಶರಣರ ಇಂತಹ ಸತ್ಯವಚನಗಳ ಸೌಂದರ್ಯದಿಂದ ತುಂಬಿ ಬಂದಿದೆ ಈ ಸತ್ಕೃತಿ. ಚೆನ್ನಬಸವಣ್ಣನವರ ಚೆಲುವಿನ ಹಾಡಿನಿಂದ ಕೊನೆಗೊಂಡಿದೆ.

ಸಂವಾದದಲ್ಲಿ ಒಂದೆರಡು ಕಡೆ ಶಿವಾನುಭವದ ತಾಂತ್ರಿಕ ಪದಗಳು ಅವುಗಳ ವಿವರ ಮಗುವಿನ ಮಟ್ಟಕ್ಕೆ ಮೀರಿದುವೇನೋ ಎಂದೆನ್ನಿಸುತ್ತದೆ. ಆದರೂ ಸಂಭಾಷಣೆಗೆ ತೊಡಗಿರುವ ಮಗು ಸಂಸ್ಕಾರಶೀಲ ಶಿಶುವಲ್ಲವೇ! ತತ್ವಜ್ಞಾನದಿಂದ ಶೋಭಿಸುವ ಮಾತೆಯು. ಅರುಹಿನ ಮಂಗಳದೂತೆಯು ಶ್ರೀ ಗುರುವಲ್ಲವೇ! ಆ ಕಾರಣ ಸಹೃದಯರಿಗೆ ಸಮಾಧಾನ ಬರಲೆಡೆಯಿದೆ.

ಶ್ರೀ ಜ. ಚ. ನಿ ಸನ್ನಿಧಿಗಳವರು ಸಹಜವಾಗಿ ಕವಿಗುರು. ಕವಿವಾಣಿ ಗುರುವಾಣಿ ಆಳವಟ್ಟಂತೆ ಮಾತೃವಾಣಿ ತುಂಬಿ ಬಂದಿದೆತಾಯ್ನುರಳು. ತಾಯ್ನುಡಿಯ ಚೆಂದದಿಂದ ಶಿವತತ್ತ್ವವನ್ನು ಅರುಹಿದ್ದಾರೆ.

ಶಿವ ಮತ್ತು ಶರಣರ ನಿಲುವನ್ನು ತಾಯ್ನುಡಿಯಲ್ಲಿ ಚೆಲುವಾಗಿ ರೂಹಿಸಿದ್ದಾರೆ. ಶಿವನಿಗಿಂತ ಶಿವಭಕ್ತರು ಅಧಿಕರೆಂಬುದನ್ನು ಸಾರಿದ್ದಾರೆ. ಕರುಳಭಾಷೆ, ಪ್ರಸನ್ನಶೈಲಿ, ತುಂಬಿ ಬಂದ ಶಿವತತ್ತ್ವ, ಸಂಭಾಷಣೆಯ ಸೊಗಸು—ಈ ಎಲ್ಲ ದೃಷ್ಟಿಯಿಂದ ಈ ಚಿಕ್ಕ ಕೃತಿ ಮನ ಸೆಳೆಯುವಂಥದಾಗಿದೆ. ಬೃಹತ್ ಕೃತಿಗಳಿಂದಲೂ ಸಾಧಿತವಾಗುವ ಪರಿಣಾಮವು ಒಮ್ಮೊಮ್ಮೆ ಕಿರುಕೃತಿಗಳಿಂದಲೂ ಸಾಧಿತವಾಗುಬಹುದೇನೋ! ಇಂತಹ ಅರಿವು-ಆನಂದವನ್ನು ತಂದಿದೆ 'ಸಾರಾಯ ಸಂಪತ್ ಚತುಷ್ಟಯ' ಎಂಬ ಈ ಚಿಕ್ಕ ಕೃತಿ ಸಂವಾದ ಸಾಹಿತ್ಯ ಲೋಕಕ್ಕೆ ಶ್ರೀ ಸನ್ನಿಧಿಗಳವರು ನೀಡಿದ ಅಮೂಲ್ಯ ಕಾಣಿಕೆ ಈ 'ನಾಲ್ಕರ ನಿಲವು'.

---

೧೧-೫-೧೯೬೫ ರಂದು 'ನಿವೇದನ' 'ನಾಲ್ಕರ ನಿಲವು' ಗ್ರಂಥಗಳ ಉದ್ಘಾಟನಾ ಸಂದರ್ಭದಲ್ಲಿ ಮಾಡಿದ ಭಾಷಣದ ಸಾರ.



# ಸರ್ವಧರ್ಮ ಸಮನ್ವಯವೆ ಸರ್ವೋದಯದ ಅಡಿಗಲ್ಲು

ಶ್ರೀಗಿರಿರಾಜ ಮಣಿಖಚಿತ ಕನಕ ಸೂರ್ಯ ಸಿಂಹಾಸನಾಧೀಶ್ವರ
ಶ್ರೀಶೈಲ ಜಗದ್ಗುರು
**ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಸನ್ನಿಧಿಯವರು**
ತಾರೀಖು ೧-೧೨-೧೯೬೮ನೇ ಬುಧವಾರ ಧರ್ಮಸ್ಥಳದಲ್ಲಿ ನಡೆದ ಸರ್ವಧರ್ಮ
ಸಮ್ಮೇಳನದ ಅಧ್ಯಕ್ಷತೆಯನ್ನುವಹಿಸಿ ಅಪ್ಪಣೆ ಕೊಡಿಸಿದ

# ಧರ್ಮ ಸಂದೇಶ

**ಸಹನಾವವತು । ಸಹನೌಭುನಕ್ತು । ಸಹವೀರ್ಯಂಕರವಾವಹೈ**
**ತೇಜಸ್ವಿನಾವಧೀತಮಸ್ತು ।ಮಾವಿದ್ವಿಷಾವಹೈ, ಓಂ ಶಾಂತಿಃ ಶಾಂತಿಃ ಶಾಂತಿಃ॥**

**ಕೂಡಿ ಆಳೋಣ, ಕೂಡಿ ಉಣ್ಣೋಣ, ಕೂಡಿ ಕಲಿಗಳಾಗೋಣ.**
**ತೇಜಸ್ವಿಗಳಾಗೋಣ, ಕೂಡಿ ಕಲಿಯೋಣ, ಪಸರ್ಪರ ಹಗೆತನ ಬೇಡ.**

ಓಂ ಸಮಾನೋ ಮಂತ್ರಃ, ಸಮಿತಿಃ ಸಮಾನಿ,
ಸಮಾನೀವ ವ್ರತಃ ಸಹ ಚಿತ್ತಮೇಷಾವರ್ ।
ಓಂ ಸಮಾನಂ ಅಕೂತಿಃ, ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ, ಯಥಾ ವಃಸು ಸಹಾಸತಿ ॥

ಎಲ್ಲರ ವಿಚಾರ ಒಂದಾಗಲಿ, ಸಭೆ ಎಲ್ಲರಿಗೂ ಸಮಾನವಾಗಿರಲಿ, ಎಲ್ಲರ ಮನ ಚಿತ್ತಗಳು ಒಂದಾಗಿರಲಿ. ಎಲ್ಲರ ಧ್ಯೇಯ ಒಂದಾಗಿರಲಿ, ಎಲ್ಲರ ಹೃದಯ ಒಗ್ಗಟ್ಟಾಗಿರಲಿ, ಎಲ್ಲರ ಸ್ಥಿತಿಯು ಉತ್ತಮವಾಗಲಿ.

**ಧರ್ಮಸ್ಥಳಾಧಿಕಾರಿಗಳೆ,**

**ಧಾರ್ಮಿಕರೆ !**

ಧರ್ಮಸ್ಥಳ ಕನ್ನಡ ನಾಡಿನ ಮಂಗಳೂರು ಜಿಲ್ಲೆಯಲ್ಲಿನ ಮಂಗಳಸ್ಥಳ. ಮಂಜುನಾಥನು ನೆಲಸಿರುವ ಪಾವನಧಾಮ. ಶ್ರೀಮಾನ್ ಡಿ. ರತ್ನವರ್ಮ ಹೆಗ್ಗಡೆಯರ ಸರ್ವಧರ್ಮಾಶ್ರಮ.

ಧರ್ಮಸ್ಥಳದ ಹೆಸರನ್ನು ಬಹುದಿನಗಳಿಂದ, ಬಹುಜನಗಳಿಂದ, ಕೇಳಿದ್ದೆವು, ಕಂಡಿರಲಿಲ್ಲ. ಇದೀಗ ಈ ಧರ್ಮಸ್ಥಳದ ಸರ್ವಧರ್ಮ ಸಮ್ಮೇಳನದ ಕಾರ್ಯಕರ್ತರ ಆದರದ ಆಹ್ವಾನದಿಂದಾಗಿ ಕಾಣುವ, ಕಂಡು ಆನಂದಿಸುವ ಸುಸಮಯವು ಸಂಪ್ರಾಪ್ತ ವಾಗಿದೆ.

ಎಂದಿನಂತೆ ಇಲ್ಲಿ ಜರುಗುವ ಇಂದಿನ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷ ಸ್ಥಾನದ ಹೊಣೆಗಾರಿಕೆಗೆ ಕಾರಣರನ್ನಾಗಿ ಮಾಡಿದ ಕಾರ್ಯಕರ್ತರಿಗೆ ನಮ್ಮ ನಚ್ಚಿನ ನೆನಿಕೆ.

ಸರ್ವಧರ್ಮ ಸಮನ್ವಯವು ಸರ್ವೋದಯದ ಅಡಿಗಲ್ಲು. ಸರ್ವ ಮಾನ ವೀಯ ಮೌಲ್ಯ. ಸರ್ವರ ಶ್ರೇಯೋಭ್ಯುದಯದ ಬಾಳಬಟ್ಟೆ. ಮಾನವೀಯ ಮಹಾ ಧರ್ಮಮಂದಿರ. ಮಾನವೀಯ ನೀತಿ ರೀತಿಗಳ ನಂದನ. ಸರ್ವರ ಭಾವೈಕ್ಯದ ಕೇಂದ್ರ. ಸದಾಚಾರವಿಚಾರಗಳ ರಸಾಯನ.

ಧರ್ಮ ಸಾಮಾನ್ಯ, ವಿಶೇಷವೆಂದು ಇಬ್ಬಗೆ. ವಿಶೇಷ ಧರ್ಮಗಳನ್ನು ಮೇಲು-ಕೀಳೆಂದು ವಿಭಾಗ ಮಾಡುವುದುಂಟು. ಇದು ಉಚಿತವಲ್ಲ.

ಮಾನವ ಸಮಾಜವೆಂಬ ಮರಕ್ಕೆ
ಮತಧರ್ಮಂಗಳೇ ರೆಂಬೆಗಳು ನೋಡಾ
ಆವ ರೆಂಬೆಯಾದಡೇನು ?
ಮೂಲವೊಂದೇ, ಫಲವೊಂದೇ !
ಮೇಲು ಕೀಳೆಂಬ ಮರುಳರನೇನೆಂಬೆ
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ ?

ಧರ್ಮ ಜಾತಿಯಲ್ಲ ; ಜಾತಿ ಧರ್ಮವಲ್ಲ. ಧರ್ಮ ಸ್ವರೂಪ ಜಾತ್ಯತೀತ ವಾದದು. ಜಾಗತಿಕ ಮಾನ್ಯವಾದುದು. ಮತಧರ್ಮಗಳಲ್ಲಿ ಮೇಲಿಲ್ಲ ಕೀಳಿಲ್ಲ.

ಗುಣಧರ್ಮಗಳು, ಕರ್ಮಜನ್ಯಧರ್ಮಗಳು ಎಂದು ಮತ್ತೆ ಧರ್ಮ ಇಬ್ಬಗೆ ಕರ್ಮಜನ್ಯಧರ್ಮಗಳು ವಾಸ್ತವವಲ್ಲ. ಬಳಸತಕ್ಕವಲ್ಲ. ಅವು ಜಾತಿ ಸೂಚಕ ಗಳಾಗಿ ಪರಂಪರೆಯಿಂದ ಬಂದಿವೆಯಾದರೂ ಧರ್ಮಗೆ ಅವುಗಳ ಸಂಬಂಧವಿಲ್ಲ.

ಮಡಿವಾಳನೆಂಬೆನೆ ಮಾಚಯ್ಯನ ?
ಮಾದರನೆಂಬೆನೆ ಚೆನ್ನಯ್ಯನ ?

ಡೋಹರನೆಂಬೆನೆ ಕಕ್ಕಯ್ಯನ ?
ಆನು ಹಾರವನೆಂದರೆ
ಕೂಡಲಸಂಗಯ್ಯ ನಗುವನಯ್ಯ !

ಇನ್ನು ಗುಣಧರ್ಮಗಳು ಹಲವಿವೆ. ಜೀವದಯೆ ಜಿನಧರ್ಮ. ಕರ್ಮ ಕಾಂಡ ದ್ವೈತಧರ್ಮ, ಜ್ಞಾನಕಾಂಡ ಅದ್ವೈತ ಧರ್ಮ. ಭಕ್ತಿಕಾಂಡ ಅಥವಾ ಜ್ಞಾನ ಕ್ರಿಯಾಕಾಂಡ ವೀರಶೈವ ಧರ್ಮ ಇತ್ಯಾದಿ. ಈ ಧರ್ಮಗಳು ಜಾತಿ ಸೂಚಕ ಗಳಲ್ಲವಾದರೂ ಸಾಂಪ್ರದಾಯಿಕರು ಜಾತಿ ಪಂಕ್ತಿಯಲ್ಲಿ ಜೋಡಿಸಿದರು.

ಗುಣಧರ್ಮಗಳು ಎಲ್ಲ ಮಾನವರಿಗೂ ಬೇಕು. ಯಾವ ಗುಣ ಯಾರಿಗೂ ಮೀಸಲಾಗಿ ಇರಬೇಕೆಂಬ ನೇಮವಿಲ್ಲ. ಅವು ಒಬ್ಬರ ಸೊತ್ತಲ್ಲ. ಗುಣಗಳ ಮೇಲೆ ಎಲ್ಲರಿಗೂ ಹಕ್ಕಿದೆ. ಸಾಧಿಸಲು ಹೊಲಬಿದೆ.

ಒಂದೊಂದು ಗುಣಧರ್ಮವೇ ಮಾನವತೆಯನ್ನು ಮೇಲ್ಮಟ್ಟಕ್ಕೆ ಒಯ್ಯುತ್ತದೆ. ಹಲವಾರು ಗುಣಧರ್ಮಗಳು ಒಬ್ಬನಲ್ಲಿ ಸೇರಿದರೆ ಕೇಳುವುದೇನು ? ಆತನು ಮಹಿ ಮಾತ್ಮನಾಗುತ್ತಾನೆ.

ಗುಣಧರ್ಮಗಳೇ ಮಾನವನ ಶುದ್ಧಿಗೆ, ಮಹಾದೇವತ್ವದ ಸಿದ್ಧಿಗೆ, ಉತ್ತಮ ಸಾಧನ.

"ಕಳಬೇಡ ಕೊಲಬೇಡ ಹುಸಿಯ ನುಡಿಯ ಬೇಡ,
ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ಕೂಡಲ ಸಂಗಮದೇವನ ಕೂಡುವ ಪರಿ".

ಇದು ಗುಣಧರ್ಮ ಸಮನ್ವಯ, ಮತ್ತು ಸಮನ್ವಯ ಸತ್ಫಲ.

"ಎಲ್ಲಿ ಸುಶೀಲಂ ಸದ್ಗುಣ
ಮೆಲ್ಲಿ ದಯಾ ಧರ್ಮ ಮೆಸೆವ ಸತ್ಯಂ ನೆಲೆಗೊಂ
ಡಲ್ಲಿಯೆ ಆಯುಂ ಸಿರಿಯುಂ
ಸಲ್ಲೀಲೆಯೊಳಿರ್ಪವಲ್ತೆ ಚೂಡಾರತ್ನ".

ಇದು ಸರ್ವಧರ್ಮ ಸಮನ್ವಯ ದರ್ಶನ, ಇದರಿಂದ ಆಯುಷ್ಮಂತ ಜೀವನ; ಶ್ರೀಮಂತ ಜೀವನ.

ಇನ್ನು ಹಿಂದು, ಮುಸ್ಲಿಂ, ಕ್ರೈಸ್ತ, ಜಿನ, ವೀರಶೈವ ಮುಂತಾದ ಸಾಮಾಜಿಕ ಧರ್ಮಗಳ ಸಮನ್ವಯವನ್ನು ಬೇರೆ ಬಿತ್ತರಿಸಬೇಕಿಲ್ಲ. ಆ ಸಾಮಾಜಿಕ ಗುಣ ಧರ್ಮಗಳ ಸಮನ್ವಯವೇ ಮತ ಸಮನ್ವಯ. ವಿಶೇಷಾಚಾರ ವಿಚಾರಗಳು ಭಿನ್ನ ವಾಗಿದ್ದರೂ ಸರ್ವ ಸಾಮಾನ್ಯವಾದ ಆಚಾರ ವಿಚಾರಗಳು ಸರ್ವರಲ್ಲಿ ಸಮನ್ವಯ ಗೊಳ್ಳಬೇಕು. ಸರ್ವರಲ್ಲಿ ಭಾವೈಕ್ಯತೆ ಬೆಸುಗೆಯಾಗಬೇಕು. ಪರಸ್ಪರ ವೈರ,

ಮತ್ಸರ, ಸ್ವಾರ್ಥಾಹಂಕಾರ, ವಂಚನೆ ಮುಂತಾದ ದುರ್ಗುಣಗಳು ದೂರವಾಗಬೇಕು; ಸ್ನೇಹ, ಸರಳತೆ, ನಿಃಸ್ವಾರ್ಥ, ನಿರಹಂಕಾರ ನಿರ್ವಂಚನೆಗಳು ಬೆಳೆದು ಬರಬೇಕು.

ಎಲ್ಲ ಧರ್ಮಗಳ ಧ್ಯೇಯವೊಂದೆ. ಎಲ್ಲ ಧರ್ಮಗಳ ಸಾರವೊಂದೆ, ಮೂಲ-ಫಲಗಳು ಒಂದೆ.

## ಸ್ವಧರ್ಮ ಪರಧರ್ಮ

ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ

—ಗೀತೆ

ಈ ಸ್ವಧರ್ಮ ಪರಧರ್ಮಗಳ ವ್ಯಾಖ್ಯಾನ ಕೇವಲ ಬಹಿರಂಗದ್ದಲ್ಲ. ಜಾತಿ ಸಂಬಂಧದ್ದಲ್ಲ: ಇಲ್ಲಿ ಇನ್ನೊಂದು ಮುಖ್ಯವಾದ ಅಂತರಿಕವಾದ ಅರ್ಥವಿದೆ.

ಸ್ವಧರ್ಮವೆಂದರೆ ಆತ್ಮ ಧರ್ಮ. ಪರಧರ್ಮವೆಂದರೆ ಆತ್ಮನಿಗೆ ಅನ್ಯವಾದ ದೇಹೇಂದ್ರಿಯಾದಿಗಳ ಧರ್ಮ. ಆತ್ಮಧರ್ಮದಲ್ಲಿದ್ದು ಸತ್ತರೂ ಲೇಸು. ಆ ಸಾವು ಬೇರೆ. ದೇಹ ಧರ್ಮಗಳು ಸಾಯಬಹುದು. ಆತ್ಮ ಧರ್ಮಗಳು ಸಾಯವು.

ಪರಧರ್ಮ ಅಂದರೆ ದೇಹಾದಿಗಳ ಮದ ಮಾತ್ಸರಾದಿ ಧರ್ಮ. ದೇಹಾದಿಗಳು ಹೇಗೂ ಉಳಿಯುವುದಿಲ್ಲ. ಇವನ್ನು ನೆಚ್ಚಿ ಆತ್ಮಧರ್ಮವನ್ನು ಕೈಬಿಟ್ಟರೆ ಆತ್ಮಕೀರ್ತಿ ಆತ್ಮದೀಪ್ತಿಗಳು ನೆಲೆ ನಿಲ್ಲುವುದಿಲ್ಲ. ಆದರ್ಶತೆಯನ್ನು ಉಳಿಸುವುದಿಲ್ಲ. ಉಭಯ ನಷ್ಟಕ್ಕೆ ಗುರಿ ದೇಹಾದಿಪರಧರ್ಮ.

ಪರಧರ್ಮ ಸಹಿಷ್ಣುತೆ ಭಾರತೀಯರಲ್ಲಿ ಪುರಾತನ ಕಾಲದಿಂದ ಬಂದ ಒಂದು ಹಿರಿಯ ಗುಣ. ವೇದವಾಣಿಯಲ್ಲಿ, ಅಶೋಕನ ಶಾಸನಗಳಲ್ಲಿ ಪರಧರ್ಮ ಸಹಿಷ್ಣುತೆ ಯಿರುವುದು ಪ್ರಸಿದ್ಧವಾಗಿದೆ. ದೇಹೇಂದ್ರಿಯಗಳ ದುರ್ಗುಣ ರೂಪ ಧರ್ಮವು ಆತ್ಮ ದೃಷ್ಟಿಯಲ್ಲಿ ಪರಧರ್ಮವೆಂದು ಹೇಳಿದ ಮೇಲೆ ಬೇರೆ ಬೇರೆ ಜನಾಂಗಗಳ ಗುಣಧರ್ಮ ಗಳನ್ನು ಕುರಿತು ಮತ್ಸರವಿರಬಾರದು. ಪ್ರತಿಯಾಗಿ ಆದರವಿರಬೇಕು.

ಧರ್ಮ ಮೀಮಾಂಸೆಯನ್ನು ನಾನೇನು ಇಲ್ಲಿ ಮಾಡಬೇಕಿಲ್ಲ. ಏಕೆಂದರೆ ಇಲ್ಲಿಗೆ ಅನೇಕ ಧರ್ಮಿಗಳು ಬಂದು ಧರ್ಮಮೀಮಾಂಸೆಯನ್ನು ಮಾಡಿದ್ದಾರೆ. ಸಾಲದ್ದಕ್ಕೆ ಧರ್ಮ ವಿವರಣೆಯನ್ನು ಅರಿಯದವರು ಈ ಸಭೆಯಲ್ಲಿ ಅಪರೂಪ.

ಜೀವನದ ಅಭ್ಯುದಯಕ್ಕೆ ಅನುಕೂಲವಾದುದು ಮತ್ತು ಶ್ರೇಯಸ್ಸಿಗೆ ಸಾಧನ ವಾದುದು ಧರ್ಮ, ಕರ್ತವ್ಯ ಕರ್ಮವು ಧರ್ಮ. ಇಂತಹ ಧರ್ಮ ಯಾವ ಮತಕ್ಕೆ ಬೇಡ ?

ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮಕ್ಕೆ ಪ್ರಥಮ ಸ್ಥಾನ ಮೀಸಲಾಗಿದೆ. ಇದಿ ಲ್ಲದೆ ಮುಂದಿನವು ಅರ್ಥಕಾಮಗಳಿರದು ಇದ್ದರೂ ಪ್ರಯೋಜನವಿಲ್ಲ. ಧರ್ಮವಿಲ್ಲದೆ ಮೋಕ್ಷವುಂಟಾಗುವುದಿಲ್ಲ, ಮಾನವ ಜನಾಂಗಕ್ಕೆ ಧರ್ಮ ಜೀವಾಳವಾಗಿದೆ; ದಿವ್ಯ ಸಂ

ಪತ್ತಾಗಿದೆ. ಮಾನವನು ಧರ್ಮವೆಂಬ ಅರ್ಥವನ್ನು ಗಳಿಸಬೇಕು;ಮತ್ತು ಧರ್ಮದಿಂದ ಅರ್ಥವನ್ನು ಆರ್ಜಿಸಬೇಕು. ಧರ್ಮಕಾಮನಾಗಬೇಕು. ಆಗ ಮೋಕ್ಷಮಾನವನದಾಗುತ್ತದೆ. ಪುರುಷಾರ್ಥ ಪ್ರಾಪ್ತಿಯಾಗುತ್ತದೆ. ಇದು ಒಂದು ಬಗೆಯ ಧರ್ಮ ಸಮನ್ವಯ. ಧರ್ಮಮೀಮಾಂಸೆ.

ವಿವಿಧ ಜಾತಿಗಳಿದ್ದಂತೆ ವಿವಿಧ ಧರ್ಮಗಳಿವೆ. ಧರ್ಮ ವಿವಿಧವಾದರೂ ಧರ್ಮಿ ಒಬ್ಬ! ಹೂವು ಹಲವಾದರೂ ಪೂಜೆ ಒಂದು! ಇದನರಿದು ಸರ್ವಧರ್ಮ ಸಮನ್ವಯ ನಿರೀಕ್ಷಣೀಯ.

ಸರ್ವಧರ್ಮ ಸಮನ್ವಯದಿಂದ ಒಂದು ಹೊಸ ಚೇತನ ಬರುತ್ತದೆ. ಪೂರ್ಣ ಚೇತನವುಂಟಾಗುತ್ತದೆ. ಮತ್ತು ಹೊಸ ರುಚಿ ಒದಗುತ್ತದೆ. ಹಲವು ಹಣ್ಣುಗಳನ್ನು ಸೇರಿಸಿ ಮಾಡಿದ ರಸಾಯನದ ರುಚಿಯನ್ನು ಅರಿಯದವರಾರು ? ಅರಿತವರು ಸರ್ವಧರ್ಮ ಸಮನ್ವಯವನ್ನು ಎದುರಿಸುವರೆ ?

**ಧರ್ಮಸಮನ್ವಯ—ಧರ್ಮಿಸಮನ್ವಯ**

ಈ ಧರ್ಮಸ್ಥಳದಲ್ಲಿ ಇವೆರಡು ಸಮನ್ವಯವಾಗಿದೆ. ಧರ್ಮಗಳ ಸಮನ್ವಯವನ್ನು ಮಾಡಬಂದ ಧರ್ಮಿಗಳ ಸಮನ್ವಯ ಸಹಜವಾಗಿ ಸಾಗಿಬಂದಿದೆ. ಅಲ್ಲದೆ ಈ ಕ್ಷೇತ್ರದಲ್ಲಿ ಶೈವಧರ್ಮ, ಜೈನಧರ್ಮ, ದ್ವಿಜಧರ್ಮಗಳು ತಾವಾಗಿಯೆ ಸಮನ್ವಯಗೊಂಡಿವೆ. ಆ ಆ ಧರ್ಮಿಗಳು ಬಂದು ಒಂದುಗೂಡಿ ಭಾವೈಕ್ಯವನ್ನು ಬೀರಿದ್ದಾರೆ. ಇವೆರಡರ ಸಮನ್ವಯದಿಂದ ಮತ್ತು ಸರ್ವಧರ್ಮ ಸಮ್ಮೇಳನದಿಂದ ಒಂದು ಹೊಸ ವಿಚಾರಕ್ರಾಂತಿ, ಆಚಾರಕ್ರಾಂತಿ ಉದಯಿಸಿದೆ. ಹೆಚ್ಚು ಕೀರ್ತಿ ಉಂಟಾಗಿದೆ. ಈ ಕ್ಷೇತ್ರದ ನಾಮ ಸಾರ್ಥಕವಾಗಿದೆ. ಈ ಕ್ಷೇತ್ರ ನಾಡಿಗೆ ಸರ್ವಧರ್ಮ ಸಮನ್ವಯ ರೂಪ ದಿವ್ಯ ಸಂದೇಶವನ್ನು ಬೀರುತ್ತಿದೆ. ಇದರಿಂದಾಗಿ ನಾಡಿನ ವಿದ್ವಾಂಸರಲ್ಲಿ ಧಾರ್ಮಿಕರಲ್ಲಿ ಸರ್ವಧರ್ಮ ಸಾಮ್ಯವಾದವು ಬೆಳೆದು ಬರುತ್ತಿದೆ. ಸಮದರ್ಶಿಗಳಾಗುತ್ತಿದ್ದಾರೆ.

ಧರ್ಮ ಧರ್ಮಗಳಲ್ಲಿರುವ ದ್ವೇಷ ತ್ವೇಷಗಳಿಂದ ಭಿನ್ನ ಭಿನ್ನವಾಗಿ ಜರ್ಝರಿತವಾಗುತ್ತಿರುವ ನಾಡಿಗೆ ಈ ಸರ್ವಧರ್ಮ ಸಮ್ಮೇಳನವು ಒಂದು ಸಾಮ್ಯವಾದದ ಭವ್ಯ ಸಂದೇಶವನ್ನು ಬೀರುತ್ತಿದೆ. ಪರಸ್ಪರ ಸ್ನೇಹಸೂತ್ರವನ್ನುಂಟುಮಾಡುತ್ತಿದೆ. ಧರ್ಮಜ್ಯೋತಿಗೆ ಜಾತಿ ಭೂತ ಬಡಿಯಬಾರದು, ಕೋಮುವಾರು ಕೀಟ ಬಳಸಬಾರದು ಎಂಬ ಸತ್ಯ ಸಂದೇಶವನ್ನು ಸಾರುತ್ತಿದೆ.

**ಇಂದಿನ ವಿಶ್ವಸಮಸ್ಯೆ**

ಇಂದಿನ ಈ ವಿಜ್ಞಾನಯುಗದ ವಿಶ್ವದ ಉದ್ದೇಶವೇನು? ವಿಶ್ವೈಕ್ಯ ತಾನೆ! ಇದಾಗಬೇಕಾದರೆ ವಿಶ್ವಧರ್ಮ ಅತ್ಯಗತ್ಯ. ಅಂತಹ ವಿಶ್ವಧರ್ಮವನ್ನು ರೂಪಿಸಬೇಕಾದರೆ ಇಂತಹ ಸರ್ವಧರ್ಮ ಸಮ್ಮೇಳನ ಅತ್ಯಗತ್ಯ.

ಪ್ರತಿ ಸಮಾಜವು ಮತೀಯ ಧರ್ಮದಿಂದ ಮಾನವಧರ್ಮಕ್ಕೆ, ಪ್ರತಿ ಮಾನವನು ವ್ಯಕ್ತಿ ಧರ್ಮದಿಂದ ವಿಶ್ವಧರ್ಮಕ್ಕೆ ಏರಿ ನಿಲ್ಲಬೇಕಾಗಿದೆ. ಎಲ್ಲ ಜಾತಿ ಮತ ಪಂಥಗಳ ಧರ್ಮಗಳು ಸಮನ್ವಯಗೊಂಡು ಒಂದು ವಿಶ್ವಧರ್ಮ ರೂಪಿತವಾಗಬೇಕಾಗಿದೆ. ಆದರಿಂದ ವಿಶ್ವಕಲ್ಯಾಣ ವಿಶ್ವಶಾಂತಿ ಸಾಧಿತವಾಗಬೇಕಾಗಿದೆ.

"ವಿಶ್ವವೆ ಮನೆ, ವಿಶ್ವೇಶ್ವರನೆ ತಂದೆ, ವಿಶ್ವೇಶ್ವರಿಯೆ ತಾಯಿ
ವಿಶ್ವದ ಮಾನವರೆಲ್ಲ ಮಕ್ಕಳು ಕಂಡಯ್ಯ,
ಬಣ್ಣ-ಭಾಷೆ, ಧರ್ಮ-ಕರ್ಮ, ದಿಕ್ಕು-ದೇಶಗಳಾವಾದಡೇನು ?
ಮಾನವ್ಯ ಬಾಂಧವ್ಯವೇ ವಿಶ್ವೈಕ್ಯದ ಜೀವಾಳ ಕಂಡಯ್ಯ,
ಶ್ರೀನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ"

"ಅಹಿಂಸೆಯೇ ಜೀವನ. ಸತ್ಯವೇ ದರ್ಶನ
ಸೋದರತೆಯೇ ಶಿಕ್ಷಣ. ಇಂತಿವು ಮಾನವಲಕ್ಷಣವಪ್ಪಡೆ
ವಿಶ್ವದ ಆ ಶಾಂತಿಕಾವ್ಯಕ್ಕೆ ಬೇರೆ ಕಿಚ್ಚೇಕೆ ಹೇಳಾ ?
ಶ್ರೀ ನಿಡುಮಾಮಿಡಿ ಶ್ರೀಗಿರಿ ಸೂರ್ಯ ಸಿಂಹಾಸನಾಧೀಶ್ವರ!'

—ವಚನಮಂಜರಿ

ಇದು 'ವಿಶ್ವಧರ್ಮ'ದ ಸ್ವರೂಪದರ್ಶನ. ಸರ್ವ ಸಮ್ಮತ ಸತ್ಯದರ್ಶನ. ದಿವ್ಯ ಧರ್ಮದರ್ಶನ.

ಈ ಭಾವ ಬಲಿದು ಬರಬೇಕು, ಈ ಧರ್ಮ ಬೆಳೆದು ಸರ್ವರಲ್ಲಿ ಸಮನಿಸಬೇಕು. ನನ್ನ ಧರ್ಮ ಸರಿ, ನಿನ್ನ ಧರ್ಮ ಸರಿಯಲ್ಲ ಎಂಬ ಸಂಕುಚಿತ ಸ್ವಭಾವ ನೀಗಬೇಕು. ಭಿನ್ನಾಭಿಪ್ರಾಯ ತೊಲಗಬೇಕು. ಅಂತಃಕಲಹ ಅಳಿಯಬೇಕು. ಜನತೆ ಧರ್ಮ ವಿಧರ್ಮಗಳ ಕಚ್ಚಾಟದಿಂದ ಹುಚ್ಚಾಟದಿಂದ ಪಾರಾಗಬೇಕು. ಈ ಸಮ್ಮೇಳನ ಈ ದಿಸೆಯಲ್ಲಿ ನಾಡಿಗರಿಗೆ ಮಾರ್ಗದರ್ಶನ ಮಾಡಿಸುತ್ತದೆಯೆಂದು ನಾವು ಭಾವಿಸಿದ್ದೇವೆ.

ಮಂಜುನಾಥನು ಈ ಕ್ಷೇತ್ರಮಾತ್ರದ ಪ್ರಭುವಲ್ಲ. ಮರ್ತ್ಯಲೋಕದ ಪ್ರಭು ಮಾನವರ ಪ್ರಭು. ಆತನ ಕೃಪಾಮಯ ಹೃದಯ ಪ್ರೇರಣೆಯಿಂದ ಸರ್ವರಲ್ಲಿ ಸರ್ವ ಧರ್ಮ ಸಮನ್ವಯದ ಸೆಲೆ ಚಿಳಿಚಿಳಿಯಾಗಿ ಉದ್ಗಮವಾಗಬೇಕು, ಆಗುತ್ತದೆ.

ಇಂದಿನದು ಪ್ರಜಾರಾಜ್ಯ. ಭಾರತ ರಾಜ್ಯಾಂಗವು ಸರ್ವಧರ್ಮ ಸಮನ್ವಯವನ್ನು ಪರ್ಯಾಯವಾಗಿ ಪಾಲಿಸಿಕೊಂಡು ಬರುತ್ತಿದೆ. ಜಾತ್ಯತೀತ ರಾಜ್ಯಾಂಗವಾಗಿದೆ. ಜಾತ್ಯತೀತವೆಂದರೆ ಜಾತಿಗಳನ್ನು ನಾಶಗೊಳಿಸುವುದಲ್ಲ. ಬಿಡುವುದಲ್ಲ. ಎಲ್ಲ ಜಾತಿಮತ ಪಂಥಗಳನ್ನು ಸಮ ಸಮವಾಗಿ ಕಾಣುವುದು. ಚತುರ್ವರ್ಣೀಯರು ಸಮ ಹಕ್ಕುಬಾಧ್ಯತೆಯುಳ್ಳವರಾಗುವಂತೆ ಮಾಡುವುದು. ಮಾಡುತ್ತಿದೆ. ಇದೂ ಸಹ ಒಂದು ಬಗೆಯ ಸರ್ವಧರ್ಮ ಸಮನ್ವಯ. ಬರೀ ಭಾರತೀಯ ಧರ್ಮ ಸಮನ್ವಯ

ವಲ್ಲ. ಪರರಾಷ್ಟ್ರಗಳ ಪಾಶ್ಚಾತ್ಯ ದೇಶಗಳ ಮತಧರ್ಮಗಳ ಸಮನ್ವಯಕ್ಕೂ ಸಾಧನೆ ಸಾಗುತ್ತಿದೆ. ವಿಶ್ವಧರ್ಮ ರೂಪಿತವಾಗುತ್ತಿದೆ. ಈ ದಿಸೆಯಲ್ಲಿ ಶ್ರೀ ಗಾಂಧೀಜಿಯ್ಯವರ ಸತ್ಯ ಅಹಿಂಸೆಗಳು ಜಗತ್ತಿಗೆ ದಿವ್ಯ ಸಂದೇಶವನ್ನು ಬೀರುತ್ತವೆ. ಇದರ ಫಲವಾಗಿ ಇದೇ ದಿನ ಇಟಲಿ ದೇಶದ ರೋಮ್ ನಗರದಿಂದ ಕ್ರಿಶ್ಚಿಯನ್ನರ ಗುರುಗಳಾದ ಪೋಪರು ಮುಂಬಯಿಗೆ ಬಂದಿದ್ದಾರೆ. ಇವರ ನೇತೃತ್ವದಲ್ಲಿ ಮುಂಬಯಿಯಲ್ಲಿ ಈ ದಿನವೇ ಸರ್ವಧರ್ಮ ಸಮನ್ವಯ ಸಮ್ಮೇಳವೂ ಇದೆ. ಇಲ್ಲಿಯೂ ಜರುಗುತ್ತಿದೆ. ಇದೊಂದು ವಿಶೇಷವಾಗಿ ಗಮನಾರ್ಹವಾದುದು. ಪ್ರಗತಿ ಸೂಚಕವಾದುದು.

**ಭವಿಷ್ಯ ಜಗತ್ತಿನ ಮುಂಬೆಳಗು**

ಸರ್ವಧರ್ಮ ಸಮನ್ವಯವು ಜಗತ್ತಿನ ಮುಂಬೆಳಗು! ಕ್ರತುಶಕ್ತಿ, ವಿಶ್ವವಿಶಾಲ ದರ್ಶನ, ದಿವ್ಯ ಸಂದೇಶ, ಸರ್ವಧರ್ಮ ಸಮನ್ವಯವಾದಂದೇ ಉಂಟಾಗುತ್ತದೆ. ನವ ಮನ್ವಂತರ ಮಾನವ ಜನಾಂಗ ಶಾಂತಿ ಐಕ್ಯಗಳನ್ನು ಸಂಪಾದಿಸಬೇಕಾದರೆ ಸರ್ವಧರ್ಮ ಸಮನ್ವಯ ಅಗತ್ಯ.

ಧರ್ಮದ ರಕ್ಷಣೆಯೇ ನಮ್ಮ ರಕ್ಷಣೆ. ಧರ್ಮ ನಾಶವೇ ನಮ್ಮ ನಾಶ. ಗಾಂಧಿ ಯುಗದಲ್ಲಿ ಬಾಳುವ ನಾವು ಆದರ್ಶ ಪೂರ್ಣ ಜೀವನವನ್ನು ಸಾಗಿಸಬೇಕಾದರೆ ಸರ್ವ ಧರ್ಮಗಳ ಸಮನ್ವಯದೊಡನೆ ಅವನ್ನು ಸಮೃದ್ಧಿಗೊಳಿಸಬೇಕು. ಸರ್ವಧರ್ಮಗಳ ಸಾರವನ್ನೊಳಗೊಂಡ ಹೊಲಬಿನಲ್ಲಿ ಹೆಜ್ಜೆ ಹಾಕುವಂತಾಗಬೇಕು. ಧರ್ಮ ರಕ್ಷಣೆಯೆ ರಾಷ್ಟ್ರ ರಕ್ಷಣೆ.

ಶ್ರೂಯತಾಂ ಧರ್ಮ ಸರ್ವಸ್ವಂ
ಶೃತ್ವಾ ದೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಾನಿ
ಪರೇಷಾಂ ನ ಸಮಾಚರೇತ್ ॥

ಎಲ್ಲ ಧರ್ಮದ ತಿರುಳನ್ನು ಕೇಳುವುದು, ಕೇಳಿದಂತೆ ಆಚರಿಸುವುದು. ತನಗೆ ಬೇಡೆಂದೆನಿಸಿದುದನ್ನು ಪರರಿಗೆ ಮಾಡಬಾರದು. ಇದು ಧರ್ಮಸರ್ವಸ್ವ, ಇದರಿಂದುಂಟಾಗುತ್ತದೆ ಸರ್ವಧರ್ಮ ಸಮನ್ವಯ; ಸರ್ವಧರ್ಮಿಗಳ ಸಂಘಟನ.

ಸರ್ವಧರ್ಮ ಸಮನ್ವಯ ಬರೀ ಮಾತಿನಲ್ಲಿ ಆಗದು ; ಮಾಡುವಿಕೆಯಲ್ಲಿ ಮುಂದುವರಿಯಬೇಕು, ಅಂದರೆ ಆಚರಣೆಯಲ್ಲಿ ಬರಬೇಕು. ಮತ್ತು ತನ್ನಂತೆ ಇತರರನ್ನು ಬಗೆಯಬೇಕು ; ತನ್ನ ಮತದಂತೆ ಪರರ ಮತಗಳನ್ನು ಸಮಾಧಾನದಿಂದ ಸ್ನೇಹದಿಂದ ಮನ್ನಿಸಬೇಕು. ಎಂದು ಹೇಳುತ್ತದೆ ಈ ಉಕ್ತಿ:

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
ಬೌದ್ಧಾ 'ಬುದ್ಧ' ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।

ಅರ್ಹಶ್ಚೇತಿ ಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ವೋ ವಿದಧಾತಿ ವಾಂಛಿತಫಲಂ ಶ್ರೀ ಶಂಕರಸ್ಸದಾ ||

—ಬೇಲೂರು ಶಿಲಾಶಾಸನ

ಓಂ ಸಂಗಚ್ಛಧ್ವಂ ಸಂವದಧ್ವಂ ಸಂ ವೋ ಮನಾಂಸಿ ಜಾನತಾಮ್
ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ||

ಋಗ್ವೇದ, ೧೦—೧೯೧

ಸರ್ವಧರ್ಮ ಸಮರಸವನ್ನು ಬೀರುವ ಇಂತಹ ದಿವ್ಯ ವಾಣಿಗಳನ್ನು ಸ್ಮರಿಸಿ ನಮ್ಮ ಮಾತುಗಳಿಂದ ವಿರಮಿಸೋಣವಾಗುತ್ತದೆ.



# ವೀರಶೈವದ ವೇದ ಹಿನ್ನೆಲೆ

—ಶ್ರೀ ಎಂ. ಜಿ. ನಂಜುಂಡಾರಾಧ್ಯ

ವೀರಶೈವ ಧರ್ಮವು ಭಾರತದ ಜಾಗತಿಕ ಹಾಗೂ ಪ್ರಗತಿಪರ ಧರ್ಮಗಳಲ್ಲಿ ಒಂದು. ಇಂಥದೊಂದು ಧರ್ಮಕ್ಕೆ ಹಿನ್ನೆಲೆಯೇನು ಎಂದು ವಿಚಾರ ಮಾಡುವುದು ಸ್ವಾಭಾವಿಕ. ಭಾರತದ ಎಲ್ಲ ಧರ್ಮಗಳಿಗೂ ವೇದವೇ ಮೂಲ. "ವೇದೋಽಖಿಲೋಧರ್ಮಮೂಲಂ" ಎಂಬ ಮನು ವಾಕ್ಯ ಇದನ್ನು ಸಮರ್ಥಿಸುತ್ತದೆ.

(ಮನು ೧೧-೬)

ಭಾರತದಲ್ಲಿ ಚಿರಂತನ ಕಾಲದಿಂದ ಹರಿದು ಬಂದಿರುವ ಧಾರ್ಮಿಕ ಜ್ಞಾನ ಪ್ರವಾಹಕ್ಕೆ ಗಂಗೋತ್ರಿ ನಿಗಮಾಗಮಗಳು. ನಿಗಮ (ವೇದ) ಆಗಮ (ತಂತ್ರ)ಗಳು. ಇವೆರಡು ಮಾರ್ಗಗಳೂ ಶ್ರುತಿಗಳೆನಿಸಿವೆ. "ವೈದಿಕೀ ತಾಂತ್ರಿಕೀ ಚೈವ ದ್ವಿವಿಧಂ ಶ್ರುತಿ ಕೀರ್ತಿತಂ" (ಮನು II. ೧ ಕುಲ್ಲೂಕ ಭಟ್ಟ ವಿರಚಿತ ವ್ಯಾಖ್ಯಾನ) ವೇದಾಗಮಗಳು ಧರ್ಮದ ಒರತೆ (ಬುಗ್ಗೆ) ಎಂದರೂ ಸಲ್ಲುವುದು.

ವೇದ ಅಪೌರುಷೇಯ ವಾಣಿ ಎಂದರೆ ಯೋಗಸ್ಥರಾದ ಮಹರ್ಷಿಗಳ ಶುದ್ಧ ಚೈತನ್ಯದ ದಿವ್ಯಸ್ಫೂರ್ತಿಯಿಂದ ಹೊಳೆದ ಸತ್ಯವೇ ಶಬ್ದಮಯವಾಗಿ ಪ್ರಕಾಶಿಸಿ ವೇದವೆನಿಸಿತು. ಮಹರ್ಷಿಗಳು ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡವರು ಮಾತ್ರ. ಅವರು ವೇದ ಕರ್ತೃಗಳಲ್ಲ. ಮಂತ್ರದ್ರಷ್ಟಾರರು.

"ಯಸ್ಯ ನಿಶ್ವಸಿತಂ ವೇದಾಃ" ಎಂಬ ಉಕ್ತಿಯು "ವೇದಗಳು ಪರಮಾತ್ಮನ ಪ್ರಾಣದಂತೆ" ಇವೆ ಎಂದು ವೇದಗಳ ಪವಿತ್ರತೆಯನ್ನು ಸಾರುತ್ತದೆ. ಆಗಮಗಳು ಪರಮಾತ್ಮನ ಸ್ಪಷ್ಟವಾಣಿ ಎಂಬ ಮಾತು ಈ ಎರಡೂ ಮಾರ್ಗಗಳ ಪ್ರಾಮಾಣಿಕತೆಯನ್ನು ಸಾರುತ್ತದೆ.

ಮೇಲೆ ಕಂಡ ವೇದಾಗಮಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸುವವರು ವೈದಿಕರು ಅಥವಾ ಆಸ್ತಿಕರು. ಉಳಿದವರು ನಾಸ್ತಿಕರು ಎನಿಸಿದ್ದಾರೆ. 'ನಾಸ್ತಿ

ಕೋ ವೇದನಿಂದಕಃ' ಎಂಬ ಮನುವಾಕ್ಯ ಆಸ್ತಿಕ ನಾಸ್ತಿಕತ್ವಕ್ಕೆ ಸ್ಥೂಲ ಲಕ್ಷಣ ವನ್ನು ಸೂಚಿಸುತ್ತಾರೆ.

ವೇದಗಳ ಕಾಲ ಸೃಷ್ಟಿಯ ಆದಿಕಾಲವೆಂದೇ ಭಾರತೀಯರ ನಂಬುಗೆ ಏಕೆಂದರೆ ಅದು ಪರಮಾತ್ಮನಂತೆ ಅನಾದಿ. ವಾಚ್ಯ (ವಸ್ತು) ಮತ್ತು ವಾಚಕ (ಶಬ್ದ) ರೂಪವಾದ ಎರಡು ಪ್ರಪಂಚಗಳಿಗೂ ಭಗವಂತನೇ ಕರ್ತೃವಾದ್ದರಿಂದ ಜ್ಞಾನ ಮೂಲವಾದ ವೇದವೂ ಅನಾದಿ. ಆದರೆ ಪಾಶ್ಚಾತ್ಯ ಪಂಡಿತರು ಇವುಗಳ ಕಾಲವು ಕನಿಷ್ಠ ಪಕ್ಷ ಕ್ರಿ. ಪೂ. ಮೂರು ಸಾವಿರ ವರ್ಷಗಳಾದರೂ ಇರಬಹುದೆಂದು ಊಹಿಸುತ್ತಾರೆ. ಇದರಲ್ಲಿ ಅನೇಕ ಮತಭೇದಗಳಿವೆ.

ಪ್ರಾಕೃತಿಕ ಹಾಗೂ ಭೌತಿಕ ವಸ್ತುಗಳೆನಿಸಿರುವ ಪಂಚಭೂತಗಳ, ಸೂರ್ಯ ಚಂದ್ರಾದಿಗಳ ವರ್ಣನ ರೂಪವಾಗಿ ಸ್ತುತವಾಗಿರುವ ವೇದ ಸೂಕ್ತಗಳು ಜಗತ್ತತ್ತ್ವ ಮತ್ತು ಅಧ್ಯಾತ್ಮತತ್ತ್ವ ರಹಸ್ಯಗಳನ್ನು ಒಳಗೊಂಡಿವೆಯೆಂಬುದು ಭಾರತೀಯರ ಭಾವನೆ. ಪಾಶ್ಚಾತ್ಯರು ಮಾತ್ರ ಈ ಬಗ್ಗೆ ಭಿನ್ನಾಭಿಪ್ರಾಯಪಡುತ್ತಾರೆ. ಮಾನವನ ಜ್ಞಾನೋದಯದ ಪ್ರಾರಂಭಾವಸ್ಥೆಯೇ ವೇದ ಕಾಲವೆಂದು ಅವರ ನಂಬುಗೆ.

ಕಾಲನ ಅನಂತ ಪ್ರವಾಹದಲ್ಲಿ ಕಿವಿಯಿಂದ ಕಿವಿಗೆ, ಬಾಯಿಂದ ಬಾಯಿಗೆ ಗುರು ಮುಖದಿಂದ ಪ್ರಾರಂಭ ಮಾಡಿದ ಅಧ್ಯಯನ ಕಾಲಕ್ಕೆ ಇವುಗಳಿಗೆ 'ಶ್ರುತಿ' ಎಂದರೆ ಕಿವಿಯಿಂದ ಕೇಳಿ ಸಂಪಾದಿಸಿದವುಗಳು ಎಂಬ ಅನ್ವರ್ಥನಾಮವು ರೂಢ ವಾಗಿತ್ತು. ಇಂದಿಗೂ ವೇದಾಧ್ಯಯನವು ಶ್ರುತಿಪ್ರಧಾನವಾಗಿಯೇ ಇದೆ. ಇಂಥ ವೇದಗಳ ಅರ್ಥವು ದುರವಗಾಹವಾದಾಗ ವೇದಾಂಗಗಳು ರಚಿತವಾದವು. ಪ್ರಾಚೀನ ಮಹರ್ಷಿಗಳು ಶಿಕ್ಷಾ-ವ್ಯಾಕರಣ-ಛಂದಸ್ಸು-ನಿರುಕ್ತ-ಜ್ಯೋತಿಷ ಮತ್ತು ಕಲ್ಪ ಎಂಬ ಆರು ಅಂಗಗಳ ಸಹಾಯದಿಂದ ವೇದಾರ್ಥಗಳನ್ನು ಅರಿತು ಮುಂದೆ ಆವಿರ್ಭವಿಸಿದ ದರ್ಶನಗಳಿಗೆ ಕಾರಣರಾದರು. ವೇದ-ಬ್ರಾಹ್ಮಣ-ಅರಣ್ಯಕ ಮತ್ತು ಉಪನಿಷತ್ತು ಎಂಬ ಭಾಗಗಳಲ್ಲಿ ವೇದವಲ್ಲಿಯು ಹಬ್ಬಿ ಭಾರತೀಯರ ಎಲ್ಲ ಕಲೆ, ವಿಜ್ಞಾನ ಮತ್ತು ಅಧ್ಯಾತ್ಮಗಳಿಗೆ ಮೂಲವಾಯಿತು. ಸಂಗೀತ, ಶಿಲ್ಪ ಮುಂತಾದ ಎಲ್ಲ ಕಲೆಗಳೂ ವೇದ ಮೂಲತ್ವವನ್ನೇ ಸಾರುತ್ತವೆ

ಮೊದಮೊದಲು-ವೇದಾಗಮಗಳಲ್ಲಿ ಉಕ್ತವಾಗಿರುವ ಇಂದ್ರ-ಅಗ್ನಿ-ವರುಣ ಮುಂತಾದ ದೇವತೆಗಳ ಆರಾಧನವು ಕ್ರಮ ಕ್ರಮವಾಗಿ ಹಿಂದುಳಿದು ಮುಂದೆ ಬ್ರಹ್ಮ, ವಿಷ್ಣು ಮತ್ತು ರುದ್ರರು ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳ ಕಾರಣರೆನಿಸಿದರು. ಮನಸ್ಮ್ರದೆ "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ವಾಕ್ಯವನ್ನು ಅನುಸರಿಸಿ ಎಲ್ಲ ಹೆಸರುಗಳ ಮೂಲ ವಸ್ತು ಒಂದು ವಸ್ತುವೇ ಎಂಬ ಕಲ್ಪನವು ಉಪನಿಷತ್ತುಗಳ ಕಾಲಕ್ಕೆ ದೃಢವಾಯಿತು.

ಮುಂದೆ ಆಗಮ-ಪುರಾಣ-ಸ್ಮೃತಿ ಮುಂತಾದವುಗಳು ಕಾಲಕಾಲಕ್ಕೆ ಹೊರಟು ಪ್ರಾಚೀನ ಭಾರತೀಯರ ಲೌಕಿಕ ಹಾಗೂ ಆಧ್ಯಾತ್ಮಿಕ ವಿಚಾರ ಲಹರಿಯನ್ನು ರೂಪಿಸುವ ಅನಂತವಾದ ಸಾಹಿತ್ಯವು ಬೆಳೆದು ಇಂದಿನ ಭಾರತೀಯ ಧರ್ಮಗಳ ಅಥವಾ ಸಂಸ್ಕೃತಿಯ ಹಿನ್ನೆಲೆಯೆನಿಸಿದೆ. ವೇದಾರ್ಥ ವಿಚಾರಪರರಾದ ಮಹರ್ಷಿಗಳು, ಮುನಿಗಳು, ತಪಸ್ವಿಗಳು, ಯೋಗಿಗಳು ತಾವು ತಮ್ಮ ಅನುಪಮ ಸಾಧನೆಯಿಂದ ಸಾಕ್ಷಾತ್ಕರಿಸಿಕೊಂಡು ಅವುಗಳಿಗೆ ವೇದಾಗಮಗಳ ಪ್ರಾಮಾಣ್ಯವನ್ನು ನಿರೂಪಿಸಿದ ದರ್ಶನ ಸಾಹಿತ್ಯ ಇಂದಿನ ಮತಧರ್ಮಗಳ ಹಿನ್ನೆಲೆಯೆನಿಸಿತು.

ವೇದಧರ್ಮಾನುಷ್ಠಾನ ಕಾಲಕ್ಕೆ ಭಿನ್ನಾಭಿಪ್ರಾಯವನ್ನು ಹೊಂದಿದ ಚಾರ್ವಾಕ ಜೈನ, ಬೌದ್ಧ, ಸಾಂಖ್ಯಾದಿಗಳು ವೇದಗಳ ಹಿನ್ನೆಲೆಯನ್ನು ಬಿಟ್ಟು ಸ್ವತಂತ್ರ ದರ್ಶನಗಳ ಪ್ರವರ್ತಕರಾದರು. ಆ ದರ್ಶನಗಳೂ ನಾಸ್ತಿಕ ದರ್ಶನಗಳೆಂದು ಪ್ರಸಿದ್ಧವಾಗಿವೆ. ಇವುಗಳನ್ನೇ ಆಚಾರ್ಯ ರೇಣುಕರು ಹೀಗೆ ವಿಂಗಡಿಸಿದ್ದಾರೆ :—

> "ಸಾಂಖ್ಯಂ, ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ,"
> ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ,
> ವೇದಾನುಸರಣಾದೇಷಾಂಪ್ರಾಮಾಣ್ಯ ಮಿತಿ ನಿಶ್ಚಿತಂ"

ಪಂಚರಾತ್ರ ಮತ್ತು ಸಾಂಖ್ಯ-ಯೋಗದರ್ಶನಗಳು ವೇದ ಏಕದೇಶವನ್ನು ಮಾತ್ರ ಒಪ್ಪುತ್ತವೆ. ಆದರೆ ಶೈವವು ಮಾತ್ರ ವೇದಮಯ. ಶೈವ ತಂತ್ರವು "ಸಿದ್ಧಾಂತ" ಎಂಬ ಹೆಸರನ್ನು ಪಡೆದಿದೆ. ಇದು ಶಿವೋದಿತವಾದ್ದರಿಂದ ಮತ್ತು ಸರ್ವ ವೇದಾರ್ಥ ರೂಪವಾದ್ದರಿಂದ ಶೈವವು ವೇದದಂತೆ ಪ್ರಮಾಣ. ಆಗಮಗಳು ಅನೇಕ. ಅವುಗಳಲ್ಲಿ ಶೈವ, ಪಾಶುಪತ, ಸೋಮ, ಲಾಕುಳ ಎಂದು ಅನೇಕ ಪ್ರಭೇದಗಳಿವೆ. ಅಲ್ಲಿಯೂ ಶೈವವು ವಾಮ - ದಕ್ಷಿಣ - ಮಿಶ್ರ ಮತ್ತು ಸಿದ್ಧಾಂತವೆಂದು ನಾಲ್ಕು ವಿಧ. ಶಕ್ತಿಪ್ರಧಾನವಾದುದು ವಾಮ. ಭೈರವಾತ್ಮಕವಾದದ್ದು ದಕ್ಷಿಣ, ಸಪ್ತ ಮಾತೃ ಪ್ರಧಾನವಾದುದು ಮಿಶ್ರ. ವೇದ ಸಮ್ಮತವಾದದ್ದೇ ಸಿದ್ಧಾಂತ.

ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳಿಗೆ ಸಿದ್ಧಾಂತವೆಂದು ಹೆಸರು. ಅಂಥ ಸಿದ್ಧಾಂತಾಗಮದ ಉತ್ತರ ಭಾಗವೇ ವೀರಶೈವ.

ವೀ ಎಂದರೆ ಶಿವಜೀವೈಕ್ಯ ರೂಪವಾದ ವಿದ್ಯೆ. ರ ಎಂದರೆ ಅಂಥ ವಿದ್ಯೆಯಲ್ಲಿ ರಮಿಸುವವರು. ಇವರೇ ವೀರಶೈವರೆನಿಸುವರು. ಇವೇ ಮುಂತಾದ ನಿರುಕ್ತಿಗಳು ಭಾರತೀಯ ಮತಧರ್ಮಗಳ ಇತಿಹಾಸವನ್ನೇ ನಿರ್ದೇಶಿಸುತ್ತವೆ. ಮೇಲೆ ಹೇಳಿದ ವಿವರಣೆಯಿಂದ ವೀರಶೈವಕ್ಕೆ ಹಿನ್ನೆಲೆ ವೇದವೆಂಬುದು ಸ್ಪಷ್ಟವೇ ಆಗಿದೆ. ಇದೇ ವಿಷಯವನ್ನು ರೇಣುಕಾದ್ಯಾಚಾರ್ಯರು, ಬಸವಾದಿ ಪ್ರಮಥರು ತಮ್ಮ ಕೃತಿಗಳಲ್ಲಿ

ನಿರೂಪಿಸಿರುತ್ತಾರೆ. ಅದರ ಸಂಕ್ಷೇಪ ಸ್ವರೂಪವನ್ನು ನಿರೂಪಿಸುವುದೇ ಈ ಲೇಖನದ ಉದ್ದೇಶ.

ವೀರಶೈವ ಧರ್ಮಕ್ಕೆ ಮುಖ್ಯವಾದ ಲಕ್ಷಣ ಲಿಂಗಧಾರಣ. ಇಂಥ ಲಿಂಗಧಾರಣ ತತ್ತ್ವವನ್ನು ವೇದಾಗಮಾದಿಗಳು ಹೇಗೆ ಪ್ರತಿಪಾದಿಸಿವೆ ಎಂಬುದನ್ನು ವಿವೇಚಿಸೋಣ. ಭಗವತ್ಪಾದ ರೇಣುಕಾಚಾರ್ಯರು ಲಿಂಗತತ್ತ್ವವನ್ನು ಕುರಿತು ಹೀಗೆ ವರ್ಣಿಸಿದ್ದಾರೆ:

"ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಂ ।
ತದೇವ ಸರ್ವ ಭೂತಾನಾಮಂತಸ್ತ್ರಿಸ್ಥಾನಗೋಚರಂ ॥
ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ ।
ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ ॥"

(ಸಿ. ಶಿ. ೬-೩೫)

ಪ್ರಪಂಚಾತೀತವೂ ಅವ್ಯಯವೂ ಆದ ಪರಬ್ರಹ್ಮವೇ ಎಲ್ಲ ಪ್ರಾಣಿಗಳ ಮೂಲಾಧಾರ-ಹೃದಯ ಮತ್ತು ಭ್ರೂಮಧ್ಯ ಎಂಬ ಮೂರು ಸ್ಥಳಗಳಲ್ಲಿ ಜ್ಯೋತಿರ್ಲಿಂಗವೆನಿಸಿ ಬೆಳಗುತ್ತಿದೆ ಎಂದು ಅಪ್ಪಣೆ ಮಾಡಿದ್ದಾರೆ. ಅಂದರೆ ಹೃದಯ, ಭ್ರೂಮಧ್ಯಗಳಲ್ಲಿರುವ ಜ್ಯೋತಿರ್ಲಿಂಗವನ್ನು ಅನುಸಂಧಾನ ಮಾಡುವುದಕ್ಕೆ ಅಂತರ್ಲಿಂಗಧಾರಣವೆಂದು ಹೆಸರು. ಹೀಗೆ ಅಂತರ್ಲಿಂಗಾನುಸಂಧಾನಮಾಡುವ ಶಕ್ತಿಯುಳ್ಳ ಸ್ಥಿರ ಮನಸ್ಸುಳ್ಳ ಯೋಗಿಗಳಿಗೆ ಬಾಹ್ಯದಲ್ಲಿ ಅಭಿರುಚಿಯೇ ಉಂಟಾಗುವುದಿಲ್ಲವಂತೆ. ಈ ಮಾರ್ಗ ಎಷ್ಟು ಜನರಿಗೆ ಸಾಧ್ಯ. ಇದಕ್ಕಾಗಿಯೇ ಆಚಾರ್ಯರು ಬಾಹ್ಯಲಿಂಗಧಾರಣ ಕ್ರಮವನ್ನು ಬೋಧಿಸಿದರು.

"ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವವಾ ।
ಬಾಹ್ಯಂತು ಧಾರಯೇಲ್ಲಿಂಗಂ ತದ್ರೂಪಮಿತಿನಿಶ್ಚಯಾತ್ ॥"

ಅಂತರ್ಲಿಂಗಾನುಸಂಧಾನ ಮಾಡುವುದಕ್ಕೆ ಶಕ್ತಿಯಿರಲಿ ಅಥವಾ ಇಲ್ಲದಿರಲಿ ಅಂತರ್ಲಿಂಗದ ಪ್ರತೀಕವೆಂಬ ಭಾವನೆಯಿಂದ ಬಾಹ್ಯಲಿಂಗಧಾರಣವನ್ನು ಮಾಡಿಕೊಳ್ಳಲೇಬೇಕು ಎಂಬ ಮಾತು ಲಿಂಗಾನುಸಂಧಾನದ ಸೌಲಭ್ಯವನ್ನು ಸೂಚಿಸುತ್ತದೆ.

ಈ ವಿಷಯವನ್ನು ತೈತ್ತಿರೀಯೋಪನಿಷತ್ತು ಪ್ರಸಂಗವಾಗಿ ನಿರೂಪಿಸುತ್ತದೆ:

ದಹರಂ ವಿಪಾಪ್ಮಾಂ ಪರವೇಶ್ಮಭೂತಂ ಯತ್ಪುಂಡರೀಕಂ ।
ಪುರಮಧ್ಯ ಸಂಸ್ಥಾಂ । ತತ್ರಾಪಿ ದಹ್ರಂ ಗಗನಂ ವಿಶೋಕಂ
ತಸ್ಮಿನ್ಯದಂತಃ ತದುಪಾಸಿತವ್ಯಂ ॥

(ತೈ. ೪-೧೦-೨೪)

ಅತಿ ಸೂಕ್ಷ್ಮವೂ, ಪಾಪರಹಿತವೂ, ಪರಶಿವನ ವಾಸಸ್ಥಾನವೂ ಆದ ದೇಹದ

(ಮಧ್ಯದಲ್ಲಿರುವ ಎದೆ ಮತ್ತು ಹೊಟ್ಟೆ ಇವುಗಳ) ಹೃತ್ಕಮಲದಲ್ಲಿ ಯಾವ ಜ್ಯೋತಿ ಇದೆಯೋ ಅದನ್ನು ಉಪಾಸನೆ ಮಾಡತಕ್ಕದ್ದು.

ಮೇಲಿನ ಮಂತ್ರದಲ್ಲಿ ಹೃದಯ ಕಮಲದಲ್ಲಿ ಜ್ಯೋತಿರ್ಮಯವಾದ ವಸ್ತುವನ್ನು ಉಪಾಸಿಸಬೇಕು ಎಂದು ಹೇಳಿದೆ. ಆದರೆ ಅಂಥ ವಸ್ತು ಯಾವುದು ಎಂಬ ಆಕಾಂಕ್ಷೆ ಬಂದರೆ ಅದನ್ನು ಮುಂದಿನ ಮಂತ್ರದಲ್ಲಿ ಹೇಳಿದೆ :

ಯೋ ವೇದಾದೌಸ್ವರಃ ಪ್ರೋಕ್ತೋವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸಃ ಮಹೇಶ್ವರಃ ॥

(ತೈ. ೪. ೧೦-೨೪)

ಎಂಬಲ್ಲಿ ಅಂಥ ವಸ್ತುವು ವೇದವೇದಾಂತ ಪ್ರಸಿದ್ಧವಾದ "ಮಹೇಶ್ವರ" ನೆಂದು ಸೂಚಿಸಲಾಗಿದೆ. ಅಂಥ ಮಹೇಶ್ವರನ ಅಸಾಧಾರಣ ಸ್ವರೂಪವನ್ನು-

ಋತಂಸತ್ಯಂ ಪರಂ ಬ್ರಹ್ಮಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈನಮಃ ॥

(ತೈ. ಆ. ೭-೧೨)

ಎಂಬಲ್ಲಿ ಋತು, ಸತ್ಯ, ಪರ, ಕೃಷ್ಣಪಿಂಗಳ, ವಿರೂಪಾಕ್ಷ ಮುಂತಾದ ಪರಶಿವನಿಗೆ ಅಸಾಧಾರಣವೆನಿಸಿರುವ ಲಕ್ಷಣಗಳು ಉಕ್ತನಾಗಿರುವುದರಿಂದ ಅಂಥ ಲಕ್ಷಣಗಳುಳ್ಳ ಮಹೇಶ್ವರನನ್ನೇ ಹೃದಯ ಕಮಲದಲ್ಲಿ ಉಪಾಸಿಸಬೇಕಾದ ವಸ್ತುವು ಪರಶಿವ ಬ್ರಹ್ಮ ವೆಂದು ಹೇಳಲಾಗಿದೆ. ಇದನ್ನೇ ಅಂತರ್ಧಾರಣವೆಂದು ಹೇಳಲಾಗಿದೆ. ಅಂಥ ಬ್ರಹ್ಮದ ಸ್ವರೂಪವನ್ನು 'ಅಂಗುಷ್ಠಮಾತ್ರ' ನೆಂದು ನಿರ್ಧರಿಸಲಾಗಿದೆ. ಹೀಗೆ ಹೃದಯದಲ್ಲಿ ಅಂತರ್ಲಿಂಗ ಧಾರಣಮಾಡಬೇಕೆಂಬ ಅಂಶವನ್ನು ವಾಮನ ಪುರಾಣವು ಸಮರ್ಥಿಸಿದೆ. ಅಲ್ಲಿ ಹರಿಯು ತನ್ನ ಹೃದಯಕಮಲದಲ್ಲಿರುವ ಈಶ್ವರ ಲಿಂಗವನ್ನು ದೇವತೆಗಳಿಗೆ ತೋರಿಸಿದನು.

ತತೋಽವ್ಯಯಾತ್ಮಾಸಹರಿಃ ಸ್ವ ಹೃತ್ಪಂಕಜಶಾಯಿನಂ ।
ದರ್ಶಯಾಮಾಸ ದೇವಾನಾಂ ಮುರಾರಿರ್ಲಿಂಗಮೈಶ್ವರಂ ॥

ಎಂಬ ಮಾತು ವಿಷ್ಣು ಮೊದಲಾದ ದೇವತೆಗಳೂ ಅಂತರ್ಲಿಂಗಧಾರಣ ಮಾಡಿದ್ದ ರೆಂಬ ಅಂಶವನ್ನು ಸೂಚಿಸುತ್ತದೆ.

ಮುಂದೆ ಅದೇ ತೈತ್ತರೀಯವು "ನಿಧನ ಪತಯೇ ನಮಃ-ನಿಧನಪತಾಂತಿಕಾ ಯ ನಮಃ........ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂಸ್ಥಾಪಯತಿ ಪಾಣಿ ಮಂತ್ರಂ ಪವಿತ್ರಂ" (ತೈ. ಉ. ೪. ೧೬. ೩೩. ೩೪).

ಎಂಬ ಮಂತ್ರದಲ್ಲಿ ಬಾಹ್ಯಲಿಂಗಧಾರಣವನ್ನು ಸಮರ್ಥಿಸಿದೆ. ಇಲ್ಲಿ "ಪಾಣಿ ಮಂತ್ರಂ-ಪವಿತ್ರಂ" ಎಂಬ ಪದಕ್ಕೆ "ಪಾಣೌಮಂತ್ರಂ ಪಾಣಿಮಂತ್ರಂ" ಎಂಬ ವ್ಯುತ್ಪತ್ತಿಯಿಂದ ಇಷ್ಟಲಿಂಗರೂಪವಾದ ಲಿಂಗವನ್ನು ವಾಮಪಾಣಿಯಲ್ಲಿಟ್ಟು ಪೂಜಿಸ

ಬೇಕೆಂದು ಸಿದ್ಧಾಂತ ಮಾಡಲಾಗಿದೆ. ಇದೇ ಅರ್ಥವನ್ನು ಶ್ವೇತಾಶ್ವತರಶ್ರುತಿಯು,

"ಸರ್ವಾನನ ಶಿರೋಗ್ರೀವಃ ಸರ್ವಭೂತಗುಹಾಶಯಃ ।
ಸರ್ವವ್ಯಾಪೀಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ"

(೩-೧೧)

ಎಂಬ ಮಂತ್ರವು ಶಿವಭಕ್ತರ ಆನನ-ಶಿರಸ್ಸು-ಕಂಠಗಳಲ್ಲಿ ಇಷ್ಟಲಿಂಗ ರೂಪದಿಂದಲೂ, ಹೃದಯದಲ್ಲಿ ಪ್ರಾಣಲಿಂಗ ರೂಪದಿಂದಲೂ ಮತ್ತು ಸರ್ವವ್ಯಾಪಿಯಾಗಿ ಭಾವಲಿಂಗ ರೂಪದಿಂದಲೂ ಅಡಗಿರುತ್ತವೆ ಎಂದು ಲಿಂಗತ್ರಯಧಾರಣವನ್ನು ವಿಧಿಸುತ್ತದೆ. ಇದೇ ವಿಷಯವನ್ನು "ಜೀವಮುಖ್ಯ ಪ್ರಾಣಲಿಂಗಾನ್ನೇತಿಚೇನ್ನೋಪಾಸಾತ್ರೈವಿಧ್ಯಾ ದಾಶ್ರಿತತ್ವಾದಿಹ ತದ್ಯೋಗಾತ್" (ಬ್ರ. ಸೂ. ೧) ಎಂಬ ಬ್ರಹ್ಮಸೂತ್ರವು ಪ್ರತಿ ಪಾದಿಸಿದೆ. ಜೀವ ಮುಖ್ಯ ಪ್ರಾಣಲಿಂಗಾದಿಗಳ ತ್ರೈವಿಧ್ಯೋಪಾಸನವನ್ನು ಶ್ರೀಪತಿ ಪಂಡಿತರು ತಮ್ಮ ಸೂತ್ರ ಭಾಷ್ಯದಲ್ಲಿ ನಿರೂಪಿಸಿರುತ್ತಾರೆ.

ಸ್ಕಂದೇ—

ಮಾನಸೋಪಾಸನಂ ಕುರ್ಯಾದ್ಧೃದಯೇ ದಹರೋಽಪಿವಾ ।
ಪಂಚಾಕ್ಷರ್ಯಾ ಚ ಗಾಯತ್ರ್ಯಾ ರುದ್ರಸೂಕ್ತಾದಿಭಿಸ್ತಥಾ ॥
ವಾಚಿಕೋಪಾಸನಂ ಪ್ರೋಕ್ತಂ ಧೃತಲಿಂಗೇ ಶಿವಾತ್ಮಕೇ ।
ಪಾಣಿಪೀಠೇ ತಥಾ ವಹ್ನೌ ಸ್ಥಂಡಿಲೇವಾ ವಿಧಾನತಃ ॥
ಕಾಯಕೋಪಾಸನಂ ಕುರ್ಯಾತ್ ಶ್ರದ್ಧಾಭಕ್ತಿ ಸಮನ್ವಿತಃ ।
ಏವಂ ತ್ರಿಕರಣೈರ್ನಿತ್ಯಾ ನಿಶ್ಶಿವೋಪಾಸನಂ ದ್ವಿಜಃ ॥
ಕುರ್ವನ್ಮುಕ್ತಿಮವಾಪ್ನೋತಿ ವೈದಿಕೋ ನಾನ್ಯಹೇತುನಾ ॥

ಎಂಬ ಉಪಬೃಂಹಣ ಮಂತ್ರವು ಮನಸ್ಸು ಮಾತು ಮತ್ತು ಶರೀರತ್ರಿತಯದಲ್ಲಿಯೂ ಇಷ್ಟ-ಪ್ರಾಣ-ಭಾವಲಿಂಗಾರ್ಚನವನ್ನು ಮಾಡಬೇಕೆಂದು ಹೇಳಿದೆ.

ಬಾಹ್ಯ ಲಿಂಗಧಾರಣವನ್ನು ಕೇವಲ ಮಾನವರು ಮಾತ್ರ ಮಾಡಿಲ್ಲ. ಬ್ರಹ ವಿಷ್ಣು ಮೊದಲಾದವರೆಲ್ಲರೂ ಲಿಂಗಧಾರಣ ಮಾಡಿದ್ದರು.

ಬ್ರಹ್ಮವಿಷ್ಣ್ವಾದಿ ದೇವಾಶ್ಚ ಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

(ಲಿಂಗಪುರಾಣ)

ಉರಸ್ಥಲೇ ಹರಿರ್ಲಿಂಗಂ ಧೃತ್ವಾಮೂರ್ಧ್ನಿ ಪಿತಾಮಹಃ ।
ಲಿಂಗಸ್ಥಾಂ ಮಾಂ ಸಮಾರಾಧ್ಯ ಸ್ವಂ ಸ್ವಪದಮವಾಪತುಃ ॥

—ಸ್ಕಂದೇ

—ಎಂದು ಶ್ರೀಪತಿ ಪಂಡಿತರು ದೇವತೆಗಳು ಲಿಂಗಧಾರಣ ಮಾಡಿದ್ದರೆಂಬುದನ್ನು ನಿರ್ದೇಶಿಸಿ—"ಲೋಕೇ ಅನಂತ ಪದ್ಮನಾಭ ವಿಠಲೇಶ್ವರಾದಿಕ್ಷೇತ್ರೇಷು ನಾರಾಯಣ ಸ್ಯಾಪಿ ಪಾಣಿ ಶಿರೋದೇಶೇಷು ಪ್ರತ್ಯಕ್ಷ ಶಿವಲಿಂಗಧಾರಣದರ್ಶನಾಚ್ಚ ನ ಸಂದೇಹ ಕಲಂಕಃ"

-ಎಂದು ಇಂದಿಗೂ ಅನಂತಪದ್ಮನಾಭ, ವಿಠಲ ಮುಂತಾದಕ್ಷೇತ್ರಗಳಲ್ಲಿ ನಾರಾಯಣ ವಿಗ್ರಹಗಳ ಪಾಣಿ ಮತ್ತು ಶಿರಃ ಪ್ರದೇಶದಲ್ಲಿ ಲಿಂಗಧಾರಣವಿರುವುದನ್ನು ಕಾಣುತ್ತೇವೆ ಎಂದು ಘೋಷಿಸಿರುತ್ತದೆ.

ನೀಲಕಂಠ ಶಿವಾಚಾರ್ಯರು,

"ಆತ್ಮಾಯನಮ ಆರಭ್ಯಲಿಂಗ ಶಬ್ದ ಪರಂಪರಾ ।
ಪ್ರಸಿದ್ಧ ತೈತ್ತಿರೀಯೋಪನಿಷದ್ಯೇವ ಪ್ರದೃಶ್ಯತೇ ॥ ೬೨ ॥
(ಕ್ರಿಯಾಸಾರ)

ಎಂಬಲ್ಲಿ ಮೇಲೆ ಹೇಳಿದ ವೇದ ಮಂತ್ರಗಳು ಲಿಂಗಧಾರಣವನ್ನು ವಿಧಿಸಿರುವ ಅಂಶವನ್ನು ಉಲ್ಲೇಖಿಸಿದ್ದಾರೆ.

ಈ ಮಧ್ಯೆ ಶಾಸ್ತ್ರಕಾರರು ವೇದ ಮಂತ್ರಗಳಿಗೆ ಮನಸ್ಸಿಗೆ ಬಂದಂತೆ ವ್ಯಾಖ್ಯಾನ ಮಾಡಿ ತಮ್ಮ ಇಷ್ಟಾರ್ಥವನ್ನು ಸಾಧಿಸುವ ಮನೋಭಾವವನ್ನು ನಿರಾಕರಿಸಿದ್ದರೆ ಆದಕ್ಕಾಗಿಯೇ ಮಹಾಭಾರತದಲ್ಲಿ ಹೀಗೆ ಹೇಳಿದೆ :

ಬಿಭೇತ್ಯಲ್ಪ ಶ್ರುತಾದ್ವೇದೋ ಮಾಮಯಂ ಪ್ರತರೇದಿತಿ ।
ಇತಿಹಾಸ ಪುರಾಣಾಭ್ಯಾಂ ವೇದಾರ್ಥ ಮುಪಬೃಂಹಯೇತ್ ॥
ವೇದಾರ್ಥೋಽಯಂ ಸ್ವಯಂ ಜ್ಞಾತಸ್ತತ್ರಾಜ್ಞಾನಂ ಭವೇದಪಿ ।
ಋಷಿಭಿರ್ನಿಶ್ಚಿತೇಮಾರ್ಗೇಕಾ ಶಂಕಾ ಸ್ಯಾತ್ ಮಹಾತ್ಮನಾಮ್ ॥

ಅಲ್ಪಶ್ರುತನನ್ನು ಕಂಡರೆ ವೇದಕ್ಕೆ ತುಂಬಾ ಹೆದರಿಕೆ. ಏಕೆಂದರೆ ಅವನು ತನ್ನನ್ನು ಎಲ್ಲಿ ಅಪಾರ್ಥ ಮಾಡಿ ಮೋಸಗೊಳಿಸುವನೋ ಎಂದು. ಇತಿಹಾಸ ಪುರಾಣಗಳಿಂದ ವೇದಾರ್ಥವನ್ನು ನಿರ್ಣಯಿಸಬೇಕು. ವೇದಾರ್ಥವನ್ನು ನಾವೇ ಸ್ವಕಪೋಲ ಕಲ್ಪಿತವಾದ ವಿವರಣೆಗಳಿಂದ ವಿಸ್ತರಿಸಬಾರದು. ಏಕೆಂದರೆ ಹಾಗೆ ಮಾಡಿದಲ್ಲಿ ಎಲ್ಲಿಯಾದರೂ ದೋಷ ಬಂದೀತು. ಅದಕ್ಕಾಗಿ ಮಹರ್ಷಿಗಳು ಇತಿಹಾಸ ಶ್ರವಣಾದಿಗಳಲ್ಲಿ ವೇದ ಮಂತ್ರಗಳ ಅರ್ಥ ನಿರ್ಣಯವನ್ನು ಮಾಡಿರುವುದನ್ನು ಗಮನಿಸಿ ನಾವು ವೇದಾರ್ಥ ನಿರ್ಣಯ ಮಾಡಬೇಕು.

ಆದುದರಿಂದ ಮೇಲೆ ಹೇಳಿದ ವೇದ ಮಂತ್ರಗಳಿಗೆ ಲಿಂಗಧಾರಣಪರವಾಗಿ ಅರ್ಥಮಾಡಿರುವ ವಿಷಯದಲ್ಲಿ ಉಪಬೃಂಹಣ ವಾಕ್ಯಗಳು ಪುರಾಣಗಳಲ್ಲಿ ಹೀಗೆ ಉಕ್ತವಾಗಿವೆ :

ಲಿಂಗಪುರಾಣ ಉತ್ತರಭಾಗದಲ್ಲಿ—

ಯಜುರಪ್ಯಾಹ ಸರ್ವಂ ವೈ ಲಿಂಗಂ ಸ್ಥಾಪಯತೀತಿ ಚ ।
ತಸ್ಮದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ ಮಂತ್ರತಃ ॥
-೨೧ ಅಧ್ಯಾಯ.

ಸ್ಕಾಂದ ಶಾಂಕರ ಸಂಹಿತೆ—

ಯೋ ಹಸ್ತ ಪೀಠೇ ನಿಜಮಿಷ್ಟಲಿಂಗಂ
ವಿನ್ಯಸ್ಯ ತಲ್ಲೀನ ಮನಃ ಪ್ರಚಾರಃ ।
ಬಾಹ್ಯಕ್ರಿಯಾಸಂಕುಲ ನಿಸ್ಪೃಹಾತ್ಮಾ
ಸ ಪೂಜಯತ್ಯಂಗ ಸ ವೀರಶೈವಃ ॥

ಯಾವನು ವಾಮ ಹಸ್ತಪೀಠದಲ್ಲಿ ಇಷ್ಟಲಿಂಗವನ್ನಿಟ್ಟು ಪೂಜಿಸುವನೋ ಅವನೇ ವೀರಶೈವನು.

ಅದೇ ತೈತ್ತಿರೀಯದ ಮತ್ತೊಂದು ಶ್ರುತಿ—

ಓಂ ನಮೋ ಬ್ರಹ್ಮಣೇ ಧಾರಣಂ ಮೇ ಅಸ್ತ್ವನಿರಾಕರಣಂ
ಧಾರಯಿತಾ ಭೂಯಾಸಂ ಕರ್ಣಯೋಃ ಶ್ರುತಂ
ಮಾಚೋಢ್ವಂ ಮಮಾ ಮುಷ್ಯ ಓಂ ॥

ಎಲೈ ಗುರುವೆ, ಬ್ರಹ್ಮಸ್ವರೂಪನಾದವನಿಗೆ ನಮಸ್ಕಾರ. ಜಾಗ್ರದಾದಿ ಅವಸ್ಥೆಗಳಲ್ಲಿಯೂ ನಿನ್ನನ್ನು ಅನಾದರಣೆ ಮಾಡದೆ ನಿನ್ನನ್ನು ಇಷ್ಟಲಿಂಗ ರೂಪದಿಂದ ಧರಿಸಿ ಲಿಂಗಧಾರಿಯಾಗುವೆನು. ನಿನ್ನ ಪಂಚಾಕ್ಷರ ಮಂತ್ರವು ನನ್ನ ಶ್ರವಣ ಗೋಚರವಾಗಲಿ. ಪ್ರಣವಸ್ವರೂಪವಾದ ಆ ಲಿಂಗವು ನನ್ನ ಶರೀರದಿಂದ ವಿಯೋಗವಾಗದಿರಲಿ.

ತೈತ್ತಿರೀಯದಲ್ಲಿ—

ಯಶ್ಛಂದಸಾಂ ವೃಷಭೋ ವಿಶ್ವರೂಪಃ ಛಂದೋಭ್ಯೋಧ್ಯ
ಮೃತಾತ್ಸಂಬಭೂವ ಸಮೇಂದ್ರೋಮೇಧಯಾಸ್ತೃಣೋತು ।
ಅಮೃತಸ್ಯ ದೇವಧಾರಣೋ ಭೂಯಾಸಂ ।
ಶರೀರಂ ಮೇ ವಿಚರ್ಷಣಂ ಜಿಹ್ವಾ ಮೇ ಮಧುಮತ್ತಮಾ ।
ಕರ್ಣಾಭ್ಯಾಂ ಭೂರಿವಿಶ್ರುತಂ ಬ್ರಹ್ಮಣಃ ಕೋಶೋಽಸಿ
ಮೇಧಯಾ ಪಿಹಿತಃ ಶ್ರುತಂಮೇ ಗೋಪಾಯ. (ಪ್ರ. ೧.ಅ.೪.)

"ಸಮಸ್ತ ವಿದ್ಯೆಗಳಿಗೆ ಕರ್ತನೂ ಪ್ರತಿಪಾದ್ಯನಾದವನೂ, ವಿಶ್ವರೂಪನೂ ಆಗಿರುವ ಸ್ವಾಮಿಯು ಮುಕ್ತಿಗೋಸ್ಕರ ವೇದಪ್ರತಿಪಾದ್ಯನಾಗಿದ್ದಾನೆ. ಆ ಪರಶಿವನು ನನ್ನನ್ನು ಇಷ್ಟಲಿಂಗ ಧರಿಸುವಂತೆ ಪ್ರೇರೇಪಿಸಲಿ. ಮೋಕ್ಷಕ್ಕಾಗಿ ನಾನು (ದೇವ) ಲಿಂಗಧಾರಣವುಳ್ಳವನಾಗುವೆನು. ಇದರಿಂದ ನನ್ನ ಶರೀರವು ಪಾಪರಹಿತವಾಗಲಿ. ನನ್ನ ನಾಲಗೆಯು ಮಧುರವಾದ ಮಾತುಗಳನ್ನಾಡುವಂತಾಗಲಿ. ನನ್ನ ಕಿವಿಗಳಿಂದ ಶಿವಜ್ಞಾನ ಯೋಗ್ಯ ಶಾಸ್ತ್ರಶ್ರವಣವಾಗಲಿ. ಖಡ್ಗಕ್ಕೆ ಒರೆಯಂತೆ ಆ ಪರಶಿವ ಬ್ರಹ್ಮನಿಗೆ ಕೋಶದಂತಿರುವ ಲಿಂಗರೂಪನಾದ ನೀನು ನನ್ನಲ್ಲಿ ಶ್ರದ್ಧಾಭಕ್ತಿಗಳನ್ನುಂಟುಮಾಡಿ ಇಷ್ಟಲಿಂಗವು ನನ್ನ ದೇಹದಿಂದ ಅಗಲದಂತೆ ರಕ್ಷಿಸು."

ಮೇಲೆ ಕಂಡ ಮಂತ್ರವು ಶ್ರೀಕರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ವಿಷಯ ವಾಕ್ಯವಾಗಿ ಸ್ವೀಕೃತವಾಗಿದೆ. ನೀಲಕಂಠ ಶಿವಾಚಾರ್ಯರೂ ಸಹ "ಅಮೃತಸ್ಯೇತಿ ವಾಕ್ಯೇನ ನಿಶ್ಚಿತಂ ಲಿಂಗಧಾರಣಂ" ಎಂಬ ಮಾತಿನಿಂದ ಇದೇ ಮಂತ್ರಾರ್ಥವನ್ನು ಪ್ರತಿಪಾದಿಸಿದ್ದಾರೆ.

ಯಾತೇ ರುದ್ರ ಶಿವಾತನೂರಘೋರಾ ಪಾಪ್ರಕಾಶಿನೀ ।
ತಯಾನಸ್ತನುವಾ ಶಂತಮಯಾಗಿರಿ ಶಂತಾಭಿಚಾಕಶೀಹಿ ॥

(ಯಜು, ಶ್ರೀರುದ್ರ)

ದುಃಖನಾಶಕನಾದ ಎಲೈ ರುದ್ರನೇ, ನಿನ್ನ ಶಾಂತವೂ ಮಂಗಲಕರವೂ ಆದ ಯಾವ ಲಿಂಗರೂಪವಾದ ಶರೀರವು ಪಾಪರಹಿತವಾದ ಭಕ್ತರ ಶರೀರಗಳಲ್ಲಿ ಪ್ರಕಾಶಿಸುತ್ತಿದೆಯೋ ಅಂಥ ಸುಖಪ್ರದವೂ ಸೂಕ್ಷ್ಮವೂ ಆದ ಆ ಲಿಂಗರೂಪದಿಂದ ನಮ್ಮ ದೇಹದಲ್ಲಿ ಪ್ರಕಾಶಿಸು.

ಇದೇ ಮಂತ್ರವು ಲಿಂಗಪುರಾಣದಲ್ಲಿ ಹೀಗೆ ಉಪಬೃಂಹಿತವಾಗಿದೆ—

ಯಾತೇ ಶಿವಾ ತನೂ ರುದ್ರ ಲಿಂಗಮಂಗಲದಾಯಕಂ ।
ಲಿಂಗಂ ಶಿವಾತನೂಃಪ್ರೋಕ್ತಾ ಮೂರ್ತಿ ಘೋರಾತನುಸ್ಮೃತಾ ॥
ಅಪಾಪೇಷು ಚ ಭಕ್ತೇಷು ತಯೋರ್ಮಧ್ಯೇ ಶಿವಾತನೂಃ ।
ಕಾಶತೇ ಪರಮೇಶಸ್ಯಾ ಶಿಷ್ಟಾಸ್ತೇ ಲಿಂಗಧಾರಣಃ ॥
ತಯಾ ಶಂತಮಯಾ ಸೌಖ್ಯಕಾರಿಣ್ಯಾ ಲಿಂಗರೂಪಯಾ
ಅಭಿಚಾಕಶೀಹಿ ತನುವಾ ಗಿರಿಶಂ ತಾಭಿರಕ್ಷತೇ ॥

ಮೇಲಿನ ಅವತರಣದಿಂದ ತೈತ್ತಿರೀಯೋಪನಿಷತ್ತು, ಶ್ವೇತಾಶ್ವತರೋಪನಿಷತ್ತು ಮತ್ತು ಯಜುರ್ವೇದ ಸಂಹಿತೆಗಳಲ್ಲಿ ಉಕ್ತವಾಗಿರುವ ಮಂತ್ರಗಳು ವೀರಶೈವಕ್ಕೆ ಹೇಗೆ ಹಿನ್ನೆಲೆಯಾಗಿವೆಯೆಂಬುದನ್ನು ಕಾಣಬಹುದು.

ಋಗ್ವೇದದಲ್ಲಿನ—

"ಪವಿತ್ರಂತೇ" ಎಂಬ ಮಂತ್ರವು ಲಿಂಗಧಾರಣ ಪರವಾಗಿಯೇ ಇದೆ ಎಂಬುದನ್ನು ಮುಂದಿನ ವಿವರಣವು ವಿಸ್ತರಿಸುತ್ತದೆ.

"ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ
ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂ ರ್ನತದಾಮೋ ಅಶ್ನುತೇ
ಶ್ರುತಾಸ ಇದ್ವಹಂತ ಸ್ತತ್ಸಮಾಶತ ॥

(ಋ. ೭-೩-೮)

"ಶರೀರದಲ್ಲಿ ಲಿಂಗರೂಪದಿಂದ ಸನ್ನಿಹಿತನಾಗಿರು ಎಲೈ ಪರಶಿವನೆ, ನಿನ್ನ ಬ್ರಹ್ಮವೆಂದೆನಿಸಿರುವ ಲಿಂಗವು ಪವಿತ್ರ. ಆದ್ದರಿಂದಲೇ ಅದು ಶುಚಿ ಅಶುಚಿ ಕಾಲ ಗಳಲ್ಲಿ ಧರಿಸಲ್ಪಡುತ್ತದೆ. ಅದು ಭಕ್ತರ ಸ್ಥೂಲ ಸೂಕ್ಷ್ಮ ಮತ್ತು ಕಾರಣ ಶರೀರ

ಗಳಲ್ಲಿ ಇಷ್ಟ ಪ್ರಾಣ ಮತ್ತು ಭಾವ ಲಿಂಗರೂಪದಿಂದ ವ್ಯಾಪಿಸಿರುತ್ತದೆ. ಆಣವಾದಿ ಮಲವಿನಾಶಕವಾದ ಶಿವದೀಕ್ಷೆಯನ್ನು ಪಡೆಯದನನು ಪರಿಶುದ್ಧಾಂತಃಕರಣನಲ್ಲ ವಾದುದರಿಂದ ಅಂಥವನು ಆ ಪರಶಿವ ಲಿಂಗವನ್ನು ಪಡೆಯಲಾರನು. ಶಿವಜ್ಞಾನಿಗಳು ಆ ಶಿವಲಿಂಗವನ್ನು ಹೊಂದುವರು.

ಈ ಮಂತ್ರಾರ್ಥವನ್ನು ಭಗವತ್ಪಾದ ರೇಣುಕಾಚಾರ್ಯರು ಹೀಗೆ ಹೇಳಿದ್ದಾರೆ—

ಋಗಿತ್ಯಾಹ ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಂ ॥
ಬ್ರಹ್ಮೇತಿಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ।
ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ ॥
ಅತಪ್ತತನುರಜ್ಞೋಽವೈ ಆಮಸ್ಸಂಸ್ಕಾರ ವರ್ಜಿತಃ ।
ದೀಕ್ಷಯಾ ರಹಿತಃ ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಂ ॥"

(ಸಿ. ಶಿ. ಪ. ೬) ಇತ್ಯಾದಿ.

ಅಯಂಮೇಹಸ್ತೋ ಭಗವಾನಯಂಮೇ ಭಗವತ್ತರಃ ।
ಅಯಂಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥
ಅಯಂಮಾತಾ ಅಯಂಪಿತಾ ಅಯಂಜೀವಾತುರಾಗಮಾತ್ ।
ಇದಂ ತವಪ್ರಸರ್ಪಣಂ ಸುಬಂಧವೇ ಹಿ ನಿರೀಹಿ ॥

(ಋ ೮-೧-೨೫)

ಲಿಂಗರೂಪನಾದ ಸದಾಶಿವನು ನನ್ನ ಹಸ್ತವನ್ನು ಹೊಂದಿರುವನು. ಈ ಹಸ್ತ ದಲ್ಲಿರುವ ಶಿವಲಿಂಗಮೂರ್ತಿಯೇ ನನಗೆ ಇಷ್ಟಾರ್ಥವನ್ನು ಕೊಡುವವನು. ಈ ಶಿವಲಿಂಗ ಮೂರ್ತಿಯೇ ನನ್ನ ಭವರೋಗಗಳಿಗೆ ವೈದ್ಯನಾಗಿದ್ದಾನೆ. ಕಲ್ಯಾಣ ಕಾರಿಯಾದವನು ಇವನೇ. ನನ್ನ ಹಸ್ತದಲ್ಲಿರುವ ಈ ಶಿವಲಿಂಗಮೂರ್ತಿಯು ತಾಯಿಯಂತೆ ವಾತ್ಸಲ್ಯಮಯನೂ, ತಂದೆಯಂತೆ ರಕ್ಷಕನೂ, ಸಂಜೀವಿನಿಯಂತೆ ಪ್ರಾಣರಕ್ಷಕನೂ ಆಗಿರುವನು. ಎಲೈನಿರ್ವ್ಯಾಜ ಬಾಂಧವನೇ, ಇಲ್ಲಿ ಬಾ. ಈ ಹಸ್ತವೇ ನಿನಗೆ ವಿಹಾರಸ್ಥಾನ. ಇಲ್ಲಿನ ಇಷ್ಟಲಿಂಗದಲ್ಲಿ ಯಾವಾಗಲೂ ನೆಲೆಸಿರು.

ಮೇಲೆ ಕಂಡ ಶ್ರುತಿಗಳು ಲಿಂಗಧಾರಣವನ್ನು ವಿಧಿಸಿರುವ ವಿಷಯದಲ್ಲಿ ವೀರಶೈವ ಆಚಾರ್ಯರು ವಿಸ್ತಾರವಾದ ಭಾಷ್ಯಾದಿಗಳನ್ನು ಬರೆದಿದ್ದಾರೆ.

ತಸ್ಯಾಭಿಧ್ಯಾನಾ ದ್ಯೋಜನಾತ್ತೋತ್ತ್ವ ಭಾವಾದ್ಭೂಯಶ್ಚಾಂತೇ ವಿಶ್ವಮಯಾ ನಿವೃತ್ತಿಃ (ಶ್ವೇ. ೧-೧೦)

ಆ ಪರಶಿವನ ಅಭಿಧ್ಯಾನ-ಅಂತರನುಸಂಧಾನ, ಯೋಜನ- ಸಂಯೋಗ ಅರ್ಥಾತ್ ಬಾಹ್ಯಧಾರಣ,ತತ್ತ್ವಭಾವ-ತತ್ತ್ವಸಾಕ್ಷಾತ್ಕಾರಗಳಿಂದ ಎಲ್ಲ ಅಜ್ಞಾನವೂ ತೊಲಗುತ್ತದೆ.

ಸಾಮವೇದದಲ್ಲಿ—

"ವಿಶ್ವೇದೇವಂ ವಿದುಷಾ ವೇದಿತವ್ಯಂ ಶೈವಂಲಿಂಗಂ ಪಧೃತಂ ಸರ್ವದೇವೈಃ ।
ತದಾತ್ಮ ಸಿದ್ಧ್ಯೋವರ್ಯನಿಭಿರ್ಮುಕ್ತಿಕಾಮ್ಯೈಃ ಕಂಠೇ ಹಸ್ತೇ ಮಸ್ತಕೇ ವಾ ಭವತಂ ಧಾರ್ಯಂ ।

ಜ್ಞಾನಿಯಾದವನು ವಿಶ್ವಾತ್ಮನಾದವನನ್ನು ತಿಳಿಯಬೇಕು. ಎಲ್ಲ ದೇವತೆಗಳೂ ಶಿವಲಿಂಗವನ್ನು ಧರಿಸಿದ್ದಾರೆ. ಆತ್ಮಸಿದ್ಧಿಗಾಗಿ ಮುಕ್ತಿಕಾಮರಾದ ಮುನಿಗಳು ಕಂಠ, ಹಸ್ತ ಮತ್ತು ಮಸ್ತಕದಲ್ಲಿಯಾಗಲಿ ಲಿಂಗವನ್ನು ಧರಿಸಬೇಕು.

"ಯೇಹವಾ ಅಮೃತಂ ಸತ್ಯೇನ ಧೀರಾಃ ಸುಕೃತಸ್ಯಾ
ಲೋಕೇ ಗ್ರೀವಾಯಾಂ ಬಧ್ವಾ । ಅಪಿ ಕಕ್ಷ ಆಸನಿ ।
ಅತಿಪಾಪ್ಮಾನಮತಿಮೃತ್ಯುಂ ತರಂತಿ"

—ಪೈಂಗಾಯನ ಶ್ರುತಿ.

ಯಾವಧೀರರು ಮಾನವ ಪ್ರಪಂಚದಲ್ಲಿ ಶಮದಮಾದಿ ನಿಯಮದಿಂದ ಅಮೃತ ರೂಪವಾದ ಶಿವಲಿಂಗವನ್ನು ಕಂಠದಲ್ಲಾಗಲಿ, ಕಂಕುಳಲ್ಲಾಗಲಿ, ಮುಖದಲ್ಲಾಗಲಿ ಧರಿಸಿರುತ್ತಾರೆಯೋ ಅಂಥವರು ಪಾಪವನ್ನು ಮೃತ್ಯುವನ್ನು ದಾಟುವರು.

ಈ ಮಂತ್ರದಲ್ಲಿರುವ 'ಅಮೃತ' ಶಬ್ದಕ್ಕೆ ಲಿಂಗವೆಂಬ ಅರ್ಥವು ವೈದಿಕ ನಿಘಂಟುವಿನಲ್ಲಿ ಉಕ್ತವಾಗಿದೆ.

"ಬ್ರಹ್ಮ ಪ್ರಜನನಂ ಕಾಟಂ ಪವಿತ್ರಮಮೃತಂ ಸ್ರಪಃ ।
ಪ್ರಸ್ತರೋಜನಿಮೋ ಪ್ರಾಣೋದೇವೋ ಲಿಂಗಂ ತಥೈವಚ ।
ಪರ್ಯಾಯ ವಾಚಕಾಹ್ಯೇತೇ ಲಿಂಗಸ್ಯ ಪರಮಾತ್ಮನಃ॥
"ಯಜ್ಞೋಪವೀತಂ ಪರಮಂ ಪವಿತ್ರಂ
ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ ।
ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ
ಯಜ್ಞೋಪವೀತಂ ಬಲಮಸ್ತುತೇಜಃ ॥

(ಋಗ್ವೇದ)

ಯಜ್ಞೋಪವೀತಂ–"ಯಜ್ಞೋವೈವಿಷ್ಣುಃ" ಎಂಬ ವ್ಯುತ್ಪತ್ತಿಯಿಂದ ಲಿಂಗದ ಪೀಠವೇ ವಿಷ್ಣು. ಹಾಗೆ ಪೀಠಾಕಾರವನ್ನು ಹೊಂದಿರುವ ವಿಷ್ಣುವಿನ ಉಪ ಸಮೀಪ ದಲ್ಲಿ ವೀತಂ–ಆವೃತವಾದ ಲಿಂಗವು (ವಿಷ್ಣುವು ಶಕ್ತಿ ಸ್ವರೂಪನಾದುದರಿಂದ "ಪೀಠಿಕಾ ಪರಮಾಶಕ್ತಿಃ" ಎಂಬ ಉಕ್ತಿಯಂತೆ ಪೀಠವೇ ಶಕ್ತಿ, ಮೇಲಿನ ಗೋಳಕವೇ ಶಿವ. ಅಂದರೆ ಲಿಂಗವು ಶಿವ ಶಕ್ತ್ಯಾತ್ಮಕವಾದುದರಿಂದಲೂ ಅಂತಃ ಶಕ್ತ್ಯಂಶನಾದ ವಿಷ್ಣುವು ಆ ಲಿಂಗಕ್ಕೆ ಅಧಿಷ್ಠಾನವಾಗಿರುವುದರಿಂದಲೂ ಯಜ್ಞೋಪವೀತಂ ಎಂದರೆ ಶಿವಲಿಂಗವೆಂದು ಅರ್ಥ. ಅಂಥ ಲಿಂಗವು–ಪರಮಂ, ಸರ್ವೋತ್ಕಾಲಿಕ. ಪವಿತ್ರಂ–

ಪರಿಶುದ್ಧವಾದ, ಪ್ರಜಾಪತೇ–ಬ್ರಹ್ಮವು, ಪುರಸ್ತಾತ್– ಹಿರಣ್ಯ ಗರ್ಭನಿಗಿಂತ ಮೊದಲೇ ಇರುವುದರಿಂದ, ಸಹಜಂ–ಸ್ವಭಾವ ಸ್ಥಿರವಾದುದು. ಆಯುಷ್ಯಂ ದೀರ್ಘಾಯುಷ್ಯವನ್ನುಂಟು ಮಾಡುವ, ಅಗ್ರ್ಯಂ–ಮೊದಲನೆಯವನಾದ ಶುಭ್ರಂ–ದೋಷರಹಿತನಾದ, ತತ್–ಆಯಜ್ಞೋಪವೀತವಾದ ಶಿವಲಿಂಗವನ್ನು ಪ್ರತಿಮುಂಚ–ಧರಿಸು, ತೇ–ನಿನಗೆ, ತೇಜಃ–ತೇಜಸ್ಸು, ಬಲಂ–ಶಕ್ತಿಯು, ಅಸ್ತು–ಆಗಲಿ.

ಈ ಮಂತ್ರದ ಉಪಬೃಂಹಣ ವಾಕ್ಯಗಳು ಹೀಗಿವೆ–

"ಯಜ್ಞೋಪವೀತಂ ಪರಮಂ ಪವಿತ್ರಂ ಶ್ರದ್ಧಾಯಾಸಹ ।
ಕರಾಬ್ಜ ಪೀಠೇಪಾಪೀಠೇ ಭಜಧ್ವಂ ಪ್ರತಿರೋವಿದಾಃ ॥
ಇತ್ಯುಕ್ತ್ವಾ ಭಗವಾನ್ ಬ್ರಹ್ಮ ಸತ್ಯಲೋಕಂ ಸಮಾಗಮನ್ ॥
ಸಂಸ್ಕೃತತ್ವಾತ್ಸಮಸ್ತೇಷು ವಸ್ತುಷ್ವಪಿಚ ಸಂತತಂ ।
ಸೂಚನಾತ್ಪರಮೇಶಸ್ಯ ಸೂತ್ರಂ ಲಿಂಗಮಿತಿ ಸ್ಮೃತಂ ॥
ಯದಕ್ಷರಂ ಪರಂಬ್ರಹ್ಮ ತತ್ಸೂತ್ರಮಿತಿಧಾರಯೇತ್ ।
ಧಾರಣಾದ ಸ್ಯಸೂತ್ರಸ್ಯ ನೋಚ್ಛಿಷ್ಟೋ ನಾಶುಚಿರ್ಭವೇತ್ ॥

ಆದುದರಿಂದ ವೀರಶೈವರು ಲಿಂಗವೇ ಯಜ್ಞೋಪವೀತವೆನಿಸಿರುವ ವೈದಿಕರು. ಇವರಿಗೆ ಲಿಂಗಕ್ಕೆ ಬೇರೆ ಯಾವ ತಂತುನಿರ್ಮಿತವಾದ ಯಜ್ಞೋಪವೀತ ಅಶಾಸ್ತ್ರೀಯ.

ಹೀಗೆ ಶ್ರೀಕರ ಭಾಷ್ಯ, ಕ್ರಿಯಾಸಾರ, ಶಿವಾದ್ವೈತ ಮಂಜರೀ, ಲಿಂಗಧಾರಣ ಚಂದ್ರಿಕಾ, ಸಿದ್ಧಾಂತ ಶಿಖಾಮಣಿ, ವೀರಶೈವಾನಂದ ಚಂದ್ರಿಕಾ (ಪಾದಕಾಂಡ) ಈಶ–ಕೇನ-ಮುಂಡಕ-ಶ್ವೇತಾಶ್ವತರ–ತೈತ್ತಿರೀಯ ಮುಂತಾದ ಗ್ರಂಥಗಳಲ್ಲಿ ವೀರಶೈವ ಮತದಲ್ಲಿ ಅತಿ ಮುಖ್ಯವಾದ ಅಷ್ಟಾವರಣ- ಪಂಚಾಚಾರ ಮತ್ತು ಷಟ್‌ಸ್ಥಳ ಸಿದ್ಧಾಂತಕ್ಕೆ ವೇದ ಮೂಲತ್ವವನ್ನು ಸ್ಥಾಪಿಸಿರುವುದರಿಂದ ವೀರಶೈವಕ್ಕೆ ವೇದಾಗಮೋಪನಿಷತ್ತುಗಳೇ ಮೂಲವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಬಸವಾದಿ ಪ್ರಮಥರ ವಚನ ಸಾಹಿತ್ಯದಲ್ಲಿಯೂ ಸಹ ಶಿವಶರಣರು ತಮ್ಮ ವಚನಗಳಲ್ಲಿ ವೇದಾಗಮೋಪನಿಷತ್ತುಗಳ ಉಕ್ತಿಗಳನ್ನು ಮೇಲಿಂದ ಮೇಲೆ ಉದಾಹರಿಸಿ ತಮ್ಮ ಅನುಭವಕ್ಕೆ ವೇದಾಗಮ ಸಾಹಿತ್ಯದಲ್ಲಿಯೂ ಆಧಾರವಿದೆಯೆಂಬುದನ್ನು ನಿರ್ದೇಶಿಸಿರುತ್ತಾರೆ. ಆದುದರಿಂದಲೇ ವಚನಶಾಸ್ತ್ರ ಪಿತಾಮಹರೆನಿಸಿದ ಲಿಂ॥ ಫ. ಗು. ಹಳಕಟ್ಟಿಯವರು ವಚನಶಾಸ್ತ್ರಸಾರದ ಮುನ್ನುಡಿಯಲ್ಲಿ—

"....ಆದರೆ ವಚನಕಾರರು ವೇದ ಶಾಸ್ತ್ರಾಗಮ ಪುರಾಣಗಳ ವಿಷಯವಾಗಿ ಆಗಿಂದಾಗ್ಗೆ ಕಡುತರವಾದ ಟೀಕೆಗಳನ್ನು ಮಾಡುವುದುಂಟು. ಆದರೆ ಆಗಮ ಗ್ರಂಥಗಳಿಗೂ ವಚನಕಾರರ ತತ್ತ್ವಗಳಿಗೂ ಪ್ರತ್ಯಕ್ಷ ಸಂಬಂಧವುಂಟು. ಆಗಮ ಗ್ರಂಥಗಳಲ್ಲಿಯೇ ಷಟ್ ಸ್ಥಲದ ವಿವರಣವಿರುತ್ತದೆ. ವಚನಕಾರರು ಹಿಂದಿನ ಸಮಾಜದಲ್ಲಿ ನಡೆದಿದ್ದ ಲೋಕಕಂಟಕವಾದ ಕೆಲವು ಆಚಾರಗಳನ್ನು ಖಂಡಿಸಿದ್ದಾರೆ. ಹಿಂದಿನ

ಆಚಾರ್ಯರು ತಮ್ಮ ಮಾರ್ಗಕ್ಕೆ ವಿರೋಧವಾದ ಆಚಾರ ವಿಚಾರಗಳಿಗೆ ಯುಕ್ತಿ ಪ್ರಯುಕ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸಿರುವುದನ್ನು ವಚನಕಾರರು ಅಲ್ಲಗಳೆದಿದ್ದಾರೆ. ಅಂತ ಪ್ರಸಂಗದಲ್ಲಿ ವೇದಾಗಮಗಳ ಮೇಲೆಯೂ ಟೀಕೆ ಗಳನ್ನು ಮಾಡಿದ್ದಾರೆ. ಇಷ್ಟೇ ಹೊರತು ಅವರಿಗೆ ವೇದಶಾಸ್ತ್ರಾಗಮೋಪನಿಷತ್ತು ಗಳ ಮೇಲೆ ಭಕ್ತಿಯು ಇದ್ದಿಲ್ಲವೆಂದು ಹೇಳಲಿಕ್ಕೆ ಬಾರದು"

ಎಂದು ಹೇಳಿರುವ ಮಾತು ವೇದಾಗಮಗಳ ಬಗ್ಗೆ ವಚನಕಾರರಿಗಿದ್ದ ಶ್ರದ್ಧಾ ಭಕ್ತಿಗಳನ್ನು ಸಾರುತ್ತದೆ.

ವೀರಶೈವದ ನೀತಿ ವೇದ ಅಥವಾ ವೇದಾಗಮೋಪನಿಷತ್ ಸಾಹಿತ್ಯವೆಂಬುದು ಘಂಟಾ ಘೋಷ. ವೀರಶೈವ ಕ್ರಾಂತದರ್ಶಿಗಳಾದ ಸಾಧಕರು ವೈದಿಕ ಸಾಹಿತ್ಯದ ಮೇಲೆ ಸಂಪ್ರದಾಯದ ದೂಳು ಮುಸುಕಿ ಪ್ರಾಚೀನ ವೈದಿಕ ಪ್ರಭೆ ಮಲಿನವಾಗಿ ದ್ದಾಗ ಅವರು ತಮ್ಮ ನಿಶಿತವೂ, ನಿರ್ಭೀತವೂ ಆದ ಉಕ್ತಿಗಳಿಂದ ಧೂಳನ್ನು ಕೊಡಹಿ ವೈದಿಕ ಸಾಹಿತ್ಯ ಸತ್ಯ ಪ್ರತಿಭೆಯನ್ನು ಉಜ್ವಲಗೊಳಿಸಿದರು. ಪ್ರಾಣಿ ಹಿಂಸೆ, ಸ್ತ್ರೀ ಸ್ವಾತಂತ್ರ್ಯ, ಸ್ತ್ರೀಯರಿಗೆ ಪುರುಷರಿಗೆ ಸಮವಾದ ಉಪನಯನ ನಾಂದಿ ಸಂಸ್ಕಾರಗಳು, ಕಾಯಕಗಳ ಮಹತ್ವ, ವಿಶ್ವಭ್ರಾತೃತ್ವ, ಸದಾಚಾರ, ಸದ್ವಿಚಾರಗಳ ಮೇಲೆ, ವೈದಿಕ ಧರ್ಮದ ಶುಭ ಪ್ರಭೆಯನ್ನು ಬೀರಿ ಅದರ ತೇಜಸ್ಸನ್ನು ಬೆಳಗಿ ಸಿದರು. ಜೈನ ಬೌದ್ಧರು ಅಂದಿನ ಸಮಾಜದಲ್ಲಿನ ಧಾರ್ಮಿಕ ಪದ್ಧತಿಗಳಿಗೆ ವೇದ ಗಳೇ ಕಾರಣಗಳೆಂದು ತಿಳಿದು ವೇದ ಮಾರ್ಗವನ್ನು ಬಿಟ್ಟು ಸ್ವತಂತ್ರ ಪಂಥಗಳನ್ನು ಸ್ಥಾಪಿಸಿದರು. ಆದರೆ ವೀರಶೈವ ಆಚಾರ್ಯರು ಸಾಧು ಸಂತರು, ಶರಣರು ವೇದಾ ರ್ಥಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡು, ಅವುಗಳಲ್ಲಿನ ಉತ್ತಮೋತ್ತಮ ತತ್ವಗಳನ್ನು ಆರಿಸಿಕೊಂಡು ಉಳಿದವುಗಳನ್ನು ಕೈಬಿಟ್ಟರು. ಇಷ್ಟಾದರೂ ತಮ್ಮ ವೈದಿಕತ್ವಕ್ಕೆ ಭಂಗ ಬರಲಿಲ್ಲವೆಂದು ಸಾರಿದರು. ನೀಲಕಂಠ ಶಿವಾಚಾರ್ಯರು ಇದನ್ನು ಮನೋಜ್ಞವಾಗಿ ನಿರೂಪಿಸಿದ್ದಾರೆ.

"ವೇದವೆಂಬುದೊಂದು ರತ್ನಾಪಣ. ರತ್ನದ ಅಂಗಡಿಯಲ್ಲಿ ಕೆಲವು ಅನರ್ಘವಾದ ರತ್ನಗಳೂ ಇವೆ. ಅಲ್ಪ ಮೌಲ್ಯದ ರತ್ನಗಳೂ ಇವೆ. ಕೊಳ್ಳುವವರು ತಮ್ಮ ತಮ್ಮ ಶಕ್ತಿಗೆ ಅನುಗುಣವಾದವುಗಳನ್ನು ಕೊಂಡ ಮಾತ್ರಕ್ಕೆ ಉಳಿದ ರತ್ನಗಳಿಗೆ ತಿರಸ್ಕಾರ ಮಾಡಿದಂತಾಗಲಿಲ್ಲ. ವೇದದಲ್ಲಿರುವ ಎಲ್ಲ ವಿಷಯಗಳನ್ನೂ ಅನುಷ್ಠಾನ ಮಾಡುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಅದು ಸಪ್ತಸಾಗರ ಶೋಷಣ ಮಾಡಿದಷ್ಟೆ ಅಸಾಧ್ಯ. ಆದ್ದರಿಂದ ವೇದೋಕ್ತವಾದ ಯಾವುದೊಂದು ಭಾಗವನ್ನೂ ಸ್ವೀಕರಿಸಿದರೂ ವೈದಿಕತ್ವವು ಸಿದ್ಧಿಸುತ್ತದೆ. ವೀರಶೈವ ಧರ್ಮವು ವೇದೋಕ್ತವಾದ ಪಶು ಹಿಂಸಾ ಕಾರಕವಾದ ಪಶುಕರ್ಮಗಳನ್ನು ತ್ಯಜಿಸಿದ್ದರೂ, ಭಸ್ಮರುದ್ರಾಕ್ಷಧಾರಣ, ಧ್ಯಾನ, ಪೂಜಾದಿ ಪತಿ ಧರ್ಮಗಳನ್ನು ಸ್ವೀಕರಿಸಿರುವುದರಿಂದ ವೈದಿಕತ್ವವು ಇದ್ದೇ ಇದೆ."

ಇದೇ ಮುಂತಾಗಿ ಬಹು ಗಂಭೀರವೂ, ಉದಾತ್ತವೂ, ಪವಿತ್ರವೂ ಆದ ಆಚಾರಗಳನ್ನು ಆಚರಿಸಿರುವುದಲ್ಲದೆ ದ್ವೈತ ಮತ್ತು ಅದ್ವೈತ ಶ್ರುತಿಗಳಿಗೆ ಪರಸ್ಪರ ವಿರೋಧವಿರುವಲ್ಲಿ ಶುತ್ಯೈಕ್ಯ ದೇಶ ಪ್ರಾಮಾಣ್ಯವನ್ನು ಒಪ್ಪದೆ "ಭೇದಾಭೇದ" ಮಾರ್ಗವನ್ನು ಸ್ವೀಕರಿಸಿದೆ. ಇನ್ನು ಜ್ಞಾನ ಮುಖ್ಯವೇ ಕರ್ಮ ಮುಖ್ಯವೇ ಎಂಬ ಸಮಸ್ಯೆಗೆ ಜ್ಞಾನ-ಕರ್ಮ ಸಮುಚ್ಚಯವನ್ನು ನಿರ್ದೇಶಿಸಿದೆ. ಕೇವಲ ಬ್ರಹ್ಮವೊಂದೇ ಸತ್ಯವೆಂಬಲ್ಲಿ ಶಕ್ತಿ ವಿಶಿಷ್ಟ ಬ್ರಹ್ಮ ತತ್ವವನ್ನು ಸ್ವೀಕರಿಸಿದೆ. ತತ್ವಗಳಲ್ಲಿ ೩೬ ತತ್ವಗಳನ್ನು ಎತ್ತಿ ಹಿಡಿಯಿತು. ನಿಮಿತ್ತ ಮತ್ತು ಉಪಾದಾನ ಕಾರಣಗಳಿಗೆ ವಿವಾದ ಬಂದಾಗ ಅಭಿನ್ನ ನಿಮಿತ್ತೋಪಾದಾನ ಕಾರಣತ್ವವನ್ನು ನಿರ್ಧರಿಸಿದೆ. ಹೀಗೆ ವೀರಶೈವ ಧರ್ಮದ ಯಾವುದೇ ಮುಖವನ್ನು ನಾವು ಪರಿಶೀಲಿಸಿದರೂ ಇದರಲ್ಲಿನ ತನ್ನದೇ ಆದ ವೈಶಿಷ್ಟ್ಯವು ನಿಚ್ಚಳವಾಗಿ ಕಾಣುತ್ತದೆ. ಈ ಎಲ್ಲ ಕಾರಣಗಳಿಂದ ವೇದ ಹಿನ್ನಲೆಯ ಮೇಲೆ ನಿಂತಿರುವ ವೀರಶೈವ ಧರ್ಮ ವೇದಾಗಮೋಪನಿಷತ್ತುಗಳ ಪರಿಶುದ್ಧವಾದ ಮಾರ್ಗಾನುಸರಣದ ಮೂಲಕ ಪರಮ ವೈದಿಕ ಧರ್ಮವೆನಿಸಿಕೊಂಡು ಲೋಕೋತ್ತಾರವಾದ ವಿಶ್ವಧರ್ಮದ ಹೆಚ್ಚಳದಿಂದ ಬೆಳಗಿದೆ.

---

# ವೇದಕಾಲದ ಅನುಭಾವ ಸ್ವರೂಪ

ಸಾಹಿತ್ಯರತ್ನ ಷ||ಬ್ರ||ಶ್ರೀ|| ಗುರುಸಿದ್ಧ ಶಿವಾಚಾರ್ಯಸ್ವಾಮಿಗಳು

ವೇದಕಾಲದಲ್ಲಿನ ಅನುಭಾವ ಸ್ವರೂಪವನ್ನು ಕುರಿತು ವಿಚಾರ ಮಾಡೋಣ. ಸಾಮಾನ್ಯವಾಗಿ ವೇದ ಎಂಬುದಕ್ಕೆ "ಶ್ರುತಿ" ಎಂಬುದು ನಾಮಾಂತರ. ಮೇಲಾಗಿ ವೇದವು ಶ್ರುತಿಯ ಏಕದೇಶ. ಸಂಹಿತೆ(ವೇದ) ಬ್ರಾಹ್ಮಣ ಮತ್ತು ಅರಣ್ಯಕ ಉಪನಿಷತ್ತುಗಳಲ್ಲಿ ಶ್ರುತಿ ಎಂಬ ಹೆಸರಿದೆ. ಇಲ್ಲಿ 'ವೇದ'ಕಾಲ ಎಂದರೆ ಶ್ರುತಿಗಳು ಆವಿರ್ಭಾವವಾದ ಕಾಲ ಎಂದು ಸ್ಥೂಲವಾಗಿ ಹೇಳಬಹುದು.

ಯೋಗಸ್ಥರಾದ ಋಷಿಗಳು ಸತ್ತ್ವೋದ್ರಿಕ್ತಾವಸ್ಥೆಯಲ್ಲಿದ್ದಾಗ ಸಾಕ್ಷಾತ್ಕಾರವಾದ ತತ್ತ್ವರಹಸ್ಯಗಳೇ ವೇದಗಳು. ಹೀಗೆ ಸಾಕ್ಷಾತ್ಕಾರ ಮಾಡಿಕೊಂಡವರಿಗೆ "ಋಷಿ" ಎನ್ನುತ್ತಾರೆ. "ಮಂತ್ರದ್ರಷ್ಟಾರೋ ಋಷಯಃ" ಎಂಬ ನಿರುಕ್ತೋಕ್ತಿ ಇದನ್ನು ಸಮರ್ಥಿಸುತ್ತದೆ.

ಸಂಹಿತಾ ಬ್ರಾಹ್ಮಣಗಳಲ್ಲಿ ಅನುಭಾವಕ್ಕೆ ಇಂಬು ಕಡಿಮೆ. ಅವು ಭಗವಂತನ ಇಚ್ಛಾಶಕ್ತಿಯಿಂದ ಅರ್ಹರಾದ ಋಷಿಗಳಿಗೆ ತಾವಾಗಿ ಕಾಣಿಸಿಕೊಂಡವು ಎಂದರೆ ಅಪ್ರಯತ್ನವಾಗಿ ಆವಿರ್ಭಾವವಾದವುಗಳು. ಆದ್ದರಿಂದ ಅಲ್ಲಿ ಋಷಿಯ ಅನುಭಾವ ವ್ಯಕ್ತನಾಗಲು ಅಥವಾ ಆ ಋಕ್ಕಿನಲ್ಲಿ ಅರ್ಥವಿಸಲು ಅವಕಾಶವಿರುವುದಿಲ್ಲ.

ಇನ್ನು ಅರಣ್ಯಕ ಉಪನಿಷತ್ತುಗಳು ಅರಣ್ಯದಲ್ಲಿದ್ದ ಋಷಿಗಳ ಅನುಭವ ವಾಣಿಗಳೆನ್ನಬಹುದು. ಅಲ್ಲಿ ವೇದ (ಸಂಹಿತ ಬ್ರಾಹ್ಮಣ)ಗಳಲ್ಲಿ ನಿಷ್ಣಾತರಾದ ಮಹರ್ಷಿಗಳು ವೇದ ಋಕ್ಕುಗಳನ್ನು ತಮ್ಮ ಅನುಭವಕ್ಕೆ ತಂದುಕೊಂಡು ಶಿಷ್ಯರಿಗೆ ಉಪದೇಶಿಸಿದ ಪರಿಸ್ಥಿತಿಯನ್ನು ನಾವು ಕಾಣುತ್ತೇವೆ. ಎಂಥ ವಿದ್ವಾಂಸನೇ ಆದರೂ ತನ್ನ ಕಲಿಕೆಯನ್ನು ಶಿಷ್ಯನಿಗೆ ಬೋಧಿಸುವಾಗ ಅನುಭಾವವಿಲ್ಲದೆ ಅದು ಬೋಧವೆನಿಸದು. ಆ ಪರಿಣಾಮವಾಗಿಯೇ ಉಪದೇಶಕನಿಗೆ "ಶ್ರೋತ್ರಿಯ ಬ್ರಹ್ಮನಿಷ್ಠ" ಎಂಬ ವಿಶೇಷಣವು ಕೊಡಲ್ಪಟ್ಟಿದೆ ಮುಂಡಕದಲ್ಲಿ.

"ಸ್ವಗುರುಮೇವಾಭಿಗಚ್ಛೇತ್ ಶ್ರೋತ್ರಿಯಂ ಬ್ರಹ್ಮನಿಷ್ಠಮ್" ಎಂದರೆ, ಮುಖ್ಯವಾದ ಶಿಷ್ಯನು ಶ್ರೋತ್ರಿಯನು ಬ್ರಹ್ಮನಿಷ್ಠನೂ ಆದ ಗುರುವನ್ನು ಆಶ್ರಯಿಸಬೇಕು ಎಂದು ಹೇಳಿದೆ. ಇಲ್ಲಿ ಶ್ರೋತ್ರಿಯ ಪದವು ವೇದ ವೇದಾಂತ ಶಾಸ್ತ್ರಗಳಲ್ಲಿ ನಿಷ್ಣಾತ ಎಂಬ ಅರ್ಥವನ್ನು ಸೂಚಿಸುತ್ತದೆ. ಶ್ರೋತಿಯತ್ವವು ಇಲ್ಲದೆ ಕೇವಲ ಬ್ರಹ್ಮಾನುಭಾವವಿದ್ದಲ್ಲಿ ಪ್ರಯೋಜನವಿಲ್ಲ. ಏಕೆಂದರೆ ತನಗೆ ಆಗಿರುವ ಅನುಭವವನ್ನು ಶಾಸ್ತ್ರವು ಕ್ರಿಯೆಯ ಮೂಲಕ ವ್ಯಕ್ತಪಡಿಸಿ ಶಿಷ್ಯರು ಕೇಳುವ ಸಂದೇಹಗಳನ್ನು ಕಳೆಯಲು ಸಾಧ್ಯವಾಗುವುದಿಲ್ಲ. ಅದರಂತೆ ಬ್ರಹ್ಮಾನುಭಾವವಿಲ್ಲದೆ ಕೇವಲ ಶ್ರೋತ್ರಿಯತ್ವವೂ ನಿರುಪಯುಕ್ತ. ಏಕೆಂದರೆ ಅದು ಕಾಗದ ಹೂವಿನಂತೆ ಶುಷ್ಕವಾಗುತ್ತದೆ. ತನಗೇ ವಸ್ತುವಿನ ಸಾಕ್ಷಾದನುಭವವಿಲ್ಲದೆ ಸುಮ್ಮನೆ ಶಾಸ್ತ್ರ ಪಂಕ್ತಿಗಳನ್ನು ಗಿಳಿಯಂತೆ ಒದರಿದಂತಾಗುತ್ತದೆ. ಇದನ್ನೇ ಶ್ರುತಿಯಲ್ಲಿ "ನೈಷಾತರ್ಕೇಣಾನುಸಂಧತ್ತೇ" "ನೈಷಾತರ್ಕೇಣ ಮತಿರಾಪನೇಯಾ" ಮುಂತಾದ ವಾಕ್ಯಗಳಲ್ಲಿ ನಿರಾಕರಿಸಲಾಗಿದೆ.

ಸಂಹಿತೆಗಳಲ್ಲಿಯೂ ಈ ಅನುಭಾವದ ಬಗ್ಗೆ ಉದ್ಗಾರಗಳಿಲ್ಲದಿಲ್ಲ. ಅಲ್ಲಿರುವ ಅನುಭಾವದ ಸ್ವರೂಪವನ್ನು ಹೀಗೆ ಗುರ್ತಿಸಬಹುದು.

> "ಯ ಇಮಾ ವಿಶ್ವಾಭುವನಾನಿ
> ಜುಹ್ವದೃಷಿರ್ಹೋತಾನ್ಯಸೀದತ್ಪಿತಾ ನಃ ।
> ಸ ಆಶಿಷಾದ್ರವಿಣಮಿಚ್ಛಮಾನ :
> ಪ್ರಥಮಚ್ಛದವರಾಗ್ಂ ಆವಿವೇಶ (ಋ ೧೦-೮೧-೧)

ಯಾವನು ಸಮಸ್ತ ತನು-ಕರಣ-ಭುವನಗಳೆಂಬ ಹವ್ಯದ್ರವ್ಯಗಳನ್ನು ಹೋಮ ಮಾಡುವನೋ ಅಂಥ ಹೋತೃರೂಪ ಮಹರ್ಷಿಯು ತಮ್ಮ ತಂದೆ. ಅರ್ಥಾತ್ ಸಂಸಾರ ಸಾಗರತಾರಕ ಎಂದರೆ ಗುರು. ಅವನು ಮೊದಲು ಹುಟ್ಟಿದವನು ಆದ್ದರಿಂದ ಅವನು ನಮಗೆ ಯಜಮಾನ. ಅವನು ತಾನೇ ವಿಶ್ವಾತ್ಮಾಭಾವನೆಯಿಂದ ನಮ್ಮನ್ನು ವ್ಯಾಪಿಸಿರುವನು ಎಂದರೆ ತನ್ನ ನಿಜ ಬೋಧೆಯಿಂದ ಸ್ವಸ್ವರೂಪರನ್ನಾಗಿಯೇ ಮಾಡುವನು.

ಮೇಲೆ ಹೇಳಿದಂತೆ ತನ್ನಲ್ಲಿರುವ ತನು-ಕರಣ-ಭುವನಗಳನ್ನು ಹವ್ಯದ್ರವ್ಯಗಳನ್ನಾಗಿ ಮಾಡಿ ಹೋಮ ಮಾಡುವ ಹೋತೃವಿಗೆ "ಆತ್ಮಯಾಜೀ" ಎಂಬ ಶಬ್ದವು ಶ್ರುತಿಗಳಲ್ಲಿ ಉಕ್ತವಾಗಿದೆ. ವಿಶ್ವವನ್ನು ವಿಶ್ವಪ್ರಕಾಶಕನಾದ ಶಿವನನ್ನು ಸ್ವಸ್ವರೂಪರನ್ನಾಗಿ ಭಾವಿಸುವ ಆತ್ಮಯಾಜಿಗಳು ಎಂದರೆ "ಸ್ವಸ್ವರೂಪಾವಸ್ಥಿತಿ" ಎಂಬ ಅನುಭವಾತ್ಮಕವಾದ ತಿಳಿವುಳ್ಳವರು ಎಂದು ಅರ್ಥ.

ಶತಪಥ ಬ್ರಾಹ್ಮಣದಲ್ಲಿ "ತದಾಹುಃ ಆತ್ಮಾಯಾಜೀ ಶ್ರೇಯಾನ್" (೧೧-೨-೨-೧೩) ಎಂದು "ಆತ್ಮಾಯಾಜಿ" ಎಂಬ ಅನುಭಾವಿಗೆ ಶ್ರೇಷ್ಠವಾದ ಸ್ಥಾನವನ್ನು ಕೊಡಲಾಗಿದೆ. ಇದೇ ವಿಷಯವನ್ನು ವಿವರಿಸುವಾಗ ಉಪನಿಷತ್ತುಗಳಲ್ಲಿ,

> "ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ
> ಶ್ರದ್ಧಾ ಪತ್ನೀ" —(ಮಹಾನಾರಾಯಣ ೮೦)

—ಎಂದು ಹೇಳಿದೆ ಎಂದರೆ ಇಂಥ ಆತ್ಮಾಯಾಜೀಯಾದವನಿಗೆ ಶ್ರದ್ಧೆಯೇ ಪತ್ನಿ ಎಂದು ಶ್ರದ್ಧೆಯನ್ನು ಪತ್ನೀ ಸ್ಥಾನದಲ್ಲಿ ಹೇಳಿದೆ. ಇದರಿಂದ ಆತ್ಮಾಯಜ್ಞದಲ್ಲಿ ಕೇವಲ ಬಾಹ್ಯಹವಿದ್ರವ್ಯಗಳನ್ನು ಅರ್ಪಿಸುವುದಲ್ಲ. ಆ ಅರ್ಪಣವು ಶ್ರದ್ಧಾಪೂರ್ವಕವಾಗಿರಬೇಕು. ಅರ್ಥಾತ್ ಅದು ಅನುಭಾವದಿಂದ ಕೂಡಿರಬೇಕು ಎಂಬುದನ್ನು ದೃಢಪಡಿಸುತ್ತದೆ.

ಮಂತ್ರವು ಇಂಥ ಅನುಭಾವಿಯಾದ ಗುರುವಿನಿಂದ ಪಡೆಯುವ ಶಿವದೀಕ್ಷಾ ಸ್ವರೂಪವನ್ನು ಸುಂದರವಾಗಿ ವರ್ಣಿಸುತ್ತದೆ.

> "ನ ವಿಜಾನಾಮಿ ಯದಿವೇದಮಸ್ಮಿ
> ನಿಣ್ಯಃ ಸನ್ನದ್ಧೋ ಮನಸಾ ಚರಾಮಿ।
> ಯದಾ ಮಾಗನ್ ಪ್ರಥಮಜಾ
> ಋತಸ್ಯಾದಿದ್ವಾಚೋ ಅಶ್ನುವೇ ಭಾಗಮಸ್ಯಾಃ।
> (ಋಕ್ ೧೦-೧೨-೮)

(ಯತ್) ಯಾವ ಕಾರಣದಿಂದ (ಅಹಂ) ನಾನು (ಸನ್ನಾದ್ಧಃ ಸರ್ ಆಣವಾದಿ ಮಲಾವೃತನಾಗಿ (ನಿಣ್ಯ ಇವ) ಪರಿಚ್ಛಿನ್ನನಂತೆ ನನ್ನನ್ನು ಭಾವಿಸಿಕೊಂಡಿದ್ದೆನೋ (ತತ್) ಆ ಕಾರಣದ ದೆಸೆಯಿಂದ (ಇದಂ) ಪ್ರಮಾತೃ ಪ್ರಮಾಣ ಪ್ರಮೇಯ ರೂಪವಾದ ಈ ವಿಶ್ವವು (ಅಸ್ಮಿ) ನಾನೆ ಆಗಿದ್ದೇನೆ. (ಎಂಬುದಾಗಿ ನವಿಜಾನಾಮಿ) ನಾನು ಅರಿಯುವುದಿಲ್ಲ (ಇದರಿಂದ–ಮನಸಾ) ಬಹಿರ್ಮುಖ ಚಿತ್ತದೊಡನೆ (ಚರಾಮಿ) ಸಂಸಾರದಲ್ಲಿ ಎಡೆಯಾಡುತ್ತಿದ್ದೇನೆ. ಸರ್ವತ್ರ ಶಿವಭಾವನೆಯಿಲ್ಲದ್ದರಿಂದ ಇಂದ್ರಿಯ ಪರವಶನಾಗಿ ಜನನ ಮರಣಾತ್ಮಕವಾದ ಸಂಸಾರ ದುಃಖದಿಂದ ತೊಳಲುತ್ತಿರುವೆನು. (ಯದಾ) ಯಾವಾಗ (ಋತಸ್ಯ)

'ಋತಂ ಸತ್ಯಂಪರಂಬ್ರಹ್ಮ' ಎಂಬಂತೆ ಪರಶಿವನು (ಪ್ರಥಮಜಾಃ) ಹಿರಿಯ ಮಕ್ಕಳು ಅರ್ಥಾತ್ ಮೊದಲು ಹುಟ್ಟಿದವರು ಎಂದರೆ ಪ್ರಾಕೃತ ಸೃಷ್ಟಿಗಿಂತ ಮುಂಚೆ ಹುಟ್ಟಿ ಅಪ್ರಾಕೃತರು ಪ್ರಮಥರು ಎಂದು ಅರ್ಥ. (ಮಾಂ) ನನ್ನನ್ನು ಕುರಿತು ಅನುಗ್ರಹಿಸುವುದಕ್ಕಾಗಿ (ಆಗನ್) ಭೂಲೋಕಕ್ಕೆ ಆಗಮಿಸಿದರೊ. (ಆದಿತ್) ಆ ಕೂಡಲೇ (ಅಸ್ಯಾಃ) ಪರಿಚ್ಛಿನ್ನ ಭಾವನೆಯನ್ನು ಅರ್ಥಾತ್ ಅಣುತ್ವವನ್ನು ಹೋಗಲಾಡಿಸಿ ಶಿವತ್ವಾಭಿವ್ಯಕ್ತಿಯನ್ನುಂಟುಮಾಡುವ ಈ ಶಿವಾದ್ವೈತವಿದ್ಯೆಯ (ಉವಾಚಃ) ಪದೇಶದ (ಭಾಗಂ) ಸಾರವನ್ನು ಎಂದರೆ ತ್ರಿವಿಧ ದೀಕ್ಷೆಯಿಂದ ಲಭ್ಯವಾಗುವ ಇಷ್ಟಪ್ರಾಣ-ಭಾವರೂಪ ಲಿಂಗತ್ರಯಾನುಭವ ಅಥವಾ ಅನುಸಂಧಾನವನ್ನು (ಅಶ್ನುವೆ) ಪಡೆಯುವೆನು.

ಇಲ್ಲಿ ಆಣವಾದಿ ಮಲಾವೃತನಾಗಿ 'ಅಹಮಿದಂ ಮಮೇದಂ' ನಾನೇ ಈ ವಿಶ್ವವು ನನ್ನದೇ ಇದೆಲ್ಲವೂ ಎಂಬ ಅಭಿಮಾನದಿಂದ ಕೂಡಿದ್ದ ಜೀವನ ಸಂಸಾರ ಭ್ರಮಣ ಎಂದರೆ ಇಂದ್ರಿಯ ಪರವಶತೆಯುಂಟಾಗಿ ದುಃಖದಲ್ಲಿ ತೊಳಲುತ್ತಿರುವನು. ಇಂಥ ಜೀವಾತ್ಮನ ಮೇಲೆ ಪರಶಿವ ಕೃಪಾ ಆದಾ(ಶಕ್ತಿಪಾತ)ಗ ಪ್ರಥಮಜರು ಎಂದರೆ ಶಿವನ ಅಂಶಾವತಾರರಾದ ಪ್ರಮಥರು ಅರ್ಥಾತ್ ನಂದ್ಯಾದಿ ಆಚಾರ್ಯರು ಅಥವಾ ಅದೇ ಗೋತ್ರಗಳಿಗೆ ಸಂಬಂಧಿಸಿದ ಪಂಚಾಚಾರ್ಯರು ಇಂಥ ಸುಸಂಸ್ಕೃತ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಭೂಲೋಕದಲ್ಲಿ ಅವತರಿಸುತ್ತಾರೆ. ದುಃಖಾರ್ತನಾದ ಇಂಥ ಜಿವನಶ್ರೋತ್ರಿಯ-ಬ್ರಹ್ಮನಿಷ್ಠ ಅರ್ಥಾತ್ ಶಿವಾನುಭಾವಿಯನ್ನು ಆಶ್ರಯಿಸಿ ಅವರಿಂದ ಶಿವದೀಕ್ಷೆಯನ್ನು ಪಡೆದು ಅವರು ಉಪದೇಶಿಸಿದ ಸಾಧನ ಮಾರ್ಗ ಎಂದರೆ ಷಟಸ್ಥಲ ಸೋಪಾನದಿಂದ ಶಿವಸ್ವರೂಪವೇ ತಾನಾಗಿ ಅಮೃತನಾಗುವನೆಂದು ಅರ್ಥ.

ವೇದದಲ್ಲಿ ಪ್ರಥಮರು ಅರ್ಥಾತ್ ಪ್ರಮಥರ ಉಲ್ಲೇಖ, ವೇದಗಳಲ್ಲಿ ಮೇಲಿಂದಮೇಲೆ "ಗಣಾನಾಂ ತ್ವಾ ಗಣಪತಿಗ್ಂ ಹವಾಮಹೆ" ಎಂಬಲ್ಲಿ ಪ್ರಮಥರಿಗೆ ಒಡೆಯನಾದ ಶಿವನನ್ನು ಸ್ತುತಿಸಿದೆ. "ಗಣೇಭ್ಯೋ ಗಣಪತಿ ಭ್ಯಶ್ಚವೋ ನಮೋ ನಮಃ" "ಸಹಸ್ರಾಣಿ ಸಹಸ್ರಶ"ಮುಂತಾದ ವಾಕ್ಯಗಳಲ್ಲಿ ಅಗಣಿತ ಮಹಿಮಾ ಶಾಲಿಗಳಾದ ಪ್ರಮಥಗಣರು ಉಕ್ತಾರಾಗಿದ್ದಾರೆ. ಇವರೇ ಶಿವಾಗಮಗಳಲ್ಲಿ ಉಲ್ಲಿಖಿತರಾದ ವೀರ ನಂದಿ-ಭೃಂಗಿ (ವೃಷಭ) ಸ್ಕಂದರೆಂದೂ ಶಂಕು ಕರ್ಣ-ಘಂಟಾಕರ್ಣ–ಧೇಸಕರ್ಣನು ವಿಶ್ವಕರ್ಣ ಎಂದೂ ಹೇಳಲ್ಪಟ್ಟಿಮುಂದೆ ಇವರೇ ರೇಣುಕ–ದಾರುಕ ಮುಂತಾದ ನಾಮಗಳಿಂದ ಪ್ರಸಿದ್ಧರಾಗಿ ವೀರಶೈವ ಸಂಪ್ರದಾಯದ ಗೋತ್ರಕರ್ತರೆನಿಸಿದರು. ಇವರೇ ವೇದಕಾಲದ ಶ್ರೋತ್ರಿಯ ಬ್ರಹ್ಮನಿಷ್ಠರೆನಿಸಿ ಋಷಿಮುನಿಗಳಿಗೆ ಶಿವದೀಕ್ಷೆಯನ್ನು ಕರುಣಿಸಿದರು. ಆದ್ದರಿಂದಲೇ ಭಗವತ್ಪಾದಿ ನೀಲಕಂಠ ಶಿವಾಚಾರ್ಯರು ನೀಲಕಂಠ ಭಾಷ್ಯಕಾರಿಕೆಯಲ್ಲಿ,

ಗುರೂಪಸನಕಾ ದೇವಬ್ರಹ್ಮವಿಷ್ಣಾದಯಃ ಸುರಾಃ ।
ಲಿಂಗಾಂಗ ಸಾಮರಸ್ಯಂಚ ಪ್ರಾಪ್ನುಯುರ್ವಿಗತಜ್ವರಾಃ ॥ ೧-೧೦
ಸನತ್ಕುಮಾರ ಪ್ರಮುಖಾಜ್ಞಾನ ನಿಷ್ಠಾ ಯಶಸ್ವಿನ ।
ಧೃತಲಿಂಗಾಂಗ ಭಾವಾಶ್ಚ ವಿರಾಜಂತೇವನಿಶಂ ಮುದಾ ॥ ೧೦॥
ಧುಂಡಿನಂದಿ ಮಹಾಕಾಲ ಪ್ರಮುಖಾಗಣನಾಯಕಾಃ ।
ಚತುರ್ದಶಸಹಸ್ರಂಹಿ ಕೈಲಾಸಾವರಣಾಧಿಪಾಃ ॥ ೧೨ ॥
ಮತಪ್ರವರ್ತಕಾಃ ಸರ್ವೇ ಗುರುಪೀಠಾಧಿರೋಹಿಣಃ ।
ವ ಪೇಶ್ವರಸನಿಪಾಪೇ ತೇ ವರ್ತಂತೇಬಾಲಪಾಲಯಃ ॥ ೧೩ ॥

ಮೇಲೆ ಹೇಳಿದ ಧುಂಡಿ ನಂದಿ ಮೊದಲಾದವರು ವೇದಕಾಲದ ಪ್ರಮಥರು ಇವರೇ ಅಂದಿನ ಋಷಿಮುನಿಗಳಿಗೆ ಲಿಂಗಾಂಗವನ್ನು ಬೋಧಿಸಿದ ಶಿವಾನುಭವಿಗಳು ಇದರ ಪರಿಣಾಮವಾಗಿ,

ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋವಥಕಾಶ್ಯಪಃ ।
ಭಾರದ್ವಾಜೋವಂಗಿರಾ ಅತ್ರಿರ್ವಶಿಷ್ಠೋ ರೋಮಹರ್ಷಣಾ॥ ೧೪
ಏತೇಸರ್ವೇಮಹಾಭಾಗಾಃ ಅತಿವರ್ಣಾಶ್ರಮೇರತಾಃ ।
ಪೀರಶೈವಾಸಮಾಖ್ಯಾತಾ ಜೀವನ್ಮುಕ್ತಾನ ಸಂಶಯಃ ॥ ೧೫
ಏತ್ಯೈಃ ಸರ್ವೇಷುಲೋಕೇಷು ಸರ್ವೇಧರ್ಮಾಃ ಪ್ರವರ್ತಿತಾಃ॥

ಅಗಸ್ತ್ಯ ಮೊದಲಾದ ಮಹರ್ಷಿಗಳು ವೇದ ಮಂತ್ರ ದ್ರಷ್ಟಾರರುಲಿಂಗ ಧಾರಣಾತ್ಮಕವಾದ ಶಿವದೀಕ್ಷೆಯನ್ನು ಹೊಂದಿ ಲೋಕಕ್ಕೆ ಸನ್ಮಾರ್ಗ ಪ್ರದರ್ಶಕ ರಾದರು. ಇವರಲ್ಲಿ ಅಗಸ್ತ್ಯ ಮಹರ್ಷಿಯು ಜಗದ್ಗುರು ರೇಣುಕಾಚಾರ್ಯರಿಂದ ಶಿವದೀಕ್ಷೆಯನ್ನು ಪಡೆದು ಬಾದರಾಯಣರ ಬ್ರಹ್ಮಸೂತ್ರಗಳಿಗೆ "ವೈಯಾಪಿಕ ವೃತ್ತಿ" ಅಥವಾ 'ಮುನಿಚಂದ್ರವೃತ್ತಿ' ಎಂಬ ವ್ಯಾಖ್ಯಾನವನ್ನು ಬರೆದಿದ್ದು. ಅವರ ಆಧಾರದ ಮೇಲೆ ಶ್ರೀಪತಿ ಪಂಡಿತಾರಾಧ್ಯರು ಶ್ರೀಕರಭಾಷ್ಯವನ್ನು ಬರೆದಿರುವುದಾಗಿ ತಮ್ಮ ಭಾಷ್ಯಾರಂಭವಲ್ಲಿ ಹೇಳಿರುವುದು ಸರ್ವವೇದ್ಯವೇ ಆಗಿದೆ.

ಅಗಸ್ತ್ಯಮುನಿಚಂದ್ರೇಣಕೃತಾವೈಯಾಪಿಕೀಂ ಶುಭಾಂ ।
ಸೂತ್ರವೃತ್ತಿಂ ಸಮಾಲೋಕ್ಯಕೃತ್ತಂ ಭಾಷ್ಯಂ ಶಿವಶಂಕರಂ ॥

ಎಂಬ ಮಾತು ಅಗಸ್ತ್ಯ ಮಹರ್ಷಿಯು ವೀರಶೈವತ್ವವನ್ನು ಸಾರುತ್ತದೆ. ನಂದಿಯು ಮಹೇಶ್ವರನ 'ಅ ಇ ಉಣ್' ಮೊದಲಾದ ಹದಿನಾಲ್ಕು ಸೂತ್ರಗಳಿಗೆ ನಂದಿಕೇಶ್ವರಕಾರಿಕಾ ಎಂಬ ಭಾಷ್ಯವನ್ನು ಬರೆದು ವ್ಯಾಕರಣ ಶಾಸ್ತ್ರದ ಆದ್ಯಪ್ರವರ್ತಕ ನಾಗಿರುವುದು ಸುಪ್ರಸಿದ್ಧ. ಮುಂಡಕವಲ್ಲಿ ಬರುವ ಭರದ್ವಾಜ ಅಂಗಿರಸರು ವೀರಶೈವ ಶ್ರೋತ್ರಿಯ ಬ್ರಹ್ಮನಿಷ್ಠರಿದ್ದಾರೆಂಬುದು ಮುಂಡಕಭಾಷ್ಯ (ಶಾಂಕರೀ) ದಲ್ಲಿ ಸುಸ್ಪಷ್ಟವಿದೆ. ವಿಶ್ವಾಮಿತ್ರ ಮಹರ್ಷಿಯು ವೇದಗಾಯತ್ರಿಯ ದ್ರಷ್ಟೃ. ಅಲ್ಲಿ ಭರ್ಗ ಶಬ್ದವಾಚ್ಯನಾದ ಪರಶಿವನನ್ನೇ ದೇವತೆಯಾಗಿ ರಚಿಸಿರುವ ಈ ಮಂತ್ರಪುರಶ್ಚರಣ

ಮತ್ತು ಬ್ರಹ್ಮೋಪದೇಶಗಳೇ ಬ್ರಾಹ್ಮಣದ ಮೂಲವೆಂಬುದನ್ನು ಬೇರೆ ಹೇಳ ಬೇಕಾಗಿಲ್ಲ.

ವೇದೋಪನಿಷತ್ತು ವೀರಲಿಂಗೋಪನಿಷತ್ತುಗಳಲ್ಲಿ ವೀರಶೈವ ಆಚಾರ್ಯರ ಪ್ರಸ್ತಾಪ ಸ್ಪಷ್ಟವಾಗಿಯೇ ಇದೆ.

ಮಹಾಭಾರತದ ಅನುಶಾಸನಪರ್ವದಲ್ಲಿ ಯಾಜ್ಞವಲ್ಕ್ಯ ವೇದವ್ಯಾಸ ಮತ್ತು ನಾರದ ಮೊದಲಾದ ಮಹರ್ಷಿಗಳು ಪರಶಿವನನ್ನು ಆರಾಧನ ಮಾಡಿ ಭಕ್ತಿಜ್ಞಾನ ವೈರಾಗ್ಯಗಳ ಅತುಲ ಸಂಪತ್ತನ್ನೇ ಪಡೆದರೆಂದು ಹೇಳಿದೆ.

> ಯಾಜ್ಞವಲ್ಕ್ಯ ಇತಿಖ್ಯಾತ ಋಷಿಃ ಪರಮಧಾರ್ಮಿಕಃ ।
> ಆರಾಧ್ಯ ಸಮಹಾದೇವಂ ಪ್ರಾಪ್ತವಾನತುಲಂಯಶಃ ॥ ೨೩
> ವೇದವ್ಯಾಸಶ್ಚಯೋಗಾತ್ಮ ಪರಾಶರ ಸುತೋಮುನಿಃ ।
> ಸೋಽಪಿ ಶಂಕರಮಾರಾಧ್ಯ ಪ್ರಾಪ್ತವಾನತುಲಂಯಶಃ ॥ ೨೪
> ನಾರದೇನಃ ತು ಭಕ್ತ್ಯಾಸೌ ಭವ ಆರಾಧಿತಃಪುರಾ ॥

ಇಲ್ಲಿ ಮೇಲೆ ಕಂಡ ಋಷಿಗಳು ಶಿವಕೃಪೆಯಿಂದ ಪಡೆದ ಯಶಸ್ಸು ಶಿವನ ಅನುಭವದಿಂದ ಲಭ್ಯವಾದ ಕೀರ್ತಿಯೇ ಆಗಿದೆ. ಉಪನಿಷತ್ತುಗಳಲ್ಲಿ ಬರುವ "ಭಕ್ತಿ ಜ್ಞಾನಯೋಗಾದವೇಹಿ" (ಕೈವಲ್ಯ) ಎಂದರೆ ಶಿವಭಕ್ತಿ, ಶಿವವ್ರತ, ಶಿವಧ್ಯಾನ ಶಿವಜ್ಞಾನಗಳು ಶಿವಾನುಭಾವದ ಪ್ರಕಾರಗಳೇ ಆಗಿವೆ. ಸ್ಕಾಂದಪುರಾಣಾಂತರ್ಗತ ವಾದ ಶಂಕರ ಸಂಹಿತೆಯಲ್ಲಿ ವೀರಮಹೇಶ್ವರರಿಗೆ ಸಂಬಂಧಿಸಿದ ಒಂದು ಪ್ರಕರಣವೇ ಇದೆ.

> ಧೃತಲಿಂಗಂ ಸದಾಚಾರನಿರತಂ ದ್ವಿಜಪುಂಗವಪಿ ।
> ವೀರಮಾಹೇಶ್ವರಂ ಸಮ್ಯಕ್ ಪೂಜಯೋದಭಕ್ತಿಮಾನ್ನರ ॥
> ಸ್ಕಾಂದ ಶಂಕರ ೮೪ ॥೬೭॥

ಶಿವಲಿಂಗಧಾರಣ ಸಂಪನ್ನನೂ ಸದಾಚಾರನಿರತನೂ ದ್ವಿಜಪುಂಗವನೂ (ಬ್ರಾಹ್ಮಣ ಶ್ರೇಷ್ಠ) ಆದ ವೀರ ಮಾಹೇಶ್ವರರನ್ನು ಮಾನವನು ಭಕ್ತಿಯಿಂದ ಪೂಜಿಸತಕ್ಕದ್ದು ಎಂದು ಹೇಳಿದೆ. ಇವರೇ ಮೊದಲಾದ ಪ್ರಥಮರು ಅಥವಾ ಪ್ರಮಥರು ಅನುಭವಿಗಳು ಅಥವಾ ಶಿವಾನುಭಾವಿಗಳು ಎಂದು ಧೃಢವಾಗಿ ಹೇಳಬಹುದು.

—:o:—

# ಶೈವವೂ ವೀರಶೈವವೂ

**—ಟಿ. ಎನ್. ಮಲ್ಲಪ್ಪ**

ಹೈಕೋರ್ಟ್ ಜಡ್ಜ್ ರೇಸ್‌ಕೋರ್ಸ್ ರೋಡ್, ಬೆಂಗಳೂರು.

**ಆದಿಮಾನವ ಕಾಲದ ಶೈವ ಲಿಂಗಧಾರಿಗಳ ಆಧಿದೈವಿಕ ಕಲ್ಪನೆ.**

ಶೈವಧರ್ಮವೇ ಪ್ರಪಂಚದ ಧರ್ಮಗಳಲ್ಲೆಲ್ಲ ಅತ್ಯಂತ ಪ್ರಾಚೀನ ಧರ್ಮವೆಂಬುದೂ ಆದಿ ಮಾನವ ಕಾಲದಲ್ಲಿಯೇ ಲಿಂಗಪೂಜೆ ಲಿಂಗಧಾರಣೆಗಳು ಪ್ರಚಲಿತವಾಗಿದ್ದವೆಂಬುದೂ ಆರ್ಯರ ಆದಿ ಗ್ರಂಥವಾದ ಋಗ್ವೇದದಲ್ಲಿಯೂ ಕಾಣಬಂದಿರುವ ಇಂದಿನ ಶೈವ ಧರ್ಮದ ಕಲ್ಪನೆಗಳು ಆರು ಸಹಸ್ರ ವರುಷಗಳಷ್ಟು ಹಿಂದಿನ ಸಿಂಧೂ ನದಿಯ ತೀರದ ನಾಗರೀಕರಲ್ಲಿಯೇ ಕಂಡು ಬರುವುವೆಂಬುದೂ ಮೊಹೆಂಜೋದಾರೋ ಹರಪ್ಪ ನಾಗರಿಕತೆಯ ವಿಷಯವನ್ನು ಅನ್ವೇಷಣೆ ಮಾಡಿರುವ ಸರ್ ಜಾರ್ಜ್ ಮಾರ್ಷೆಲ್ಲರೇ ಮೊದಲಾದವರ ಲೇಖನಗಳಿಂದ ತಿಳಿದು ಬರುವ ವಿಷಯಗಳಾಗಿವೆ. ಸರ್ ಜಾರ್ಜ್ ಮಾರ್ಷೆಲ್ಲರ ಗ್ರಂಥದ ೫೯ನೇ ಪುಟದಲ್ಲಿ "Carried on the person, just as minature lingas are commonly carried by Savites to day" ಎಂದು ಅಂದಿನ ಕಾಲದ ಸಣ್ಣ ಲಿಂಗಗಳ ವಿಷಯದಲ್ಲಿ ಹೇಳಿದ ಮಾತೂ ಅದೇ ಗ್ರಂಥದ ೬೧ನೇ ಪುಟದ ಅಡಿ ಟಿಪ್ಪಣಿಯಲ್ಲಿಯೂ ಅಂದಿನ ಜನರು ಇಂದಿನ ಲಿಂಗಾಯಿತರಂತೆ ಸಣ್ಣ ಲಿಂಗಗಳನ್ನು ಧರಿಸುತ್ತಿದ್ದರೆಂಬುದನ್ನು ಸ್ಪಷ್ಟ ಮಾಡಿದ್ದಾರೆ. ಕೀಥ್ ಮತ್ತು ಪ್ರೀಲಷ್ಕಿಯವರ ಗ್ರಂಥಗಳಿಂದ ಲಿಂಗ ಪೂಜೆ ಹಾಗೂ ಲಿಂಗಧಾರಣೆಯ ಪದ್ಧತಿಯು ಮೆಡಿಟರೇನಿಯನ್ ತೀರದವರೆಗೂ ಹಬ್ಬಿದ್ದಿತೆಂಬುದು ಕಂಡು ಬರುವುದು. ಶಿವನು ಯೋಗಾರೂಢನಾದ ದಕ್ಷಿಣಾಮೂರ್ತಿ, ಮುಕ್ಕಣ್ಣ, ಸ್ವಯಂಭು, ಅಷ್ಟತನು, ನಟರಾಜ, ತಾಂಡವನ್, ತ್ರಿಶೂಲಧಾರಿ, ಸರ್ಪಭೂಷಣ, ಪರಶುಧಾರಿ, ಅರ್ಧನಾರೀಶ್ವರ, ಪರಾತ್ಪರ, ಸರ್ವಜ್ಞ, ವರದ, ಊರ್ಧ್ವಕೇತು, ಪಶುಪತಿ, ಚಂದ್ರಚೂಡ, ದವಳಗಿರಿಸಿವಾಸ ಮತ್ತು ಸೃಷ್ಟಿ ಸ್ಥಿತಿಲಯ ಕಾರಣನೆಂಬ ಕಲ್ಪನೆಗಳು, ಋಗ್ವೇದದಲ್ಲಿ ಕಾಣಬರದ ಆದರೆ ಅದಕ್ಕೂ ಹಿಂದಿನ ದ್ರಾವಿಡರಲ್ಲಿ ಕಂಡು ಬಂದ ಕಲ್ಪನೆಗಳೆಂಬುದಕ್ಕೆ ಮಾರ್ಷೆಲ್ ಮೊದಲಾದವರ ಆಧಾರಗಳನ್ನು ವೀರಶೈವದ ಉಗಮ ಮತ್ತು ಪ್ರಗತಿ ಎಂಬ ನನ್ನ ಗ್ರಂಥದಲ್ಲಿ ಕೊಟ್ಟಿದೆಯಾಗಿ ಲೇಖನ ವಿಸ್ತಾರಭಯದಿಂದ ಮತ್ತೆ ಇಲ್ಲಿ ಕೊಟ್ಟಿಲ್ಲ. ಶೈವರಲ್ಲಿ

ಸಾಮಾನ್ಯವಾಗಿಯೂ ವಿಶೇಷವಾಗಿ ವೀರಶೈವರಲ್ಲಿಯೂ ಇರುವ ಈ ಶಿವ ಸಂಬಂಧ ವಾದ ಆದಿದೈವಿಕ ಕಲ್ಪನೆಗಳೂ ಲಿಂಗಧಾರಣ ಲಿಂಗಾರ್ಚನಾದಿ ಆಚರಣೆಗಳೂ ಆರು ಸಹಸ್ರ ವರುಷಗಳ ಹಿಂದೆಯೇ ಪ್ರಚಲಿತವಾಗಿದ್ದವೆಂಬುದು ಗಮನಾರ್ಹ ವಾದ ಸಂಗತಿಯಾಗಿದೆ.

**ಆದಿ ಮಾನವ ಕಾಲದ ಶೈವರಲ್ಲಿಯೇ ಶಕ್ತಿ ವಿಶಿಷ್ಟಾದ್ವೈತ ಶೈವ ಆಧ್ಯಾತ್ಮಿಕ ಕಲ್ಪನೆ**

ಇಂದಿನ ಅರ್ಧನಾರೀಶ್ವರ ಕಲ್ಪನೆಯಲ್ಲಿ ಯಾವ ಕಡೆ ಪುರುಷಾಕಾರವಿದೆಯೋ ಅಂದಿನ ಅರ್ಧನಾರೀಶ್ವರ ಕಲ್ಪನೆಯಲ್ಲಿಯೂ ಅದೇ ಪುರುಷಾಕಾರವಿದ್ದುದು ಕಂಡು ಬಂದಿದೆ. ಶಿವನು ಶಕ್ತಿ ವಿಶಿಷ್ಟನಾದರೂ ಅದ್ವೈತನಾಗಿರುವನೆಂಬ ವೀರಶೈವರ ಆಧ್ಯಾತ್ಮಿಕ ಕಲ್ಪನೆಯ ತಳಹದಿಯಿದು. ಶಿವಶಕ್ತಿಯರೂ ಅವರಿಂದ ಹೊರ ಹೊಮ್ಮಿದ ಜೀವನೂ ಸೇರಿ ಎಲ್ಲವೂ ಅದ್ವೈತವೇ ಎಂಬುದೇ ವೀರಶೈವರ ಆಧ್ಯಾತ್ಮಿಕ ಕಲ್ಪನೆಯು. ಅಂದಿನ ಜನರ ಕಲ್ಪನೆಯಲ್ಲಿ 'ಆನ್' ಎಂಬ ಶಿವನು 'ಅಮ್ಮ' ಎಂಬ ಶಕ್ತಿಯೊಡನೆ ಕೂಡಲು 'ಅನಿಲ್' ಎಂಬ ಜೀವನು ಉತ್ಪತ್ತಿಯಾದರೂ ಇವರು ಮೂವರೂ ಒಬ್ಬರೆ ಎಂಬ ಭಾವನೆಯಿದ್ದಿತು. ಫಾದರ್ ಹೆರಾಸರು ಈ ಕಲ್ಪನೆಯನ್ನು "the joined life of the three Great Gods" ಎಂದು "The divine Triad" ಎಂಬ ಶೀರ್ಷಿಕೆಯಲ್ಲಿ ವಿವರಿಸಿದ್ದಾರೆ. 'ಅನಿಲ್' ಎಂದರೆ ಕೆಲವರು ಊಹಿಸಿರುವಂತೆ ಷಣ್ಮುಖನಲ್ಲ; ಏಕೆಂದರೆ ಅಂದಾಗಲೀ ಇಂದಾಗಲೀ ಎಂದಾಗಲೀ ಶಿವಶಕ್ತಿಯು ಷಣ್ಮುಖನೂ ಒಂದೇ ಎಂಬ ಭಾವನೆಯು ಉಂಟಾದುದಿಲ್ಲ. "ಸಚ್ಚಿದಾನಂದ ನಿತ್ಯ ಪರಿಪೂರ್ಣವಪ್ಪನಿಃಕಲ ಲಿಂಗವು .......ತನ್ನ ಚಿತ್ ಪ್ರಭಾವ ಶಕ್ತಿಯ ಮುಂದು ಗೊಂಡು........ಅನಂತ ಕೋಟಿ ಆತ್ಮರುಗಳನ್ನು ತನ್ನಲ್ಲಿಯೇ ಪುಟ್ಟಿಸಿ" ಎಂದು ಮೊದಲಾಗಿ ಹೇಳುವ ಸೃಷ್ಟಿವಚನದಿಂದ ಶಿವಶಕ್ತಿಯರಲ್ಲಿ ಜೀವನು ಹುಟ್ಟಿದುದು ಸ್ಪಷ್ಟವಾಗುವುದು. "ಜ್ಞಾ ಜ್ಞೌ ದ್ವಾವಜಾ ವೀಶ ನೀಶಾವಜಾಹ್ಯೇಕಾ" ಎಂದು ಮೊದಲಾಗುವ ಶ್ವೇತಾಶ್ವತರ ಶ್ರುತಿಯಲ್ಲಿ ಶಿವಶಕ್ತಿ ಜೀವರೆಂಬುದೆಲ್ಲ ಬ್ರಹ್ಮವೊಂದೇ ಎಂಬ ಕಲ್ಪನೆಯಿದೆ The divine Triad ಎಂಬ ಶೀರ್ಷಿಕೆಯಲ್ಲಿ ವಿವರಿಸಲ್ಪಟ್ಟ ಅಂದಿನ ಜನರ ಕಲ್ಪನೆಯಲ್ಲಿಯೂ ಇದೇ ಭಾವನೆಯ ಹಿನ್ನಲೆಯನ್ನು ಕಾಣಬಹುದು. ಮೊದಲು ಒಟ್ಟಾಗಿ ತೋರಿದ್ದುದು ಮುಂದೆ ವಿವೇಚನೆಯಲ್ಲಿ ಪರಿಸ್ಫುಟವಾಯಿತು.

**ಆದಿಮಾನವ ಕಾಲದ ಶೈವರಲ್ಲಿ ಆಧಿಭೌತಿಕ ಆಚರಣೆ–ಶಿವಯೋಗ**

ಈ ಭೌತಿಕ ಪ್ರಪಂಚದಲ್ಲಿನ ಆಚರಣೆಯಲ್ಲಿ ಲೌಕಿಕಾಚರಣೆ ಪರಮಾರ್ಥಿಕಾ ಚರಣೆಯೆಂದು ವಿಂಗಡಿಸಬಹುದು. ಪಣಿಗಣಗಳೆಂದು ಋಗ್ವೇದದಲ್ಲಿ ಪ್ರಸಿದ್ಧರಾದ ಅಂದಿನ ದ್ರಾವಿಡರ ಮುಖ್ಯ ವೃತ್ತಿ ವಾಣಿಜ್ಯವಾಗಿದ್ದಿತು. ಇವರು ಹೊರದೇಶಗಳಲ್ಲಿ ಪ್ರಯಾಣ ಮಾಡಿ ತಮ್ಮ ಲಿಂಗಾರ್ಚನೆ ಲಿಂಗಧಾರಣೆಗಳನ್ನೊಳಗೊಂಡ ಸಂಸ್ಕೃತಿ ಯನ್ನು ಮೆಡಿಟರೇನಿಯನ್ ತೀರದ ದೇಶಗಳಿಗೂ ಹಬ್ಬಿಸಿದರು. The early tribes of Minas and the Panis travelled abroad and

spread the indigenous culture of India in early Egypt Greek Spain, Portugal England and Ireland....They retained their profession there as the expression on vanic' (derived from pani) in literature indicates "Religions of India" by A.P.Karmarkar page 7. ಇಂದೂ ವೀರಶೈವರಲ್ಲಿ ಮುಖ್ಯವಾದ ಪಂಗಡಕ್ಕೆ 'ಬಣಜಿಗ' ಎಂದು ಹೆಸರು. 'ಬಣಜಿಗ' ಪದವು 'ವಣಿಕ್' ಪದದ ತದ್ಭವ. ಆದರೆ ಬಸವಾದಿ ಪ್ರಥಮರು ಈ ಉದ್ಯೋಗ ವನ್ನು ಸಂಸ್ಕರಿಸಿ ಅದಕ್ಕೆ ಕಾಯಕ ರೂಪವನ್ನು ಕೊಟ್ಟರು. ಆದರಲ್ಲಿ ಅವರಿಗೆ ಧೈವ ಭಾವನೆಯಿದೆ. ಇವರ ಕಲ್ಪನೆಯಂತೆ ಶಿವನೇ ಒಬ್ಬ ವಣಿಕ್. ಅವನ ವಿಷಯ ದಲ್ಲಿ, "ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವ ಶೆಟ್ಟಿ..... .. ಒಂದು ಕಾಣಿಯ ಸೋಲ ಅದ್ದ ಗಾಣಿಯ ಗೆಲ್ಲ" ಎಂದಿ ರುವರು ನಮ್ಮ ಶರಣರು.

ಇಂದಿನ ವೀರಶೈವರ ಪಾರಮಾರ್ಥಿಕ ಆಚರಣೆಯಲ್ಲಿ ಲಿಂಗಧಾರಣೆ, ಲಿಂಗಾ ರ್ಚನೆ, ಮತ್ತು ಶಿವಯೋಗ ಇವು ಗಮನಾರ್ಹವಾದವು. ಐದಾರು ಸಹಸ್ರ ವರ್ಷ ಗಳ ಸಿಂಧು ತೀರದ ಹಿಂದಿನ ಪಣಿಗಣದ ನಾಗರಿಕರಲ್ಲಿ ಲಿಂಗಾರ್ಚನೆ ಲಿಂಗಧಾರಣೆ ಗಳಿದ್ದುದನ್ನು ಗಮನಿಸಲಾಯಿತು. ಅಂದಿನ ಕಾಲದಲ್ಲಿ ದೊರೆತಿರುವ ಯೋಗೇಶ್ವರ ಶಿವನ ವಿಷಯವಾಗಿ 'ವೇದಿಕ್ ಏಜ್' ಎಂಬ ಗ್ರಂಥದಲ್ಲಿ ಅರೆನ್ ಮತ್ತು ಅನ್ ವಿನ್ ಎಂಬುವರು The diety is crosslegged in a padmasana posture with eyes turned towards the tip of the nose which evidences yogeshvara aspect of the deity" ಎಂದು ಹೇಳಿರುವರು. ಪ್ರೋ ಇಂಡಿಯನ್ ಕಲ್ಚರ್ ಎಂಬ ಗ್ರಂಥದಲ್ಲಿ "one marble statuette has head neck and body quite errect and half shut eyes fixed on the tip of the nose" ಎಂದು ಹೇಳಿರುವುದು ಮುಂದಿನ ಕಾಲದ ಶ್ವೇತಾಶ್ವತರದಲ್ಲಿ "ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ" ಎಂದು ಮೊದಲಾಗಿ ಹೇಳುವ ಯೋಗ ವಿಷಯಕ ಮಂತ್ರವನ್ನು ಜ್ಞಾಪಕಕ್ಕೆ ತರುತ್ತದೆ. ಇಂತಹ ವಿಗ್ರಹವು ಸಿಕ್ಕುವ ಮೊದಲೇ ರಾಮ ಪ್ರಸಾದಚಂದ್ರರು ಮೂಗಿನ ತುದಿಯಲ್ಲಿ ಲಕ್ಷ್ಯವನ್ನಿಟ್ಟಿರುವ ಯೋಗಿಯ ವಿಗ್ರಹವೊಂದರಿಂದ ಆಗಿನ ಕಾಲದಲ್ಲಿ ಯೋಗವು ಪ್ರಚಲಿತವಾಗಿದ್ದುದನ್ನು ಹೇಳಿರುವುದನ್ನು ಸರ್ ಜಾನ್ ಮಾರ್ಷೆ ಲ್ಲರು ಪ್ರಶಂಸಿದ್ದಾರೆ. ಅಂದಿನ ಜನರ ದೈವವು ಶಿವನಾದುದರಿಂದ ಅಂದು ಶಿವ ಯೋಗವು ಪ್ರಚಲಿತವಾಗಿದ್ದಿತೆಂಬುದು ಸ್ಪಷ್ಟ. ಶೈವನೇ ಆದ ಪತಂಜಲಿಯು ಇದನ್ನು ಬೆಳಸಿದನು. ಶಿವಶರಣರ ಶಿವಯೋಗವು ಮುಂದಿನ ಮೆಟ್ಟಿಲು.

## ವೈದಿಕದ ಹೆಸರಿನಲ್ಲಿ ಆಗುವ ಧರ್ಮದ ಮುನ್ನಡೆ

ವೇದಗಳೇ ಹಿಂದುತ್ವದ ಜೀವಾಳ ಎಂಬಂತೆ ಉದ್ಗಾರ ತೆಗೆಯುವುದೇ ಹೆಚ್ಚು. ಆದರೆ ಡಾ॥ ರಾಧಾಕೃಷ್ಣನ್‌ರವರು ಅವರ "Outlines of Indian philosophy" ಗ್ರಂಥದ ೧೩೦ ನೆಯ ಪುಟದಲ್ಲಿ ಹೇಳಿದಂತೆ "The living Hindu religion to day from Cape Comorin to the remotest corners of Tibet is essentially tantric" ಅರ್ಥ ವಿಶಾರದ ಮಹಾ ಮಹೋಪಾಧ್ಯಾಯ ಡಾ॥ ಆರ್. ಶಾಮಾ ಶಾಸ್ತ್ರಿಗಳು ಜಯಕರ್ನಾಟಕದ ಒಂಬತ್ತನೆಯ ಸಂಪುಟದಲ್ಲಿ ಪ್ರಕಟವಾದ"ದ್ರಾವಿಡ ಸಂಸ್ಕೃತಿ" ಎಂಬ ಅವರ ಲೇಖನ ದಲ್ಲಿ ಹೇಳಿದಂತೆ—

ವೈದಿಕ ಆರ್ಯರ ಪೂಜೆ ಮುಖ್ಯವಾಗಿ ಅಗ್ನಿಪೂಜೆಯು ಅವರ ದೇವತೆಗಳು ಭೂವ್ಯಂತರಿಕ್ಷಗಳಲ್ಲಿ ತೋರಿಯಡಗುವ ಅನೇಕ ದಿವ್ಯಶಕ್ತಿಗಳು....ಆರ್ಯರ ರುದ್ರನು ಈಗಿನ ತ್ರಿಶೂಲಧಾರಿಯಾದ ಶಿವನಲ್ಲ; ಅದ್ಭುತ ಶಕ್ತಿಯುಳ್ಳ ಪ್ರಚಂಡ ವಾಯುವು. ಆರ್ಯರ ವಿಷ್ಣುವು ಶಂಖಚಕ್ರಧಾರಿಯಾನ ಈಗಿನ ವಿಷ್ಣುವಲ್ಲ; ವಿಶ್ವಪೋಷಕನಾದ ಸೂರ್ಯನು....ಈಗಿನ ಶೈವವೈಷ್ಣವರು ಪೂಜೆ ಕಾಲಕ್ಕೆ ಪಠಿಸುವ ಮಂತ್ರಗಳಿಗೂ ಪೂಜೆಗೂ ಸಂಬಂಧವೇ ತೋರದು. ಒಂದೇ ಉದಾಹರಣೆಯನ್ನು ಹೇಳಬೇಕಾದರೆ- ದೇವರಿಗೆ ಗಂಧ ಹಚ್ಚುವ ಕಾಲದಲ್ಲಿ "ಗಂಧದ್ವಾರಂ" ಎಂಬ ಮಂತ್ರವನ್ನು ಅನ್ನುವ ಪರಿಪಾಠವಿದೆ. ಈ ಮಂತ್ರದಲ್ಲಿ 'ಗಂಧ'ವೆಂಬ ಶಬ್ದ ಮಾತ್ರವಿದೆ; ಆದರೆ ವಿಷ್ಣುವಿ ಗಾಗಲೀ, ಶಿವನಿಗಾಗಲೀ, ಹಚ್ಚುವ ಗಂಧಕ್ಕಾಗಲೀ ಏನೂ ಸಂಬಂಧವಿಲ್ಲ. ಭಾಗ್ಯ ದೇವತೆಯಾದ 'ಶ್ರೀ'ಯನ್ನು ಕರೆಯುವ ಮಂತ್ರವಿದು. ಪ್ರಾಚೀನ ಆರ್ಯರಿಗೆ ಗುಡಿಗೋಪುರಗಳ ಅವಶ್ಯಕತೆಯಿರಲಿಲ್ಲ; ದೀಪಧೂಪಗಳ ಆಡಂಬರವಿರಲಿಲ್ಲ. ಅವರ ಪೂಜೆ ತೀರ ಸರಳವಾದುದು. ವೇದಿಕೆಯಲ್ಲಿ ಪ್ರಜ್ವಲಿಸುವ ಅಗ್ನಿಯೊಂದಿದ್ದರೆ ತೀರಿತು. ಹಾಲು ಬೆಣ್ಣೆಗಳೇ ಅವರ ಹವಿಸ್ಸು; ಹೆಚ್ಚಿನ ಯಜ್ಞಗಳಿಗಾಗಿ ತಮ್ಮ ಅರಸರಿಂದ ತಕ್ಕ ಸಹಾಯವನ್ನು ಅವರು ಹೊಂದುತ್ತಿದ್ದರು. ಆದರೆ ಮುಂದೆ ಸಾವಿರಾರು ವರ್ಷಗಳಾದ ಮೇಲೆ ಆರ್ಯರಲ್ಲಿಯೇ ಎರಡು ಪಂಗಡಗಳಾದುವೆಂದು ಕೆಲವರು ಹೇಳುವರು. ಮೊದಲು ಜೈನರು ಆಮೇಲೆ ಬೌದ್ಧರು ಆರ್ಯರ ಪಶುಯಜ್ಞವನ್ನು ವಿರೋಧಿಸಿದರು. ಆರ್ಯರ ಅನೇಕ ಅರಸರೂ ಅವರ ಪ್ರಜೆಗಳೂ ಈ ಹೊಸ ಪಂಗಡಗಳಿಗೆ ಹೊಂದಿಕೊಂಡರು ಈ ಬ್ರಾಹ್ಮಣರು ತಮ್ಮ ಪ್ರತಿಕಕ್ಷಿ ಗಳಾದ ಬೌದ್ಧ ಜೈನರನ್ನು ಎದುರಿಸಲು ದ್ರಾವಿಡರಲ್ಲಿಯ ಶೈವವೈಷ್ಣವ ಪಂಥಗಳಲ್ಲಿ ಸೇರಿಕೊಂಡು ತನ್ಮಯರಾದರು. ಈ ತನ್ಮಯತೆಯು ಪರಾಕಾಷ್ಠೆಗೇರಿತು. ಅವರು ತಮ್ಮ ಪೂರ್ವದ ವೈದಿಕಾಚಾರವನ್ನು ಬಿಟ್ಟುಕೊಟ್ಟರು. ಸುಗಮವಾದ ಹೊಸ ಸಂಸ್ಕಾರಗಳನ್ನೂ ಸಂಪ್ರದಾಯಗಳನ್ನೂ ಎತ್ತಿಕೊಂಡರು. ವೈದಿಕ ಯಜ್ಞಯಾಗಾದಿ ಗಳು ದುಃಸಾಧ್ಯವೆಂದು ಮಾಯವಾದವು....ವೇದದಲ್ಲಿಯೂ ಗೃಹಸೂತ್ರಗಳಲ್ಲಿಯೂ

ಹೇಳಿದ ಅನೇಕ ಸಂಪ್ರದಾಯಗಳನ್ನೂ ಬ್ರಾಹ್ಮಣರು ಅನುಸರಿಸಹತ್ತಿದರು. ಇವುಗಳನ್ನು ಅವರು ದ್ರಾವಿಡರಿಂದ ಕಲಿತುಕೊಂಡರೆಂದು ಸಾಮಾನ್ಯವಾಗಿ ಹೇಳಬಹುದು.

ಮೇಲಿನ ಆಧಾರಗಳಿಂದ ತಿಳಿದು ಬರುವಂತೆ ವೇದಗಳ ಕಾಲದ ಪುರಾತನ ಆರ್ಯರು ಆಚರಿಸುತ್ತಿದ್ದ ಯಜ್ಞಯಾಗಾದಿಗಳೂ ಅವುಗಳಿಂದ ತೃಪ್ತಿಪಡುತ್ತಿದ್ದ ಇಂದ್ರಾದಿ ದೇವತೆಗಳೂ ಹೇಳ ಹೆಸರಿಲ್ಲದಂತಾಗಿವೆ. ಅವುಗಳಿಗೆ ಬದಲಾಗಿ ದ್ರಾವಿಡರ ಶಿವ ವಿಷ್ಣು ಮೊದಲಾದ ದೇವರುಗಳನ್ನು ಆಗಮಗಳಲ್ಲಿ ಹೇಳಿದಂತೆ ಗುಡಿಗೋಪುರಗಳಲ್ಲಿ ಇಂದು ಪೂಜಿಸುತ್ತಿದ್ದೇವೆ. ಹಾಗೆ ಪೂಜಿಸುವಾಗ ಸೂಕ್ತವಾದುವೆಂದು ತೋರುವ ವೇದ ಮಂತ್ರಗಳನ್ನು ಪಠಿಸುವುದುಂಟು. ಹೀಗೆ ವೈದಿಕದ ಹೆಸರಿನಲ್ಲಿ ಆಗಮ ಧರ್ಮವು ಮುನ್ನಡೆದಿದೆ. ಆಗಮ ವೃಕ್ಷದ ಆಧಾರದ ಮೇಲೆ ವೈದಿಕ ಲತೆಗಳು ಇನ್ನೂ ಉಳಿದು ನಿಂತಿವೆ. ಹೀಗೆ ಆರ್ಯ ದ್ರಾವಿಡ ಸಂಸ್ಕೃತಿಗಳು ಬೆರಸಿ ಹೋದುದು ಹೇಗೆಂಬುದು ವಿಚಾರಾರ್ಹವಾದುದು.

## ಆಗಮ ಧರ್ಮದ ಮುನ್ನಡೆಗೆ ಕಾರಣ

ಆರ್ಯರ ಶುದ್ಧ ವೈದಿಕ ಧರ್ಮವು ಹಿಂದೆ ಬಿದ್ದು ದ್ರಾವಿಡರ ಆಗಮ ಧರ್ಮದ ಮುನ್ನಡೆಯಾದುದಕ್ಕೆ ಮುಖ್ಯವಾಗಿ ಆರ್ಯರ ಹಿಂಸಾತ್ಮಕವೂ ಅನೀತಿಯುತವೂ ಆದ ಯಜ್ಞ ಯಾಗಾದಿಗಳೇ ಕಾರಣವೆನ್ನಬಹುದು. ಯಜ್ಞ ಯಾಗಾದಿಗಳ ಸ್ವರೂಪವನ್ನರಿಯಲು ೧೯೫೫ನೆಯ ಇಸವಿಯ ಸೆಪ್ಟಂಬರ್ ತಿಂಗಳ 'ಕಸ್ತೂರಿ' ಮಾಸಿಕದ ೧೦೬ನೆಯ ಪುಟದಿಂದ ಪ್ರಾರಂಭವಾಗುವ ಅಶ್ವಮೇಧ ವಿಷಯಕವಾದ ಲೇಖನದ ಭಾಗವನ್ನಿಲ್ಲಿ ಕೊಡಬಹುದಾಗಿದೆ.

ಯಜ್ಞಾಶ್ವವು ಒಂದು ಕಾಡು ಹೋರಿಯೂ ಯಜ್ಞ ವೇದಿಕೆಯ ಬಳಿ ಯೂಪ (ಗೂಟ)ಗಳಿಗೆ ಕಟ್ಟಲ್ಪಡುತ್ತವೆ. ಇತರ ೨೧ ಯೂಪಗಳಿಗೆ ೩೨೭ ಸಾಧುಪಶುಗಳನ್ನೂ ಅವುಗಳ ನಡುವೆ ೨೬೦ ಕಾಡುಪಶುಗಳನ್ನೂ ಬಿಗಿಯಬೇಕು....ಕುದುರೆ ಪ್ರಜಾಪತಿಗೆ ಆಹುತಿಯಾಗುತ್ತದೆ. ಇತರ ದೇವತೆಗಳಿಗೆ ಇತರ ಪ್ರಾಣಿಗಳು ಆಹುತಿಯಾಗುತ್ತಿದ್ದವು....ಯಜುರ್ವೇದದಲ್ಲಿ ಆ ರಾತ್ರಿಯನ್ನು ಪಟ್ಟ ಮಹಿಷಿಯು ಈ ಸತ್ತ ಯಜ್ಞಪಶುವಿನ ಸಂಗಡ ಕಳೆಯಬೇಕೆಂದೂ ಅದರಿಂದ ಅವಳು ಪುತ್ರವತಿಯಾಗುವಳೆಂದೂ ಹೇಳಿದೆ.

ಸ್ವಾಮಿ ದಯಾನಂದ ಸರಸ್ವತಿಯವರ ಸತ್ಯಾರ್ಥ ಪ್ರಕಾಶಿಕೆಯ ೩೦೭ನೆಯ ಪುಟದಲ್ಲಿ ಹೀಗೆ ಹೇಳಿದೆ–

"ಈ ದೇಶದಲ್ಲಿಯೇ ಗೋರಖಪುರದಲ್ಲಿ ಹಿಂದೆ ಒಬ್ಬ ರಾಜನಿದ್ದನೆಂದೂ, ಪೋಪರು (ಪುರೋಹಿತರು) ಆತನ ಕೈಯಿಂದ ಯಜ್ಞ ಮಾಡಿಸಿ ಆತನ ಪ್ರಿಯ ಪತ್ನಿಯಾದ ಮಹಾರಾಣಿಯನ್ನು ಆ ಯಜ್ಞ ಸಮಯದಲ್ಲಿ ಒಂದು ಕುದುರೆಯಿಂದ ಸಂಭೋಗ ಮಾಡಿಸಿದ್ದರಿಂದ ಆಕೆಯು ಸತ್ತುಹೋದಳೆಂದೂ ಬಳಿಕ ರಾಜನು ತನ್ನ

ಮಗನಿಗೆ ಪಟ್ಟಗಟ್ಟಿ, ತಾನು ಸಾಧು ವೇಷವನ್ನು ಧರಿಸಿ, ಈ ಪೋಪರ ಕಪಟ ಲೀಲೆಗಳನ್ನೆಲ್ಲ ಬಯಲು ಮಾಡತೊಡಗಿದನೆಂದೂ ಕೇಳಿದ್ದೇವೆ. ”

ಹೀಗೆ ಹೇಳಿವ ಕೇಳಿದ ಮಾತಿನ ನಿಜಾಂಶವು ಹೇಗೇ ಇರಲಿ; ಯಜ್ಞಯಾಗಾದಿಗಳಲ್ಲಿ ನಡೆವ ಮಸಕರಗಿಸುವ ಪ್ರಾಣಹಿಂಸೆಯೂ, ನೀತಿ ಬಾಹಿರವಾದ ಆಚರಣೆಗಳೂ ಬುದ್ಧಿವಂತರಾದ ಆರ್ಯರಲ್ಲಿಯೇ ಅನೇಕರ ಮನಸ್ಸನ್ನು ತಿರುಗಿಸಿರಬೇಕು. ಈ ರೀತಿ ಆಕ್ಷೇಪಗಳು ಕೇಳಿಬಂದಿರಬೇಕು.

ಪಶುಶ್ಚೇನ್ನಿಹತಸ್ಸ್ವರ್ಗಂ ಜ್ಯೋತಿಷ್ಟೋಮೇ ಗಮಿಷ್ಯತಿ ।
ಸ್ವಪಿತಾ ಯಜಮಾನೇನ ತತ್ರ ಕಸ್ಮಾನ್ನ ಹಿಂಸ್ಯತೇ ॥

ಜ್ಯೋತಿಷ್ಟೋಮವೇ ಮೊದಲಾದ ಯಾಗಗಳಲ್ಲಿ ಕೊಂದ ಪ್ರಾಣಿಗಳು ಸ್ವರ್ಗಕ್ಕೆ ಹೋಗುವುದಾದರೆ ಯಜ್ಞದ ಯಜಮಾನನು ತನ್ನ ತಂದೆಯನ್ನು ಕೊಂದು ಸ್ವರ್ಗಕ್ಕೆ ಏಕೆ ಕಳುಹಿಸಬಾರದು ? ಇಂತಹ ಪ್ರಶ್ನೆಗಳು ಪ್ರಾಜ್ಞರಾದ ಆರ್ಯರಲ್ಲಿ ಹುಟ್ಟಿ ಭಿನ್ನಾಭಿಪ್ರಾಯಕ್ಕೆ ಕಾರಣವಾಯಿತು. “ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ” ಎಂಬ ಶ್ರುತಿಯನ್ನು ಆರ್ಯರಲ್ಲಿ ಸಂಪ್ರದಾಯಶರಣರು ನಂಬಿದರೆ ಯಜ್ಞಗಳಲ್ಲಿ ಜಿಗುಪ್ಸೆಯನ್ನು ಹೊಂದಿದ ಆರ್ಯ ಸುಧಾರಕರು “ಮಾ ಹಿಂಸ್ಯಾತ್” ಎಂಬ ಶ್ರುತಿಯನ್ನು ಎತ್ತಿ ಹಿಡಿದರು. ಭಿನ್ನಾಭಿಪ್ರಾಯಗಳು ಬಲಿತು ಆರ್ಯ ಸುಧಾರಕರು ದ್ರಾವಿಡರ ಶೈವ ಮತವನ್ನು ಎತ್ತಿ ಹಿಡಿದರು.

“The mythic rivalry of Vishvamitra and Vasistha and the story of Sunassepa occuring in Rigvedic hymns similarly indicates the instance of rivalry between the two schools of thought sanctioning the sacrifice and the other opposing it ”

ಕಲ್ಚರಲ್ ಹೆರಿಟೇಜ್ ಆಫ್ ಇಂಡಿಯಾದ ವಾಲ್ಯೂಂ ಪುಟ ೧೮೫-೮೯ರಲ್ಲಿನ ಲೇಖನದಲ್ಲಿ ಮೇಲೆ ಹೇಳಿದಂತೆ ಹೇಳಿರುವ ಆಧಾರದಿಂದ ತಿಳಿದುಬರುವಂತೆ ಶುನಶ್ಶೇಫನನ್ನು ನರಬಲಿಯಿಂದ ತಪ್ಪಿಸಿದ ಹಾಗೂ ಬ್ರಹ್ಮಜ್ಞಾನದಿಂದ ಬ್ರಾಹ್ಮಣ್ಯ ಬರುವುದೇ ಹೊರತು ಜನನದಿಂದಲ್ಲವೆಂದು ಸಾಧಿಸಿದ ವಿಶ್ವಾಮಿತ್ರನು ಆರ್ಯರಲ್ಲಿ ಪ್ರಗತಿಪರನಾದವನಾಗಿರಬೇಕು. ವಶಿಷ್ಟನು ಋಗ್ವೇದ (೧.೧೬೫-೬)ದಲ್ಲಿ ತಿಳಿದುಬರುವಂತೆ ವಿಶ್ವಮಿತ್ರನೇ ರಾಕ್ಷಸನೆಂದು ಹೇಳಿರುವುದರಲ್ಲಿ ಆಶ್ಚರ್ಯವಿಲ್ಲ.

**ದ್ರಾವಿಡರಲ್ಲಿ ಸೇರಿದ ರಾಕ್ಷಸರೂ ವ್ರಾತ್ಯರೂ ಆರ್ಯರೇ**

ಸಂಪ್ರದಾಯಶರಣರಾದ ಆರ್ಯ ಪಂಗಡವನ್ನು ವಿರೋಧಿಸಿದ ಯಜ್ಞಧ್ವಂಸಕರಾದ ರಾಕ್ಷಸರು ದಸ್ಯುಗಳಾದ ದ್ರಾವಿಡರೇ ಎಂದು ಅನೇಕ ಚರಿತ್ರಕಾರರು ಭಾವಿಸಿದ್ದಾರೆ; ಇದು ಸರಿಯಲ್ಲ ರಾಕ್ಷಸ ಶ್ರೇಷ್ಟನಾದ ರಾವಣನು ಪೌಲಸ್ತ್ಯ

ಬ್ರಹ್ಮನ ವಂಶದವನು, ಸಾಮಗಾನಲೋಲನು ಬ್ರಾಹ್ಮಣ ಶ್ರೇಷ್ಠನಾದ ರಾವಣನನ್ನು ಕೊಂದುದರಿಂದ ಪ್ರಾಪ್ತವಾದ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಳ್ಳಲು, ರಾಮನು ರಾಮೇಶ್ವರದಲ್ಲಿ ಲಿಂಗವನ್ನು ಸ್ಥಾಪಿಸಬೇಕಾಯಿತು. (೧) "ದೇವಾಶ್ಚ ವಾ ಅಸುರಾಶ್ಚ ಪ್ರಜಾಪತೇರ್ದ್ವಯಾಃ ಪುತ್ರಾಃ ಆಸನ್" "(೨) ದ್ವಯಾವೈ ಪ್ರಾಜಾ ಪತ್ಯಾಃ-ದೇವಾಶ್ಚ ಅಸುರಾಶ್ಚ". ಬ್ರಾಹ್ಮಣದಲ್ಲಿರುವ ಈ ಎರಡು ಆಧಾರಗಳೂ, ದೈತ್ಯೇಯ ಆದಿತೇಯ ಎಂಬ ಹೆಸರುಗಳೂ ದೇವಾಸುರರು ದಾಯಾದಿಗಳೆಂಬುದನ್ನು ಸ್ಪಷ್ಟ ಮಾಡುತ್ತವೆ. ಈ ರಾಕ್ಷಸರು ಶಿವಭಕ್ತರೆಂದು ಪ್ರಸಿದ್ಧರಾಗಿರುವಂತೆಯೇ ಯಜ್ಞಧ್ವಂಸಿಗಳೆಂದೂ ಹೆಸರುವಾಸಿಯಾಗಿದ್ದಾರೆ. ಆರ್ಯರೇ ಆದ ಇವರು ಯಜ್ಞಯಾಗಾದಿಗಳಲ್ಲಿ ನಡೆವ ಹಿಂಸೆಯಿಂದಲೂ ನೀತಿಬಾಹಿರಕ್ರಿಯೆಗಳಿಂದಲೂ ಬೇಸರ ಹೊಂದಿ ಶೈವಧರ್ಮಿಗಳಾದ ದ್ರಾವಿಡರನ್ನು ಸೇರಿ ಅವರ ಯಜ್ಞಧ್ವಂಸ ಕಾರ್ಯದಲ್ಲಿ ಭಾಗವಹಿಸಿದರು. ಯಜ್ಞಧ್ವಂಸಿಗಳಾಗದೆ ಹೋದರೂ ಯಜ್ಞ ಯಾಗಗಳಲ್ಲಿ ಜಿಗುಪ್ಸೆ ಹೊಂದಿ ಅವುಗಳನ್ನು ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ಮುಂದೆ ಬಸವೇಶ್ವರನು ನಿರಾಕರಿಸಿದಂತೆ ನಿರಾಕರಿಸಿದವರು ವ್ರಾತ್ಯರೆನಿಸಿಕೊಂಡರು. ಮನುಸ್ಮೃತಿಯಲ್ಲಿ "ಸಾವಿತ್ರೀ ಪತಿತಾವ್ರಾತ್ಯಾ ಭವಂತ್ಯಾರ್ಯ ವಿಗರ್ಹಿತಾಃ" ಎಂದು ಹೇಳಿರುವುದು ಇದನ್ನು ಸಮರ್ಥಿಸುತ್ತದೆ. ಅಥರ್ವಣವೇದದ ಕಾಲದ ಹೊತ್ತಿಗೆ "ಏಕವ್ರಾತ್ಯ"ನೆಂದು ಕರೆಯಲ್ಪಟ್ಟ ಶಿವನ ಭಕ್ತರಾದವರು ಈ ವ್ರಾತ್ಯರು ಸುಪೂಜ್ಯರಾದರು. ಜ್ಞಾನಿಗಳಾದ ವ್ರಾತ್ಯರು ಮನೆಗೆ ಬಂದರೆ ರಾಜನೇ ಆದರೂ ಅವರನ್ನೂ ಗೌರವಿಸಬೇಕು ಮತ್ತು ಅವರ ಅಪ್ಪಣೆಯಿಲ್ಲದೆ ಯಜ್ಞಮಾಡಬಾರದೆಂದು ಅಥರ್ವವೇದದಲ್ಲಿ ಹೇಳಿದೆ.

**ವೀರಶೈವ ಪ್ರಥಮ ಗುರು ವೀರಭದ್ರನೂ 'ವೀರ' ಸಿಂಧು ಪುತ್ರರೂ**

ದಕ್ಷಯಾಗವು ಶಿವ ವಿರುದ್ಧವಾದ ಯಾಗವೆಂದು ಪ್ರಸಿದ್ಧವಾಗಿರುವಂತೆಯೇ ವೀರಭದ್ರನಿಂದಾದ ದಕ್ಷಯಾಗ ಧ್ವಂಸಕಾರ್ಯವೂ ಪ್ರಸಿದ್ಧವಾಗಿದೆ. ಋಗ್ವೇದದಲ್ಲಿ "ಅಯಜ್ವಾನಃ ಯಜ್ವಭಿಃ ಸ್ಪರ್ಧಮಾನಾಃ" ಎಂದು ಕರೆಯಲ್ಪಟ್ಟ ಯಜ್ಞ ವಿರೋಧಿ ದ್ರಾವಿಡರ ಮತ್ತು ರಾಕ್ಷಸರ ದಿಗ್ವಿಜಯ ಕಾರ್ಯವಿದು. "ಅಯಜ್ವಾನಃ ಸ್ವಯಂ ಯಾಗರಹಿತಾಃ ಪ್ರತ್ಯುತ ಯಜ್ವಭಿಃ ಸಹಸ್ಪರ್ಧಮಾನಾಃ" ಎಂದು ಸಾಯಣ ಭಾಷ್ಯದಲ್ಲಿ ಇದರ ವಿವರಣೆಯಿದೆ. 'ಅಯಜ್ವಾನಃ' ಎಂದರೆ ತಾವು ಯಜ್ಞ ಮಾಡ ದಿರುವವರು ಇವರು ವ್ರಾತ್ಯರು ಯಜ್ವಭಿಃ ಸ್ಪರ್ಧಮಾನಾಃ ಎಂದರೆ ಯಾಗಮಾಡದಿರು ವುದರಲ್ಲಿ ತೃಪ್ತರಾಗದೆ ಯಜ್ಞ ಮಾಡುವವರೊಡನೆ ಹೋರಾಡುವವರು ಇವರು ರಾಕ್ಷಸರು ಇಂದ್ರನ ಶತ್ರುವಾದ ವೃತ್ರನನ್ನು ಕೊಲ್ಲಲು ಸಹಾಯಕರಾಗಿ "ಭ್ರಾತರಃಮರುತಃತವ" ಎಂದು ಋಗ್ವೇದದಲ್ಲಿ ಹೇಳಲ್ಪಟ್ಟು ಇಂದ್ರ ಭ್ರಾತೃಗಳೆಂದು ಪ್ರಸಿದ್ಧರಾದ ಮರುತರು ಋಗ್ವೇದ ೧-೧೬೧-೬ರಲ್ಲಿ ತಿಳಿದುಬರುವಂತೆ ಇಂದ್ರನ

ಶತ್ರುಗಳಾಗಿ ಅವನನ್ನು ಕೊಲ್ಲಲು ದಿತಿಯ ಹೊಟ್ಟೆಯಲ್ಲಿ ಹುಟ್ಟಿ (ಎಂದರೆ ದೈತ್ಯರಾಗಿ) ರುದ್ರಪುತ್ರರೆನಿಸಿಕೊಂಡುದನ್ನು "ವೀರಶೈವದ ಉಗಮ ಮತ್ತು ಪ್ರಗತಿ" ಗ್ರಂಥದಲ್ಲಿ ಸಾಧಾರವಾಗಿ ವಿವರಿಸಲಾಗಿದೆ. ಭೂಮಿಯಲ್ಲಿ ಯುದ್ಧ ಮಾಡಿ ಆರ್ಯರ ವಿಜಯಕ್ಕೆ ಕಾರಣರಾದ ಇಂದ್ರನ ಸಹಾಯಕ್ಕೆ ನಿಂತ ಈ ಮರುತರು ಮನುಷ್ಯರೇ "ಮರ್ಯ ಶಬ್ದೋ ಮನುಷ್ಯವಾಚೀ" ಎಂದು ಸಾಯಣ ಭಾಷ್ಯದಲ್ಲಿ ಹೇಳಿದೆ. ಮುಂದೆ ಯಜ್ಞ ವಿಷಯದಲ್ಲಿ ಭಿನ್ನಾಭಿಪ್ರಾಯ ಹುಟ್ಟಿ ಸಿಂಧೂ ತೀರದ ನಿವಾಸಿ ದ್ರಾವಿಡರೊಡನೆ ಬೆರತುಹೋದ ಮರುತರು ಋಗ್ವೇದದಲ್ಲಿ "ರುದ್ರಸ್ಯಮರ್ಯಾಃ ಅಸುರಃ" ಎಂದೂ "ವೀರಾಃ" "ಸಿಂಧು ಪುತ್ರಾಃ" ಎಂದೂ ಕರೆಯಲ್ಪಟ್ಟಿದ್ದಾರೆ. ಸಿಂಧೂ ತೀರದ ವೀರರೆಂದು ಕರೆಯಲ್ಪಟ್ಟ ಈ ರುದ್ರಪುತ್ರ ಮರುದ್ಗಣವು ರುದ್ರಪುತ್ರ ವೀರಭದ್ರನ ಮುಂದಾಳುತನದಲ್ಲಿ ರುದ್ರವಿರುದ್ಧವಾದ ದಕ್ಷಯಾಗವನ್ನು ಧ್ವಂಸ ಮಾಡಿತು. ಈ 'ವೀರ' ಪದವಾಚ್ಯರಾದ ಮರುದ್ಗಣವೇ ವೀರಶೈವ ಪದದಲ್ಲಿರುವ 'ವೀರ' ಎಂಬ ಪದಕ್ಕೆ ಕಾರಣವಿರಬೇಕು. ಅಂತು ವೀರಭದ್ರನೇ ಮೊದಲ ವೀರಶೈವ. ಶಿವ ಎಂದರೂ ಭದ್ರ ಎಂದರೂ ಒಂದೆ; ಮಂಗಳ ಎಂಬ ಅರ್ಥವಿದೆ ಇವಕ್ಕೆ; "ವೀರಭದ್ರ" ಮತ್ತ 'ವೀರಶೈವ' ಪದಗಳು ಸಮಾನಾರ್ಥವಾದವು.

"ರುದ್ರೇಣಕಥಿತಾಃ ಶಿವಧರ್ಮಾಸ್ಸನಾತನಾಃ, ವೀರಭದ್ರೋ ಯಥಾ ರುದ್ರಸ್ತ್ವನ್ಯೇ ಚ ಗುರವಃ ಸ್ಮೃತಾಃ ಗುರೋರ್ಜಾತಾಶ್ಚಗುರುವೊ ವಿಖ್ಯಾತಾಭುವನ ತ್ರಯೇ" ಎಂದು ಸ್ಕಾಂದ ಪುರಾಣದಲ್ಲಿ ಹೇಳಿರುವಂತೆ ಸನಾತನವಾದ ಶಿವಧರ್ಮವು ಶಿವನಿಂದ ಹೇಳಲ್ಪಟ್ಟಿತು; ಶಿವನೇ ಗುರು ; ಗುರುಪುತ್ರನಾದ ವೀರಭದ್ರನು, ಶಿವನನ್ನು ಬಿಟ್ಟರೆ ಪ್ರಥಮ ಗುರುವಾಗಿಯೂ ಗೋತ್ರ ಪುರುಷನಾಗಿಯೂ ಇದ್ದಾನೆ. ಆಚಾರ್ಯ ರೇಣುಕರು ವೀರಭದ್ರ ಸಂಪ್ರದಾಯ ಪ್ರವರ್ತಕರಾಗಿದ್ದಾರೆ. ಆದುದರಿಂದಲೇ ಸಿದ್ಧಾಂತ ಶಿಖಾಮಣಿಯಲ್ಲಿ "ತತ್‌ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ" ಎಂದು ಮೊದಲಾಗಿ ಹೇಳಿರುವುದರಲ್ಲಿ ಆಚಾರ್ಯ ರೇಣುಕರಿಂದ ಅಗಸ್ತ್ಯರಿಗೆ ಉಪದೇಶಿಸಲ್ಪಟ್ಟದು ಹೇಳಲ್ಪಟ್ಟಿದೆ. "ವೀರಶೈವ" ತ್ರೈಮಾಸಿಕದ ೧೯೬೧ರ ಜೂನ್ ಸಂಚಿಕೆಯಲ್ಲಿನ ಪೂಜ್ಯ ಶ್ರೀ "ಜ.ಚ.ನಿ"ಯವರ ಲೇಖನವು ಈ ವಿಷಯದಲ್ಲಿ. ಸಂಗ್ರಾಹ್ಯವಾಗಿದೆ.

## ಅಸುರರಲ್ಲಿ ಲಿಂಗಧಾರಿಗಳು

ಯಜ್ಞಯಾಗಾದಿಗಳ ವಿಷಯಗಳಲ್ಲಿ ಜಿಗುಪ್ಸೆ ಹುಟ್ಟಿ ಸಂಪ್ರದಾಯ ಶರಣ ಆಚಾರ್ಯರಿಂದ ಸಿಡಿದೊಡೆದು ಸಿಂಧೂ ನದಿಯ ತೀರದ ಯಜ್ಞ ವಿರೋಧಿ ದ್ರಾವಿಡ ಶೈವರೊಡನೆ ಬೆರೆತುಹೋದ ಆರ್ಯ ಗುಂಪಿನವರಲ್ಲಿ, ದ್ರಾವಿಡರಲ್ಲಿ ಪ್ರಚಲಿತವಾಗಿದ್ದ ಲಿಂಗಾರ್ಚನೆ ಲಿಂಗಧಾರಣೆಗಳು ಕಂಡು ಬಂದಿರುವುದರಲ್ಲಿ ಆಶ್ಚರ್ಯವಿಲ್ಲ. ವೀರರೆಂದೂ ಸಿಂಧು ಪುತ್ರರೆಂದೂ ರುದ್ರಪುತ್ರ ಅಸುರರೆಂದೂ ಋಗ್ವೇದದಲ್ಲಿ ಹೇಳಿ ಹೇಳಿದಂತೆ ಕರೆಯಲ್ಪಟ್ಟ ಈ ಜನರು ಯಜ್ಞವಿರೋಧಿಗಳಾದ ಅಸುರರೆಂದೂ ಪ್ರಸಿದ್ಧ

ರಾದರೂ ಸಾಯಣಭಾಷ್ಯದಲ್ಲಿ ಹೇಳಿರುವಂತೆ ಇವರೆಲ್ಲರೂ ಮನುಷ್ಯರೆ. ಸಾಮಾನ್ಯವಾಗಿ ತನ್ನ ಭಕ್ತರಾದ ಈ 'ಅಸುರ'ರನ್ನು ಶಿವನು ಕೊಲ್ಲುವನಲ್ಲವಾದರೂ ಶಿವನು ದುಷ್ಟರಾದ ಜಲಂಧರಾಸುರ, ತ್ರಿಪುರಾಸುರರೇ ಮೊದಲಾದವರನ್ನು ಕೊಲ್ಲಬೇಕಾಯಿತು. ಹಾಗೆಯೇ ಶಿವೆಯು ತನ್ನನ್ನೇ ಮೋಹಿಸುವಷ್ಟು ದುಷ್ಟರಾದ ಮಹಿಷಾಸುರಾದಿಗಳನ್ನು ಮರ್ಧಿಸಬೇಕಾಯಿತು. ಶ್ರೀ ಜಯಚಾಮರಾಜೇಂದ್ರ ಗ್ರಂಥ ಮಾಲೆಯ ಸಂಖ್ಯಾ ೧೪ ಆಗಿ ಶ್ರೀ ಸುಬ್ರಹ್ಮಣ್ಯಶಾಸ್ತ್ರಿಗಳ ಅನುವಾದದೊಡನೆ ಮುದ್ರಿಸಲ್ಪಟ್ಟಿರುವ ಸ್ಕಾಂದ ಮಹಾಪುರಾಣದ ಮಹೇಶ್ವರ ಖಂಡ ವಿಭಾಗದಲ್ಲಿ ದೇವಿಯು ಮಹಿಷಾಸುರನನ್ನು ಮರ್ಧಿಸಿದ ವರ್ಣನೆಯಿದೆ. "ಆದತ್ತ ಸಹಸಾಗೌರೀ ಲಿಂಗಂ ತಸ್ಯ ಗಳೇ ಸ್ಥಿತಂ"ಎಂದು ಹೇಳಿರುವಂತೆ ಮಹಿಷಾಸುರನು ಕೊರಳಲ್ಲಿ ಧರಿಸಿದ್ದ ಲಿಂಗವನ್ನು ಗೌರಿಯು ಕೈಗೆ ತೆಗೆದುಕೊಂಡಳು. ಆ ಲಿಂಗವು ಕೈಗೆ ಅಂಟಿಕೊಳ್ಳಲು ಗೌರಿಯು ಗೌತಮರನ್ನು ಅದಕ್ಕೆ ಕಾರಣವೇನೆಂದು ಕೇಳಿದಳಂತೆ. ತ್ರಿಪುರಾಸುರರೂ ಲಿಂಗಧಾರಿಗಳಾಗಿದ್ದರೆಂದೂ, ಅವರು ಲಿಂಗವಿಹೀನರಾಗುವವರೆಗೂ ಅವರನ್ನು ಜಯಿಸಲು ಪರಮೇಶ್ವರನಿಂದಲೂ ಸಾಧ್ಯವಾಗಲಿಲ್ಲವೆಂದೂ ಗೌತಮರು ಹೇಳಿದರು-

ಪುರಾಪುರತ್ರಯಾವಾಸಾ ದೈತೇಯಾ ಲಿಂಗಧಾರಕಾಃ ।
ಅಜಿತಾ ಶಂಭುನಾ ಪೂರ್ವಂ ಮುಕ್ತಲಿಂಗಾನಿಸೂದಿತಾಃ ॥

ಮೇಲೆ ಹೇಳಿದಂತೆ ಸ್ಕಾಂದ ಪುರಾಣದಲ್ಲಿ ಹೇಳಿರುವುದಲ್ಲದೆ, ಪದ್ಮಪುರಾಣದ ಪಾತಾಳ ಖಂಡದಲ್ಲಿ "ಧಾರಯಂತಿ ತಥಾಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ" ಎಂದು ಹೇಳಿರುವುದರಿಂದ ಅಸುರರಲ್ಲಿ ಲಿಂಗಧಾರಿಗಳಿದ್ದುದರಲ್ಲಿ ಸಂದೇಹವಿಲ್ಲ.

## ಆರ್ಯ ದ್ರಾವಿಡ ಸಂಸ್ಕೃತಿಗಳು ಸಂಯುಕ್ತವಾಗಲು ಹಾಲು ಜೇನು ಸೇರಿದಂತೆ ಸುಸ್ವಾದವಾಯಿತು

ತಾವು ಮಾಡುತ್ತಿದ್ದ ಯಜ್ಞಗಳನ್ನು ಧ್ವಂಸ ಮಾಡಲು ಬರುತ್ತಿದ್ದ ಲಿಂಗಧಾರಿಗಳಾದ ದಸ್ಯು ದಾನವರನ್ನು ನೋಡಿ, ಸಂಪ್ರದಾಯಕ ಶರಣರಾದ ಆರ್ಯರು ಋಗ್ವೇದದಲ್ಲಿ ಕಂಡುಬರುವಂತೆ 'ಶಿಶ್ನದೇವಾ' ಎಂದರೆ ಶಿಶ್ನಾಕಾರದ ಲಿಂಗವೇ ದೇವರಾಗಿ ಉಳ್ಳವರೆಂದು ಕರೆದುದರಲ್ಲಿ ಆಶ್ಚರ್ಯವಿಲ್ಲ. ಹಾಗೆಯೇ ಶಿವನನ್ನು ಕಳ್ಳರ ದೇವನೆಂದು ಕರೆದರು ಏಕೆಂದರೆ ಶಿವನನ್ನು ಪೂಜಿಸುತ್ತಿದ್ದವರು ಆರ್ಯರ ಧನವಾದ ಗೋವುಗಳನ್ನು ಹೊಡೆದುಕೊಂಡು ಹೋಗುತ್ತಿದ್ದರು. ಗೋಗ್ರಹಣವು ಯುದ್ಧ ಕಾಲದಲ್ಲಿ ಪ್ರಚಲಿತ ಪದ್ಧತಿಯಾಗಿದ್ದಿತು. ಹಿಂದೆ ಹೇಳಿದಂತೆ ಶಿವನನ್ನು ಅರ್ಧನಾರೀಶ್ವರ ರೂಪದಲ್ಲಿ ಸಿಂಧು ಪುತ್ರರು ಪೂಜಿಸುತ್ತಿದ್ದರಷ್ಟೆ. ಆ ದೇವರನ್ನು ಆರ್ಯರು ಹೆಣ್ಣಿಗನೆಂದು ಕರೆದಿದ್ದಾರೆ. ಋಗ್ವೇದ (೧೧೧-೧೦೪-೨೦)ದ ಮಂತ್ರವು "ಇಂದ್ರ ಜಹಿ ಪುಮಾ ಸಂ ಯಾ ತುಧಾನಂ" ಎಂದು ಪ್ರಾರಂಭವಾಗುತ್ತದೆ. ಇದರ ಸಾಯಣ ಭಾಷ್ಯದಲ್ಲಿ "ಹೇ ಇಂದ್ರ ಪುಮಾಂಸಂ ಪುಂರೂಪಧಾರಿಣಂ ಯಾತುಧಾನಂ

ರಾಕ್ಷಸಂ ಜಹಿ ಮಾಶಯ" ಎಂದರೆ-ಹೇ ಇಂದ್ರನೆ ಪುರುಷಘಾತಿಯಾದ ರಾಕ್ಷಸನನ್ನು ಕೊಲ್ಲು-ಎಂದು ಅರ್ಥವನ್ನು ಹೇಳಿದೆ "ಉತಸ್ತ್ರಿಯಂ ಮಾಯಯಾ ಶಾಶದಾನಾಂ" ಎಂಬುದು ಈ ಮಂತ್ರದ ಮುಂದಿನ ಭಾಗ. ಅದರ ಸಾಯಣ ಭಾಷ್ಯವಿದು— "ಉತಾಪಿ ಚ ಮಾಯಯಾ, ವಂಚನಯಾ, ಶಾರದಾನಾಂ ಹಿಂಸಂತೀಂ, ಸ್ತ್ರಿಯಂ ರಾಕ್ಷಸೀಂ, ಚ ಜಹಿ" ಮಾಯೆಯಿಂದ ಹಿಂಸೆ ಮಾಡುವ ಸ್ತ್ರೀ ರಾಕ್ಷಸಿಯನ್ನೂ ಕೊಲ್ಲು ಎಂದರ್ಥ. ಶಿವನನ್ನು ಹೆಣ್ಣು ರೂಪವನ್ನು ಧರಿಸಿದ ಗಂಡೆಂದೂ ಶಿವೆಯನ್ನು ಮಾಯಾವಿ ಎಂದು ಕರೆದವರು ಮುಂದೆ "ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ" ಎಂದು ಅದೇ ಆರ್ಯರು ಪ್ರಾರ್ಥಿಸಿದರು. ಏಕೆಂದರೆ ತಾವು ಜಯಿಸಿದ ದ್ರಾವಿಡರನ್ನು ನಾಶಪಡಿಸಲು ಪ್ರಯತ್ನಿಸದೆ ಅವರೊಡನೆ ಬೆರೆತು, ಅವರಲ್ಲಿರುವ ಒಳ್ಳೆಯದನ್ನು ಗ್ರಹಿಸಿ, ಅದನ್ನು ತಮ್ಮದನ್ನಾಗಿ ಮಾಡಿಕೊಳ್ಳುವಷ್ಟು ಉದಾರ ಹೃದಯರು ಅವರು. ಪರಧರ್ಮ ಗುಣಗ್ರಹಣ ಪರಧರ್ಮ ಸಹಿಷ್ಣುತೆಗಳು ಇಂದೂ ಹಿಂದುಗಳ ವೈಶಿಷ್ಟ್ಯವಾಗಿದೆ. ಕೊಟ್ಟುಕೊಳ್ಳುವ ಭಾವನೆಯ ಯಜ್ಞ ಯಾಗಾದಿಗಳಿಗಿಂತ ದ್ರಾವಿಡರ ಭಕ್ತಿ ಭಾವನೆಯಲ್ಲಿ ಹಿರಿಮೆ ತೋರಿತು. ಯಜ್ಞ ಮಾಡಿದರೆ ದೇವತೆಗಳು ಫಲವನ್ನು ಕೊಡಲೇಬೇಕೆಂಬ ಭಾವನೆಯಿದ್ದಿತು. ಬೆಲ್ ವಾಕರ್ ಮತ್ತು ರಾನಡೆಯವರ 'ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ' ಯಲ್ಲಿ ಹೇಳಿದಂತೆ "The sacrifice itself came to be regarded as the magic fishingnet which even the God's themselves could not always clue" ಹವಿಸ್ಸೆಂಬ ಆಹಾರವನ್ನು ಕೊಟ್ಟು ಅನಿಮಿಷ ದೇವತೆಗಳನ್ನು ಯಜ್ಞಯಾಗಾದಿಗಳೆಂಬ ಬಲೆಯಲ್ಲಿ ಪುರೋಹಿತರು ಹಿಡಿಯುವರೆಂಬ ಭಾವನೆ ಬೆಳೆದಿದ್ದಿತು. ಇಂದ್ರಾದಿಗಳಲ್ಲಿ ಶ್ರದ್ಧೆಯು ಕಡಮೆಯಾಯಿತು. "ಕಸ್ಮೈದೇವಾಯದ ನಿಷಾವಿಧೇಸು" ಎಂದರೆ ಯಾವ ದೇವರಿಗೆ ಹವಿಸ್ಸನ್ನು ಕೋಡೋಣ ಎಂದು ಪ್ರಶ್ನಿಸಿದರು. ಇವೆಲ್ಲವುಗಳಲ್ಲಿ ಪ್ರಾಜ್ಞರಾದ ಆರ್ಯರಿಗೆ ಜಿಗುಪ್ಸೆ ಹುಟ್ಟಿ ನಶ್ವರ ಫಲಕ್ಕಾಗಿ ಪ್ರಾರ್ಥಿಸದೆ ಮೋಕ್ಷಕ್ಕಾಗಿ ಶಿವನನ್ನು ಪ್ರಾರ್ಥಿಸುವುದು ದ್ರಾವಿಡರ ದೇವರ ಕಲ್ಪನೆಯು ಅವರಿಗೆ ಸರಿದೋರಿತು. ಮಂಗಳ ವೆಂಬ ಅರ್ಥವುಳ್ಳ 'ಶಿವ'ನೆಂಬ ಪದದಿಂದ ದ್ರಾವಿಡರ ದೇವರನ್ನು ಒಪ್ಪಿಕೊಂಡರು ಯಜುರ್ವೇದ ಸಾಮವೇದ,ಅಥರ್ವಣವೇದಗಳಲ್ಲಿ ಕ್ರಮವಾಗಿ ಶೈವ ಧರ್ಮವು ಪ್ರಗತಿ ಹೊಂದಿದುದನ್ನು 'ವೀರಶೈವ ಉಗಮ ಮತ್ತು ಪ್ರಗತಿ' ಎಂಬ ಗ್ರಂಥದಲ್ಲಿ ವಿವರಿಸಿದೆ. ಅಷ್ಟೇಕೆ ಋಗ್ವೇದ ಕಾಲದಲ್ಲಿ ಯೇತ್ರ್ಯಂಬಕನನ್ನು ಮೋಕ್ಷಕ್ಕಾಗಿ ಪ್ರಾರ್ಥಿಸುವ ಸೂಕ್ತವಿದು ರಚಿತವಾಯಿತು.

ತ್ರ್ಯಂಬಕಂ ಯಜಾಮಹೇ ಸುಗಂಧಿ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ
ಮಾಮೃತಾತ್ ॥

ಇಷ್ಟೇ ಅಲ್ಲದೆ ಋಗ್ವೇದದ ಕಡೆಯಲ್ಲಿ ಇಂದ್ರಾದಿ ನಿಸರ್ಗ ದೇವತೆಗಳ ಕಲ್ಪನೆಯನ್ನು ಬದಿಗೊತ್ತಿ ಉಪನಿಷತ್ತಿನ ನಿರ್ವಿಕಲ್ಪ ಪರಬ್ರಹ್ಮದ ಕಲ್ಪನೆಗೆ ತಳಹದಿಯೆನಿಸುವ ನಾಸದೀಯ ಸೂಕ್ತವು ರಚಿಸಲ್ಪಟ್ಟಿದೆ. ಉಪನಿಷತ್ ಕಲ್ಪನೆಗಳು ಎಷ್ಟೋ ಉದಾತ್ತವಾದುವಾದರೂ ಕಟ್ಟು ಹೇದ ಭಾವನೆಗಳಿಗೊಳಗಾದುವೋ ಏನೋ ಎಂಬ ಭಾವನೆಗೆ ತಡೆಯಾಗುವಂತೆ ಶ್ವೇತಾಶ್ವತರೋಪನಿಷತ್ತಿನಲ್ಲಿ ವ್ಯಕ್ತಾವ್ಯಕ್ತಾತೀತವೆಂದು ಪರಶಿವ ಬ್ರಹ್ಮವೆಂದೇ ನಿಶ್ಚಯಿಸಲ್ಪಟ್ಟಿತು. ವಿಷ್ಣು ಮೊದಲಾದವರ ಪ್ರತಿಸ್ಪರ್ಧೆ ಇಲ್ಲದ ಕಾಲದಲ್ಲಿ ಒಬ್ಬನೇ ಆದ ದೇವನಿಗೆ ಇಟ್ಟ ಹೆಸರು ಶಿವ ಎಂಬುದು ಭಂಡಾರ್ಕರ್ ಮೊದಲಾದ ಪ್ರಾಜ್ಞರ ಮತ. ಇದರ ಕಲ್ಪನೆಗಳಿಗೆ ನಾಸದೀಯ ಸೂಕ್ತವೇ ಹೇಗೆ ಮೂಲವೆಂಬುದೂ ಮುಂದೆ ಈ ಉಪನಿಷತ್ತೇ ಪರಿಷ್ಕೃತ ವೀರಶೈವ ಸಿದ್ಧಾಂತಕ್ಕೆ ಹೇಗೆ ತಳಹದಿಯಾಯಿತೆಂಬುದನ್ನು ಮುಂದೆ ತಿಳಿಸಲಾಗುವುದು. ಆದರೆ ಮುಂದುವರಿಯುವ ಮೊದಲು ಹೇಗೆ ದ್ರಾವಿಡ ವ್ರಾತ್ಯಭಾವನೆಗಳು ಪ್ರಾಜ್ಞರಾದ ಆರ್ಯರ ಸಂಸ್ಕರಣಕ್ಕೆ ಕಾರಣವಾಯಿತೆಂಬುದಕ್ಕೆ ಕಸ್ತೂರಿ ಮಾಸಿಕದಲ್ಲಿನ "ಕ್ಷೇತ್ರ ರಾಜಕಾಶಿ, ಇಲ್ಲಿ ಭಾರತದ ಸಂಯುಕ್ತ ಸಂಸ್ಕೃತಿಯ ಬೀಜಾರೋಪವಾಯಿತು" ಎಂಬ ಶೀರ್ಷಿಕೆಯ ಲೇಖನ ಭಾಗವನ್ನು ಇಲ್ಲಿ ಕೊಡಲಾಗುವುದು.

"ಗಂಗಾ ಕಣಿವೆಗೆ ಕಾಲಿಟ್ಟ ಆರ್ಯರಲ್ಲಿ ಕಾಶಿಗಳೇ ಮೊದಲಿಗರು. ಅದು ಭಾರತದೊಳಗಿನ ಭಾರತವೆಂದು ವಿದ್ವಾಂಸರಿಂದ ಕರೆಸಿಕೊಳ್ಳುತ್ತಿದ್ದಿತು. ಇಲ್ಲಿ ಪ್ರವೇಶಿಸಿದ ಕಾಶಿಗಳು ತಮಗಿಂತ ಪೂರ್ವದ ಭಾರತೀಯ ನಾಗರಿಕತೆಯ ಸಂಪರ್ಕ ಹೊಂದಿದಾಗ ವಿಜಿಗೀಷುಗಳಂತೆ ವರ್ತಿಸದೆ ಸಮಾನ ನಾಗರಿಕರಂತೆ ವರ್ತಿಸತೊಡಗಿದರು. ಗಂಗಾ ಕಣಿವೆಯ ಅನುಪಮ ದೇಶವನ್ನಾಳುತ್ತಿದ್ದ ವ್ರಾತ್ಯರಾಜನ್ಯರು ಜೀವನದಲ್ಲಿಯೂ ವಿಚಾರದಲ್ಲಿಯೂ ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜಭಾರ ಪದ್ಧತಿಯು ಬೌದ್ಧಿಕ ಹೆಚ್ಚಳಕ್ಕೆ ಸಾಕ್ಷ್ಯವಾಗಿದ್ದರೆ ಅವರ ತಾತ್ವಿಕ ಹಾಗೂ ಪೌರಾಣಿಕ ವಿಶ್ವ ಕಲ್ಪನೆಗಳು ಆರ್ಯ ಬ್ರಾಹ್ಮಣರಿಗೂ ಅವರಿಗೂ ಉಂಟಾದ ಸಾಮಾಜಿಕ ಮತ್ತು ರಾಜಕೀಯ ಸಂಪರ್ಕದಲ್ಲಿ ಪ್ರದರ್ಶಿತವಾಗಿತ್ತು. ಆರ್ಯ ಬ್ರಾಹ್ಮಣರು ವ್ರಾತ್ಯರಾಜನ್ಯರಿಂದ ಹಲವಾರು ವಿಷಯಗಳನ್ನು ಕಲಿತುಕೊಳ್ಳುವಂತಾಯಿತು ಎಂದು ನರೇಂದ್ರನಾಥ ಘೋಷರು ಬರೆದಿದ್ದಾರೆ."

## ವೇದಾಗಮಗೀತೋಪನಿಷತ್ ಪುರಾಣಗಳ ಮೇಲೆ ಲಿಂಗಿ ಧರ್ಮದ ಪ್ರಭಾವ

ಲಿಂಗಾರ್ಚಕರೂ ಲಿಂಗಧಾರಿಗಳೂ ಆದ ಅಸುರರ ಯಜ್ಞ ವಿಧ್ವಂಸಕ ಕಾರ್ಯಗಳಿಂದ ನೊಂದ ಆರ್ಯರು ಅವರನ್ನು 'ಶಿಶ್ನದೇವಾಃ' ಎಂದರೆ ಶಿಶ್ನವೇ ದೇವರಾಗಿ ಉಳ್ಳವರು ಎಂದು ನಿಂದಿಸಿದರಲ್ಲದೆ ಗೋಗ್ರಹಣ ಮಾಡುತ್ತಿದ್ದ ಅವರ ದೇವರನ್ನು ಕಳ್ಳರ ದೇವರೆಂದೂ ಕರೆದರು. ಮುಂದೆ ದಸ್ಯುದಾಸರ ದೈವನಾದ ಶಿವನನ್ನು

ಆರ್ಯರು ಆರಾಧಿಸುವರಾದ ಮೇಲೆ ಈ ಹೆಸರುಗಳಿಗೆ ಬೇರೆ ಅರ್ಥ ಬರುವಂತೆ ವ್ಯಾಖ್ಯಾನ ಮಾಡಬೇಕಾಯಿತು. ನಿರುಕ್ತದ ವಿವರಣೆಯಲ್ಲಿ "ಶಿಶ್ನೇನ ಪ್ರಕೀರ್ಣಾಭಿಃ ಪುಂಶಲೀಭಿಃ ಸ್ತ್ರೀಭಿಃ ದೀವ್ಯಂತಿ ಕ್ರೀಡಂತಿ ಇತಿ" ಎಂದು ಶಿಶ್ನದೇವಾಃ ಎಂಬ ಪದಕ್ಕೆ ಅರ್ಥ ಹೇಳಿದ್ದಾರೆ. ಶಿಶ್ನದೇವಾಃ ಎಂಬ ಪದವು ಅಬ್ರಹ್ಮಚಾರಿಗಳನ್ನು ಕುರಿತು ಹೇಳಿದುದೇ ಹೊರತು ಶಿವನನ್ನು ಕುರಿತು ಹೇಳಿದುದಲ್ಲವೆಂಬ ಭಾವ. ಕಳ್ಳರ ದೇವನೆಂಬ ಹೆಸರು ಉಳಿದು ಬಂದು "ಸ್ತೇನಾನಾಂಪತಯೇನಮಃ" ಎಂದು ರುದ್ರಾಧ್ಯಾಯದಲ್ಲಿ ಹೇಳಿದ ಮಾತುಗಳಿಗೆ "ರುದ್ರೋಹಿ ಲೀಲಯಾ ನಟ ಇವ ತತ್ತತ್ ವೇಷಂ ಧತ್ತೆ ಎಂದು ಮೊದಲಾಗಿ ತೇಲಿಸಿ ಅರ್ಥ ಹೇಳಿ ಪಾರಾಗಬೇಕಾಯಿತು. ಯಜ್ಞಾದಿಗಳ ಮತ್ತು ಆರ್ಯರ ದೇವತೆಗಳಾದಿ ಇಂದ್ರಾದಿಗಳ ಪ್ರಭಾವವು ಋಗ್ವೇದದಲ್ಲಿಯೇ ಕೊನೆ ಕೊನೆಗೆ ಕಡಮೆಯಾಗುತ್ತಾ ಬಂದುದನ್ನು ಹಿಂದೆ ಹೇಳಿದೆ. ಯಜುರ್ವೇದ ಸಾಮವೇದ ಕಾಲಗಳಲ್ಲಿ ಶಿವ ಸರ್ವೋತ್ಕರ್ಷೆಯು ಹೆಚ್ಚುತ್ತಾ ಬಂದಿತು. ಡಾ|| ರಾಧಾಕೃಷ್ಣನ್‌ರವರ ಇಂಡಿಯನ್ ಫಿಲಾಸಫಿಯಲ್ಲಿ "Samaveda says Oye Gods we use no sacrficial stakes ; we slay no victims we worship entirely by repetion of sacred verses" ಎಂದು ಹೇಳಿ ಸಾಮವೇದ ಕಾಲದಲ್ಲೇ ಯಜ್ಞ ಯಾಗಾದಿಗಳ ಪ್ರಭಾವವು ಕಡಮೆಯಾದುದನ್ನು ಹೇಳಿದ್ದಾರೆ. ಅಥರ್ವ ವೇದದಲ್ಲಿ ಶೈವರಾದ ವ್ರಾತ್ಯರನ್ನು ತನಗಿಂತಲೂ ಹೆಚ್ಚಿನವರೆಂದು ಭಾವಿಸಿ ರಾಜನು ಅವರನ್ನು ಗೌರವಿಸಬೇಕೆಂದೂ ವ್ರಾತ್ಯರು ಮನೆಗೆ ಬಂದರೆ ಅವರ ಅಪ್ಪಣೆಯಿಲ್ಲದೆ ಯಜ್ಞ ಯಾಗಾದಿಗಳನ್ನು ಮಾಡಬಾರದೆಂದೂ ಹೇಳಿರುವುದಕ್ಕೆ ಆಧಾರಗಳನ್ನು "ವೀರಶೈವದ ಉಗಮ ಮತ್ತು ಪ್ರಗತಿ" ಗ್ರಂಥದಲ್ಲಿ ಕೊಟ್ಟಿದೆ. ಇನ್ನು ಉಪನಿಷತ್ ಕಾಲದಲ್ಲಿ ಯಜ್ಞ ಯಾಗಾದಿಗಳನ್ನು ಮಾಡುವವರನ್ನು ಛಾಂದೋಗ್ಯೋಪನಿಷತ್ತಿನ "ಶೌವ ಉದ್ಗೀತ"ದಲ್ಲಿ ನಾಯಿಗಳಿಗೆ ಹೋಲಿಸಿದೆ. ಮುಂಡಕೋಪನಿಷತ್ತಿನ "ಪ್ಲವಾಹ್ಯೇತೇಽ ಧೃಡಾಯಜ್ಞರೂಪಾಃ" ಎಂದು ಮೊದಲಾಗುವ ಮಂತ್ರದಲ್ಲಿ ಯಜ್ಞ ಯಾಗಾದಿಗಳನ್ನೂ ಒಡಕು ದೋಣಿಗಳಿಗೆ ಹೋಲಿಸಿದೆ; "ಆಮ್ನಾಯಸ್ಯ ಕ್ರಿಯಾರ್ಥತ್ವಾತ್" ಎಂದರೆ ಯಜ್ಞಯಾಗಾದಿ ಕರ್ಮಗಳಿಗೆ ಉಪಯೋಗವಾಗುವುದರಲ್ಲಿಯೇ ವೇದ ವಾಕ್ಯಗಳಿಗೆ ಸಾರ್ಥಕಯಿದೆಯೆನ್ನುವ ಜೈಮಿನಿಯ ಪೂರ್ವ ಮೀಮಾಂಸಾಶಾಸ್ತ್ರಕ್ಕೆ ಉತ್ತರವಾಗಿರುವಂತೆಯೇ ಇದೆ ಬಾದರಾಯಣರ ಉತ್ತರ ಮೀಮಾಂಸಾಶಾಸ್ತ್ರ. ಇಂತಹ ವೇದವಾದತರನ್ನು ಭಗವದ್ಗೀತೆಯಲ್ಲಿ 'ಸಾಮಾತ್ಮಾನಃ' ಎಂದೂ 'ಅವಿಪಶ್ಚಿತಾಃ' ಎಂದರೆ ದಡ್ಡರೆಂದೂ ಹೇಳಿರುವುದಲ್ಲದೆ, "ತ್ರೈಗುಣ್ಯ ವಿಷಯಾ ವೇದ ನಿಸ್ತ್ರೈ ಗುಣ್ಯೋ ಭವಾರ್ಜುನ" ಎಂದೂ ಹೇಳಿದೆಯಾಗಿ ಯಜ್ಞಯಾಗಾದಿಗಳ ತೆಗಳಿಕೆಯಿದೆ. ಭಗವದ್ಗೀತೆಯೇ ಒಂದು ಭಾಗವಾಗಿ ಉಳ್ಳ ಮಹಾಭಾರತದ ನಿಲುವಾದರೂ ಇದೆ. ಇನ್ನು

ಯಜ್ಞಯಾಗಾದಿಗಳಿಂದ ಇಂದ್ರಾದಿದೇವತೆಗಳನ್ನು ಒಲಿಸುವುದರ ಬದಲಾಗಿ ಗುಡಿಗಳನ್ನು ಕಟ್ಟಿ ಅವುಗಳಲ್ಲಿ ಶಿವಾದಿ ದೇವರುಗಳನ್ನು ಪೂಜಿಸುವುದೇ ಆಗಮಗಳ ನಿಲುವು.

ಋಗ್ವೇದದಲ್ಲಿಯೇ, ಯಜ್ಞಯಾಗಾದಿಗಳಲ್ಲಿ ಹವಿಸ್ಸನ್ನು ಪಡೆದು ರಾಜ್ಯ ಪುತ್ರಾದಿಗಳನ್ನು ಕೊಡುವನೆಂಬ ಇಂದ್ರಾದಿ ನಿಸರ್ಗ ದೇವತೆಗಳಿಗೆ ಬದಲು ತ್ರ್ಯಂಬಕ ಎಂದರೆ ಮುಕ್ಕಣ್ಣ ಶಿವನನ್ನು ಮೋಕ್ಷಾರ್ಥವಾಗಿ ಪ್ರಾರ್ಥಿಸುವುದನ್ನು ಹಿಂದೆ ಹೇಳಿದಂತೆ ಕಾಣಬಹುದು; ಅದರಲ್ಲಿಯೇ "ತಸ್ಮಾತ್ ರುದ್ರ ಪಶೂಣಮಧಿ ಪತೇಃ" ಎಂದು ಹೇಳಿರುವುದು ಕಂಡುಬರುವುದು. ಯಜ್ಞಯಾಗಾದಿಗಳಲ್ಲಿ ಹವಿಸ್ಸನ್ನು ಪಡೆಯದ ಯಜ್ಞವಿರೋಧಿ ರುದ್ರನಿಗೆ ಯಜ್ಞ ವಿರೋಧಿ ದ್ರಾವಿಡರ ಪಶುಪತಿ ತ್ರ್ಯಂಬಕನ ಪಟ್ಟವನ್ನು ಕಟ್ಟಿದ್ದಂತೆ ಕಾಣುವುದು. ಇಂದ್ರನ ಅಧಃಪತನವಾದ ಮೇಲೆ ಇಂದ್ರಾನುಜನೆಂದೂ ಉಪೇಂದ್ರನೆಂದೂ ಪ್ರಸಿದ್ಧನಾದ ಇಂದ್ರಾನುಯಾಯಿ ವಿಷ್ಣುವಿಗೆ ಯಜ್ಞಯಾಗಾದಿಗಳಲ್ಲಿ ವಿಶ್ವಾಸವನ್ನು ಉಳಿಸಿಕೊಂಡಿದ್ದವರು ಪರಮೋತ್ತಮನ ಪಟ್ಟವನ್ನು ಕಟ್ಟಿದಂತೆ ಕಾಣುತ್ತದೆ. "ಯಜ್ಞೋ ವೈ ವಿಷ್ಣುಃ" ಎಂಬ ಆಧಾರವುಂಟು. ಆದರೆ ಭಗವದ್ಗೀತೆಯು ಕಾಲದನಂತರ ಭಾಗವತರ ಪ್ರಾಬಲ್ಯ ಕಾಲದಲ್ಲಿ ವೈಷ್ಣವರಲ್ಲಿಯೂ ಯಜ್ಞಯಾಗಾದಿಗಳ ಪ್ರಾಬಲ್ಯವು ಅಳಿದಂತೆ ಕಾಣುತ್ತದೆ. ಮಹಾಭಾರತ ಕಾಲದಲ್ಲಿ ವಸು ಎಂಬ ರಾಜನ ಕಥೆಯಿಂದ ತಿಳಿದು ಬರುವಂತೆ ಯಜ್ಞಯಾಗಾದಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯವು ಒಲಿದು ಬಂದುದು ಕಂಡು ಬರುತ್ತದೆ. ಕೊನೆಯಲ್ಲಿ ವೈದಿಕ ಯಜ್ಞ ಯಾಗಾದಿಗಳಲ್ಲಿ ಶ್ರದ್ಧೆಯುಳ್ಳ ವೈಷ್ಣವರು ಸಹಾ ಪಿಷ್ಟ ಪಶುಗಳಿಂದ ಯಜ್ಞ ಯಾಗಗಳನ್ನೂ ಮಾಡುತ್ತಿದ್ದುದು ಕಂಡು ಬರುವುದು. ಹೀಗೆ ಲಿಂಗಾರ್ಚನ ಲಿಂಗಧಾರಣರತರಾದ ದ್ರಾವಿಡವ್ರಾತ್ಯ ದಸ್ಯುದಾಸವರ ಪ್ರಭಾವದಿಂದ ಯಜ್ಞ ಯಾಗಾದಿಗಳ ಪ್ರಾಬಲ್ಯವು ಕಡಿಮೆಯಾದುದು ಕಂಡು ಬರುವುದು.

ಋಗ್ವೇದದಲ್ಲಿ ಕಾಣ ಬರದಿರುವುದು ಶಿವ ಎಂಬ ಹೆಸರು; ಅದರಲ್ಲಿ 'ಶಿವ' ಪದವು ಗುಣವಾಚಕ. ಯಜುರ್ವೇದವಲ್ಲಿ 'ಶಿವನಾಮಾಸಿ' ಎಂದರೆ ಶಿವ ಎಂಬ ಹೆಸರಿನಿಂದಲೇ ಮಹದೇವ ಪಟ್ಟಕ್ಕೇರಿಸಲ್ಪಟ್ಟ ರುದ್ರನು ಕರೆಯಲ್ಪಟ್ಟಿರುವನು. ಯಜುರ್ವೇದದ ಆರನೆಯ ಅಧ್ಯಾಯದಲ್ಲಿ ತ್ರಿಪುರಸಂಹಾರದ ಆಖ್ಯೆಯಿದೆ. ತ್ರಿಪುರರು ಲಿಂಗಧಾರಿಗಳೆಂಬುದಕ್ಕೆ ಹಿಂದೆಯೇ ಆಧಾರವನ್ನು ಕೊಟ್ಟಿದೆ. ಈ ಅಧ್ಯಾಯದಲ್ಲಿ "ರುದ್ರಃ ಪಶೂನಾಮಧಿಪತಿರಿತಿ ವಯಂ ಬ್ರಹ್ಮಾದಯಃ ಸರ್ವೇಪಶವಃ ಅಸ್ಮಾಕಂ ತ್ವಮೇಕ ಏವ ಪತಿರಿತಿ" ಎಂದು ಹೇಳಿಸುವುದರಲ್ಲಿ ರುದ್ರನೇ ಪತಿ ಉಳಿದವರೆಲ್ಲರೂ ಪಶುಗಳು ಎಂಬ ಭಾವನೆ ಆಗಲೇ ಹುಟ್ಟಿದೆಯೆಂದಾಯಿತು. "ಏಕ ಏವರುದ್ರೋ ನದ್ವಿತೀಯಾಯ ತಸ್ಥೇ" ಎಂಬ ಯಜುರ್ವೇದ ಆಧಾರದಲ್ಲಿ ರುದ್ರನಿಗೆ ಅದ್ವಿತೀಯ ಪಟ್ಟವು ಕಟ್ಟಲ್ಪಟ್ಟಿದೆ. ಸಾಮಸ್ಸೇವ ಪ್ರಿಯನೆಂದು ಶಿವನು ಪ್ರಸಿದ್ಧನಾಗಿದ್ದಾನೆ.

ಅಥರ್ವವೇದ ಕಾಲದಲ್ಲಿ ಏಕವ್ರಾತ್ಯ ಮಹದೇವನ ಕಲ್ಪನೆಯಾಗಿ ಶಿವಸರ್ವೋತ್ಕರ್ಷವು ಬಲವಾಗಿದೆ. ದಶೋಪನಿಷತ್ತುಗಳಲ್ಲಿ ಮೊದಲನೆಯದೆಂದು ಎಣಿಸಲ್ಪಟ್ಟ ವಾಜಸನೇಯ ಸಂಹಿತೆಯಲ್ಲಿನ ಈಶಾವಾಸ್ಯೋಪನಿಷತ್ತಿನ ಮೊದಲನೆಯ ಪದವೆ, ಈಶ' ಎಂಬುದು. ಈ ಪದದ ರೂಢಿಯ ಅರ್ಥವು ರುದ್ರಪರವಾಗಿದೆಯೆಂದು ವೇದಾಂತದೇಶಿಕ ಭಾಷ್ಯದಲ್ಲಿ ಒಪ್ಪಲ್ಪಟ್ಟಿದೆ. ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆಯ ಕೊನೆಯ ಅಧ್ಯಾಯವೇ ಈಶಾವಾಸ್ಯೋಪನಿಷತ್ತು. ಈ ಸಂಹಿತೆಯಲ್ಲಿಯೇ ರುದ್ರಶಿವನಿಗೆ ಈಶಾನ ಮಹಾದೇವ ಎಂಬ ಹೆಸರುಗಳಿರುವುದರಿಂದ ಈ ಸಂಹಿತೆಯಲ್ಲಿನ ಈಶಾವಾಸ್ಯೋಪನಿಷತ್ತಿನ ಈಶಪದವು ಶಿವರುದ್ರ ಪರವಾಗಿದೆಯೆಂಬುದು ಸ್ಪಷ್ಟ. ಕೇನೋಪನಿಷತ್ತಿನಲ್ಲಿ ಇಂದ್ರಾದಿ ವೈದಿಕ ದೇವತೆಗಳು ಕೆಳಮಟ್ಟದವು ಇವುಗಳಿಗೆ ಉಮೆಯ ಉಪದೇಶದಿಂದ ಪರಮಾತ್ಮನ ಜ್ಞಾನವಾಗುವುದೆಂದು ಹೇಳಿದೆ. ಇದರ ಶಾಂಕರ ಭಾಷ್ಯದಿಂದ ಉಮಾಪತಿಯೇ ಪರಮಾತ್ಮನೆಂಬುದು ಸ್ಪಷ್ಟವಾಗುವುದು. ಹೀಗೆ ವೈದಿಕ ವಾಙ್ಮಯದಲ್ಲಿ ಹೆಸರಿಲ್ಲದ ಶಿವನು ಶ್ವೇತಾಶ್ವತರೋಪನಿಷತ್ತಿನ ಹೊತ್ತಿಗೆ "ಏಕ ಏವರುದ್ರೋ ನದ್ವಿತೀಯಾಯ ತಸ್ಥೇ" ಎಂದರೆ ರುದ್ರನೊಬ್ಬನೆ ದೇವನು ಮತ್ತೊಬ್ಬನಿಲ್ಲ ಎನ್ನುವಂತಾಯಿತು.

### ತಾತ್ವಿಕ ಕಲ್ಪನೆಯಲ್ಲಿ ಪ್ರಗತಿ

ಹಳೆಯ ಉಪನಿಷತ್ತುಗಳಲ್ಲಿ ಶ್ವೇತಾಶ್ವತರ ಉಪನಿಷತ್ತು ಒಂದು ಪ್ರಮುಖ ಸ್ಥಾನವನ್ನು ಪಡೆದಿದೆ. ಅದು ಅವರ ಹಿಂದಿನ ಎಲ್ಲ ಉಪನಿಷತ್ತುಗಳ ಸಾರಸರ್ವಸ್ವವೆನ್ನಬಹುದಾದರೂ, ಅದರಲ್ಲಿ ಅಧ್ಯಾತ್ಮಿಕ ಭಾವನೆಗೆ ಪ್ರಾಮುಖ್ಯವನ್ನು ಕೊಟ್ಟಿರುವುದರ ಜತೆಗೆ ಅಧಿದೈವಿಕ ಕಲ್ಪನೆಗೂ ಪ್ರಾಮುಖ್ಯವನ್ನು ಕೊಟ್ಟು ಭಕ್ತಿಮಾರ್ಗಕ್ಕೆ ತಳಹದಿಯನ್ನು ಹಾಕಿದೆ. ಈಶ (ಎಂದರೆ ಒಡೆಯ) ಈಶತ್ವ (ಎಂದರೆ ಒಡೆತನ) ಎಂಬ ಭಾವನೆಯು ಪ್ರಾರಂಭವಾಗಿದೆ. ಆದುದರಿಂದ ಈ ಉಪನಿಷತ್ತು ಆಗಮಗಳು ಉದಯವಾಗುವುದಕ್ಕೆ ಮುನ್ಸೂಚನೆಯಾಗಿದೆ. ಶೈವವೈಷ್ಣವ ಆಗಮಗಳು ರಚಿತವಾದವು ಆದರೆ ಶ್ವೇತಾಶ್ವತರ ದ್ವೈತಾದ್ವೈತಕಲ್ಪನೆಯು ಮಾಯವಾಗಿ ದ್ವೈತ ಕಲ್ಪನೆಯು ಪ್ರಮುಖವಾಯಿತು. "ಪರಮೇಶ್ವರಸ್ಯ ಜಗದುಭಯಕಾರಣತ್ವ ಮಿತ್ಯನವಪದ್ಯಂ" ಎಂದು ಪರಮೇಶ್ವರನು ಜಗತ್ತಿಗೆ ನಿಮಿತ್ತಕಾರಣನಲ್ಲದೆ ಉಪಾದಾನ ಕಾರಣನೂ ಅಹುದು ಎಂದು ಶ್ರೀಕಂಠಶಿವಾಚಾರ್ಯರು ನಿರ್ಣಯಿಸಿರುವ ಸಂದರ್ಭದಲ್ಲಿ "ಶಿವಾಗಮೈಕದೇಶೇ ಶಿವಸ್ಯ ಪರಬ್ರಹ್ಮಣಃ ಕೇವಲ ನಿಮಿತ್ತತ್ವ ಮುಪಪಾದಿತಂ| ತತ್ ಪರಿಹಾರಾರ್ಥಮಿದಮಧಿಕರಣ ಮಿತಿ ಪೂರ್ವಾಚಾರ್ಯಾಣಾಂ ವ್ಯಾಖ್ಯಾ" ಎಂದು ಹೇಳಿರುವರು. ಶಿವಾಗಮಗಳು ಪರಶಿವನು ಜಗತ್ತಿಗೆ ನಿಮಿತ್ತ ಕಾರಣನೇ ಹೊರತು ಉಪಾದಾನ ಕಾರಣನೂ ಅಲ್ಲ ಎಂದು

ಹೇಳುತ್ತವೆ ಎಂಬುದು ಹಿಂದಿನವರ ಅಭಿಪ್ರಾಯವಾಗಿತ್ತೆಂದು ಶ್ರೀಕಂಠರು ಹೇಳುತ್ತಾರೆ. ಇದನ್ನೇ ಕಾಶ್ಮೀರಾದ್ವೈತಕ್ಷೇಮರಾಜನೂ ಹೇಳಿರುವನು. ಶಾಸನಗಳಲ್ಲಿಯೂ ಪಾಶುಪತ ಲಾಕುಳಮತದ ಗುರುಗಳು ನ್ಯಾಯವೈಶೇಷಿಕಶಾಸ್ತ್ರಗಳಲ್ಲಿ ಪರಿಣತರೆಂದು ಮತ್ತೆ ಮತ್ತೆ ಹೇಳಿರುವುದು ಕಂಡುಬರುವುದು. ಆದುದರಿಂದ ಇವರು ದ್ವೈತಿಗಳು. ತಮಿಳು ಶೈವರಾದರೂ ಪರಶಿವಶಕ್ತಿಯಿಂದಲೇ ಈ ಜಗತ್ತು ಹೊರಹೊಮ್ಮಿದೆಯೆಂದು ಹೇಳು ವಲ್ಲಿ ಒಂದು ರೀತಿಯ ಉಪಾದಾನ ಕಾರಣವನ್ನು ಒಪ್ಪಿ ಒಂದು ಹೆಜ್ಜೆ ಮುಂದುಹೋಗಿರ ವರೆಂಬುದನ್ನು ಕಾಣಬಹುದಾದರೂ ಅವರು ಅಚಿತ್ ಪ್ರಪಂಚವು ಚಿತ್‌ಸ್ವರೂಪವಾದ ಶಿವಾಭಿನ್ನ ಶಕ್ತಿಯಿಂದ ಹೊರಹೊಮ್ಮುವುದಿಲ್ಲವೆಂದು ಹೇಳಿ ಇದರ ಉತ್ಪತ್ತಿಗೆ ಶಿವಾಭಿನ್ನವಲ್ಲದ ಪರಿಗ್ರಹ ಶಕ್ತಿ ಕಾರಣವೆನ್ನುವರು. ವೀರಶೈವರೂ ಶ್ರೀಕಂಠಶಿವಾ ಚಾರ್ಯರೂ ಶಿವಾಭಿನ್ನಶಕ್ತಿಯೇ ಚಿದಚಿತ್ ಪ್ರಪಂಚಕ್ಕೆ ಉಪಾದಾನ ಕಾರಣವೆಂದು ಹೇಳುವರು. ಮತ್ತು ಪರಶಿವ ಭಿನ್ನಶಕ್ತಿಯಲ್ಲಿ ಚಿದಚಿತ್ ಪ್ರಪಂಚವೆಲ್ಲವೂ ಸೃಷ್ಟಿಗೆ ಮೊದಲು ಐಕ್ಯವಾಗಿತ್ತೆಂದೂ ಮುಂದೆ ಪ್ರಳಯದಲ್ಲಿ ಹಾಗೆ ಐಕ್ಯವಾಗುವುದೆಂಬೂ ಹೇಳುವರು. ಪಶುಪಾಶ, ಪಶುಪತಿ, ಈ ಮೂರರಲ್ಲಿ ಪಶುಪತಿಗೆ ಮಾತ್ರ ಅಂತಿಮ ಸತ್ವವನ್ನು ಕಾಶ್ಮೀರಾದ್ವೈತಿಗಳೂ ವೀರಶೈವರೂ ಹೇಳುವರಾದರೆ ಪಶುಪಾಶ, ಪಶುಪತಿ ಈ ಮೂರರಕ್ಕೂ ಅಂತಿಮ ಸತ್ಯವನ್ನು ತಮಿಳು ಶೈವರು ಹೇಳುವರು. ಆದುದರಿಂದ ಅವರು ಹೆಸರಿಗೆ ಮಾತ್ರ ಅದ್ವೈತವನ್ನು ಹೇಳುವರಾದರೂ ಅವರು ನಿಜವಾಗಿ ದ್ವೈತಿಗಳೇ. ಶ್ರೀಕಂಠಶಿವಾಚಾರ್ಯರ ಭಾಷ್ಯದಲ್ಲಿ ಪಶುಪತಿಯೊಬ್ಬನಿಗೆ ಅಂತಿಮ ಸತ್ಯವನ್ನು ಹೇಳುವರಾದರೂ ಮೋಕ್ಷದಲ್ಲಿ ಶಿವನ ಸಮಾನವಾದ ಆನಂದ ವನ್ನು ಕೊಡುವ ಸ್ವರೂಪವು ಬರುವುದೇ ಹೊರತು ಸೃಷ್ಟಿ ಮೊದಲಾದ ಕಾರ್ಯಗಳಲ್ಲಿ ಜೀವರಿಗೆ ಸಂಬಂಧವಿರುವುದಿಲ್ಲವೆಂದೂ ಆ ಕಾರ್ಯಗಳಿಗೆ ಶಿವನಿಗೆ ಮಾತ್ರ ಮೀಸ ಲೆಂದೂ ಹೇಳುವರು. ವೀರಶೈವರು ಪಶುಪತಿಯೊಬ್ಬನೇ ಅಂತಿಮ ಸತ್ಯವೆನ್ನುವರಲ್ಲದೆ ಮೋಕ್ಷದಲ್ಲಿ ಶಿವಾಂಶನಾದ ಜೀವನು ಶಿವದಲ್ಲಿ ಸಮುದ್ರದ ಜಲದಲ್ಲಿ ಜಲದಂಶವೇ ಆದ ನದಿಯು ಸೇರಿ ಹೋಗಿ ಅವಿಭಾಗವಾಗುವಂತೆ ಬೆರೆದು ಹೋಗುವನು ಎನ್ನುವರು.

ಬೌದ್ಧರ ಸರ್ವಶೂನ್ಯಂ ಎಂಬ ಶೂನ್ಯವಾದಕ್ಕೆ ಮೊದಲೂ, ಶ್ರೀಶಂಕರರ ಜಗನ್ಮಿಥ್ಯವಾದಕ್ಕೆ ಅನಂತರವೂ ಎಡೆಗೊಟ್ಟ "ನೇತಿ ನೇತಿ" ಎಂಬ ಹಳೆಯ ಉಪ ನಿಷತ್ತುಗಳಲ್ಲಿನ ಕಲ್ಪನೆಯು ಮೋಕ್ಷ ಸ್ಥಿತಿಯಲ್ಲಿ ಅದ್ವೈತವನ್ನು ಸಾರುವುದೇ ಹೊರತು ಸೃಷ್ಟಿ ಸ್ಥಿತಿಯಲ್ಲಿ ಚರಾಚರಾತ್ಮಕ ಜಗತ್ತು ಸತ್ಯವೆಂಬುದಕ್ಕೆ ಅಡ್ಡ ಬಾರದೆಂಬುದನ್ನು ಶ್ವೇತಾಶ್ವತರ ಉಪನಿಷತ್ತು ಸ್ಪಷ್ಟ ಮಾಡಿದೆ. ಅದರಲ್ಲಿ "ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ ಸರ್ವಂ ಪ್ರೋಕ್ತಂತ್ರಿವಿಧಂ ಬ್ರಹ್ಮ ಮೇತತ್" ಎಂದು ಹೇಳಿದೆ. ಭೋಗಿಸುವ ಜೀವನೂ ಭೋಗಿಸಲ್ಪಡುವ ಅಚರ

ಜಗತ್ತು ಜೀವನಿಗೆ ಪ್ರೇರಕನಾದ ಈಶ್ವರನೂ ಎಂದರೆ ಮೂರು ಬಗೆಯಾಗಿರುವ ಸೃಷ್ಟಿಯು ಒಬ್ಬನೆಯಾದ ಪರಮಾತ್ಮನ ತ್ರಿವಿಧರೂಪೇ ಎಂದು ಇಲ್ಲಿ ಹೇಳಿದೆ. ಸೃಷ್ಟಿ ಸ್ಥಿತಿಯಲ್ಲಿ ಇವೆಲ್ಲವೂ ಸತ್ಯವಾಗಿದ್ದು ಸೃಷ್ಟಿಗೆ ಮೊದಲೂ ಸೃಷ್ಟಿಯು ಲಯವಾದಮೇಲೂ ಬ್ರಹ್ಮವೊಂದೇ ಉಳಿಯುವುದೆಂದಾಯಿತಾಗಿ ದ್ವೈತಾದ್ವೈತ ಸಿದ್ಧಾಂತವೇ ಉಪನಿಷತ್ ಸಿದ್ಧಾಂತವೆಂಬುದನ್ನು ಶ್ವೇತಾಶ್ವರೋಪನಿಷತ್ತು ಸ್ಪಷ್ಟ ಮಾಡಿದೆ. "ಲೀನಾ ಬ್ರಹ್ಮಣಿ ತತ್ಪರಾಃ ಯೋನಿಮುಕ್ತಾಃ" ಎಂದು ಈ ಉಪನಿಷತ್ತು ಹೇಳಿರುವುದರಲ್ಲಿ ಮೋಕ್ಷದಲ್ಲಿ ಜೀವನು ಪರಬ್ರಹ್ಮನಲ್ಲಿ ಲೀನವಾಗಿ ಹೋಗುವನೆಂಬುದು ಸ್ಪಷ್ಟವಾಗಿ ಅಂತಿಮ ಸ್ಥಿತಿಯಲ್ಲಿ ಅದ್ವೈತವಾಗುವುದೆಂದಾಯಿತು. ಆದರೆ ಜಗತ್ತು ಸತ್ಯವೆಂಬ ಕಲ್ಪನೆಯು ಈ ಉಪನಿಷತ್ತಿನಲ್ಲಿರುವುದೇ ಪ್ರಾಮುಖ್ಯವನ್ನು ಪಡೆದಿದೆ ಆಗಮಗಳಲ್ಲಿ. ಇದರಿಂದ ಶೈವರಲ್ಲಿ ಆಗಮಾನುಯಾಯಿಗಳಾದ ಪಾಶುಪತರು ದ್ವೈತ ಸಿದ್ಧಾಂತಿಗಳಾಗಿದ್ದಾರೆ. ತಮಿಳು ಶೈವರು ಉಪನಿಷತ್ತುಗಳಿಂದ ಸ್ವಲ್ಪ ಮಟ್ಟಿಗೆ ಪ್ರಭಾವಿತರಾಗಿ ಹೆಸರಿಗೆ ಮಾತ್ರ ಅದ್ವೈತವನ್ನು ಹೇಳುವರಾದರೂ ಅವರು ಪಶು, ಪಾಶ, ಪಶುಪತಿ ಈ ಮೂರಕ್ಕೂ ಅಂತಿಮ ಸತ್ಯವನ್ನು ಹೇಳುವುದರಿಂದ ಅವರು ದ್ವೈತಿಗಳೇ. ಆದರೆ ಎಲ್ಲ ವಿಷಯಗಳಲ್ಲಿಯೂ ತಮಿಳು ಶೈವದ ಪರಿಭಾಷೆಯನ್ನೇ ಬಳಸಿ ಅದೇ ಸಿದ್ಧಾಂತವನ್ನು ಮುಂದುವರಿಸಿರುವ ಕಾಶ್ಮೀರಶೈವದವರು ಸಂಪೂರ್ಣ ಅದ್ವೈತಿಗಳು ಹಾಗೂ ಜಗತ್ತು ಸತ್ಯವೆಂದು ಹೇಳುವವರು. ಶಿವಾಭಿನ್ನವಾದ ಶಕ್ತಿಯೇ ಜಗತ್ತಾಗುವುದೆಂದು ಹೇಳುವ ಶ್ರೀಕಂಠಶಿವಾಚಾರ್ಯಾನುಯಾಯಿಗಳು ನ್ಯಾಯವಾಗಿ ಸಂಪೂರ್ಣ ಐಕ್ಯವನ್ನೇ ಮೋಕ್ಷದಲ್ಲಿ ಹೇಳಬಹುದಾಗಿತ್ತಾದರೂ ಮೋಕ್ಷವಲ್ಲಿ ಜೀವನು ಶಿವನ ಸ್ವರೂಪವನ್ನು ಹೊಂದುವನೆಂದೂ ಸೃಷ್ಟ್ಯಾದಿಶಕ್ತಿಗಳು ಮುಕ್ತಜೀವನಿಗೆ ಇಲ್ಲವೆನ್ನುವರು. ಆದರೆ ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವ ಸಿದ್ಧಾಂತವನ್ನು ನಿರ್ಣಯಿಸಿದಾಗ ನೀರಿನಲ್ಲಿ ನೀರು ಬೆರೆದಂತೆ ಶಿವಾಂಶನಾದ ಜೀವನು ಶಿವನಲ್ಲಿ ಲೀನವಾಗಿ ವಿಭಾಗವಿಲ್ಲದಂತಾಗುವನೆಂದೆ ಹೇಳಿದೆ. ಚರಾಚರ ಜಗತ್ತು ಸತ್ಯವಾದರೂ ಅದ್ವೈತವೇ ಅಂತಿಮದಲ್ಲಿ ಉಳಿಯುವುದೆನ್ನುವುದರಲ್ಲಿ ಕಾಶ್ಮೀರಶೈವದವರಿಗೂ ವೀರಶೈವರಿಗೂ ಒಮ್ಮತವಿದ್ದರೂ ಇವರಿವರಿಗೆ ಚರಾಚರಾತ್ಮಕ ಜಗತ್ತು ಶಿವಾಭಿನ್ನವಾದ ಶಕ್ತಿಯಿಂದ ಹೇಗೆ ಹೊರಹೊಮ್ಮುವುದೆಂಬುದರಲ್ಲಿ ತಾತ್ವಿಕವಾಗಿಯೇ ವ್ಯತ್ಯಾಸವಿರುವುದೆಂಬುದನ್ನು "ವೀರಶೈವದ ಉಗಮ ಮತ್ತು ಪ್ರಗತಿ" ಗ್ರಂಥದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಇಲ್ಲಿ ಶೈವರು ತಾತ್ವಿಕ ದೃಷ್ಟಿಯಲ್ಲಿ ದ್ವೈತದ ನಿಲುವಿನಿಂದ ಕ್ರಮವಾಗಿ ಹೇಗೆ ಸಂಪೂರ್ಣ ಅದ್ವೈತ ಸಿದ್ಧಾಂತದವರೆಗೂ ನಿಲುವನ್ನು ತಾಳಿರುವರೆಂಬುದನ್ನು ತೋರಿಸಲಾಯಿತು.

ತಾತ್ವಿಕ ದೃಷ್ಟಿಯಲ್ಲಿ ಒಮ್ಮತವಿದ್ದ ಮಾತ್ರಕ್ಕೇ ಅವರು ಒಂದೇ ಮತ ಅಥವಾ ಜಾತಿಯವರೆನ್ನಲಾಗುವುದಿಲ್ಲ. ಉದಾಹರಣೆಗೆ ದ್ವೈತಿಗಳಾದ ಪಾಶುಪತರು ಶೈವರು ;

ದ್ವೈತಿಗಳೇ ಆದ ಮಾಧ್ವರು ವೈಷ್ಣವರು. ಶೈವರೋ ಅಥವಾ ವೈಷ್ಣವರೋ ಆದ ಮಾತ್ರಕ್ಕೆ ಅವರು ಒಂದೇ ಮತದವರಾಗಿರಬೇಕಾಗಿಲ್ಲ. ಉದಾಹರಣೆಗೆ ವೈಷ್ಣವರಾದ ಮಾಧ್ವರು ದ್ವೈತಿಗಳು; ವೈಷ್ಣವರೇ ಆದ ರಾಮಾನುಜೀಯರು ವಿಶಿಷ್ಟಾದ್ವೈತಿಗಳು. ಆಚರಣೆಯಲ್ಲಿಯೂ ಒಂದು ಮತದವರಿಗೂ ಮತ್ತೊಂದು ಮತದವರಿಗೂ ವ್ಯತ್ಯಾಸವಿರುವುದು. ಷಟ್‌ಸ್ಥಲಗಳನ್ನು ಷಡ್ಲಿಂಗಗಳ ಉಪಾಸನೆಯಿಂದ ಹತ್ತುತ್ತ ಲಿಂಗಾಂಗ ಸಾಮರಸ್ಯವನ್ನು ಪಡೆಯಬಹುದೆಂಬ ವೀರಶೈವರ ಆಚರಣೆಗೂ ಸಿದ್ಧಾಂತದಲ್ಲಿ ವೀರಶೈವವನ್ನು ಬಹುಮಟ್ಟಿಗೆ ಹೋಲುವ ಕಾಶ್ಮೀರಶೈವದ ಶಾಂಭವೋಪಾಯ, ಶಾಕ್ತೋಪಾಯ, ಅಣವೋಪಾಯ ಮೊದಲಾದವುಗಳಿಗೆ ಅತ್ಯಂತ ವ್ಯತ್ಯಾಸವಿದೆ ಸಿದ್ಧಾಂತ ಶಿಖಾಮಣಿಯಲ್ಲಿ ಶುದ್ಧಿ ಸಂಘಟನೆಗೊಳಗಾದ ವೀರಶೈವ ಸಿದ್ಧಾಂತವು ನಿಷ್ಕರ್ಷಿಸಲ್ಪಡುವವರೆಗೂ ಲಿಂಗಿ ಜಂಗಮ ವೀರಮಾಹೇಶ್ವರರಲ್ಲಿ ಆಚರಣೆಯಲ್ಲಿಯೂ ತಾತ್ವಿಕ ದೃಷ್ಟಿಯಲ್ಲಿಯೂ ಒಮ್ಮತವಿರಲಿಲ್ಲ. ಅಲಿಂಗಿಗಳಲ್ಲಿ ದ್ವೈತಿಗಳೂ ಅದ್ವೈತಿಗಳೂ ವಿಶಿಷ್ಟಾದ್ವೈತಿಗಳೂ ಇದ್ದಂತೆ ಲಿಂಗಿಗಳಲ್ಲಿಯೂ ದ್ವೈತಿಗಳೂ ಅದ್ವೈತಿಗಳು ಮೊದಲಾದವರಿದ್ದರು. ಲಿಂಗಿಗಳೆಲ್ಲರನ್ನೂ ಒಮ್ಮುಖ ಮಾಡಿದ ಹಿರಿಮೆ ರೇಣುಕೋಪದೇಶರೂಪವಾಗಿರುವ ವೀರಶೈವರ ಆದಿ ಸಂಸ್ಕೃತ ಆಧಾರ ಗ್ರಂಥವೆನಿಸಿದ ಸಿದ್ಧಾಂತ ಶಿಖಾಮಣಿಗೆ ಸೇರಿದೆ.

ದ್ವೈತಿಗಳಾದ ಲಕುಲೀಶ ಪಾಶುಪತರಲ್ಲಿ ಲಿಂಗಧಾರಿಗಳಿದ್ದರು. ಪಾಶುಪತ ಸೂತ್ರಗಳ ಪ್ರಥಮಾಧ್ಯಾಯದಲ್ಲಿ "ಲಿಂಗಧಾರೀ" ಎಂಬುದೊಂದು ಸೂತ್ರವೇ ಇದೆ. ಪಾಶುಪತ ಸೂತ್ರದ ಕೌಂಡಿನ್ಯ ಭಾಷ್ಯದಲ್ಲಿ "ಲೀಯನಾಲ್ಲಿಂಗನಾಚ್ಚ ಲಿಂಗಂ। ತದ್‌ಧಾರಯನ್ ಲಿಂಗಧಾರೀ ಭವತಿ। ದಂಡಧಾರಿ ವದಿತ್ಯರ್ಥಃ" ಎಂದು ಹೇಳಿದೆ. ವಿದ್ವಾಂಸರಾದ ಭಂಡಾರ್ಕರ್‌ರವರ ಅಭಿಪ್ರಾಯದಂತೆ ಇಲ್ಲಿ ಲಿಂಗಧಾರಿಯೆಂದರೆ ಲಿಂಗವನ್ನು ಧರಿಸಿರುವವನೆಂದು ಅರ್ಥ. ಈ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಕಾರಣವೇ ಇಲ್ಲ. ದಂಡವನ್ನು ಧರಿಸಿದವನು ದಂಡಧಾರಿಯೆನ್ನುವಂತೆ ಲಿಂಗವನ್ನು ಧರಿಸಿದವನು ಲಿಂಗಧಾರಿಯೆಂದು ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿದೆ. ದಂಡದ ಉಪಮಾನವನ್ನು ಕೊಟ್ಟಿರುವುದರಿಂದ ಬಹಿರ್ಲಿಂಗಧಾರಣೆಯೇ ಇಲ್ಲಿ ವಿವಕ್ಷಿತವಾಗಿದೆ. ಕರ್ನಾಟಕದಲ್ಲಿ ೧೧-೧೨ನೆಯ ಶತಮಾನಗಳ ಹಿಂದೆ ಪಾಶುಪತರಲ್ಲಿ ಕಾಳಾಮುಖ ಮಠಗಳು ಪ್ರಸಿದ್ಧ ವಿದ್ಯಾಪೀಠಗಳಾಗಿ ರಾರಾಜಿಸುತ್ತಿದ್ದವು. ವಚನ ಧರ್ಮದ ವಿಷಯದಲ್ಲಿ ನಿಷ್ಣಾತರಾದ ಎಂ. ಆರ್. ಶ್ರೀನಿವಾಸಮೂರ್ತಿಗಳ ವಚನ ಧರ್ಮಸಾರದಲ್ಲಿ ಹೇಳಿದಂತೆ "ಆ ಮಠಗಳಲ್ಲಿದ್ದ ಆಚಾರ್ಯರು 'ಯಮ ನಿಯಮಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪತಪ ಸಮಾಧಿ ಶೀಲಗುಣ ಸಂಪನ್ನ'ರಾಗಿಯೂ, ವಸ್ತುತಃ 'ಸಕಲಾಗಮಾಚಾರ್ಯ'ರಾಗಿಯೂ ಇದ್ದರು. ಅವರದು ಸ್ವಂತ ಪಾಂಡಿತ್ಯದ ಪ್ರಭಾವವೊಂದೇ ಅಲ್ಲ. ಅವರು ರಾಜಗುರುಗಳಾಗಿಯೂ, ಪ್ರಬಲ

ರಾಗಿಯೂ ಪ್ರತಿಷ್ಠಾವಂತರಾಗಿಯೂ ಇದ್ದರು" ಶಾಸನಗಳಲ್ಲಿ ಇವರನ್ನು 'ಲಿಂಗಿ' ಗಳೆಂದು ಹೊಗಳಲ್ಪಟ್ಟಿದ್ದರೆ ಇವರ ಪ್ರಖ್ಯಾತಿಯನ್ನು ತಾಳಲಾರದವರು ಗ್ರಂಥಗಳಲ್ಲಿ ಇವರನ್ನು ಕುಲಿಂಗಿಗಳೆಂದು ನಿಂದಿಸಿದ್ದಾರೆ. ಆನಂದಗಿರಿಯ ಶಂಕರ ವಿಜಯದಲ್ಲಿ ಶಂಕರಾಚಾರ್ಯರೊಡನೆ ವಾದಿಸಿದವರಲ್ಲಿ ಕೆಲವರು "ಲಲಾಟೇ ಭುಜದ್ವಯೇ ಹೃನ್ನಾಭಿಷುಲಿಂಗ ಧಾರಿಣಃ ಪಾಶುಪತಾಃ" ಎಂದು ವರ್ಣಿಸಲ್ಪಟ್ಟಿದ್ದಾರೆ

ದ್ವೈತಿಗಳಾದ ಈ ಪಾಶುಪತರು ವೇದಗಳಿಗೆ ಮಾನ್ಯತೆಯನ್ನು ಕೊಡುವರಾದರೂ ಆಗಮಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುತ್ತಿದ್ದರು. ಅವೈದಿಕ ಪಾಶುಪತರೂ ಇದ್ದಂತೆ ಕಾಣುತ್ತದೆ. ಏಕೆಂದರೆ ವೇದಾಂತ ಸೂತ್ರಗಳಲ್ಲಿ ಖಂಡಿಸಲ್ಪಟ್ಟಿದ್ದಾರೆ. ವೇದಗಳಿಗೂ ಆಗಮಗಳಿಗೂ ಸಮಾನ ಪ್ರಾಶಸ್ತ್ಯವನ್ನು ಕೊಡುವ ಮಹಾ ಪಾಶುಪತರು ಶ್ರೀಕಂಠಭಾಷ್ಯಾನುಯಾಯಿಗಳು ಶ್ರೀಕಂಠ ಭಾಷ್ಯದಲ್ಲಿ ಮೋಕ್ಷೋಪಾಯವಾವುದೆಂದರೆ ಮಹಾ ಪಾಶುಪತವ್ರತವೆಂದು ಹೇಳಿ, ಆ ವ್ರತವು ಶಿವಮಹಾ ಪುರಾಣದಲ್ಲಿ ಹೇಳಿರುವುದೆಂಬುದನ್ನು ಆ ಪುರಾಣದ ಶ್ಲೋಕವನ್ನು, ಆ ವಿಷಯವನ್ನು ಹೇಳುವಾಗ ಉದಾಹರಿಸಿ, ಸ್ಪಷ್ಟಮಾಡಿದ್ದಾರೆ. ಇವರು ವೀರಶೈವರೆಂಬುದನ್ನು "ಶ್ರೀಕಂಠ ಭಾಷ್ಯವು ವೀರಶೈವ ಭಾಷ್ಯವೇ" ಎಂಬ ಹೊತ್ತಗೆಯಲ್ಲಿ ಸಿದ್ಧಾಂತ ಮಾಡಲಾಗಿದೆ. ಮೋಕ್ಷ ಮಾರ್ಗವು ಶಿವ ಮಹಾಪುರಾಣದಲ್ಲಿ ಹೇಳಿರುವುದೆಂದು ಶ್ರೀಕಂಠಭಾಷ್ಯದಲ್ಲಿ ಹೇಳಿದೆಯಷ್ಟೆ. ಆ ಪುರಾಣದಲ್ಲಿಯೇ "ಕರಪೂಜಾ ನಿವೃತ್ತಾನಾಂ ಸ್ವಭೋಜ್ಯಂತು ನಿವೇದಯೇತ್ । ಪೂಜಾಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ ।" ಎಂದರೆ ಲಿಂಗವನ್ನು ಕರದಲ್ಲಿ ಪೂಜಿಸಿ ತಾವು ಉಣ್ಣುವ ಅನ್ನವನ್ನು ನಿವೇದಿಸಿ ತದನಂತರ ತಲೆಯಲ್ಲಿ ಅದನ್ನು ನಿವೃತ್ತರು ಧರಿಸಬೇಕೆಂದು ಹೇಳಿದೆ. ತೆಲುಗು ಬಸವ ಪುರಾಣದ ಪೀಠಿಕೆಯಲ್ಲಿ ನಾಗೇಶ್ವರರಾವ್ ಅವರು ಹೇಳಿದಂತೆ ಶ್ರೀಕಂಠಶಿವಾಚಾರ್ಯರು ಗೋಳಕೀ ಮಠದ ಸಂಪ್ರದಾಯದವರು, ಪ್ರಸಿದ್ಧ ವೀರಶೈವ ಚಕ್ರವರ್ತಿ ಕಾಕತೀಯ ಗಣಪತಿ ಮತ್ತು ವೀರಶೈವ ಚಕ್ರವರ್ತಿನಿ ರುದ್ರಮದೇವಿಯ ಗುರು ವಿಶ್ವೇಶ್ವರ ಶಿವಾಚಾರ್ಯನ ವಿಷಯದಲ್ಲಿ ಮಲ್ಲಿಕಾಪುರದ ಶಾಸನವಿದೆ. ಅದರಲ್ಲಿ ಅವನನ್ನು "ವೀರಶೈವಾಚಾರ್ಯ ಶತೈರ್ವೃತಃ" ಎಂದು ಹೇಳಿರುವುದರಿಂದ ಇವನು ವೀರಶೈವನೆಂಬುದೂ "ಮಹೀಸುರ" ಎಂದರೆ ಬ್ರಾಹ್ಮಣನೆಂದು ಹೇಳಿರುವುದರಿಂದ ವೀರಶೈವರಲ್ಲಿ ಇವನು ವರ್ಣಾಶ್ರಮ ಧರ್ಮವನ್ನು ಗೌರವಿಸುವ ಆರಾಧ್ಯ ಬ್ರಾಹ್ಮಣ ಪಂಗಡದವನೆಂಬುದೂ ಸ್ಪಷ್ಟ. ಅದೇ ಶಾಸನದಲ್ಲಿ ಅವನನ್ನು "ನೈಷ್ಠಿಕ ದೇಶಿಕೇಂದ್ರ" ಎಂದು ಕರೆದಿರುವುದು ಶ್ರೀಕಂಠ ಶಿವಾಚಾರ್ಯರೂ ಗೋಳಕೀ ಮಠದ ಆಚಾರ್ಯನಾದ ಈತನೂ ಒಂದೇ ಮಠದವನೆಂಬುದನ್ನು ತೋರಿಸುತ್ತದೆ. ಏಕೆಂದರೆ ಶ್ರೀಕಂಠ ಶಿವಾಚಾರ್ಯರು "ಯಾವುದಾಯುಷಂ ಪಾಶುಪತ ವ್ರತಧಾರಿಣಾಂ ಮುಕ್ತಿರೇವಫಲಂ"

ಎಂದು "ಆತ್ಯಾಶ್ರಮ ಸಂಜ್ಞಕಮಪವರ್ಗಹೇತುಃ" ಎಂದು ಹೇಳಿರುವರು. ಈ ವ್ರತವು ಶಿವಮಹಾಪುರಾಣದಲ್ಲಿ ಹೇಳಿದೆಯೆಂಬುದು ಶ್ರೀಕಂಠ ಭಾಷ್ಯದಲ್ಲಿ ಸ್ಪಷ್ಟ ಮಾಡಲ್ಪಟ್ಟಿದೆಯಷ್ಟೆ. ಆ ಪುರಾಣದಲ್ಲಿ ನೈಷ್ಠಿಕ, ಆತ್ಯಾಶ್ರಮ, ಮಹಾಪಾಶುಪತ ಈ ಎಲ್ಲ ಹೆಸರುಗಳು ಒಂದೇ ವ್ರತದ ಹೆಸರುಗಳೆಂದು ಹೇಳಿದೆ. ಗೋಳಕೀಮಠದ ವಿಶ್ವೇಶ್ವರ ಶಿವಾಚಾರ್ಯರು ಶಾಸನದಲ್ಲಿ "ನೈಷ್ಠಿಕ ದೇಶಿಕೇಂದ್ರ" ಎಂದು ಕರೆಯಲ್ಪಟ್ಟಿರುವುದರಿಂದ ಆವರೂ ಶ್ರೀಕಂಠ ಶಿವಾಚಾರ್ಯರೂ ಒಂದೇ ಮತದವರೆಂಬುದು ಸ್ಪಷ್ಟ. ಶ್ರೀಕರ ಭಾಷ್ಯದಲ್ಲಿ ಮಹಾಪಾಶುಪತ ದೀಕ್ಷೆಯೂ ವೀರಶೈವ ದೀಕ್ಷೆಯೂ ಒಂದೇ ಎಂಬಂತೆ ಉಲ್ಲೇಖಿಸಿರುವುದೂ, ಕಾರಣತಂತ್ರದಲ್ಲಿಯೂ ಅದೇ ರೀತಿಯಿರುವುದರೊಡನೆ ವಿಶ್ವೇಶ್ವರ ಶಿವಾಚಾರ್ಯರನ್ನು "ವೀರಶೈವಾಚಾರ್ಯ ಶತ್ಯೈರ್ವೃತ್ಯೈಃ" ಎಂದೂ ಹೇಳಿರುವುದರೊಡನೆ ಶಿವಮಹಾಪುರಾಣದಲ್ಲಿ "ಲಿಂಗಂ ಶಿರಾಸಾಧಾರಯೇತ್ ಸದಾ" ಎಂದು ಹೇಳಿರುವುದನ್ನು ಗಮನಿಸಿದರೆ ಗೋಳಕೀ ಮಠದವರಾದ ಶ್ರೀಕಂಠ ಶಿವಾಚಾರ್ಯರೂ ವಿಶ್ವೇಶ್ವರ ಶಿವಾಚಾರ್ಯರೂ ತಲೆಯಲ್ಲಿ ಲಿಂಗವನ್ನು ಧರಿಸಿದ ವೀರಶೈವ ಬ್ರಾಹ್ಮಣರೆಂಬುದು ಸ್ಪಷ್ಟವಾಗುವುದು. ಶ್ರೀಕಂಠ ಶಿವಾಚಾರ್ಯರಿಗೆ ನೀಲಕಂಠ ಶಿವಾಚಾರ್ಯರೆಂಬ ಹೆಸರಿರುವುದು ಪ್ರಸಿದ್ಧವಾಗಿದೆ. ಈ ನೀಲಕಂಠರ ಭಾಷ್ಯದ ಕಾರಿಕೆಯೇ ಕ್ರಿಯಾಸಾರವೆಂಬುದನ್ನು "ಶ್ರೀಕಂಠ ಭಾಷ್ಯವು ವೀರಶೈವ ಭಾಷ್ಯವೇ" ಎಂಬ ಹೊತ್ತಗೆಯಲ್ಲಿ ಸ್ಪಷ್ಟಮಾಡಲಾಗಿದೆ. ಈ ನೀಲಕಂಠರನ್ನು ಶ್ರೀಕರ ಭಾಷ್ಯದಲ್ಲಿ ನೀಲಕಂಠ ಭಗವತ್ಪಾದರೆಂದೂ ಶ್ರೀಕಂಠ ಶಿವಾರಾಧ್ಯರೆಂದೂ ಶ್ರೀಪತಿ ಪಂಡಿತರು ಕರೆದಿದ್ದಾರೆ. ಗೋಳಕೀಮಠ ಸಂಪ್ರದಾಯದ ಶ್ರೀಕಂಠ ಶಿವಾಚಾರ್ಯರೂ ವಿಶ್ವೇಶ್ವರಶಿವಾಚಾರ್ಯರೂ ಲಿಂಗವನ್ನು ತಲೆಯಲ್ಲಿ ಧರಿಸಿದ ವೀರಶೈವರಲ್ಲಿ ಆರಾಧ್ಯ ಬ್ರಾಹ್ಮಣರೆಂಬುದರಲ್ಲಿ ಸಂದೇಹವೇ ಇಲ್ಲ. ಈ ಸಂಪ್ರದಾಯದವರಲ್ಲಿ ನೈಷ್ಠಿಕರು ಎಂದರೆ ಆಜೀವ ಬ್ರಹ್ಮಚಾರಿಗಳು ಮಾತ್ರ ಶಿರಸ್ಸಿನಲ್ಲಿ ಲಿಂಗವನ್ನು ಧರಿಸುತ್ತಿದ್ದರು. ಶಾಸನಗಳಲ್ಲಿ ಇವರನ್ನು ಜಂಗಮರೆಂದು ಕರೆಯಲಾಗಿದೆ. ಆನಂದಗಿರಿಯ ಶಂಕರವಿಜಯದಲ್ಲಿ "ಶಿರಸಿ ಪಾಷಾಣಲಿಂಗಂಚ ಧಾರಿಣಃ ಜಂಗಮಾಃ" ಎಂದು ಹೇಳಿರುವ ಜಂಗಮರಿವರು. ಇವರು ನಿವೃತ್ತರು ಎಂದರೆ ಸನ್ಯಾಸಿಗಳು ಉಳಿದವರು ಪ್ರವೃತ್ತರು ಎಂದರೆ ಗೃಹಸ್ಥರು; ಇವರಲ್ಲಿ ಬೇರೆ ಬೇರೆ ಜಾತಿಯವರು ಬೇರೆ ಬೇರೆ ತರದ ಲಿಂಗಗಳನ್ನು ಪೀಠದಲ್ಲಿಟ್ಟು ಪೂಜಿಸಿ ಅದನ್ನು ಪ್ರತ್ಯೇಕ ಗೃಹದಲ್ಲಿಡುತ್ತಿದ್ದರು. ಪ್ರತಿಯೊಬ್ಬನಿಗೂ ಅವನವನದೇ ಲಿಂಗವಿರುತ್ತಿದ್ದುದರಿಂದ ಅದನ್ನು ಇಷ್ಟಲಿಂಗವೆನ್ನಬಹುದು. ಈ ಧರ್ಮದ ಗೃಹಸ್ಥರ ಮನೆಯಲ್ಲಿ ಹುಟ್ಟಿದವರು ಬಸವಣ್ಣನವರು. ಸಿಂಗಿ ರಾಜ ಪುರಾಣದಲ್ಲಿ ಹೇಳಿದಂತೆ ಬಸವಣ್ಣನವರು ಹುಟ್ಟಿದಾಗ ಸಂಗಮೇಶ್ವರನೇ ಜಂಗಮ ರೂಪದಲ್ಲಿ ಬಂದು ಒಂದು ಲಿಂಗವನ್ನಿತ್ತು "ಇಷ್ಟಲಿಂಗಮಿದಕ್ಕುಂ ; ಈ ಲಿಂಗಮಂ ಸಿಂಹ ವಿಷ್ಟುರದೊಳಿಟ್ಟರ್ಚಿಸಬೇಕು" ಎಂದು

ಹೇಳಿದನು. ಬಸವೇಶ್ವರನು ಕಪ್ಪಡಿ ಸಂಗಮಕ್ಕೆ ಹೋಗುವಾಗ "ಮನೆಯ ಒಳಗೆ ಪೊಕ್ಕು ತನ್ನಯಲಿಂಗವಂ ಕೊಂಡು" ಹೋದುದಾಗಿ ಹೇಳಿದೆ. ಬಸವಯುಗಕ್ಕೆ ಮೊದಲು ಈ ಇಷ್ಟಲಿಂಗಗಳ ವಿಷಯದಲ್ಲಿ ಜಾತಿ ಜಾತಿಯವರಿಗೂ ಸ್ತ್ರೀ ಪುರುಷರಿಗೂ ಇದ್ದ ವ್ಯತ್ಯಾಸವು ಶಿವ ಮಹಾಪುರಾಣದ ಶ್ಲೋಕಗಳಲ್ಲಿ ಇರುವುವೆಂದೂ ಅದೇ ಶ್ಲೋಕಗಳೇ ವೀರಶೈವರ ಆಧಾರ ಗ್ರಂಥವಾದ ಕ್ರಿಯಾಸಾರದಲ್ಲಿ ಇವೆಯೆಂಬುದನ್ನು "ವೀರಶೈವದ ಉಗಮ ಮತ್ತು ಪ್ರಗತಿ" ಗ್ರಂಥದಲ್ಲಿ ತೋರಿಸಿದೆ. ಲಿಂಗಧಾರಣೆ ಲಿಂಗಾರ್ಚನೆಗಳ ವಿಷಯದಲ್ಲಿ ಜಾತಿಜಾತಿಯವರಿಗೂ ಸ್ತ್ರೀ ಪುರುಷರಿಗೂ ಗೃಹಸ್ಥ ಸನ್ಯಾಸಿಗಳಿಗೂ ಇದ್ದ ವ್ಯತ್ಯಾಸವನ್ನು ತಾರತಮ್ಯವನ್ನು ತಪ್ಪಿಸಿ ಇವರೆಲ್ಲರೂ ಮೋಕ್ಷವನ್ನು ಪಡೆಯಲು ಸಮಾನ ಅರ್ಹತೆಯುಳ್ಳವರಾದುದರಿಂದ ಎಲ್ಲರೂ ಒಂದೇ ತರದ ಇಷ್ಟ ಲಿಂಗವನ್ನು ಒಂದೇ ರೀತಿಯಲ್ಲಿ ಅರ್ಚಿಸಿ ಧರಿಸಬಹುದೆಂಬ ನಿಲುವನ್ನು ರೇಣುಕಾಚಾರ್ಯೋಪದೇಶ ರೂಪವಾದ ಸಿದ್ಧಾಂತ ಶಿಖಾಮಣಿಯಲ್ಲಿ ಕಾಣಬಹುದು. ಆದರೂ ಹಿಂದೆ ಪೂಜಾವಿಧಾನದಲ್ಲಿದ್ದ ವ್ಯತ್ಯಾಸವು ಕಾಣದೇ ಹೋಗಿಲ್ಲ. ಸಿದ್ಧಾಂತ ಶಿಖಾಮಣಿಯಲ್ಲಿ ಬಾಹ್ಯ ಪೀಠ ಪೂಜೆಗಿಂತಲೂ ಕರಪೀಠ ಪೂಜೆಯು ಮೋಕ್ಷಾಪೇಕ್ಷಿ ವೀರಶೈವರಿಗೆ ಶ್ರೇಷ್ಠವೆಂದು ಹೇಳಿದೆಯೇ ಹೊರತು ಬಾಹ್ಯ ಪೀಠ ಪೂಜೆಯು ನಿಷೇಧಿಸಲ್ಪಟ್ಟಿಲ್ಲ. "ಬ್ರಾಹ್ಮಣ ಕ್ಷತ್ರಿಯೋವಾಪಿ ವೈಶ್ಯೋವಾ ಶೂದ್ರ ಏವವಾ। ಅಂತ್ಯಜೋವಾ ಶಿವಭಕ್ತಃ ಶಿವವನ್ಮಾನ್ಯ ಏವಸಃ" ಎಂದು ಸಿದ್ಧಾಂತ ಶಿಖಾಮಣಿಯಲ್ಲಿನ ವೀರಶೈವರಲ್ಲಿ ಜಾತಿ ತಾರತಮ್ಯವನ್ನು ಮಾಡದ ನಿಲುವು ಸುಧಾರಿತ ವೀರಶೈವದ ನಿಲುವು. ಶ್ರೀ ಶೈಲದಲ್ಲಿದ್ದ ನೈಷ್ಠಿಕ ಜಂಗಮ ಮಲ್ಲಿಕಾರ್ಜುನ ಸದಾನಂದಾದಿಗಳೂ ಹೂಲಿ ಮಠದಲ್ಲಿನ ಹಿಂದಿನ ನೀಲಕಂಠ ಶಿವಾಚಾರ್ಯರನ್ನೊಳಗೊಂಡ ಶಿವಾಚಾರ್ಯರೂ ಸಂಪ್ರದಾಯ ಶರಣರಾದ ವರ್ಣಾಶ್ರಮ ಧರ್ಮಾನುಯಾಯಿಗಳಾದ ತಲೆಯಲ್ಲಿ ಲಿಂಗವನ್ನು ಧರಿಸುವ ವೀರಶೈವ ಗುರುವರ್ಗದವರೇ ಹೊರತು ಕೆಲವರು ವಾದಿಸುವಂತೆ ಆಲಿಂಗಿ ಶಿವಾಚಾರ್ಯರಲ್ಲ. ಈ ಸನಾತನ ಧರ್ಮದ ವೀರಶೈವ ಜಂಗಮರು ವೀರಶೈವದ ಜಾತಿ ಭೇದ ವಿಷಯದಲ್ಲಿ ವೀರಶೈವದಲ್ಲಾದ ಸುಧಾರಣೆಯನ್ನೊಪ್ಪದೆ ವಿಜಯನಗರವನ್ನು ಸ್ಥಾಪಿಸಿದ ಕ್ರಿಯಾಶಕ್ತಿಗಳ ಕಾಲದವರೆಗೂ ಉಳಿದು ಬಂದು ಶಿಲಾ ಶಾಸನಗಳಲ್ಲಿ ನೈಷ್ಟಿಕರೆಂದು ಪ್ರಸಿದ್ಧರಾಗಿದ್ದರು. ಅನಂತರ ವೀರಶೈವದ ಸುಧಾರಣೆಯನ್ನು ಒಪ್ಪಿಕೊಂಡು ಸುಧಾರಿತ ವೀರಶೈವರಲ್ಲಿ ಲೀನವಾಗಿ ಹೋದರು.



# ಪ್ರಾಚೀನ ವೀರಶೈವ ಪರಂಪರೆ

ವಿದ್ಯಾ ವಿಭೂಷಣ, ಸಾಹಿತ್ಯ ರತ್ನ ಶ್ರೀ ಓ.ಎಲ್. ಲಿಂಗಣ್ಣಯ್ಯ,

ವೀರಶೈವ ಅನಾದಿ ಸಂಸಿದ್ಧವಾದುದು. ಇದು ಶೈವ ಭೇದ. ಗಂಗಾಮೂಲ ಕಿರಿದು; ಮುಂದೆ ಮುಂದೆ ಹಿರಿದು, ಅದು ಹರಿದು ಅನಂತ ಸಾಗರದಲ್ಲಿ ಲೀನವಾಗುತ್ತದೆ. ಕೊನೆಯಲ್ಲಿ ಅದು ಅನಂತ ಶಾಖೆಗಳಾಗಿ ಕವಲೊಡೆದಿದೆ. ಗಂಗಾವಾಹಿನಿಯನ್ನು ತ್ರಿಪಥಗಾ, ಜಾಹ್ನವೀ, ಭಾಗೀರಥಿ – ಎಂದೂ ಕರೆಯುತ್ತಾರೆ. ನದಿ ಒಂದೇ; ಹೆಸರು ಹಲವು. ಅದರ ವಿಕಾಸ ನಡೆದು ಬಂದಂತೆ ಹೆಸರು ಪಡೆದಿದೆ ಶೈವವೇ ಮೂಲ; ಅದರ ವಿವಿಧ ಪ್ರಕಾರಗಳು ಅದರ ವಿಕಾಸವನ್ನು ಸೂಚಿಸುತ್ತವೆ. ಈದೃಷ್ಟಿಯಿಂದ ಪ್ರಾಚೀನ ವೀರಶೈವ ವಾಙ್ಮಯದ ರೂಪ ರೇಷೆಗಳನ್ನು ಚಿತ್ರಿಸಬಹುದು. ಈ ವಾಙ್ಮಯದ ಸ್ವರೂಪವನ್ನು ಅರಿಯಲು ಪ್ರತ್ಯಕ್ಷ ಪ್ರಮಾಣಗಳಿಲ್ಲ. ಆದರೂ, ಈಗ ಲಭ್ಯವಾಗಿರುವ ಸಾಧನ ಸಂಪತ್ತಿನಿಂದಲೇ ಈ ವಾಙ್ಮಯದ ವ್ಯಾಪ್ತಿಯನ್ನೂ ವಯಸ್ಸನ್ನೂ ತರ್ಕಿಸಬಹುದು. ವೇದ, ಆಗಮ ಉಪನಿಷತ್ ಇವು ನಮ್ಮ ಸಂಸ್ಕೃತಿಯ ಭಂಡಾರ, ಅದರಲ್ಲಿಯೂ ಋಗ್ವೇದ ಅತ್ಯಂತ ಪ್ರಾಚೀನ ಗ್ರಂಥವೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ವೇದಗಳ ರಚನೆಯಾಗಿ ಸುಮಾರು ಆರು ಸಾವಿರ ವರ್ಷಗಳಾಗಿವೆಯೆಂದೂ, ಶಿವಾಗಮಗಳು ಹುಟ್ಟಿ ಸುಮಾರು ಐದು ವರ್ಷಗಳಾಗಿವೆಯೆಂದೂ ಇತಿಹಾಸರು ನಿರ್ಧರಿಸಿದ್ದಾರೆ. ಆರ್ಯರು ಭರತಖಂಡದಲ್ಲಿ ನೆಲಸಿದ ಮೇಲೆ ವೇದವಾಙ್ಮಯ ಆವಿರ್ಭವಿಸಿತು. ಆರ್ಯರಿಗಿಂತ ಬಹಳ ಹಿಂದಿನಿಂದಲೂ ಇಲ್ಲಿ ದ್ರಾವಿಡಜನಾಂಗವಿತ್ತು. ಈ ದ್ರಾವಿಡದಲ್ಲಿ ಹಲವು ಪ್ರಮುಖ ಪಂಗಡಗಳಿದ್ದುವು. ಆರ್ಯರು ಸಿಂಧು ನದಿಯ ತೀರದಲ್ಲಿ ನೆಲೆಸಿದ್ದಾಗ ಋಗ್ವೇದವನ್ನು ರಚಿಸಿದರು. ಅವರು ಮುಂದೆ ಗಂಗಾನದಿಯ ಬಯಲಿನಲ್ಲಿ ನೆಲೆಸಿದಾಗ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳನ್ನು ರಚಿಸಿದರು. ವೇದಗಳಂಥ ಉದ್ದಾಮಗ್ರಂಥ

ಗಳು ರಚನೆಯಾಗಬೇಕಾದರೆ, ಅದುವರೆಗಾಗಲೇ ಅಪಾರ ವಾಙ್ಮಯ ಸಂಪತ್ತು ಬೆಳೆದು ಬಂದಿರಬೇಕು. ಅದು ದ್ರಾವಿಡ ವಾಙ್ಮಯವೆಂಬುದರಲ್ಲಿ ಸಂಶಯವಿಲ್ಲ.

ಆಗ ದ್ರಾವಿಡ ವಾಙ್ಮಯ ಕೇವಲ ಶ್ರುತಭಂಡಾರವಾಗಿತ್ತು. ಎಂದರೆ, ಅದು ಗುರು ಶಿಷ್ಯರ ಪರಂಪರೆಯಿಂದ ಬಾಯಿಪಾಠದಲ್ಲಿ ಉಳಿದು ಬರುತ್ತಿತ್ತು. ಅದು ದಂತ ಕಥೆಗಳಲ್ಲಿ, ಹಾಡುಗಳಲ್ಲಿ, ಜನಪದ ಗೀತೆಗಳಲ್ಲಿ ಜೀವಂತವಾಗಿತ್ತು. ಆದ್ದರಿಂದ ವೇದ ವಾಙ್ಮಯ ರಚನೆಯ ಕಾಲವೇ ಮಾನವ ಜನಾಂಗದ ಮೂಲಕಾಲವಲ್ಲ. ಈ ಭೂಮಿಯ ಮೇಲೆ, ಮಾನವ ಜನಾಂಗ ಉದಯವಾಗಿ, ಅದೆಷ್ಟೋ ಕಾಲವಾಗಿದೆ. ಹಾಗಾದರೆ, ಈ ಸೃಷ್ಟಿ ಯಾವಾಗ ಆಯಿತು? ಮಾನವ ಜನಾಂಗ ಯಾವಾಗ ಉದಯವಾಯಿತು? ಆ ಜನಾಂಗದ ವಿಕಾಸ ಮತ್ತು ವಾಙ್ಮಯ ಲಕ್ಷಣಗಳೇನು? ಎಂಬ ಅಂಶಗಳನ್ನು ನಾವು ಗಮನಿಸಬೇಕು. *ಈ ಭೂಮಿ, ಚಂದ್ರ, ಸೂರ್ಯ ಮತ್ತು ಈ ಬ್ರಹ್ಮಾಂಡದಲ್ಲಿರುವ ಅನಂತಾನಂತ ನಕ್ಷತ್ರಗಳು ಹುಟ್ಟಿ ಸುಮಾರು 500 ಕೋಟಿ ವರ್ಷಗಳಾಗಿಯೆಂದು ಅಮೆರಿಕಾ ದೇಶದ ಭೌತ ಶಾಸ್ತ್ರ ಪ್ರವೀಣ ಡಾ|| ಜಾರ್ಜ್‌ಗವೌ ಅವರು ತಮ್ಮ ಸಂಶೋಧನೆಯ ಆಧಾರದಿಂದ ನಿರೂಪಿಸಿರುತ್ತಾರೆ ಈ ಭೂಮಿಯ ಮೇಲೆ ಮಾನವನ ಉದಯವಾಗಿ ಅನೇಕ ಕೋಟಿ ವರ್ಷಗಳಾಗಿವೆ ಯೆಂದು ಜೀವ ವಿಜ್ಞಾನ ಶಾಸ್ತ್ರಜ್ಞರು ಹೇಳುತ್ತಾರೆ. ಅನೇಕಾನೇಕ ವರ್ಷಗಳ ಲಕ್ಷ ನಂತರ ಮಾನವನ ವಾಣಿ ಶಕ್ತಿ ಬೆಳೆದು ಸಂಸ್ಕೃತಿ ರೂಪುಗೊಂಡಿತೆಂದು ಹೇಳುತ್ತಾರೆ. ಹಾಗಾದರೆ, ಆ ಮೂಲ ಮಾನವ ಜನಾಂಗ ಯಾವುದು? ಅದರ ವಾಙ್ಮಯ ಸ್ವರೂಪವೇನು? ಎಂಬ ಜಿಜ್ಞಾಸೆ ಬರುತ್ತದೆ. ಈಗ ಲಭ್ಯವಾಗಿರುವ ವಾಙ್ಮಯದ ಆಧಾರದಿಂದ, ಆ ಮೂಲ ಜನಾಂಗವನ್ನು ರುದ್ರಗುಣ ಜನಾಂಗವೆಂದು ಹೇಳ ಬಹುದು. ಇದೇ ಪ್ರಾಚೀನ ರುದ್ರ ವಾಙ್ಮಯ! ಈ ಸೃಷ್ಟಿ ತತ್ತ್ವವನ್ನು ಪರಿಭಾವಿಸಿ ಇಲ್ಲಿನವರೆಗೆ ಬೆಳೆದು ಬಂದಿರುವ ಪ್ರಾಚೀನ ವಾಙ್ಮಯ ಪರಂಪರೆಯನ್ನು ರೂಪಿಸ ಬೇಕು. ಈ ಸೃಷ್ಟಿಗೆ ಮೊದಲು ನಿರ್ಗುಣ, ನಿರಾಕಾರ, ಅನಿರ್ವಚನೀಯ ವಸ್ತು ಒಂದಿತ್ತೆಂದು ವೀರಶೈವರು ನಂಬುತ್ತಾರೆ ಇದು ಅನಾದಿಯ ಆದಿ.

ಆದಿ ಅನಾದಿಗಳಿಲ್ಲದಂದು, ನಾದ ಬಿಂದು ಕಳೆ ಮೊಳೆದೋರದಂದು ದೇಹ ದೇಹಿಗಳ ಉತ್ಪತ್ತಿಯಾಗದಂದು, ಜೀವಾತ್ಮ ಪರಮಾತ್ಮರೆಂಬುವರಿಲ್ಲದಂದು ಸಕಲ ಚರಾಚರಂಗಳ ಕುರುಹು ಇಲ್ಲದಂದು. ಇವೇನೂ ಇಲ್ಲದಂದು ನೀನು ಶೂನ್ಯನಾಗಿ ಇದ್ದೆಯಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ–

---

*ಜನವಾಣಿ ದಿನಪತ್ರಿಕೆ, ಬೆಂಗಳೂರು ತಾ. 19–12–1959 ಮತ್ತು ತಾಯಿ ನಾಡು ದಿನಪತ್ರಿಕೆ ಬೆಂಗಳೂರು ತಾ. 2–1–1960 ಇವುಗಳನ್ನು ನೋಡಿ.

ವಿರೂಪಾಕ್ಷಪಂಡಿತ ಕೃತ ಚೆನ್ನಬಸವ ಪುರಾಣವನ್ನು ನೋಡಿ.

—ಎಂದು ವಚನ ಯುಗದ ಶಿವಾನುಭವಿಗಳು ಹೇಳಿದ್ದಾರೆ. ಈ ವಚನವು ಶೂನ್ಯತ್ವದ ಸ್ವರೂಪವನ್ನು ತಿಳಿಸುತ್ತದೆ. ಈ ಶೂನ್ಯವನ್ನು ಚಿತ್ ಎಂದು ಕರೆಯುತ್ತಾರೆ. ದು ನಿಷ್ಕಲವಸ್ತು. "ಅತ್ಯತಿಷ್ಠದ್ದಶಾಂಗುಲ"ನೆಂಬ ಪರಶಿವನೇ ಚಿತ್‌ಸ್ವರೂಪನಾಗಿರುತ್ತಾನೆ. ಲೀಲಾವಿನೋದದಿಂದ ಚಿಚ್ಛಕ್ತಿಯೊಂದಿಗೆ ಸೇರಿ, ಮಹಾಲಿಂಗನಾದನು. ಈ ಮಹಾಲಿಂಗ ಪರಶಕ್ತಿಯೊಂದಿಗೆ ಸೇರಿ ಸದಾಶಿವನಾದನು. ಈ ಸದಾಶಿವನ ಆದಿಶಕ್ತಿಯೊಂದಿಗೆ ಸೇರಿ, ಈಶ್ವರನಾದನು. ಈಶ್ವರನು ಸುಜ್ಞಾನಶಕ್ತಿಯೊಂದಿಗೆ ಸೇರಿ ಮಹೇಶ್ವರನಾದನು. ಈ ಮಹೇಶ್ವರನು ಸುಜ್ಞಾನಶಕ್ತಿಯೊಂದಿಗೆ ಸೇರಿ, ಸೃಷ್ಟಿಯಾಯಿತು. ಈ ಮಹೇಶ್ವರನು ವಿರಾಡ್ರೂಪವನ್ನು ತಾಳಿದನು. ಆಗ, ಅವನ ಅಂಗಾಂಗಗಳಿಂದ ಪಂಚಭೂತಗಳೂ, ಹದಿನಾಲ್ಕು ಲೋಕಗಳೂ ಹುಟ್ಟಿದುವು ಅಷ್ಟದಿಕ್ಪಾಲಕರೂ 33 ಕೋಟಿ ದೇವತೆಗಳೂ 66 ಕೋಟಿ ರಾಕ್ಷಸರೂ ಉದಯಿಸಿದರು. ಅವನ ಮುಖದಲ್ಲಿ ರುದ್ರನೂ, ಎಡಭುಜದಲ್ಲಿ ವಿಷ್ಣುವೂ, ಬಲಭುಜದಲ್ಲಿ ಬ್ರಹ್ಮನೂ ಹುಟ್ಟಿದರು. ಸಚರಾಚರ ಜಗತ್ತು ಆವಿರ್ಭವಿಸಿತು. ಕಲ್ಪಾಂತ್ಯದಲ್ಲಿ ಮಹೇಶ್ವರನು ತಾಂಡವನೃತ್ಯವಾಡಿದನು. ಆ ಸೃಷ್ಟಿಯೆಲ್ಲಾ ಮಹೇಶ್ವರನಲ್ಲಿಯೇ ಲೀನವಾಯಿತು. ಪುನಃ ಮಹೇಶ್ವರನ ಇಚ್ಛೆಯಿಂದ ಈ ಪ್ರಕೃತಿ ಹುಟ್ಟಿತು. ಆಗ ಹಿರಣ್ಮಯ ತೇಜಃ ಪುಂಜ ತತ್ತಿ (ಅಂಡ) ಒಂದು ಕಂಡಿತು. ಅದು ಒಡೆದು ಬ್ರಹ್ಮಾಂಡ ನಿರ್ಮಾಣವಾಯಿತು. ಮಹೇಶ್ವರನಲ್ಲಿ ಲೀನವಾಗಿದ್ದ ಜಗತ್ತು ಮತ್ತೆ ಮೂಡಿತು. ಜಗತ್ತು ತಾನಾಗಿಯೇ ಹುಟ್ಟಿತೆಂದು ಕೆಲವು ಮತಧರ್ಮದವರು ಹೇಳುತ್ತಾರೆ. ಬೀಜದಿಂದ ಮೊಳಕೆ ಬರುವಂತೆ ಮಹೇಶ್ವರನಲ್ಲಿ ಅಡಗಿದ್ದ ಸೃಷ್ಟಿಯ ಆವಿಷ್ಕಾರವಾಯಿತು; ಅಷ್ಟೆ. ಮಹೇಶ್ವರನು ಸೃಷ್ಟಿಕಾರ್ಯವನ್ನು ರುದ್ರನಿಗೆ ವಹಿಸಿದನು. ವಿಷ್ಣು ಬ್ರಹ್ಮನಿಗೆ ರುದ್ರನೆ ಒಡೆಯನಾದನು. ರುದ್ರಸೃಷ್ಟಿಯೇ ರುದ್ರಗಣ. ಇದೇ ಅಪ್ರಾಕೃತ ಸೃಷ್ಟಿ! ಈ ರುದ್ರಗಣ ಅಸಂಖ್ಯಾತ. ಇವರು ಮಹೇಶ್ವರನನ್ನು ಲಿಂಗರೂಪದಲ್ಲಿ ಪೂಜಿಸುತ್ತಿದ್ದರು. ಹದಿನಾಲ್ಕು ಲೋಕಗಳಲ್ಲಿಯೂ ಶಿವಲಿಂಗಪೂಜೆ ನಡೆಯುತ್ತಿತ್ತು

ವಿಷ್ಣು ಬ್ರಹ್ಮಾದಯೋದೇವಾ ಮುನಯೋ ಗೌತಮಾದಯಃ
ಧಾರಯಂತಿ ಸದಾ ಲಿಂಗಮುತ್ತಮಾಂಗೇ ವಿಶೇಷತಃ ॥

ಎಂದು ಲಿಂಗಪುರಾಣದಲ್ಲಿ ಹೇಳಿದೆ. ಇದು ಅಂದಿನ ರುದ್ರವಾಙ್ಮಯ ಚಿತ್ರವನ್ನು ರೂಪಿಸುತ್ತದೆ. ವಿಷ್ಣು, ಬ್ರಹ್ಮ, ಸಕಲ ದೇವಗಣ ಮುನಿಗಣಗಳೆಲ್ಲಾ ಲಿಂಗಧಾರಿಗಳಾಗಿದ್ದರೆಂದು ತಿಳಿದು ಬರುತ್ತದೆ. ಇಂದ್ರ ರತ್ನ ಲಿಂಗವನ್ನೂ, ಚಂದ್ರ ಮಾಣಿಕ್ಯ ಲಿಂಗವನ್ನೂ ಸೂರ್ಯ ತಾಮ್ರ ಲಿಂಗವನ್ನೂ, ಇತರ ದೇವತೆಗಳು ಬೇರೆ ಬೇರೆ ಲಿಂಗ ಲಿಂಗಗಳನ್ನೂ ಪೂಜಿಸುತ್ತಿದ್ದರೆಂದು ಸ್ಕಾಂದ ಪುರಾಣದಲ್ಲಿ ಹೇಳಿದೆ. ಎಂದ ಮೇಲೆ. ಶಿವ ಲಿಂಗಧಾರಣ, ಶಿವಲಿಂಗಪೂಜೆ, ಅನುಷ್ಠಾನ ವಿಧಾನ ಮತ್ತು ಸ್ಥಾವರ ಲಿಂಗ ಪ್ರತಿಷ್ಠಾಪನೆ ಮೊದಲಾದ ವಿಚಾರಗಳನ್ನು ತಿಳಿಸತಕ್ಕ ವಾಙ್ಮಯ ಆಗ ಇರಬೇಕು.

ಆ ರುದ್ರಗಣಮತ, ರುದ್ರಧ್ಯಾನ, ರುದ್ರಯೋಗ ಮತ್ತು ರುದ್ರಶಕ್ತಿ ತತ್ತ್ವಗಳನ್ನು ಕುರಿತ ಶಾಸ್ತ್ರವಾಙ್ಮಯವೂ ಬೆಳೆದಿರಬೇಕು. ಸರ್ವಶಕ್ತನಾದ ರುದ್ರನ ಮುಖ ದಿಂದಲೇ ಆ ವಾಙ್ಮಯ ಮೂಡಿರಬೇಕು. ಆ ವಾಙ್ಮಯವೇ ಮುಂದೆ ಶಿವಾಗಮಗಳಲ್ಲಿ ಮೊಳಗಿರಬೇಕು.

ಮೂರ್ಧ್ನಿ ಕಂಠೇಭುಜೇ ಹಸ್ತೇಹೃತ್ಸ್ಥಲೇ ನಾಭಿಮಂಡಲೇ ।
ಏತೇಷಾಮೇಕ ದೇಶೇತು ಧಾರಯೇತ್ ಶಿವಲಿಂಗಕಂ ॥

ಎಂದು ವಾತುಲಾಗಮದಲ್ಲಿ ಹೇಳಿದೆ. ಶಿವಲಿಂಗವನ್ನು ತಲೆ, ಕಂಠ, ಭುಜ ಹಸ್ತ, ಹೃದಯ ಮತ್ತು ನಾಭಿಸ್ಥಲಗಳಲ್ಲಿ ಧರಿಸಬೇಕೆಂದು ನಿಯಮವಿತ್ತು. ಸ್ಕಾಂದ ಪುರಾಣ, ಶಿವಪುರಾಣ, ಪದ್ಮಪುರಾಣ ಮತ್ತು ಲಿಂಗಪುರಾಣಗಳಲ್ಲಿ ವೀರಶೈವ ಮಾರ್ಗ ವನ್ನು ಕುರಿತು ಹೇಳಿರುವ ವಿಚಾರಗಳಿವೆ. ವೀರಾಗಮದಲ್ಲಿ "ಗುರೋಶ್ಚ ಜಂಗಮ ಸ್ಚೈವ ಶಿವಲಿಂಗಸ್ಯಪೂಜನಂ" ಎಂದರೆ, ಗುರುವಾಗಲಿ, ಜಂಗಮನಾಗಲಿ ಶಿವಲಿಂಗ ಪೂಜೆ ಮಾಡಬೇಕು ಎಂದು ಹೇಳಿದೆ. ಪಾರಮೇಶ್ವರಾಗಮದಲ್ಲಿ

"ಯಸ್ಯಭಸ್ಮಲಲಾಟೇಽಸ್ತಿ ಕಂಠೇ ಲಿಂಗಮುದಾತ್ಮಕಂ ।
ರುದ್ರಾಕ್ಷಧಾರಣಂ ದೇಹೇ ಸೋಽಹಂ,ದೇವಿ ನ ಸಂಶಯಃ ॥

ಎಂದು ಹೇಳಿದೆ. ಹಣೆಯಲ್ಲಿ ವಿಭೂತಿ, ಕಂಠದಲ್ಲಿ ಶಿವಲಿಂಗ, ದೇಹದಲ್ಲಿ ರುದ್ರಾಕ್ಷಿ ಇವು ಇರುವ ಜೀವಿ ಶಿವನಿಗೆ ಸಮಾನ. ಇವೆಲ್ಲಾ ಶಿವಾಗಮಗಳ ಕಾಲ ಕ್ಕಿಂತ ಹಿಂದೆ ಇದ್ದ ಶಿವಮಾರ್ಗವನ್ನು ತಿಳಿಸುತ್ತವೆ. ಶಿವಾಗಮಗಳನ್ನು ನಿರೂಪಿ ಸಿದವನು ಶಿವನೇ ಆಗಿದ್ದಾನೆ. ಶಿವನಿಗಿಂತ ಹಿಂದೆ ಇದ್ದುದು ರುದ್ರಕಲ್ಪ. ಆ ರುದ್ರ ಕಲ್ಪದ ವಾಙ್ಮಯವೇ ಶಿವಾಗಮಗಳಿಗೆ ಮೂಲ. ಆದ್ದರಿಂದ ರುದ್ರವಾಙ್ಮಯ ಗುರು ಶಿಷ್ಯ ಪರಂಪರೆಯಲ್ಲಿ ಅಪಾರವಾಗಿ ಬೆಳೆದು ಬಂದಿತ್ತೆಂದು ನಿರ್ಧರವಾಗಿ ಹೇಳಬಹುದು. ಮುಂದೆ ರುದ್ರವಾಙ್ಮಯ ಪುರಾಣಗಳಲ್ಲಿಯೂ ಬೆಳೆಯಿತು. ಆರ್ಯರ ವೇದವಾಙ್ಮಯ ದಲ್ಲಿಯೂ ಬೆಳಗಿತು. ಆರ್ಯರಿಗಿಂತ ಹಿಂದೆ ಸಿಂಧೂನದಿಯ ತೀರದಲ್ಲಿ ಫಣಿಗಣ ವೆಂಬ ದ್ರಾವಿಡ ಪಂಗಡದವರಿದ್ದರೆಂದು ಋಗ್ವೇದದಿಂದ ತಿಳಿದು ಬರುತ್ತದೆ. ಇವರಲ್ಲದೆ ರುದ್ರಪುತ್ರರೆಂದು ಹೇಳಿರುವ ಮರುದ್ಗಣ ಮತ್ತು ವೃಷಭಗಣಗಳ ವಿಚಾರವೂ ಋಗ್ವೇದ ದಲ್ಲಿ ಉಕ್ತವಾಗಿದೆ. ಈ ಫಣಿಗಣ, ವೃಷಭಗಣ ಮತ್ತು ಮರುದ್ಗಣ-- ಇವರು ಭರತಖಂಡದ ಆದಿ ನಿವಾಸಿಗಳೆಂದೂ ಇವರಿಗೆ ಕಾಲಾಂತರದಲ್ಲಿ ಪ್ರಮಥರು ಎಂಬ ಹೆಸರು ಬಂದಿತೆಂದೂ ಪುರಾತತ್ತ್ವ ಪರಿಶೋಧನೆಗಳಿಂದ ಗೊತ್ತಾಗುತ್ತದೆ. *ಇವರು ಆರ್ಯರ ಶತ್ರುಗಳಾಗಿದ್ದರು. ಭರತಖಂಡದಲ್ಲಿ ಮಾನವ ಜನಾಂಗ ಸೃಷ್ಟಿಯಾಗಿ

---

*ವೀರಶೈವ ಚರಿತ್ರೆ ಸಂಗ್ರಹ—ಶ್ರೀ ಜಿ. ಟಿ. ಅಕ್ಕುಲಯ್ಯ ದೀಕ್ಷಿತರು.

*short history of the world by H. S. Wales.

ಸುಮಾರು ಇನ್ನೂರು ಕೋಟಿ ವರ್ಷಗಳಾಯಿತೆಂದು ನಿರ್ಧರಿಸಿದ್ದಾರೆ.* ಈ ರುದ್ರ ಪುತ್ರರು "ವಿಷಾಣಿನಃ" ಎಂದರೆ ಮೃಗಗಳ ಕೊಂಬುಗಳೇ ಆಯುಧವಾಗಿ ಉಳ್ಳವರು ಎಂದೂ "ಶಿವಾಸಃ" ಎಂದರೆ ಶಿವನನ್ನು ದೇಹದ ಮೇಲೆ ಧರಿಸಿದವರು ಎಂದೂ ಋಗ್ವೇದದಲ್ಲಿ ಹೇಳಿದೆ. ಇವರು ಲಿಂಗಧಾರಿಗಳಾಗಿದ್ದರೆಂದು ಸ್ಪಷ್ಟವಾಗಿರುತ್ತದೆ. ಇವರು ಬಹಳ ಸಾಹಸಪರರು ಮತ್ತು ವೀರರೂ ಆಗಿದ್ದರು. (ವೀ. ಚ. ಸಂಗ್ರಹ ಅಕ್ಕಲಯ್ಯ ದೀಕ್ಷಿತರು) ಆ ಪ್ರಾಚೀನ ಕಾಲದಲ್ಲಿ ಚಿತ್ರಲಿಪಿಯಿತ್ತೆಂದೂ ಅದರಿಂದ ದೇವನಾಗರಿ ವರ್ಣಮಾಲೆ ಹುಟ್ಟಿತೆಂದೂ ಡಾ॥ಶ್ಯಾಮಶಾಸ್ತ್ರಿಗಳು ಪ್ರತಿಪಾದಿಸಿದ್ದಾರೆ. ಪ್ರಾಚೀನ ರುದ್ರಕಲ್ಪದ ಪರಿಮಿತಿಯೆಷ್ಟಿರಬಹುದೆಂಬುದನ್ನು ತಿಳಿದರೆ, ಆ ರುದ್ರ ವಾಙ್ಮಯದ ವ್ಯಾಪ್ತಿಯನ್ನು ಅರಿಯಬಹುದು. ಅವರು ಕಾಲಗಣನೆಯನ್ನು ಹೇಗೆ ಮಾಡುತ್ತಿದ್ದರೆಂಬುದನ್ನು ನಿರ್ಧರಿಸಲು ಸಾಕಾದಷ್ಟು ಸಾಧನಗಳಿಲ್ಲ. ಆರ್ಯರು ಕಾಲವನ್ನು ಯುಗ, ಮನ್ವಂತರ, ಕಲ್ಪ—ಎಂದು ವಿಭಾಗಿಸಿರುತ್ತಾರೆ. ಅವರು ಈ ವಿಧಾನವನ್ನು ಅವರಿಗಿಂತ ಹಿಂದೆ ಇದ್ದ ದ್ರಾವಿಡರಿಂದ ಕಲಿತಿರಬಹುದೆ ? ಆ ದ್ರಾವಿಡರು ಇದನ್ನು ತಮಗಿಂತ ಮೂಲ ಜನಾಂಗವಾಗಿದ್ದ ಪ್ರಮಥ ಜನಾಂಗದಿಂದ ಅರಿತಿರಬಹುದೆ ? ಆ ಪ್ರಮಥಗಣದಲ್ಲಿ ಋಷಭಗಣ ಶಾಖೆಯೊಂದಿತ್ತು. ಋಷಭ ತೀರ್ಥಂಕರ ಆ ಋಷಭಗಣದ ಅಧಿಪತಿ. ಜೈನ ಧರ್ಮದ ಆದಿ ತೀರ್ಥಂಕರ. ಅವರು ಹೇಗೆ ಕಾಲ ಗಣನೆಯನ್ನು ಮಾಡುತ್ತಿದ್ದರೆಂಬ ವಿಚಾರವನ್ನು ಅರಿಯಲು ಜೈನವಾಙ್ಮಯ ನೆರವಾಗುತ್ತದೆ.

ಜೈನ ಧರ್ಮದಂತೆ ಕಾಲ ಅನಾಧಿ ನಿಧನವಾದುದು.

[ಜಿನ ಸೇನಾಚಾರ್ಯಕೃತ–ಮಹಾ ಪುರಾಣವನ್ನು ಅವಲೋಕಿಸಿರಿ. ಇದು ಸಂಸ್ಕೃತದಲ್ಲಿದೆ. ೯ನೆಯ ಶತಮಾನ. ದಿವಂಗತ ಶಾಂತಿರಾಜ ಶಾಸ್ತ್ರಿಗಳ ವ್ಯಾಖ್ಯಾನ] ಕಾಲವನ್ನು ಜೈನರು ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಎಂದು ಎರಡು ಭಾಗ ಮಾಡಿರುತ್ತಾರೆ ಉತ್ಸರ್ಪಿಣೀಕಾಲದ ಅವಧಿ ಹತ್ತು ಕೋಟಿಕೋಟಿ ಸಾಗರ ವರ್ಷ ಪರಿಮಿತಿಯುಳ್ಳದಾಗಿದೆ*. ಅವಸರ್ಪಿಣೀಕಾಲದ ಅವಧಿಯೂ ಇಷ್ಟೇ ಪರಿಮಿತ ವಾಗಿದೆ. ಈ ಎರಡೂ ಕಾಲಗಳ ಅವಧಿ ಇಪ್ಪತ್ತು ಕೋಟಿ ಕೋಟಿ * ಸಾಗರ ವರ್ಷ ಗಳ ಪರಿಮಿತಿಯುಳ್ಳದಾಗಿದೆ. ಉತ್ಸರ್ಪಿಣೀ ಕಾಲದಲ್ಲಿ ಆರು ವಿಭಾಗಗಳಿವೆ. ಆ ಆರು ವಿಭಾಗಗಳೆಂದರೆ:— ೧. ದುಃಷಮ ದುಃಷಮಾ ೨. ದುಃಷಮಾ ೩. ದುಃಷಮ ಸುಷಮಾ ೪. ಸುಷಮ ದುಃಷಮಾ ೫. ಸುಷಮಾ ೬. ಸುಷಮ ಸುಷಮಾ. ಅವಸರ್ಪಿಣೀ ಕಾಲವನ್ನೂ ಹೀಗೆಯೇ ವಿಲೋಮ ಕ್ರಮದಲ್ಲಿ ಆರುಭಾಗ ಗಳಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ಉತ್ಸರ್ಪಿಣೀ ಮತ್ತು ಅವಸರ್ಪಿಣೀ

---

*ಸಾಗರ ಎಂಬುದು ಸಂಖ್ಯಾವಾಚಕ. ಅನೇಕ ಕೋಟಿ ವರ್ಷಗಳ ಕಾಲವನ್ನು ಜೈನರು "ಸಾಗರ" ಎಂದು ಕರೆದಿರುತ್ತಾರೆ.

ಕಾಲದ ದುಃಷಮ ಸುಷಮಾ ವಿಭಾಗದಲ್ಲಿ ಮೊದಲನೆಯ ತೀರ್ಥಂಕರನ ಅವತಾರ ವಾಗುತ್ತದೆ. ಋಷಭ ದೇವನೇ ಆದಿ ತೀರ್ಥಂಕರ. ಆದುವರೆಗೆ ಅವನು ಒಂಭತ್ತು ಜನ್ಮಗಳಲ್ಲಿ ಹುಟ್ಟಿ ಜೈನ ಧರ್ಮವನ್ನು ಬೆಳೆಸಿದ್ದನು. ಅವನಿಗಿಂತಲೂ ಹಿಂದೆ ಜೈನ ಧರ್ಮವಿತ್ತು. ಹದಿನಾಲ್ಕು ಜನಮನುಗಳು ಅಥವಾ ಕುಲಂಕರರು ಜೈನಧರ್ಮವನ್ನು ಪರಿಪೋಷಿಸಿದ್ದರು. ಒಬ್ಬ ಮನುವಿನ ಕಾಲದಿಂದ ಇನ್ನೊಬ್ಬ ಮನುವಿನ ಕಾಲದ ಅಂತರವನ್ನು ಮನ್ವಂತರ ಎಂದು ಕರೆಯುತ್ತಾರೆ. ಒಂದೊಂದು ಮನ್ವಂತರದ ಅವ ಧಿಯೂ ಅನೇಕ ಕೋಟಿ ವರ್ಷಗಳಾಗುತ್ತದೆ ಆಧಿ ತೀರ್ಥಂಕರ ಋಷಭ ದೇವ ನಿಂದ ಹಿಡಿದು ಕೊನೆಯ ಇಪ್ಪತ್ತು ನಾಲ್ಕನೆಯ ತೀರ್ಥಂಕರ ಮಹಾವೀರನವರೆಗೆ ಕೋಟ್ಯನುಕೋಟಿ ಸಾಗರ ವರ್ಷಕಾಲ ಕಳೆಯಿತೆಂದು ಜೈನ ವಾಙ್ಮಯ ತಿಳಿಸುತ್ತದೆ. ಋಷಭ ತೀರ್ಥಂಕರನ ಕಾಲವನ್ನು ಕೃತಯುಗವೆಂದು ಜಿನಸೇನಾಚಾರ್ಯರು ಪೂರ್ವ ಪುರಾಣದಲ್ಲಿ ಹೇಳಿದ್ದಾರೆ. ಶೈವರೂ ಜೈನರಂತೆಯೇ ಕಾಲಗಣನೆಯನ್ನು ಅನುಸರಿಸುತ್ತಿದ್ದರೆಂದು ಊಹಿಸಬಹುದು. ಮಹೇಶ್ವರನ ಇಪ್ಪತ್ತೈದು ಲೀಲೆಗಳಲ್ಲಿ ಪಾರ್ವತೀಪತಿಯೆನಿಸಿದ ಶಿವನ ಅವತಾರ ಹತ್ತನೆಯದು. ಋಷಭ ತೀರ್ಥಂಕರನ ಅವತಾರವೂ ಹತ್ತನೆಯದು. ಈ ಋಷಭ ತೀರ್ಥಂಕರನನ್ನು ಸ್ವಯಂಭು, ಸದ್ಯೋ ಜಾತ, ಅಘೋರ, ಈಶಾನ, ವಾಮದೇವ, ತತ್ಪುರುಷ, ದಿಗಂಬರ, ಶಿವ ಮಹಾದೇವ, ಎಂಬ ಹೆಸರುಗಳಿಂದ ಜಿನಸೇನಾಚಾರ್ಯರು ಮಹಾ ಪುರಾಣದಲ್ಲಿ ಪ್ರಶಂಸಿರುತ್ತಾರೆ. ಋಷಭ ತೀರ್ಥಂಕರ ಅನೇಕ ಕೋಟಿ ವರ್ಷಕಾಲ ಬದುಕಿದ್ದನು. ಅವನ ಕಾಲದಲ್ಲಿ ಅಸಂಖ್ಯಾತ ಗಣಧರರಿದ್ದರು. ಅವರನ್ನು ಋಷಭಗಣವೆಂದು ಕರೆದಿರುತ್ತಾರೆ. ಇದು ಗಣಧರ ಜನಾಂಗ. ಈ ಗಣಧರರು ಮಹಾ ವಿದ್ವಾಂಸರೂ ಬಹು ಶಾಸ್ತ್ರವೇತ್ತರೂ ತ್ರಿಕಾಲ ಜ್ಞಾನಿಗಳೂ ಆಚಾರ್ಯ ಪುರುಷರೂ ಆಗಿದ್ದರು. ಈ ಋಷಭ ಗಣವೃಂದ ದಲ್ಲಿ ಅಸಂಖ್ಯಾತ ಮುನಿಗಳೂ ಆರ್ಜಿಕೆಯರೆಂಬ ಸಂನ್ಯಾಸಿನಿಯರೂ ಇದ್ದರು. ಇದ ರಂತೆಯೇ ಶಿವಕಲ್ಪದಲ್ಲಿಯೂ ಅಸಂಖ್ಯಾತ ಪ್ರಥಮ ಗಣಗಳೂ ರುದ್ರ ಕನ್ಯೆಯರೂ ಇದ್ದರು. ಋಷಭಗಣದ ಋಷಭ ತೀರ್ಥಂಕರನೂ ಪ್ರಥಮಗಣದ ಶಿವನೂ ಒಬ್ಬನೇ ಆಗಿರಬೇಕೆಂದು ಒಪ್ಪಬಹುದು. ಆದ್ದರಿಂದ ಶಿವನೂ ಕೃತಯುಗದಲ್ಲಿ ಅವತಾರ ಮಾಡಿದನೆಂದು ಹೇಳಬಹುದು. ಆದ್ದರಿಂದ ಈ ಪ್ರಥಮಗಣ ಮತ್ತು ಋಷಭಗಣ ಗಳನ್ನು ದ್ರಾವಿಡರ ಮೂಲ ಜನಾಂಗವೆಂದು ಪಂಡಿತರು ತಿಳಿಸುತ್ತಾರೆ. ಜಗದಾದಿಯ ರುದ್ರಗಣವೇ ಕೃತಯುಗದಲ್ಲಿ ಪ್ರಥಮಗಣ ಮತ್ತು ಋಷಭಗಣಗಳಾದವು. ಶಿವನ ಆವಾಸಸ್ಥಾನ ಕೈಲಾಸ. ಋಷಭ ದೇವನ ನಿರ್ವಾಣ ಸ್ಥಾನವೂ ಕೈಲಾಸ ಮಾಘ ಬಹುಳ ಚತುರ್ದಶಿಯೇ ಶಿವರಾತ್ರಿ. ಅದು ಋಷಭದೇವನ ಜಯಂತಿಯ ದಿನ. ಆ ರಾತ್ರಿಯೇ ಜಿನರಾತ್ರಿಯೆಂದು ಜೈನಶಾಸ್ತ್ರ ತಿಳಿಸುತ್ತದೆ. ಋಷಭ ತೀರ್ಥಂಕರನು ಸಮಾಜ ವ್ಯವಸ್ಥೆಯನ್ನು ಮಾಡಿ ಜನರಿಗೆ ವ್ಯವಸಾಯ ವಾಣಿಜ್ಯ ಮೊದಲಾದ ವೃತ್ತಿ

ಗಳನ್ನು ಕಲ್ಪಿಸಿಕೊಟ್ಟನೆಂದೂ ಹೇಳಿದೆ. ಇವನು ನಾಟ್ಯ ಶಾಸ್ತ್ರಾಚಾರ್ಯನೆನಿಸಿದನು. ಇಂದ್ರಾದಿ ದೇವತೆಗಳು ತೀರ್ಥಂಕರನ ಉದಯ ಕಾಲದಲ್ಲಿ ಆನಂದ ನರ್ತನ ಮಾಡುತ್ತಿದ್ದರು. ಋಷಭ ದೇವನು ನೀಲಾಂಜನೆಯೆಂಬ ದೇವ ನರ್ತಕಿಯ ನಾಟ್ಯವನ್ನು ನೋಡಿಯೇ ವೈರಾಗ್ಯವನ್ನು ಅಂಗೀಕರಿಸಿದನೆಂದು ಹೇಳಿದೆ *ಶಿವನೂ ಕಲಾಪ್ರಿಯ. ಇವನೂ ಸಮಾಜ ವ್ಯವಸ್ಥಾಪಕನು. ಶಿವನ ಅವತಾರ ಕಾಲವಾದ ಕೃತ ಯುಗದಿಂದ ಹಿಡಿದು ಶಿವಾಗಮಗಳ ರಚನೆಯ ಕಾಲದವರೆಗೆ ಪ್ರಥಮ ಕಲ್ಪ ಅಥವಾ ಶಿವಕಲ್ಪ. ಈ ಕಲ್ಪದಲ್ಲಿ ಕೃತ ತ್ರೇತಾ, ದ್ವಾಪರ ಮತ್ತು ಕಲಿಯುಗದ ಪ್ರಾರಂಭ ಕಾಲವೂ ಸೇರಿವೆ. ಆರ್ಯ ಮತ್ತು ದ್ರಾವಿಡರ ಉದಯ ಕಾಲವೂ ಶಿವಕಲ್ಪದಲ್ಲಿ ಅಡಕವಾಗಿವೆ. ಈ ಪ್ರಮಥಗಣ ಸಂಜಾತರೇ ದ್ರಾವಿಡರು. ಋಷಭಗಣಧರವಂಶೀಯರೇ ಜೈನರು. ಶಿವನ ಪರ್ಯಾಯ ನಾಮಗಳೇ ಋಷಭ ತೀರ್ಥಂಕರನಿಗಿರುವುದನ್ನು ಗಮನಿಸಬಹುದು. ಪ್ರಮಥ ಧರ್ಮಾನುಯಾಯಿಗಳೇ ದ್ರಾವಿಡರೆಂದು ಗೊತ್ತಾಗುತ್ತದೆ.

ಈ ದ್ರಾವಿಡ ಜನಾಂಗ ಸುಮಾರು ಐದು ಸಾವಿರ ವರ್ಷಗಳ ಹಿಂದೆಯೇ ಸಿಂಧೂ ನದಿಯ ತೀರದಲ್ಲಿ ನಿಬಿಡವಾಗಿ ವ್ಯಾಪಿಸಿತ್ತೆಂದು ಹರಪ್ಪ ಮತ್ತು ಮೊಹೆಂಜದಾರೋ ಪ್ರದೇಶಗಳ ಪ್ರಾಕ್ತನ ವಸ್ತು ಸಂಶೋಧಕರು ತಿಳಿಸಿರುತ್ತಾರೆ. ಈ ಸಂಸ್ಕೃತಿ ಅಲ್ಲಿ ಸುಮಾರು ಒಂದು ಸಾವಿರ ವರ್ಷ ಕಾಲ ಬಾಳಿತು. ಇದೇ ಸೈಂಧವ ಸಂಸ್ಕೃತಿ. ಆ ಜನಾಂಗದ ಮತ ಧರ್ಮವನ್ನು ಅಲ್ಲಿ ದೊರೆತಿರುವ ಭಗ್ನಾವಶೇಷಗಳಿಂದ ಅರಿಯಬಹುದು. ಪಶುಪತಿಯೆನಿಸಿದ್ದ ಶಿವನೇ ಆ ದ್ರಾವಿಡ ಜನಾಂಗದ ಆರಾಧ್ಯದೈವವಾಗಿದ್ದನು. ಅವರು ಶಿವನನ್ನು ಲಿಂಗರೂಪದಿಂದ ಪೂಜಿಸುತ್ತಿದ್ದರು. ಅವರು ಶಕ್ತಿ ದೇವತೆಯನ್ನೂ ಪೂಜಿಸುತ್ತಿದ್ದರು. ಅವರಿಗೆ ಬರೆವಣಿಗೆಯೂ ತಿಳಿದಿತ್ತು. ಅದು ಚಿತ್ರಲಿಪಿ. ಅವರು ತುಂಬ ನಾಗರಿಕರಾಗಿದ್ದರು. ಧ್ಯಾನಾರೂಢರಾಗಿ ಕುಳಿತಿರುವಂತೆ ಕಾಣುವ ಪುರುಷ ವಿಗ್ರಹಗಳು ಹರಪ್ಪ ಮತ್ತು ಮೊಹೆಂಜಾದಾರೋ ಪ್ರದೇಶಗಳಲ್ಲಿ ಸಿಕ್ಕಿವೆ. ಈ ಮೂರ್ತಿಗಳ ಪೀಠದಲ್ಲಿ ವೃಷಭ ಚಿಹ್ನೆಗಳಿವೆ. ಇವು ಪಶುಪತಿಯ ವಿಗ್ರಹಗಳೆಂದು ಹೇಳುತ್ತಾರೆ. ಇವು ಋಷಭ ತೀರ್ಥಂಕರನ ಮೂರ್ತಿಗಳೆಂದು ತರ್ಕಿಸುತ್ತಾರೆ. ಆ ಜನಾಂಗ ಲಿಂಗಪೂಜಕರಾಗಿದ್ದಂತೆಯೇ ಲಿಂಗಧಾರಿಗಳೂ ಆಗಿದ್ದರೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. ದ್ರಾವಿಡ ಜನಾಂಗ ತನ್ನದೇ ಆದ ಆಧ್ಯಾತ್ಮಿಕ ತತ್ತ್ವ ವಿಚಾರಗಳನ್ನು ಅನುಸರಿಸುತ್ತಿತ್ತು. ವೇದಗಳಲ್ಲಿಯೂ ಶಿವಾಗಮ

---

* 'ವಿಭೂತಿ' ಗ್ರಂಥದಲ್ಲಿ ಪೂಜ್ಯ ಶ್ರೀ ಜಗದ್ಗುರು ನಿಡುಮಾಮಿಡಿ ಶ್ರೀ ಶೈಲ ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ. ಮಹಾಸನ್ನಿಧಿಯವರ 'ಅನಾದಿ-ಆದಿ-ಆಧುನಿಕ ವೀರಶೈವರು' ಎಂಬ ಲೇಖನವನ್ನು ಓದಿರಿ.

ಗಳಲ್ಲಿಯೂ ಈ ಸಂಸ್ಕೃತಿಯ ಪರಿಚಯವಾಗುತ್ತದೆ. ದ್ರಾವಿಡ ಜನಾಂಗದ ಮೂಲ ಜನಾಂಗ ಪ್ರಮಥ ಜನಾಂಗ. ಈ ಪ್ರಮಥ ಜನಾಂಗದ ಮೂಲಜನಾಂಗ ರುದ್ರ ಜನಾಂಗ. ಅದರಂತೆಯೇ ದ್ರಾವಿಡ ವಾಙ್ಮಯದ ಮೂಲ ಪ್ರಮಥವಾಙ್ಮಯ; ಪ್ರಮಥ ವಾಙ್ಮಯದ ಮೂಲ ರುದ್ರ ವಾಙ್ಮಯ–ಎಂದು ನಿರ್ಧರಿಸಬಹುದು.

* ಋಗ್ವೇದದಲ್ಲಿ ರುದ್ರನ ರೂಪಗುಣಗಳನ್ನು ಹೇಳಿದೆ. ರುದ್ರನಿಗೆ ಕೈ ಒಂದೇ; ಭುಜಗಳಿವೆ. ಅವನ ಅವಯಗಳು ದೃಢ; ಅವನ ತುಟಿಗಳು ಅಂದ, ಅವನ ಮೈ ಬಣ್ಣ ಹೊಂಬಣ್ಣ, ಅವನ ಹೊಟ್ಟೆ ಕಪ್ಪು, ಬೆನ್ನು ಕೆಂಪು, ಅವನು ಬಹುರೂಪಿ, ಅವನು ಉಗ್ರ, ನೀಲಕಂಠ, ನೀಲಕೇಶ, ಚರ್ಮಾಂಬರಧಾರಿ, ಮಹಾಪರಾಕ್ರಮಿ. "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಎಂದರೆ ರುದ್ರನೊಬ್ಬನೇ ದೈವ, ಅವನನ್ನು ವಿನಾ ಬೇರೆ ದೇವನಿಲ್ಲ–ಎಂದು ಯಜುರ್ವೇದದಲ್ಲಿ ಹೇಳಿದೆ. ಇದೇ ವೇದದಲ್ಲಿ ರುದ್ರ ನನ್ನು ಶಂಕರ, ಶಂಭು, ಈಶಾನ, ಈಶ, ಭವ, ಶರ್ವ, ಉಗ್ರ, ಪಶುಪತಿ, ನೀಲಕಂಠ ಮಹಾದೇವ, ಮಹೇಶ್ವರ, ಶತಿಕಂಠ, ಶಿಪಿವಿಷ್ಟ ಎಂದು ಹೇಳಿ, ಇವನನ್ನು ಶಿವರುದ್ರ ನೆಂದು ರೂಪಿಸಿದೆ. ಈಶಾವಾಸ್ಯೋಪನಿಷತ್, ಕೇನೋಪನಿಷತ್, ಮತ್ತು ಶ್ವೇತಾ ಶ್ವತರೋಪನಿಷತ್-ಇವುಗಳು ಪ್ರಾಚೀನ ರುದ್ರ ವಾಙ್ಮಯದ ವ್ಯಾಪ್ತಿಯನ್ನು ತಿಳಿಸು ತ್ತವೆ. ಅವನ ಲೋಕ ಸುಖದಾಯಕವಾಗಿತ್ತು, ಅವನು ದುಃಖ ರೂಪ ಸಂಸಾರವನ್ನು ಪರಿಹರಿಸಲು ಸಮರ್ಥ, ಅವನು ಕರುಣಾಕರ, ಅವನು ದೇವ ದೇವ. ದೇವಗಣದ ಜನ್ಮಕಾರಣ. ಅವನು ವಿಶ್ವನಾಥ, ಮಹರ್ಷಿ. ಅವನು ಹಿರಣ್ಯ ಗರ್ಭ ಬ್ರಹ್ಮನ ಉದ ಯವನ್ನು ಕಂಡವನು-ಎಂದು ಶ್ವೇತಾಶ್ವತರೋಪನಿಷತ್ತು ತಿಳಿಸುತ್ತದೆ. ಇವನು ಪ್ರಥಮ ವೀರಶೈವ. ಇವನು ಆದಿಲಿಂಗ, ಆದಿಗುರು, ಆದಿಜಂಗಮ. ಇಂಥ ರುದ್ರ ದೇವನನ್ನು ಆರಾಧಿಸುವ ಕ್ರಮ, ವಿಭೂತಿ, ರುದ್ರಾಕ್ಷಿ, ಮಂತ್ರ ಮೊದಲಾದ ಪ್ರಕ್ರಿ ಯೆಗಳನ್ನು ವಿವರಿಸುವ ವಾಙ್ಮಯ ಆರುದ್ರಕಲ್ಪದಲ್ಲಿ ಸೃಷ್ಟಿಯಾಗಿರಲೇಬೇಕು. ಕೇವಲ ಇಂದಿನ ವೀರಶೈವರೇ ಅಲ್ಲದೆ, ಇತರ ವೈದಿಕ ಮತೀಯರೂ ದೇವತಾರ್ಚನಾ ಕಾಲಾದಲ್ಲಿ ಶ್ರೀ ರುದ್ರ ಮತ್ತು ಪುರುಷ ಸೂಕ್ತಗಳನ್ನು ಪಠಿಸುತ್ತಾರೆ. ಇವು ರುದ್ರ ದೇವನ ಪ್ರಭಾವವನ್ನು ಘೋಷಿಸುತ್ತವೆ. ರುದ್ರ ಕಲ್ಪದಲ್ಲಿ ಏಕಾದಶ ರುದ್ರರೂ ಅನಂತ ವಿಷ್ಣುಗಳೂ, ಅನಂತ ಬ್ರಹ್ಮರೂ ಅನೇಕ ಇಂದ್ರರೂ, ದೇವತೆಗಳೂ ರುದ್ರ ಗಣಗಳೂ ಇದ್ದರು. ಇವರೆಲ್ಲಾ ಮಹೇಶ್ವರಾಂಶ ಸಂಭವರು. ಮಹೇಶ್ವರನ ಪಂಚ ವಿಂಶತಿ ಲೀಲೆಗಳಲ್ಲಿ ಒಂಭತ್ತು ಲೀಲೆಗಳು ರುದ್ರಕಲ್ಪದಲ್ಲಿ ನಡೆದುವು. ಹತ್ತನೆಯ ಲೀಲೆಯೇ ಶಿವನ ಅವತಾರ. ಈ ಶಿವಕಲ್ಪದಲ್ಲಿ ಮಹೇಶ್ವರನ ಪಂಚದಶ ಲೀಲೆಗಳೂ, ವಿಷ್ಣುವಿನ ದಶಾವತಾರಗಳೂ, ರಾಮಾಯಣ ಮತ್ತು ಮಹಾ ಭಾರತ ಪ್ರಸಂಗಗಳೂ ನಡೆದುವು. ತ್ರೇತಾಯುಗದಲ್ಲಿ ರಾಮಾಯಣ ಕಾಲದಲ್ಲಿ ಶಿವನು ಶ್ರೀ ರಾಮನಿಗೆ

* ಶ್ರೀ || ಶಂ. ಬಾ. ಜೋಷಿ ಅವರ "ಶಿವರಹಸ್ಯ" ಗ್ರಂಥವನ್ನು ಅವಲೋಕಿಸಿರಿ.

ಪ್ರತ್ಯಕ್ಷನಾಗಿ ಶಿವಗೀತೆಯನ್ನು ಬೋಧಿಸಿದನು. ಶ್ರೀರಾಮನು ರಾಮೇಶ್ವರದಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಿದನು. ರಾವಣನು ಪರಮ ಶಿವಭಕ್ತನಾಗಿದ್ದನು. ದ್ವಾಪರ ಯುಗದಲ್ಲಿ ಲಿಂಗಿಬ್ರಾಹ್ಮಣರು ಎಂದರೆ ವೀರಶೈವ ಜಂಗಮರಿದ್ದರೆಂದು ಮಹಾ ಭಾರತದಿಂದ ವ್ಯಕ್ತವಾಗುತ್ತದೆ. ಶಿವನ ಪಂಚ ಮುಖಗಳಿಂದ ಉದ್ಭವರಾದ ಪಂಚಾ ಚಾರ್ಯರು ಶಿವ ಧರ್ಮವನ್ನು ಪ್ರಚಾರಮಾಡಿದರು. ವೀರ (ರುದ್ರ) ನಂದಿ, ಭೃಂಗಿ, ವೃಷಭ, ಸ್ಕಂದ-ಈ ಐವರೂ ಪಂಚಗಣಾಧೀಶ್ವರರು. ಇವರೇ ವೀರಶೈವದ ಗೋತ್ರ ಪುರುಷರು. ಈ ಪರಂಪರೆಯನ್ನು ಅನುಸರಿಸಿಕೊಂಡು ಬಂದಿರುವ ವೀರಶೈವ ಪಂಗಡಗಳವರಿದ್ದಾರೆ * ಬಡಗಲವರು, ಬಳ್ಳಾರಿಯವರು, ಸ್ಥಳದವರು, ಆರಾ ಧ್ಯರು, ಶೀಲವಂತರು, ಅಥಣಿಯವರು, ಪಂಚಾಮಸಾಲೆಯವರು, ಧೂಳು ಪಾವಡ ದವರು, ಪಂಚಾಚಾರದವರು, ವಸ್ತ್ರದವರು ಇನ್ನೂ ಕೆಲವು ಪಂಗಡದವರು ಆರ್ಷೇಯ ವೀರಶೈವರಾಗಿದ್ದಾರೆ ಇವರಿಗೆ ಗುರುಸ್ಥಲದವರೆಂಬ ಹೆಸರಿದೆ. ಇವರೇ ಮೂಲ ಪಂಚಾಚಾರ್ಯ ವಂಶೀಯರಾಗಿರುವ ಪಂಚಮರು. ಈ ಪಂಚಮ ವಂಶೀಯರೆ "ಕಥಾ ಸರ್ವೇಷುವರ್ಣೇಷು ಶ್ರೇಷ್ಠಾಃ ಪಂಚಮವಂಶಜಾಃ"ಎಂದು ಸ್ವಾಯಂಭುವಾಗಮದಲ್ಲಿ ಉಕ್ತವಾಗಿದೆ. ಈ ಪ್ರಾಚೀನ ವೀರಶೈವ ಸಂಪ್ರದಾಯದಲ್ಲಿ ಹಿಮವತ್ಕೇದಾರ, ಕಾಶಿ, ಶ್ರೀಶೈಲ, ಉಜ್ಜಯಿನಿ ಮತ್ತು ಬಾಳೇಹಳ್ಳಿ (ರಂಭಾಪುರಿ) ಈ ಸ್ಥಳಗಳಲ್ಲಿ ಗುರುಪೀಠಗಳಿವೆ. ಆರ್ಷೇಯ ವೀರಶೈವದಲ್ಲಿ ವಿರಕ್ತರು ಮತ್ತು ಜಂಗಮರು ಎಂಬ ವಿಶೇಷ ಪಂಗಡಗಳೂ ಇವೆ. ಈ ವೀರಶೈವ ಧರ್ಮ ಮತ್ತು ವಾಙ್ಮಯ ಪರಂಪರೆಯನ್ನು ಇತಿಹಾಸಜ್ಞರಾದ ವಿದ್ವಾಂಸರೂ ಸಂಶೋಧಿಸ ಬೇಕಾಗಿದೆ.

ಶಿವಂಭೂಯಾತ್

---

* ಕೈ|| ಶಿರಸಿ ಗುರುಶಾಂತ ಶಾಸ್ತ್ರಿಗಳಿಂದ ಸಂಗ್ರಹಿಸಲ್ಪಟ್ಟಿರುವ "ಉಪನ್ಯಾಸ ಸಂಗ್ರಹ" ಎಂಬ ಗ್ರಂಥವನ್ನು ನೋಡಿ.

# ವೀರಶೈವರ ದೇವಾರಾಧನೆಯಲ್ಲಿ ವಿಜ್ಞಾನ

—ಸೂರ್ಯ ಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.

ದೃಶ್ಯವಿಶ್ವದಲ್ಲಿ ದೇವರನ್ನು ಆರಾಧಿಸದೆ ಇರುವವರು ತೀರ ವಿರಳ; ಆರಾಧಿಸುವವರು ಬಹಳ. ಆರಾಧಿಸದಿರುವವರು ನಾಸ್ತಿಕರು. ಆರಾಧಿಸುವವರು ಆಸ್ತಿಕರು. ಆಸ್ತಿಕರಲ್ಲಿ ಆರ್ಯರು ಆರ್ಯರೇತರಾದ ದ್ರಾವಿಡರು ಎಂದು ಎರಡು ಬಗೆ. ಈ ಎರಡು ಬಗೆಯ ಜನರೂ ಇರುವರು ಭಾರತಭೂಮಿಯಲ್ಲಿ. ಅಲ್ಲದೆ ಅದೇ ಆಸ್ತಿಕರಲ್ಲಿ ವೈದಿಕ ಮತೀಯರು ವೈದಿಕ ತಾಂತ್ರಿಕ ಮತೀಯರು ಎಂದು ಎರಡು ಬಗೆಯಾಗಿರುವರು. ಇವರಲ್ಲಿ ಸಂಪ್ರದಾಯ ಶರಣರು, ಸ್ವಾತಂತ್ರ್ಯಶೀಲರು ಎಂದರೆ ಸ್ವತಂತ್ರ ವಿಚಾರ ಶೀಲರು ಎಂದೂ ವಿಂಗಡಿಸಬಹುದಾಗಿದೆ.

ಆರ್ಯರಲ್ಲಿ ಆ ಆರ್ಯರ ವೇದಗಳಲ್ಲಿ ದೇವಾರಾಧನೆಯು ಪುರುಷಪರವಾಗಿ ಪುರುಷಾಕಾರವಾಗಿ ವಿಶೇಷವಾಗಿ ವಿಹಿತವಾಗಿದೆ. ಪುರಾತನ ಸಾಹಿತ್ಯವೆಂದು ಹೇಳುವ ವೇದಗಳಲ್ಲಿರುವ ಋಕ್ಕುಗಳು ಮಂತ್ರಗಳು ಪುರುಷ ದೇವನನ್ನೇ ಪ್ರತಿಪಾದಿಸುತ್ತವೆ.

'ಭರ್ಗೋದೇವಸ್ಯ ಧೀಮಹೀ' 'ತಸ್ಮೈದೇವಾಯ ನಮೋ ನಮಃ' ದೇವೋ ವರುಣಃ ಪ್ರಜಾಪತಿಃ' 'ಜ್ಞಾತ್ವಾದೇವಂ ಮುಚ್ಯತೇ ಸರ್ವಪಾಪೈಃ' 'ಸಹಸ್ರಶಿರ್ಷಾ ಪುರುಷಃ' 'ಪುರುಷ ಏವೇದಗ್ಂ ಸರ್ವಂ'

ಇತ್ಯಾದಿ ವೇದಮಂತ್ರಗಳು ಬ್ರಹ್ಮಸೂತ್ರಗಳು, ಉಪನಿಷತ್ತುಗಳು ಪುರುಷ ಸೂಕ್ತಗಳು ಭಗವದ್ಗೀತೆಯು ಇವೆಲ್ಲವು ಸಾಮಾನ್ಯವಾಗಿ ಕೇವಲಪುರುಷನನ್ನೇ ದೇವನನ್ನಾಗಿ ನಿರೂಪಿಸಿವೆ ನಿಲುಗಡೆಯಾಗಿಸಿವೆ. ಅಲ್ಲದೆ ಆರ್ಯಮತೀಯರ ಆರಾಧನೆಯಲ್ಲಿ ಆಚಾರದಲ್ಲಿ ಅವರ ಸಾಂಪ್ರದಾಯಿಕ ಸಿದ್ಧಾಂತದಲ್ಲಿ ಪುರುಷರೂಪ ದೇವಾರಾಧನೆಯೆ ದಿಮ್ಮಿತ್ತಾಗಿ ದೃಗ್ಗೋಚರವಾಗುತ್ತಿದೆ. ಅಷ್ಟಲ್ಲದೆ ಜಗತ್ಕಾರಣನೂ ಜಗತ್ಪೂಜ್ಯನೂ ಪುರುಷನೊಬ್ಬನೇ ಎಂದು ಅವರು ಪ್ರತಿಪಾದಿಸುತ್ತಾರೆ; ಪ್ರತಿಪತ್ತಿಸುತ್ತಾರೆ. ಆರ್ಯರಲ್ಲಿ ಅಗ್ರಗಣ್ಯರಾದ ಅದ್ವೈತಿಗಳು 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಘಂಟಾಘೋಷವಾಗಿ ಪುರುಷದೇವನನ್ನೇ

ಉಗ್ಗಡಿಸುತ್ತಾರೆ. ಉಳಿದವರು ಸಹ ಅದನ್ನೇ ಅನುಸರಿಸಿದ್ದಾರೆ; ಆರಾಧಿಸುತ್ತಿದ್ದಾರೆ. ಅವರವರ ಹೆಸರುಗಳು ಬೇರೆ ಬೇರೆ ಆಗಿದ್ದರೂ ದೇವನು ಮಾತ್ರ ಪುರುಷನೇ ಹೊರತು ಬೇರಲ್ಲ. ನಿದರ್ಶನಕ್ಕಾಗಿ ಮಹಮ್ಮದೀಯರು 'ಅಲ್ಲಾ'ನನ್ನು ಕ್ರೈಸ್ತರು 'ಕ್ರಿಸ್ತ'ನನ್ನು ಬೌದ್ಧರು 'ಬುದ್ಧ'ನನ್ನು ದೇವನನ್ನಾಗಿ ಆರಾಧಿಸುತ್ತಾರೆ. ತಂದೆಯೆಂದು ಕರೆಯುತ್ತಾರೆ.

ಇವರಿಗೆ ಇದಿರಾಗಿ ಶಾಕ್ತೇಯರು ವೈದಿಕರಾದರೂ ಇವರೂ ಕೂಡ ಏಕಾಂಗ ದೇವತಾರಾಧನೆಯಲ್ಲಿಯೆ ತಲ್ಲೀನರಾದರು. ಇವರು ಪೂರ್ತಿ ಪುರುಷನನ್ನು ಪರಿಹರಿಸಿ ಶಕ್ತಿ ಸಂಪೂಜೆಯನ್ನು ಸ್ವೀಕರಿಸಿದರು. ಅಂತೆಯೆ ಇವರು ಕೇವಲ ಶಾಕ್ತೇಯರೆಂದೆನಿಸಿಕೊಂಡರು. ಮಾರಿ ಲಕುಮಿ ಸರಸ್ವತಿ ಅರುಂಧತಿ ದುರ್ಗಿ ಕಾಳಿ ಸಾವಿತ್ರಿ ಗಾಯತ್ರಿ ಗೌರಿ ಮುಂತಾದ ಸ್ತ್ರೀದೇವತಾರಾಧನೆಯು ಇವರ ಕ್ರಾಂತಿಯಿಂದ ಬಲಿಯಿತು; ಬಳಕೆಗೆ ಬಂದಿತು. ಈ ಕ್ರಾಂತಿಯು ಆ ಪುರುಷದೇವಾರಾಧನೆಯನ್ನು ಪ್ರತಿಭಟಿಸಿತಾದರೂ ಪೂರ್ತಿ ರೂಪವ ತಾಳದಾಯಿತು.

ದೇವಪುರಾಣಗಳಂತೆ ದೇವೀ ಪುರಾಣಗಳು ಹುಟ್ಟಿದವು. ದೇವಿ ಪರ್ವಗಳು ವ್ರತಗಳು ಪ್ರಾರಂಭವಾದವು. ದೇವಮಂದಿರಗಳಂತೆ ದೇವೀಮಂದಿರಗಳು ತಯಾರಾದವು. ದೇವಪುರುಷರು ಅವತರಿಸಿದಂತೆ ದೇವಿಯರವತರಿಸಿದರು. ಆದರೆ ದೇವ-ದೇವಿಯರಲ್ಲಿ ಸಹಕಾರ ಸಮರಸ ಸಮನ್ವಯ ಭಾವಗಳು ಹುಟ್ಟಲಿಲ್ಲ. ಮೇಲು-ಕೀಳು ಎಂಬ ಮಾತುಗಳು ಮುಗಿಯಲಿಲ್ಲ. ಮಾತಿನಂತೆ ಕೃತಿಯಲ್ಲಿ ಭೇದಭಾವವನ್ನು ತಾರದೆ ತೀರಲಿಲ್ಲ.

ಪುರುಷರಿಗೆ ಪೂಜೆಯ ಹಕ್ಕು ಏರ್ಪಟ್ಟಿತು. ಪುರುಷರಿಗೆ ವೇದಪಠನ ಮೀಸಲಾಯಿತು. ಪುರುಷರಿಗೆ ಮಾತ್ರ ಬ್ರಾಹ್ಮಣ್ಯವು ಬಳಸಿ ನಿಂತಿತು. ಸ್ತ್ರೀ ಪೂಜೆಗೆ ಅನರ್ಹಳು; ವೇದಶ್ರವಣಕ್ಕೆ ಬಾಹಿರಳು. ಬ್ರಾಹ್ಮಣ್ಯಕ್ಕೆ ದೂರಳು ಹೀಗೆ ದೇವತ್ವ ಮಾನವತ್ವಗಳೆರಡರಲ್ಲಿಯ ಈ ಸ್ತ್ರೀಪುರುಷ ಸಾಮ್ಯವಾದವು ಕೊಂಚವೂ ಕಾಣದಂತಾಯಿತು. ಹಗಲಿರುಳುಗಳಂತೆ ಜಲತೈಲಗಳಂತೆ ಭಿನ್ನ ಭಿನ್ನವಾಗಿ ನಿಂತವು. ಬಿರುದನಿಗಿಂಬಾದವು.

ಈ ವಿಷಯದಲ್ಲಿ ಆಗಮಿಕ ಪ್ರಧಾನರಾದ ವೀರಶೈವರು ವಿಶೇಷ ಕ್ರಾಂತಿಯನ್ನು ಮಾಡಿದರು. ವಿಜ್ಞಾನ ಕಾಂತಿಯನ್ನು ಬೀರಿದರು. ಸಮನ್ವಯ ಶಾಂತಿಗಳನ್ನು ತಂದರು. ಸ್ತ್ರೀ-ಪುರುಷ ಆವೆರಡು ಶಕ್ತಿಗಳು ಅಗಲದಂತವುಗಳು; ಆವೆರಡೂ ಅನಿವಾರ್ಯವಾದವುಗಳು. ಆವೆರಡೂ ಸರಿಸಮವಾದವುಗಳು. 'ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ'-ಸಿದ್ಧಾಂತಶಿಖಾಮಣಿ. 'ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ'-ಶಿವಸೂತ್ರ. ಶಿವ-ಶಕ್ತಿಗಳೆರಡರ ಸ್ವರೂಪವೇ ವಿಶ್ವ - ಎಂದು ಉದ್ಘೋಷಿಸಿದರು. ಬರೀ ಉದ್ಘೋಷಣೆ ಮಾತ್ರವಲ್ಲ; ಅರ್ಧನಾರೀಶ್ವರ ದೇವತೆಯನ್ನು ಸೃಷ್ಟಿಸಿದರು; ಇಷ್ಟಿಸಿದರು. ಶಕ್ತಿ

ವಿಶಿಷ್ಟಾದ್ವೈತ ಮತಸಿದ್ಧಾಂತವನ್ನು ಸ್ಥಾಪಿಸಿದರು. 'ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ' ಎಂಬುದನ್ನು ಆದರಿಸಿದರು. ತಾವಾರಾಧಿಸುವ ಲಿಂಗಕ್ಕೆ ಶಕ್ತಿಪೀಠ (ಅಂಗ)ವನ್ನಾಗಿಸಿ ಶಿವನನ್ನು ಗೋಳಕ (ಲಿಂಗ) ವನ್ನಾಗಿ ರಚಿಸಿದರು.' ಶಿವ-ಶಕ್ತಿ ಸಮನ್ವಯಗೊಳಿಸಿದರು. ಕ್ಷೀರಾಜ್ಯಗಳಂತೆ ಸಮರಸಗೊಳಿಸಿದರು. ತಾವಾರಾಧಿಸುವ ಆ ಲಿಂಗ-ವನ್ನು ಬರೀ ತಂದೆಯೆಂದು ಕರೆಯಲಿಲ್ಲ; ತಾಯಿ ಎಂದೂ ಕರೆದರು. 'ತಂದೆ ನೀನು, ತಾಯಿ ನೀನು.............ಎಂಬೀ ಬಸವಣ್ಣನವರ ವಚನವನ್ನು ನೆನೆಯಬೇಕು.

"ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಂ ॥ "
—ಸಿದ್ಧಾಂತಶಿಖಾಮಣಿ

ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಇರುವಂತೆ ಶಿವನೊಳಗೆ ಶಕ್ತಿ ಅವಿನಾಭಾವದಿಂದ ಒಡವೆರೆದಿದೆಯೆಂದು ಶ್ರೀ ಜಗದ್ಗುರು ರೇಣುಕರು ಮತ್ತು ಶ್ರೀ ನಿಜಗುಣ ಶಿವಯೋಗಿಗಳು ಸಹ ಹೇಳಿದ್ದಾರೆ. ಆಗಮಗಳಲ್ಲಿಯೂ ಉಕ್ತವಾಗಿದೆ. ಅಲ್ಲದೆ ಶಿವಶರಣರೂ ಸಹ ನೀರೊಳಗಿನ ಕಿಚ್ಚಿನಂತೆ, ಕಾರಮೇಘದೊಳಗಿನ ಮಿಂಚಿನಂತೆ, ಚಿನ್ನದೊಳಗಿನ ಬಣ್ಣದಂತೆ, ಕಣ್ಣಿನೊಳಗಿನ ಕಾಂತಿಯಂತೆ, ಹಾಲೊಳಗಿನ ತುಪ್ಪದಂತೆ, ಬೀಜದೊಳಗಿನ ನೇಹದಂತೆ - ಶಿವಶಕ್ತಿ ಸಾಮರಸ್ಯವನ್ನು ಸಾಟಿರುವರು. ಇದರಿಂದಾಗಿ ಈ ಮತಕ್ಕೆ 'ಶಕ್ತಿ ವಿಶಿಷ್ಟಾದ್ವೈತ ಮತ'ವೆಂದು ಸಾರ್ಥಕವಾದ ಹೆಸರು ಬಂದಿದೆ. ಈ ಮತವು ಶಿವನಲ್ಲಿ ಶಕ್ತಿ ಸಾಮರಸ್ಯವನ್ನು ಪ್ರತಿಪಾದಿಸುವಂತೆ ಜೀವನಲ್ಲಿಯೂ ಜಗತ್ತಿನಲ್ಲಿಯೂ ಪ್ರತಿಪಾದಿಸುತ್ತದೆ. ವಿಶ್ವವ್ಯಾಪಿಯಾದ ಆ ಚಿಚ್ಛಕ್ತಿಯು ಪರಮಾಣುವಿನಿಂದ ಪರಶಿವನವರೆವಿಗೂ ವ್ಯಾಪಿಸಿರುವುದೆಂಬುದನ್ನು ವೀರ-ಶೈವರು ಮೊತ್ತಮೊದಲು ಅರಿದು ಅಂಗೀಕರಿಸಿದರು. ಆಚರಣೆಯಲ್ಲಿ ತಂದರು. ಮೂಲಪ್ರಣವವಾದ ಓಂಕಾರದಿಂದ ಶಿವನಲ್ಲಿ ಹೇಗೆ ಶಕ್ತಿಯನ್ನು ಅವಿರಳವಾಗಿ ಕಾಣುವರೋ ಹಾಗೆ ಜೀವನಲ್ಲಿಯೂ ಶಕ್ತಿಯನ್ನು ಸರಿಸಮವಾಗಿ ಕಾಣುವ ಸಾಧನೆಯನ್ನು ಜೀವಾತ್ಮರುಗಳ ಹೆಸರುಗಳಿಂದಲೇ ಮೊದಲು ಮಾಡಿದರು; ಶಿವಪ್ಪ-ಶಿವಮ್ಮ ಲಿಂಗಪ್ಪ ಲಿಂಗಮ್ಮ, ಗುರಪ್ಪ ಗುರವ್ವ ಗುರಮ್ಮ, ಶಂಕರಪ್ಪ ಶಂಕರಮ್ಮ, ಬಸವಪ್ಪ-ಬಸವಮ್ಮ ಇತ್ಯಾದಿ. ಇತರರಲ್ಲಿ ದೇವ ದೇವಿಯರಲ್ಲಿ ಅಥವಾ ಶಿವ-ಶಕ್ತಿಯರಲ್ಲಿ ಇದ್ದ ವಿಭಿನ್ನಜ್ಞಾನವನು ಒಪ್ಪದೆ ಒಂದೆಂದು ತೋರಿ ವಿಶೇಷ ಜ್ಞಾನವನ್ನು ದೇವಾರಾಧನೆಯಲ್ಲಿ ಬೀರಿದರು ವೀರಶೈವರು. ಅಂತೆಯೇ ಮಾನವತ್ವದಲ್ಲಿಯೂ ಸಹ ಸ್ತ್ರೀಪುರುಷ ಸಾಮ್ಯತ್ವವನ್ನು ಜಗತ್ತಿಗೆ ಸಾಟಿದರು. ಹೆಣ್ಣು ಮಾಯೆಯೆಂಬುದನ್ನು ಹೇಯವೆಂಬುದನ್ನು ಅಲ್ಲಗಳೆದರು ವೀರಶೈವರು. ಲೈಂಗಿಕಭೇದ ಬಾಹ್ಯದ್ದು. ದೈಹಿಕಸಂಬಂಧದ್ದು. ಆಂತರಿಕವಲ್ಲ, ಆತ್ಮಿಕವಲ್ಲ; ಎಂದು

ಹೇಳಿ ಅರ್ಚನ, ಶ್ರವಣ, ಕೀರ್ತನ ಮುಂತಾದವುಗಳಲ್ಲಿಸಾಮ್ಯವಾದವನ್ನು ಸ್ತ್ರೀಯರಿಗೆ ಸಂಪಾದಿಸಿಕೊಟ್ಟರು ವೀರಶೈವರು. ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ಸ್ವರೂಪವೆಂದರು.

ಎರಡನೆಯದಾಗಿ ದೇವೋಪಾಸಕರಿಗೆ ದೇವ ಸ್ವಾತಂತ್ರ್ಯವನ್ನೂ ದೇವಾತ್ಮರೂಪವನ್ನೂ ತಂದುಕೊಟ್ಟರು ವೀರಶೈವರು. ಪುರಾತನ ಶೈವ ಮತ್ತು ವೈಷ್ಣವ ಮತಗಳಲ್ಲಿ ದೇವೋಪಾಸನೆಯಲ್ಲಿ ಉಪಾಸಕರಿಗೆ ಸ್ವಾತಂತ್ರ್ಯ ಇರಲಿಲ್ಲ; ಸ್ವಾತ್ಮೀಯತೆಯಿರಲಿಲ್ಲ. ಊರಿಗೊಂದು ದೇವಾಲಯವನ್ನು ನಿರ್ಮಿಸುತ್ತಿದ್ದರು. 'ದಿಗ್ ಗ್ರಾಮುಮಶಿವಾಲಯಮ್' ಎಂಬೀ ಉಕ್ತಿಯು ಇದಕ್ಕೆ ಸಾಕ್ಷಿಯಾಗಿದೆ. ಆ ಗುಡಿಯಲ್ಲಿ ಒಂದು ದೇವ ಅಥವಾ ದೇವಿ ಮೂರ್ತಿಯನ್ನು ಸ್ಥಾಪಿಸುತ್ತಿದ್ದರು. ಆ ದೇವ - ದೇವತೆಗಳು ಅರ್ಚಕರ ಸ್ವಾಧೀನ. ಆ ದೇವರಿಗೆ ಬರುವ ಪಡಿಪದಾರ್ಥಗಳು ಅರ್ಚಕರ ಸೊತ್ತು. ಭಕ್ತಿಭಾವವುಳ್ಳ ಭಕ್ತರು ಆ ದೇವನನ್ನು ಮುಟ್ಟುವಂತಿಲ್ಲ; ಮುಟ್ಟಿ ಪೂಜಿಸುವಂತಿಲ್ಲ. ಪರಿಣಮಿಸುವಂತಿಲ್ಲ. ಸನಿಹಕ್ಕೆ ಸಹ ಸುಳಿಯುವಂತಿಲ್ಲ. ಹೀಗಾಗಿ ಯಾರಿಗೂ ದೇವ - ಪೂಜಾ ಸ್ವಾತಂತ್ರ್ಯವಿರಲಿಲ್ಲ. ಪೂಜಿಸುವ ಪುಣ್ಯಪ್ರಾಪ್ತಿಯಿರಲಿಲ್ಲ. ಮುಟ್ಟಿ ಪೂಜಿಸಲು ಸಾಧ್ಯವಿರುವವರೂ ಸಹ ತಾವೇ ಪೂಜಿಸದೆ ಪರರಿಂದ ಇಲ್ಲವೆ ಪುರೋಹಿತರಿಂದ ಪೂಜೆಮಾಡಿಸುತ್ತಿದ್ದರು. ಇದರಿಂದ ಬರುವ ಭಾಗ್ಯವೇನು? ಧನ್ಯತೆಯೇನು? ಇದು ತರವೇನು?

> "ತಾನುಂಬ ಊಟವನು, ತಾ ಪಡೆವ ರತಿಸುಖವನು
> ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ?
> ತಾ ಮಾಡುವ ಪೂಜೆಯನು ತಾ ಮಾಡಬೇಕಲ್ಲದೆ ಬೇರೆ
> ಮತ್ತೊಬ್ಬರ ಕೈಯಲಿ ಮಾಡಿಸಬಹುದೆ? ಕೆಮ್ಮನೇ ಉಪಚಾರಕ್ಕೆ
> ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ?"

ಎಂದು ಹೇಳಿ ಈ ದಿಸೆಯಲ್ಲಿಯೂ ವಿಶಿಷ್ಟ ಜ್ಞಾನವನ್ನು ವಿಚಾರಕ್ರಾಂತಿಯನ್ನು ಬೀರಿದರು ವೀರಶೈವರು. ಅಂದಿನಿಂದ ಊರಿಗೊಂದರಂತಿದ್ದ ದೇವಾಲಯಕ್ಕೆ ಬದಲು ಮನೆಮನೆಗೊಂದು ವ್ಯಕ್ತಿವ್ಯಕ್ತಿಗೊಂದು ದೇವಾಲಯವಾಯಿತು. ಮನೆಗೊಂದು ದೇವರ ಮನೆಯೆರ್ಪಟ್ಟಿತು. ಮನೆದೇವರು ಜಗುಲಿಯ ಮೇಲೆ ಪ್ರತಿಷ್ಠಿತಗೊಂಡು ಮನೆಯವರಿಂದ ಪೂಜೆಯಾರಂಭವಾಯಿತು. ಬರಬರುತ್ತ ಅದೂ ಸಾಲದೆ ಅವರವರ ದೇಹಗಳೇ ದೇವಾಲಯಗಳಾದವು. ಅವರವರ ಆತ್ಮಗಳೇ ದೇವರಾದರು. ಬಹಿರಂಗ ಅಂತರಂಗಗಳೆರಡರಲ್ಲಿಯೂ ಲಿಂಗದೇವರ ಧಾರಣವಾಯಿತು. ಬೇಕೆಂದಾಗ ಭಕ್ತಿ ಬಂದಾಗ ದೇವಪೂಜೆ ಘಟಿಸಲು ಅತ್ಯಂತ ಅನುಕೂಲವೊದಗಿತು. ಮನೆಯ ಪೂಜೆ ಮನದ ಪೂಜೆಯಾಗಿ ಮಾರ್ಪಟ್ಟಿತು. ಅಂದಿನಿಂದ ದೇವೋಪಾಸನೆಯಲ್ಲಿ ಸ್ವಾತಂತ್ರತೆ ಸ್ವಾತ್ಮೀಯತೆಗಳು ಸಂಪ್ರಾಪ್ತವಾದವು. ಹಂಗಿನ ಪೂಜೆ ಹರಿಯಿತು. ಹೊರಗಿನವನು

ದೇವನೆಂಬ ಭಿನ್ನಭಾವವಳಿಯಿತು. ಬಾಹ್ಯ ದೇವತಾರಾಧನೆಗಿಂತ ಆತ್ಮಾರಾಧನೆ ಅತ್ಯಂತ ಆದರಣೀಯವೂ ಅಭಿನಂದನೀಯವೂ ಆತ್ಯಂತಿಕವೂ ಅಭ್ಯುದಯಕಾರಣವೂ ಎಂಬ ವಿಶೇಷ ಜ್ಞಾನವುಂಟಾಯಿತು. ದೇಹದಲ್ಲಿ ಸ್ಥೂಲವಾದ ಕಳಾತ್ಮಕವಾದ ಇಷ್ಟಲಿಂಗವು ಆರಾಧಿತವಾದರೆ ಪ್ರಾಣದಲ್ಲಿ ಸೂಕ್ಷ್ಮವಾದ ಬಿಂದ್ವಾತ್ಮಕವಾದ ಪ್ರಾಣ-ಲಿಂಗವೂ ಭಾವದಲ್ಲಿ ಕಾರಣಾತ್ಮಕವಾದ ನಾದಾತ್ಮಕವಾದ ಭಾವಲಿಂಗವೂ ಆರಾಧನೆಯ ಪಡೆದು ಆತ್ಮವೇ ಪರಮಾತ್ಮವೆಂಬ ವಿಜ್ಞಾನವು ಅಂದರೆ ಅನುಭೂತಿಯು ಬೆಳೆದು ಬರಲು ಬೆರೆದು ನಿಲಲು ಸಾಧನವಾಯಿತು. ಕೇವಲ ಸ್ಥೂಲ ಪೂಜೆಯೇ ಪೂಜೆಯಲ್ಲ ಸದ್ಗುಣ ಸದಾಚಾರ ಸದ್ಭಾವ ಸಂಗ್ರಹರೂಪ ಸೂಕ್ಷ್ಮಕಾರಣ ಪೂಜೆಗಳೂ ಪೂಜೆಗಳೆಂಬ ವಿಚಾರಗಳೆಂಬ ವಿಚಾರವಿಶೇಷವು ಉದಯವಾಯಿತು. ಇದೂ ಸಹ ವೀರಶೈವವು ದೇವಾರಾಧನೆಯಲ್ಲಿ ತಂದ ವಿಜ್ಞಾನ.

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ' ಎಂಬೀ ನುಡಿಯನ್ನು ನಡೆಯಲ್ಲಿ ತಂದ ಮತ್ತು ವಿಶಾಲ ವಿಶ್ವವನ್ನೇ ಕರದಿಷ್ಟದಲ್ಲಿ ಕಂಡ ವಿಜ್ಞಾನಿಗಳು ವೀರಶೈವರು. ತ್ರಿಕರಣಗಳಲ್ಲಿ ದೇವಭಾವ ತುಂಬಿ ತುಳುಕುವಂತೆ ಮಾಡಿದವರು ವೀರಶೈವರು. ಪಿಂಡಾಂಡದಂತೆ ಬ್ರಹ್ಮಾಂಡಭರಿತ ಲಿಂಗವನ್ನು ಅಂಗದಲ್ಲಿ ಅಳವಡಿಸಿಕೊಂಡರು ವೀರಶೈವರು. ಇದರಿಂದ ಶಕ್ತಿ ವಿಶಿಷ್ಟ ಜೀವನು ಶಿವನಾಗಿ (ಮಂಗಳಾತ್ಮನಾಗಿ ಪ್ರಪಂಚವು ಪರಮಾರ್ಥವಾಗಿ ಪರಿಸರದ್ದಾಗಿ ಪರಿಣಮಿಸಿತು ವೀರಶೈವ ವಿಜ್ಞಾನದಲ್ಲಿ ! ಪದಾರ್ಥರೂಪವಿಷಯಗಳು ಪ್ರಸಾದಗಳಾಗಿ ತ್ಯಾಗ ಭೋಗ ಯೋಗಗಳುಂಟಾಗಿ ತನ್ಮಯನಾಗುವ ತತ್ತ್ವಕ್ಕಿಂತ ಬೇರೆ ಮಿಗಿಲು ತತ್ತ್ವವಿಲ್ಲ; ಬೇರೆ ಕೈವಲ್ಯವಿಲ್ಲ. ಲಿಂಗವಿಜ್ಞಾನಿಗಳಿಗೆ ಆಕಾಶಯಾನಕ್ಕೆ ವಿಮಾನವಾಹನ ಬೇಕಿಲ್ಲ. ದೂರದರ್ಶಕ ಯಂತ್ರ ಬೇಕಿಲ್ಲ. ದೂರವಾರ್ತೆಯ ಕೇಳಲು ಬೇರೆ ಬಾನುಲಿ ಬೇಕಿಲ್ಲ. ಇವೆಲ್ಲವೂ ಲಿಂಗಾರಾಧನೆಯು ಸಂದಿಯಲ್ಲಿ ಸಮರಸಗೊಳ್ಳುತ್ತವೆ; ಸಂಪ್ರಾಪ್ತವಾಗುತ್ತವೆ ಇದು ವೀರಶೈವ ಲಿಂಗಾರಾಧನ ವಿಜ್ಞಾನ.

ಮೂರನೆಯದಾಗಿ : ವೀರಶೈವರ ಷಟ್‌ಸ್ಥಲ ತತ್ವ ಪ್ರತಿಪಾದನೆಯು. ಮತ್ತೊಂದು ಮಹಾ ವಿಜ್ಞಾನ. ಮೊದಲು ಭಕ್ತನಾಗಿ ಬಳಿಕ ಮಹೇಶನಾಗಿ ಪ್ರಸಾದಿಯಾಗಿ ಪ್ರಾಣಲಿಂಗಿಯಾಗಿ ಶರಣನಾಗಿ ಆಮೇಲೆ ಐಕ್ಯನಾಗುವ ಈ ತತ್ವವು ಪ್ರಕೃತಿ ಸಹಜವೂ ಪಾರಮಾರ್ಥಿಕವೂ ಆಗಿದೆ. ಜನಜೀವನದಲ್ಲಿ ಹಾಸು ಹೊಕ್ಕಾಗಿದೆ. ಇದರಿಂದಾಗಿ ಇದು ವಿಶ್ವಮಾನ್ಯವಾಗುವ ತತ್ವವಾಗಿದೆ.

ಜನಜೀವನವೆ ಷಟ್‌ಸ್ಥಲಮಯ ಅದು ಪ್ರಾಕೃತಿಕವಾಗಿರಬಹುದು ಇಲ್ಲವೆ ಪಾರಮಾರ್ಥಿಕವಾಗಿರಬಹುದು. ಯಾವುದರ ಪ್ರಾಪ್ತಿಗಾಗಿ ಯಾರೇ ಆರಂಭಿಸಲಿ ಅವರು ಆ ಷಟ್‌ಸ್ಥಲಗಳಲ್ಲಿ ಪರಿಣಮಿಸಲೇ ಬೇಕು ಐಚ್ಛಿಕ ವಸ್ತುವಿನ ಅನುರಾಗಿಗಳಾದವರು ಆದಿಯಲ್ಲಿ ಅದರ ಭಕ್ತರಾಗಿಯೇ ತೀರಬೇಕು. ಅವರ ಈ ಐಚ್ಛಿಕ ವಸು

ಪ್ರಾಪ್ತಿಯಾದ ಬಳಿಕ ಅದಕ್ಕೆ ಅವರೇ ಅನನ್ಯ ಅಧಿಕಾರಿಗಳಾಗಿ ಅಂದರೆ ಮಾಹೆಶ್ವರರಾಗಿ ಮುಂದುವರಿಯ ಬೇಕು. ಆ ತನ್ನದನ್ನು ತಾನನುಭವಿಸಿ ಪ್ರಸನ್ನಹೃದಯರಾಗಿ ಪ್ರಸಾದಿಗಳಾಗಬೇಕು. ಇವು ಮೂರು ಕ್ರಿಯಾಪ್ರಧಾನ ಬಾಹ್ಯಾಂಗಗಳು. ಆದರೊಳಗೆ ತನ್ನ ಪ್ರಾಣ (ಜ್ಞಾನ) ವನ್ನಿಟ್ಟುಕೊಂಡು ಅಥವಾ ಅದರಿಂದ ಪ್ರಾಣಶಕ್ತಿ ಪುಷ್ಟಿಗೊಂಡು ಪ್ರಾಣಲಿಂಗಿಯೆನಿಸುವನು. ಆದರಲ್ಲಿಯೇ ತನ್ನ ಸರ್ವ ಕ್ರಿಯಾಜ್ಞಾನಗಳನ್ನಿಟ್ಟುಕೊಂಡು ಅದನ್ನೇ ಸರ್ವಾತ್ಮತ್ವದಿಂದ ಶರಣು ಹೊಕ್ಕ ಕಾರಣ ಶರಣನಾಗಿ ಕೊನೆಗೆ ಅದುವೇ ತಾನಾಗಿ ಹೋಗುವ ಕಾರಣ ಐಕ್ಯನೆನಿಸುವನು. ಈ ಆರು ಸ್ಥಲ ವಿಭಾಗಗಳು ವಿಜ್ಞಾನ ಪೂರ್ಣವಾಗಿವೆ. ವಿಶ್ವಸಹಜವಾಗಿವೆ. ನಿಸರ್ಗ ಜೀವನದ ನಿದರ್ಶನವಾಗಿವೆ.

ತ್ಯಾಗ ಭೋಗ ಯೋಗ ಸಮನ್ವಯ ವೀರಶೈವರ ನಾಲ್ಕನೆಯ ವಿಜ್ಞಾನ. ಇತರ ಮತಜ್ಞಾನಿಗಳು ತ್ಯಾಗಭೋಗಗಳಿಗೂ ಭೋಗಯೋಗಗಳಿಗೂ ಯಾವ ಸಂಬಂಧವಿಲ್ಲವೆಂದು ಅವುಗಳಿಗೆ ಪರಸ್ಪರ ವಿರೋಧ ಶಕ್ತಿಯಿದೆಯೆಂದು ವಿವರಿಸುತ್ತಾರೆ. ಅಸಂಬಂಧದಲ್ಲಿ ಸಂಬಂಧವನ್ನು ವಿರೋಧದಲ್ಲಿ ಅವಿರೋಧವನ್ನು ಉಂಟು ಮಾಡಿದ ವಿಜ್ಞಾನ ವೀರಶೈವರದು. ತ್ಯಾಗವಿಲ್ಲದೆ ಭೋಗವಿಲ್ಲ. ಭೋಗವಿಲ್ಲದೆ ಯೋಗವಿಲ್ಲವೆಂಬುದು ವೀರಶೈವರ ವಿಶೇಷ ವಿಚಾರ ಪ್ರಣಾಳಿಕೆ! ತ್ಯಾಗವೆಂದರೆ ವಿಸರ್ಜನ, ಸಮರ್ಪಣ ಎಂದು ಎರಡರ್ಥಗಳನ್ನು ಇವರು ಮಾಡುತ್ತಾರೆ. ಇವರು ವಿಷಯೇಂದ್ರಿಗಳನ್ನು ಕಾಮಾದಿ ಗುಣಗಳನ್ನು ತ್ಯಜಿಸದೆ ಅವುಗಳ ಭಾವವನ್ನು ವಿಸರ್ಜಿಸುತ್ತಾರೆ. ಅಂತೆಯೇ ಜಗಜ್ಜೀವರನ್ನು ಅಲ್ಲಗಳೆಯದೆ ಮಿಥ್ಯೆಯನ್ನದೆ ಜಗಜ್ಜೀವ ಭಾವವನ್ನು ತ್ಯಾಗಮಾಡುತ್ತಾರೆ. ವಿಷಯೇಂದ್ರಿಗಳಲ್ಲಿ ಕ್ರಮವಾಗಿ ಪ್ರಸಾದ ಮತ್ತು ಲಿಂಗ ಭಾವವನ್ನೂ ಜಗಜ್ಜೀವರಲ್ಲಿ ಶಿವಭಾವವನ್ನೂ ತಾಳುತ್ತಾರೆ. ಇವೆಲ್ಲವನ್ನು ಆ ಆಲಿಂಗಗಳಿಗೆ ಸಮರ್ಪಿಸುತ್ತಾರೆ. ಸಮರ್ಪಿಸಿ ಶೇಷವನ್ನು ಭೋಗಿಸುತ್ತಾರೆ. ಅಂದರೆ ಲಿಂಗಭೋಗೋಪಭೋಗಿಗಳಾಗುತ್ತಾರೆ. ಸದಾ ಶಿವಯೋಗನಿರತರಾಗಿರುತ್ತಾರೆ. ಆ ಭೋಗದ ಬಲದಿಂದ.

ಭೋಗ-ಮೋಕ್ಷ (ಸಮರಸ ಅಥವಾ ಯೋಗ) ಗಳೆರಡನ್ನೂ ಪಡೆವುದೇ ವೀರಶೈವರ ತ್ಯಾಗದ ಅಂದರೆ ಸಮರ್ಪಣದ ವೈಶಿಷ್ಟ್ಯ. ಸತ್ಪಾತ್ರ ಸ್ವಾತ್ಮ ತ್ಯಾಗ ಭೋಗ ಕಾರಣ. ಆ ತ್ಯಾಗದಿಂದ ತನ್ನದೆಲ್ಲ ಪಾವನವಾಗುತ್ತದೆ. ಪ್ರಾಕೃತತೆಯನ್ನು ಪರಿಹರಿಸಿಕೊಳ್ಳುತ್ತದೆ. ಅಗ್ನಿಗೆ ತನ್ನನ್ನು ಅರ್ಪಿಸಿಕೊಂಡ ಪಾತ್ರೆಯೊಳಗಿನ ಅಕ್ಕಿ ತನ್ನ ಕಾಠಿಣ್ಯ ಭಾವವನ್ನು ಕಳೆದುಕೊಂಡು ಮಾರ್ದವ ಮಾಧುರ್ಯ ಭಾವಗಳನ್ನು ತಳೆದು ಭುಂಜಿಸಲು ಯೋಗ್ಯವಾಗುವಂತೆ ಜ್ಯೋತಿರ್ಮಯ ಲಿಂಗಕ್ಕೆ ಗುರು-ಜಂಗಮ ಪಾತ್ರಗಳಲ್ಲಿ ಸಮರ್ಪಿಸಿದ ವಿಷಯೇಂದ್ರಿಯ ಕಾಯಕರಣಾದಿಗಳೂ ಕಾಮಾದಿ ಗುಣಗಳೂ ಪ್ರಸಾದಗಳಾಗಿ ಭೋಗ್ಯಗಳಾಗುತ್ತವೆ. ಭೋಗ ಜೀವನಕ್ಕೆ ಅನಿವಾರ್ಯ. ಆದರೆ

ಭೋಗದ ದೃಷ್ಟಿ ಬದಲಾಗಬೇಕು. ದೃಶ್ಯದಿಂದ ದಿವ್ಯತೆಗೇರಬೇಕು. ವಿಮಲಭಾವ ವಿಶಾಲ ಭಾವ ಪ್ರಸಾದಭಾವಗಳೊಡನೆ ಭೋಗ ಪರರಾಗಬೇಕು. ಅಂತಹ ಆ ಭೋಗ ಯೋಗಕ್ಕೆ (ಸಮರಸಭಾವಕ್ಕೆ) ಮೂಲವೆಂದರು ವೀರಶೈವರು. ಅಂತೆಯೇ

"ನ ವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥"

ಎಂಬೀ ಪಾರಮೇಶ್ವರಾಗಮವು ಪರಮಾರ್ಥವಾಗಿಯೇ ಪ್ರತಿಪಾದಿಸಿದೆ. ಈ ದಿಶೆಯಲ್ಲಿ ಆ ಆಗಮೋಕ್ತಿಗೆ ಅನುಭೂತಿಯ ಅಪಾರ ಬಣ್ಣವೇರಿದೆ; ಅತ್ಯಂತ ಅನ್ವರ್ಥಕವಾಗಿದೆ.

ವೀರಶೈವ ಲಿಂಗಾರಾಧನೆಯಲ್ಲಿ ಆಹಾರ ವಿಜ್ಞಾನ, ಆರೋಗ್ಯವಿಜ್ಞಾನ, ಆರ್ಥಿಕವಿಜ್ಞಾನ, ಯಾನವಿಜ್ಞಾನ, ಶ್ರವಣವಿಜ್ಞಾನ, ಭೌತವಿಜ್ಞಾನ, ಶ್ರೌತ ವಿಜ್ಞಾನ ಮಾನಸಿಕ ವಿಜ್ಞಾನಾದಿ ಎಲ್ಲ ವಿಜ್ಞಾನಗಳೂ ಏಕೀಕೃತವಾಗಿ ಹಸ್ತಗತ ವಾಗಿವೆ. ಆದರೆ ಆ ದೃಷ್ಟಿಯಲ್ಲಿ ಆರಾಧಿಸುವ ಭಾಗ್ಯ-ಸೌಭಾಗ್ಯಗಳು ಬೇಕು. ಅರಿವು ಅನುಭೂತಿಗಳು ಬೇಕು.

ವೀರಶೈವ ಲಿಂಗಾರಾಧನೆಯಲ್ಲಿ ವೀರಮಾಹೇಶ್ವರತ್ವ (ವೀರಾಗ್ರಗಣ್ಯತ್ವ)ವು ಪ್ರಾಪ್ತವಾಗುವಂತೆ ವಿಜ್ಞಾನ ಮಾಹೇಶ್ವರತ್ವವೂ ಪ್ರಾಪ್ತವಾಗುತ್ತದೆ.



# ಔತ್ತರೇಯ ಸಂತರ ಮೇಲೆ ವೀರಶೈವದ ಪ್ರಭಾವ!

—ಮ. ಸು. ಕೃಷ್ಣಮೂರ್ತಿ.

ಭರತವರ್ಷ ಕೃಷಿ ಪ್ರಧಾನ ದೇಶ ಮಾತ್ರವಲ್ಲ. ತೀರ್ಥ ಪ್ರಧಾನ ದೇಶವೂ ಆಹುದು. ಇಲ್ಲಿ ಅಸಂಖ್ಯಾತ ತೀರ್ಥ ಕ್ಷೇತ್ರಗಳಿವೆ. ಹಲವಾರು ನದಿಗಳು, ಸರೋವರಗಳು ಬೆಟ್ಟಗಳು, ತಪೋವನಗಳು, ಸಿದ್ಧಾಶ್ರಮಗಳು, ಪುಣ್ಯಕ್ಷೇತ್ರಗಳು, ಜ್ಞಾನಪೀಠಗಳು, ಮುಕ್ತಿಧಾಮಗಳು, ಮುಮುಕ್ಷು ಮಂದಿರಗಳು ಈ ದೇಶದ ಮೂಲೆ ಮೂಲೆಯಲ್ಲಿ ಹಬ್ಬಿ ನಿಂತಿವೆ. ಈ ತೀರ್ಥಕ್ಷೇತ್ರಗಳಲ್ಲಿ ಆಗಾಗ್ಗೆ ಇಡೀ ದೇಶದ ಸಾಧು ಸಂತರ ಸಂಗಮಸಮೂಹ ನಡೆಯುತ್ತಿತ್ತು, ನಡೆಯುತ್ತಿವೆ. ಇಂಥ ಸಂದರ್ಭದಲ್ಲಿ ಈ ಮಹಾತ್ಮರ ಸತ್ಸಂಗದಿಂದ ಜನ ಸಾಮಾನ್ಯಕ್ಕಾಗುವ ಉಪಕಾರ ಅಷ್ಟಿಷ್ಟಲ್ಲ. ಈ ಸತ್ಸಂಗದ ಉತ್ಸಂಗದಲ್ಲಿ ಸಾಹಿತ್ಯವೂ ಪಾರಸ್ಪರಿಕ ಕೊಳ್ಕೊಡುಗೆಯಿಂದ ಬೆಳೆದಿರಬೇಕು. ಸಮೃದ್ಧವಾಗಿರಬೇಕು. ಈ ಸತ್ಸಂಗ ವಿಚಾರ ವಿನಿಮಯಕ್ಕೆ, ಭಾಷೆಯಾಗಲೀ ದೇಶವಾಗಲೀ ಅಡ್ಡಿಯಾಗಿರಲಿಲ್ಲ ಎಂಬ ಅಂಶ ಭರತ ಖಂಡದ ಎಲ್ಲ ಭಾಷೆಗಳ ಸಂತ ಸಾಹಿತ್ಯದ ತುಲನಾತ್ಮಕ ವ್ಯಾಸಂಗದಿಂದ ಸ್ಪಷ್ಟವಾಗುತ್ತವೆ.

ಕನ್ನಡ ನಾಡಿನ ವೀರಶೈವ ಸಂತರ ವಿಚಾರಧಾರೆ ಬಹುಪಾಲು ಉತ್ತರಕ್ಕೆ ಮರಾಠೀ ಸಂತರ ಮೂಲಕ ಪ್ರವಹಿಸಿತು. ಕನ್ನಡ ಮರಾಠಿಗಳು ಭಿನ್ನ ಗೋತ್ರದ ಭಾಷೆಗಳಾಗಿದ್ದರೂ ಮರಾಠಿಯ ಮೇಲೆ ಕನ್ನಡದ ಪ್ರಭಾವ ಎಷ್ಟು ವಿಪುಲವಾಗಿದೆ ಎಂಬುದನ್ನು ವಿದ್ವಾಂಸರು ಸಪ್ರಮಾಣವಾಗಿ ತೋರಿಸಿಕೊಟ್ಟಿದ್ದಾರೆ. ಇಂದಿನ ಮಹಾರಾಷ್ಟ್ರದ ಬಹುಭಾಗ ಕರ್ಣಾಟಕದ ಒಹು ಮೆಟ್ಟಾಗಿತ್ತು ಎಂಬುದು ಸಂಶೋಧನೆಯಿಂದ ವ್ಯಕ್ತವಾಗಿದೆ. ಮಹಾರಾಷ್ಟ್ರ ಸಂತರ ಅಧಿದೈವತನಾದ ವಿಠಲ ಕನ್ನಡ ದೇವತೆ, ಪಂಡರಪುರ ಕನ್ನಡಗರ ಸಂಪದಗೆ ಎಂಬುದಕ್ಕೆ ಮಹಾರಾಷ್ಟ್ರ ಸಂತರ ವಾಣಿಯೇ ಸಾಕ್ಷಿ ನುಡಿಯುತ್ತದೆ. ನಾಮದೇವ ಹೀಗೆ ಹೇಳಿದ್ದಾನೆ.

"ಕಾನಡಾ ವಿಟ್ಠಲ ಪಂಢರಿಯೇ" ನಾಮದೇವ ಗಾಥಾ ಅಭಂಗ ೫೩೮-೧ (ಕನ್ನಡಿಗರ ವಿಠಲ ಪಂಡರ ಪುರದಲ್ಲಿದ್ದಾನೆ.) ಜ್ಞಾನ ದೇವನೂ ಇದನ್ನೇ ಹೇಳಿದ್ದಾನೆ.

"ಕಾನಡಾ ಹೋ ವಿಟ್ಠಲ ಕರ್ಣಾಟಕು । ತ್ಯಾನೇ ಮಜಲಾ ವಿಲಾವೇಧು"

—ಜ್ಞಾನದೇವನಾಥಾ ಅಭಂಗ ೭೬೪

ಏಕನಾಥ ;

ಕಾನಡಾ ವಿಟ್ಠಲ ಕಾನಡಾ ವಿಟ್ಠಲ
ಕಾನಡಾ ವಿಟ್ಠಲ, ವಿಟೇವರೀ ॥
ಕಾನಡಾ ವಿಟ್ಠಲ ಕಾನಡಾ ವಾಲೇ
ಕಾನಡ್ಯಾ ವಿಟ್ಠಲೋ ಮನವೇಧಿಯಲೇ ॥

ಕ್ರಿ. ಶ. ೭ನೆಯ ಶತಮಾನದಲ್ಲಿ ಸೋಲಾಪುರದ ಜಿಲ್ಲೆಯ ರಾಜನಾಗಿದ್ದ ಅವಿದೇಯನ ತಾಮ್ರಶಾಸನವೊಂದರಲ್ಲಿ (೧೯೨೯ ನೇ ಮೈಸೂರು ಶಾಸನ ಇಲಾಖೆಯ ವರದಿ ಪು. ೨೦೨), ಭಾರ್ಗವಸಗೋತ್ರದ ವಿಟ್ಠನೆಂಬೊಬ್ಬ ಶ್ರೋತ್ರಿಯ ಬ್ರಾಹ್ಮಣನಿಗೆ ಆನೆವರಿಚಾಲ, ಕರದಕ, ದುಯಿಪಳ್ಳಿ ಮತ್ತು ಪಾಂಡುರಂಗಪಳ್ಳಿವರು ಎಂಬ ಗ್ರಾಮುಗಳನ್ನು ದಾನ ಕೊಟ್ಟ ಉಲ್ಲೇಖವಿದೆ ಈ ಪಾಂಡುರಂಗಪಳ್ಳಿಯೇ ಪಂಡರಪುರ. ಆನೆವರಿ ದುಯಿಪಳ್ಳಿ ಮೊದಲಾದವೂ ಕನ್ನಡ ಹೆಸರುಗಳೇ ಎಂಬುದು ಗಮನಾರ್ಹ.

ಕನ್ನಡನಾಡಿನ ಊರಾದ ಪಂಡರ ಪುರದಲ್ಲೇ ಬಹುಕಾಲ ಬಾಳಿ ಬದುಕಿದ ನಾಮದೇವ. ಜ್ಞಾನದೇವ, ಮೊದಲಾದ ಮಹಾರಾಷ್ಟ್ರ ಸಂತರಿಗೆ ಕನ್ನಡದ ಜ್ಞಾನ ಸ್ವಲ್ಪ ಮಟ್ಟಿಗಾದರೂ ಇಲ್ಲವೆನ್ನಲಾದೀತೆ ? ದಿವಂಗತ ನಾ. ಶ್ರೀ. ರಾಜಪುರೋಹಿತರು ಜ್ಞಾನೇಶ್ವರಿಯಲ್ಲಿ ಹುದುಗಿರುವ ಕನ್ನಡ ಶಬ್ದಗಳನ್ನು ಎತ್ತಿ ತೋರಿಸಿದ್ದಾರೆ. ಪಂಡರಪುರದ ಸಮೀಪದಲ್ಲೇ ಇರುವ ಬಿಜಾಪುರದ ಜಿಲ್ಲೆಯಲ್ಲಿ ಆಗಿ ಹೋದ ಬಸವಾದಿ ಪ್ರಮಥರ ವಿಚಾರಕ್ರಾಂತಿ ಭಕ್ತಿ ಅಂದೋಳನ ಮೊದಲಾದವುಗಳ ಬಿಸಿ ಈ ಸಂತರಿಗೆ ತಟ್ಟಲಿಲ್ಲವೆಂದು ಹೇಳಲು ಸಾಧ್ಯವೆ ?

ಶ್ರೀ ಬುದ್ಧಯ್ಯ ಪುರಾಣಿಕರು ತಮ್ಮ ಒಂದು ಲೇಖನದಲ್ಲಿ ಮಹಾರಾಷ್ಟ್ರ ಸಂತರಾದ ಜ್ಞಾನೇಶ್ವರವರು ಏಕನಾಥರ ಮೇಲೆ ಬಸವಣ್ಣನವರ ಪ್ರಭಾವ ಹೇಗೆ ಮೂಡಿದೆ ಎಂಬುದನ್ನು ವಿವರವಾಗಿ ಚರ್ಚಿಸಿದ್ದಾರೆ. ಜ್ಞಾನದೇವ, ತುಕಾರಾಮ ಮೊದಲಾದವರು 'ಬಸವಂತ' ಎಂದು ಬಸವಣ್ಣನವರ ಹೆಸರನ್ನು ಉಲ್ಲೇಖಿಸಿದ್ದಾರೆ. ಅಷ್ಟೇ ಅಲ್ಲ ಬಸವಣ್ಣನವರ ವರ್ಣಾಶ್ರಮ ವಿರೋಧ, ಜೀವ ಕಾರುಣ್ಯ, ಗುರುಮಹಿಮೆ ಕಾಯಕದ ರೂಪಕ ವಿಲಾಸ ಮೊದಲಾದವುಗಳ ಪ್ರಭಾವ ಮುದ್ರೆಯನ್ನು ಇವರ ಮೇಲೆ ಕಾಣಬಹುದು. ಇವೆಲ್ಲಕ್ಕೂ ಮಿಗಿಲಾದದ್ದು ವೀರಶೈವದ ಸಾರಮರ್ಮವಾದ ಜ್ಞಾನಭಕ್ತಿ ದ್ವೈತಾದ್ವೈತ ಸಮನ್ವಯವಾದ ಪ್ರಭಾವ. ವೀರಶೈವರ ಈ ಜ್ಞಾನಸಮನ್ವಿತವಾಗ ಇಲ್ಲವೆ ಭಕ್ತಿ ಮರಾಠರಿಗೆ ಹೋಗಿ ಅಲ್ಲಿಂದ ಔತ್ತರೇಯ ಸಂತರ ವಿಚಾರ ಗಂಗೆಯಲ್ಲಿ

ವಿಂದು 'ನಿರ್ಗುಣಭಕ್ತಿ' ಎನ್ನಿಸಿಕೊಂಡಿತು. ಔತ್ತರೇಯ ಸಂತರಲ್ಲಿ ಕಂಡು ಬರುವ ಈ ನಿರ್ಗುಣ ಭಕ್ತಿ ಮರಾಠಿಯ ಕೊಡುಗೆ ಎಂದು ಡಾ॥ ವಿನಯಮೋಹನ ಶರ್ಮ ಅವರು ಹಿಂದಿಗೆ 'ಮರಾಠೀ ಸಂತರ ಕೊಡುಗೆ' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ತಮ್ಮ ಗ್ರಂಥದ ಪೀಠಿಕಾ ಪ್ರಕರಣದಲ್ಲಿ ಅವರು ಹೀಗೆ ಹೇಳಿದ್ದಾರೆ. "ಉತ್ತರ ಭಾರತದ ಜ್ಞಾನಾಶ್ರಯೀ ಶಾಖೆಯ ಹಿಂದೀ ಸಂತರು 'ಯಾವ ನಿರ್ಗುಣಧಾರೆ'ಯಿಂದ ಜನಮನ ವನ್ನು ತಣಿಸಿದರೋ ಅವರ ಮೂಲ ಸೆಲೆ ಮರಾಠೀ ಸಂತ್ ನಾಮದೇವನ ಹಿಂದೀ ಪದ ಗಳಲ್ಲಿ ಹುದುಗಿದೆ. ನಾಮದೇವನಿಗೂ ಹಿಂದೆ ಉತ್ತರಕಾಂಡ ಮತ್ತು ದಕ್ಷಿಣಾಪಥ ಗಳಲ್ಲಿ ಸಿದ್ಧರು (ಬೌದ್ಧ) ನಾಥರು (ನವನಾಥರು ನಿರ್ಗುಣ ಮತವನ್ನೇನೋ ಪ್ರಚಾರ ಮಾಡಿದ್ದರು. ಆದರೆ ಅದರಲ್ಲಿ ಹೃದಯವನ್ನು ಮುಗ್ಧಗೊಳಿಸುವ ರಾಗರಸವಿಯಿರಲಿಲ್ಲ. ಅದು ಕೇವಲ ಶುಷ್ಕಜ್ಞಾನವಾಗಿತ್ತು. ಮೊದಲು ವಿಠೋಬನ ಮೂರ್ತಿಯ ಉಪಾಸಕ ಅಧ್ಯಕ್ಷನಾಗಿದ್ದ ನಾಮದೇವ ಜ್ಞಾನೇಶ್ವರ ಮತ್ತು ಆತನ ತಂಗಿ ಮುಕ್ತಾಭಾಯಿಯ ಪ್ರೇರಣೆಯಿಂದ ನಾಥಪಂಥದ ವಿಸೋಬಾ ಖೇಚರನ ಶಿಷ್ಯನಾಗಿ 'ನಿರ್ಗುಣಪಂಥಿ' ಯಾದನು. ಆದರೆ ಆತನ ಹೃದಯದ ಮೇಲೆ ಅಂಕಿತವಾಗಿದ್ದ ವಿಟ್ಠಲನ ಪ್ರತಿಮೆ ಜ್ಞಾನದಿಂದ ಆವೃತ್ತವಾಗಲಿಲ್ಲ. ಆದರಲ್ಲಿ ಇಷ್ಟು ಮಾತ್ರ ಮಾರ್ಪಾಟಾಯಿತು. ಮೊದಲು ಚಂದ್ರಭಾಗ ನದಿಯ ದಂಡೆಯ ಮೇಲಿನ ಪಂಡರಪುರದ ದೇವಾಲಯದಲ್ಲಿ ಮಾತ್ರ ಕಾಣುತ್ತಿದ್ದ ವಿಟ್ಠಲ ಈಗ ಅವನಿಗೆ ಇತ್ತ ಅತ್ತ ಎತ್ತೆತ್ತಲೂ ಕಾಣ ತೊಡ ಗಿದ ಮತ್ತು ವಿಟ್ಠಲನಿಲ್ಲದೆ ಜಗತ್ತಿಲ್ಲ ಎನ್ನಿಸತೊಡಗಿತು.

ಆತನ ಈ ಜ್ಞಾನ ಸಮನ್ವಿತ ರಾಗಭಾವನೆಯನ್ನು 'ನಿರ್ಗುಣಭಕ್ತಿ' ಎಂದು ಕರೆಯಬಹುದು. ಇದನ್ನು ಆತ ತನ್ನ ಹಿಂದೀ ಪದಗಳ ಮೂಲಕ ಉತ್ತರ ಭಾರತ ದಲ್ಲಿ ಸಂಚರಿಸಿ ತನ್ನ ತರುವಾಯ ಬಂದ ನಿರ್ಗುಣ ಸಂತರ ಮಾರ್ಗವನ್ನು ಪ್ರಶಸ್ತಿ ಗೊಳಿಸಿದ.........ಭಕ್ತಿ ಮತ್ತು ಕೇವಲಾದ್ವೈತದಲ್ಲಿ ವಿರೋಧವಿಲ್ಲವೆಂಬುದನ್ನು ಮರಾಠೀ ಸಂತರು ತಮ್ಮ ವಾಣಿಯಿಂದ ಸಿದ್ಧಪಡಿಸಿದಾರೆ.....ಮರಾಠೀ ಸಂತರು ನಿರ್ಗುಣ ಸಗುಣ ದ್ವೈತಾದ್ವೈತದಿಂದ ದೂರರು. *

ಉತ್ತರ ಭಾರತದ ಸಂತ ಸಂಪ್ರದಾಯದ ವೈಶಿಷ್ಟ್ಯಗಳನ್ನು ಶ್ರೀ ಪರಶುರಾಮ ಚತುರ್ವೇದಿಯವರು ತಮ್ಮ 'ಉತ್ತರ ಭಾರತದ ಸಂತ ಪರಂಪರೆ' ಎಂಬ ಗ್ರಂಥದಲ್ಲಿ ಹೀಗೆ ಕ್ರೋಢೀಕರಿಸಿದ್ದಾರೆ.

೧. ಪ್ರತ್ಯಕ್ಷಾನುಭವದಿಂದ ಸತ್ಯಾನ್ವೇಷಣೆ
೨. ಸದ್ಗುರುವಿನ ಮಹತ್ವ ಪ್ರತಿಪಾದನೆ.
೩. ನಾಮಸ್ಮರಣೆಯ ಮಹತ್ವ
೪. ಬಾಹ್ಯಾಡಂಬರದ ವ್ಯರ್ಥತೆ

* ೧ ಹಿಂದೀಕೋ ಮರಾಠೀ ಸಂತೋಂ ಕೀ ದೇನ್–ಡಾ॥ ವಿನಯಮೋಹನ ಶರ್ಮ ಪೀಠಿಕೆ.

ಮಧ್ಯಯುಗದಲ್ಲಿ ಭಾರತಾದ್ಯಂತವೂ ನಡೆದ ಭಕ್ತಿ ಆಂದೋಳನದ ಪ್ರಮುಖ ಸಿದ್ಧಾಂತಗಳನ್ನು ಬೇರೊಬ್ಬ ವಿದ್ವಾಂಸರು ಹೀಗೆ ಗುರುತಿಸಿದ್ದಾರೆ.

೧. ಪ್ರೇಮವೇ ಪರಮಪುರುಷಾರ್ಥ, ಮೋಕ್ಷವಲ್ಲ.

ಪ್ರೇಮಾ ಪುಮಾರ್ಥೋಮಹಾನ್

೨. ಈಶ್ವರೀಯ ಪ್ರೇಮ ಕೌಲೀನ್ಯಕ್ಕಿಂತ ದೊಡ್ಡದು

೩. ಭಕ್ತ ದೇವರಿಗಿಂತ ದೊಡ್ಡವನು.

೪. ಭಕ್ತಿಯಿಲ್ಲದೆ ಶಾಸ್ತ್ರಜ್ಞಾನ ಪಾಂಡಿತ್ಯವೆಲ್ಲ ವ್ಯರ್ಥ

೫. ನಾಮ ರೂಪಕ್ಕಿಂತ ದೊಡ್ಡದು.

ಮಧ್ಯಯುಗದ ಭಕ್ತಿ ಆಂದೋಳನಕ್ಕೆ ಕನ್ನಡನಾಡಿನ ಕೊಡುಗೆ ಏನು ಎಂಬುದನ್ನು ವಿಚಾರ ಮಾಡಬೇಕಾಗಿದೆ.

ಮರಾಠೀಸಂತ ನಾಮದೇವ ಹಿಂದಿಯಲ್ಲೂ ಪದರಚನೆ ಮಾಡಿ ನಿರ್ಗುಣ ಪಂಥ ವನ್ನು ಪ್ರಶಸ್ತಗೊಳಿಸಿದ ಎಂಬುದನ್ನು ನಾವು ಮೇಲೆ ನೋಡಿದೆವು. ಉತ್ತರಭಾರತದ ಸಂತ ಸಾರ್ವಭೌಮ ಕಬೀರ ಮುಂದಿನ ಸಂತರಿಗೆಲ್ಲಾ ಗಣಿಯಾಗಿರುವಂತೆ ತನ್ನ ಹಿಂದಿನ ಸಂತರಾದ ಜಯದೇವ, ನಾಮದೇವ ಮೊದಲಾದವರಿಗೆ ಋಣಿಯೂ ಆಗಿದ್ದಾನೆ. ಜಯದೇವ ನಾಮದೇವರು ಆದರ್ಶ ಸಂತರೆಂದು ಭಕ್ತಿಯಿಂದ ಅವರನ್ನು ಸ್ಮರಿಸುತ್ತಾನೆ.

"ಗುರುಪರಸಾದೀ ಜೈದೇವ ನಾಮಾ ।
ಭಗತಿ ಕೇ ಪ್ರೇಮ ಇನ್ಹಹಿ ಜಾನಾ ॥

—ಕಬೀರ ಗ್ರಂಥಾವಳಿ ಪು. ೩೨೮

ಕಬೀರ ಸ್ತುತನಾದ ಜಯದೇವ 'ಗೀತಗೋವಿಂದ'ಕಾರನಾದ ಜಯದೇವನೆಂದು ಅಭಿಪ್ರಾಯ. ನಾಮದೇವನ ಪ್ರಭಾವವನ್ನು ಕಬೀರ ಈ ರೀತಿ ಒಪ್ಪಿಕೊಂಡಿದ್ದಾನೆ.

ಕಬೀರ ಬಾಳಿ ಬದುಕಿದ್ದುದು ಕಾಶಿಯಲ್ಲಿ. ಆಗ, ಆಗೇನು ಈಗಲೂ ಕಾಶಿ ಹಿಂದೂಗಳ ಮೋಕ್ಷಧಾಮ, ಜ್ಞಾನಪೀಠ. ತೀರ್ಥಕ್ಷೇತ್ರಗಳಲ್ಲಿ ನಂಬಿಕೆಯಿಲ್ಲದ ವೀರಶೈವರು ಜ್ಞಾನಾರ್ಜನೆಗಾಗಿ ಮತಪ್ರಚಾರಕ್ಕಾಗಿಯಾದರೂ ಅಲ್ಲಿಗೆ ಹೋಗಿದ್ದಿರಬಹುದು. ಕಾಶಿಯಲ್ಲಿರುವ ಜಂಗಮವಾಡೀ ಮಠ, ವೀರಶೈವರು ಸಾಕಷ್ಟು ಹಿಂದೆಯೆ ಅಲ್ಲಿಗೆ ಹೋಗಿ ನೆಲಸಿದ್ದರೆನ್ನುವುದಕ್ಕೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲ ಕಬೀರನ ಕಾಲ (೧೫ನೆಯ ಶತಮಾನ) ದಲ್ಲೇ ಕೆಲವರು ವೀರಶೈವರು ಕಾಶಿಯಲ್ಲಿದ್ದರೆನ್ನುವುದಕ್ಕೆ ಕಬೀರನ ವಾಣಿಯಲ್ಲೇ ಆಧಾರಗಳು ದೊರೆಯುತ್ತವೆ. ತನ್ನ ಕಾಲದಲ್ಲಿದ್ದ ವಿವಿಧ ಸಂಪ್ರದಾಯಗಳನ್ನು ಕುರಿತು ಕಬೀರ ಹೀಗೆ ಹೇಳುತ್ತಾನೆ.

"ದಸ್ ಸಮಸೀ ಬಾರಹ್ ಜೋಗೀ ಚೌದಹ್ ಶೇಖ್ ಬಖಾನ್ ।
ಅಠಾರಹ್ ಬ್ರಾಹ್ಮಣ ಅಠಾರಹ್ ಜಂಗಮು ಚುವಿಸ್‌ಶೇ ಷಹಾಜಾನ್ ॥
"ಇಕ ಜಂಗಮು ಇಕ ಜಟಾಧರ, ಇಕ ಅಂಗ ವಿಭೂತಿ ಕರೈ ಅಪಾರ ।
ಇಕ ಮುಸಿಯರ್ ಇಕ್ ಪುಸಹ್ನ್ಲೀನ, ಐಸೈಂ ಹೋತ ಹೋತ ಜಗಜಾತ್ ಖೀನ ॥

ಇಕ ಆರಾದೈ ಸಕತಿ ಸೀವ, ಇಕ ಪಡದೇದೇದೇ ಜೀವ ।
ಇಕ ಕುಲದೇವ್ಯಾಂಕೋ ಜಪಹಿಜಾಙ, ತ್ರಿಭುವನ ಪತಿ ಭೂಲೇತ್ರಿ ವಿಧತಾಪ॥

ಮೇಲಿನ ಪಂಕ್ತಿಗಳಲ್ಲಿ 'ಜಂಗಮು' ಎಂಬ ಶಬ್ದ ವೀರಶೈವ ಸನ್ಯಾಸಿಯನ್ನೇ ಕುರಿತದ್ದಾಗಿದೆ. 'ಇಕ್ ಆರಾಧೈ ಸಕತೀಸೀವ್' ಎಂಬ ಮಾತುಗಳು 'ಶಕಿ ವಿಶಿಷ್ಟಾದ್ವೈತ' ವನ್ನು ಕುರಿತದ್ದಿರಬೇಕು. ಆದರೆ ಇದಕ್ಕಿಂತಲೂ ಹೆಚ್ಚೇನನ್ನೂ ಕಬೀರ ಹೇಳುವುದಿಲ್ಲ. ಶಕ್ತರನ್ನು ಕಬೀರ ಹಲವುಕಡೆ ಹಳಿದಿದ್ದಾನೆ ಅವರ ಹಿಂಸಾಪರತೆ, ರಕ್ತ ಪಿಪಾಸೆಯನ್ನು ಅಲ್ಲಲ್ಲಿ ಖಂಡಿಸಿದ್ದಾನೆ. ಆದರೆ ಜಂಗಮರ ವಿಷಯವಾಗಿ ಬೇರೇನನ್ನು ಹೇಳುವುದಿಲ್ಲ. ಇದರಿಂದ ಇಷ್ಟು ಮಾತ್ರ ದಿಟ, ಕಬೀರನ ಕಾಲದಲ್ಲಿ ಕಾಶಿಯಲ್ಲಿ ವೀರಶೈವರು ಇದ್ದರು, ಯಾವ ಪೂರ್ವಗ್ರಹವೂ ಇಲ್ಲದೆ ತತ್ವಕಾಮನಾದ ಕಬೀರ ಇತರ ಪಂಥದ ಸಾಧುಸಂತರ ಜೊತೆ ಕಲೆತು ವಿಚಾರವಿನಿಮಯ ಮಾಡಿ ಸತ್ಯಾನ್ವೇಷಣೆ ಮಾಡಿದಂತೆ ವೀರಶೈವ ಸಂತರನ್ನೂ ಸಂಧಿಸಿದ್ದಿರಬೇಕು. ಈಬಗ್ಗೆ ಇನ್ನೂ ಹೆಚ್ಚು ಸಂಶೋಧನೆ ನಡೆಯಬೇಕು. ಆದರೆ ಇಷ್ಟು ಮಾತ್ರ ನಿಜ; ಕಬೀರನ ವಾಣಿ ಮತ್ತು ಬಸವಣ್ಣನವರ ವಚನಗಳಲ್ಲಿ ಕೆಲವು ಕಡೆ ಅದ್ಭುತ ಸಾಮ್ಯವನ್ನು ವಿಚಾರಸಂವಾದವನ್ನು ಕಾಣಬಹುದು. ಇದನ್ನು ಮುಂದೆಚರ್ಚಿಸೋಣ.

ಈಗ ನೇರವಾಗಿ ವೀರಶೈವ ಪ್ರಭಾವವನ್ನು ಕಾಣುವ ಸಂತರನ್ನು ಮೊದಲು ನೋಡೋಣ. ವೀರಶೈವರ ಸೃಷ್ಟಿವಿಕಾಸ ಕ್ರಮದ ಪ್ರಭಾವ ಕೆಲವು ಸಂತರಲ್ಲಿ ಕಾಣಬಹುದು. ಸಂತ ಸುಂದರದಾಸ ಐಕ್ಯಭಾವವನ್ನು ವರ್ಣಿಸುವಾಗ ವೀರಶೈವರ ದೃಷ್ಟಾಂತವನ್ನೇ ಉದಾಹರಿಸಿದ್ದಾನೆ. ಘಟಾಕಾಶ ಮತ್ತು ಮಹಾಕಾಶದ ಮಿಲನವನ್ನು ಕೂಡ ಹಾಗೇ ಎತ್ತಿ ಕೊಟ್ಟಿದ್ದಾನೆ :—

ದೇಹ್ ಕೋ ಸಂಜೋಗ ಪಾಯಿ, ಜೀವ ಐಸೋನಾಮ ಭಯೋ ॥
ಘಟ್‌ಕೇ ಸಂಜೋಗ ಘಟಾಕಾಸ ಹೀ ಕಹಾಯೋ ಹೈ ।
ಈಸ್ವರ್ ಸಕಲ ವಿರಾಟ್ ಮೇ ವಿರಾಜಮಾನ್ ।
ಮಠ್‌ಕೇ ಸಂಯೋಗ ಮಠಾಕಾಸ್ ನಾಮು ಪಾಯೀ ಹೈವ ॥
ಮಹಾಕಾಸ್ ಮಹಿಸಬ್, ಘಟ ಮಠ ದೇಬಿಯಃ ।
ಬಾಹಿರ್ ಭೀತರ್-ಏಕ್, ಗಗನ ಸಮಾಯೋ ಹೈ ।
ತೈಸೇ ಹೀ ಸುಂದರ ಬ್ರಹ್ಮ ಈಶ್ವರ ಅನೇಕಜೀವ ।

ತ್ರಿವಿಧ ಉಪಾಧಿ ಭೇದ, ಗ್ರಂಥಮೇ ಗಾಯೋ ಹೈ ‖ [1]

ದೇಹದ ಸಂಯೋಗದಿಂದ ಈ ಜೀವಕ್ಕೆ ಜೀವ ಎಂಬ ಹೆಸರು ಬಂದಿದೆ ; ಘಟದ ಸಂಯೋಗದಿಂದ ಆಕಾಶ ಘಟಾಕಾಶ ಎನ್ನಿಸಿಕೊಳ್ಳುವಂತೆ, ಈಶ್ವರ ಎಲ್ಲ ವಸ್ತುಗಳಲ್ಲೂ ವಿರಾಜಮಾನನಾಗಿದ್ದಾನೆ. ಮಠದ ಸಂಯೋಗದಿಂದ ಆಕಾಶ ಮಠಾಕಾಶ ಎನ್ನಿಸಿಕೊಳ್ಳುವಂತೆ ಮಹಾಕಾಶದಲ್ಲೇ ಘಟ ಮಠ ಎಲ್ಲವೂ ಇವೆ. ಒಳಗೆ ಹೊರಗೆ ಎಲ್ಲೆಡೆಯಲ್ಲೂ ಒಂದೇ ಆಕಾಶ ವ್ಯಾಪ್ತವಾಗಿದೆಯಲ್ಲವೆ ? ಇದೇ ರೀತಿ ಎಲೈ ಸುಂದರದಾಸನೆ, ಬ್ರಹ್ಮ ಈಶ್ವರ, ಜೀವ ಅನೇಕ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ತ್ರಿವಿಧ ಉಪಾಧಿಗಳಿಗೆ ಈ ಭೇದ ಎಂದು ಗ್ರಂಥಗಳಲ್ಲಿ ಹೇಳಿದೆ.

ಕಾಯವನ್ನು ವೀಣೆಗೆ ಹೋಲಿಸುವ ಬಸವಣ್ಣನವರ ಸುಂದರವಾದ ವಚನದ ಭಾವ ಸಂವಾದವನ್ನು ಕಬೀರನ ವಾಣಿಯಲ್ಲಿ ಕಾಣಬಹುದು:—

ಎನ್ನ ಕಾಯುವ ದಂಡಿಗೆಯ ಮಾಡಯ್ಯಾ ;
ಎನ್ನ ಶಿರವ ಸೋರೆಯ ಮಾಡಯ್ಯ ;
ಎನ್ನ ನರವ ತಂತಿಯ ಮಾಡಯ್ಯಾ ;
ಎನ್ನ ಬೆರಳ ಕಡ್ಡಿಯ ಮಾಡಯ್ಯಾ ;
ಬತ್ತೀಸ ರಾಗವ ಹಾಡಯ್ಯ, ಉರದಲೊತ್ತಿ ಬಾರಿಸು, ಕೂಡಲಸಂಗಮದೇವಾ

ಕಬೀರ :—

ಸಬ್ ರಗ್ ತಂತ್ ರಬಾಬ್ ತನ್, ವಿರಹ ಬಜಾವೈ ನಿತ್ತ ।
ಔರ್ ನಕೋ ಈ ಸುಗಿಸಕ್ಕೈ, ಕೈ ಸಾಯೀ ಗೈ ಚಿತ್ತ ‖

—ಕಬೀರಸಾಬೀ-ವಿರಹಕೋಅಂಗ್

ಎಲ್ಲ ಪಂಥಗಳಲ್ಲೂ ಗುರುವಿಗೆ ಸಾರ್ವಭೌಮ ಮಹತ್ವವಿದೆ. ಕಬೀರ ನಮ್ಮ ಗುರುದೇವರಿಗಿಂತ ದೊಡ್ಡವನು, ಗುರುಗೋವಿಂದು ಇಬ್ಬರೂ ಒಂದು ಜೊತೆಯಾಗಿ ನಿಂತಾಗ ಮೊದಲು ಗುರುವಿಗೆ ಮಣಿಯುತ್ತೇನೆ ಅನಂತರ ಗೋವಿಂದನಿಗೆ ಎನ್ನುತ್ತಾನೆ. ಬ್ರಹ್ಮಾಂಡವೆಲ್ಲ ಪ್ರಭುವಿನಲ್ಲಿ ಅಡಗಿದೆ, ಪ್ರಭು ಗುರುವಿನ ಹೃದಯದಲ್ಲಿ ಅಡಗಿದ್ದಾನೆ.

ನನ್ನನ್ನು ಗುರುವಿನ ಚಮ್ಮಾವಿಗೆಯನ್ನಾಗಿ ಮಾಡು ಎಂಬ ಬಸವಣ್ಣನವರ ಈ ವಚನಕ್ಕೂ ಕಬೀರನ ಉಕ್ತಿಗೂ ಅದ್ಭುತ ಸಾಮ್ಯವಿದೆ:—

ಕಾಗೆ ವಿಟ್ಟಿಸುವ ಹೊನ್ನ ಕಳಸವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ :
ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ
ಕೂಡಲ ಸಂಗಮದೇವಾ,
ನಿಮ್ಮ ಸೆರಗೊಡ್ಡಿ ಬೇಡುವಿದೊಂದೇ ವರವ ಕರುಣಿಸಯ್ಯ

1 ಸುಂದರ ವಿಲಾಸ್. ಪು.೧೦೬

ಗಾಂಠೀದಾಮ್‌ನ ಬಾಂಧ ಈ ನಹಿಂ ನಾರೀಸೋ ನೇಹ್ ।
ಕಹ್ ಕಬೀರತಾ ಸಾಧಾಕೀ ಹಮ್ ಚರನನಕೀ ಖೇಹ್

ಕಾಮಿನೀ ಕಾಂಚನವನೊಲ್ಲದವನೇ ಸಾಧು. ಇಂಥ ಸಂತನ ಚರಣಧೂಳಿ, ಹಾವುಗೆ ನಾನು. ಸಂತನ ಮಹಿಮೆಯನ್ನು ತುಲಸೀದಾಸರು ಹೀಗೆ ಹೇಳಿದ್ದಾರೆ. "ಸಂತ ಭಗವಂತ ನಿರಂತರ ಅಂತರ ನಾಹಿಂ"-ವಿನಯ ಪತ್ರಿಕಾ ಗುರುದೇವರಿಗಿಂತ ದೊಡ್ಡವನು,ಎಂಬ ಭಾವ ಉಪನಿಷತ್ತುಗಳಲಿಲ್ಲ. ಆದ್ದರಿಂದ ಇದು ಶೈವ ಧರ್ಮದ ಪ್ರಭಾವ ಎಂದು ಕೆಲ ವಿದ್ವಾಂಸರ ಅಭಿಪ್ರಾಯ ಹಾಗದರೆ ಅದು ವೀರಶೈವದ ಪ್ರಭಾವವಿರಬೇಕು.

ವೀರಶೈವ ಪಂಥದಲ್ಲಿ ಕಾಯಕಕ್ಕೆ ಸಂದಿರುವ ಬೆಲೆ ಪ್ರಪಂಚದ ಬೇರಾವ ಧರ್ಮ ಪಂಥದಲ್ಲೂ ಸಂದಿಲ್ಲ. ಅದುಮನುಷ್ಯನನ್ನು ಭಿಕ್ಷುಕನನ್ನಾಗಿ ಮಾಡದೆ ಕರ್ಮ ವೀರನನ್ನಾಗಿ ಮಾಡಿತು. ಈ ರೀತಿ ಕಾಯಕದ ಮಹತ್ವ ವಿಶ್ವಧರ್ಮಕ್ಕೆ ವೀರಶೈವದ ಕೊಡುಗೆ ಎನ್ನ ಬಹುದು. ಇದರ ಪ್ರಭಾವ ಕಬೀರನೇ ಮೊದಲಾದ ಎಲ್ಲ ಔತ್ತರೇಯ ಸಂತರ ಮೇಲೂ ಕಂಡು ಬರುತ್ತದೆ. ನೇಕಾರನಾದ ಕಬೀರ, ಚಮ್ಮರನಾದ ರೈದಾಸ, ಇವರೆಲ್ಲ ತಮ್ಮ ಕಾಯಕವನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. ಅಷ್ಟೇ ಅಲ್ಲ ತಮ್ಮ ಆಧ್ಯಾತ್ಮಿಕ ಅನುಭೂತಿಗಳನ್ನು ತಮ್ಮ ಕಾಯಕದ ರೂಪಕದಲ್ಲಿ ಮನೋಜ್ಞ ವಾಗಿ ಬಣ್ಣಿಸಿದ್ದಾರೆ. ಕಬೀರನೇ ಮೊದಲಾದ ಸಂತರು ಭಿಕ್ಷೆಬೇಡುವರನ್ನು ಜರಿದು ಅವಕ್ಕಿಂತ ಸಾಯುವುದೇ ಲೇಸೆಂದಿದ್ದಾರೆ.

ಮಾಂಗನ ಮರನ ಸಮಾನ ಹೈ ಮತ್ ಮಾಂಗೋಭಾಯಿ ।
ಉನಕೇ ಪಹಲೇ ಮೇಮುಯೇ ಜಿನ್ಸೇ ಮುಖಸೇ ನಿಕಸತನಾಯಿ ॥
ಓಡಲಾಗದು ಲಿಂಕನು, ಬೇಡಲಾಗದು ಭಕ್ತನು,
ಅನುಮಿಗೆ ಹಾರೆನು, ಮಾನವರ ಬೇಡೆನು,-ಬಸವಣ್ಣ.

ವೀರಶೈವರಂತೆ ಔತ್ತರೇಯ ಸಂತರಿಗೂ ತೀರ್ಥಕ್ಷೇತ್ರಗಳಲ್ಲಿ ನಂಬಿಕೆಯಿಲ್ಲ.

ಭಕ್ತ ನಿರ್ದ ಠಾವೇ ದೇವಲೋಕ ;
ಭಕ್ತನಂಗಣವೇ ವಾರಣಾಸಿ ;
ಕಾಯವೇ ಕೈಲಾಸ !
ಇದು ಸತ್ಯ ಕೂಡಲ ಸಂಗಮದೇವಾ.

ಇವನ್ನೇ ಕಬೀರ ಹೀಗೆ ಹೇಳುತ್ತಾನೆ :

ಮನ್ ಮಥುರಾ, ದಿಲ್ ದ್ವಾರಿಕಾ, ಕಾಯಾ ಕಾಶೀ ಜನರೆ ।
ದಸವಾಂದ್ವಾರ್ ದೇಹುರಾ, ತಾಮೋಜ್ಯೋತಿ ಪಿಛಾ ॥

ಮನವೇ ಮಥುರೆ, ಮನವೇ ದ್ವಾರಿಕೆ, ಕಾಯವೇ ಕಾಶಿ ಎಂದು ಅರಿ. ದೇಹದ ದಶಮ ದ್ವಾರದಲ್ಲಿರುವ ಜ್ಯೋತಿಯನ್ನು ಗುರುತಿಸು.

ಅರೂಪ ವಿಹಾರಿಯಾದ ಪ್ರಭುವಿನ ಅದ್ವೈತ್ ಭಕ್ತಿ ಬಸವ, ಕಬೀರರಲ್ಲಿ ಎಷ್ಟು ಸುಂದರವಾಗಿ ಮಧುರರಸ ಮಂಡಿತವಾಗಿ ಮೂಡಿದೆ ಎಂಬುದನ್ನು ಈ ಕೆಳಗಣ ಹೋಲಿಕೆಯಿಂದ ನೋಡಬಹುದು :

ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ :
ನಮ್ಮ ನಲ್ಲ ಸುಳಿಯಲಿಲ್ಲ ;
ಸುಳಿದು ಸಿಂಗಾರವ ಮಾಡಲಿಲ್ಲ ।
ಕೂಡಲ ಸಂಗಮ ದೇವನು ತನ್ನೊಳಗೆ ಬೈಚಿಟ್ಟನಾಗಿ-

ಪ್ರೀತಮ್ ಕೋ ಪತಿಯಾಂ ಲಿಖೂಂ, ಜೋ ಕಹುಂ ಹೋಯ್ ವಿದೇಸ್ ತನ್ ಮೇ ಮನ್ ಮೇ ನೈನ್ ಮೇ ತಾ ಕೋಕಹಾ ಸಂದೇಶ್ ನನ್ನ ನಲ್ಲ ದೇಶಾಂತರ ದಲ್ಲಿದ್ದರೆ ಅವನಿಗೆ, ಕಾಗದ ಬರೆಯ ಬಲ್ಲೆ, ಆದರೆ ಅವನು ನನ್ನ ತನುವಿನಲ್ಲಿ ಮನ ದಲ್ಲಿ, ಕಂಗಳಲ್ಲಿ ನೆಲಸಿದ್ದಾನೆ. ಅವನಿಗೆ ರಥ ಓಲೆ ಸಂದೇಶ ಸಂತ ಸಾಹಿತ್ಯದಲ್ಲಿ ಭಕ್ತಿ ಸತ್ಸಂಗ ಮುಕ್ತಿಗಿಂತ ಶ್ರೇಷ್ಠ ಎಂಬ ನಂಬಿಕೆ ಇದೆ. ಔತ್ತಾರೇಯ ಸಂತ ಪಲ್ಟೂವಿನ ಈ ಕೆಳಗಣ ಸಾಲುಗಳಲ್ಲಿ ಈ ಭಾವನೆ ತುಂಬ ಸುಂದರವಾಗಿ ವ್ಯಂಜಿತವಾಗಿದೆ ;

ಸಂತನ ಚಾಹೈಂ ಮುಕ್ತಿಕೋ ನಹಿ ಪದಾರಥಚಾರ್ ।
ನಹೀ ಪದಾರಥಚಾರ್ ಮುಕ್ತಿ ಸಂತನ ಕೀ ಚೇರೀ ।
ಋದ್ಧಿ ಸಿದ್ಧಿ ಪರ್ ಥೂಕೈ ಸ್ವರ್ಗಕೀ ಆಸ್‌ನ ಹೇರೀ ॥
ತೀರಥ ಕರಹಿಂನ ವರ್ತನಹಿಂ ಕಮ ಮನಮೇ ಇಚ್ಛಾ ।
ಪುನ್ನ ತೇಜ ಪರತಾಪ ಸಂತಕೋ ಲಗೈ ಅನಿಚ್ಛಾ ॥
ನಾಚಾಹೈ ವೈಕುಂಠ ನ ಆವಾಗಮುನ ನಿವಾರಾ ।
ಸಾತ್ ಸ್ವರ್ಗ ಅಪವರ್ಗ ಮಿಚ್ಛ ಸಮತಾಹಿ ವಿಚಾರಾ ॥
ಪಲ್ಟೂ ಚಾಹೈ ಹರಿಭಗತಿ ಐಸಾಮತ್ ಹಮಾರ್ ।
ಸಂತನ ಚಾಹೈ ಮುಕ್ತಿ ಕೋನಹಿಂ ಪದಾರಥಚಾರ್ ॥

ಸಂತ ಬಯಸುವಮುಕ್ತಿಯು, ನಾಲ್ಕು ಪುರುಷಾರ್ಥಗಳನೂ ಬಲ್ಲ ಮುಕ್ತಿ ಸಂತನ ದಾಸಿ ಋದ್ಧಿ ಸಿದ್ಧಿಗಳನ್ನು ಒಲ್ಲ, ಸ್ವರ್ಗದ ಆಸೆಯೂ ಅವನಿಗಿಲ್ಲ, ತೀರ್ಥಬೇಡ, ವ್ರತಬೇಡ ಮನ ಜೇರೊಂದ ಬಯಸಗು. ಪುಣ್ಯ, ತೇಜ ಪ್ರತಾಪ ಯಾವುದೂ ಸಂತ ನಿಗೆ ಬೇಡ ವೈಕುಂಠವೂ ಬೇಡ, ಜನ್ಮ ಮೃತ್ಯು ಚಕ್ರದಿಂದ ನಿರ್ವಾಣೆಯೂಬೇಡ, ಸಪ್ತ ಸ್ವರ್ಗ, ಅಪವರ್ಗ ಇವೆಲ್ಲ ಮೆಚ್ಚ ಎಂದು ಅವನ ನಂಬುಗೆ. ಪಲ್ಟೂ ಕೇವಲ ಭಕ್ತಿಯು ಬಯಸುವನಿವನಿಗೆ ಮುಕ್ತಿಬೇಡ, ಪುರುಷಾರ್ಥಬೇಡ.

ಬಸವರಾಜದೇವರಗಳೆಯಲ್ಲಿ ಹರಿಹರನು ಶರಣಜನ ಪ್ರಾಣನಾದ ಬಸವಣ್ಣ ನವರ ಇಂತಹುದೇ ಒಂದು ಚಿತ್ರವನ್ನು ಕೊಡುತ್ತಾನೆ.

ಬಂದು ಸಂಗಂ ಜಂಗಮಾಕಾರದೊಳ್ ನಿಂದು ।
ನಡೆ ಒಸೆವ ಕೈಲಾಸಗಿರಿಗೆ ಪುಷ್ಪಕದೊಳಗೆ
ಪೊಡವಿಯೊಳಗಿರವು ಸಾಲ್ಪುದು ಬಾ ಮಗನೆ ನಿನಗೆ ।
ಎನೆ ಕೇಳ್ದು ನಸುನಗುತೆ ನುಡಿದನಾ ಸಂಗಂಗೆ
ಮನಸಿಜಹರಂಗೆ ಗಿರಿಶಂಗೆ ಗಿರಿಜೇಶಂಗೆ
ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ ।
ಪಿಂಗಲೀಯದು ಶರಣ ಗೋಷ್ಠಿ ಕೇಳೆನ್ನುವಂ।
ಶರಣರೊಕ್ಕುದ ಸವಿ ಕೈಲಾಸದೊಳಗುಂಟೆ
ಶರಣ ಸಂಗದ ಸುಖಂ ಕೈಲಾಸದೊಳಗುಂಟೆ ।
ಇಲ್ಲಿಯು ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನೆ ಈಗಳೇ ಕೊಂಡು ಹೋಹುದುಲೇಸು ।–ಬ.ದೇ.ರ.ಪು. ೯೦ ॥
ಇದೇ ಮಾತನ್ನು ಬಸವಣ್ಣನವರಲ್ಲೇ ಕಾಣಬಹುದು.
ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತು ಮಾಡಿ ಸಲಹಿವ ಸುಖವು
ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದಂತುಟಲ್ಲಾ-
ಕೇಳಿರಯ್ಯ, ಕೂಡಲ ಸಂಗನ ಶರಣರು
ನಮ್ಮ ಒಕ್ಕುದ ಸಿಕ್ಕಿಸಲಹಿದ ಸುಖವು !– ಬ.ರ. ೪೭೪

ಮೇಲೆ ಉದಾಹರಿಸಿದ ಗಲನೆಯ ಶತಮಾನದ ಕಟ್ಟುವಿನ ವಾಕ್ಯಗಳು ಬಸವಣ್ಣನವರ ಈ ವಾಣಿಯ ಪ್ರತಿಧ್ವನಿ ಇರುವದನ್ನು ಬೇರೆ ಹೇಳಬೇಕಾಗಿಲ್ಲ.

ಅನುಭಾವವೆಂಬುದು ಅಸಿಧಾರಾವ್ರತ. ಆ ಕಲ್ಪನೆಯಲ್ಲಿ ಬಂದ ಬಸವ ಕಬೀರರ ಹೃದಯ ಸಂವಾದವನ್ನು ನೋಡಬಹುದು.

ಶಿವಾಚಾರವೆಂಬುದು ಬಾಳ ಬಾಯಧಾರೆ.
ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು,
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತನಾಗಿರಬೇಕು !
ಬಿಟ್ಟಿ ಬೇರಾದರೆ ಮೆಚ್ಚುವನೇ ನಮ್ಮ ಕೂಡಲ ಸಂಗಮದೇವ ?
ಬ. ವ. ೭೮೯

ಅಗಿನಿ ಆಂಚ್ ಸಹನಾ ಸುಗಮ, ಸುಗಮ ಖಡ್ಗ ಕೀಧಾರ್ ।
ನೇಹ ನಿಭಾವನ ಏಕರಸ್, ಮಹಾ ಕಠಿನ ವ್ಯೋಹಾರ್ ॥
ಕಂದೋಹಾನಲಿ ೧೩೭

ಬೆಂಕಿಯ ತಾಪ ಸಹಿಸುವ್ವದು ಸುಲಭ, ಬಾಳಬಾಯಧಾರೆಯನ್ನು ಸಹಿಸವುದೂ ಕಷ್ಟವಲ್ಲ, ಆದರೆ ಏಕರಸವಾಗಿ ಪ್ರೇತುವನ್ನು ಪಾಲಿಸುವುದು ಅತ್ಯಂತ ಕಠಿಣ ವ್ಯವಹಾರ.

ವರ್ಣಾಶ್ರಮ ವ್ಯವಸ್ಥೆಯನ್ನು ಬಸವಣ್ಣನವರಷ್ಟು ಕಟುವಾಗಿ ಬೇರಾರೂ ಟೀಕಿಸಿಲ್ಲ. ಈ ವರ್ಣ ವಿರೋಧ ಉತ್ತರಾ ಪಥದಲ್ಲಿ ಸಂತರಲ್ಲೂ ಕಾಣುತ್ತದೆ. ಕಬೀರನೂ ಇದನ್ನೇ ಹೇಳಿದ್ದಾನೆ.

ಜಾತಿ ಪಾಂತಿ ಪೂಛೈ ನಹಿ ಕೋಯ್, ಹರಿಕಾಜೋ ಭಜೈಸೋಹಾರಿಕಾ ಹೋಯ್ ||

ಜಾತಿ ಪಂಥವನು ಕೇಳಬೇಡಿ, ಹರಿಯ ಭಜಿಸುವನು ಹರಿಯಾಗುವ.

ಜಾತಿ ನಪೂಛೋ ಸಾಧುಕೀ ಪೂಛ್ ಲೀಜಿಯೇಲ್ಲಾನ್ |

ಮೋಲ್ ಕರೋ ತಲವಾರ್ ಕಾ, ಪಡಾರಹನೇ ದೋ ಮ್ಯಾನ್ |

ಸಾಧುವಿನ ಜಾತಿಯಾವುದೆಂದು ಕೇಳಬೇಡ, ಜ್ಞಾನವನ್ನು ವಿಚಾರಿಸು ಕತ್ತಿಯನ್ನು ಕೊಂಡುಕೋ ಒರೆಯನ್ನು ಕಟ್ಟಿಕೊಂಡೇನು ಮಾಡುವಿ?

ವರ್ಗಹೀನ ಸಮಾಜದ ಸ್ಥಾಪನೆ, ಅಧ್ಯಾತ್ಮಿಕ ಸಾಮ್ಯವಾದ ಮೊದಲಾದ ಬಸವಣ್ಣನವರ ಕನಸಿನ ಪ್ರತಿಬಿಂಬ ಉತ್ತರಾ ಪಥದ ಎಲ್ಲ ಸಂತರಲ್ಲೂ ಕಂಡು ಬರುತ್ತದೆ.

ವೀರಶೈವ ಧರ್ಮದಲ್ಲಿ ಮುಂದಿನ ಜನ್ಮದಲ್ಲಿ ನಂಬುಗೆ ಇಲ್ಲ. ಇದರ ಪ್ರಭಾವ ದಿಂದಲೋ ಏನೋ ಉತ್ತರಾಪಥದ ಸಂತರಲ್ಲಿ ಯಾರೂ ಮುಂದಿನ ಜನ್ಮದ ಮಾತೆತ್ತಿಲ್ಲ. ಅಷ್ಟೇ ಅಲ್ಲ. ಔತ್ತರೇಯ ಸಂತರು ಯಾವ ನಾಕ ನರಕಗಳಲ್ಲೂ ನಂಬಿಕೆ ಯನ್ನಿಟ್ಟಿಲ್ಲ. ಸತ್ತ ಮೇಲೆ ದೊರೆಯುವ ಸರ್ಗದ ಆಶೆಗಿಂತ ಇಹಲೋಕವನ್ನೇ ಸದಾಚಾರದಿಂದ, ಸತ್ಸಂಗದಿಂದ, ಸ್ವಾನುಭೂತಿಯಿಂದ ಸ್ವರ್ಗಧಾಮವನ್ನಾಗಿ ಮಾಡುವ ಹಂಬಲ ಅವರದು. ಈಶ್ವರಾನುಭೂತಿಯಲ್ಲಿ ಮಗ್ನನಾದ ವ್ಯಕ್ತಿಯ ಆನಂದದ ಮುಂಡೆ ಸ್ವರ್ಗ ಧಾಮವನ್ನಾಗಿ ಮಾಡುವ ಹಂಬಲ ಅವರದು. ಈಶ್ವರಾನು ಭೂತಿಯಲ್ಲಿ ಮಗ್ನನಾದ ವ್ಯಕ್ತಿಯ ಆನಂದದ ಮುಂದೆ ಸ್ವರ್ಗ ಸುಖವನ್ನು ನೀವಾಳಿಸಿ ಬಿಸಾಡಬೇಕು ಎಂಬ ಮಾತನ್ನು ಹಲವು ಸಂತರು ಹೇಳಿದ್ದಾರೆ; ಆಚಾರವೇ ಸ್ವರ್ಗ; ಅನಾಚರವೇ ನರಕ' ಎಂಬ ಬಸವವಾಣಿಯನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ನುಡಿದಂತೆ ನಡೆಯದ, ಮನೋಧರ್ಮ, ಮೂಢರೂಢಿಗಳು, ಅಂಧ ಶ್ರದ್ಧೆಗಳು ಇವುಗಳ ವಿಚಾರದ ವಜ್ರಪ್ರಹಾರ ಮಾಡುವ ದಿಟ್ಟ ಮನೋಧರ್ಮ ಈ ಎಲ್ಲ ಸಂತ ರಲ್ಲೂ ಕಂಡು ಬರುತ್ತದೆ.

ಉತ್ತರಾಪಥದ ಸಂತಸಾಹಿತ್ಯ ಜೀವನದ ಸ್ವೀಕೃತಿಯ ಸಾಹಿತ್ಯ, ಕಾಮಕ್ರೋಧ ಗಳಿಂದ ಕೂಡಿದ ಬದುಕನ್ನು ಇಂದ್ರಿಯ ಸುಖಗಳನ್ನು ತ್ಯಾಗಮಾಡಿ ಕಾಡಿಗೆ ಹೋಗಿ ಎಂದು ಅವರಾರೂ ಹೇಳಲಿಲ್ಲ. ಕಾಮಕ್ರೋದಗಳ ಪರಿಷ್ಕಾರ, ಐಂದ್ರಿಕ ವಾಸನೆಗಳ ಉನ್ನಯನ (sublication) ಅವರಲ್ಲಿ ಕಂಡು ಬರುತ್ತದೆ.

ಪ್ರವೃತ್ತಿಗಳನ್ನು ದಮನ ಮಾಡುವುದೂ ತಪ್ಪು, ಪ್ರವೃತಿಗಳಿಂದ ದಮಿತನಾಗು ವುದೂ ತಪ್ಪು ಎಂದು ಹೇಳಿ ಪ್ರವೃತ್ತಿ ನಿವೃತ್ತಿಗಳ ಕೋಟಿ ದಮನ (extremism)

ವನ್ನು ಅವಲಂಬಿಸದೇ ಸುವರ್ಣ ಮಾಧ್ಯಮವನ್ನು ಸಹಜಮಾರ್ಗವನ್ನು ಅವರು ಅವಲಂಬಿಸಿದರು. ಉತ್ತರಾಪಥದ ಸಂತರಲ್ಲಿ ಬಹುಮಂದಿ ಗೃಹಸ್ಥರು. ಬಸವಣ್ಣನವರ ಈ ಕೆಳಗಣ ವಚನ ಸಹಜಮಾರ್ಗದ ಮನನ ಮಂತ್ರವಾಗಬಲ್ಲದು :

> ಇಂದ್ರಿಯ ನಿಗ್ರಹವಮಾಡಿದರೆ, ಹೊಂದುವುವು ದೋಷಂಗಳು :
> ಮುಂದೆ ಬಂದು ಕಾಡುವುವು ಪಂಚೇಂದ್ರಿಯಂಗಳು !
> ಸತಿಪತಿ–ರತಿಸುಖವ ಬಿಟ್ಟನೇ ಸಿರಿಯಾಳ ಚಂಗಳೆಯರು ?
> ಸತಿಪತಿ-ರತಿಸುಖ-ಭೋಗೋಪಭೋಗ ವಿಲಾಸವ ಬಿಟ್ಟನೇ ಸಿಂಧುಬಲ್ಲಾಳನು?
> ನಿಮ್ಮ ಮುಟ್ಟಿ ಪರಧನ–ಪರಸತಿಗಳುಪಿದರೆ
> ನಿಮ್ಮ ಚರಣಕ್ಕೆ ದೂರ, ಕೂಡಲ ಸಂಗಮದೇವ.

ಔತ್ತರೇಯ ಸಂತ ಸಾಹಿತ್ಯದ ವೈಲಕ್ಷಣ್ಯಗಳನ್ನು ಕುರಿತು ಡಾ. ರಾಮವಿಲಾಸ ಶರ್ಮ ಅವರು ಹೇಳುವ ಈ ಮಾತುಗಳು (ಇಸ್ಲಾಂಗೆ ಸಂಬಂಧಿಸಿದ ಮಾತುಗಳನ್ನು ಬಿಟ್ಟರೆ) ವೀರಶೈವ ಧರ್ಮವನ್ನೇ ಕುರಿತು ಹೇಳಿದಂತಿವೆ :

೧) ಸಂತರು ಲೋಕಧರ್ಮದ ಸಂಸ್ಥಾಪಕರು ಹಿಂದೂಧರ್ಮ ಇಸ್ಲಾಂ ಧರ್ಮಗಳ ಕರ್ಮಕಾಂಡ, ಧರ್ಮಶಾಸ್ತ್ರ, ಕಂದಾಚಾರ ಮತ್ತು ಪೂಜಾರಿಗಳ, ಮೌಲ್ವಿಗಳ ರೀತಿನೀತಿ ಕಟ್ಟು ಕಟ್ಟಳೆಗಳಿಗೆ ವಿರುದ್ಧವಾಗಿ ಈ ಸಂತರು ತಃ ಪ್ರೇಮದ ಆಧಾರದ ಮೇಲೆ ಮುಕ್ತಿ ಈಶ್ವರ ಪ್ರಾಪ್ತಿ, ಮೊದಲಾದವುಗಳನ್ನು ಪ್ರತಿಪಾದಿಸಿದರು,

೨) ಪುರೋಹಿತರ, ಮೌಲ್ವಿಗಳ ಧಾರ್ಮಿಕ ಭಾಷೆಯಾದ ಸಂಸ್ಕೃತ, ಅರಬ್ಬಿಯ ಬದಲಿ ಇವರ ತಮ್ಮ ಲೋಕಧರ್ಮವನ್ನು ಜನವಾಣಿಯಲ್ಲಿ ಪ್ರಚಾರಮಾಡಿದರು.

೩. ದರಬಾರೀಕವಿಗಳ ಲಕ್ಷಣ ಗ್ರಂಥಗಳು, ನಾಯಿಕಾ ಭೇದ ಅಲಂಕಾರವಾದದ ಹಾದಿಯನ್ನು ಬಿಟ್ಟು ಈ ಸಂತರು ಮಾನವನ ವ್ಯಾಪಕವಾದ, ಸಹಜ ಭಾವನೆಗಳನ್ನು ಚಿತ್ರಿಸಿದರು.

೪. ಸಂತ ಸಾಹಿತ್ಯದಲ್ಲಿ ಮಾನವನೆಲ್ಲರ ಸಾಮ್ಯ ಭಾವನೆ ಒಂದು ಮೂಲ ಸೂತ್ರದಂತಿದೆ.

೫. ಸಂತ ಸಾಹಿತ್ಯ ಜೀವನದ ಸ್ವೀಕೃತಿಯ ಸಾಹಿತ್ಯ ಅದರಲ್ಲಿ ಜನತೆಯ ಹಾಸೋಲ್ಲಾಸಗಳಿವೆ, ಕ್ರೋಧವಿದೆ, ಆವೇಶವಿದೆ. ಒಂದು ಸುಖೀ ಸಮ್ರಾಜ್ಯವನ್ನು ಕಟ್ಟಬೇಕೆಂಬ ಹಂಬಲವಿದೆ. ಅದರಲ್ಲಿ ಅನ್ಯಾಯವನ್ನು ಕ್ರಿಯಾತ್ಮಕವಾಗಿ ವಿರೋಧಿಸುವ ವೀರರ ಚಿತ್ರವಿದೆ.

ಮೇಲೆ ತೋರಿಸಿರುವ ಕೆಲವು ಅಂಶಗಳ ಪ್ರಭಾವವಲ್ಲದೇ ಇರಬಹುದು, ಕೇವಲ ವಿಚಾರ ಸಾಮ್ಯವಿದ್ದರೂ ಇರಬಹುದು. ಈ ದಿಶೆಯಲ್ಲಿ ಪಾರಿಸ್ಪರಿಕ ತೌಲನಿಕ

ವ್ಯಾಸಂಗ ಅಗತ್ಯ. ಒಟ್ಟಿನಲ್ಲಿ ನಿರ್ಗುಣ ಭಕ್ತಿ, ಪ್ರವೃತ್ತಿ ನಿವೃತ್ತಿಗಳ ಸಮನ್ವಯ, ಕಾಯಕದ ಮಹತ್ವ ಜನ್ಮಾಂತರದಲ್ಲಿ ನಂಬಿಕೆ ಇಲ್ಲದಿರುವಿಕೆ, ಮುಕ್ತಿಗಿಂತ ಸತ್ಸಂಗ ಹಿರಿಯದು, ಭಕ್ತಿ ಹಿರಿಯದು ಎಂಬಭಾವನೆ, ಉತ್ತರಾ ಪಥದ ಸಂತ ಸಾಹಿತ್ಯಕ್ಕೆ ವೀರಶೈವದ ಕೊಡುಗೆ ಎಂದು ಹೇಳಬಹುದು. ಈ ವಿಚಾರ ಪ್ರಭಾವ ಮರಾಠೀ ಸಂತರ ಮೂಲಕ ಇಲ್ಲವೇ ಕಾಶಿಯಲ್ಲಿ ವೀರಶೈವ ಸಂತರ ನೇರ ಸಂಪರ್ಕದಿಂದಲೂ ಉಂಟಾಗಿರ ಬಹುದು, ಕಾಶಿಯಲ್ಲಿ ಮಾತ್ರವೇ ಅಲ್ಲ ಹದಿನೈದು ಹದಿನಾರನೆಯ ಶತಮಾನಗಳಲ್ಲಿ ಉತ್ತರ ಭಾರತದಲ್ಲಿ ಅಲ್ಲಲ್ಲಿ ವೀರಶೈವ ಸಂತರು ಹಬ್ಬಿಕೊಂಡಿದ್ದರು ಎಂಬುದಕೆ ಸಾಕಷ್ಟು ಆಧಾರಗಳಿವೆ. ಹಿಂದಿಯ ವಿಖ್ಯಾತ ಐತಿಹಾಸಿಕ ಕಾದಂಬರಿಕಾರರಾದ ಶ್ರೀ ವೃಂದಾವನಲಾಲ್ ವರ್ಮ ಅವರು ತಮ್ಮ 'ಮೃಗನಯನಿ' ಎಂಬ ಕಾದಂಬರಿ ಯಲ್ಲಿ ಇಂಥ ವೀರಶೈವ ಸಂತನೊಬ್ಬನ ಪಾತ್ರವನ್ನು ತುಂಬ ಮನೋಜ್ಞವಾಗಿ ಚಿತ್ರಿ ಸಿದ್ದಾರೆ. ಆ ಸಂತ ವಿಜಯ ಜಂಗಮ ಮತ್ತು ವೀರಶೈವ ಮತದ ಬಗೆಗೆ ಶ್ರೀವರ್ಮರು ಹೇಳುವ ಮನನೀಯವಾದ ಮಾತುಗಳನ್ನು ಉದಹರಿಸಿ ಈ ಪ್ರಬಂಧವನ್ನು ಮುಗಿಸು ತ್ತೇವೆ.

"ಕಾದಂಬರಿಯ ಎಲ್ಲ ಪಾತ್ರಗಳೂ-ಕೆಲವನ್ನು ಬಿಟ್ಟರೆ ಐತಿಹಾಸಿಕವೇ. ವಿಜಯ ಜಂಗಮ ಲಿಂಗಾಯಿತ ಮತಸ್ಥ ಗ್ವಾಲಿಯರಿನೊಳಗೆ ತೈಲ ಮಂದಿರ ನಿರ್ಮಿತ ವಾದಂತೆಯೇ ಕರ್ಣಾಟಕದಿಂದ ಒಂದು ವಿಜಯ ಜಂಗಮ ಗ್ವಾಲಿಯರಿನಲ್ಲಿ ನೆಲೆಸಿದ. ಲಿಂಗಾಯಿತ್ ಸಂಪ್ರದಾಯದ 'ಬಸವ ಪುರಾಣ' ಹದಿಮೂರನೆಯ ಶತಮಾನದಲ್ಲಿ ರಚಿತವಾಯಿತು. ಈ ಸಂಪ್ರದಾಯದಲ್ಲಿ ವರ್ಣ ಭೇದವನ್ನು ತಿರಸ್ಕರಿಸಲಾಗಿದೆ. ಶ್ರಮ ಕಾಯಕಕ್ಕೆ ಬಸವೇಶ್ವರರು ಕೊಟ್ಟಿರುವ ಮಹತ್ವವನ್ನು ಕಂಡು ನಾವು ದಂಗು ಬಡಿದವರಂತಾಗುತ್ತೇವೆ. ಜಗತ್ತಿನ ಯಾವ ಮೂಲೆಯಲ್ಲೂ ಆಗ ಶ್ರಮ ಹಾಗೂ ಶ್ರಮಿಕರಿಗೆ ಗೌರವವಿರಲಿಲ್ಲ. ಇದರ ಶ್ರೇಯಸ್ಸು ಲಿಂಗಾಯತ್ ಸಂಪ್ರದಾಯದ ಅಧಿ ಷ್ಠಾತನಿಗೆ ಸಲ್ಲಬೇಕು. ಜೊತೆಗೆ ಅಹಿಂಸೆ, ಸದಾಚಾರ ಮಾದಕ ವಸ್ತು ನಿಷೇಧಗಳಿಗೆ ಕೊಟ್ಟಿರುವ ಮಹತ್ವವನ್ನು ಕಂಡು ವೀರಶೈವ ಧರ್ಮ ಪ್ರವರ್ತಕ ಇಪ್ಪತ್ತನೆಯ ಶತ ಮಾನದವನೋ ಎನ್ನಿಸುತ್ತದೆ.

ವಿಜಯ ಜಂಗಮ ಮಾನಸಿಂಹ ತೋಮರನ (ಗ್ವಾಲಿಯಾರಿನ ರಾಜ) ಮಿತ್ರ ನಾಗಿದ್ದ, ಮಾನಸಿಂಹನ ಮೇಲೆ ಈ ಪ್ರಭಾವ ಬಿದ್ದಿದ್ದರೆ ಆಶ್ಚರ್ಯವೇನೂ ಇಲ್ಲ! ವೃಂದಾವನಲಾಲ್ ವರ್ಮ.

—ಮೃಗನಯನಿ ಮುನ್ನುಡಿ ಪು.IX

# ಜೈನ ಗ್ರಂಥಗಳಲ್ಲಿ ವೀರಶೈವ ಧರ್ಮದ ಸ್ವರೂಪ

—ಸಾಹಿತ್ಯ ರತ್ನ ಶ್ರೀ ಗುರುಸಿದ್ಧ ಶಿವಾಚಾರ್ಯರು,
ಗುರುವಿನ ಪುರ ಮಠ

ಶೈವಧರ್ಮವೇ ಭಾರತದ ಪ್ರಾಚೀನ ಧರ್ಮವೆಂಬುದು ಹರಪ್ಪಾ, ಮೊಹಂಜೋದಾರೋ ಮುಂತಾದ ಕಡೆಗಳಲ್ಲಿ ಇಲ್ಲಿಯವರವಿಗೆ ನಡೆದ ಭೂಗರ್ಭ ಸಂಶೋಧನಗಳಿಂದ ಸಿದ್ಧವಾಗಿದೆ. ವೀರಶೈವ ಮತವು ಶೈವ ಪ್ರಭೇದವೇ ಆದುದರಿಂದ ಅದರ ಪ್ರಾಚೀನತೆಯ ಬಗ್ಗೆ ಶಂಕಿಸಲು ಕಾರಣವೇ ಇಲ್ಲ.

ಬೌದ್ಧರಿಗೂ ವೈದಿಕರಿಗೂ ನಡೆದ ತಿಕ್ಕಾಟದಲ್ಲಿ ವೈದಿಕಾಗ್ರಣಿಗಳಾದ ಶೈವರಿಗೆ ವಿಶೇಷ ಹಾನಿಯೊದಗಿತು. ಬೌದ್ಧರು ತಮ್ಮ ರಾಜಕೀಯ ಅಧಿಕಾರ ಬಲದಿಂದಲೂ ವಿವಿಧ ಉಪಾಯಗಳಿಂದಲೂ ಅನೇಕ ಜನ ಶೈವ, ವೀರಶೈವ ಪಂಡಿತರನ್ನು ತಮ್ಮ ಸಂಪ್ರದಾಯಕ್ಕೆ ಸೇರಿಸಿಕೊಂಡರು. ಈಗಲೂ ಕೆಲ ಸಂಸ್ಕೃತ ಗ್ರಂಥಗಳಲ್ಲಿ ಶಿವಯೋಗಿ ಭಿಕ್ಷು, ಪಶುಪತಿ ಭಿಕ್ಷು-ಮುಂತಾದ ಭಿಕ್ಷುಗಳ ಉಲ್ಲೇಖ ಕಾಣಬಹುದು. ಶೈವ ಸಂಪ್ರದಾಯದ ತಳಹದಿಯನ್ನು ಕಾಣಲು ವೇದಾಗಮಾದಿಗಳನ್ನು ವಿಶೇಷವಾಗಿ ಶರಣು ಹೋಗುವಂತೆ ಅದರ ಬಾಹ್ಯ ರೂಪರೇಖೆಗಳನ್ನು ಕಾಣಲು ಬೌದ್ಧ, ಜೈನ ಗ್ರಂಥಗಳನ್ನು ಪರಿಶೀಲಿಸುವುದೂ ಅತ್ಯಾವಶ್ಯಕವಾಗಿದೆ. ೧೨ನೆಯ ಶತಮಾನದ ಇತ್ತೀಚಿಗೆ ಶೈವರಿಗೂ ಜೈನರಿಗೂ ಧಾರ್ಮಿಕ ತಿಕ್ಕಾಟಗಳು ನಡದೇ ಇದ್ದುವು. ಇದರ ಪರಿಣಾಮವಾಗಿ ಜೈನ ಸಂಪ್ರದಾಯದ ಗ್ರಂಥಗಳಲ್ಲಿ ಶೈವ ಮತದ ಖಂಡನೆಯೂ, ಶೈವಗ್ರಂಥಗಳಲ್ಲಿ ಜೈನ ಮತದ ನಿಂದೆಯೂ ಜರುಗಿರುವುದು ವಿದಿತವೇ ಇದೆ. ವೈಕ್ರಮಿಯ ೮ನೆ ಶತಮಾನದಲ್ಲಿದ್ದ ಶ್ರೀ ಹರಿಭದ್ರ ಸೂರಿಯು ಬರೆದ ಷಡ್ ದರ್ಶನ ಸಮುಚ್ಚಯ ಗ್ರಂಥಕ್ಕೆ ೧೪ನೆಯ ಶತಾಬ್ಧಿಯಲ್ಲಿದ್ದ ಗುಣರತ್ನ ಸೂರಿಯು 'ತರ್ಕ ರಹಸ್ಯ ದೀಪಿಕೆ' (ಬೃಹದ್ವೃತ್ತಿ) ಎಂಬ ವಿಶಾಲವಾದ ಟೀಕೆಯನ್ನು ಬರೆದಿರುವನು. ಅದರಲ್ಲಿ ಆತನು ಸನಾತನ ಧರ್ಮದ ಆಚಾರ್ಯರನ್ನು ಒಟ್ಟಾಗಿ ತೆಗಳುವಾಗ ರೇವಣ ಸಿದ್ಧರ ಹೆಸರನ್ನೂ ತೆಗೆದುಕೊಂಡಿದ್ದಾನೆ.

ಓಂಬೇಕಃ ಕಾರಿಕಾಂ ವೇತ್ತಿ ತಂತ್ರಂ ವೇತ್ತಿ ಪ್ರಭಾಕರಃ।
ವಾಮನಸ್ತೂಭಯಂ ವೇತ್ತಿ ನಕಿಂಚದಪಿ ರೇವಣಃ॥

(ಷಡ್‌ದರ್ಶನ ಸಮುಚ್ಚಯ-ತರ್ಕ ರಹಸ್ಯದೀಪಿಕಾ, ಪು.೨೦)

ಓಂಬೇಕನು ಕಾರಿಕೆಯನ್ನಷ್ಟೇ ಬಲ್ಲ. ಪ್ರಭಾಕರನಿಗೆ ತಂತ್ರದ ಹೊರತಾಗಿ ಮತ್ತೊಂದರ ಜ್ಞಾನವಿಲ್ಲ. ವಾಮನನು ಕಾರಿಕೆ ಮತ್ತು ತಂತ್ರ ಈ ಎರಡನ್ನೇ ತಿಳಿಯುತ್ತಾನೆ. ರೇವಣನಿಗೆ ಏನ್ನು ಗೊತ್ತಿಲ್ಲ. ಈ ಶ್ಲೋಕದ ಅಭಿಪ್ರಾಯ. ಕೆಲವು ಗ್ರಂಥಗಳಲ್ಲಿ "ಉತ್ಪಲಃ ಕಾರಿಕಾಂವೇತ್ತಿ" ಎಂಬ ಪಾಠಾಂತರವಿದೆ. ಇಲ್ಲಿ ಪ್ರಸಿದ್ಧ ಆಚಾರ್ಯರ ಹೆಸರುಗಳಲ್ಲಿ 'ರೇವಣ, ಎಂಬ ಹೆಸರು ಗೃಹೀತವಾಗಿರುವುದ ರಿಂದ ಈ ಹೆಸರಿನ ವ್ಯಕ್ತಿಯು ವೀರಶೈವ ಧರ್ಮ ಪ್ರವರ್ತಕನೂ ಭಾಷ್ಯ ಕರ್ತೃವೂ ಆದ ರೇವಣಸಿದ್ಧನೇ ಎಂಬುದರಲ್ಲಿ ಸಂದೇಹವೇನಿದೆ? ಗುಣರತ್ನ ಸೂರಿಯ ರೇವಣ ನಿಗೆ ಏನ್ನೂಗೊತ್ತಿಲ್ಲ, ಎಂಬ ಮಾತಿನಿಂದ ಶ್ರೀ ರೇವಣಸಿದ್ಧನು ಜಿನಮತವನ್ನು ಸರಿ ಯಾಗಿ ಖಂಡಿಸಿರಬೇಕೆಂದು ಸಹಜವಾಗಿ ಅನುಮಾನ ಮಾಡಬಹುದಾಗಿದೆ. ಮನುಷ್ಯ ತನಗೆ ಯಾರಿಂದ ಹೆಚ್ಚಾಗಿ ಹಾನಿಯೊದಗುತ್ತದೊ ಅಂಥವರನ್ನು ಕಟುವಾಗಿ ಹೀಯಾ ಳಿಸುವುದು ಲೋಕದಲ್ಲಿ ಸಹಜವಾಗಿದೆ.

ಗುಣರತ್ನ ಸೂರಿಯು ಷಡ್‌ದರ್ಶನ ಸಮುಚ್ಚಯಾಂತರ್ಗತವಾದ ನ್ಯಾಯ ದರ್ಶನಕ್ಕೆ ವಿಸ್ತಾರವಾಗಿ ವೃತ್ತಿಯನ್ನು ಬರೆಯುತ್ತ ನೈಯಾಯಿಕರನ್ನು ಶೈವರೆಂದೂ, ವೈಶೇಷಕರನ್ನು ಪಾಶುಪತರೆಂದೂ ಕರೆದಿದ್ದಾರೆ. ಹೀಗೆ ಕರೆದುದರಲ್ಲಿ ಔಚಿತ್ಯವಿದೆ, ತಥ್ಯವಿದೆ. ನ್ಯಾಯ ಶಾಸ್ತ್ರ ಪ್ರವರ್ತಕನೂ ಸುಪ್ರಸಿದ್ಧನೂ ಆದ ಗೌತಮ ಮುನಿಯು ವೀರಶೈವ ನಾಗಿದ್ದನು. ಈ ಮಾತನ್ನು ಜಗದ್ಗುರು ರೇಣುಕರು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿದ್ದಾರೆ.

ಬ್ರಹ್ಮಾ ವಿಷ್ಣ್ವಾದ್ಯಯೋ ದೇವಾ ಮುನಯೋ ಗೌತಮಾದಯಃ।
ಧಾರಯಂತಿ ಸದಾಲಿಂಗಮುತ್ತಮಾಂಗೇ ವಿಶೇಷತಃ॥

ದಾರ್ಶನಿಕ ಚಕ್ರವರ್ತಿಯೆಂದು ಪ್ರಸಿದ್ಧನೂ, ಪ್ರಾಚೀನನೂ, ಕಾಶ್ಮೀರ ವಾಸಿಯೂ, ಪರಮಶೈವನೂ ಆದ ಭಾಸರ್ವಜ್ಞಾಚಾರ್ಯನು 'ನ್ಯಾಯಸಾರ' ಎಂಬ ಸೂತ್ರ ಗ್ರಂಥವನ್ನು ಬರೆದಿದ್ದಾನೆ. ಈ ಗ್ರಂಥದ ಮೇಲೆ ೧೪ನೆಯ ಶತಮಾನದ ಪೂರ್ತಿಗೆ ೧೮ಟೀಕೆಗಳು ಬರೆಯಲ್ಪಟ್ಟಿದ್ದವೆಂದು ಬೃಹದ್ವೃತ್ತಿ ಗ್ರಂಥದಿಂದಲೇ ತಿಳಿದು ಬರುತ್ತಿದೆ. ಹೀಗೆ ಶೈವರೇ ಅನೇಕ ಮಂದಿ ಋಷಿ, ಮುನಿ, ಆಚಾರ್ಯರು ನ್ಯಾಯ ಶಾಸ್ತ್ರದ ಪ್ರವರ್ತಕರಾದುದರಿಂದಲೂ, ತಮ್ಮ ಈಶ್ವರವಾದವನ್ನು ರಕ್ಷಿಸಿಕೊಳ್ಳಲು ಹೆಚ್ಚಾಗಿ ಶೈವರೇ ನ್ಯಾಯಶಾಸ್ತ್ರದಲ್ಲಿ ಪರಿಶ್ರಮಿಸುತ್ತಿದ್ದುದರಿಂದಲೂ ನೈಯಾಯಿ ಕರನ್ನೆಲ್ಲ ಶೈವರೆಂದು ಕರೆದುದರಲ್ಲಿ ಆಶ್ಚರ್ಯವಿಲ್ಲ. ಈ ಶೈವರೇ ಯೋಗಿಗಳೆಂದು ಕರೆ ಯಲ್ಪಡುತ್ತಿದ್ದರು. ಈ ಮಾತು ಗುಣರತ್ನ ಸೂರಿಯ "ಅಥ ನೈಯಾಯಿಕಾನಾಂ

ಯೌಗಾಪರಾಭಿಧಾನಾನಾಂ......." ಎಂಬ ಉಕ್ತಿಯಿಂದ ಸ್ಪಷ್ಟವಾಗಿದೆ. ವರ್ತಮಾನಕಾಲದಲ್ಲಿಯೂ ವೀರಶೈವಾಚಾರ್ಯರನ್ನು ಯೋಗಿ ತಪಸ್ವಿ ಮುಂತಾದ ಶಬ್ದಗಳಿಂದ ಕರೆಯುವ ರೂಢಿಯಿದೆ. ವೀರಶೈವರ ಷಟ್‌ಸ್ಥಲ ಕ್ರಿಯೆಗಳಲ್ಲಿ ಯೌಗಿಕ ಕ್ರಿಯೆಗಳು ಹಾಸು ಹೊಕ್ಕಾಗಿ ಹೊಂದಿಕೊಂಡಿವೆ. ಪಾಶುಪತವೂ ಶೈವದ ಒಂದು ಅವಾಂತರ ಭೇದ ಆದ್ದರಿಂದ ನ್ಯಾಯ, ವೈಶೇಷಿಕ ಯೋಗ ಪ್ರದರ್ಶನಗಳು ಶೈವರು ಪ್ರಪಂಚಕ್ಕಿತ್ತ ಅಮೂಲ್ಯ ದೇಣಿಗೆಗಳೆಂದು ಸಿದ್ಧವಾಗುತ್ತದೆ.

ಗುಣರತ್ನ ಸೂರಿಯ ಬೃಹದ್ವೃತ್ತಿ ಗ್ರಂಥವು ಪ್ರಾಚೀನ ಕಾಲದ ಮತ್ತು ೧೪ನೆಯ ಶತಮಾನದ ಶೈವಸಂಪ್ರದಾಯದ ಸ್ವರೂಪವನ್ನು ಅದರ ಅವಾಂತರ ಪ್ರಭೇದಗಳನ್ನೂ ಕೊಂಚಮಟ್ಟಿಗೆ ಅರಿಯಲು ಅತ್ಯಂತ ಉಪಯುಕ್ತವಾಗಿದೆ. ಇದಕ್ಕಾಗಿ ಶೈವರೂ ವೀರಶೈವರೂ ಜೈನ ಸಮಾಜಕ್ಕೆ ಕೃತಜ್ಞರಾಗಿರಬೇಕಾಗಿದೆ. "........ತೇಚ ದಂಡಧರಾಃ ಪ್ರೌಢ ಕೌಪೀನ ಪರಿಧಾನಾಃ ಕಂಬಲಿಕಾ ಪ್ರಾವೃತಾ ಜಟಾಧಾರಿಣೋ ಭಸ್ಮೋದ್ಧೂಲನಪರಾ ಯಜ್ಞೋಪವೀತಿನೋ ಜಲಾಧಾರ ಪಾತ್ರ ಕರಾಃ ಪ್ರಾಯೋವನವಾಸಿನೋ ದ್ರೋ(ದೋ)ರ್ಮೂಲೇತುಂಬಕಂ ಬಿಭ್ರಾಣಾಃ ಕಂದಮೂಲ ಫಲಾಶಿನ ಆತಿಥ್ಯಕರ್ಮನಿರತಾಃ ಸಸ್ತ್ರೀಕಾಪಿ: ಸ್ತ್ರೀಕಾಶ್ಚನಿಃ ಸ್ತ್ರೀಕಾಸ್ತೇಷೂತ್ತಮಾಃ । ತೇಚಪಂಚಾಗ್ನಿ ಸಾಧನಪರಾಃ ಕರೇಜಟಾದೌಚ ಪ್ರಾಣಲಿಂಗ ಧರಾಶ್ಚಾಪಿ ಭವಂತಿ. ಉತ್ತಮಾಂ ಸಂಯಮಾವಸ್ಥಾಂ ಪ್ರಾಪ್ತಾಸ್ತು ನಗ್ನಾಭ್ರಮಂತಿ ಏತೇ ಪ್ರಾತರ್ದಂತಪಾದಾದಿಶೌಚಂ ವಿಧಾಯ ಶಿವಂಧ್ಯಾಯಂತೋಭಸ್ಮನಾಂಗಂ ತ್ರಿಸ್ತ್ರಿಃ ಸ್ಪೃಶಂತಿ. ಯಜಮಾನೋವಂದಮಾನಃ ಕೃತಾಂಜಲಿರ್ವಕ್ತಿ :— ಓಂನಮಃ ಶಿವಾಯ, ಇತಿ, ಗುರುಸ್ತಥೈವ ಶಿವಾಯನಮಃ, ಇತಿಪ್ರತಿವಕ್ತಿ. ತೇಚ ಸಂಸದ್ಯೇವಂ ವದಂತಿ :—"ಶೈವೀಂ ದೀಕ್ಷಾಂ ದ್ವಾದಶಾಬ್ದೀಂ ಸೇವಿತ್ವಾಯೋಽಪಿಮುಂಚತಿ, ದಾಸೀದಾಸೋಽಪಿ ಭವತಿಸೋಽಪಿ ನಿರ್ವಾಣಮುಚ್ಛತಿ ; ತೇಷಾ ಮೀಶ್ವರೋದೇವಃ ಸರ್ವಜ್ಞಃ ಸೃಷ್ಟಿಸಂಹಾರಾದಿಕೃತ್‌ತಸ್ಯ.ಚಾಷ್ಟಾ ದಶಾವತಾರಾಃ ೧. ನಕುಲೀಶಃ ೨. ಕೌಶಿಕಃ ೩. ಗಾರ್ಗ್ಯಃ ೪ ಮೈತ್ರ್ಯಃ ೫. ಕೌರುಷಃ ೬ ಈಶಾನಃ ೭. ಪಾರ ಗಾರ್ಗ್ಯಃ ೮. ಕಪಿಲಾಂಡ: ೯ ಮನುಷ್ಯಕಃ (ಅಪರಃ) ೧೦. ಕುಶಿಕಃ ೧೧. ಅತ್ರಿಃ ೧೨. ಪಿಂಗಲಃ (ಲಾಕ್ಷಃ) ೧೩. ಪುಷ್ಪಕಃ ೧೪. ಬೃಹದಾರ್ಯಃ ೧೫. ಅಗಸ್ತಿಃ ೧೬ ಸಂತಾನಃ ೧೭, ರಶೀಕರಃ ೧೮. ವಿದ್ಯಾಗುರುಶ್ಚ. ಏತೇ ಷಾಂ ತೀರ್ಥೇಷಾಃ ಪೂಜನೀಯಾಃ । ತೇಷಾಂ ಸರ್ವತೀರ್ಥೇಷು ಭರಟಾ ಏವ ಪೂಜಕಾಃ । ತೇಷು ಯೇ ನಿರ್ವಿಕಾರಾಸ್ತೇಸ್ವಮೀಷಾಂ ಸಾಗತಮಿದಂ ಪದ್ಯಂ ದರ್ಶಯಂತಿ:-ನಸ್ಪರ್ದನೀನ ಫಣಿನೋನ ಕಪಾಲದಾಮ।ನೇಂಪೋಃ ಕಲಾ ನ ಗಿರಿಜಾನ ಜಟಾನ ಭಸ್ಮ ।ಯತ್ರಾನ್ಯದೇವಹಿ ನ ಕಿಂಚಿದುಪಾಸ್ಮಹೇತ। ದ್ರೂಪಂ ಪುರಾಣ ಮುನಿಶೀಲಿತ ಮೀಶ್ವರಸ್ಯ॥ "ವೀತರಾಗಂ ಸ್ಮರನ್ ಯೋಗೀವೀತರಾಗತ್ವಮಶ್ನುತೇ । ಸರಾಗಂ ಧ್ಯಾಯತಸ್ತಸ್ಯ

ಸರಾಗತ್ವಂತು ನಿಶ್ಚಿತಂ ॥........ಎತತ್ಸರ್ವಂಲಿಂಗ ವೇಷದೇವಾದಿಸ್ವರೂಪಂ ವೈಶೇಷಿಕ ಮತೇಽಪ್ಯವಸಾತವ್ಯಂ ಯತೋಽನ್ಯೈಯಾಯಿಕ ವೈಶೇಷಿಕಾಣಾಂ ಹಿ ಮಿಥಃ ಪ್ರಮಾಣತತ್ವಾನಾಂ ಸಂಖ್ಯಾಭೇದೇ ಸತ್ಯಪ್ಯನ್ಯೋನ್ಯತತ್ತ್ವಾನಾಮಂತರ್ಭಾವನೇಽಲ್ಪಿಯಾನೇವ ಭೇದೋಜಾಯತೆ ; ತೇನೈತೇಷಾಂ ಪ್ರಾಯೋಮತತುಲ್ಯತ, ಉಭಯೇಽಪ್ಯೇತೇ ತಪಸ್ವಿನೋಽಭಿಧೀಯಂತೆ, ತೇಚಶೈವಾದಿಭೇದೇನ ಚತುರ್ಧಾಭವಂತಿ ತದುಕ್ತಂ: ಆಧಾರಭಸ್ಮ ಕೌಪೀನಜಟಾಯಜ್ಞೋಪವೀವತಿನಃ । ಸ್ವಸ್ವಾಚಾರಾದಿ ಭೇದೇನ ಚತುರ್ಧಾಃ ಸ್ಯುಸ್ತಪಸ್ವಿನಃ ॥ ಶೈವಾಃ ಪಾಶುಪತಾಶ್ಚೈವ ಮಹಾವ್ರತಧರಾಸ್ತಥಾ । ತುರ್ಯಾಃ ಕಾಲಾಮುಖಾ ಮುಖ್ಯಾಭೇದಾಏತೇ ತಪಸ್ವಿನಾಂ ॥ ತೇಷಾಮಂತರ್ಭೇದಾಭರಟ - ಭಕ್ತ ಲೈಂಗಿಕ ತಾ ಪ ಸಾ ದ ಯೋ ೯ ಭ ವಂ ತಿ. ಭರಟಾದೀನಾಂ ವ್ರತಗ್ರಹಣೇ ಬ್ರಾಹ್ಮಣಾದಿ ವರ್ಣನಿಯಮೋ ನಾಸ್ತಿ ; ಯಸ್ಯ ತು ಶಿವೇ ಭಕ್ತಿ; ಸವ್ರವೇ ಭರಟಾದಿರ್ಭವೇತ್. ಪರಂಶಾಸ್ತ್ರೇಷು ನೈಯಾಯಿಕಾಃ ಸದಾಶಿವಭಕ್ತತ್ವಾತ್ ಶೈವಾಇತ್ಯುಚ್ಯಂತೆ, ವೈಶೇಷಿಕಾಸ್ತು ಪಾಶುಪತಾ ಇತಿ. ತೇನ ನೈಯಾಯಿಕ ಶಾಸನಂ, ಶೈವಮುಖ್ಯಾಯತೆ ; ವೈಶೇಷಿಕದರ್ಶನಂ ಪಾಶುಪತಮಿತಿ. ಇದಂ ಮಯಾ ಯಥಾ ಮಿಶೃತಂ ಯಥಾದೃಷ್ಟಂಚಾತ್ರಾಭಿದದೇತತ್ತ ದ್ವಿಶೇಷಾಸು ತತ್ತದ್ಗ್ರಂಥೇಭ್ಯೋವಿಜ್ಞೆಯಾ-ಬೃಹದ್ವೃತ್ತಿ

ಈವಾಕ್ಯ ಸಮುದಾಯವು ೧೪ನೆಯ ಶತಮಾನದಲ್ಲಿ ಬರೆಯಲ್ಪಟ್ಟದ್ದರೂ ಸಾವಿರಾರುವರ್ಷ ಪೂರ್ವದ ಶೈವಸಾಂಪ್ರದಾಯದ ಸ್ವರೂಪವು ಇಲ್ಲಿ ವರ್ಣಿತವಾಗಿದೆ ಎಂದ್ರು ತಿಳಿಯುವುದು ಸಮಂಜವಾಗಿದೆ. ಏಕೆಂದರೆ ತುಂಬಿಯ ಸೊಟ್ಟೆಯನ್ನು ಹಿಡಿದುಕೊಂಡು ವನದಲ್ಲಿ ಪಂಚಾಗ್ನಿ ಮಧ್ಯದಲ್ಲಿ ತಪಸ್ಸುಮಾಡುವ ಪದ್ಧತಿಯು ೧೪ನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಹೆಚ್ಚಾಗಿದ್ದಿತು. ೧೪ನೆಯ ಶತಮಾನದಲ್ಲಿಯೂ ಅಂತಹವರು ಇದ್ದಿರಬಹುದು. "ಸಸ್ತ್ರೀಕಾ ನಿಸ್ತ್ರೀಕಾ........ಪಂಚಾಗ್ನಿ ಸಾಧನ ಪರಾಃ........ಪ್ರಾಣಲಿಂಗ ಧರಾಶ್ಚಾಪಿಭವಂತಿ .......ಭಸ್ಮನಾಂಗಂ ತ್ರಿಸ್ತ್ರಿಃ ಸ್ಪೃಶಂತಿ" ಎಂದಿರುವುದರಿಂದ ಆ ತಪಸ್ವಿಗಳು ವೀರಶೈವರೇ ಎಂಬುದು ಸ್ಪಷ್ಟವಾಗಿದೆ. ಪಂಚಾಗ್ನಿ ಸಾಧನೆಯನ್ನೂ ನಡಸುತ್ತಿದ್ಧರೆಂಬುದು ಇಲ್ಲಿ ಒಂದು ವಿಶೇಷ. ಗುಣರತ್ನ ಸೂರಿಯು ಈ ವರ್ಣನೆಯು ಸ್ಕಂದಪುರಾಣದಲ್ಲಿರುವ.

"ಕಕ್ಷೇಕೃತ ಮಹಾಲಾಭಾನ್ ಹುಡುತ್ಕಾರಜಿತಾಂಬುದಾನ್ ।
ಕರಂಡ ದಂಡಪಾನೀಯ ಪಾತ್ರಮಾತ್ರ ಪರಿಗ್ರಹಾನ್ ॥

ಎಂಬ ವೀರಶೈವ ಮುನಿಗಳ ವರ್ಣನೆಯನ್ನುಹೋಲುತ್ತದೆ."ಶೈವಾಃ ಪಾಶುಪತಾಶ್ಚೈವ ಅಂತ ಮಹಾವ್ರತಧರಾಸ್ತಥಾ, ಎಂಬಲ್ಲಿ ಪಾಶುಪತಾಃಎಂಬ ಶಬ್ದದಲ್ಲಿಯೇ ವೀರಶೈವದ ಭಾವವಾಗುತ್ತದೆ. ಮಹಾಪಾಶುಪತರಾದ ವೀರಶೈವರು ವ್ಯಾಸೋಕ್ತ ಪುರಾಣಗಳಲ್ಲಿ ಸಾಮಾನ್ಯವಿವಕ್ಷೆಯಿಂದ ಪಾಶುಪತರೆಂದೂ ವರ್ಣಿಸಲ್ಪಟ್ಟದ್ದಾರೆ. ಗುಣರತ್ನಸೂರಿಯು

"ಯಥಾ ಶ್ರುತಂ ಯಥಾದೃಷ್ಟಂಚಾತ್ರಾಭಿದಧೇ'' ಎಂದು ಹೇಳಿದ್ದರೂ ಕೇಳಿಕೆಯಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗಿರಬೇಕು. ಆಗುವುದು ಸಹಜ. ಈ ವಾಕ್ಯಗಳಲ್ಲಿ ಮಹಾ ಮಹಾ ಪಾಶುಪತರಾದ ವೀರಶೈವರ ಗುರುಗಳ ಹೆಸರನ್ನು ಹೇಳಿಲ್ಲ. ಮೇಲಾಗಿ ಎಲ್ಲ ಶೈವ ಸಂಪ್ರದಾಯಗಳ ವಿಶೇಷಗಳನ್ನು ವಿಶದವಾಗಿ ಹೇಳುವುದು ಗುಣರತ್ನ ಸೂರಿಯ ಉದ್ದಿಶ್ಯವಿದ್ದಿಲ್ಲ. ಯಾವೊಂದು ಸಂಪ್ರದಾಯ ವಿಶೇಷದ ಆಚಾರ ವಿಚಾರಗಳನ್ನು ಕ್ರಮಶಃ ವರ್ಣಿಸದೆ ಎಲ್ಲರೂ ಶೈವರೆಂಬ ಸಾಮಾನ್ಯ ದೃಷ್ಟಿಯಿಂದ ತನಗೆ ತಿಳಿದಂತೆ ಸಾಮೂಹಿಕವಾಗಿ ವಿವರಿಸುತ್ತ ಪಾಶುಪತರ ಗುರುಗಳ ಹೆಸರುಗಳನ್ನಷ್ಟೇ ಉಲ್ಲೇಖಿಸಿ, ಪ್ರಸಿದ್ಧವಾಗಿದ್ದ ನಾಲ್ಕು ಭೇದಗಳನ್ನು ಮಾತ್ರಹೇಳಿ, ವಿಶೇಷಗಳಿಗೆ ಅವರವರ ಗ್ರಂಥಗಳನ್ನು ನೋಡಿಕೊಳ್ಳಿ ಎಂದಿದಾನೆ.

ಅಂತು ೧೪ನೆಯ ಶತಾಬ್ಧಿಯಲ್ಲಿ ಶೈವ, ಪಾಶುಪತ, ವೀರಶೈವ, ಕಾಲಮುಖ ಈ ನಾಲ್ಕು ಸಂಪ್ರದಾಯಗಳ ಅಸ್ತಿತ್ವವಿತ್ತೆಂಬುದು ಸ್ಪಷ್ಟವಾಗಿದೆ. ಆದರೆ ಇಷ್ಟು ಶೀಘ್ರವಾಗಿ ಪಾಶುಪತ, ಕಾಲಾಮುಖ ಸಂಪ್ರದಾಯಗಳು ಲೋಪ ಹೊಂದಿರುವುದು ಅತ್ಯಂತ ಆಶ್ಚರ್ಯಕರವಾಗಿದೆ. ಪಾಶುಪತರು ಲಿಂಗಧಾರಿಗಳಾಗಿ ಮಹಾಪಾಶುಪತ (ವೀರಶೈವ)ರಲ್ಲಿ ಕೂಡಿಹೋದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವೀರಶೈವ ಮತವು ಪುರಾಣ ಕಾಲದಲ್ಲಿ ಸಾಮಾನ್ಯವಾಗಿ ಪಾಶುಪತವೆಂದೂ, ವಿಶೇಷ ಭೇದದೃಷ್ಟಿಯಿಂದ ಮಹಾ ಪಾಶುಪತವೆಂದೂ ವ್ಯವಹರಿಸಲ್ಪಡುತ್ತಿತ್ತು. ಲಿಂಗ, ಸ್ಕಂದ ಪುರಾಣಗಳಲ್ಲಿ ಶಿವಲಿಂಗಧಾರಿಯು ಪಾಶುಪತನೆಂದು ವರ್ಣಿತನಾಗಿದ್ದಾನೆ. ಲಿಂಗಧಾರಿಗಳಲ್ಲದ ಪಾಶುಪತರೂ ಇದ್ದಿರಬೇಕು. ಶ್ರೀ ಶಿವಯೋಗಿ ಶಿವಾಚಾರ್ಯರು "ಪಶುಪತಿ ಮತಸಾರೇ ಪಂಡಿತಶ್ಲಾಘನೀಯು, ಎಂಬ ಪದ್ಯಾಂಶದಲ್ಲಿ ಸಿದ್ಧಾಂತ ಶಿಖಾಮಣಿಯನ್ನು ಪಶುಪತಿ ಮತಸಾರವೆಂದು ಸ್ಪಷ್ಟಪಡಿಸಿದ್ದಾರೆ. ನೀವು ಯಾರು? ಎಂದು ಪ್ರಶ್ನಿಸಿದರೆ ನಾವು ಶಿವಮತದವರು, ಎಂದು ಎಷ್ಟೋ ಮಂದಿ ವೀರಶೈವರು ಇಂದಿಗೂ ಹೇಳುವುದುಂಟು. ಶಿವ, ಪಶುಪತಿ ಮುಂತಾದ ನಾಮಗಳು ಒಬ್ಬ ದೇವನಿಗೇ ವ್ಯವಹರಿಸುವುದರಿಂದ ಶಿವಮತವೆಂದರೂ ಪಶುಪತಿಮತವೆಂದರೂ ಒಂದೇ. ಆದರೂ ಒಂದು ಕಾಲದಲ್ಲಿ ಪಾಶುಪತ, ಎಂಬ ಸಂಪ್ರದಾಯವು ವೀರಶೈವ ಸಂಪ್ರದಾಯದಿಂದ ಭಿನ್ನವಾಗಿ ವ್ಯವಹಾರದಲ್ಲಿತ್ತೆಂದು ಇತಿಹಾಸದಿಂದ ತಿಳಿದುಬರುತ್ತದೆ.

ಗುಣರತ್ನ ಸೂರಿಯ "ಭರಟಾದೀನಾಂ ವ್ರತಗ್ರಹಣೇ ಬ್ರಾಹ್ಮಣಾದಿ ವರ್ಣನಿಯಮೋ ನಾಸ್ತಿ" ಎಂಬೀ ಉಲ್ಲೇಖದಿಂದ ಶೈವಸಂಪ್ರದಾಯಗಳಲ್ಲಿ ಚತುರ್ವರ್ಣಾನಾಂ ಲಿಂಗಂ ಮನುತೆ,, ಎಂಬ ಶೃತಿ ವಾಕ್ಯದಂತೆ ಲಿಂಗಧಾರಣಾದಿ ವ್ರತ ಗ್ರಹಣಕ್ಕೆ ಮಾತ್ರ ವರ್ಣನಿಯಮವಿದ್ದಿಲ್ಲವೆಂದೂ ಉಳಿದ ಎಲ್ಲ ವ್ಯವಹಾರಗಳಲ್ಲಿ ಬ್ರಾಹ್ಮಣಾದಿ ವರ್ಣನಿಯಮವು ಅನೂಚಾನವಾಗಿ ನಡೆದು ಬಂದಿತ್ತೆಂದೂ ಸಿದ್ಧವಾಗುತ್ತವೆ. ಈಗಲೂ ಈ ನಿಯಮವು ವೀರಶೈವರಲ್ಲಿ ಆಚರಣೆಯಲ್ಲಿದೆ. ಗುಣರತ್ನ ಸೂರಿಯು

ಹೇಳಿದ ಭರಟ, ಭಕ್ತ, ಲೈಂಗಿಕ, ತಾಪಸಾದಿ ಭೇದಗಳಲ್ಲಿ 'ಭಕ್ತ, ಎಂಬುದು ವೀರ ಶೈವರಲ್ಲಿ ಇಂದಿಗೂ ಇದೆ. ಭರಟ ಎಂಬ ವರ್ಗವು ಯಾವ ಸಂಪ್ರದಾಯಕ್ಕೆ ಒಳ ಪಟ್ಟದ್ದೋ ವಿವೇಚನೀಯವಾಗಿದೆ. "ತೇಷಾಂ ಸರ್ವ ತೀರ್ಥೇಷು ಭರಟಾ ಏವ ಪೂಜಕಾಃ'' ಎಂಬ ಗುಣರತ್ನ ಸೂರಿಯ ಮಾತು ತಥ್ಯಾಂಶದಿಂದ ಕೂಡಿದ್ದಲ್ಲ.

'ಷಡ್ ದರ್ಶನ ಸಮುಚ್ಚಯ' ವನ್ನು ಬರೆದ ಹರಿಭದ್ರ ಸೂರಿಯ ಕಾಲ ೭ನೆಯ ಶತಮಾನವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆತನು ಉದ್ದಾಮ ದಾರ್ಶನಿಕನಾದುದರಿಂದ ಅನೇಕ ದರ್ಶನ ಗ್ರಂಥಗಳನ್ನು ಬರೆದಿದ್ದಾನೆ. 'ಲೋಕ ತತ್ವ ನಿರ್ಣಯ' ಎಂಬ ಕೃತಿಯಲ್ಲಿ ಪೂರ್ವ ಪಕ್ಷವಾಗಿ ಸಾಂಖ್ಯ, ಬೌದ್ಧಾದಿ ಮತ ಗಳನ್ನು ಉದಾಹರಿಸಿ ಸಿದ್ಧಾಂತ ರೂಪವಾಗಿ ಕೊನೆಗೆ ಜಿನಮತವನ್ನು ಹೇಳಿದ್ದಾನೆ. ಅದರಲ್ಲಿ ಆತನು ಶೈವ ಮತವನ್ನು ಉದಾಹರಿಸಿ ಖಂಡಿಸದೆ 'ಕೊನೆಗೆ ಶೈವರೂ ಈಶ್ವರ ನನ್ನು ಒಪ್ಪದೆ ಜಿನಸಿದ್ಧಾಂತವನ್ನು ಅನುಸರಿಸುತ್ತಾರೆ,' ಎಂಬ ಅಭಿಪ್ರಾಯವನ್ನು ಬಹುಚಾತುರ್ಯದಿಂದ ಪ್ರತಿಪಾದಿಸಿ ಶೈವರನ್ನೆಲ್ಲ ತನ್ನ ಪಕ್ಷಕ್ಕೆ ಕೂಡಿಸಿ ಕೊಂಡಿ ದ್ದಾನೆ. ಹರಿಭದ್ರ ಸೂರಿಯ ಈ ಕೆಳಗಿನ ಮಾತಿನಲ್ಲಿ ಚಾತುರ್ಯವಷ್ಟೇ ಮೆಚ್ಚಬಹ ದಲ್ಲದೆ ತಥ್ಯವಿಲ್ಲ.

"ಜ್ಞಾನಚಾರಿತ್ರ್ಯಾದಿ ಗುಣೈಸ್ಸಸಿದ್ಧಾಃ ಶಾಶ್ವತಾಃ ಶೈವಾಃ |
ಸಿದ್ಧಾಂತನು ಕರಣ ಕರ್ಮರಹಿತಾ ಬಹವಸ್ತೇ ಷಾಂ ಪ್ರಭುರ್ನಾಸ್ತಿ ||

(ಲೋಕ ತತ್ವ ನಿರ್ಣಯ ಪು. ೨೮)

ಇಲ್ಲಿ ವೀರಶೈವ ಸಿದ್ಧಾಂತಕ್ಕೆ ಅಪಾರ್ಥಮಾಡಲಾಗಿದೆ. ತನ್ನ ಅನೀಶ್ವರ ವಾದವನ್ನು ಪುಷ್ಟಗೊಳಿಸಿಕೊಳ್ಳುವುದಕ್ಕಾಗಿಯೇ ಹರಿಭದ್ರಸೂರಿಯು ಈ ಮಾತನ್ನು ಉದ್ದೇಶಪೂರ್ವಕವಾಗಿಯೇ ಹೇಳಿದಾನೆ. ಅಹಿಂಸಾವ್ರತಶೀಲರಾದ ವೀರಶೈವರ ಆಚಾರಾದಿಗಳನ್ನು ಮೆಚ್ಚಿಯೇ ಆತನು "ಜ್ಞಾನಚಾರಿ ತ್ರ್ಯಾದಿಗುಣೈಸ್ಸಂಸಿದ್ಧಾಃ'' ಎಂದು ವರ್ಣಿಸಿರುವುದು. ವೀರಶೈವ ಸಾಧಕನು ಸಾಧನಾವಸ್ಥೆಯಲ್ಲಿ ಸ್ವಾಮಿ ಭೃತ್ಯ ವೆಂಬ ಭೇದಭಾವನೆಯುಳ್ಳವನಾಗಿರುತ್ತಾನೆ - ಸಾಧ್ಯಾವಸ್ಥೆಯಲ್ಲಿ 'ಜಲೇಜಲಮಿ ವನ್ಯಸ್ತಂ, ಜಲದಲ್ಲಿ ಜಲದಂತೆ, ಹಾಲಿನಲ್ಲಿ ಹಾಲಿನಂತೆ ಪರಶಿವನೊಡನೆ ಸಾಮರಸ್ಯ ಹೊಂದಿದ ಆತನು ಸ್ವಯಂ ಶಿವಸ್ವರೂಪನಾಗಿ ನಿಲ್ಲುತ್ತಾನೆ. ಆಗ ಶಿವನಾದ ಅವನಿಗೆ ತನಗೆ ಭಿನ್ನನಾದ ಮತ್ತೊಬ್ಬ ಪ್ರಭುವಿಲ್ಲ. ಶಿವನು ಸರ್ವಾತ್ಮಕನಾದುದರಿಂದ ಮುಕ್ತನೂ ಸರ್ವಾತ್ಮಕನಾಗುತ್ತಾನೆ.

ಪಶು ತ್ವಂಚ ಪತಿತ್ವಂಚ ಮಾಯಾ ಮೋಹ ವಿಕಲ್ಪಿತಂ |
ತಸ್ಮಿನ್ ಪ್ರಲಯಮಾಪನ್ನೇ ಕಃ ಪಶುಃ ಕೋನುವಾ ಪತಿಃ ||

ಸಿ. ಶಿಖಾಮಣಿ.

ಎಂದು ಜಗದ್ಗುರು ರೇಣುಕರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇಷ್ಟು ಮಾತ್ರಕ್ಕೇ ಪರಮ ಆಸ್ತಿಕರಾದ ವೀರಶೈವರ ಮೇಲೆ ನಾಸ್ತಿಕತ್ವವನ್ನು ಹೊರಿಸುವುದು ಹಾಸ್ಯಾಸ್ಪದವು. 'ಲೋಕ ತತ್ವನಿರ್ಣಯ' ಗ್ರಂಥವು ಗುಜರಾತಿ ಟೀಕೆಯೊಡನೆ ಪ್ರಕಟವಾಗಿದೆ. ಟೀಕಾಕಾರರಿಗೆ ವಿವಿಧ ದರ್ಶನಗಳ ಜ್ಞಾನವಿಲ್ಲದ್ದರಿಂದ ಅವರು ಮೇಲೆ ಉಲ್ಲೇಖಿಸಿದ ಹರಿಭದ್ರ ಸೂರಿಯ ಅಭಿಪ್ರಾಯವನ್ನು ತಿಳಿಯಲು ಅಸಮರ್ಥರಾಗಿ "....ಪ್ರಭುನಾಗಸ್ತಿ,, ಎಂಬ ಪದಗಳನ್ನು ಕಂಡು 'ಇದು ಜೈನ ಸಿದ್ಧಾಂತ, ವೆಂದೇ ಭ್ರಮೆಗೊಂಡಿದಾರೆ. ಆದ್ದರಿಂದ "ಶೈವಾಃ,, ಸಿದ್ಧಾ, ಎಂಬ ಪದಗಳಿಗೆ ಸರಿಯಾಗಿ ಅರ್ಥವನ್ನು ಬರೆಯದೆ ಅಸಮಂಜಸವಾಗಿ ಬರೆದು ಬಿಟ್ಟಿದ್ದಾರೆ. ಶ್ರೀ ಹರಿಭದ್ರ ಸೂರಿಯು ವೀರಶೈವ ದರ್ಶನದ ವಿಶೇಷ ಜ್ಞನಾಗಿದ್ದನೆಂಬುದು ಆತನ ಗ್ರಂಥಗಳಿಂದ ಸಿದ್ಧವಾಗುತ್ತದೆ. ತನ್ನ ಶಾಸ್ತ್ರವಾದ ಸಮುಚ್ಚಯ, ಗ್ರಂಥದಲ್ಲಿ ಕೆಳಗಿನಂತೆ ಹೇಳಿದ್ದಾನೆ:—

ಈಶ್ವರಃ ಪ್ರೇರಕತ್ವೇನ ಕರ್ತಾ ಕೈಶ್ಚಿದಿಹೇಷ್ಯತೇ ।
ಅಚಿಂತ್ಯ ಚಿಚ್ಛಕ್ತಿ ಯುಕ್ತೋ-ನಾದಿ ಸಿದ್ಧಸ್ಯ ಸೂರಿಭಿಃ ॥

ಈಶ್ವರನು ಪ್ರಾಣಿ ಕರ್ಮಾನುಸಾರವಾಗಿ ಪ್ರೇರಕನಾದುದರಿಂದ ಕರ್ತೃವೆಂದೂ, ಅಚಿಂತ್ಯವಾದ ಚಿಚ್ಛಕ್ತಿಯಿಂದ ಕೂಡಿದವನೆಂದೂ, ಅನಾದಿ ಬದ್ಧನೆಂದೂ ಕೆಲ ಪಂಡಿತರು ಅಭಿಪ್ರಾಯಪಡುತ್ತಾರೆ.

ಇದರಿಂದ ೬ನೆಯ ಶತಾಬ್ದಿಯಲ್ಲಿ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವಾದವು ಸರಿಯಾಗಿ ಪ್ರಚಾರದಲ್ಲಿತ್ತೆಂದು ಸಿದ್ಧವಾಗುತ್ತವೆ. ಇದೇ ರೀತಿ ಇನ್ನೂ ಅನೇಕ ಜೈನ ಗ್ರಂಥಗಳಲ್ಲಿ ವೀರಶೈವಾದಿ ಸಂಪ್ರದಾಯಗಳ ಆಚಾರ, ವಿಚಾರಗಳ ರೂಪರೇಖೆಗಳನ್ನು ಕಾಣಬಹುದು.

ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ ।
ಸಚ್ಚಿದಾನಂದ ರೂಪಾಯ ಶಿವಾಯ ಬ್ರಹ್ಮಣೇನಮಃ ॥

—ಸಂಪೂರ್ಣಂ—

# ಶೈವ ದರ್ಶನ ಮತ್ತು ಸಾಹಿತ್ಯ

—ಹೆಚ್. ಗಂಗಾಧರನ್, ಎಂ. ಎ., ಬಿ. ಎಲ್.
ಅಡ್ವೊಕೇಟ್, ಮೈಸೂರು

## ಶೈವ ಸಂಸ್ಕೃತಿಯ ಪ್ರಾಚೀನತೆ

ಭರತವರ್ಷವು ಅನಂತ ಧರ್ಮ ಮತ್ತು ದರ್ಶನಗಳ ತೌರೂರು. ಭಾರತದ ಪ್ರಗತಿಯ ಇತಿಹಾಸವು ಇಲ್ಲಿನ ದರ್ಮ ದರ್ಶನಗಳ ಚರಿತ್ರೆಯನ್ನೇ ಅವಲಂಬಿಸಿದೆ. ರಾಜಕೀಯ ಆರ್ಥಿಕ ಸಾಮಾಜಿಕ ಪ್ರಗತಿಗೂ ಧರ್ಮದರ್ಶನಗಳೇ ಬುನಾದಿ. ಏಕೆಂದರೆ ದರ್ಶನ ಬೌದ್ಧಿಕ ಪ್ರಗತಿಯನ್ನು ಧರ್ಮಗಳು ಕರ್ಮನಿಷ್ಠಾ ಪ್ರಗತಿಯನ್ನು ಪ್ರತಿಬಿಂಬಿಸಿವೆ. ನಮ್ಮಲ್ಲಿ ಐರೋಪ್ಯ ಸಂಸ್ಕೃತಿಯು ಬೆಳೆದಾಗ ನಮ್ಮ ಐತಿಹಾಸಿಕ ಸಂಶೋಧನೆ ಆರಂಭವಾಗಿ ಆಧುನಿಕ ಸಂಶೋಧಕರು ಭಾರತೀಯ ಸಾಂಸ್ಕೃತಿಕ ಇತಿಹಾಸವನ್ನು ವೇದಗಳ ಕಾಲದಿಂದ ರಚಿಸುವುದಕ್ಕೆ ಆರಂಭಿಸಿದರು. ವೇದೋಪನಿಷತ್ತುಗಳೇ ಜೀವನದರ್ಶನದ ಅಂಗರಕ್ಷೆಯೆಂದು ಸ್ವೀಕರಿಸಿದರು. ಚತುರ್ವೇದಗಳಲ್ಲಿ ಋಗ್ವೇದವೇ ಮೊದಲನೆಯದು. ಅನೇಕ ತಜ್ಞರ ಸಂಶೋಧನೆಯಿಂದ ಋಗ್ವೇದವು ಪ್ರಾಯಃ ಕ್ರಿ.ಪೂ. ೧೪೦೦ರ ವೇಳೆಗೆ ರಚಿತವಾಯಿತೆಂದು ತಿಳಿದುಬಂದಿದೆ. ವೇದೋಕ್ತ ಸಂಸ್ಕೃತಿಯು ೩ ಸಾವಿರ ವರ್ಷಗಳ ಹಿಂದಿನದು. ಆದರೆ ಭಾರತಕ್ಕೆ ಲಕ್ಷಾಂತರ ವರ್ಷದ ಇತಿಹಾಸವಿದೆ. ಕೊನೆಯಪಕ್ಷ ೧೦ ಸಹಸ್ರ ವರ್ಷಗಳ ಇತಿಹಾಸಕ್ಕೆ ಕೊರತೆಯಿಲ್ಲ. ವೇದಗಳ ಹಿಂದಿನ ಇತಿಹಾಸವೇ ಇಲ್ಲವೆನ್ನುವ ಜನತೆಗೆ ಹರಪ್ಪ ಮೊಹೆಂಜದಾರೋ ಸಂಸ್ಕೃತಿಗಳು ಕಣ್ಣು ತೆರೆಸಿವೆ. ಆದುದರಿಂದ ವೇದಗಳ ಕಾಲಕ್ಕಿಂತಲೂ ಮುಂಚೆಯೇ ಭಾರತ ಸುಸಂಸ್ಕೃತವಾದ ಸಂಪದ್ಯುಕ್ತವಾದ ನಾಡಾಗಿತ್ತೆನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ವೇದಗಳ ಕಾಲ ಆರ್ಯರು ಭಾರತದ ಮೇಲೆ ಧಾಳಿ ಮಾಡಿದ ಕಾಲ. ಋಗ್ವೇದವು ಶಾಸ್ತ್ರಗ್ರಂಥವೆನ್ನುವುದಕ್ಕಿಂತ ರಣಾಂಗಣದ ಚಿತ್ರವನ್ನು ಚಿತ್ರಿಸುವ ಐತಿಹಾಸಿಕ ಗ್ರಂಥವೆಂದರೂ ತಪ್ಪಾಗಲಾರದು. ಹರಪ್ಪ

ಸಂಸ್ಕೃತಿ ವೇದಗಳ ಕಾಲಕ್ಕಿಂತ ಹಿಂದಿನದೆನ್ನುವುದಕ್ಕೆ ಋಗ್ವೇದವೇ ಸಾಕ್ಷಿಯಾಗುತ್ತದೆ. ಅದರಲ್ಲಿ ಆರ್ಯರು ಆರ್ಯೇತರ ಜನತೆಯ ಮೇಲೆ ಸಂಗ್ರಾಮ ಹೂಡಿದಾಗ ಋಗ್ವೇದದಲ್ಲಿ ಪ್ರಧಾನ ದೇವತೆಯಾದ ಇಂದ್ರನು ಆರ್ಯ ಮಂಡಲದ ಅಧಿನಾಯಕನಾಗುತ್ತಾನೆ. ಆರ್ಯರ ಪೂರ್ವದ ಜನತೆಗೆ ರುದ್ರ ನಾಯಕನಾಗುತ್ತಾನೆ. ಇಂದ್ರನಲ್ಲಿ ಇಂದಿನ ಆಧುನಿಕ ದೃಷ್ಟಿಯಿಂದ ಅನಾಗರಿಕವೆನಿಸಿದ ಗುಣಗಳು ಕಂಡುಬರುತ್ತವೆ. ರುದ್ರನಲ್ಲಿ ಸಹಜ ಪೌರುಷವೂ ಸುಸಂಸ್ಕೃತವೂ ಆದ ಗುಣಗಳು ಕಂಡುಬರುತ್ತವೆ. (ಎ. ಬಿ. ಕೀತ್‌ರವರ ಅಭಿಪ್ರಾಯ)

ಇಂದಿನ ಹರಪ್ಪ ಸಂಶೋಧನೆಯಿಂದ ದೊರೆತಿರುವ ನಿದರ್ಶನಗಳಿಂದ ರುದ್ರ ಅಥವಾ ಈಶ್ವರನ ಉಪಾಸನೆಯು ವೇದಕ್ಕಿಂತ ಹಿಂದಿನದೆಂಬ ಅಂಶ ಮನವರಿಕೆಯಾಗಿದೆ. ಆದುದರಿಂದ ಹರಪ್ಪಾ ಸಂಸ್ಕೃತಿಯ ಜನರು ರುದ್ರನ ಉಪಾಸಕರಾಗಿ ನಗರಗಳನ್ನು ಕಟ್ಟಿಕೊಂಡು ನಾಗರೀಕತೆಯ ಮೆಟ್ಟಿಲನ್ನು ಹತ್ತಿದ್ದರೆನ್ನಬಹುದು. ಇಂದ್ರನನ್ನು ಕುರಿತು ನಾಲ್ಕನೇ ಒಂದು ಭಾಗ ಋಗ್ವೇದವು ರಚಿತವಾಗಿರುವುದರಿಂದ ಅವನು ಪ್ರತಾಪಶಾಲಿಯೆಂದೂ ಒಬ್ಬ ನಾಯಕನನ್ನು ದೈವತ್ವಕ್ಕೆ ಏರಿಸಿರಬೇಕೆಂದೂ ಊಹಿಸಬಹುದು. ಇಂದ್ರನು ಪ್ರಭಾವಶಾಲಿಯಾಗಿ ರಥಾರೂಢನಾಗಿ ರಾಜರನ್ನು ಜಯಿಸುತ್ತಲೂ ಕೋಟೆಕೊತ್ತಲಗಳನ್ನು ನಾಶಪಡಿಸುತ್ತಲೂ ಇದ್ದನೆಂದೂ (ಋ. ವೇ. ೧-೧-೫೩) ಶತ್ರುಗಳ ಶಸ್ತ್ರಾಸ್ತ್ರಗಳನ್ನು ಅಗ್ನಿಪಾಲು ಮಾಡಿದನೆಂತಲೂ (ಋ. ವೇ. ೧-೨-೧೫) ಮುಂತಾಗಿ ಹೇಳಿರುವುದರಿಂದ ಹರಪ್ಪ ಸಂಸ್ಕೃತಿಯು ವೇದಕ್ಕಿಂತ ಪೂರ್ವದ್ದೆಂದು ಹೇಳಲು ಸಂಶಯವಿಲ್ಲ. ಹರಪ್ಪ ಸಂಸ್ಕೃತಿಯ ಸಂಶೋಧಕರು "ಹರಪ್ಪ ಸಂಶೋಧನೆಯು ಆರ್ಯರಿಗಿಂತ ಪೂರ್ವದಲ್ಲಿದ್ದ ಪ್ರಭಾವಯುತ ನಾಗರೀಕತೆಯನ್ನು ಮನಗಾಣಿಸುವುದಲ್ಲದೆ ಇದರ ನಾಶಕ್ಕೆ ಕಾರಣನಾದ ಇಂದ್ರನು ದೂಷಿಸಲ್ಪಟ್ಟಿದ್ದಾನೆಂದು" ಹೇಳುತ್ತಾರೆ. (R. E. M. Wheeler Ancient India No. 3 P 82)

ಮೇಲ್ಕಂಡ ಸಂಗತಿಗಳಿಂದ ವೇದಕ್ಕಿಂತ ಪೂರ್ವದಲ್ಲೇ ಭಾರತದಲ್ಲಿ ಪ್ರಚಲಿತವಾದ ಧಾರ್ಮಿಕ ಸಂಸ್ಕೃತಿಯೊಂದಿತ್ತೆಂದು ವಿದಿತವಾಗುತ್ತದೆ. ಅದು ಶೈವ ಸಂಸ್ಕೃತಿಯೇ ಎಂದು ಸಂಶೋಧಕರ ಅಭಿಪ್ರಾಯವಿದೆ. ಹಿಂದೆ ತಿಳಿಸಿದಂತೆ ಶಿವನ ಪರ್ಯಾಯ ಶಬ್ದವಾದ ರುದ್ರನ ಹೆಸರು ಋಗ್ವೇದದಲ್ಲಿ ಬರುವುದರಿಂದಲೂ ಹರಪ್ಪ ಸಂಸ್ಕೃತಿಯಲ್ಲಿ ಶಿವನ ಸ್ವರೂಪ ಕಲ್ಪನೆಯ ನಿದರ್ಶನಗಳಿರುವುದರಿಂದಲೂ ಆರ್ಯರೊಡನೆ ಹೋರಾಡಿದವರು ರುದ್ರನನ್ನೇ ನಾಯಕನನ್ನಾಗಿ ಹೊಂದಿದ್ದರಿಂದಲೂ ಸಹ ಶಿವನ ಉಪಾಸನೆ ವೇದಕ್ಕೆ ಪೂರ್ವದ್ದೆಂದು ನಿರ್ಧಾರವಾಗುತ್ತದೆ. ಶಿವನನ್ನು ಲಿಂಗ ರೂಪಿನಲ್ಲಿ ಪೂಜಿಸುವುದು ಇಂದಿಗೂ ಭಾರತದಲ್ಲಿ ಪ್ರಚಲಿತವಿರುವುದಷ್ಟೆ! ಋಗ್ವೇದದಲ್ಲಿ ಲಿಂಗಪೂಜೆ ಮಾಡುವವರನ್ನು ನಿಷೇಧಿಸಿರುವುದು ಮತ್ತು ಇಂದ್ರನು ಇದನ್ನು ನಿ

ಸ್ಮರಿಸಿರುವುದೂ ಕಂಡು ಬರುತ್ತದೆ. (ಋ. ವೇ. VII ೨೧-೫ ಮತ್ತು X ೯೯.೩) ರುದ್ರನನ್ನು ತ್ರ್ಯಂಬಕನೆಂದೂ ಕರೆಯಲ್ಪಟ್ಟದೆ.

ಉದಾ:-"ಇಮಾ ರುದ್ರಾಯ ತಪಸೇ" "ಇಮಾ ರುದ್ರಾಯ ಶತಘನ್ವಿನೇ" "ತ್ರ್ಯಂಬಕಂ ಯಜಾಮಹೇ" ಇತ್ಯಾದಿ. ಸಾಮವೇದದಲ್ಲಿಯೂ ಸಹ ರುದ್ರನನ್ನು ಕುರಿತು ಪ್ರಾರ್ಥನೆ ಮಾಡಿದ ಸಂಹಿತೆಯೊಂದಿದೆ.ಶುಕ್ಲ ಯಜುರ್ವೇದದ ವಾಜಸನೇಯ ಸಂಹಿತೆಯಲ್ಲೂ (VXVI) ಮತ್ತು ಕೃಷ್ಣ ಯಜುರ್ವೇದದ ತೈತ್ತರೀಯ ಸಂಹಿತೆ ಯಲ್ಲೂ (IV-೫) ಸಹ ಶಿವನ ನೂರು ನಾಮಗಳ ಸ್ಮರಣೆ ಮಾಡಿದ ಪ್ರಸಂಗವಿದೆ. ಅಥರ್ವವೇದದಲ್ಲಿ ಅನೇಕ ಕಡೆ ಶಿವನ ಪ್ರಾರ್ಥನೆ ನಡೆದಿದೆ. ಈ ಕಾರಣಗಳಿಂದ ಶಿವನ ಉಪಾಸನೆ ಅದರಲ್ಲಿಯೂ ಲಿಂಗ ರೂಪಿನಿಂದ ಶಿವನನ್ನು ಪೂಜಿಸುವುದು ವೇದ ಕಾಲಕ್ಕಿಂತ ಹಿಂದಿನದೆಂದೂ ವೇದಗಳ ಕಾಲದಲ್ಲಿ ಪ್ರಚಲಿತವಿತ್ತೆಂದೂ ವ್ಯಕ್ತವಾಗು ತ್ತದೆ. ಮುಂದೆ ಉಪನಿಷತ್ಕಾಲದಲ್ಲಿ ವಿಶ್ವದ ನಾನಾ ಕಡೆಗಳಲ್ಲಿ ಶಿವೋಪಾಸನೆ ಪ್ರಚಲಿತವಿತ್ತೆಂದು ವ್ಯಕ್ತವಾಗಿದೆ. ಶ್ವೇತಾಶ್ವತರ, ಈಶ, ಮಾಂಡೂಕ್ಯ, ಅಥರ್ವ ಶಿರಸ್ ಕೈವಲ್ಯ, ಲಿಂಗ, ಸಿದ್ಧಾಂತಶಿಖ, ವೇದಾಂತಸಾರ, ವೀರಶೈವಲಿಂಗೋಪನಿಷತ್, ರುದ್ರ, ಸದಾನಂದ ಚಿದಂಬರ, ನಿರ್ಲೇಪ, ಭಕ್ತಿಯೋಗ, ಜಾಬಾಲಿ, ಶಿವಸಂಕಲ್ಪ ಮತ್ತು ಬಿಲ್ವ ಮುಂತಾದ ಹಲವಾರು ಉಪನಿಷತ್ತುಗಳಲ್ಲಿ ಶಿವನ ಉಪಾಸನಾ ಕಲ್ಪನೆ ಗಳು ಬರುತ್ತವೆ. ಕಲ್ಪ ಸೂತ್ರಗಳಲ್ಲಿ ರುದ್ರ ಕಲ್ಪದ ವಿವರಣೆಯಿದೆ. ಮಹಾಭಾರತ ದಲ್ಲಿ ಶಿವೋಪಾಸನೆ ಅಪಾರವಾಗಿ ವಿವರಿಸಲ್ಪಟ್ಟಿದೆ. ವನಪರ್ವದಲ್ಲಿ ಅರ್ಜುನನೂ ಶಿವ ನನ್ನೊಲಿಸಿ ಪಾಶುಪತಾಸ್ತ್ರ ಪಡೆದನೆಂದೂ (ಅ ೩೮-೪೦) ದ್ರೋಣಪರ್ವದಲ್ಲಿ ಅರ್ಜು ನನೂ ಕೃಷ್ಣನೂ ಶಿವಾನುಗ್ರಹವನ್ನು ಪಡೆದರೆಂದೂ (ಅ ೮೦-೮೧) ಸಪ್ತಿಕ ಪರ್ವ ದಲ್ಲಿ ಅಶ್ವತ್ಥಾಮನು ಶಿವನಿಂದ ಖಡ್ಗವನ್ನು ಪಡೆದನೆಂದೂ (ಅ ೭) ಅನುಶಾಸನ ಪರ್ವದಲ್ಲಿ ಕೃಷ್ಣನು ಶಿವನನ್ನು ಪ್ರಾರ್ಥಿಸಿದನೆಂದೂ (ಅ-೧೪) ಮುಂತಾಗಿ ಹೇಳಲ್ಪ ಟ್ಟಿರುವುದರಿಂದ ಶಿವೋಪಾಸನಾ ಸಂಸ್ಕೃತಿಯು ಅನಾದಿಕಾಲದಿಂದ ಅವ್ಯಾಹತವಾಗಿ ನಡೆದು ಬಂದಿರುವುದು ವಿದಿತವಾಗುತ್ತದೆ. ಈ ಶಿವೋಪಾಸನಾ ಸಂಸ್ಕೃತಿಯು ಶೈವ ಸಂಸ್ಕೃತಿಯಾಗಿ, ಶೈವ ದರ್ಶನವಾಗಿ, ಶೈವ ಧರ್ಮವಾಗಿ ಬೆಳೆದು ಬಂದಿರುತ್ತದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಶೈವ ಸಂಸ್ಕೃತಿ ಪ್ರಚಲಿತವಿರುವುದು ನಿರ್ವಿವಾದ ಸಂಗತಿ. ಆದರೆ ಅದು ಬೆಳೆದು ಬೆಳಗಿಬಂದ ರೀತಿಯನ್ನು ಪರಿಶೀಲಿಸುವುದು ಅಗತ್ಯ.

## ಐತಿಹಾಸಿಕ ಹಿನ್ನೆಲೆ

ವೇದಕ್ಕಿಂತಲೂ ಪ್ರಾಚೀನವಾದ ಶೈವ ಸಂಸ್ಕೃತಿಯು ವೇದಗಳ ನಂತರ ಆರಣ್ಯಕಗಳು ಬ್ರಾಹ್ಮಣಗಳು ಮತ್ತು ಕಲ್ಪಸೂತ್ರಗಳ ಕಾಲದಲ್ಲಿ ತನ್ನ ಪ್ರಭಾವವನ್ನು ಕಳೆದುಕೊಂಡಿರಬಹುದು. ಏಕೆಂದರೆ ಆರ್ಯರು ಭಾರತಕ್ಕೆ ಕಾಲಿಟ್ಟ ನಂತರ ನೂತನ

ಸಂಸ್ಕೃತಿಯು ರಾಜ್ಯ ಸೂತ್ರವನ್ನು ವಹಿಸಿಕೊಂಡುದುದರಿಂದಲೂ ಮತ್ತು ಪ್ರಭಾವ ಶಾಲಿ ಪ್ರಚಾರಕರು ಪ್ರಬಲರಾದುದರಿಂದಲೂ ಶೈವ ಸಂಸ್ಕೃತಿಯ ವಿಕಾಸ ಕುಂದಿತೆನ್ನ ಬಹುದು. ಆರ್ಯರು ಭಾರತವನ್ನು ಪ್ರವೇಶಿಸಿದಾಗ ಅರೇಬಿಯಾದಿಂದ ಕುದುರೆಗಳ ಮೇಲೇರಿ ಬಂದುದರಿಂದ ಭಾರತದಲ್ಲಿ ನೆಲೆಸಿದ್ದ ಆದಿವಾಸಿಗಳು ಸುಸಂಸ್ಕೃತರಾಗಿದ್ದು ಅವರು ನೆಲದ ಮೇಲೆ ನಿಂತು ಹೋರಾಡಬೇಕಾಗಿ ಬಂದು ಅವರು ಆರ್ಯನರಿಗೆ ಸೋಲಬೇಕಾಯಿತೆಂದೂ ಬೌದ್ಧರ ಮೂಲ ವಂಶಜರಾದ ಶೌರ್‍ಯರು ಪ್ರಾಚೀನ ಭಾರತೀಯರ ವಂಶಜರೆಂದೂ ಆದುದರಿಂದಲೇ ಬೌದ್ಧ ಸಂಸ್ಕೃತಿಯು ಆರ್ಯ ಸಂಸ್ಕೃತಿಯ ಮೇಲೆ ಕ್ರಾಂತಿಯನ್ನೆಸಗಿತೆಂದೂ ಡಾ|| ಅಂಬೇಡ್ಕರ್‌ರವರು ವಾರಣಾಸಿಯಲ್ಲಿ ಭಾಷಣ ಮಾಡುತ್ತಾ ತಿಳಿಸಿದ್ದು ವಾಸ್ತವವಾಗಿ ಕಾಣುತ್ತದೆ. ಆದರೂ ಸಹ ಶೈವ ಸಂಸ್ಕೃತಿಯು ಪೂರ್ಣವಾಗಿ ಕಣ್ಮರೆಯಾಗಲು ಅವಕಾಶವಾಗಲಿಲ್ಲ. ದುರ್ಗಮ್ಯ ಪ್ರದೇಶಗಳಲ್ಲಿ ದೂರಪ್ರದೇಶಗಳಲ್ಲಿ ತನ್ನತನವನ್ನು ಉಳಿಸಿಕೊಂಡು ಸ್ವತಂತ್ರ ರೀತಿಯಿಂದ ಬೆಳೆದು ಬಂದಂತೆ ಕಾಣುತ್ತದೆ. ಇದು ಭಾರತವಲ್ಲಿ ಮಾತ್ರವೇ ಅಲ್ಲದೆ ವಿಶ್ವದ ನಾನಾಕಡೆಗಳಲ್ಲಿ ಪ್ರಸಾರಗೊಂಡಿದೆ.

ಈಜಿಪ್ಟ್ ದೇಶದ 'ಮೆಂಫಿಸ್' ಎಂಬಲ್ಲಿ 'ಅಸಿರಿಸ್' ಎಂಬ ಹೆಸರಿನಿಂದ ಕರೆಯಲ್ಪಡುವ ಶಿವಲಿಂಗವಿದೆ. ಟರ್ಕಿಯ ಬೆಬಿಲೋನಿಯನ್ನಲ್ಲಿ ಹೆಡ್ರಾಪೋಲಿಸ್ ಪಟ್ಟಣದಲ್ಲಿ ಸಹ ಶಿವಲಿಂಗವಿದೆ. ಮಕ್ಕಾದಲ್ಲಿ 'ಅಸವದ್' ಎಂಬ ಹೆಸರಿನಿಂದ ಪೂಜಿಸಲ್ಪಡುವ ಶಿವಲಿಂಗವಿದೆ. ದಕ್ಷಿಣ ಅಮೇರಿಕಾದ ಬ್ರೆಜಿಲ್ ದೇಶದಲ್ಲಿ ಗ್ರೀಸ್ ದೇಶದಲ್ಲಿ, ಕಾರಿಂಥ್ ನಗರದಲ್ಲಿ, ಗ್ಲಾಸ್ಕೋ ನಗರದಲ್ಲಿ ಸಹ ಶಿವಲಿಂಗಗಳಿದ್ದು ಅಲ್ಲಿನ ಜನರು ಈಗಲೂ ಭಕ್ತಿಯಿಂದ ಪೂಜಿಸುತ್ತಿದ್ದಾರೆ. ಜಾವಾ ಮತ್ತು ಬಾಲಿ ದ್ವೀಪಗಳಲ್ಲಿ ಸಹ ಶಿವಲಿಂಗ ಮೂರ್ತಿಗಳು ದೊರಕಿರುವುವು. ಫ್ರೆಂಚ್ ದೇಶದ ಲೂಯಿ ಎಂಬುವರು ವಿಶ್ವದಲ್ಲಿ ಶಿವಲಿಂಗಗಳಿರುವ ವಿವರಣೆಯನ್ನು ಬರೆದಿರುವರೆಂದೂ ಅದರ ಆಧಾರದ ಮೇಲೆ ಶ್ರೀ ಬಾಬೂಬೇಚೂಸಿಂಹ ಎಂಬ ವಿದ್ವಾಂಸರು ತಾವು ಬರೆದ ಶಿವಮಾಲ್ಯ ರತ್ನಾಕರ ಗ್ರಂಥದ ಪ್ರಸ್ತಾವನೆಯಲ್ಲಿ ವಿಶದವಾಗಿ ಬರೆದಿರುವರೆಂದು ಪಂ|| ಕಾಶೀನಾಥ ಶಾಸ್ತ್ರಿಗಳು ತಿಳಿಸಿದ್ದಾರೆ (ವೀರಶೈವರತ್ನ ಪು. ೪-೬) ಇಂಡೋಚೈನಾಕ್ಕೆ ಸೇರಿದ 'ಅಸ್ಸಾಂ"ನಲ್ಲಿ ಅನೇಕ ಶಿವಾಲಯಗಳಿದ್ದು ಅಲ್ಲಿರುವ ಸಂಸ್ಕೃತ ಶಿಲಾ ಶಾಸನಗಳನ್ನು ಸಂಶೋಧಿಸಿ ಬರೆದ ಗ್ರಂಥಾಧಾರದಿಂದ ಶ್ರೀ ಆರ್. ಸಿ. ಮಜುಂದಾರ್‌ರವರು "Ancient Indian Colonies in the far East" ಎಂಬ ಗ್ರಂಥವನ್ನು ಬರೆದು ವಿದೇಶಗಳಲ್ಲಿರುವ ಶಿವಾಲಯಗಳ ವಿವರಣೆಯನ್ನಿತ್ತಿದ್ದಾರೆ. (ವೀರಶೈವರತ್ನ ಪು. ೧೧೨) ಶ್ರೀ ಎನ್. ಸಿ. ಕಂದಯ್ಯ ಪಿಳ್ಳೈಯವರು ಜಾವಾದಲ್ಲಿ ಅನೇಕ ಶಿಲಾಲಯಗಳಿರುವುವೆಂದೂ ಅಲ್ಲಿ ಶಿವೋಪಾಸನೆ ಅತ್ಯಂತ ಪ್ರಾಚೀನ ಕಾಲದಿಂದ ಬೆಳೆದು ಬಂದಿರುವುದಾಗಿ ತಿಳಿಸುತ್ತಾರೆ. (Tamil India P-೧೧೯)

ಅಮೇರಿಕಾ ದೇಶದಲ್ಲಿಯೂ ಸಹ ಭಾರತೀಯ ಸಂಸ್ಕೃತಿಯು ಅತಿ ಪ್ರಾಚೀನ ಕಾಲ ದಲ್ಲಿಯೇ ತನ್ನ ಪ್ರಭಾವವನ್ನು ಬೀರಿತ್ತೆಂದು ಶ್ರೀ ಚಮನ್‌ಲಾಲ್‌ರವರು ತಮ್ಮ "ಹಿಂದೂ ಅಮೇರಿಕಾ" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಇಂತಹ ಪ್ರಚಲಿತ ಧರ್ಮ ದರ್ಶನದ ಮೇಲೆ ಪೂರ್ಣ ಸಂಶೋಧನೆ ನಡೆದರೆ ಜಗತ್ತಿನ ಸಂಸ್ಕೃತಿಗೆ ಉತ್ತಮ ಕೊಡುಗೆಯಾಗುತ್ತದೆ.

ಹೀಗೆ ಒಂದು ಕಾಲದಲ್ಲಿ ವಿಶ್ವಸಂಸ್ಕೃತಿಯೇ ಆಗಿದ್ದ ಶೈವ ಸಂಪ್ರದಾಯವು ಹಲವಾರು ಕಾರಣಗಳಿಂದ ಪ್ರಕಾಶಕ್ಕೆ ಬರದಿರುವುದು ಶೋಚನೀಯವಾಗಿದೆ. ಇದಕ್ಕೆ ಸಂಶೋಧನೆ ನಡೆಯುವ ಸೌಲಭ್ಯಗಳಿಲ್ಲದಿರುವುದೂ ಮತ್ತು ವೇದ ಕಾಲದ ಸಂಸ್ಕೃತಿಯ ಪ್ರಭಾವದಿಂದ ಕಣ್ಮರೆಯಾಗಿರುವುದೂ ಕಾರಣವಾಗಿರಬಹುದು. ವೇದಗಳ ಪ್ರಭಾವಕ್ಕೆ ಒಳಗಾದವರು ಇದನ್ನು ವೇದೋತ್ತರ ಸಂಸ್ಕೃತಿಯೆಂದೂ ಕಾಲ ಕಾಲಕ್ಕೆ ಪರಿವರ್ತನೆ ಹೊಂದಿ ಈ ರೂಪ ತಾಳುತ್ತಾ ಬಂದಿದೆಯೆಂದೂ ಕೆಲವು ವಿದ್ವಾಂಸರು ಸಂಶಯವನ್ನು ವ್ಯಕ್ತಪಡಿಸಿದ್ದಾರೆ. ಶಿವೋಪಾಸನೆಯು ಸರ್ವಜನಾದರಣೀಯವಾಗಿದ್ದ ವೇದಕಾಲೀನ ಸಂಸ್ಕೃತಿಯೆಂದು 'ಬಾರ್ತ್'ರವರು ತಮ್ಮ (Religion of India) ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಶಿವನ ಉಪಾಸನೆಯು ವೈದಿಕ ರುದ್ರನ ಪ್ರತಿರೂಪವೆಂದೂ ಅವರಿಂದ ವಿಕಾಸಗೊಂಡ ಸಂಸ್ಕೃತಿಯೆಂದೂ ಶ್ರೀ ಸಿ. ವಿ. ನಾರಾಯಣ ಅಯ್ಯರ್‌ರವರು ತಮ್ಮ Origin early History of saivism In south India ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಆದರೆ ಮ್ಯಾಕ್ಸ್‌ಮುಲರ್‌ರವರು ತಮ್ಮ Anthropological Religion ಎಂಬ ಗ್ರಂಥದಲ್ಲಿ ದುರ್ಗ ಮತ್ತು ಶಿವನ ಉಪಾಸನೆಯಲ್ಲಿ ವೇದಕ್ಕಿಂತ ಭಿನ್ನವಾದ ಸಂಸ್ಕೃತಿಯೊಂದು ಕಂಡು ಬರುತ್ತದೆಂದೂ ಇದು ವೈದಿಕ ಸಂಸ್ಕೃತಿಯಿಂದ ವಿಕಾಸಗೊಂಡದ್ದಲ್ಲವೆಂದೂ ಅಭಿಪ್ರಾಯಪಡುತ್ತಾರೆ. ಇದನ್ನನುಸರಿಸಿ ಶ್ರೀ ಆರ್. ಜಿ. ಭಂಡಾರ್ಕರ್‌ರವರೂ ಸಹ ಮ್ಯಾಕ್ಸ್‌ಮುಲ್ಲರನ ಅಭಿಪ್ರಾಯಕ್ಕೇ ಒಪ್ಪಿಗೆ ನೀಡುತ್ತಾರೆ. ಒಟ್ಟಿನಲ್ಲಿ ಎಲ್ಲ ವಿದ್ವಾಂಸರೂ ಶಿವೋಪಾಸನೆಯು ಭಾರತೀಯ ಇತಿಹಾಸದಲ್ಲಿ ಅತ್ಯಂತ ಪ್ರಾಚೀನವಾದುದೆಂದೂ ವಿಶ್ವವ್ಯಾಪಕವಾದ ಸಂಸ್ಕೃತಿಯಾಗಿತ್ತೆಂದೂ ಒಪ್ಪುತ್ತಾರೆ. ಆದರೆ ಅದು ಇದ್ದ ಸ್ಥಿತಿ ಮತ್ತು ಅದರ ರೂಪು ರೇಷೆಗಳನ್ನು ಚಿತ್ರಿಸುವುದರಲ್ಲಿ ಹೆಚ್ಚು ಆಸಕ್ತಿವಹಿಸಿದಂತೆ ಕಾಣುವುದಿಲ್ಲ.

## ಲಿಂಗಪೂಜೆಯ ಪ್ರಾಚೀನತ್ವ

ದೈವ ಪ್ರತೀಕದ ಉಪಾಸನಾ ಸಂಸ್ಕೃತಿ ಎಂದು ಆರಂಭವಾಯಿತೆಂದು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ಪ್ರಾಯಃ ಮಾನವರು ಸಂಸಾರಿಗಳಾಗಿ ಬಾಳಿ ಸಮಾಜ ಜೀವನವನ್ನು ನಡೆಸುವುದಕ್ಕೆ ಆರಂಭವಾದಂದೇ ಉಪಾಸನಾ ಸಂಸ್ಕೃತಿಯ ಆರಂಭ

ವಾಯಿತೆನ್ನಬಹುದು. ಲಿಂಗಪೂಜೆಯು ಶಿವೋಪಾಸನೆಯ ಪ್ರತೀಕವೆಂದು ನಿರ್ಧರವಾಗಿದೆ. ಲಿಂಗಪೂಜೆಯ ವಿವರಣೆಯನ್ನು ಕುರಿತು ಬಹಳ ವಿಚಾರ ನಡೆದಿದೆ. ಲಿಂಗಪೂಜೆಯನ್ನು ಜನನೇಂದ್ರಿಯದ ಉಪಾಸನೆಯೆಂದೂ ಇದು ಅಸಭ್ಯ ಸಂಸ್ಕೃತಿಯೆಂದೂ ಹಾಸ್ಯ ಮಾಡಿದವರಿದ್ದಾರೆ. ಆದರೆ ಮಾನವನ ಬಾಹ್ಯ ದೃಷ್ಟಿಗೆ, ಸೃಷ್ಟಿಗೆ ನಿಲುಕದಂತಹ ಒಂದು ವಸ್ತುವನ್ನು ದೇವರೆಂದೋ ಪರಮಾತ್ಮನೆಂದೂ ಕರೆಯಬಹುದು. ಇಂತಹ ಅಗೋಚರವೂ ಅಗಮ್ಯವೂ ಅವರ್ಣನೀಯವೂ ಆದ ಒಂದು ವಸ್ತುವನ್ನು ಮಾನವ ತನ್ನ ಕಲ್ಪನೆಯಿಂದ ಚಿತ್ರಿಸಿ ಉಪಾಸನೆ ಮಾಡಿದ್ದಾನೆ. ಮಾನವನಲ್ಲಿ ಕಲ್ಪನಾಶಕ್ತಿ ಇಲ್ಲದಿದ್ದರೆ ಈ ಮೂರ್ತಿ ಉಪಾಸನೆಯೇ ಬೆಳೆಯುತ್ತಿರಲಿಲ್ಲ. ಅಂದು ಅನ್ಯಪ್ರಾಣಿಗಳಿಂದ ಭಿನ್ನವಾದ ಮಾನವತ್ವವೂ ಅವನಲ್ಲಿ ಉಳಿಯುತ್ತಿರಲಿಲ್ಲ ಆದುದರಿಂದ ಅಗೋಚರವಾದ ವಸ್ತುವನ್ನು ಮುಟ್ಟಲು ಗೋಚರವಾಗುವಂತಹ ಗುರಿಯೊಂದನ್ನು ನಾವು ಕಲ್ಪಿಸಿಕೊಳ್ಳಲೇಬೇಕಾಗುತ್ತದೆ ತಾನು ಕಲ್ಪಿಸಿಕೊಳ್ಳುವ ಗುರಿಯೂ ಸಹ ಮಾನವ ಶಕ್ತಿಗೆ ನಿಲುಕದಂತಹ ಅತ್ಯದ್ಭುತವಾದ ಕಲ್ಪನೆಯಾಗಬೇಕೆಂದು ಆಶಿಸಿರಬಹುದು. ಆಗ ವ್ಯಕ್ತಿ ಚಿತ್ರಕ್ಕಿಂತ ತತ್ವವನ್ನು ಚಿತ್ರಿಸುವುದರಲ್ಲಿ ಹಿರಿದಾದ ಸಂಸ್ಕೃತಿಯನ್ನು ಮಾನವ ಕಂಡುಕೊಂಡಿದ್ದಾನೆ. ಜಗತ್ತಿನಲ್ಲಿ ಲಿಂಗಪೂಜೆಯನ್ನು ಬಿಟ್ಟರೆ ಉಳಿದೆಲ್ಲ ಉಪಾಸನಾ ಕಲ್ಪನೆಗಳೂ ಉದಾತ್ತ ಸಂಸ್ಕೃತಿಯ ಪ್ರತೀಕವೆಂದು ಹೇಳಲಾಗುವುದಿಲ್ಲ. ಏಕೆಂದರೆ ಯಾವುದಾದರೂ ಒಂದು ದೇವರ ಪ್ರತೀಕವಾದ ಪ್ರತಿಬಿಂಬವನ್ನು ರಚಿಸಿದರೆ ಅದು ಶಾಶ್ವತವಾಗಿ ಉಳಿಯುವುದಿಲ್ಲ ಮತ್ತು ಆ ಪ್ರತಿಮೆಯಲ್ಲಿ ಒಂದು ದಿನವಿದ್ದ ಪವಿತ್ರಭಾವನೆ ಮತ್ತೊಂದು ದಿನ ಉಳಿಯುವುದಿಲ್ಲ. ಮಾನವ ಮೂರ್ತಿಯನ್ನು ಚಿತ್ರಿಸುವಾಗ ಅಂದಂದಿನ ಯುಗದ ಮಾನವೀಯ ನಾಗರೀಕತೆಗೆ ಅನುಗುಣವಾಗಿ ಮೂರ್ತಿಯನ್ನು ಚಿತ್ರಿಸುತ್ತಾ ಹೋಗುತ್ತಾನೆ. ಆದುದರಿಂದ ಮೂರ್ತಿಯಲ್ಲಿ ನಿಶ್ಚಿತವಾದ ಮನೋಭಾವನೆ ಉಳಿಯಲು ಅವಕಾಶವಿರುವುದಿಲ್ಲ. ಲಿಂಗೋಪಾಸನಾ ಕಲ್ಪನೆಯಾದರೋ ಏಕಪ್ರಕಾರವಾಗಿ ಉಳಿದು ಬರುತ್ತದೆ. ಆದುದರಿಂದ ಲಿಂಗೋಪಾಸನೆ ಉಚ್ಚ ಸಂಸ್ಕೃತಿಯ ಪ್ರತೀಕವೆಂದೇ ಹೇಳಬೇಕಾಗುತ್ತದೆ ಇದು ಒಂದು ತಾತ್ವಿಕ ಉಪಾಸನೆಯಾದ್ದರಿಂದ ಹೆಚ್ಚು ಪ್ರಶಸ್ತವಾಗಿರುತ್ತದೆ. ಲಿಂಗದ ಕಲ್ಪನೆಯು ಸ್ತ್ರೀ ಪುರುಷರ ಜನನೇಂದ್ರಿಯಗಳ ಸಂಯೋಗದ ಕಲ್ಪನೆಯೆಂದೂ ಅಸಭ್ಯವೆಂದೂ ಕೆಲವರ ಅಭಿಮತ. ಜನನೇಂದ್ರಿಯಗಳ ಕಲ್ಪನೆಯೆಂದರೂ ಅಪಹೇಳನವಲ್ಲ. ಆ ದೃಷ್ಟಿಯಿಂದ ಟೀಕಿಸುವವರೂ ಸಹ ಜನನೇಂದ್ರಿಯದ ಪೂಜೆಯನ್ನು ಬಿಟ್ಟಿಲ್ಲ. ಅಂಗಾಲಿಂದ ನೆತ್ತಿಯವರೆಗೆ ಮೂರ್ತಿಯನ್ನು ಪೂಜಿಸುವವರು ಜನನೇಂದ್ರಿಯರಹಿತವಾದ ಮೂರ್ತಿಯನು ಚಿತ್ರಿಸಿಲ್ಲ ಮತ್ತು ಜನನೇಂದ್ರಿಯವೇ ಇಲ್ಲದೆ ಸೃಷ್ಟಿಯಾದ ಮೂರ್ತಿಯಾವುದೂ ಉಪಾಸನೆಗೊಂಡಿಲ್ಲ. ಈ ದೃಷ್ಟಿಯಿಂದಲೂ ಸಹ ಲಿಂಗೋಪಾಸನೆ ಹಿರಿದೆನ್ನದೆ

ವಿಧಿಯಿಲ್ಲ. ಆದುದರಿಂದ ಲಿಂಗಪೂಜೆಯ ಉಪಾಸನೆಯನ್ನು ಕಲ್ಪಿಸಿದ ಜನರು ಉಚ್ಚ ಸಂಸ್ಕೃತಿಯುಳ್ಳ ಜನಾಂಗವೆನ್ನಬಹುದು. ಈ ಜನಾಂಗ ಭಾರತದಲ್ಲಿ ವೇದಕಾಲಕ್ಕಿಂತ ಹಿಂದೆಯೇ ಇದ್ದರೆನ್ನುವುದಕ್ಕೆ ಅನೇಕ ನಿದರ್ಶನಗಳಿವೆ. ಪ್ರಾಚ್ಯ ಸಂಸ್ಕೃತಿ ಪ್ರಭಾವ ಇದ್ದಕಡೆಯಲ್ಲೆಲ್ಲಾ ಈ ಲಿಂಗೋಪಾಸನಾ ಕಲ್ಪನೆ ಇದ್ದೇ ಇದೆ.

ದ್ರವವು ಅಣುವಾಗಿ ಘನವಾಗಿ ಮಹತ್ತಾಗಿ ಮಾನವನಾಗಿ ಬರುವುದು ಅತ್ಯಂತ ಆಶ್ಚರ್ಯಜನಕವೂ ಕಲ್ಪನಾತೀತವೂ ಆದ ಸಂಗತಿಯಾಗಿದೆ. ಸೃಷ್ಟಿ ನಿಜ, ಆದರೆ ಇದರ ವಿವರಣೆ ಕಲ್ಪನಾತೀತ. ಆದುದರಿಂದ ಇದು ಅಪೌರುಷೇಯವಾದ ಘಟನೆಯ ಕಲ್ಪನೆ ಮತ್ತು ಇದು ಒಂದು ನಿತಾಂತತತ್ವ. ಈ ತತ್ವಕ್ಕೆ ಹಿನ್ನೆಲೆಯಾಗಿ ಯಾವುದೊ ಒಂದು ಶಕ್ತಿಯಿದೆ. ಅದನ್ನೇ ದೈವವೆಂದು ಮಾನವ ಭಾವಿಸಿದ. ಜೀವನದಲ್ಲಿ ಬಳಸಿದ. ಈ ತತ್ವದ ಸಾಕ್ಷಾತ್ಕಾರವನ್ನು ಸಾಕಾರದಿಂದ ಪರಿಗ್ರಹಿಸಲು ಕಲ್ಪನಾ ಪರಿಧಿಗೆ ನಿಲುಕುವಂತಹುದೆಂದು ಜನನೇಂದ್ರಿಯಗಳ ಪ್ರತೀಕವಾಗಿ ಲಿಂಗಕಲ್ಪನೆ ಬಂದಿದ್ದರೆ ಅದು ಅವಹೇಳನವಲ್ಲ. ಇದು ಇಡೀ ಸೃಷ್ಟಿಶಕ್ತಿಯ ಉಪಾಸನೆ. ಇದರಲ್ಲಿ ದೇವೀ ಉಪಾಸನೆಯ ಭಿನ್ನತೆಯಿಲ್ಲ. ದೃಗ್ಗೋಚರವಾಗುವ ಎಲ್ಲ ವಸ್ತುವೂ ಸೃಷ್ಟಿಯಾದದ್ದೇ. ಆದುದರಿಂದ ಎಲ್ಲವೂ ಪೂಜ್ಯವೇ! ಲಿಂಗಪೂಜೆಯಿಂದ ಎಲ್ಲವೂ ಉಪಾಸ್ಯವಾಗುತ್ತವೆ. ಉಪನಿಷತ್ಕಾರರು "ಸರ್ವಂ ಖಲ್ವಿದಂ ಬ್ರಹ್ಮ" "ಈಶಾವಾಸ್ಯಮಿದಂ ಸರ್ವಂ" "ಯತೋ ಇಮಾನಿ ಭೂತಾನಿ ಜಾಯಂತೇ" ಎನ್ನುವಾಗ ಲಿಂಗೋಪಾಸನ ತತ್ವವನ್ನೇ ಏಕೆ ಆಧರಿಸಿರಬಾರದು? ವಿಶ್ವಸೃಷ್ಟಿ ಕಲ್ಪನಾತೀತವಾದ ಚಮತ್ಕಾರ. ಸೃಷ್ಟಿಯನ್ನು ಜನನೇಂದ್ರಿಯ ಕಲ್ಪನೆಯಿಂದ ಅರಿತು ತನ್ಮೂಲಕ ಈ ವೈಚಿತ್ರ್ಯ ತತ್ವದ ಉಪಾಸನೆ ಮಾಡಲು ಮಾನವ ಅನಾದಿಕಾಲದಲ್ಲಿ ಪ್ರಾರಂಭಿಸಿರಬಹುದೆಂದು 'ಕ್ಲಿಫರ್ಡ್ ಹಾವರ್ಡ್'ರವರು ತಮ್ಮ "Sex Worship" ಎಂಬ ಗ್ರಂಥದಲ್ಲಿ ಊಹಿಸಿದ್ದಾರೆ. ಗ್ರೀಸ್ ದೇಶದಲ್ಲಿ ಲಿಂಗಪೂಜೆಯು ಅತ್ಯಂತ ಪ್ರಾಚೀನ ಕಾಲದಲ್ಲಿ ಪ್ರಭಾವಯುತವಾಗಿತ್ತೆಂದು ವೈಭವಪೂರ್ಣ ಉತ್ಸವಗಳು ನಡೆಯುತ್ತಿದ್ದುವೆಂದು ಹಿರೋಡೋಟಸ್‌ರವರು ಬರೆದಿದ್ದಾರೆ. ಜಪಾನ್ ದೇಶದಲ್ಲಿ ಲಿಂಗೋಪಾಸನೆಯ ಉತ್ಸವವು ವೈಭವದಿಂದ ಜರುಗಿ ಸಮುದ್ರ ತೀರದಲ್ಲಿ ಲಿಂಗವನ್ನು ಪ್ರತಿಷ್ಠಿಸಿ ಅತ್ಯಂತ ಭಕ್ತಿಯಿಂದ ಉಪಾಸನೆ ಮಾಡುತ್ತಿದ್ದರೆಂದು ಹೇಳಿದೆ. (Encyclopedia of Religion Ethics Vol IX—೮೧೬, ಹಿರೋಡೋಟಸ್ ಸರ್. ಎ. ಸ್ಟೈನ್ ಮತ್ತೂ ಸರ್ ಜಾನ್‌ಮಾರ್ಷಲ್ ಇವರ ಲೇಖನಗಳಿಂದ ಮೆಸಪೊಟೇಮಿಯಾ, ವಜೀರಿಸ್ಥಾನ್, ಇರಾನ್ ದೇಶಗಳಲ್ಲಿ ಪ್ರಾಚೀನ ಕಾಲದಲ್ಲಿ ಲಿಂಗೋಪಾಸನೆ ಪ್ರಚಲಿತವಿತ್ತೆಂದು ವಿದಿತವಾಗುತ್ತದೆ. ಆದಾಗ್ಯೂ ಈ ಸಂಸ್ಕೃತಿಯನ್ನು ಅವೈದಿಕವೆಂದಾಗಲಿ ಅಥವಾ ವೇದಗಳ ಕಾಲದಿಂದ ಈಚೆಗೆ ಅಂದರೆ ಪುರಾಣಗಳ ಕಾಲದಲ್ಲಿ ಬೆಳೆದು ಬಂದ ಸಂಸ್ಕೃತಿಯೆಂದಾಗಲಿ

ಹೇಳುವುದು ಅರ್ಥವಿಲ್ಲದ ವಾದವೆನಿಸುತ್ತದೆ. ಹರಪ್ಪ, ಮೊಹೆಂಜೋದಾರೋಗಳಲ್ಲಿ ಸಿಕ್ಕಿರುವ ವಸ್ತುಗಳಿಂದ ಶಿವೋಪಾಸನೆಯ ಕಲ್ಪನೆಯು ಸಮಂಜಸವಾಗಲಾರದೆನ್ನುವ ಡಾ|| ಕೆ. ಎಂ. ನೀಲಕಂಠಶಾಸ್ತ್ರಿಗಳ ವಾದ ಯುಕ್ತವಾಗಿ ಕಾಣುವುದಿಲ್ಲ.(Cultural Heritage of India Vol IV P. 67)

ಲಿಂಗಪೂಜೆಯು ಜನನೇಂದ್ರಿಯದ ಉಪಾಸನೆಯೆಂದು ಕೆಲವರು ಅಭಿಪ್ರಾಯ ಪಡುವುದಕ್ಕೆ ಹಲವಾರು ಕಾರಣಗಳಿವೆ. ಋಗ್ವೇದದಲ್ಲಿ 'ಶಿಸ್ನದೇವ' ಎಂಬ ಹೆಸರು ಬಂದಿರುವುದರಿಂದಲೂ ( ಋ. ವೇ. VII -22-5 ) ಮತ್ತು ಭೂಗರ್ಭ ಶೋಧಕರಿಗೆ ಲಿಂಗದ ಪಾಣಿವಟ್ಟಲುಗಳ ಅವಶೇಷಗಳು ಮಾತ್ರ ದೊರೆತಿರುವುದ ರಿಂದಲೂ ಜನನೇಂದ್ರಿಯದ ಉಪಾಸನೆಯಿದ್ದಿರಬಹುದೆಂದು ಕೆಲವರು ಊಹಿಸಿದ್ದಾರೆ ನಿರಾಕಾರವೂ ಸರ್ವ ಆಕಾರಗಳನ್ನೊಳಗೊಂಡ ವಿಶ್ವದ ಪ್ರತೀಕವೂ ಆದ ಲಿಂಗವನ್ನು ಸ್ಥಾವರ ಪೂಜೆಗೆ ಸಿದ್ಧಪಡಿಸಿಕೊಳ್ಳಲು ಪಾಣಿಬಟ್ಟಲಿನಂತಹ ಸೌಲಭ್ಯ ಬೇಕಾದುದ ರಿಂದ ಅದನ್ನು ಉಪಯೋಗಿಸಿರಬಹುದೇ ಹೊರತು ಜನನೇಂದ್ರಿಯಗಳ ಸಂಯೋಗವೇ ಉಪಾಸನಾ ಸಂಸ್ಕೃತಿಯೆಂದು ಹೇಳಲಾಗುವುದಿಲ್ಲ. ಜನನೇಂದ್ರಿಯವೇ ಉಪಸಾನ ಕಲ್ಪನೆಯಾದರೆ ವೇದೋಪನಿಷತ್ತುಗಳೂ ಸಹ ಅದೇ ಸಂಸ್ಕೃತಿಯನ್ನೇ ಗಂಭೀರ ಶಬ್ದಗಳಿಂದ ಅನುಕರಿಸಿ ಅದಕ್ಕೆ 'ಬ್ರಹ್ಮ' ಎಂಬ ಪರವಸ್ತುವಿನ ಕಲ್ಪನೆ ಮಾಡಿರಬಹು ದೆಂದು ಹೇಳಬೇಕಾಗುತ್ತದೆ. ಬ್ರಹ್ಮ ಶಬ್ದದ ವ್ಯಾಖ್ಯಾನಕಾರರ ಮತದಂತೆ ಅದು 'ಬೃ' ಶಬ್ದದಿಂದ ಉತ್ಪನ್ನವಾಯಿತೆಂದೂ 'ಬೃ' ಎಂದರೆ ಬೆಳೆಯುವುದು ಅಥವಾ 'ಪಲ್ಲವಿಸುವುದು' ಎಂಬ ಅರ್ಥವೆಂದೂ ಹೇಳಿದೆ. ಉಪನಿಷತ್ತಿನ 'ತಜ್ಜಲಾನ್' ಎಂಬ ಶಬ್ದದಿಂದ 'ಬ್ರಹ್ಮ' ಶಬ್ದದ ಕಲ್ಪನೆಗೆ ಪೋಷಣೆ ನೀಡಲಾಗಿದೆ. (ಛಾಂದೋಗ್ಯ III.14) ಆದುದರಿಂದ ಬ್ರಹ್ಮ ಕಲ್ಪನೆಯೂ ಜನನ ಅಥವಾ ಸೃಷ್ಟಿ ತತ್ವವನ್ನೇ ಅವಲಂಬಿಸಿದಂತಾಗುತ್ತದೆ. ಲಿಂಗೋಪಾಸನಾ ತತ್ವವು ಗಾಂಭೀರ್ಯ ಶಬ್ದಗಳಿಂದ ಬ್ರಹ್ಮ ಕಲ್ಪನೆಯಾಗಿ ಮಾರ್ಪಟ್ಟಿರುವುದನ್ನು ಒಪ್ಪುವುದಾದರೆ ಲಿಂಗಪೂಜಾ ಕಲ್ಪ ನೆಯು ಜನನೇಂದ್ರಿಯಗಳ ಸಂಯೋಗ ಕಲ್ಪನೆಯೆಂದು ಹೇಳಬಹುದು. ಆದುದ ರಿಂದ ಆ ತತ್ವವನ್ನು ಕ್ಷುಲ್ಲಕ ಮನೋಭಾವನೆಯಿಂದ ನೋಡುವ ಅವಶ್ಯಕತೆ ಇರುವು ದಿಲ್ಲವಷ್ಟೆ! ತಾತ್ವಿಕ ದೃಷ್ಟಿಯಿಂದ 'ತಜ್ಜಲಾನ್' ಶಬ್ದಕ್ಕೆ ಇರುವ ವ್ಯಾಖ್ಯಾನವೇ 'ಲಿಂಗ' ಶಬ್ದಕ್ಕೂ ಅನ್ವಯವಾಗಿರುವುದಕ್ಕೆ ಅನೇಕ ನಿದರ್ಶನಗಳಿವೆ "ಲೀನಮರ್ಥಂ ಗಮಯತಿ ಇತಿ ಲಿಂಗಂ", "ಲಿಂಗಂ ತದ್ಬ್ರಹ್ಮ ಶಾಶ್ವತಂ" "ಲಿಂಗಂ ಬ್ರಹ್ಮಸನಾತನಂ" ಎಂಬ ಶೃತಿವಾಕ್ಯಗಳು ನಮ್ಮ ಅಭಿಪ್ರಾಯವನ್ನೇ ಸ್ಪಷ್ಟೀಕರಿಸುತ್ತವೆ. ಇದನ್ನು ಸ್ಪಷ್ಟವಾಗಿ ಸಿದ್ಧಾಂತ ಶಿಖಾಮಣಿಕಾರರು"ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ। ತಸ್ಮಾಲ್ಲಿಂಗಂ ಪರಂಬ್ರಹ್ಮಕಾರಣಂ ನಿತ್ಯಮವ್ಯಯಂ" ಎಂದಿದ್ದಾರೆ. ಆದು ದರಿಂದ 'ಬ್ರಹ್ಮ' 'ಲಿಂಗ' 'ಶಿವ' 'ಪರಶಿವ' ಇವು ಪರ್ಯಾಯ ಶಬ್ದಗಳೆನ್ನಬಹುದು.

ಎಲ್ಲ ಶಬ್ದಗಳ ವ್ಯಾಖ್ಯಾನದ ಗುರಿ ಒಂದೇ ಆದುದರಿಂದ ಮಾನವ ಜೀವನದ ದರ್ಶನ ವೇದಕ್ಕಿಂತ ಹಿಂದಿನದೆಂದು ಲಿಂಗಪೂಜೆಯ ಐತಿಹ್ಯದಿಂದ ವ್ಯಕ್ತವಾಗುತ್ತದೆ. ರೂಪು ರೇಖೆಗಳ ಮೂರ್ತಿಪೂಜೆಗಿಂತ ತತ್ವ ಪ್ರತೀಕವಾದ ಲಿಂಗದ ಉಪಾಸನೆಯನ್ನು ಅನುಸರಿಸುತ್ತಿದ್ದ ಜನತೆಯ ಸಂಸ್ಕೃತಿ ಹಿರಿದೆನ್ನದೆ ವಿಧಿಯಿಲ್ಲ. ಆದುದರಿಂದ ಲಿಂಗವನ್ನು ಪೂಜಿಸುವವರೆಲ್ಲಾ ಶಿವೋಪಾಸಕರೆಂದೂ ಅವರೇ ಶೈವ ಸಂಪ್ರದಾಯಸ್ಥರೆಂದೂ ಗೊತ್ತಾಗುತ್ತದೆ. ಈ ಸಂಪ್ರದಾಯ ಸಂಸ್ಕೃತಿ ಲೋಕವಿಖ್ಯಾತವಾಗಿತ್ತೆಂಬುದು ಅನೇಕ ರಾಷ್ಟ್ರಗಳ ಭೂಗರ್ಭಸಂಶೋಧನೆಯ ಇತಿಹಾಸದಿಂದ ವ್ಯಕ್ತವಾಗಿದೆ. ಅಲ್ಲದೆ ವೇದಕ್ಕಿಂತ ಹಿಂದೆ ಭಾರತದಲ್ಲಿ ಶೈವ ಸಂಸ್ಕೃತಿಗೆ ಭಿನ್ನವಾದ ಮತ್ತೊಂದು ಸಂಸ್ಕೃತಿ ಇತ್ತೆನ್ನುವುದಕ್ಕೆ ಇದುವರೆಗೆ ಯಾವ ಆಧಾರಗಳು ನಮಗೆ ದೊರೆತಿಲ್ಲ. ಇಂತಹ ಪ್ರಭಾವಯುತ ಸಂಸ್ಕೃತಿಯ ವಿಷಯದಲ್ಲಿ ಭಾರತೀಯರು ಸಾಕಷ್ಟು ಆಸ್ಥೆ ವಹಿಸಿಲ್ಲವೆನ್ನಬಹುದು. ಅನಾದಿ ಕಾಲದಲ್ಲೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಚಲಿತವಾದ ಶೈವ ಸಂಸ್ಕೃತಿಯ ವಿಷಯದಲ್ಲಿ ಭಾರತೀಯರು ಸಾಕಷ್ಟು ಆಸ್ಥೆ ವಹಿಸಿಲ್ಲವೆನ್ನಬಹುದು. ಅನಾದಿಕಾಲದಲ್ಲೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಚಲಿತವಾದ ಶೈವ ಸಂಸ್ಕೃತಿಯಲ್ಲಿ ಕಾಲ ದೇಶ ಗುಣಗಳಿಗನುಗುಣವಾಗಿ ಭಿನ್ನವ್ಯಾಖ್ಯಾನಗಳು ಬೆಳೆದಿವೆ.

## ಶೈವಮತಗಳು ಮತ್ತು ಸಾಹಿತ್ಯ

ಶೈವ ದರ್ಶನದಲ್ಲಿ ಭಿನ್ನರೂಪವನ್ನು ತಾಳಿ ಪ್ರತ್ಯೇಕ ಸಿದ್ಧಾಂತಗಳು ಬೆಳೆದಿವೆ. ಐತಿಹಾಸಿಕ ದೃಷ್ಟಿಯಿಂದ ಎಂಟು ವಿಧ ಶೈವ ದರ್ಶನಗಳು ಹೇಳಲ್ಪಟ್ಟವೆ. ೧. ಪಾಶುಪತ ೨. ಶೈವ ಸಿದ್ಧಾಂತ ೩. ಲಾಕುಲೀಶ ಪಾಶುಪತ ೪. ವಿಶಿಷ್ಟಾದ್ವೈತ ಶೈವ ೫. ವಿಶೇಷಾದ್ವೈತ ಶೈವ ೬. ನಂದಿಕೇಶ್ವರಶೈವ ೭. ರಸೇಶ್ವರಶೈವ ೮. ಕಾಶ್ಮೀರ ಶೈವ ಎಂಬ ಎಂಟು ಪ್ರಭೇದಗಳಿದ್ದುವೆಂದು ಡಾ॥ ಕೆ.ಸಿ. ಪಾಂಡೆಯವರು ಅಭಿಪ್ರಾಯಪಟ್ಟಿದ್ದಾರೆ. (Bhaskari vol III) ಇವುಗಳಲ್ಲಿ ಕೆಲವು ದ್ವೈತವನ್ನೂ ದ್ವೈತಾದ್ವೈತವನ್ನೂ ಶಿವಾದ್ವೈತವನ್ನೂ ಪ್ರತಿಪಾದಿಸುತ್ತವೆ. ದರ್ಶನಗಳಿಗೆ ಮೂಲ ಕೃತಿಗಳು ಶಿವಾಗಮಗಳು. ಇವುಗಳಿಗೆ ತಂತ್ರಗಳೆಂದೂ ಹೆಸರು. ೧. ಕಾಮಿಕ ೨. ಯೋಗಜ, ೩. ಚಿಂತ್ಯ ೪. ಕಾರಣ ೫. ಅಜಿತ ೬. ದೀಪ್ತ ೭. ಸೂಕ್ಷ್ಮ ೮. ಸಾಹಸ್ರಕ ೯. ಅಂಶುಮಾ಼ ೧೦. ಸುಪ್ರಭ ಇವು ಆರ್ಷೇಯವೆಂದೇ ಶೈವರ ನಂಬಿಗೆ. ೧೧. ವಿಜಯ ೧೨. ನಿಶ್ವಾಸ ೧೩. ಸ್ವಯಂಭುವ ೧೪. ಆಗ್ನೇಯಕ ೧೫. ಭದ್ರ ೧೬. ರೌರವ ೧೭. ಮಕುಟ ೧೮. ವಿಮಲ ೧೯. ಚಂದ್ರಹಾಸ ೨೦. ಮುಖಯುಗ್ಬಿಂಬ ೨೧. ಉದ್ಗೀತಾ ೨೨. ಲಲಿತ ೨೩. ಸಿದ್ಧ ೨೪. ಸಂತಾನ ೨೫. ನಾರಸಿಂಹ ೨೬. ಪಾರಮೇಶ್ವರ ೨೭. ಕಿರಣ ೨೮. ವೀರ ಇವು ಆ ಅಂತಜ್ಞಾನಿಗಳಿಂದ ಆವಿರ್ಭವಿಸಿದುವು ಎಂದು ನಂಬಿದ್ದಾರೆ. ಇವು ಮೂಲ ಆಗಮಗಳು. ಇವುಗಳಲ್ಲದೆ

೧೦೮ ಉಪಾಗಮಗಳೂ ಶೈವ ದರ್ಶನದ ಸಾಹಿತ್ಯ ಸಂಪತ್ತು. ಈ ಆಗಮಗಳ ಸಾಹಿತ್ಯ ಅಪಾರವಾದುದೆಂದು ಮೃಗೇಂದ್ರಾಗಮದಿಂದಲೂ ಅಪ್ಪಯ್ಯದೀಕ್ಷಿತರ ಕೃತಿಗಳಿಂದಲೂ ತಿಳಿದು ಬರುತ್ತದೆ. ಈ ಸಾಹಿತ್ಯರಾಶಿಯ ವೈಪುಲ್ಯ ಇಂದು ನಮಗೆ ಅಚ್ಚರಿಯನ್ನುಂಟು ಮಾಡುತ್ತದೆ ಸಂಶೋಧಕರ ಅಭಿಮತದಂತೆ,

I ಕಾಮಿಕಾಗಮದಲ್ಲಿ ೧೦೦, ೦೦೦, ೦೦೦, ೦೦೦, ೦೦೦, ೦೦೦ ಶ್ಲೋಕಗಳಿದ್ದುವೆಂದೂ ಇದರಲ್ಲಿ ೧. ಉತ್ತರ ೨. ಭೈರವೋತ್ತರ ೩. ನಾರಸಿಂಹ ಎಂಬ ಉಪಾಗಮಗಳು

II ಯೋಗಜ ಅಥವ ಯೋಗಜ್ಞಾನಾಗಮದಲ್ಲಿ ೧೦೦ ೦೦೦ ಶ್ಲೋಕಗಳು. ಇದರಲ್ಲಿ ೧. ವಿನಸಿರೋತ್ತರ ೨. ತಾರಕತಂತ್ರ ೩. ಸಾಂಖ್ಯಾಗವ ೪. ಶ್ಯಾಂತ್ಯಾಗಮ 5) ಆತ್ಮಯೋಗವೆಂಬ ಉಪಾಗಮಗಳು.

III ಚಿಂತ್ಯಾಗಮದಲ್ಲಿ ೧೦೦ ೦೦೦ ಶ್ಲೋಕಗಳು ಇದರಲ್ಲಿ ೧. ಸುಚಿಂತ್ಯಾಗಮ ೨. ಶುಭಾಗಮ ೩. ವಾಮತಂತ್ರ ೪. ಪಾಪನಾಶರ ೫. ಶರೋದ್ಭವ ೬. ಅಮೃತಾಮಗ ವೆಂಬ ಉಪಾಗಮಗಳು.

IV ಕಾರಣಾಗಮದಲ್ಲಿ ೧೦, ೦೦೦,೦೦೦ ಶ್ಲೋಕಗಳು. ಇದರಲ್ಲಿ ೧. ಕಾರಣತಂತ್ರ ೨. ಪಾವನತಂತ್ರ ೩. ದೌರ್ಜನ್ಯತಂತ್ರ ೪. ಮಹೇಂದ್ರತಂತ್ರ ೫. ಭೀಮತಂತ್ರ ೬. ಮಾರಣತಂತ್ರ ೭. ಈಶಾನತಂತ್ರ ವೆಂಬ ಉಪಾಗಮಗಳು.

V ಅಜಿತಾಗಮದಲ್ಲಿ ೧೦೦ ೦೦೦ ಶ್ಲೋಕಗಳು. ಇವರಲ್ಲಿ ೧. ಪ್ರಭುತ್ವಾಗಮ ೨. ವಿರೋದ್ಭೂತಾಗಮ ೩. ಪಾರ್ವತಿ ತಂತ್ರ ೪. ಪದ್ಮಸಂಹಿತ ಎಂಬ ಉಪಾಗಮಗಳು.

VI ದೀಪ್ತಾಗಮದಲ್ಲಿ ೧೦೦೦೦೦ ಶ್ಲೋಕಗಳು. ಇವರಲ್ಲಿ ೧. ಅಮೇಯಾಗಮ ೨. ಅಪ್ರತಿಮಾಗಮ ೩. ಅಪ್ಯಾಗಮ ೪. ಸಂಖ್ಯಾಗಮ ೫. ಅಭಿತೈಜಸಾಗಮ ಎಂಬ ಉಪಾಗಮಗಳು

VII ಸೂಕ್ಷ್ಮಾಗಮದಲ್ಲಿ ೧, ೦೦೦, ೦೦೦, ೦೦೦, ೦೦೦, ೦೦೦ ಶ್ಲೋಕಗಳು. ಇದರಲ್ಲಿ ೧. ಸೂಕ್ಷ್ಮ ಸಂಹಿತ ಎಂಬ ಉಪಾಗಮ.

VIII ಸಹಸ್ರಾಗಮದಲ್ಲಿ ಅಥವಾ ಸಾಹಸ್ರಕಾಗಮದಲ್ಲಿ ೧೦೦, ೦೦೦, ೦೦೦, ೦೦೦, ೦೦೦ ಶ್ಲೋಕಗಳು ಇದರಲ್ಲಿ ೧, ಅತೀತಾಗಮ ೨. ಅರುಳಾಗಮ ೩. ಶುದ್ಧಾಗಮ ೪. ಅಪ್ರಮೇಯಾಗಮ ೫. ಜ್ಯೋತಿರ್ಭೂವನಾಗಮ ೬. ಪ್ರಬುದ್ಧಾಗಮ ೭. ವಿಬುದ್ಧಾಗಮ ೮. ಹಸ್ತಾಗಮ ೯. ಅಲಂಕಾರಾಗಮ ೧೦. ಶುಭೋದಯಾಗಮ ಎಂಬ ಉಪಾಗಮಗಳು.

IX ಅಂಶಮಾನಾಗಮದಲ್ಲಿ ೧,೦೦೦, ೦೦೦ ಶ್ಲೋಕಗಳು ಇದರಲ್ಲಿ ೧. ವಿದ್ಯಾಪುರಾಣ ೨. ಭಾಸ್ಕರಾಗವು ೩. ನೀಲಲೋಹಿತಾಗಮ ೪. ಪ್ರವರಣಾಗಮ ೫. ಭೂತತಂತ್ರ ೬. ಆತ್ಮಾಲಂಕಾರ ೭. ಕಾಶ್ಯಪಾಗಮ ೮. ಗೌತಮಾಗಮ ೯. ಬ್ರಹ್ಮಾ ಗಮ ೧೦. ವಶಿಷ್ಠಾಗಮ ೧೧. ಮಹೇಂದ್ರಾಗಮ ೧೨. ಈಶಾನೋತ್ತರ ಎಂಬ ಉಪಾಗಮಗಳು.

X ವಿಜಯಾಗಮದಲ್ಲಿ ೩೦, ೦೦೦, ೦೦೦, ಶ್ಲೋಕಗಳು. ಇದರಲ್ಲಿ ೧. ವಿಜಯತಂತ್ರ ೨. ಉದ್ಭವತಂತ್ರ ೩. ಸೌಮ್ಯತಂತ್ರ ೪. ಅಘೋರ ತಂತ್ರ ೫. ಮೃತ್ಯು ನಾಶಕ ತಂತ್ರ ೬. ಕುಬೇರೇಶ ತಂತ್ರ ೭. ವಿಮಲ ತಂತ್ರ ೮. ಮಹಾ ಘೋರತಂತ್ರ ಎಂಬ ಉಪಾಗಮಗಳು.

XI ಸುಪ್ರಭೇದಾಗಮದಲ್ಲಿ ೩೦, ೦೦೦, ೦೦೦, ಶ್ಲೋಕಗಳು. ಇದರಲ್ಲಿ ೧. ಸುಬೋಧಾಗಮ ೨. ಪ್ರಬೋಧಾಗಮ ೩. ಬೋಧಾಗಮ ಎಂಬ ಉಪಾಗಮ ಗಳು.

XII ಸ್ವಯಂಭುವಾಗಮದಲ್ಲಿ ೩೫, ೦೦೦, ೦೦೦, ಶ್ಲೋಕಗಳು ಇದರಲ್ಲಿ ೧. ಸ್ವಯಂಭೂತ, ೨. ಪ್ರಜಾಪತಿಮತ ೩. ಪದ್ಮತಂತ್ರ ಎಂಬ ಉಪಾಗಮಗಳು.

XIII ನಿಶ್ವಾಸಾಗಮದಲ್ಲಿ ೧೦, ೦೦೦, ೦೦೦, ಶ್ಲೋಕಗಳು. ಇದರಲ್ಲಿ ೧. ನಿಶ್ವಾಸ ೨. ಅಂತರ ನಿಶ್ವಾಸ ೩. ನಿಶ್ವಾಸ ಮುಖೋದಯ ೪. ನಿಶ್ವಾಸನಯನ ೫. ನಿಶ್ವಾಸ ಕಾರಕ ೬. ಘೋರಸಂಹಿತಾ ೭. ಸುಸಾಂಖ್ಯ ೮. ಗೃಹ್ಯ ಉಪಾ ಗಮಗಳು.

XIV ಅನಲಾಗಮ ಅಥವಾ ಅನಿತಾಗಮದಲ್ಲಿ ೩೦೦, ೦೦೦ ಶ್ಲೋಕಗಳೂ ಇದರಲ್ಲಿ ೧. ಆಗ್ನೇಯವೆಂಬ ಉಪಾಗಮ.

XV ವೀರಾಗಮದಲ್ಲಿ ೧೦೦, ೦೦೦ ಶ್ಲೋಕಗಳೂ ಇದರಲ್ಲಿ ೧. ಪ್ರಸ್ತಾರ ತಂತ್ರ ೨. ಪ್ರಸ್ಫುರ ತಂತ್ರ ೩. ಪ್ರಬೋಧಕ ತಂತ್ರ ೪. ಬೋಧಕ ತಂತ್ರ ೫. ಅಮೋಹ ತಂತ್ರ ೬. ಮೋಹಸಮಯ ತಂತ್ರ ೭. ಬೋಧ ತಂತ್ರ ೮. ಶಕಟತಂತ್ರ ೯. ಸಕಲತಂತ್ರ ೧೦. ಹಲಿತಂತ್ರ ೧೧. ವಿಲೋಖನ ತಂತ್ರ ೧೨. ಭದ್ರತಂತ್ರ ೧೩. ವಿರಾಟತಂತ್ರ ಎಂಬ ಉಪಾಗಮಗಳು.

XVI ರೌರವಾಗಮದಲ್ಲಿ ೧೦೦, ೦೦೦, ೦೦೦, ಶ್ಲೋಕಗಳೂ ಇದರಲ್ಲಿ ೧. ಕಾಲಿದಮನ ೨. ರೌರವೋತ್ತರ ೩. ಕುಮಾರ, ೪. ಕಲ ೫. ಮಹಾಕಲ ೬. ಇಂದ್ರಾಗಮ ಎಂಬ ಉಪಾಗಮಗಳು.

XVII ಮುಕುಟಾಗಮದಲ್ಲಿ ೧೦೦, ೦೦೦, ಶ್ಲೋಕಗಳೂ ಇದರಲ್ಲಿ ೧. ಮುಕುಟ ೨. ಮಕುಟೋತ್ತಾರ ಎಂಬ ಉಪಾಗಮಗಳು,

XVIII ವಿಮಲಾಗಮದಲ್ಲಿ ೩೦೦, ೦೦೦, ಶ್ಲೋಕಗಳೂ ಇದರಲ್ಲಿ ೧. ಅನಂತ ಭೋಗಾಗಮ ೨. ಆಕ್ರಾಂತಾಗಮ ೩. ಹೃದ್ದಾಗಮ ೪. ಅವಿಕ್ರಿತಾಗಮ ೫. ವಿಭುತಾಗಮ ೬. ಮರಣತಂತ್ರ ಎಂಬ ಉಪಾಗಮಗಳು.

XIX ಚಂದ್ರ ಜ್ಞಾನಾಗಮದಲ್ಲಿ ೩೦, ೦೦೦, ೦೦೦, ಶ್ಲೋಕಗಳೂ ಇದರಲ್ಲಿ ೧. ಸ್ಥಿರಸಂಹಿತ ೨. ಸ್ಥಾಣುಸಂಹಿತ ೩. ಮಹತ್ ಸಂಹಿತ ೪. ನಂದಿಸಂಹಿತ ೫. ನಂದಿಕೇಶ್ವರ ಸಂಹಿತ ೬. ಅಕಪಾದಪುರಾಣ ೭. ಶಂಕರಾಗಮ ೮. ನೀಲಭದ್ರ ತಂತ್ರ ೯. ಶಿವಭದ್ರಾಗಮ ೧೦. ಕಾಲಭೇದಾಗಮ ೧೧. ಶ್ರೀಮುಖಾಗಮ ೧೨. ಶಿವಶಾಸನಾಗಮ ೧೩. ಶಿವಶೇಖರಾಗಮ ೧೪. ದೇವೀಮಾತಾಗಮ ಎಂಬ ಉಪಾಗಮಗಳು.

XX ಬಿಂಬಾಗಮದಲ್ಲಿ ೧೦೦, ೦೦೦, ಶ್ಲೋಕಗಳೂ ಇದರಲ್ಲಿ ೧. ಚತುರ್ಮುಖ ತಂತ್ರ ೨. ಮಲಯತಂತ್ರ ೩. ಮಹಾಯೋಗ ತಂತ್ರ ೪. ಸಂಸ್ಥೋಭಾಗಮ ೫. ಪ್ರತಿಬಿಂಬಾಗಮ ೬. ಅರ್ಥಾಲಂಕಾರ ೭. ವಾಯವ್ಯ ತಂತ್ರ ೮. ಕೌಟತಂತ್ರ ೯. ತ್ರತಿನೀಲಕರ ೧೦. ತುಲಾವೃತ ೧೧. ತುಲಾಯೋಗ ೧೨. ಕುಟ್ಟಮತಂತ್ರ ೧೩ ಸರ್ವಶೇಖರ ೧೪ ಮಹಾವಿದ್ಯಾ ೧೫. ಮಹಾಸಾರ ಎಂಬ ಉಪಾಗಮಗಳು

XXI ಪ್ರೋದ್ಗೀತಾಗಮದಲ್ಲಿ ೩೦೦, ೦೦೦ ಶ್ಲೋಕಗಳೂ ಇದರಲ್ಲಿ ೧. ಕಚಾಗಮ ೨. ಕರಾಹತಂತ್ರ ೩. ಪಿಂಗಳ ಮತ ೪ ಪಶುಬಂಧ ೫. ದಂಡಧರ ತಂತ್ರ ೬. ಕುಶತಂತ್ರ ೭. ಧನುರ್ಧಾರಣ ೮. ಶಿವಜ್ಞಾನ ೯. ವಿಜ್ಞಾನ ೧೦. ತ್ರಿಕಾಲಜ್ಞಾನ ೧೧. ಆಯುರ್ವೇದ ೧೨. ಧನುರ್ವೇದ ೧೩. ಸರ್ಪದಂಷ್ಟ್ರ ವಿಭೇದ ೧೪. ಸಂಗೀತ ೧೫. ಭರತ ೧೬. ಆತೋದ್ಯ ಎಂಬ ಉಪಾಗಮಗಳು.

XXII ಲಲಿತಾಗಮದಲ್ಲಿ ೮೦೦,೦೦೦ ಶ್ಲೋಕಗಳೂ ಇದರಲ್ಲಿ ೧. ಲಲಿತ ೨. ಲಲಿತೋತ್ತರ ೩. ಕೌಮಾರ ೪. ವಿಘ್ನೇಶ್ವರಾಗಮವೆಂಬ ಉಪಾಗಮಗಳೂ.

XXIII ಸಿದ್ಧಾಗಮದಲ್ಲಿ ೫,೦೦೦,೦೦೦, ಶ್ಲೋಕಗಳಲ್ಲೂ ಇದರಲ್ಲಿ ೧. ಸಾಪೋತ್ತರ ೨. ದೇವೇಶೋತ್ತರ ೩. ಶಲಾಭೇದ ೪. ಶಶಿಮಂಡಲ ಎಂಬ ಉಪಾಗಮಗಳು.

XXIV ಶಾಂತಾಗಮ ಅಥವಾ ಸಂತಾನಾಗಮದಲ್ಲಿ ೬,೦೦೦,೦೦೦, ಶ್ಲೋಕಗಳೂ ಇದರಲ್ಲಿ ೧. ಲಿಂಗಾಧ್ಯಕ್ಷ ೨. ಪುರಾಧ್ಯಕ್ಷ ೩. ಶಂಕರತಂತ್ರ ೪. ಮಹೇಶ್ವರಾಗಮ ೫. ಅಸಂಖ್ಯಾತಂತ್ರ ೬. ಅನಿಲಾಗಮ ೭. ದ್ವಂದ್ವಾಗಮ ಎಂಬ ಉಪಾಗಮಗಳು.

XXV ಸರ್ವೋತ್ತರಾಗಮದಲ್ಲಿ ಅಥವಾ ಸರ್ವೋತ್ತಾಗಮದಲ್ಲಿ ೨೦೦,೦೦೦ ಶ್ಲೋಕಗಳೂ ಇದರಲ್ಲಿ ಉತ್ತರಾಗಮ ೨. ಶತ್ರೋತ್ತಾಗಮ ೩. ವಿಶ್ವೋತ್ತರಾಗಮ ಎಂಬ ಉಪಾಗಮಗಳು.

XXVI ಪರಮೇಶ್ವರಾಗಮದಲ್ಲಿ ೧,೨೦೦,೦೦೦, ಶ್ಲೋಕಗಳೂ ಇದರಲ್ಲಿ ೧. ಮತಂಗತಂತ್ರ ೨. ಯಕ್ಷಿಣೀತಂತ್ರ ೩. ಪದ್ಮಾಗಮ ೪. ಪೌಷ್ಕರಾಗಮ ೫. ಸುಪ್ರಯೋಗ ೬. ಹಂಸಾಗಮ ೭. ಸಮನ್ಯಾಗಮ ಎಂಬ ಉಪಾಗಮಗಳೂ.

XXVII ಕಿರಣಾಗಮದಲ್ಲಿ ೫೦,೦೦೦,೦೦೦, ಶ್ಲೋಕಗಳು ಇದರಲ್ಲಿ ೧. ಗರುಡಾಗಮ ೨. ನೈರುತಾಗಮ ೩. ನೀಲತಂತ್ರ ೪. ರುಕ್ಷಾಗಮ ೫. ಭವಾಗಮ ೬. ವೈಕ್ರಮಾಗಮ ೭. ಬುದ್ಧಾಗಮ ೮. ಪ್ರಬುದ್ಧಾಗಮ ೯. ಕಾಲ ತಂತ್ರ ಎಂಬ ಉಪಾಗಮಗಳೂ.

XXVIII ವಾತುಳಾಗಮದಲ್ಲಿ ೧೦೦,೦೦೦, ಶ್ಲೋಕಗಳು ಇದರಲ್ಲಿ ೧. ವಾತುಳ ೨. ಉತ್ತರವಾತುಳ ೩. ಕಾಲಜ್ಞಾನ ೪. ಪುರಾಜಿತ ೫. ಸರ್ವಾಗಮ ೬. ಸರ್ವೇಷ್ಟಾಗಮ ೭. ಶ್ರೇಷ್ಠಾಗಮ ೮. ನಿತ್ಯಾಗಮ ೯. ಶುದ್ಧಾಗಮ ೧೦. ಮಹ ದಾಗಮ ೧೧. ವಿಶ್ವಾಸಾಗಮ ೧೨. ವಿಶ್ವಾತ್ಮಕಾಗಮ ಎಂಬ ಉಪಾಗಮಗಳು ಇರು ವುದಾಗಿ ಗೊತ್ತಾಗಿದೆ. ಇಷ್ಟು ವಿಸ್ತಾರವಾದ ಸಾಹಿತ್ಯ ರಾಶಿಪೂರ್ಣವಾಗಿ ನಮಗೆ ಇಂದು ಲಭ್ಯವಾಗಿಲ್ಲ. ಲಭ್ಯವಾಗಿರುವ ಎಲ್ಲ ಆಗಮಗಳೂ ಮುದ್ರಣವನ್ನು ಕಂಡಿಲ್ಲ. ಮೇಲ್ಕಂಡ ಹೆಸರುಗಳಿಂದ ಊಹಿಸುವುದಾದರೆ ಪ್ರಪಂಚದ ಯಾವ ವ್ಯವಹಾರವನ್ನು ಆಗಮಗಳು ಚರ್ಚಿಸದೆ ಬಿಟ್ಟಿಲ್ಲವೆಂದು ತೋರುತ್ತದೆ.

ಆಗಮಗಳೂ ಉಪಾಗಮಗಳೂ ಶೈವಸಂಪ್ರದಾಯಗಳ ಧರ್ಮದರ್ಶನ ನೀತಿ ವ್ಯವಹಾರವೇ ಮೊದಲಾದ ಪುರುಷಾರ್ಥಗಳ ವಿವರಣೆಗೆ ಮೂಲಕೃತಿಗಳು. ಇವು ಸಂಸ್ಕೃತದಲ್ಲಿರುವ ಗ್ರಂಥಗಳು. ಆಗಮ ಎಂದರೆ ಪಶುಪತಿಜ್ಞಾನ ಅರ್ಥಾತ್ ಆ-ಪಾಶ, ಗ-ಪಶು, ಮ-ಪತಿ ಎಂಬ ಅರ್ಥವೂ ಮತ್ತೊಂದು ರೀತಿಯಿಂದ ಆ-ಶಿವಜ್ಞಾನ, ಗ-ಮೋಕ್ಷ, ಮ-ಮಲಪರಿಹಾರ ಎಂದು ಅರ್ಥವೂ ಬರುವುದೆಂದು ವ್ಯಾಖ್ಯಾನ ಮಾಡಿದ್ದಾರೆ. ಒಟ್ಟಿನಲ್ಲಿ ಶಿವತತ್ವ ಪ್ರಾಪ್ತಿಶಾಸ್ತ್ರವೆಂದು ಹೇಳಬಹುದು. ಇವು ವೇದಗಳಿಗಿಂತಲೂ ಹಿಂದಿನ ಕೃತಿಗಳೆಂದೂ ದ್ರಾವಿಡ ಕೃತಿಗಳೆಂದೂ ಶ್ರೀ ಎನ್. ಸಿ. ಕಂಪಯ್ಯಪಿಳ್ಳೆಯವರು ಅಭಿಪ್ರಾಯಪಡುತ್ತಾರೆ. (Thamil India ಎಂಬ ತಮಿಳುಗ್ರಂಥದ ೧೮೨-೮೩) ವೇದಗಳಿಗೆ ಸಂಸ್ಕೃತ ಭಾಷೆ ಇತ್ತೆ ಎಂಬುದು ವಿವಾದಾಸ್ಪದ ವಿಚಾರ. ಮಹಾ ಭಾರತದಲ್ಲಿ ಆಗಮಗಳ ವಿಚಾರ ಬಂದಿರುವುದ ರಿಂದ ಕ್ರಿ. ಪೂ. ಆರನೇ ಶತಮಾನಕ್ಕಿಂತಲೂ ಹಿಂದೆಯೇ ಆಗಮಗಳಿದ್ದುವೆಂದು ವ್ಯಕ್ತವಾಗುತ್ತದೆ. ಹರಪ್ಪ,ಮೊಹೆಂಜದಾರೋ ಸಂಶೋಧನೆಯಲ್ಲಿ ದೊರೆತಿರುವ ಅವಶೇಷಗಳಲ್ಲಿ ಕೆಲವು ಲೇಖನಗಳು ದೊರೆತಿವೆ. ಆ ಭಾಷೆಯ ವಿಷಯದಲ್ಲಿ ಇನ್ನೂ ಸಂಶೋಧನೆ ನಡೆಯುತ್ತಿದೆ. ಇದೇ ರೀತಿಯ ಲಿಪಿಯು ಮೆಸಪೊಟೇ ಮಿಯಾದಲ್ಲಿಯೂ ದೊರೆತಿರುವುದಾಗಿಯೂ ಆ ಭಾಷೆಯು ಗೊತ್ತಾದಾಗ ವಿಶ್ವ ಸಂಸ್ಕೃತಿಯ ವಿಷಯದಲ್ಲಿ ಸರ್ವೋದಯವುಂಟಾಗುವುದೆಂದು ಸರ್ ಜಾನ್ ಮಾರ್ಷಲ್

ಮತ್ತು ಸ್ಟುವರ್ಟ್ ಪಿಗ್ಗಾಟ್‌ರವರು ಅಭಿಪ್ರಾಯಪಡುತ್ತಾರೆ. ಈ ಸಾಹಿತ್ಯವು ವೇದಕ್ಕಿಂತ ಹಿಂದಿನದೆಂಬುದಕ್ಕೆ ತಮಿಳುಭಾಷೆಯು ಸಂಸ್ಕೃತಕ್ಕಿಂತ ಪ್ರಾಚೀನವೆಂದೂ ಮೂಲ ಆಗಮಗಳು ಮೊದಲು ತಮಿಳಿನಲ್ಲಿದ್ದು ನಂತರ ಸಂಸ್ಕೃತಕ್ಕೆ ಪರಿವರ್ತನೆ ಯಾದುವೆಂದೂ ಸಾಗರ ಪ್ರವಾಹದಲ್ಲಿ ಕೊಚ್ಚಿಹೋಗಿರುವುದಾಗಿಯೂ ತಮಿಳು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ. ಇದು ಇನ್ನೂ ವಿವಾದಾಸ್ಪದ ಸಂಗತಿಯೇ ಆಗಿವೆ. ಇಷ್ಟು ಅಪಾರ ಸಾಹಿತ್ಯ ಸಂಪತ್ತಾದ ಆಗಮಗಳೆಲ್ಲಾ ಇನ್ನೂ ಪ್ರಕಟ ವಾಗಿಲ್ಲ. ಕೆಲವು ಸಂಸ್ಕೃತದಲ್ಲಿ ದೊರೆಯದೆ ಇನ್ನೂ ತಮಿಳು ಅಕ್ಷರದ ಕರಡು ಪ್ರತಿಗಳಲ್ಲೇ ಉಳಿದಿವೆ. ಬಹುಭಾಗ ಆಗಮಗಳು ನಮ್ಮ ದೇಶಕ್ಕಿಂತ ವಿದೇಶಗಳ ಗ್ರಂಥಾಗಾರಗಳಲ್ಲಿವೆ. ಲಂಡನ್ನಿನಲ್ಲಿರುವ ಭಾರತೀಯ ಗ್ರಂಥಾಲಯದಲ್ಲಿ 'ಪರ ಮೇಶ್ವರತಂತ್ರ' ಸೂಕ್ಷ್ಮಾಗಮ, ವಾತುಲಾಗಮ ಮತ್ತು ಪೌಷ್ಕರಾಗಮದ ಮೂಲ ಪ್ರತಿಗಳಿರುವುದಾಗಿ ತಿಳಿದುಬಂದಿದೆ. ಟಿಬೆಟ್, ನೇಪಾಳ, ಬರ್ಲಿನ್ ನಗರಗಳ ರಾಷ್ಟ್ರೀಯ ಗ್ರಂಥಾಲಯಗಳಲ್ಲಿ ಸಹ ಕೆಲವು ಆಗಮಗಳಿರುವುದಾಗಿ ತಿಳಿದುಬಂದಿದೆ. ಇತ್ತೀಚೆಗೆ ಪಾಂಡುಚೆರಿಯಲ್ಲಿ ಆಗಮಶಾಸ್ತ್ರಗಳ ಶೋಧನೆಯ ಸಿದ್ಧತೆಗಳಾಗುತ್ತಿ ರುವುದೂ ಭಾರತೀಯ ಸಂಸ್ಕೃತಿಯ ಪುಣ್ಯ ವಿಶೇಷ. ಶಿವಾನುಗ್ರಹದಿಂದ ಆಗಮ ಸಾಹಿತ್ಯ ಪೂರ್ಣವಾಗಿ ಪ್ರಕಟವಾದಲ್ಲಿ ಜಗದ ಜನಜೀವನದಲ್ಲಿ ನವ್ಯಚೇತನವೇ ಉದಿಸಬಹುದೆಂದು ಆಶಿಸಬಹುದು. ಇದರಿಂದ ಆಧುನಿಕ ರಾಜಕೀಯ ಅರ್ಥಶಾಸ್ತ್ರ ಭೌತವಿಜ್ಞಾನದಲ್ಲಿಯೂ ಸಹ ಪ್ರಗತಿ ಪ್ರಚೋದನೆಯಾಗುವುದರಲ್ಲಿ ಸಂಶಯವಿಲ್ಲ.

ಧರ್ಮ ಮತ್ತು ದರ್ಶನಗಳ ದೃಷ್ಟಿಯಿಂದ ಶೈವ ಧರ್ಮದ ಎಲ್ಲ ಸಂಪ್ರದಾಯ ಗಳಿಗೂ ಆಗಮವೇ ಮೂಲ ಮತ್ತು ಸರ್ವಮಾನ್ಯ. ವೇದಾಂತದಂತೆ ಆಗಮಾಂತದವರು ವೇದವೇ ಭಾರತೀಯ ದರ್ಶನಕ್ಕೆ ಸಂಸ್ಕೃತಿಗೆ ಬುನಾದಿಯೆಂದು ಒಪ್ಪುವುದಿಲ್ಲ. ಆದರೆ ವೇದ ಸಾಹಿತ್ಯವನ್ನು ಶೈವದಾರ್ಶನಿಕರು ಬಹಿಷ್ಕರಿಸಿಲ್ಲ. ವೈದಿಕ ಸಾಹಿತ್ಯಾಭಿಮಾನಿ ಗಳು ಮಾತ್ರ ಆಗಮ ಸಾಹಿತ್ಯದ ಬಗ್ಗೆ ಆಲಸ್ಯ ವ್ಯಕ್ತಪಡಿಸಿ ಅಲ್ಲಗಳೆದ ಸಂದರ್ಭಗಳಿವೆ. ಆಗಮ ದರ್ಶನಕ್ಕೆ ಪರಿಪೋಷಕ ವಿಚಾರವಾಹಿ ನಿಯು ವೇದ ಉಪನಿಷತ್ ಸಾಹಿತ್ಯ ಸಾಗರದಲ್ಲಿಯೂ ಇವೆಯೆಂದೂ ಶೈವದಾರ್ಶ ನಿಕರು ಒಪ್ಪಿದ್ದಾರೆ. ಉಪನಿಷತ್ತುಗಳಲ್ಲಿ ಕೆಲವು ಶೈವೋಪನಿಷತ್ತುಗಳೆಂದೇ ಪರಿಗಣಿಸ ಲ್ಪಟ್ಟಿವೆ. ಅರಣ್ಯಕಗಳು, ಬ್ರಾಹ್ಮಣಗಳು, ಸ್ಮೃತಿಗಳು ಶೈವ ಸಂಪ್ರದಾಯಕ್ಕೆ ಸಹ ಕಾರಿಗಳಾಗಿಲ್ಲ. ಪುರಾಣಗಳಲ್ಲಿ ಶೈವ ಪುರಾಣಗಳ ಸಂಖ್ಯೆಯೇ ಮಿಗಿಲಾಗಿರುವುದರಿಂದ ಶೈವ ದರ್ಶನಕ್ಕೆ ವೇದ ಉಪನಿಷತ್ತು, ಆಗಮ, ಪುರಾಣಗಳು ಆದ್ಯ ಸಂಪತ್ತಾಗಿವೆ. ಸಂಸ್ಕೃತದಲ್ಲಿ ಸಾಹಿತ್ಯ ಬೆಳೆದಂತೆ ಶೈವದರ್ಶನ ಬೋಧಕವಾದ ಅಪಾರವಾದ ಸಾಹಿತ್ಯ ರಾಶಿ ತಮಿಳಿನಲ್ಲಿಯೂ ಕನ್ನಡದಲ್ಲಿಯೂ ಬೆಳೆದಿದೆ ಬೆಳೆಯುತ್ತಿದೆ. ಈ ದರ್ಶನವು

ಅಂತರರಾಷ್ಟ್ರೀಯ ದರ್ಶನವಾಗುವ ಭಾಗ್ಯ ಬರುವ ನಿರೀಕ್ಷೆಯೂ ಇದೆಯೆಂದರೆ ಅತಿಶಯೋಕ್ತಿಯಲ್ಲ.

## ಶೈವ ದರ್ಶನದ ಪ್ರದೇಶಗಳು.

ಶೈವ ದರ್ಶನವೂ ಭಾರತಾದ್ಯಂತ ಪ್ರಚಲಿತ ಸಂಸ್ಕೃತಿಯಾಗಿತ್ತಷ್ಟೆ. ಆದರೆ ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಪ್ರಭೇದವಿರುವುದು ಇತಿಹಾಸದಿಂದ ವ್ಯಕ್ತವಾಗುತ್ತದೆ. ಉತ್ತರದಲ್ಲಿ ಕಾಶ್ಮೀರ ಶೈವವೆಂದೂ ಈಶ್ವರ ಪ್ರತ್ಯಭಿಜ್ಞಾ ಶಾಸ್ತ್ರವೆಂದೂ ಪ್ರಖ್ಯಾತವಾದ ಶೈವದರ್ಶನವು ಪ್ರಚಲಿತವಾಗಿದೆ. ದಕ್ಷಿಣದಲ್ಲಿ ತಮಿಳ ಶೈವ ಸಿದ್ಧಾಂತ ಮತ್ತು ಕನ್ನಡ ಆಂಧ್ರ ಮಹಾರಾಷ್ಟ್ರದ ವೀರಶೈವ ಅಥವಾ ಶಿವಾದ್ವೈತ ಸಿದ್ಧಾಂತ ಪ್ರಚಲಿತವಾಗಿದೆ ಪಾಶುಪತ ಮತ್ತು ಲಾಕುಲೀಶ ಶೈವ ಸಂಸ್ಕೃತಿ, ಗುಜರಾತ ರಾಜಪುತಾಣಗಳಲ್ಲಿ ಪ್ರಬಲ ಸ್ಥಿತಿಯಲ್ಲಿ ತಿಳಿಯಬರುತ್ತದೆ. ರಾಜೇಶ್ವರ ಶೈವದರ್ಶನವು ಮಲೆಯಾಳದಲ್ಲೂ ಬಂಗಾಳದಲ್ಲೂ ಪ್ರಚಲಿತವಿತ್ತೆಂದು ಹೇಳಬಹುದು. ಆದರೆ ಇಂದು ಎಲ್ಲ ಸಂಪ್ರದಾಯಗಳೂ ಪ್ರತ್ಯೇಕವಾಗಿ ಜನಜೀವನದಲ್ಲಿ ಬೆಳೆದು ಬಂದಿಲ್ಲ ಕಾಶ್ಮೀರಶೈವ, ವೀರಶೈವ ಮತ್ತು ತಮಿಳು ಶೈವ ಎಂಬ ಮೂರು ಪ್ರಭೇದಗಳು ಇಂದಿಗೂ ಜನಜೀವನದ ದರ್ಶನವಾಗಿ ಕೋಟ್ಯಾನುಕೋಟಿ ಅನುಚರರನ್ನು ಹೊಂದಿ ಶಾಸ್ತ್ರರಾಶಿ ಬೆಳೆಯುತ್ತಿದೆ. ಆದುದರಿಂದ ಈ ಮೂರು ಪ್ರಭೇದಗಳು ಮಾತ್ರ ಜನಾದರಣೀಯವೂ ವಿಚಾರಾರ್ಹವೂ ಆದ ಸಂಸ್ಕೃತಿಯಾಗಿವೆ. ಈ ಪ್ರಭೇದಗಳಿಗೆ ಮೂಲ ಸಾಹಿತ್ಯ ಸಂಪತ್ತೀ ಅಲ್ಲದೆ ಕಾಲ ಕಾಲಕ್ಕೆ ದಾರ್ಶನಿಕ ಸಾಹಿತ್ಯ ಬೆಳೆದು ಬಂದಿದೆ.

## ದಾರ್ಶನಿಕ ಸಾಹಿತ್ಯಗಳು

ವೇದೋಪನಿಷತ್ತುಗಳನ್ನು ಆಧಾರವಾಗಿಟ್ಟುಕೊಂಡು ಷಡ್ದರ್ಶನವು ಸೂತ್ರವಾಗಿ ವ್ಯಾಖ್ಯಾನವಾಗಿ ಬೆಳೆದು ಬಂದಂತೆ ಆಗಮಗಳನ್ನು ಆಧಾರವಾಗಿಟ್ಟುಕೊಂಡು ಸೂತ್ರಗಳ ವಿಮರ್ಶಾ ಕೃತಿಗಳು ಶೈವದರ್ಶನದಲ್ಲಿಯೂ ಬೆಳೆದಿವೆ. ಕಾಶ್ಮೀರ ಶೈವಕ್ಕೆ ಈಶ್ವರ ಪ್ರತ್ಯಭಿಜ್ಞಾಶಾಸ್ತ್ರವೆಂದೂ, ತ್ರಿಕಶಾಸ್ತ್ರವೆಂದೂ ಕರೆಯುವುದುಂಟು. ಈ ದರ್ಶನಕ್ಕೆ ಆಧಾರವಾಗಿರುವ ಸಾಹಿತ್ಯವನ್ನು ೩ ಭಾಗ ಮಾಡಬಹುದು ೧. ಆಗಮಶಾಸ್ತ್ರ ೨. ಸ್ಪಂದಶಾಸ್ತ್ರ ಮತ್ತು ೩. ಪ್ರತ್ಯಭಿಜ್ಞಾಶಾಸ್ತ್ರವೆಂದು ವಿಮರ್ಶಕರು ವಿಂಗಡಿಸುತ್ತಾರೆ.

ಆಗಮಗಳಲ್ಲಿ ಮುಖ್ಯವಾಗಿ ಮಾಲಿನಿವಿಜಯ, ಸ್ವಚ್ಛಂದ, ವಿಜ್ಞಾನ ಭೈರವ, ಉಚ್ಛುಷ್ಮ ಭೈರವ, ಆನಂದ ಭೈರವ, ಮೃಗೇಂದ್ರ, ಮತಂಗ, ನೇತ್ರ, ನೈಃಶ್ವಾಸ ಸ್ವಯಂಭುವ ಮತ್ತು ರುದ್ರಯಾಮಲಗಳನ್ನು ಹೆಚ್ಚಾಗಿ ಈ ದರ್ಶನವು ಅನುಸರಿಸಿದಂತೆ ತೋರುತ್ತದೆ. ಈ ಆಗಮಗಳ ಆಧಾರದ ಮೇಲೆ ಶಿವಸೂತ್ರ ರಚನೆಯಾಗಿ ವೃತ್ತಿ, ವಾರ್ತಿಕ, ವಿಮರ್ಶಿನಿ ಎಂಬ ವ್ಯಾಖ್ಯಾನ ರಾಶಿಯೂ ಬೆಳೆದಿದೆ. ಎರಡನೆಯದು ಸ್ಪಂದಶಾಸ್ತ್ರ. ಸ್ಪಂದ ಸೂತ್ರಗಳು ಅಥವಾ ಸ್ಪಂದ ಕಾರಿಕೆಗಳು ವಿವೃತಿ, ಪ್ರದೀ

ಪಿಕ, ಸ್ಪಂದ ಸಂದೋಹ, ಸ್ಪಂದ ನಿರ್ಣಯ ಎಂಬ ವ್ಯಾಖ್ಯಾನ ಗ್ರಂಥಗಳಿಂದ ಕೂಡಿ ಈ ವಾದದ ವಿವರಣೆಗೆ ಹೆಚ್ಚು ಸಹಕಾರಿಗಳಾಗಿವೆ. ಮೂರನೆಯದಾದ ಮುಖ್ಯ ಸಾಹಿತ್ಯ ರಾಶಿ ಪ್ರತ್ಯಭಿಜ್ಞ ಶಾಸ್ತ್ರ. ಇದಕ್ಕೆ ಮಾನವ ಶಾಸ್ತ್ರ ಅಥವಾ ವಿಚಾರ ಶಾಸ್ತ್ರ ಎಂದೂ ಕರೆಯುವುದುಂಟು. ಶಿವದೃಷ್ಟಿ, ಪ್ರತ್ಯಾಭಿಜ್ಞಾ ಸೂತ್ರಗಳು. ಪ್ರತ್ಯಭಿಜ್ಞಾ ವಿಮರ್ಶಿನಿ ಪ್ರತ್ಯಭಿಜ್ಞಾ ನಿವೃತಿ ವಿಮರ್ಶಿನಿ ಮುಂತಾದವು ಮುಖ್ಯ ವಿವರಣ ಗ್ರಂಥಗಳು. ಈ ಬಗೆಯ ಗ್ರಂಥಾಧಾರಗಳಿಂದ ಕಾಶ್ಮೀರ ಶೈವದ ತತ್ವದರ್ಶನ ಧರ್ಮನಿರ್ದೇಶನ ಜನತಾಪ್ರವೃತಿಗಳನ್ನು ಅರಿಯಬಹುದು.

ದಕ್ಷಿಣ ದೇಶದ ತಮಿಳು ನಾಡಿನ ಶೈವಸಿದ್ಧಾಂತಕ್ಕೂ ಸಹ ಅಷ್ಟೇ ವಿಪುಲವಾದ ಸಾಹಿತ್ಯ ರಾಶಿಯಿದೆ. ಈ ಸಾಹಿತ್ಯ ಕೋಶವನ್ನು ಐದುವರ್ಗಗಳಾಗಿ ವಿಂಗಡಿಸುತ್ತಾರೆ. ೧ ನಾನ್ಮರೈ ೨. ಶಿವಾಗಮಗಳು, ೩. ವೇದಗಳು, ೪. ಮೇಲ್ಕಂಡ ಶಾಸ್ತ್ರ ಮತ್ತು ೫ ದ್ವಾದಶ ತಿರುಮುಲೈ ಕೃತಿಗಳು. ನಾನ್ಮರೈ ಶಾಸ್ತ್ರಗಳಲ್ಲಿ ನಾಲ್ಕು ವರ್ಗಗಳು ೧. ತೈತ್ತಿರೀಯಂ ೨. ಪೌಳಹರಿ ೩. ತಳದರಾರಂ ಮತ್ತು ಸಾಮಾ ಎಂದು ಈನಾಲ್ಕು ವರ್ಗಗಳು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು ವಿವರಿಸುತ್ತವೆ ಮತ್ತು ಶಿವಪಾರಮ್ಯವನ್ನು ವಿವರಿಸುತ್ತವೆ ಆಗಮ ಶಾಸ್ತ್ರವಂತೂ ಮೂಲ ಆಧಾರ ವೇದವನ್ನು ಸಹ ಆಧಾರವಾಗಿಟ್ಟುಕೊಂಡಿರುವುದಲ್ಲದೆ ವೇದಗಳಿಗೂ ಆಗಮಗಳಿಗೂ ಇರುವ ಸಾಮ್ಯವನ್ನು ಈದರ್ಶನದಲ್ಲಿ ವಿವರವಾಗಿ ತಿಳಿಯಬಹುದಾಗಿದೆ. ನಾಲ್ಕನೆಯದಾದ ಮುಖ್ಯವರ್ಗಕ್ಕೆ ಮೇಮ್ಕಂದರ್ ಶಾಸ್ತ್ರ ಅಥವಾ ಪೊರುಳ್ ನೂಲ್ ಎಂದು ಹೆಸರು. ಇದರಲ್ಲಿ ೧.ತಿರುವೈಲೂರಿನ ವಾಯ್ಯನಂದ ದೇವರ ತಿರುವುಂಟಿಯಾರ್ ೨ ತಿರುಕ್ಕಡವೂರಿನ ಉಮ್ಮನಂದ ದೇವರ ತಿರುಕ್ಕಲಿರ್ರುಪಾಡಿಯಾರ್ ೩ ಮೇಮ್ಕಂಡ ದೇವರ ಶಿವಜ್ಞಾನ ಬೋಧಂ ೪ ಅರುಳ್‌ನಂದಿಯ ಶಿವಜ್ಞಾನಸಿದ್ಧಿಯಾರ್ ಮತ್ತು ೫. ಇರುಪಾವಿರುಪತು ೬. ಮಾಣಿಕ್ಯವಾಚಕರ ಉನ್ಮೈ ವಿಳಕ್ಕಂ ೭. ಉಮಾ ಪತಿಯ ಶಿವಪ್ರಕಾಶಂ ೮. ತಿರುವರುಳ್‌ತಯಾನ್ ೯. ವಿನಾವೆಂಬ ೧೦. ಪೋತ್ರಿಪರೊಡೈ ೧೧. ಕೊಡಿಕ್ಕವಿ ೧೨. ನೆಂಜುವಿಡುತೂತ್ತು ೧೩. ಸಂಕರ್ಪ ನಿರಾಕರಣಂ ಮತ್ತು ೧೪. ಉನ್ಮೈ ನೆರಿವಿಲಕ್ಕಂ ಇವು ಮೂಲಕೃತಿರಾಶಿಗಳು. ತಮಿಳು ಸಿದ್ಧಾಂತದಲ್ಲಿ ಇಂದು ಅತ್ಯಂತ ಪ್ರಸಿದ್ಧವಾದ ಶಾಸ್ತ್ರ ರಾಶಿಯೆಂದರೆ ಮೇಮ್ಕಂಡರ್ ಶಾಸ್ತ್ರ ವಿಮರ್ಶೆಗಿಂತ ಬಂಧ ವಿಮೋಚನೆಗೆ ರಂಜಕವಾಗಿ ವಿವರಿಸಲ್ಪಟ್ಟಿರುವ ಅನುಭವ ಶಾಸ್ತ್ರವೇ ಮೇಮ್ಕಂಡರ್ ಶಾಸ್ತ್ರ ಇದು ತಾರ್ಕಿಕ ಸಿದ್ಧಾಂತವೂ ಹೌದು. ದ್ವಾದಶ ತಿರುಮುರೈ ಕೃತಿಗಳಿಗೆ 'ಪುಹಲ್‌ನೂಲ್' ಅಂದರೆ ಭಕ್ತಿ ಗೀತೆಗಳೆಂದು ಅರ್ಥ. ಇದರಲ್ಲಿ ೧. ಸಂಬಾಧರ್, ಅಪ್ಪರ್ ಮತ್ತು ಸುಂದರೇಶ್ ಇವರ ತೇವಾರಗಳು, ಇವುಗಳಿಗೆ ಅಡಂಗಮುರೈ ಎಂದೂ ಹೆಸರು ೨. ಮಾಣಿಕ್ಯವಾಚಕರ ತಿರುವಾಸಗಂ ಮತ್ತು ತಿರುಕ್ಕೋವೈಯಾರ್ ೩. ತಿರುಮಿಸೈ ಪಾಕ್ಕಳ್ ಮತ್ತು ತಿರು

ಪಲ್ಲಾಂಡು ೪. ತಿರುಮಂತ್ರಂ ೫. ತಿರುವಾಳವಾಯುಡಿಯಾರ್‌ರವರಿಂದ ಹಿಡಿದು ಪಟ್ಟಣತ್ತಾದಿಕ್ಕಾಳ್ ಮತ್ತು ನಂಬಿ ಆಂಡಾರ್ ನಂಬಿ ಮುಂತಾದವರ ಕಾವ್ಯಗಳು ೬. ಪೆರಿಯಪುರಾಣ ಇವು ಜನಜನಿತವಾದ ಕೃತಿಗಳು. ಇವು ಪಾಂಡಿತ್ಯಪೂರ್ಣ ಕೃತಿಗಳು ಮಾತ್ರವೇ ಅಲ್ಲದೆ ಶಿವಸಾಕ್ಷಾತ್ಕಾರ ಪಡೆದ ಅನುಭವಿಗಳ ಅನುಭವಾಣಿ. ಈ ಸಾಹಿತ್ಯ ರಾಶಿಯಿಂದ ತಮಿಳು ನಾಡಿನ ಶೈವಸಿದ್ಧಾಂತದ ರೂಪುರೇಷೆಗಳು ಚಿತ್ರಿತವಾಗಿವೆ. ತಮಿಳಿನಲ್ಲಿ ಅನುಭಾವಿಗಳ ಸ್ವತಂತ್ರ್ಯಸಾಹಿತ್ಯ ರಾಶಿ ವಿಪುಲವಾಗಿ ಬೆಳೆದಿದೆ. ಪ್ರಾಯಃ ಭಾರತೀಯ ಸಂಸ್ಕೃತಿ ಭಾರತೇತರ ರಾಷ್ಟ್ರಗಳಿಗೆ ತೆರಳಿರುವುದು ತಮಿಳಿನಿಂದಲೇ ಹೆಚ್ಚಾಗಿರುವುದನ್ನು ಇತಿಹಾಸದಿಂದ ತಿಳಿಯಬಹುದಾಗಿದೆ.

ಕರ್ಣಾಟಕ ಆಂಧ್ರ ಮಹಾರಾಷ್ಟ್ರದಲ್ಲಿ ಪ್ರಚಲಿತವಿರುವ ವೀರಶೈವ ಅಥವಾ ಶಿವಾದ್ವೈತ ದರ್ಶನಕ್ಕೆ ೧. ಆಗಮಗಳು, ೨. ವೇದ ಮತ್ತು ಶಿವೋಪನಿಷತ್ತುಗಳು, ೩. ಬ್ರಹ್ಮಸೂತ್ರಭಾಷ್ಯ ಮತ್ತು ಕಾರಿಕಗಳು, ೪. ಶಿವ ಪುರಾಣಗಳು, ೫ ವಚನ ಸಾಹಿತ್ಯ, ೬. ಕಾವ್ಯಗಳು ಮತ್ತು ಭಕ್ತಿ ಗೀತೆಗಳು ಎಂಬ ಆರು ವಿಧ ಸಾಹಿತ್ಯ ಸಂಪತ್ತಿನ ಸಹಾಯವೊದಗಿದೆ. ಆಗಮಗಳು ಮತ್ತು ವೇದ ಹಾಗೂ ಶಿವೋಪನಿಷತ್ತಿನಿಂದ ವೀರಶೈವ ದರ್ಶನಕ್ಕೆ ಹೆಚ್ಚು ತತ್ವದರ್ಶನ ಪಡೆಯಲಾಗಿದೆ. ಬ್ರಹ್ಮಸೂತ್ರಕ್ಕೆ ವೇದಾಂತ ದೃಷ್ಟಿಯಿಂದ ಶಂಕರರು, ರಾಮಾನುಜರು, ಮಧ್ವಾಚಾರ್ಯರು ಮುಂತಾದ ಮಹರ್ಷಿಯರು ತಮ್ಮ ಅಭಿಮತದಂತೆ ಭಾಷ್ಯವನ್ನು ಬರೆದಂತೆ, ಪಂಚಾಚಾರ್ಯರೂ ಶ್ರೀ ಪತಿ ಪಂಡಿತರೂ ಭಾಷ್ಯವನ್ನು ಬರೆದು ವೀರಶೈವ ದರ್ಶನದ ವ್ಯಾಖ್ಯಾನ ಮಾಡಿದ್ದಾರೆ. ವೇದಾಂತದ ದೃಷ್ಟಿಯಿಂದ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದವರಲ್ಲಿ ಶ್ರೀ ಶಂಕರಾಚಾರ್ಯರು ಪ್ರಖ್ಯಾತರಾಗಿದ್ದಾರೆ. ಅಂತೆಯೇ ಉಳಿದ ಆಚಾರ್ಯದ್ವಯರು ಬ್ರಹ್ಮಸೂತ್ರಕ್ಕೆ ಬರೆದ ಭಾಷ್ಯದಿಂದ ತಮ್ಮ ಮತ ಸ್ಥಾಪನೆ ಮಾಡಿದ್ದಾರೆ. ಈ ಆಚಾರ್ಯ ತ್ರಯರು ಮಾತ್ರವೇ ಅಲ್ಲದೆ ಈ ಮೂರು ಮತಗಳಿಗೆ ಪರಿಪೋಷಕವಾಗಿ ಅನೇಕ ಮಹನೀಯರು ಭಾಷ್ಯ ಬರೆದಿದ್ದಾರೆ. ಆದರೆ ಬ್ರಹ್ಮಸೂತ್ರ ಭಾಷ್ಯಕಾರರಲ್ಲಿ ಶಂಕರಾಚಾರ್ಯರೇ ಮೊದಲಿಗರಲ್ಲ. ಅಲ್ಲದೆ ಶ್ರೀ ಶಂಕರಾಚಾರ್ಯರು ಬೋಧಿಸಿದ ಅದ್ವೈತ ದರ್ಶನ ಅವರ ಸ್ವತಂತ್ರ ದೃಷ್ಟಿಯೂ ಅಲ್ಲ. ಶ್ರೀ ಶಂಕರಾಚಾರ್ಯರಿಗಿಂತ ಮೊದಲೇ ಬ್ರಹ್ಮ ಸೂತ್ರಕ್ಕೆ ಅನೇಕರು ಭಾಷ್ಯ ಬರೆದಿದ್ದಾರೆ. ಭರ್ತೃಪ್ರಪಂಚ, ಬ್ರಹ್ಮನಂದಿ, ಟಂಕ, ಗುಹಾದೇವ, ಭರುಚಿ, ಕಪರ್ದಿ, ಉಪವರ್ಷ, ಬೋಧಾಯನ, ಭರ್ತೃಹರಿ, ಸುಂದರ ಪಾಂಡ್ಯ, ದ್ರಮಿಡಾಚಾರ್ಯ ಮತ್ತು ಬ್ರಹ್ಮದತ್ತ ಇವರು ಶ್ರೀ ಶಂಕರರಿಗಿಂತ ಹಿಂದಿನ ಭಾಷ್ಯಕಾರರೆಂದೂ (ಅಚ್ಯುತ - ವಾಲ್ಯೂ I'I ಪು. ೯-೧೫) ಬ್ರಹ್ಮ ಸೂತ್ರ ಶಂಕರಭಾಷ್ಯ ಹಿಂದೀ ಭಾಷಾಂತರ, ಶ್ರೀ ಶಂಕರರ ಅದ್ವೈತ ವಾದವು ಪ್ರಾಚೀನ. ಶಿವಾದ್ವಯವಾದದ ಆಧಾರದ ಮೇಲೆ ರೂಪುಗೊಂಡುದೆಂದೂ ಗೋಪಿನಾಥ ಕವಿರಾಜ್ ಇವರು

ಅಭಿಪ್ರಾಯಪಟ್ಟಿದ್ದಾರೆ. (The quarterly Journal of Mythic Society Vol. ೨೪ Nos. ೧-೨. July & Oct. P. ೨೧) ಈ ದೃಷ್ಟಿಯಿಂದ ಅದ್ವೈತ ತತ್ವ ಹಾಗೂ ಶಿವಾದ್ವೈತ ತತ್ವ ಶ್ರೀ ಶಂಕರಾಚಾರ್ಯರಿಗಿಂತ ಹಿಂದಿನದೆಂದು ವ್ಯಕ್ತವಾಗುತ್ತದೆ. ವೀರಶೈವ ಆಚಾರ್ಯರಲ್ಲಿ ಶ್ರೀ ರೇಣುಕರು ಮತ್ತು ದಾರುಕರು ಭಾಷ್ಯವನ್ನು ಬರೆದಿರುವುದಾಗಿ ಶ್ರೀ ಪತಿ ಪಂಡಿತರು ತಮ್ಮ ಶ್ರೀಕರ ಭಾಷ್ಯದಲ್ಲಿ ಅಲ್ಲಲ್ಲಿ ಉದಾಹರಿಸಿರುವುದು ಕಂಡು ಬರುತ್ತದೆ. ಆಚಾರ್ಯರ ಭಾಷ್ಯ ಗ್ರಂಥಗಳು ನಮಗಿನ್ನೂ ದೊರೆತಿಲ್ಲ. ಬರ್ಲಿನ್ ರಾಷ್ಟ್ರೀಯ ಗ್ರಂಥಾಲಯದಲ್ಲಿ ಭಾಷ್ಯದ ತಾಡವೋಲೆ ಪ್ರತಿಗಳಿರುವುವೆಂದು ಬಹು ಹಿಂದೆ ಇಂಗ್ಲೆಂಡಿನ ಸಂಶೋಧನಾ ಪತ್ರಿಕೆಯೊಂದರಲ್ಲಿ ಪ್ರಕಟವಾಗಿರುವುದಾಗಿ ತಿಳಿದು ಬಂದಿದೆ. ಆಚಾರ್ಯರ ಭಾಷ್ಯಗಳು ದೊರೆತರೆ ಶ್ರೀ ಪತಿ ಪಂಡಿತರ ಶ್ರೀಕರ ಭಾಷ್ಯ ಮತ್ತು ಕ್ರಿಯಾಸಾರ ಗ್ರಂಥಗಳು ಸೂತ್ರದ ವ್ಯಾಖ್ಯಾನಗಳಾಗಿ ವೀರಶೈವ ದರ್ಶನಕ್ಕೆ ಉಪಯುಕ್ತ ಸಾಹಿತ್ಯ ಸಂಪತ್ತಾಗುತ್ತದೆ. ಶೈವಸಿದ್ಧಾಂತವನ್ನು ಪ್ರತಿಪಾದಿಸಿ ಶ್ರೀಕಂಠ ಶಿವಾಚಾರ್ಯರು, ಬ್ರಹ್ಮ ಸೂತ್ರಗಳಿಗೆ ಭಾಷ್ಯ ಬರೆದು ವಿಖ್ಯಾತರಾಗಿದ್ದಾರೆ. ನೀಲಕಂಠ ಶಿವಾಚಾರ್ಯರ ಕ್ರಿಯಾಸಾರವೂ ಸಹ ಬ್ರಹ್ಮ ಸೂತ್ರಗಳ ಭಾಷ್ಯದ ವಿವರಣೆಯಂತಿದೆ. ಸಿದ್ಧಾಂತ ಶಿಖಾಮಣಿ, ನಂದಿಕೇಶ್ವರಕಾರಿಕಾ, ಲಿಂಗಧಾರಣ ಚಂದ್ರಿಕೆ ವೀರಶೈವಾನಂದ ಚಂದ್ರಿಕೆ, ಶಿವಾನುಭವ ಸೂತ್ರ, ವೀರಶೈವೇಂದು ಶೇಖರ ಇವು ತಾರ್ಕಿಕ ಶಾಸ್ತ್ರ ಗ್ರಂಥಗಳು. ಶಿವ ಪುರಾಣಗಳು ಶೈವ ದರ್ಶನಕ್ಕೆ ಬಹಳ ಸಹಕಾರಿಗಳಾಗಿವೆ. ವೀರಶೈವದ ಸಂಸ್ಕೃತಿಯ ಧರ್ಮ ದರ್ಶನ, ಜೀವನ ದರ್ಶನಗಳ ವಿಷಯದಲ್ಲಿ ನವೋದಯವನ್ನುಂಟು ಮಾಡಿದ ಸಾಹಿತ್ಯವೆಂದರೆ ವಚನ ಶಾಸ್ತ್ರ. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಭಕ್ತಿ ಭಂಡಾರಿ ಬಸವಣ್ಣನವರ ನೇತೃತ್ವದಲ್ಲಿ ವಿಕಾಸಗೊಂಡ ವಚನ ಸಾಹಿತ್ಯ ವೀರಶೈವ ದರ್ಶನದ ಪ್ರಕಾಶಕ್ಕೆ ಪ್ರಬಲ ಸಾಧನವಾಯಿತು. ಮುನ್ನೂರು ಮಂದಿ ವಚನಕಾರರಿಂದ ರಚಿತವಾದ ಎರಡೆಂಬತ್ತು ಕೋಟಿ ವಚನಗಳು ವೀರಶೈವ ಸಂಸ್ಕೃತಿಯ ಸರ್ವತೋಮುಖ ವಿವರಣೆ ನೀಡಿದೆ. ವಚನ ಶಾಸ್ತ್ರವು ಕೇವಲ ಪಾಂಡಿತ್ಯ ಗ್ರಂಥವಾಗದೆ ಆತ್ಮಸಾಕ್ಷಾತ್ಕಾರ ಸಾಧಕರ ಅಮೃತ ವಾಣಿಯಾಗಿ ಜನಜನಿತ ಸಾಹಿತ್ಯವಾಗಿದೆ. ವೇದೋಪನಿಷತ್ತುಗಳು, ಗೀತಾದಿ ಮಹಾ ಕೃತಿಗಳಲ್ಲಿ ಮತ್ತು ಮಹಾ ಪುರಾಣಗಳಲ್ಲಿ ದೊರೆಯುವ ಎಲ್ಲ ದರ್ಶನವೂ ಕನ್ನಡದಲ್ಲಿ ಸುಲಭವಾಗಿ ಸುಂದರವಾಗಿ ವರ್ಣಿಸಲ್ಪಟ್ಟಿವೆ. ಆದುದರಿಂದ ಶಿವಾದ್ವೈತ ದರ್ಶನಕ್ಕೆ ಅಧಿಕಾರಯುತ ಸಾಹಿತ್ಯವೆನಿಸಿದೆ ಈ ವಚನ ಸಾಹಿತ್ಯ.

ವೀರಶೈವಾಮೃತ ಪುರಾಣ, ಭಾವಚಿಂತಾರತ್ನ, ಹರಿಹರನ ರಗಳೆಗಳು ಬಸವಪುರಾಣ, ವೃಷಭೇಂದ್ರವಿಜಯ ಪುರಾಣ, ರಾಘವಾಂಕನ ಕೃತಿಗಳು ಮೊಗ್ಗೆಯ ಮಾಯಿದೇವರ ಶತಕತ್ರಯ, ನಿಜಗುಣ ಶಿವಯೋಗಿಗಳ ಕೃತಿಗಳು ಮತ್ತು ಚನ್ನ

ಬಸವ ಪುರಾಣಾದಿ ಕಾವ್ಯಗಳು ವೀರಶೈವ ದರ್ಶನಕ್ಕೆ ಪ್ರಬೋಧಕ ಸಾಹಿತ್ಯ ಮತ್ತು ಸಂಪತ್ತೆನಿಸಿವೆ. ಹೀಗೆ ಶೈವದರ್ಶನಕ್ಕೆ ಅಪಾರವಾದ ಸಾಹಿತ್ಯ ಸಂಪತ್ತಿದೆ ವಚನ ಶಾಸ್ತ್ರವೂ ಸಹ ಪೂರ್ಣವಾಗಿ ಲಭ್ಯವಾಗಿಲ್ಲ. ದೊರೆತಿರುವುದೆಲ್ಲಾ ಪ್ರಕಟವಾಗಿಲ್ಲ. ಮುಮುಕ್ಷುಗಳು ಧರ್ಮಾಭಿಮಾನಿಗಳು ಈ ಸಾಹಿತ್ಯ ಪ್ರಕಾಶಕ್ಕೆ ನೆರವಾದರೆ ಲೋಕೋಪಕಾರವಾಗುತ್ತದೆ. ಪ್ರತಿಭಾಪೂರ್ಣ ಐತಿಹಾಸಿಕ ಹಿನ್ನೆಲೆಯಿಂದಲೂ ಮಹಿಮಾಪೂರ್ಣ ಸಾಹಿತ್ಯ ರಾಶಿಯಿಂದಲೂ ತುಂಬಿರುವ ಶೈವದರ್ಶನ ಸಾಕಷ್ಟು ಅಂತರರಾಷ್ಟ್ರೀಯ ಖ್ಯಾತಿ ಪಡೆಯದೆ ಇರುವುದು ಆಶ್ಚರ್ಯಕರ. ಈ ವಿಷಯದಲ್ಲಿ ಭಾರತೀಯರ ಪೂರ್ಣದೃಷ್ಟಿ ಆಧುನಿಕ ನಿಯೋಜನೆ ಅಗತ್ಯ.

ಚಾರಿತ್ರಕ ಹಿನ್ನೆಲೆ ಮತ್ತು ತಾತ್ವಿಕಸಂಪತ್ತು ಇರುವಂತೆ ಇದರಲ್ಲಿರುವ ದರ್ಶನವು ವೈಜ್ಞಾನಿಕ ವಿಚಾರ ಪೂರ್ಣ ಆಗಿದೆ. ಭಾರತೀಯ ಸಂಸ್ಕೃತಿಯ ಪೂರ್ಣ ಚಿತ್ರ ನಮಗೆ ದೊರೆಯಬೇಕಾದರೆ ಈ ಎರಡು ಪ್ರಚಲಿತ ಪ್ರವಾಹಗಳ ಅರಿವು ನಮಗಾಗಬೇಕು. ಒಂದು ವೇದಶಾಸ್ತ್ರವನ್ನೇ ಹಿನ್ನೆಲೆಯಾಗಿ ಹೊಂದಿ ಹೊಳೆದು ಬಂದ ಷಡ್ದರ್ಶನ ಮತ್ತೊಂದು ಆಗಮಶಾಸ್ತ್ರವನ್ನೇ ಆಧಾರವಾಗಿಟ್ಟುಕೊಂಡು ಬಂದ ಶೈವದರ್ಶನ. ಈ ಎರಡು ದರ್ಶನಗಳನ್ನು ಅರಿಯದ ದರ್ಶನ ಭಾರತೀಯ ದರ್ಶನ ವೆನಿಸುವುದಿಲ್ಲ. ಏಕೆಂದರೆ ವೇದ ಎಂದರೆ ಜ್ಞಾನ ಎಂದರ್ಥ. ವೇದಾಂತವೆಂದರೆ ಜ್ಞಾನದ ಪರಿಧಿ ಎಂದಾಗುತ್ತದೆ. ವೇದಾಂತ ದಾರ್ಶನಿಕರು "ಸತ್ಯಂ ಜ್ಞಾನಂ ಅನಂತಂ" "ಜ್ಞಾನಂ ಬ್ರಹ್ಮ" ಮುಂತಾಗಿ ಜ್ಞಾನವೇ ಮೋಕ್ಷವೆಂದು ವಾದಿಸಿದ್ದಾರೆ. ವ್ಯಾವಹಾರಿಕ ದೃಷ್ಟಿಯಿಂದ ಈ ತತ್ವ ಜನಾಭಿಪ್ರಾಯ ಹೊಂದುವುದು ದುಸ್ಸಾಧ್ಯ ವಾಗುತ್ತದೆ. ಆಗಮಶಾಸ್ತ್ರದ ದರ್ಶನಕ್ಕೆ ಸಿದ್ಧಾಂತವೆಂದು ಕರೆಯುತ್ತಾರೆ. ಸಿದ್ಧಾಂತ ವೆಂದರೆ ಸಾಧನೆಯ ಸಾಕ್ಷಾತ್ಕಾರ ಅಥವಾ ಸಿದ್ಧಿಪರಿಧಿ ಎಂದಾಗುತ್ತದೆ. (It is realisation, an attainment of Salvation) ಇದು ಸರ್ವ ಸಾಮಾನ್ಯ ದರ್ಶನವಾಗುತ್ತದೆ. ಶೈವದರ್ಶನಕ್ಕೆ ಶಿವನೇ ಪರವಸ್ತು. ಜಗತ್ತೂ ಶಿವನಶಕ್ತಿ ವಿಶೇಷ. ಜೀವಶಿವನಾದರೂ ಮಲತ್ರಯ ಪರಿಹೃತವಾಗಿ, ಪಾಶಯುಕ್ತವಾಗಿ ಪಂಚ ಕಂಚುಕ ಬಂಧಿತವಾಗಿ ಪ್ರತ್ಯೇಕತೆಯ ಪರಾಮರ್ಶೆಗೆ ಕಾರಣವಾಗಿದೆ ಎನ್ನುವ ವಾದಸರಣಿಯಿಂದ ಶೈವದರ್ಶನ ತನ್ನ ಸಂಸ್ಕೃತಿಯನ್ನು ವ್ಯಕ್ತಪಡಿಸಿದೆ. ಈ ದರ್ಶನದ ವಿವಿಧ ರೂಪುರೇಖೆಗಳನ್ನು ಇಲ್ಲಿ ಚಿತ್ರಿಸಲು ಅವಕಾಶವಿಲ್ಲ. ಈ ದರ್ಶನದ ಹಿರಿಮೆಯನ್ನರಿಯುವ ಕಿರುಗನ್ನಡಿಯಾಗಿ ಈ ಲೇಖನ. ಇದರಿಂದ ಶೈವದರ್ಶನದ ಅಭ್ಯಾಸದ ಅಭಿರುಚಿ ಜನತೆಯಲ್ಲಿ ಬೆಳೆದು ಶಿವಾನುಭವಿಗಳಿಂದ ಶಿವತತ್ವಾಮೃತ ದಾಸೋಹ ನಿತ್ಯವೂ ನಡೆಯಲೆಂದು ಆಶಿಸಿ ಈ ಲೇಖನವನ್ನರ್ಪಿಸಿದೆ.

॥ ಸತ್ಯಂಶಿವಂ ಸುಂದರಂ ॥



# ಶಿರೋವ್ರತ ವೀರಶೈವ ಮತ

—ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ

ಶಿರೋವ್ರತವು ಶಿವವ್ರತದ ಒಂದಂಗ ; ಒಂದಂಶ. ಶಿವವ್ರತವು ಶಿವಯೋಗದ ಒಂದು ಪ್ರಕಾರ ; ಒಂದು ಆಚಾರ. ಶಿವಯೋಗವು ವೀರಶೈವ ಮತಹೃದಯ ; ವಿಶ್ವಮಂಗಳೋದಯ.

ಯೋಗ ಅನೇಕ. ಮಾನವ ಜೀವನ ಸಾಧನಗಳೆಲ್ಲವೂ ಪ್ರಯೋಗಳೆಂದು ಹೇಳಿಸಿಕೊಂಡಿವೆ ; ಹೆಸರಾಗಿವೆ. ಒಂದೊಂದು ಯೋಗಕ್ಕೂ ಹಲವಾರು ಮುಖಗಳಿವೆ. ಎಷ್ಟೇ ಯೋಗಗಳಿರಲಿ ಅವೆಲ್ಲವೂ ಸಾಧನಯೋಗಗಳು. ಶಿವಯೋಗವೊಂದೇ ಸಿದ್ಧಯೋಗ ; ಶ್ರೇಷ್ಠಯೋಗ. ಯೋಗರಾಜವೆಂದು ಶಿವಯೋಗಕ್ಕೆ ಹೆಸರು.

ಅಂತಹ ಶಿವಯೋಗವು–ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನ ಎಂಬುದಾಗಿ ಅಯ್ದುಗೆಯಾಗಿದೆ. ಶಿವವ್ರತ ಶಿವಯೋಗದ ನಾಲ್ಕನೆಯ ಬಗೆ.

ಶಿವವ್ರತ ವೀರಶೈವ ಮತ ಜೀವಾಳ. ಶಿವವ್ರತವು ವೀರಶೈವ ಷಡ್ವ್ರತಗಳಿಂದ ಕೂಡಿಕೊಂಡಿದೆ. ಜ್ಞಾನ, ಜ್ಞೇಯ, ಅನುಷ್ಠಾನ, ಅಧಿಕಾರ, ಸಾಧನ, ಸಾಧ್ಯ ಇವು ಷಡ್ವ್ರತಗಳು ; ಷಡರ್ಥ ಸಂಗ್ರಹಗಳು.

ತನ್ನ ಗುರುವಿನ ಕರುಣೆಯಿಂದ ಬಂದ ತನ್ನ ಅರಿವೇ ಜ್ಞಾನ. ಅಥವಾ ಪಶು–ಪಾಶ–ಪತಿ, ವಿವೇಕವೇ ಜ್ಞಾನ. ತನ್ನ ಜ್ಞಾನದಿಂದ ಅರಿವ ವಸ್ತುವೇ ಜ್ಞೇಯ ಶಿವಲಿಂಗಾರ್ಚನವೇ ಅನುಷ್ಠಾನ. ಭಸ್ಮರುದ್ರಾಕ್ಷಧಾರಣವೇ ಅಧಿಕಾರ ಇದುವೇ ಶಿರೋವ್ರತ. ಶಿವಮಂತ್ರವೇ ಸಾಧನ. ಶಿವಸಮರಸವೇ ಸಾಧ್ಯ. ಶಿರೋವ್ರತದಿಂದ ಶಿವನಿಗೆ ಸಮಾನವಾಗಿರುವುದೂ ಸಾಧ್ಯವೆಂದು ಹೇಳುವುದುಂಟು. ಶಿರಸ್ಸಿನಲ್ಲಿ ವಿಭೂತಿ ರುದ್ರಾಕ್ಷಿ ಲಿಂಗಗಳನ್ನು ಧರಿಸಿದಾತನು ಶಿವಸಮಾನನು.

ಶಿರೋವ್ರತ : ವ್ರತವೆಂದರೆ ನೇಮ, ನಿಯಮ, ಕಟ್ಟುಕಟ್ಟಳೆ, ನಿಷ್ಠೆ, ಶೀಲ, ಆಚಾರ, ವಿಧಿ, ವಿಧಾನ ಎಂದು ಅರ್ಥಗಳಿವೆ. ಶಿರೋವ್ರತವೆಂದರೆ ಶ್ರೇಷ್ಠವ್ರತ

ವೆಂದು, ಶಿರಸ್ಸ ಆಚರಿಸುವ ಮತ್ತು ಧರಿಸುವ ವತ್ರವೆಂದು ಎರಡು ಬಗೆಯ ಅರ್ಥವುಂಟು.

ಭಸ್ಮರುದ್ರಾಕ್ಷ ಲಿಂಗಗಳನ್ನು ಧರಿಸಿದ ಶಿರಸ್ಸ ಶಿವನಿಗೆ ಸಮಾನ; ಶಿವಮಯ. ಇದು ವೀರಶೈವರ ಪರಿಶುದ್ಧವೂ ಪ್ರಸಿದ್ಧವೂ ಆದ ಶಿರೋವ್ರತ; ಪರಿಪೂರ್ಣವಾದ ಶಿವವ್ರತ.

ಶಿರೋವ್ರತವು ಬಹ್ವಂಶದಲ್ಲಿ ಭಾರತೀಯರ ಸಂಸ್ಕೃತಿಯಾಗಿ ಬೆಳಗಿದೆ. ಭಾರತೀಯರಲ್ಲಿ ಬಹುಜನರು ಒಂದಿಲ್ಲೊಂದು ಬಗೆಯಲ್ಲಿ ಶಿರೋವ್ರತವನ್ನು ಆಚರಿಸುತ್ತಾರೆ ತಮ ತಮಗುಚಿತವಾದ ರೀತಿಯಲ್ಲಿ ತಂತಮ್ಮ ಮತಪದ್ಧತಿಯಲ್ಲಿ ಶಿರೋವ್ರತ ಧಾರಿಗಳಾಗಿದ್ದಾರೆ. ಆದರೆ ವೀರಶೈವ ಮತದ ಶಿರೋವ್ರತವೇ ಬೇರೆ ಬಗೆಯಾಗಿದೆ. ವೈಶಿಷ್ಟ್ಯ ಪೂರ್ಣವಾಗಿದೆ. ಪೂರ್ಣತತ್ತ್ವಾತ್ಮಕವಾಗಿದೆ. ವಿಶಾಲವ್ಯಾಪ್ತಿಯುಳ್ಳದಾಗಿದೆ. ತತ್ತ್ವದಲ್ಲಿ ಶಿವತತ್ತ್ವ ಹೇಗೆ ಹೆಚ್ಚಿನದೋ ಹೇಗೆ ಹೆಚ್ಚು ಪುರಾತನದ್ದೋ ಹಾಗೆ ವೀರಶೈವ ಶಿರೋವ್ರತವೂ ಹೆಚ್ಚಿನದು; ಹೆಚ್ಚು ಪುರಾತನದ್ದು.

ಶಿವನು ಶಾಂತಿಸೂಚಕವಾಗಿ ಶಶಿಯ ಧರಿಸಿದಂತೆ ಇವರು ಭಸಿತವನ್ನು ಧರಿಸುತ್ತಾರೆ. ಶಿವನು ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿದುದರ ಪ್ರತೀಕವಾಗಿ ಇವರು ಆ ಶಿವನ ಕಣ್ಣಿನಿಂದ ಉದುರಿದ ಹನಿ (ಗಂಗೆ)ಯ ರೂಪಾದ ರುದ್ರಾಕ್ಷಿಯನ್ನು ಧರಿಸುತ್ತಾರೆ. ಜತೆಗೆ ಶಿವನ ಸ್ವರೂಪವೇ ಆದ ಶಿವಲಿಂಗವನ್ನು ಶಿರಸ್ಸಿನಲ್ಲಿ ಧರಿಸುತ್ತಾರೆ. 'ತಲ್ಲಿಂಗಂ ಶಿರಸಾ ಧಾರಯೇತ್ ಸದಾ'—ಶಿವಮಹಾಪುರಾಣ 'ಮಸ್ತಕೇ ಲಿಂಗಧಾರಣಮ್' ಎಂಬುದೇ ಸಾಕ್ಷಿ.

ಎರಡನೆಯದಾಗಿ ಇದರಲ್ಲಿ ತಾತ್ತ್ವಿಕತೆಯೂ ಉಂಟು. ಕ್ರಿಯಾಸೂಚಕವೇ ಹಣೆಯಲ್ಲಿ ಭಸಿತಧಾರಣ. ಜ್ಞಾನ ಸೂಚಕವೇ ರುದ್ರಾಕ್ಷಿ ಧಾರಣ. ಕ್ರಿಯಾಜ್ಞಾನ ಸಮುಚ್ಚಯ ಸ್ವರೂಪವೇ ಲಿಂಗಧಾರಣ. ಜ್ಞಾನ(ರುದ್ರಾಕ್ಷ) ಸಹಜ ಚೈತನ್ಯಾತ್ಮಕ ಶಿವ. ಕ್ರಿಯಾ (ಭಸಿತ) ಅದರ ಸ್ವಾಭಾವಿಕೀ ಶಕ್ತಿ. ಲಿಂಗ ಉಭಯ ಸಮನ್ವಯ ಪರತತ್ತ್ವ.

ತತ್ತ್ವಜ್ಞಾನವೇ ಜ್ಞಾನ. ಅದರಮುಂದೆ ಇನ್ನಾವ ಅರಿಯಬೇಕಾದ ಧರಿಸಬೇಕಾದ ಜ್ಞಾನವಿಲ್ಲ. ಅದನೊಂದನ್ನು ಅರಿತರೆ ಉಳಿದೆಲ್ಲವನ್ನೂ ಅರಿತಂತಾಗುತ್ತದೆ. ಈ ಅಭಿಪ್ರಾಯವನ್ನು ಸೂಚಿಸಲು ಶಿರಸ್ಸಿನಲ್ಲಿ ಏಕಮುಖದ ಏಕರುದ್ರಾಕ್ಷಧಾರಣ ವಿಹಿತವಾಗಿದೆ. ಆ ಪರಶಿವತತ್ತ್ವಜ್ಞಾನಕ್ಕೂ ಒಂದೇ ಮುಖ.

ಇನ್ನು ಶಕ್ತಿ ತ್ರಿವಿಧಾತ್ಮಳೂ ತ್ರಿಗುಣಾತ್ಮಳೂ ಆಗಿರುವಳೆಂಬುದನ್ನು ಸೂಚಿಸುತ್ತದೆ ಹಣೆಯಲ್ಲಿ ಧರಿಸುವ ತ್ರಿಪುಂಡ್ರ.

ಆ ಶಿವ ಶಕ್ತಿ ಸಮನ್ವಯ ಸ್ವರೂಪ ಲಿಂಗದಲ್ಲಿ ವಿವಿಧ ವಿಶ್ವಗಳನ್ನೊಳಗೊಂಡ ಬ್ರಹ್ಮಾಂಡವೇ ಗರ್ಭೀಕರಿಸಿಕೊಂಡಿದೆ. ಅಂತಹ ಲಿಂಗವನ್ನು ಶಿರಸ್ಸಿನಲ್ಲಿ ಧರಿಸು

ವುದೆಂದರೆ ಜ್ಞಾನ-ವಿಜ್ಞಾನಗಳೆರಡರಿಂದ ಪರಿಪೂರ್ಣನಾಗಿರುವುದನ್ನು ಸೂಚಿಸುತ್ತದೆ ಜ್ಞಾನ-ವಿಜ್ಞಾನ ತೃಪ್ತಾತ್ಮನೆಂದೆನಿಸುತ್ತದೆ. ಇದರಿಂದಾಗಿ ಇದು ಶಿರೋವ್ರತ. ವೀರಶೈವರ ವಿಶಿಷ್ಟ ಪರಿಪುಷ್ಟ ಶಿವವ್ರತ.

ವೀರಶೈವರ ಈ ವಿಶಿಷ್ಟವಾದ ಶಿರೋವ್ರತವು ಬಹು ಪುರಾತನದ್ದು ; ಆಗಮೋಪನಿಷತ್ತುಗಳಲ್ಲಿ ಉಕ್ತವಾದದ್ದು :

"ಸಿವೇದಯಿಷ್ಯನ್ ಮದ್ ಜ್ಞಾನಂ ದದ್ಯಾದಾದೌ ಶಿರೋವ್ರತಂ
ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ ।
ಇತ್ಯೇವಂ ನಾಮಭಿಃ ಪುಣ್ಯೈರ್ನಿಗಮಾಂತೇಷು ಗೀಯತೇ ॥

—ಕಾರಣಾಗಮ

ಎಂಬುದಾಗಿ ಕಾರಣೋತ್ತರ ತಂತ್ರದ ಕ್ರಿಯಾಪಾದದ ಒಂದನೆಯ ಪಟಲದಲ್ಲಿ ಹೇಳಿದೆ. ಇದರಿಂದ ಶಿರೋವ್ರತಕ್ಕೆ ಅತ್ಯಾಶ್ರಮವ್ರತ, ಪಾಶುಪತವ್ರತ, ಶಾಂಭವ ವ್ರತಗಳೆಂದು ಪರ್ಯಾಯ ನಾಮಗಳಿರುವುದು ತಿಳಿದುಬರುತ್ತದೆ. ಅತ್ಯಾಶ್ರಮಿಗಳು ವೀರಶೈವರೆಂಬುದು ಸ್ಪಷ್ಟವಾಗಿದೆ. ಕಾರಣ ಶಿರೋವ್ರತವು ವೀರಶೈವಮತ ಪ್ರಕ್ರಿಯೆಯೆಂಬುದರಲ್ಲಿ ಸಂದೇಹವಿಲ್ಲ : ಸಂವಾದವಿಲ್ಲ.

ಶಿರೋವ್ರತವು ಅತ್ಯಾಶ್ರಮೋಚಿತವೆಂದು ಹೇಳಿರುವುದರಿಂದ ಅದು ಬ್ರಹ್ಮಚರ್ಯ ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮಗಳನ್ನು ಮೀರಿರುವುದೆಂಬುದು ನಿರ್ದಿಷ್ಟವಾಗುತ್ತದೆ.

"ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗ ಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥"

ವಾತುಲಾಗಮದ ಈ ಮಂತ್ರದಲ್ಲಿ ಅತ್ಯಾಶ್ರಮಿಯು ವೀರಶೈವನೆಂಬುದನ್ನು ಸ್ಪಷ್ಟಗೊಳಿಸಿದೆಯಲ್ಲದೆ ವೀರಶೈವನಿಗೆ ಆಶ್ರಮನಿಬಂಧವಿಲ್ಲೆಂದು ಹೇಳಿದೆ.

ಪಾಶುಪತ ಪ್ರಯೋಗವು ವೀರಶೈವ ಸೂಚಕವಾಗಿದೆ. ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವವನ್ನು 'ಪಶುಪತಿಮತ'ವೆಂದು ಉಲ್ಲೇಖಿಸಿದೆ. ಬಸವಣ್ಣನವರೂ ಸಹ ತಮ್ಮ ವಚನದಲ್ಲಿ 'ಬಾರದು ಬಾರದು ವಿಷಯಿಗೆ ಪಶುಪತವ್ರತವು' (ವ. ಸಂ. ೬೬೯) ಎಂದು ಹೇಳಿದ್ದಾರೆ. 'ಪಾಶುಪತವ್ರತಮಥರ್ವಶಿರಸಿ ಶ್ರುತಂ, ಪುರಾಣೇಷು ಚ ಪ್ರಸಿದ್ಧಮೇವ' ಪಾಶುಪತವು ಅಥರ್ವಶಿರಸ್ಸಿನಲ್ಲಿ ಪುರಾಣಗಳಲ್ಲಿ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಶಿರೋವ್ರತವು ಪಾಶುಪತ ಅಂದರೆ ವೀರಶೈವಮತ ಪ್ರಕ್ರಿಯೆಗೆ ಒಳಪಟ್ಟುದೆಂಬುದರಲ್ಲಿ ಯಾವ ಸಂಶಯವಿಲ್ಲ.

ಇನ್ನು ಶಾಂಭವ ವ್ರತವೆಂದು ಹೇಳಿರುವುದೂ ಸಹ ವೀರಶೈವ ಸಂಬಂಧಕ್ಕೆ ಪೋಷಕವಾಗಿದೆ ಶಾಂಭವ ವ್ರತ, ಶಾಂಭವೀದೀಕ್ಷೆ ಮುಂತಾದ ಪದಗಳು ವೀರಶೈವ ಮತಕ್ಕೆ ಮೀಸಲು.

'ವೇದಾಗಮಾಂತ ವಿದಿತಂ ಶಾಂಭವವ್ರತ ಮಾಚರೇತ್ |....
ತನುತ್ರಯುಗತಾನಾದಿ ಮಲತ್ರಯ ವಿಶೋಧನಾಃ |
ಲಿಂಗತ್ರಯಾನುಸಂಧಾನ ವಿಶೋಷಿತಭವಾಬ್ಧಯಃ ||....
ವೇಧಾಮನುಕ್ರಿಯಾದೀಕ್ಷಾಯತ್ರ ಹ್ಯಂತರ್ಗತಾಃ ಪರಾಃ |
ಶಿರೋವ್ರತಂ ಮಹಾಗುಹ್ಯಮಿದಂ ತೇನೈವ ಲಭ್ಯತೇ | -ಮಕುಟಾಗಮ

ಇದರಿಂದಲೂ ವೀರಶೈವರು ಶಿರೋವ್ರತಿಗಳೆಂದು ಹೇಳಲು ಯಾವ ಅಭ್ಯಂತರ ವಿಲ್ಲ. ವೀರಶೈವರಲ್ಲಿರುವ ವೇಧಾದೀಕ್ಷೆಯು ಅಂದರೆ ಹಸ್ತ ಮಸ್ತಕ ಸಂಯೋಗವು ಶಿರೋವ್ರತ ಸಂಬಂದಸೂಚಕವಾಗಿದೆ.

'ಭಸ್ಮರುದ್ರಾಕ್ಷ ಧಾರಣವೇ ಸರ್ವವ್ರತಂಗಳಿಗೂ ಶಿರೋವ್ರತವೆನಿಸಿಹುದು.... (ಪುಟ-೪೯) ಎಂಬುದಾಗಿ ಅನಾದಿ ವೀರಶೈವ ಸಂಗ್ರಹ ಗ್ರಂಥದಲ್ಲಿ ಹೇಳಿದೆ.

ಶಿರೋವ್ರತದ ಹೆಚ್ಚಳಿಕೆಯನ್ನು ಕುರಿತು ಮುಂಡಕೋಪನಿಷತ್ತು ಮುಕ್ತ ಕಂಠದಿಂದ ಹೀಗೆ ಹೊಗಳಿದೆ:

"ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ
ಸ್ವಯಂ ಜುಹ್ವತ ಏಕರ್ಷಿಂ ಶ್ರದ್ಧಯಂತಃ |
ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ
ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ||೧೦||
(ಮುಂ-೩, ಖಂ-೨)

ಸಿಕ್ಕವರಿಗೆಲ್ಲ ಶಿರೋವ್ರತವು (ವೇಧಾದೀಕ್ಷೆಯು) ದಕ್ಕದು. ಹಸ್ತಮಸ್ತಕ ಸಂಯೋಗರೂಪ ವೇಧಾ ಸಂಸ್ಕಾರವಾಗಲಿ, ಪಾವನ ಪ್ರಣವ ಪಂಚಾಕ್ಷರ ಮಂತ್ರ ವಾಗಲಿ ಫಲಿಸಬೇಕಾದರೆ ಪಡೆಯುವವನು ಕ್ರಿಯಾವಂತನು ಶ್ರದ್ಧಾವಂತನು ಶ್ರೋತ್ರಿ ಯನು ಅಂದರೆ ಜ್ಞಾನವಂತನು ಬ್ರಹ್ಮಅಂದರೆ ಲಿಂಗದಲ್ಲಿ ನಿಷ್ಠೆಯುಳ್ಳವನಾಗಿರಬೇಕು 'ಬ್ರಹ್ಮೇತಿ ಲಿಂಗಮಾಖ್ಯಾತಂ' ಎಂಬುದನ್ನು ನೆನೆಯುಬೇಕು. ವಿಧಿವತ್ತಾಗಿ ಶಿರೋ ವ್ರತವನ್ನು ಅಂದರೆ ವಿಭೂತಿ ರುದ್ರಾಕ್ಷಗಳ ಧಾರಣಾರ್ಚನಾದಿಗಳನ್ನು ಆಚರಿಸಿ ಕೊಂಡು ಬರುವ ಭಾವಿಕನಿಗೆ ಶ್ರೋತ್ರಿಯ ಶ್ರದ್ಧಾಳುವಿಗೆ ಬ್ರಹ್ಮವಿದ್ಯೆಯೆಂದರೆ ಲಿಂಗ ಸಂಸ್ಕಾರವನ್ನು ಕರುಣಿಸಿ ಲಿಂಗಾನುಭೂತಿಯನ್ನು ಬೋಧಿಸಬೇಕೆಂದು ಈ ಮುಂಡಕ ಶ್ರುತಿಯು ಮನದಟ್ಟಾಗಿ ಪ್ರಬೋಧಿಸಿದೆ.

"ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ |
ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ |—ಗೌತಮಸ್ಮೃತಿ
"ಬ್ರಹ್ಮ ವಿಷ್ಣ್ವಾದಯೋ ದೇವಾ ಮುನಯೋ ಗೌತಮಾದಯಃ |
ಧಾರಯಂತಿ ಸದಾ ಲಿಂಗಂ ಉತ್ತಮಾಂಗೇ ವಿಶೇಷತಃ ||
ಅಕ್ಷಪಾದಾದಯಃ ಸರ್ವೇ ಶಕ್ತಯಃ ಸರ್ವದಾಮುದಾ |
ಧಾರಯಂತ್ಯಳಕಾಗ್ರೇಷು ಶಿವಲಿಂಗಂ ಚ ಸಾದರಂ ||
—ಲಿಂಗಪುರಾಣ

ಗೌತಮಸ್ಮೃತಿಯು ಅಪ್ರಾಕೃತ ಬ್ರಾಹ್ಮಣ ಅಂದರೆ ವೀರಶೈವನ ಶಿರೋ ವ್ರತವನ್ನು ಸಂಪೂರ್ಣವಾಗಿ ಸ್ಪಷ್ಟವಾಗಿ ಹೇಳಿದೆ.

ಸುರ-ಮುನಿ ಶ್ರೇಷ್ಠರು, ಅಕ್ಷಪಾದಾದಿ ವರಿಷ್ಠರು, ಗಿರಿಜೆ ಸರೋಜೆ-ಶಾರದಾದಿ ಶಕ್ತಿನಿಯರು ಉತ್ತಮಾಂಗದಲ್ಲಿ ಮುಂದಲೆಗಳಲ್ಲಿ ಲಿಂಗಧಾರಿಗಳಾಗಿದ್ದರೆಂದು ಲಿಂಗಪುರಾಣವು ವಿಪುಲವಾಗಿ ಹೇಳಿದೆ.

"ಕರಪೂಜಾ ನಿವೃತ್ತಾನಾಂ, ಸ್ವಭೋಜ್ಯಂತು ನಿವೇದಯೇತ್ |
ನಿವೃತ್ತಾನಾಂ ಪರಂ ಸೂಕ್ಷ್ಮಂ ಲಿಂಗಮೇವ ವಿಶಿಷ್ಯತೇ ||
ವಿಭೂತ್ಯರ್ಚನಂ ಕುರ್ಯಾದ್ವಿಭೂತಿಂ ಚ ನಿವೇದಯೇತ್ |
ಪೂಜಾಂಕೃತ್ವಾಥ ತಲ್ಲಿಂಗಂ ಶಿರಸಾಧಾರಯೇತ್ ಸದಾ ||

—ಶಿವ ಮಹಾಪುರಾಣ.

"ಉತ್ತಮಾಂಗೇ ಗಳೇ ಬಾಹೌ ಹೃದಿ ವಕ್ಷಸ್ಥಳೇಽಪಿವಾ |
ಮತ್ಪ್ರಾಣಲಿಂಗಂ ಯೋಧತ್ತೇ ಸ್ಥಿತಸ್ತಸ್ಸನ್ನಿಧಾವಹಮ್ ||"

—ವಾತುಲೋತ್ತರ

ಲಿಂಗಧಾರಣ ವ್ರತಕ್ಕೆ ಅಂಗಾಂಗಳಲ್ಲಿ ಉತ್ತಮಾಂಗವೇ ಉತ್ತಮವಾದುದೆಂಬುದು ಈ ವಾತುಲೋತ್ತರ ಉಕ್ತಿಯಿಂದ ವ್ಯಕ್ತವಾಗುತ್ತದೆ. ಅಲ್ಲದೆ ಶರೀರದ ಯಾವ ಭಾಗದಲ್ಲಿಯೇ ಆಗಲಿ ಪ್ರತಿಕ್ಷಣದಲ್ಲಿ ಪ್ರಾಣದಂತೆ ಭಾವಿಸಿ ಬಹು ಎಚ್ಚರಿಕೆಯಿಂದ ಲಿಂಗಧಾರಣವನ್ನು ಭಸ್ಮರುದ್ರಾಕ್ಷ ಧಾರಣವನ್ನು ಮಾಡಿದ್ದರೆ ಅದು ಶಿರೋವ್ರತ, ಅಂದರೆ ಶ್ರೇಷ್ಠವ್ರತ. ಅದರಿಂದ ಆತ್ಮವಿದ್ಯೆ ಅಳವಡುತ್ತದೆ. ಪರಶಿವ ರೂಪ ಬ್ರಹ್ಮ ವಸ್ತುವಿನ ಸನ್ನಿಧಿ ಸದಾ ಸನ್ನಿಹಿತವಾಗುತ್ತದೆ. ತ್ರಿವಿಧಾಂಗಗಳಲ್ಲಿ ಲಿಂಗಬ್ರಹ್ಮವು ಬೆಳಗುತ್ತದೆ. ಲಿಂಗಕ್ರಿಯೆ, ಲಿಂಗಜ್ಞಾನ, ಲಿಂಗಾನುಭೂತಿಗಳು ಕ್ರಮವಾಗಿ ಸ್ಥೂಲ ಸೂಕ್ಷ್ಮ ಕಾರಣ ತನುಗಳಿಗುಂಟಾಗುತ್ತದೆ. ಇದಕ್ಕಿಂತ ಶಿರೋವ್ರತ ಬೇರಿಲ್ಲ. ಇದನಾಚರಿಸುವುದು ವೀರಶೈವ ಮತ.

ಉತ್ತಮಾಂಗದಲ್ಲಿ ಇಷ್ಟಲಿಂಗವನ್ನು ಧರಿಸುವ ವ್ರತ ವೀರಶೈವರಲ್ಲಿ ವೇದಪೂರ್ವ ಕಾಲದಿಂದ ಬಂದ ಉತ್ತಮ ವ್ರತವಾಗಿದೆ. ಇತ್ತೀಚೆಗೆ ಹೃದಯದಲ್ಲಿ ಧರಿಸುವ ರೂಢಿ ಬಂದಿದೆ.

ವ್ರತ ಇಬ್ಬಗೆ! ಒಂದು ಕ್ರಿಯಾತ್ಮಕವ್ರತ; ಇನ್ನೊಂದು ಜ್ಞಾನಾತ್ಮಕ ವ್ರತ. ಧಾರಣ ವ್ರತ ಕ್ರಿಯಾತ್ಮಕವೂ ಆಹುದು, ಜ್ಞಾನಾತ್ಮಕವೂ ಆಹುದು. ಧ್ಯಾನ ಜ್ಞಾನಾತ್ಮಕವಾದುದು.

ತತ್ತ್ವಜ್ಞಾನ ಅಥವಾ ಬ್ರಹ್ಮಜಿಜ್ಞಾಸೆ ಶಿರೋವ್ರತವಾಗುತ್ತದೆ. ಇದು ಅನ್ನ ವ್ರತಕ್ಕಿಂತ ಅಧಿಕವಾದುದು. ಅನ್ನದ ಆರೋಗಣೆ ಮೃತ್ಯುಮುಖ. ಜ್ಞಾನಾಮೃತ ದಾರೋಗಣೆ ಅಮೃತತ್ತ್ವಕ್ಕೆ ಮುಖ. ದಧಿ-ಕ್ಷೀರ-ಆಹಾರಗಳ ವ್ರತಕ್ಕಿಂತ ಜ್ಞಾನಾನುಭವ ವ್ರತವೇ ಮಹಾವ್ರತ; ಮನನೀಯ ವ್ರತ.

ಕೇಶಶಿಖೆಯನ್ನು ಬಿಡುವುದು ಶೈವವ್ರತ. ಜ್ಞಾನಶಿಖೆಯನ್ನು ಬೆಳೆಸುವುದು ವೀರಶೈವವ್ರತ.

"ಅಗ್ನೇರಿವ ಶಿಖಾ ಯಸ್ಯ ವಿದ್ಯಾದ್ ಜ್ಞಾನಮಯೀ ಶಿಖಾ ।
ಸ ಶಿಖೀತ್ಯುಚ್ಯತೇ ವಿದ್ವಾನ್ನಿತರೇ ಕೇಶಧಾರಿಣಃ ॥"

ಎಂದು ಮಕುಟಾಗಮೋಕ್ತಿಯಿದೆ. ಕಾರಣ ವೀರಶೈವನಿಗೆ ಜ್ಞಾನಶಿಖೆ ಇರಬೇಕು. ಇದು ವೀರಶೈವ ಶಿರೋವ್ರತ ಪುರುಷರು ತಲೆಯ ಕೂದಲನ್ನೆಲ್ಲ ಬೋಳಿಸಬೇಕು. ತಲೆಕೂದಲಲ್ಲಿ ಸಂಚಿತ ಕರ್ಮಗಳೆಲ್ಲ ಇರುತ್ತವೆ. ಸುವರ್ಣಸ್ತೇಯಕರ್ಮ ಹತ್ಯಾಕರ್ಮ ಮುಂತಾದ ಮಹಾ ಮಹಾಕರ್ಮಗಳು ತಲೆಕೂದಲಿನಲ್ಲಿರುತ್ತವೆ. ಕಾರಣ ಕೇಶಗಳನ್ನು ಕತ್ತರಿಸಬೇಕು, ಬೋಳಿಸಬೇಕು. ಇದೂ ಶಿರೋವ್ರತ. ಇನ್ನು ನಿತ ಹೊಟ್ಟೆಯನ್ನು ತುಂಬಿಕೊಳ್ಳುವಂತೆ ಜ್ಞಾನದಿಂದ ತಲೆಯನ್ನು ತುಂಬಿಕೊಳ್ಳಬೇಕು

"ಒಲೆಯುಲಟ್ಟುಂಬರಲ್ಲದೆ ತಲೆಯುಲಟ್ಟುಂಬರಿಲ್ಲ.
ಒಲೆಯುಲಟ್ಟುಂಬರೆ ಹೊಗೆಯಾಡುವದೈಸೆ; ಹಗೆಯಾಡುವದೈಸೆ.
ತಲೆಯುಲಟ್ಟುಂಬರೆ ಹೊಗೆಯಿಲ್ಲ, ಹಗೆಯಿಲ್ಲ ಗುಹೇಶ್ವರಾ"!

ತಲೆಯುಲಟ್ಟುಂಬುವುದು ಜ್ಞಾನಾನುಭವಾಮೃತ. ತಲೆಯುಲಟ್ಟುಂಬುವುದು ಶಿರೋವ್ರತ; ಶಿವವ್ರತ.

ನಿಜವಾದ ವೀರಶೈವನು ಶಿವಾತ್ಮವಿದ್ಯೆಯಲ್ಲಿ ಸದಾ ವಿಹರಿಸುತ್ತಾನೆ. 'ವೀರಶೈವ' ಶಬ್ದದ ಅರ್ಥವೂ ಅದೇ ಆಗಿದೆ.

"ವಿ ಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾ ಇತಿ ಸ್ಮೃತಾಃ ॥"

—ಸಿದ್ಧಾಂತ ಶಿಖಾಮಣಿ

ಶಿವಜೀವೈಕ್ಯ (ಲಿಂಗಾಂಗ ಸಾಮರಸ್ಯ)ವನ್ನು ಬೋಧಿಸುವ ವಿದ್ಯೆಯಲ್ಲಿ ರಮಿಸುವವರೇ ವೀರಶೈವರು. ಇದುವೇ ವೀರಶೈವರ ಶಿರೋವ್ರತ. ಇದನ್ನು ಒದಗಿಸುತ್ತದೆ ವೇಧಾದೀಕ್ಷಾ ವ್ರತ! ಇದರಿಂದಾಗಿ ಶಿರೋವ್ರತವು ಕ್ರಿಯಾತ್ಮಕವಾಗಿ ಜ್ಞಾನಾತ್ಮಕವಾಗಿ ವೀರಶೈವ ಮತ ಜೀವಾಳವಾಗಿದೆ. ವೀರಶೈವರ ಹೊರ ಒಳಗೂ ಅಂಗ ಉತ್ತಮಾಂಗಗಳಲ್ಲಿಯೂ ಶಿರೋವ್ರತ ಸಂಧೃತವಾಗಿರುತ್ತದೆ. ಶಿರೋವ್ರತಕ್ಕೂ ವೀರಶೈವ ಮತಕ್ಕೂ ವಾಗರ್ಥ ಸಂಬಂಧವಿದೆ; ವಾಚ್ಯವಾಚಕ ಸಂಬಂಧವಿದೆ.

ವೀರಶೈವರ ಪಂಚಾಚಾರಗಳೂ ಶಿರೋವ್ರತಂಗಳೆನಿಸಿವೆ; ಅಂದರೆ ಶ್ರೇಷ್ಠ ವ್ರತಗಳಾಗಿವೆ. ಪಂಚಶೀಲಗಳಾಗಿ ಪಂಚವ್ರತಗಳಾಗಿ ಪಂಚಪ್ರಾಣವಾಗಿವೆ.

---

# ವೀರಭದ್ರ-ವೀರಶೈವ

—ಸೂರ್ಯಸಿಂಹಾಸನಾಧೀಶ್ವರ, ⓢ ಜ. ಚ. ನಿ.

ವೀರಶೈವ ಸಾಹಿತ್ಯದಲ್ಲಿ 'ರುದ್ರಗಣ'ದ ಹೆಸರು ಹೇರಳವಾಗಿ ಬರುತ್ತದೆ. ರುದ್ರಗಣ ಪ್ರಮಥ ಗಣಕ್ಕಿಂತ ಬಹು ಪುರಾತನದ್ದು. ರುದ್ರಗಣದ ಮೂಲ ವಾಸಸ್ಥಾನ ಕೈಲಾಸ. ವೀರಶೈವದ ಆದಿಗಣರು ರುದ್ರಗಣರು. ಆ ರುದ್ರಗಣರ ಸಂಖ್ಯೆ ಅಸಂಖ್ಯಾತ. 'ಗಂಗೆವಾಳುಕ ಸಮರುದ್ರರು' ಎಂದು ವಚನಕಾರರು ವಚಿಸಿದಾರೆ. ತೊರೆಯ ಮರಳಿನಷ್ಟು ರುದ್ರಗಣರಿದ್ದರಂತೆ! ಇದು ಸಂಶೋಧಕರು ಗಮನಿಸಿ ಶೋಧಿಸುವ ವಿಷಯು. ಗಣ ಸಹಸ್ರದಲ್ಲಿ ಅನೇಕ ರುದ್ರಗಣರ ಹೆಸರುಗಳು ಬಂದಿವೆ. 'ಛಲಿಗಳಪ್ರತಿಮರತಿರಥರುದ್ರ ನಾಯಕರ್ ಕೆಲಬಲದೊಳೊಪ್ಪಿರ್ದರಮರಗಣ ನಾಯಕರ್'-ಹರಿಹರ.

ವೀರಶೈವ ತತ್ವದ ಕ್ರಾಂತಿಗೂ ಉಗಮಕ್ಕೂ ಮೂಲ ಕೇಂದ್ರ ಕೈಲಾಸ; ಮೂಲ ಕ್ರಾಂತಿಕಾರರು ರುದ್ರಗಣರು. ಈ ಮಾತಿಗೆ ಮೊದಲ ಸಾಕ್ಷಿ ವೀರ ಶೈವಾಗಮಗಳು-ನಿಗಮಗಳು. ಎರಡನೆಯ ಸಾಕ್ಷಿ ಕಲ್ಯಾಣಕ್ಕೆ ದ್ವಿತೀಯ ಕೈಲಾಸ ವೆಂದೂ ಬಸವಣ್ಣನಿಗೆ ದ್ವಿತೀಯ ಶಂಭುವೆಂದೂ ಉಗ್ಗಡಿಸುತ್ತಿರುವುದು. ದ್ವಿತೀಯ ಕೈಲಾಸವೆಂದ ಬಳಿಕ ಪ್ರಥಮ ಕೈಲಾಸವಿದ್ದಾಗಬೇಕಲ್ಲವೆ? ದ್ವಿತೀಯ ಶಂಭುವೆಂದಾಗ ಪ್ರಥಮ ಶಂಭು ಐತಿಹಾಸಿಕ ಶಂಭು ಇದ್ದಾಗಬೇಕಲ್ಲವೆ? ಆ ಪ್ರಥಮ ಶಂಭುವೇ ರುದ್ರ. ಆತನ ಕಾಲ ಪ್ರಾಚೀನ ಋಗ್ವೇದಕ್ಕೆ ಪಬನ್ನ. ಆತನ ವಾಸ ಕೈಲಾಸ. ಆತನ ಗಣ ರುದ್ರಗಣ.

ಮೂರನೆಯ ಸಾಕ್ಷಿ ಹರಪ್ಪ ಮೊಹೆಂಜದಾರೊ ಪಟ್ಟಣಗಳ ಸಂಶೋಧನೆ. ಸರ್ ಜಾನ್ ಮಾರ್ಷಲ್‌ರವರು ಸಿಂಧು ತೀರದ ಈ ಎರಡು ನಗರಗಳನ್ನು ಸಂಶೋಧಿಸಿ ಆರ್ಯ ದ್ರವಿಡ ಸಂಸ್ಕೃತಿಗಳಿಗಿಂತ ಪೂರ್ವದಲ್ಲಿ ಲಿಂಗಧಾರಿಗಳಿದ್ದರೆಂದು ಹೇಳಿದ್ದಾರೆ. ಇವರು ಮೇರು ಗಿರಿಯ ನಿವಾಸಿಗಳೆಂದೂ ಕೈಲಾಸ, ವೈಕುಂಠ, ಸತ್ಯಲೋಕಗಳಲ್ಲಿ ವಾಸಿಸಿದ್ದರೆಂದೂ ಪುರಾಣದಿಂದ ತಿಳಿಯುತಿದೆ. ಇದರಿಂದಾಗಿ ಆದಿ ಕೈಲಾಸವಾಸಿ

ಗಳಾದ ವೀರಭದ್ರಾದಿ ರುದ್ರ ಗಣರು ವೀರಶೈವರಾಗಿದ್ದರೆಂದು ವಿಶದವಾಗುತ್ತದೆ.

"ವೀರನಂದಿ ವೃಷಶ್ಚೈವ ಭೃಂಗಿಸ್ಕಂದಸ್ತಥೈವಚ
ಅತಿವರ್ಣಾಶ್ರಮೋಪೇತಾ ಮದೂರ್ಧ್ವಮುಖ ವಿಶ್ರುತಾಃ
ಗೋತ್ರರೂಪಾಶ್ಚ ಪಂಚೈತೇ ವಿಶಿಷ್ಟಾದ್ವೈತವಾದಿನಃ
ಅತ ಏವೋತ್ತಮಾಃ ಪ್ರೋಕ್ತಾಃ ಅತಿವರ್ಣಾಶ್ರಮಸ್ತಥಾ ॥

—ಸುಪ್ರಭೇದಾಗಮ

ಪ್ರಮಥ ಗಣರಿಗೆ ನಂದಿ ಹೇಗೇ ಪ್ರಮುಖನೋ ರುದ್ರಗಣರಿಗೆ ವೀರಭದ್ರನ. ಹಾಗೆ ಪ್ರಮುಖ. ವೀರಭದ್ರನು ವೀರಶೈವ ಮೂಲ ಸಂಸ್ಥಾಪಕ, ಶೈವ ಸಂಸ್ಕೃತಿಯ ಉದ್ಧಾರಕ; ಪ್ರಸಾರಕ. ಈ ದಿಸೆಯಲ್ಲಿ ಅವನಿಗೆ ಸಹಾಯಕವಾಗಿದ್ದ ರುದ್ರಗಣ ಅಪರಿಮಿತವಾಗಿತ್ತು ; ಅತಿ ಬಲವುಳ್ಳದ್ದಾಗಿತ್ತು.

"ಸಿಡಿಲ ಬಳಗವನೊಂದುಮಾಡಿ ಗಡಣಿಸಿದಂತೆ
ಮೃಡನತಿ ಬಲಂ ಬೇರೆ ಬೇರೆ ರೂಪಾದಂತೆ"

ರುದ್ರಗಣರಿದ್ದರು. ಅವರೆಲ್ಲರ ನೆರವಿನಿಂದ ತನ್ನ ವಿಶೇಷವಾದ ವೀರಶ್ರೀಯಿಂದ ಶೈವ ಸಂಸ್ಕೃತಿಯನ್ನು ಭೂಲೋಕದಲ್ಲಿ ನೆಲೆ ನಿಲ್ಲಿಸಿದನು ವೀರಭದ್ರನು. ಇದರ ಕುರುಹಾಗಿಯೆ ವೀರಶೈವವೆಂದು ಹೆಸರು ಬಂದಿರಲು ಸಾಕು; ಹೆಚ್ಚಾಗಿಕೆ ಬಂದಿರಬೇಕು.

ದಕ್ಷ ಬ್ರಹ್ಮಾದಿಗಳೆಲ್ಲರೂ ಒಂದು ಕಾಲದ ಈ ಲೋಕದ ಪುರುಷರು. ಐತಿಹಾಸಕ ವ್ಯಕ್ತಿಗಳು. ದಕ್ಷಬ್ರಹ್ಮನ ವಾಸ ಸ್ಥಳಗಳಲ್ಲಿ ಒಂದು ಬೆಳಗಾವಿ ಜಿಲ್ಲೆಯಲ್ಲಿರುವ ಎಡೂರು ಎಂಬ ಹೆಸರಿನ ಊರು ಎಂದು ಬಹು ಕಾಲದಿಂದ ಬಂದ ಲೋಕರೂಢಿ, ಅಲ್ಲಿ ಈತನು ಶೈವ ವಿರುದ್ಧವಾಗಿ ವೈದಿಕ ಸಂಪ್ರದಾಯವನ್ನು ಬೆಳಸಲು ಹೆಣಗಿದನು. ಒಂದು ಮಹಾಯಾಗಕ್ಕೆ ಆತನು ಜಗತ್ತಿನ ಅರಸು ಮಕ್ಕಳನ್ನೆಲ್ಲ ಕರೆಸಿದ್ದನಂತೆ ! ಮನು ಮುನಿಗಳೆಲ್ಲ ಬಂದಿದ್ದರಂತೆ ! ವೀರಭದ್ರನು ಈ ಯಾಗವನ್ನು ಧ್ವಂಸ ಮಾಡಿದನು. ವಿಜಯಶಾಲಿಯಾದ ವೀರಭದ್ರನ ಹಿರಿದಾದ ವಿಗ್ರಹವು ಚಿರಸ್ಮಾರಕ ವಾಗಿ ಆ ಯಾಗ ಕುಂಡದಲ್ಲಿಯೆ ಪ್ರತಿಷ್ಠಿತವಾಗಿದೆ.

ಬುದ್ಧನಿಗಿಂತಲೂ ಪೂರ್ವದಲ್ಲಿ ಯಜ್ಞ ಯಾಗಾದಿಗಳ ಹಿಂಸಾತ್ಮಕ ಸಂಸ್ಕೃತಿ ಯನ್ನು ಸದೆಬಡಿದ ಕೀರ್ತಿ ವೀರಭದ್ರನದು. ವಿಶಿಷ್ಟ ಕ್ರಾಂತಿಯೊಡನೆ ವೀರಶೈವ ವಿಜಯ ಪತಾಕೆಯನ್ನು ವಿಶ್ವದಲ್ಲಿ ವಿಯತ್ತಿನೆತ್ತರಕ್ಕೆ ಹಾರಿಸಿದ ಕೀರ್ತಿ ವೀರಭದ್ರನದು. ಈ ನಿಟ್ಟಿನಲ್ಲಿ ವೀರಭದ್ರನ ಇತಿಹಾಸ ತುಂಬಾ ಗಮನಾರ್ಹ ವಾದುದು ; ಸಂಶೋಧನೀಯವಾದುದು.

ಕಡುಗಲಿಯಾದ ವೀರಭದ್ರನು ಶಿವ ಪುತ್ರನು ; ಶ್ರೇಷ್ಠನು. ರುದ್ರ ದೇವನ ಅಪರಾವತಾರಿ ; ವೀರಕ್ರಾಂತಿಕಾರಿ. ಆತನ ಜನನ ಶಿವನ ಉರಿಗಣ್ಣಿನಲ್ಲಿ ! ಲಿಂಗಸ್ವರೂಪಿಯಾದ ಈತನ ಈ ಜನನದಲ್ಲಿ ವೀರಶೈವ ತತ್ತ್ವದ ರಹಸ್ಯವಡಗಿದೆ.

ವೀರಶೈವ ತತ್ತ್ವ ಮೂಲವಾದ ಲಿಂಗೋತ್ಪತ್ತಿಯಾಗುವುದು ನೇತ್ರ ಮುಖದಿಂದ! ಶ್ರೀಗುರು ಶಿಷ್ಯನ ನೇತ್ರದ್ವಾರದಿಂದ ಸಿಟಿಲಕ್ಕೇರಿ ಅಲ್ಲಿಂದ ಆ ತೇಜೋಮೂರ್ತಿಯಾದ ಪರಶಿವ ಕಲೆಯನ್ನು ಗ್ರಹಿಸಿ ಬಹಿಷ್ಕರಿಸಿ ಸಾಕಾರಗೊಳಿಸಿ ಕರಕಮಲಕ್ಕೆ ಕರುಣಿಸುತ್ತಾನೆ. ಈ ರಹಸ್ಯವನ್ನು ಉಗ್ಗಡಿಸುತ್ತದೆ ಆ ವೀರಭದ್ರನ ಉತ್ಪತ್ತಿ ತತ್ತ್ವ! ಇದರಿಂದ ವೀರಭದ್ರನ ಉತ್ಪತ್ತಿಯೆಂದರೆ ವೀರಶೈವ ಸಾರಸರ್ವಸ್ವವಾದ ಶಿವಲಿಂಗೋತ್ಪತ್ತಿ; ವೀರಶೈವೋತ್ಪತ್ತಿ!

"ಲಿಂಗಾರ್ಚನಯುಕ್ತೋಽಸೌ ವೀರಭದ್ರೋಽಭವತ್ತದಾ
ತದ್ರೂಪಸ್ಯೈವ ಲಿಂಗಸ್ಯ ಯೇನ ಸರ್ವಮಿದಂ ಜಗತ್
ಉದ್ಭಾತಿ ಸ್ಥಿತಿಮಾಪ್ನೋತಿ ತಥಾ ವಿಲಯಮೇತಿ ಚ
ತಲ್ಲಿಂಗಂ ಲಿಂಗಮಿತ್ಯಾಹುರ್ಲಯನಾತ್ತತ್ತ್ವವಿತ್ತಮಾಃ"

—ಸ್ಕಂದ ಪುರಾಣ, ಅ. ೬.

ವೀರಭದ್ರನ ರೂಪವೇ ಲಿಂಗ. ಲಿಂಗ ರೂಪವೇ ವೀರಭದ್ರ. ಲಿಂಗ ಸಂಸ್ಕೃತಿಯ ಮೂಲ ಪುರುಷ ವೀರಭದ್ರ. ಪ್ರಥಮ ಕೈಲಾಸದಲ್ಲಿನ ವೀರಶೈವ ತತ್ತ್ವದ ಪ್ರತಿಷ್ಠಾಪನ-ಪ್ರಕಾಶನ ಕಾರ್ಯಗಳಿಗೆ ಪ್ರಧಾನ ಕಾರಣನಾದ ವೀರಭದ್ರ.

ಕೈಲಾಸದಿಂದ ಕನ್ನಡನಾಡಿಗೆ ಬಂದು ನೆಲೆನಿಂತನು ವೀರಭದ್ರನು. ಕನ್ನಡದ ಮುಖ್ಯ ಮತ್ತು ಮೂಲ ಅಧಿದೇವತೆಯಾಗಿರುವನು ವೀರಭದ್ರನು. ಕನ್ನಡ ನಾಡಿನಾದ್ಯಂತ ಆತನ ಬಹು ಪುರಾತನ ದೇವಾಲಯಗಳಿವೆ. ಆತನ ದೇವಮಂದಿರಗಳಿಲ್ಲದ ಪುಣ್ಯ ಕ್ಷೇತ್ರಗಳಿಲ್ಲ; ಪುಣ್ಯಾರಣ್ಯಗಳಿಲ್ಲ; ಪಟ್ಟಣ ಹಳ್ಳಿಗಳಿಲ್ಲ. ತಿರುಪತಿ, ಗದುಗಿನ ವೀರನಾರಾಯಣ, ಕೂಡಲಸಂಗಮ, ಕರಕ್ಕಾಳ ಪಂಡರಪುರದ ಪಾಂಡುರಂಗ ಮುಂತಾದ ಮುಖ್ಯ ಮುಖ್ಯ ದೇವಸ್ಥಾನಗಳೂ ಸಹ ವೀರಭದ್ರನವೆ ಎಂದು ಹೇಳುತ್ತಿರುವುದು ಹೆಮ್ಮೆಯ ವಿಷಯವಲ್ಲವೆ? ವಾಯು ಪುತ್ರನಾದ ಮಾರುತಿಗೆ ವೀರಭದ್ರನೇ ಲಿಂಗದೀಕ್ಷೆಯನ್ನು ಮಾಡಿದನೆಂದು ಕೆಲವು ಪುರಾಣಗಳಲ್ಲಿ ವಿಶೇಷವಾಗಿ ಹಮ್ಮಿರ ಕಾವ್ಯದಲ್ಲಿ ಹೇಳಿದೆ. ವೀರಭದ್ರನ ಭಕ್ತರು ವಿಶೇಷವಾಗಿದ್ದಾರೆ.

ಶ್ರೀ ಜಗದ್ಗುರು ಸಿದ್ಧಮಾಡಿ ಶ್ರೀಶೈಲ ಸುಸ್ಥಾನದಲ್ಲಿಯೂ ವೀರಭದ್ರನು ಪೂಜಾರ್ಹನಾಗಿದ್ದಾನೆ. ಮುಖ್ಯವಾಗಿ ಶ್ರೀ ಜಗದ್ಗುರು ರೇಣುಕ ಪೀಠದವರ ಪೂಜ್ಯ ಮೂರ್ತಿಯಾಗಿದಾನೆ ವೀರಭದ್ರ. ಗೋತ್ರಪುರುಷನೂ ಆಗಿದಾನೆ. ಇದರ ಇಂಗಿತ ವೇನು? ವೀರಶೈವಾಚಾರ್ಯರಿಗೆ ವಿಶೇಷ ಪೂಜ್ಯನಾದ ವೀರಭದ್ರನು ವೀರಶೈವ ಸಂಸ್ಕೃತಿಯ ಮೂಲಕರ್ತನಾಗಿರಬೇಕಲ್ಲವೆ? ಇಲ್ಲವಾದರೆ ಈ ಪೂಜಾರ್ಹತೆ ಬರಲು ಬೇರೆ ಕಾರಣವೇ ಇಲ್ಲ.

ವೀರಶೈವ ಪ್ರಾಚೀನತೆಗೂ ಪ್ರಾಚುರ್ಯತೆಗೂ ಪರಮನಿದರ್ಶನವಾಗಿ ಕನ್ನಡ ಮತ್ತು ಪರಿಸರ ಪ್ರಾಂತಗಳಲ್ಲಿ ವೀರಭದ್ರನ ಮಂದಿರಗಳು ವಿಪುಲವಾಗಿ ನಿಂತಿವೆ.

ವೀರಭದ್ರನಿಗೆ ಬಹು ಜಾತಿಯ ಜನರು ಭಕ್ತರಿದ್ದಾರೆ. ವೀರಭದ್ರನದೇ ಆದ ಒಂದು ವೀರ ಸಂಸ್ಕೃತಿಯಿದೆ. ವೀರಖಡ್ಗಗಳನು ಉಗ್ಗಡಿಸುವ ಪುರಾತನ ಸಂಸ್ಕೃತಿ ವೀರಭದ್ರನದಲ್ಲದೇ ಮತ್ತಾರದಿಲ್ಲ. ಪುರಾತನ ವೀರಶೈವರಲ್ಲಿ ವೀರಭದ್ರನಲ್ಲಿರುವ ಭಕ್ತಿ ಸ್ಮಾರಕವಾಗಿ ಅಭಿಮಾನ ಸೂಚಕವಾಗಿ ಐತಿಹಾಸಿಕ ಸಂಗತಿಗಾಗಿ ಮಂಗಳ (ಮದುವೆ) ಕಾರ್ಯದಲ್ಲಿ ಗುಗ್ಗುಳ ಕಾರ್ಯವನ್ನು ಪರಂಪರೆಯಾಗಿ ನೆರವೇರಿಸುವ ನೋಂಪಿಯಿದೆ. ವೀರಭದ್ರನ ವೀರಶ್ರೀಯ ದ್ಯೋತಕವಾಗಿ ಶಸ್ತ್ರಧಾರಣಾದಿ ಕಾರ್ಯವು ಜರಗುತ್ತದೆ. ವೀರಭದ್ರನ ಪೂಜೆ ವಿಶೇಷವಾಗಿ ಜರಗುತ್ತದೆ. ದಕ್ಷನ ಹೋಮಕುಂಡವ ಹಾಳು-ಮಾಡಿದುದರ ನಿದರ್ಶನಕ್ಕಾಗಿ ಅಲ್ಲಲ್ಲಿ ಯಾತ್ರೋತ್ಸವಗಳಲ್ಲಿ ವಿಶೇಷೋತ್ಸವಗಳಲ್ಲಿ 'ಅಗ್ನಿಕುಂಡ' ಉತ್ಸವಗಳು ನಡೆಯುತ್ತವೆ. ವ್ರತಸ್ಥರಾದ ಅನೇಕ ಜನ ಹೆಂಗಸರು ಗಂಡಸರು ಅಗ್ನಿಕುಂಡದಲ್ಲಿರುವ ಅಗ್ನಿಯನ್ನು ತೊತ್ತುಳಿದು ದಾಂಟಿ ಹೋಗುವ ರೋಮಾಂಚಕಾರಿ ವಿಸ್ಮಯಕಾರಿ ದೃಶ್ಯಗಳನ್ನು ದಿಟ್ಟಿಸದೆ ಇರುವವರಿಲ್ಲ. ಇವೆಲ್ಲ ವೀರ ಕಾರ್ಯಗಳು ವೀರಶೈವರನ್ನೆ ವಿಶೇಷವಾಗಿ ಬಳಸಿಕೊಂಡು ಬಂದುದರ ಭಾವವೇನು ?

"ಭದ್ರಾಕ್ಷೋ ವೀರಕೋ ಭದ್ರೋ ಮಹಾಕಾಲಸ್ತ್ರಿಯಕ್ಷರಃ
ರುದ್ರನಾಥೋ ಮಹಾ ವೀರಭದ್ರೋ ವಿಜಯಭದ್ರಕಃ"

ಗಣಸಂಕೀರ್ತನದಲ್ಲಿ ಬರುವ ಈ ವೀರಭದ್ರನ ವೀರವರ್ಣನೆ, ವಿಜಯವರ್ಣನೆ ಮಿಗಿಲಾಗಿ ಮಂಗಲ ದೃಷ್ಟಿಯ ವರ್ಣನೆಗಳನ್ನು ನೋಡಿದರೆ ವೀರಭದ್ರನು ಹೇಗೆ ವೀರನೋ ಹಾಗೆ ಮಂಗಳಕರನೆಂಬುದು ಮನವರಿಕೆಯಾಗುತ್ತದೆ. ವೀರಭದ್ರನು ವೀರ ಪುರುಷನೂ ಅಹುದು; ಭದ್ರಪುರುಷನೂ ಅಹುದು. ಭದ್ರಪದ ಶಿವಪದದ ಪರ್ಯಾಯ ಪದ ಶಿವ ಪದವು ಹೇಗೆ ಮಂಗಳವಾಚಿಯೋ ಹಾಗೆ ಭದ್ರಪದವೂ ಮಂಗಳವಾಚಿಯಾಗಿದೆ. ಶುಭಸೂಚಕದೊಡನೆ ಸ್ಥಿರಸೂಚಕವೂ ಆಗಿದೆ. ಭದ್ರಪದ ಶಿವ ಪದದ ಪರ್ಯಾಯ ಪದವೆಂಬ ನಿರೂಪಣದಿಂದ ವೀರಭದ್ರನಿಗೆ 'ವೀರಶಿವ' ಎಂಬ ಹೆಸರೂ ಇದ್ದಿರಬೇಕು. ವೀರಶಿವನಿಂದ ಬಂದ ಮತಕ್ಕೆ ವೀರಶೈವವೆಂದು ಹೆಸರು ಬರುವುದರಲ್ಲಿ ಹೆಚ್ಚು ಔಚಿತ್ಯವಿದೆ; ಒಪ್ಪಿತವೂ ಆಗುತ್ತದೆ. ಇದರಿಂದಾಗಿ ವೀರಭದ್ರ ಅಂದರೆ ವೀರಶಿವನು ವೀರಶೈವದ ಮೂಲಪುರುಷನಾಗಲು ಎಲ್ಲ ಬಗೆಯಲ್ಲಿಯೂ ಎಲ್ಲರಿಗಿಂತಲೂ ಹೆಚ್ಚು ಯುಕ್ತನಾಗಿದ್ದಾನೆ.

'ವೀರಭದ್ರ ಇತಿಖ್ಯಾತಂ ದೇವದೇವಂ ಜಗದ್ಗುರುಂ'

—ಕೂರ್ಮಪುರಾಣ

"........ನಿರಸ್ತಪರವಾದಿಗಳುಂ, ದುರ್ವಾಸಾಗಸ್ತ್ಯ ಭೃಗೂಪಮನ್ಯು ಸಾನಂದ ದಧೀಚಿ ವಸಿಷ್ಠ-ಗೌತಮಾದಿ ಮುನಿಮಾರ್ಗ ಪ್ರತಿಷ್ಠಾಪನಾಚಾರ್ಯರುಂ, ಸಕಲ ಜಗದ ವಸ ಚಾತುರ್ಯ ಧುರ್ಯರುಂ, ಕಲಿಯುಗ ವೀರಭದ್ರಾವತಾರರುಂ, ಏಕಾಂಗ ವೀರರುಂ,

ದುಷ್ಟನಿಗ್ರಹ ಶಿಷ್ಟಪರಿಪಾಲನ ವಿಚಕ್ಷಣರುಂ, ಶಿವ ಸಮಯ ಶರಣಾಗತ ರಕ್ಷಣರುಂ, ಪರಮ ಶಿವಾಚಾರ ಶೀಲಪರರುಂ........"—ಪಾಲ್ಕುರಿಕೆ ಸೋಮನಾಥ

ಇನ್ನಾವ ಯುಗದ ಮಾತಲ್ಲ. ಕಲಿಯುಗದ ಮಾತು. ಕಲಿಯುಗದಲ್ಲಿ ಅವತರಿಸಿದ ವೀರಭದ್ರಾವತಾರರ ಮಾತು. ಅವರ ಈ ಲೋಕ ಚರಿತೆಗಳನ್ನು ವರ್ಣಿಸುವ ವಿಶೇಷಣಗಳನ್ನು ಗಮನಿಸಬೇಕು. ಆ ವಿಶೇಷಣಗಳು ಅರ್ಥಪೂರ್ಣ ವಾಗಿವೆ. ವೀರಭದ್ರನ ಸತ್ಯಚಾರಿತ್ರಕ್ಕೆ ಸಾಕ್ಷಿಗಳಾಗಿವೆ. ಶಿವ ಸಮಯ ಪರಿಪಾಲನ, ಶಿವಾಚಾರಾಚರಣ ಇವುಗಳನ್ನು ಉಗ್ಗಡಿಸುತಿವೆ. ಮುನಿಮಾರ್ಗ ಪ್ರತಿಷ್ಠಾಪನ ಕಾರ್ಯದಲ್ಲಿ ಆಚಾರತ್ವವನ್ನು ಅಂಗೀಕರಿಸಿವೆ. ಪರವಾದಿಪರಾಜಯ ಸೂಚಕವಾಗಿವೆ. ವೀರಶ್ರೀ ದ್ಯೋತಕವಾಗಿವೆ. ಶಿಷ್ಟರಕ್ಷಣೆಯ ಮೂಲಕ ಒಳಿತು ಬಾಳು ಬದುಕುಗಳಿಗೆ ಉತ್ತೇಜಕವಾಗಿವೆ. ವೀರಭದ್ರಾವತಾರವನ್ನು ವೀರಶೈವ ಮೂಲವೆಂದು ಹೇಳು-ವಷ್ಟು ಹತ್ತಿರಕ್ಕೆ ಕರೆದೊಯ್ಯುತಿವೆ.

ವೀರಭದ್ರನ ಉತ್ಪತ್ತಿ ಏತಕ್ಕಾಗಿ? ಇವೆರಡು ಪ್ರಯೋಜನಕ್ಕಾಗಿ: ಒಂದು, ಕರ್ಮಮೂಲವಾದ ಯಜ್ಞಯಾಗಾದಿಗಳ ನಿರ್ಮೂಲಕ್ಕಾಗಿ! ಎರಡು, ಶೈವಸಂಸ್ಕೃತಿಯ ಸಂಸ್ಥಾಪನೆಗಾಗಿ! ಇವೆರಡನ್ನು ಬಿಟ್ಟರೆ ಬೇರೆ ಕಾರಣವೇ ಇಲ್ಲ: ಕಾರ್ಯವೂ ಇಲ್ಲ.



# ವಿವೇಕ ಚಿಂತಾಮಣಿಯ ವೀರಶೈವ

—ಸಂಗ್ರಾಹಕರು : ಶ್ರೀ ಜ. ಚ. ನಿ.

ಶಿವತತ್ವ ಪರತರ. ಶಿವಸಿದ್ಧಾಂತ ಪುರಾತನ. ಇವೆರಡು ಸರ್ವರಿಂಗೆ ಸುಲಭ; ಸಾಧಕರಿಗೆ ತಿಳಿಯುತಕ್ಕವು ; ತಳೆಯತಕ್ಕವು. ಶಿವ ಸಿದ್ಧಾಂತ ಪ್ರತ್ಯಕ್ಷ ಫಲದಾಯಕ. ಶ್ರದ್ಧಾ ಸಂಘಟಕ.

ಶಿವ ಸಿದ್ಧಾಂತ ಆಗಮ ಪ್ರಪಂಚ. ಆಗಮ ಪ್ರಪಂಚ ಅದೊಂದು ವಿಪುಲವಾದ ಸಾಹಿತ್ಯ. ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮತ್, ಸುಪ್ರಬೋಧ; ವಿಜಯ, ನಿಶ್ವಾಸ, ಸ್ವಯಂಭು, ಅನಲ, ವೀರ, ಗೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ, ಶಾಂತ, ಸರ್ವೋತ್ತರ, ಪಾರಮೇಶ್ವರ, ಕಿರಣ, ವಾತುಲ–ಎಂದು ಇಪ್ಪತ್ತೆಂಟು ಆಗಮಗಳು ದಿವ್ಯಾಗಮಗಳೆಂದು ಪ್ರಸಿದ್ಧವಾಗಿವೆ. ಇವೆಲ್ಲವು ಪರಮೇಶ್ವರನ ಪಂಚಮುಖಗಳಿಂದ ಬಂದವೆಂದು ಪ್ರತೀತಿ! ಇವುಗಳಲ್ಲಿ ಮೊದಲಿನವು ಹತ್ತು ಶಿವಭೇದವೆನಿಸಿವೆ. ಉಳಿದ ಹದಿನೆಂಟು ರುದ್ರಾಗಮವೆನಿಸಿವೆ. ಈ ಇಪ್ಪತ್ತೆಂಟಾಗಮಗಳಿಗೆ ಉಪಭೇದಾಗ ಮಗಳು ನೂರತೊಂಬತ್ತೆಂಟವೆ. ಆಗಮ ಮಂತ್ರಗಳು ಅಸಂಖ್ಯೆಯಾಗಿವೆ. ಆಗ ಮಿಕರ ಸಂಖ್ಯೆಯೂ ಅಗಣಿತ, ಪ್ರಣವ, ತ್ರಿಕಲನ, ಹರ, ಸುಧಾಖ್ಯ, ಬಾಹು, ವಿಭು, ದೀಪ್ತ, ಯೋಗಾಹ್ವಯ, ಅಂಬಿಕೆ, ಕಾರಣಾಖ್ಯ, ಸರ್ವ, ಪ್ರಜಾಪತಿ, ಶಿವ, ಸುಶಿವ, ಅಚ್ಯುತ, ಈಶ, ತ್ರಿಮೂರ್ತಿ, ಹೂತಾಶ, ಸೂಕ್ಷ್ಮ, ವೈಶ್ರವಣ, ಸುಪ್ರಭಂಜನ, ಕಾಲರುದ್ರ, ಭೀಮ, ಧರ್ಮ, ಅಂಬು, ಉಗ್ರ, ಔರಸ, ಉದಶೇಶ, ವಿಘ್ನೇಶ, ಶಶಿಕೇಳಿ, ರುದ್ರ, ಅನಾದಿಪರಮ, ಈಶ್ವರ, ಉದಯ, ಗಿರಿಜೆ, ನಿಧನೇಶ ಸ್ವಯಂಭು, ವ್ಯೋಮ, ಹುತಾಶನ, ತೇಜಸ್ವಂತ, ಪ್ರಜೇಶ, ಬ್ರಹ್ಮೇಶ, ನಂದೀಶ, ಶಶಾಖ್ಯ, ಮಹಾದೇವ, ಸರ್ವಾತ್ಮ, ವೀರಭದ್ರ, ಅನಂತ, ಬೃಹಸ್ಪತಿ, ಪ್ರಶಾಂತ, ದಧೀಚಿ, ಶೂಲಿ, ಕವಚಾಖ್ಯ, ಯಮ, ಲಲಿತ, ಇಂದ್ರ, ಚಂಡೀಶ, ವಸಿಷ್ಠ, ಶಶ ಪಾಯನ, ಸೋಮ, ನೃಸಿಂಹ, ದೇವಿ,ದೇವಪಿತ, ಸಂವರ್ತ, ಶಿವರುದ್ರ, ಮಹಾಕಾಳ,

—ಶಿವಾಗಮಗಳನ್ನು ಅರಿತವರಲ್ಲಿ ಇವರೇ ಮುಖ್ಯರು; ಮೊದಲಿಗರು. ಈ ೬೬ ಜನರಲ್ಲಿ-೬೩ ಮಂದಿ ಶಿವಾಗಮಗಳನ್ನು ಅರಿತ ಶಿವಾಚಾರ್ಯರು. ಅಂಬಿಕೆ, ಗಿರಿಜೆ, ದೇವಿ—ಈ ಮೂವರು ಶಿವಾಗಮಗಳನ್ನರಿತ ದೇವಿಯರು.

ಆಗಮಗಳು ಅಖಿಲ ವಿದ್ಯೆಗಳಿಗೆ ಆಗರವಾಗಿವೆ. ಸಕಲ ಕಲೆಗಳಿಗೆ ಕೇಂದ್ರವಾಗಿವೆ. ಹದಿನೆಂಟು ಮಹಾ ವಿದ್ಯೆಗಳು, ಹದಿನೆಂಟು ಉಪವಿದ್ಯೆಗಳು, ಅರವತ್ತು ನಾಲ್ಕು ವಿದ್ಯಾಕಲೆಗಳು, ಅರವತ್ತು ನಾಲ್ಕು ತಂತ್ರಗಳು, ಉಪತಂತ್ರಗಳು ಆಗಮ ಗರ್ಭದಿಂದ ಬಂದವುಗಳು ಮತ್ತು ಇಹಪರ ತತ್ತ್ವಾರ್ಥ ಸರ್ವಸ್ವಗಳಾಗಿವೆ. ಅಲ್ಲದೆ ಎಲ್ಲ ಮತ, ಕುಲ, ಕರ್ಮ, ಧರ್ಮ, ಶಿಲ್ಪ, ವಾಣಿಜ್ಯಾದಿಗಳು ಸಹ ಆಗಮಗಳಿಂದಲೇ ಉಗಮವಾಗಿವೆ. ಇಷ್ಟೇ ಅಲ್ಲ ಈ ಸೃಷ್ಟಿಯೆಲ್ಲವೂ ಶಿವಾಗಮಗಳಿಂದಲೇ ಜ್ಞೇಯವಾಗಿವೆ. ಸಕಲ ಜೀವಕೋಟಿಯೂ ಶಿವಮಯವಾಗಿದೆ. ಶೈವವಲ್ಲದ್ದು ಸೃಷ್ಟಿಯಲ್ಲಿಲ್ಲ.

ಎಲ್ಲ ಆಗಮಗಳಲ್ಲಿ ಕ್ರಿಯಾ, ಚರ್ಯ, ಯೋಗ, ಜ್ಞಾನವೆಂದು ನಾಲ್ಕು ಪಾದಗಳುಂಟು. ಪತಿ, ಕುಂಡಲಿನಿ, ಮಾಯೆ, ಪಶು, ಪಾಶ, ಕಾಂಕ್ಷೆ—ಎಂಬ ಆರು ಪದಾರ್ಥಗಳ ಪ್ರತಿಪಾದನೆಯುಂಟು. ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕೃತ, ಸಾಧನ, ಸಾಧ್ಯ-ಎಂಬುದಾಗಿ ಪದಾರ್ಥಗಳನ್ನು ಇನ್ನೊಂದು ಬಗೆಯಲ್ಲಿ ಹೇಳುವುದುಂಟು. ಇವುಗಳಲ್ಲಿ ಗುರುಮುಖದಿಂದ ಬಂದುದೇ ಜ್ಞಾನ. ಪತ್ಯಾದಿ ಪದಾರ್ಥವೇ ಜ್ಞೇಯ. ಲಿಂಗಾರ್ಚನವೇ ಅನುಷ್ಠೇಯ. ಭಸ್ಮಾಧಾರಣವೇ ಅಧಿಕೃತ. ಶಿವಮಂತ್ರ ರೂಪವೇ ಸಾಧನ. ಶಿವಸಮಾನತ್ವವೇ ಸಾಧ್ಯ. ಇವು ಶಿವಾಗಮ ಪ್ರತಿಪಾದ್ಯ. ಆತ್ಮನಿಗೆ ಪಶುತ್ವಕ್ಷಯ, ಪರಶಿವತ್ವಾಭಿವಕ್ತಿ ನಿತ್ಯಾದಿಕ್ರಿಯಾಧಿಕಾರತ್ವಗಳನ್ನು ಸಂಪಾದಿಸಿಕೊಡುವುದೇ ಕ್ರಿಯಾಪಾದದ ಕೆಲಸ. ಶಿವನ ಕ್ರಿಯಾಶಕ್ತಿ ರೂಪವಾದುದೆ ಕ್ರಿಯಾದೀಕ್ಷೆ! ಈ ದೀಕ್ಷೆಗೆ ಸಂದ ಶೈವರು-ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಪ್ರವರಶೈವ, ಅಂತರಶೈವ—ಎಂದು ಸಪ್ತ ಶೈವರುಂಟು. ಇವರಲ್ಲಿ ಶಿವನು ಅನಾದಿಶೈವನು. ಕೌಶಿಕಾದಿ ಋಷೀಶ್ವರರು ಆದಿಶೈವರು. ಆ ಋಷಿವಂಶಜರಾದ ದ್ವಿಜರು ಮಹಾಶೈವರು. ಶಿವಸಂಸ್ಕಾರಿಗಳಾದ ಕ್ಷತ್ರಿಯರು ಅನುಶೈವರು. ಶಿವದೀಕ್ಷಾಸಂಪನ್ನರಾದ ವೈಶ್ಯರು ಅವಾಂತರಶೈವರು. ಶಿವದೀಕ್ಷಾನ್ವಿತರಾದ ಶುದ್ರಾಂಬಷ್ಠ ಕುಲಾಲಾದಿಗಳೇ ಪ್ರವರಶೈವರು. ದೀಕ್ಷೆಯಿಲ್ಲದ ಉಳಿದ ಪಥಿಕರೆ ಅಂತರಶೈವರು.

ಆ ಮೂಲಶೈವದಲ್ಲಿ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತವೆಂದು ನಾಲ್ಕು ಬಗೆ! ಇವುಗಳಲ್ಲಿ ಶಕ್ತಿ ಪರವಾದುದೆ ವಾಮಶೈವ. ಭೈರವಪರವಾದುದೆ ದಕ್ಷಿಣಶೈವ. ಸಪ್ತಮಾತೃಕಾ ಪರವಾದುದೆ ಮಿಶ್ರಶೈವ, ಪರಶಿವ ಪರವಾದುದೇ ಸಿದ್ಧಾಂತ ಶೈವ. ಈ ಸಿದ್ಧಾಂತ ಶೈವದಲ್ಲಿ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವವೆಂದು ನಾಲ್ಕು ತೆರನುಂಟು. ಇವರಲ್ಲಿ ಸಾಮಾನ್ಯ ಶೈವನಿಗೆ ವಿಭೂತಿಧಾರಣವೇ ಮುಖ್ಯ. ಸ್ವಯಂ

ಭುಲಿಂಗವನ್ನಾಗಲಿ, ದೇವ ದಾನವ ಮಾನವರಿಂದ ಪ್ರತಿಷ್ಠಿತವಾದ ಲಿಂಗವನ್ನಾಗಲಿ ಕಂಡೊಡನೆ ನಮಸ್ಕರಿಸುವುದು, ಪ್ರದಕ್ಷಿಣ ಪೂಜಾದಿಗಳನ್ನು ಯಥಾಶಕ್ತಿ ಮಾಡುವುದು ಶಿವಭಕ್ತರಲ್ಲಿ ವಾತ್ಸಲ್ಯವನ್ನು ತೋರುವುದು, ಶಿವಕಥಾ ಶ್ರವಣಮಾಡುವುದು, ಶಿವ ಸಂಬಂಧವಾದ ವ್ಯಾಪಾರದಲ್ಲಿರುವುದು, ಶಿವಧ್ಯಾನದಲ್ಲಿ ಶಿವಾರ್ಚನೆಯಲ್ಲಿ ಶಿವಕಥಾನು ಕೂಲತೆಯಲ್ಲಿ ನಿರತನಾಗಿರುವುದು ಸಾಮಾನ್ಯ ಶೈವಲಕ್ಷಣ. ಪೀಠಸ್ಥಲ ಶಿವಲಿಂಗವನ್ನು ಪೂಜಿಸುವವನೆ ಮಿಶ್ರಶೈವನು. ಇವನು ವಿಷ್ಣುಬ್ರಹ್ಮೇಂದ್ರಾದಿಗಳನ್ನು ಉಮೆ, ಷಣ್ಮುಖ, ಗಜಮುಖರನ್ನು ಆ ಆ ಮಂತ್ರಗಳಿಂದ ಪೂಜಿಸುವನು. ಇದರಿಂದಾಗಿ ಇವನಿಗೆ ಮಿಶ್ರಶೈವನೆಂಬುದು ಸಾರ್ಥಕವಾದ ಹೆಸರಾಗಿದೆ. ಜತೆಗೆ ಶಿವನು ಸರ್ವಾ ತ್ಮನೆಂದು ಭಾವಿಸಿರುತ್ತಾನೆ. ವಿಷ್ಣ್ವಾದಿ ದೇವತೆಗಳೆಲ್ಲರೂ ಶಿವಭಕ್ತರೆಂದು ತಿಳಿದಿ ರುತ್ತಾನೆ. ಮೂರನೆಯದಾಗಿ ಅನಾದಿಶೈವನಾದ ಸದಾಶಿವನಿಂದ ದೀಕ್ಷಿತರಾದ ಕೌಶಿಕ, ಕಾಶ್ಯಪ, ಭರದ್ವಾಜ, ಅತ್ರಿ, ಗೌತಮ—ಮೊದಲಾದ ಶೈವರ್ಷಿಗೋತ್ರ ಸಂಭವನಾಗಿ ಮಹಾಶೈವನೆನಿಸುವಾತನೆ ಶುದ್ಧಶೈವನು.। ಈ ಶುದ್ಧಶೈವದ ವಿಷಯವಾಗಿ ವಿವರವಾಗಿ ತಿಳಿಯಬೇಕೆನ್ನುವವರು ವಿವೇಕ ಚಿಂತಾಮಣಿಯನ್ನೇ ಓದಬೇಕು ವಿಸ್ತಾರಭಯದಿಂದ ಇಲ್ಲಿ ವಿವರಿಸಿಲ್ಲ.

## ವೀರಶೈವ ಲಕ್ಷಣ

ಮತ್ತೆ ಪರಮೇಶ್ವರ ನಿರ್ಮಿತವಾದ ಈ ಜಗತ್ತಿನಲ್ಲಿ ವೀರಶೈವನು ಚರಮಶರೀರಿ. ಸರ್ವೋತ್ತಮ ವ್ರತಿ. ಅಪ್ರತಿಹತ ಶಿವವ್ರತನು ; ಲೋಕಪಾವನನು ಎಂದು ಸಮಸ್ತ ಸಜ್ಜನ ಸ್ತುತನು. ಸಮಸ್ತ ಶೈವರೊಳಗೆ ವರಿಷ್ಠನು. ಇತರ ಶೈವರಂತೆ ಬಹುಕ್ರಿಯೆ ಯಿಂದ ಅಲ್ಪ ಫಲವನ್ನು ಪಡೆಯದೆ, ಅಲ್ಪ ಕ್ರಿಯೆಯಿಂದ ಅನಂತಫಲವನ್ನು ಪಡೆಯು ವಾತನು. ವೀರಶೈವನು ಶಿವದೀಕ್ಷೆಯನ್ನು ಪಡೆದು, ಸ್ನಾನ ಭೋಜನ ನಿದ್ರೆ ಜಾಗರಣ ಮಲಮೂತ್ರ ವಿಸರ್ಜನ ಕಾಲಗಳಲ್ಲಿ ಅಶುಚಿಭಾವನೆಯನ್ನು ತೊರೆದು ಸದಾಲಿಂಗಾಂಗಾನುಬಂಧಿಯಾಗಿ ಲಿಂಗಭೋಗೋಪಭೋಗಿಯಾಗಿ–ತನ್ನಿಷ್ಟಲಿಂಗದಲ್ಲಿ ಆವಾಹನ ವಿಸರ್ಜನಕ್ರಿಯೆಗಳನ್ನು ಮಾಡದಾತನಾಗಿ–ತ್ರಿಲಿಂಗಾರ್ಚನಾಸಕ್ತನಾಗಿ ಲಿಂಗಲೋಪವಾದಲ್ಲಿ ಪ್ರಾಣತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದಾತನು. ಗುರುನಿಂದೆ, ಶಿವನಿಂದೆ, ಶಿವಕಥಾ ನಿಂದೆ, ಶೈವನಿಂದೆ, ಪ್ರಮಥನಿಂದೆ, ಜಂಗಮನಿಂದೆ, ಶಿವಪಾದೋದಕನಿಂದೆ, ಶಿವನಿರ್ಮಾಲ್ಯನಿಂದೆ, ಶಿವಪ್ರಸಾದ ನಿಂದೆ ಶಿವಲಿಂಗನಿಂದೆ, ಶಿವ ಧರ್ಮನಿಂದೆ, ಭಸ್ಮಧಾರಣನಿಂದೆ, ಶಿವಾಗಮ–ಶಿವಕ್ಷೇತ್ರ-ಶಿವಾಚಾರ ಸಂಪ್ರದಾಯ ನಿಂದೆಗಳನ್ನು ಸೈರಿಸನು. ಕೇಳಿದ ಕಿವಿಗೆ ನುಡಿದ ನಾಲಗೆಗೆ ಪ್ರಾಯಶ್ಚಿತ್ತವನ್ನು ಮಾಡುವಾತನು. ಸರ್ವವು ಶಿವಮಯನೆಂದು ಭಾವಿಸುವಾತನು. ವಿಷ್ಣ್ವಾದಿ ದೇವತೆ ಗಳಲ್ಲಿ ತನ್ನ ನೈಷ್ಠಿಕತೆಯನ್ನು ಕಳೆದುಕೊಳ್ಳನು. ಅಂಗದಲ್ಲಿ ಲಿಂಗಧಾರಣವಿಲ್ಲದವರೊ ಡನೆ ಏಕಾಸನ, ಶಯನ, ಯಾನ, ಸಹವಾಸ, ಸಂಭಾಷಣ, ಸಂಭೋಜನ, ಸಹಾ

ರ್ದತೆಗಳನ್ನು ಬಳಸನು. ಶೈವ ಚಿಹ್ನೆಗಳುಳ್ಳವರಲ್ಲಿ ದಯೆ ಕರುಣೆಯುಳ್ಳವನು. ಶಿವ ಧರ್ಮಾಭಿವೃದ್ಧಿಗೆ ತನ್ನ ತನು ಮಾನಧನಗಳನ್ನು ಸೂರೆಗೊಳ್ಳುವನು. ಅನೃತ, ಅಸ್ಥಿರ ವಾಕ್ಯ, ವಂಚನೆ, ಪಕ್ಷಭೇದ, ಉದಾಶೀನತೆ, ನಿರ್ದಯ - ಎಂಬ ಆರುದೋಷ ಗಳಿಂದ ಆರು ಬಗೆಯ ಭವಿತನಕ್ಕೆ ಒಳಗಾಗನು. ವೀರಶೈವ ಮಾಹೇಶ್ವರರನು ಕಂಡೊಡನೆ ಮನ್ನಿಸಿ ಎದ್ದುನಿಲ್ಲುವುದು, ಎದುರ್ಗೊಳ್ಳುವುದು, ಒಡಗೂಡಿ ನಡೆವುದು, ಸವಿಮಾತುಗಳನಾಡುವುದು, ಗದ್ದುಗೆಯನಿಕ್ಕುವುದು, ಅನ್ನಪಾನಾದಿಗಳನ್ನು ಸಮ ರ್ಪಿಸುವುದು - ಎಂಬಿವನ್ನು ಆಚರಿಸುವನು ; ಇವೇಳು ಮುಕ್ತಿಸೋಪಾನಗಳೆಂದು ಭಾವಿಸುವನು.

ಶಿವಧರ್ಮಕ್ಕೆ ವಿರುದ್ಧವಾದುದೆಲ್ಲವನ್ನು ಸಂಪೂರ್ಣವಾಗಿ ವರ್ಜಿಸುವನು. ಜಾತಿಸೂತಕ, ಜನಿಸೂತಕ, ಪ್ರೇತಸೂತಕ, ಉಚ್ಚಿಷ್ಟಸೂತಕ, ಪ್ರಜಾಸೂತಕ ವೆಂಬ ಪಂಚಸೂತಕಗಳನ್ನು ಬಳಸನು. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾ ಚಾರ, ಭೃತ್ಯಾಚಾರ ಎಂಬ ಪಂಚಾಚಾರ ನಿಷ್ಠನಾಗಿರುವನು. ದಾಸತ್ವ, ವೀರದಾಸತ್ವ, ಭೃತ್ಯತ್ವ, ಸಮಯಾಚಾರತ್ವ, ಸಕಲಾವಸ್ಥಾತ್ವಗಳೆಂಬ ಷಡ್ವಿಧ ಸಜ್ಜನತ್ವಯುಕ್ತನಾಗಿ ರುವನು. ದೇಶಕಾಲ ಕಲ್ಪಿತ ಲೌಕಿಕಾಚಾರಗಳನ್ನು ಮೀರಿ ಸ್ವತಂತ್ರಶೀಲನಾಗಿರು ವನು. ಶಿವಾತ್ಮರಿಗೆ ಭೇಧಭ್ರಾಂತಿಯನ್ನು ತೋರನು. ಜೀವಲಿಂಗವನ್ನು ಶಿವಲಿಂಗದಲ್ಲಿ ಐಕ್ಯಗೊಳಿಸಿ ಮೆರೆವನು. ವೀರಶೈವ ಧರ್ಮಗಳಿಂದ ಕೃತಕೃತ್ಯನಾಗಿರುವನು. ಲಿಂಗಾಂಗಸಂಗಾದ್ವೈತಭಾವನೆಯಿಂದ ಭಯವರ್ಜಿತನಾಗಿರುವನು. ಸರ್ವಶಕ್ತನಾದ ಶಿವನ ಉಪಾಶ್ರಯಬಲದಿಂದ ಅಘಟನಾಘಟನ ಸಮರ್ಥನಾಗಿ ಧೈರ್ಯಸಂಪನ್ನನಾಗಿ ಹರ್ಷವಿಷಾದಗಳಿಗೆ ಒಳಗಾಗದವನಾಗಿರುವನು. ಶಾಂಭವ ವಿದ್ಯೆಯಲ್ಲಿ ರಮಿಸುವ ಶೈವನಾಗಿರುವುದರಿಂದ ಶೈವಸಂಜ್ಞೆಯುಳ್ಳವನಾಗಿ ಜಗತ್ಪೂಜ್ಯನಾಗಿ ವೀರಶೈವ ನೆನಿಸಿರುವನು.

## ವೀರಶೈವ ಭೇದಗಳು

ಆ ವೀರಶೈವವೇ ಕ್ರಿಯಾಭೇದದಿಂದ ಸಾಮಾನ್ಯ ವೀರಶೈವನೆಂದು, ವಿಶೇಷ ವೀರಶೈವನೆಂದು, ನಿರಾಭಾರಿ ವೀರಶೈವನೆಂದು - ಮೂರು ಬಗೆಯಾಗಿರುವುದು. ಶ್ರೀಗುರುವಿನ ಹಸ್ತ—ಶಿಷ್ಯನ ಮಸ್ತಕ ಸಂಯೋಗದಿಂದ ವಿಭೂತಿಪಟ್ಟವನು ಶಿವ ಮಂತ್ರೋಪದೇಶವನು ಪಡೆದು, ಲಿಂಗಸಂಗಿಯಾಗಿ, ಹಸ್ತ ಮಸ್ತಕ ಕಂಠ ವಕ್ಷಸ್ಥಲಾದಿ ಗಳಲ್ಲಿ ಶಿವಲಿಂಗಧಾರಕನಾಗಿ, ಒಂದು ವೇಳೆಯಲ್ಲಾಗಲಿ, ಮೂರು ವೇಳೆಯಲ್ಲಾಗಲಿ ಲಿಂಗಾರ್ಚನಾಸಕ್ತನಾಗಿ ಗುರು - ಲಿಂಗ - ಭಸಿತಗಳಲ್ಲಿ ಭಕ್ತನಾಗಿ ಇರುವವನೇ ಸಾಮಾನ್ಯ ವೀರಶೈವನು. ಇವನು ತ್ರಿವಿಧಲಿಂಗಭಕ್ತನು. ಈತನಿಗೆ ಕೊಡುವ ದೀಕ್ಷಾಸಂಸ್ಕಾರ ಕ್ರಮ ವಿವರವನ್ನು ಲಿಂಗಾರ್ಚನ ವಿಧಾನವನ್ನು ವಿವೇಕ ಚಿಂತಾ ಮಣಿಯಲ್ಲಿಯೇ ಓದಿ ಅರಿಯಬೇಕು.

## ವಿಶೇಷ ವೀರಶೈವ ವಿಷಯ

ವಿಶೇಷ ವೀರಶೈವನು ಷಟ್‌ಸ್ಥಲಸಂಪನ್ನನಾಗಿ ಷಡ್ಲಿಂಗೋಪಾಸಕನಾಗಿರುತ್ತಾನೆ. ಈತನು ತನಗೆ ಶ್ರೀಗುರುವಿನಿಂದ ಉಪದಿಷ್ಟವಾದ ವೇದ ಪುರಾಣಾಗಮ ಸಾರವಾದ ಪುರಾತನ ಮಾರ್ಗವಾದ ಸರ್ವೋತ್ತಮವಾದ ಷಟ್‌ಸ್ಥಳಗಳಲ್ಲಿ ಭಕ್ತಿ, ಕರ್ಮಕ್ಷಯ, ನಿರ್ಮಲಮತಿ, ವಿಚಾರ, ದರ್ಪಸಂಕ್ಷಯ, ಸಮ್ಯಜ್ಞಾನವೆಂಬೀ ಆರು ಫಲಕ್ರಮಗಳುಳ್ಳ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಳಗಳನ್ನು ; ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಆತ್ಮ ಎಂಬ ಷಡಂಗಗಳನ್ನು ; ಚಿತ್ತ, ಮನ, ಬುದ್ಧಿ, ಅಹಂಕಾರ ಜ್ಞಾನ, ಭಾವಗಳೆಂಬ ಆರು ಹಸ್ತಗಳನ್ನು ; ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿ ಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯ—ಎಂಬಾರು ಸಾದಾಖ್ಯಗಳನ್ನು ; ಕ್ರಿಯಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಆದಿಶಕ್ತಿ, ಪರಾಶಕ್ತಿ ಚಿಚ್ಛಕ್ತಿಗಳೆಂಬಾರು ಶಕ್ತಿಗಳನ್ನು ; ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮ ಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬ ಷಡ್ವಿಧಲಿಂಗಗಳನ್ನು ; ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯತೀತೆ, ಶಾಂತ್ಯತೀತೋತ್ತರೆ—ಎಂಬಾರು ಕಲೆಗಳನ್ನು, ಘ್ರಾಣ, ಜಿಂಹೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯ—ಎಂಬಾರು ಮುಖಗಳನ್ನು ; ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮ - ಎಂಬ ಆರು ಪದಾರ್ಥಗಳನ್ನು ; ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ ಆನಂದಭಕ್ತಿ, ಸಮರಸಭಕ್ತಿ - ಎಂಬ ಷಡ್ವಿಧ ಭಕ್ತಿಗಳನ್ನು ಪರಿ ಪರಿ ವಿಧದಲ್ಲಿ ಅರಿದಾಚರಿಸುವುದು.

ಆಚಾರಾದಿ ಆರು ಲಿಂಗಗಳು ಕ್ರಿಯಾಭೇದದಿಂದ ಒಂದೊಂದು ಮೂರು ಮೂರಾಗಿ ಹದಿನೆಂಟು ತೆರನಾಗುವುದನ್ನು ಮತ್ತು ಭಕ್ತನೇ ಆಚಾರಾದಿ ಷಡ್ವಿಧ ಲಿಂಗಗಳಲ್ಲಿ ಆಚಾರ ಭೇದದಿಂದ ಆರಾರಾಗಿ ಮೂವತ್ತಾರು ತೆರನಾಗುವುದನ್ನು ವಿವೇಕ ಚಿಂತಾಮಣಿಯನ್ನೇ ಓದಿ ಅರಿಯಬೇಕು. ಅಂತೆಯೇ ನೂರೊಂದು ಸ್ಥಳದ ಹೆಸುಗೆಯನ್ನೂ ಅಲ್ಲಿಯೇ ಓದಬೇಕು.

## ನಿರಾಭಾರಿ ವೀರಶೈವ ವಿಷಯ

ಬಳಿಕ ಆ ವಿಶೇಷ ವೀರಶೈವರಲ್ಲಿ ಯಾವನು ಮುಂದೆ ಹೇಳಿದಂತಿರುವನೋ ಆವನು ನಿರಾಭಾರಿ ವೀರಶೈವನೆನಿಸುವನು

ಮನೆ ಮೊದಲಾದ ಸರ್ವ ಸಂಸಾರ ಸೌಖ್ಯಪರಿಗ್ರಹಗಳನ್ನು ಬಿಟ್ಟು, ವಿದ್ಯೆಯೇ ಸತಿ, ಸಂತೋಷವೇ ಸುತ, ವಿರಾಗವೇ ಬಂಧು, ಕ್ಷಮೆಯೇ ಪರಿಚಾರಕನು, ಶಾಂತಿಯೇ ಸಖನು, ಭಕ್ತಿಯೇ ಮಾತೆ, ಆಚಾರವೇ ತಂದೆ, ಸತ್ಯವೇ ಸುತೆ, ಶ್ರದ್ಧೆಯೇ ಸೊಸೆ, ಮೈತ್ರ್ಯಾದಿ ಸದ್ಗುಣಗಳೇ ಪಾತ್ರರು, ಜ್ಞಾನವೇ ಗೇಹ, ವಿಚಾರವೇ ಕ್ಷೇತ್ರ, ಅಹಿಂಸೆಯೇ ದಾಸಿ, ಅಸ್ತೇಯವೇ ದಾಸನು, ಧರ್ಮವೇ ವಾಹನ, ದಮವೇ

ಆಚಾರ್ಯನನು, ಮುಕ್ತಿಯೇ ದೇಶವೆಂಬೀ ಪರಮಾರ್ಥವೇ ಕುಟುಂಬವುಳ್ಳಾತನಾಗಿ; ಕಂಥೆ, ದಂಡ, ಕಮಂಡಲು, ಭಿಕ್ಷಾಪಾತ್ರೆ, ಭಸ್ಮಘುಟಿಕೆಯೆಂಬ ಬಾಹ್ಯದ ಪಂಚ ಮುದ್ರೆಗಳನ್ನು ಆಯಾ ಮಂತ್ರಪೂರ್ವಕವಾಗಿ ಧರಿಸಿ, ಅಂತರಂಗದಲ್ಲಿ ಸಮತೆಯೆ ಕಂಥೆ, ಜ್ಞಾನವೇ ದಂಡ, ದಯವೇ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆ, ಕ್ಷಮೆಯೇ ಭಸ್ಮಘುಟಿಕೆಗಳುಳ್ಳಾತನಾಗಿ; ತುರುಬುಜಡೆ ಬೋಳು, ಅಜಿನ, ವಲ್ಕಲ, ದಿಗಂಬರಾದಿ ಸ್ವೇಚ್ಛಾವಿಚಿತ್ರ ಶಿವವೇಷಗಳನ್ನಾದರೂ ಸ್ವೀಕರಿಸಿ; ನಿಯತವಾದ ಭಿಕ್ಷಾ ಹಾರವನ್ನು ಕೊಂಡು, ಭಸ್ಮೋದ್ಧೂಳನ, ತ್ರಿಪುಂಡ್ರಧಾರಣ, ಶಿವಲಿಂಗಾರ್ಚನ, ಶಿವ ಮಂತ್ರ, ಜಪ, ಶಿವಸ್ಥಳಕುಳವಿಚಾರ, ಲಿಂಗಾಂಗ ಸಂಯೋಗಾದಿ ಜ್ಞಾನಕ್ರಿಯಾ ಸಂಪನ್ನನಾಗಿ; ರಸ ರಸಾಯನ, ವಾದ, ವಶ್ಯ, ಜ್ಯೋತಿಷ, ಕ್ರಯ - ವಿಕ್ರಯಾದಿ ಲೌಕಿಕ ವ್ಯವಹಾರಗಳನ್ನು ಬಿಟ್ಟು: ವನಿತಾದಿ ವಿಷಯ ವಿರಕ್ತನಾಗಿ; ಬಳಿಕ ಈ ಭವಾರಣ್ಯಮಧ್ಯದ ಲೋಭವೆಂಬೀ ಪಂಕವನ್ನು ಪೋಗದೆ, ಇಂದ್ರಿಯಗಳೆಂಬ ರಿಪು ಗಳನ್ನು ಲಕ್ಷಿಸದೆ, ಮೋಹವೆಂಬ ಪಿಶಾಚಭಯದೋರದೆ, ಕ್ರೋಧವೆಂಬ ವ್ಯಾಘ್ರಕ್ಕೆ ಸಿಕ್ಕದೆ, ಮಮತೆಯೆಂಬ ಸರ್ಪ ಭೀತಿಯಿಲ್ಲದೆ, ಮನ್ಮಥನೆಂಬ ಚೋರನಿಗೆ ಒಳಗಾ ಗದೆ, ಮದವೆಂಬ ಬಂಧಾಗಾರದಲ್ಲಿ ಕಂಗೆಡದೆ, ತಾಪತ್ರಯವೆಂಬ ಗುಳಿಯಲ್ಲಿ ಬೀಳದೆ, ವಿಷಯಗಳೆಂಬ ಕಂಟಕಗಳ ಮೆಟ್ಟದೆ, ಅಸೂಯೆಯೆಂಬ ವಿಷಲತೆಯೊಳು ತೊಡಕದೆ, ಅಹಂಕಾರವೆಂಬ ಮಡುವಿನೊಳೋಲಾಡದೆ, ಸರ್ವಾವಧಾನಿಯಾಗಿ, ಜಂಗಮ ಸ್ಥಳ ವನಂಗಗೊಂಡು, ಶಿವಜ್ಞಾನಾರೂಢನಾಗಿ ಸಂಚರಿಸುವಾತನೇ ನಿರಾಭಾರಿ ವೀರಶೈವನು.

## ಪ್ರಾಣಿಗಳ ತಾರತಮ್ಯ

ಬಳಿಕ ಈ ಷಟ್‌ಸ್ಥಳ ಜ್ಞಾನಿಯಾದ ವೀರಶೈವನೇ ಸರ್ವೋತ್ಕೃಷ್ಟ. ಕ್ರಿಮಿ ಕೀಟ ಪತಂಗಜಾತಿಗಿಂತ ಪಶುಗಳಧಿಕ. ಪಶುಗಳಿಗಿಂತ ಮನುಷ್ಯರಧಿಕ. ಮನುಷ್ಯ ರಿಗಿಂತ ದ್ವಿಜರಧಿಕ. ದ್ವಿಜರಿಗಿಂತ ವಿಪ್ರರಧಿಕ. ವಿಪ್ರರಿಗಿಂತ ಕೃತಬುದ್ಧಿಗಳಧಿಕ. ಕೃತಬುದ್ಧಿಗಳಿಗಿಂತ ಕರ್ತಾರರಧಿಕ. ಕರ್ತಾರರಿಗಿಂತ ಸಂನ್ಯಾಸಿಗಳಧಿಕ ಸಂನ್ಯಾಸಿ ಗಳಿಗಿಂತ ಜ್ಞಾನಿಗಳಧಿಕ. ಜ್ಞಾನಿಗಳಿಗಿಂತ ಶಿವಾರ್ಚಕರಧಿಕ. ಶಿವಾರ್ಚಕರಿಗಿಂತ ಲಿಂಗಾಂಗ ಸಂಗಿಗಳಧಿಕ ಲಿಂಗಾಂಗ ಸಂಗಿಗಳಿಗಿಂತ ಷಟ್‌ಸ್ಥಳ ಜ್ಞಾನಿಗಳಧಿಕ. ಷಟ್‌ಸ್ಥಳಜ್ಞಾನಿಗಳಿಗಿಂತ ಮೀರಿದ ಲೋಕದಲ್ಲಿ ಯಾರು ಅಧಿಕರಿಲ್ಲ. ಇದರಿಂದಾಗಿ ಮುಮುಕ್ಷುಗಳಿಗಿಂತ ಷಟ್‌ಸ್ಥಳಜ್ಞಾನಿಗಳಾದ ವೀರಶೈವರೇ ವಂದಿಸಲು ಪೂಜಿಸಲು ಯೋಗ್ಯರು.

---

# ವೀರಶೈವದ ಹಿನ್ನೆಲೆ

**'ಸದ್ಧರ್ಮದೀಪಿಕೆ'ಯ**

**ಸಂಪಾದಕರು : ಶ್ರೀ ಲಿಂ|| ಮಲ್ಲಿಕಾರ್ಜುನರು**

ಈಗ ದೇಶದ ಮೇಲೆ ಲಿಂಗವನ್ನು ಧರಿಸಿರುವವರೆಲ್ಲರಿಗೂ ವೀರಶೈವರೆಂದೂ ಕರೆಯುವ ರೂಢಿ ಇದೆ. ಪ್ರಸಿದ್ಧ ವಿಷಯವೂ ಆಗಿದೆ. ಲಿಂಗವನ್ನು ದೇಹದ ಮೇಲೆ ಧರಿಸುವುದು ಯಾವ ಕಾಲದಿಂದ ಪ್ರಚಾರದಲ್ಲಿ ಬಂದಿದೆ, ಹೀಗೆ ಮಾಡುವ ಸಂಪ್ರದಾಯದ ಅನುಯಾಯಿಗಳು ಯಾರು ಇದ್ದರು, ಇವೇ ಮುಂತಾದ ವಿಷಯಗಳನ್ನು ಚಾರಿತ್ರಿಕ ದೃಷ್ಟಿಯಿಂದ ತಿಳಿಯುವುದು ಅವಶ್ಯಕವಾದ ಸಂಗತಿಯಾಗಿದೆ. ಸಿಂಧೂ ದೇಶದಲ್ಲಿನ ಭೂಗರ್ಭಗತವಾಗಿದ್ದ ಹರಪ್ಪ, ಮೊಹೋಂಜೋದಾರೋ ಎಂಬ ಪಟ್ಟಣಗಳನ್ನು ಶೋಧಿಸಿದ ಶ್ರೀ ಮಾರ್ಷಲ್ ಅವರು ಆರ್ಯ ಸಂಸ್ಕೃತಿಗಿಂತ ಮೊದಲು ಭಾರತದಲ್ಲಿ ದ್ರಾವಿಡ ಸಂಸ್ಕೃತಿ ಇದ್ದಿತೆಂದೂ ಅದಕ್ಕಿಂತ ಪೂರ್ವದಲ್ಲಿ ಲಿಂಗಧಾರಿಗಳಾದ ಜನರು ಆ ಪಟ್ಟಣಗಳಲ್ಲಿ ಇದ್ದರೆಂದೂ ಅವರು ಧರಿಸುತ್ತಿದ್ದ ಲಿಂಗಗಳು ದಕ್ಷಿಣ ಭಾರತದಲ್ಲಿ ವೀರಶೈವರು ಧರಿಸುತ್ತಿರುವ ಲಿಂಗಗಳಂತೆ ಇರುವವೆಂದೂ ಶೋಧನೆ ನಡೆಸಿ ಪ್ರಕಟಿಸಿದ್ದಾರೆ. ಹರಪ್ಪ, ಮೋಹೋಂಜೊದಾರೋ ಪಟ್ಟಣಗಳು ಕ್ರಿಸ್ತಶಕಕ್ಕೆ ಪೂರ್ವ ೫೦೦೦ ವರ್ಷಗಳಿಗಿಂತ ಹಿಂದೆಯೇ ಇದ್ದಿರಬಹುದೆಂದೂ ತಮ್ಮ ಶೋಧನೆಯಲ್ಲಿ ಹೇಳಿದ್ದಾರೆ. ಈ ದೆಸೆಯಿಂದ ಸುಮಾರು ಹತ್ತು ಸಾವಿರ ವರ್ಷಗಳ ಹಿಂದಿನಿಂದಲೂ ದೇಹದ ಮೇಲೆ ಲಿಂಗವನ್ನು ಧರಿಸುವ ರೂಢಿಯು ಪ್ರಚಾರದಲ್ಲಿ ಇದ್ದಿತೆಂದು ತಿಳಿಯಲವಕಾಶವಾಗಿದೆ.

ಈ ವಿಚಾರ ಪರಿಶೋಧನೆಮಾಡಲು ಹೋದಾಗ ಮೇರುಪರ್ವತದಲ್ಲಿದ್ದ ದೇವತೆಗಳು ಋಷಿಗಳು ಮೊದಲಾದವರು ಲಿಂಗವನ್ನು ಧರಿಸಿದ್ದರು, ಎಂದು ತಿಳಿಯಲಿಕ್ಕೆ ಬರುತ್ತದೆ. ಹಾಗೆ ದೇವತೆಗಳೂ ಋಷಿಗಳೂ ಲಿಂಗವನ್ನುಧರಿಸಿದ್ದರೆಂಬುದಕ್ಕೆ ಕೆಲವು ಉಪನಿಷತ್ತುಗಳೂ ವ್ಯಾಸರ ಪುರಾಣಗಳೇ ಮೊದಲಾದವುಗಳು ಹೇಳುತ್ತಿರುವುದು

ಬಲವಾದ ಸಾಕ್ಷಿಯಾಗಿದೆ. ಮದರಾಸಿನಲ್ಲಿ “ಅಪ್ರಕಾಶಿತಾ ಉಪನಿಷದಃ” (Un Published upanishads) ಎಂಬ ಒಂದು ಪುಸ್ತಕವು ಪ್ರಕಟವಾಗಿದೆ. ಅದರಲ್ಲಿ ಸಿದ್ಧಾಂತಶಿಖೋಪನಿಷತ್ ಪುಟ ೩೮೦ ರಿಂದ ೩೮೩ರಲ್ಲಿ ದೇವತೆಗಳು ಲಿಂಗಪೂಜೆಮಾಡಿದ ವಿಷಯವು ಹೇಳಲ್ಪಟ್ಟಿದೆ. ಉಪಮನ್ಯುಮುನಿಗೆ ವಿಷ್ಣುವು (ಶ್ರೀಕೃಷ್ಣನು) ಶಿಷ್ಯನಾಗಿ ನೀಲದ ಲಿಂಗವನ್ನು ಪೂಜಿಸುತ್ತಾ ಮೇಘರೂಪದಿಂದೀಶನಂ ಭಜಿಸಿ ಸಾಂಬನಂ ಪಡೆದನು ಎಂಬುದು ಪುರಾಣಪ್ರಸಿದ್ಧವಾದ ವಿಷಯವಾಗಿದೆ. (ವೀರಶೈವಾಮೃತ ಮಹಾಪುರಾಣ ೩ನೆಯ ಕಾಂಡ ೧೧ನೆಯ ಸಂಧಿಯಲ್ಲಿಯೂ ಈ ವಿಷಯವಿದೆ) ಮೇಲೆ ಕಂಡ ಹರಪ್ಪ, ಮೋಹೆಂಜೋದಾರೋ ಪಟ್ಟಗಳಲ್ಲಿ ಸಿಕ್ಕ ಲಿಂಗವೂ ನೀಲ ಲಿಂಗವಾಗಿಯೇ ಇದೆ ಎಂಬುದನ್ನು ಶಾಸನದ ಇಲಾಖೆಯವರು ಪ್ರದರ್ಶಿಸಿದ ಆ ಅವಶೇಷದ ಲಿಂಗವನ್ನು ನೋಡಿದುದರಲ್ಲಿ ವ್ಯಕ್ತವಾಗಿದೆ. ಬಹು ಪ್ರಾಚೀನವಾದವುಗಳೆಂದು ಗೊತ್ತುಮಾಡಲ್ಪಟ್ಟವುಗಳಲ್ಲಿ ಒಂದಾದ ಕಠೋಪನಿಷತ್ತಿನಲ್ಲಿ—

“ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ
ಮನಸಸ್ತು ಪರಾ ಬುದ್ಧಿರ್ ಬುದ್ಧೇರಾತ್ಮಾಮಹಾನ್ ಪರಃ
ಮಹತಃಪರಮವ್ಯಕ್ತಾತ್ ಪುರುಷಃ ಪರಃ
ಪುರುಷಾನ್ ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ”

ಎಂದು ಒಂದು ಕಡೆಯಲ್ಲಿಯೂ,

“ಅವ್ಯಕ್ತಾತ್ತು ಪರಃಪುರುಷಃ ವ್ಯಾಪಕೋ ಲಿಂಗ ಏವಚ”

ಎಂದು ಮತ್ತೊಂದು ಕಡೆಯಲ್ಲಿಯೂ ಹೇಳಲ್ಪಟ್ಟಿದೆ. ಇದರಿಂದ ಮಹತ್ತತ್ವಕ್ಕಿಂತಲೂ ಶ್ರೇಷ್ಠವಾದ ಅವ್ಯಕ್ತತತ್ವಕ್ಕಿಂತಲೂ ಶ್ರೇಷ್ಠವಾದ ಪುರುಷತತ್ವವು ಕೊನೆಯದೆಂದು ಹೇಳಿ ಆ ಪುರುಷತತ್ವವೇ ಲಿಂಗ ಎಂದು ಹೇಳಿರುವುದು, ಪೂಜಿಸಲ್ಪಡುವ ಲಿಂಗವೇ ಎಂಬುದನ್ನು ತೋರಿಸುತ್ತದೆ. ಇದಲ್ಲದೆ—

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ
ಈಶಾನೋ ಭೂತಭವ್ಯಸ್ಯ ಸ ಏವಾದ್ಯಃ ಸ ಉಶ್ವ ಏತದ್ವೈತತ್

ಎಂದು ಅದೇ ಕಠೋಪನಿಷತ್ತಿನಲ್ಲಿರುವುದರಿಂದ ಅಂಗುಷ್ಠ ಮಾತ್ರನಾದ ಪುರುಷನು ಹೊಗೆಯಿಲ್ಲದ ದೀಪದ ರೂಪನಾಗಿ ಹಿಂದಿನ ಮುಂದಿನ ಸೃಷ್ಟಿಗೆ ಈಶಾನನಾಗಿ ಇರುತ್ತಾನೆ. ಅವನೇ ಆದ್ಯನು (ಮೊದಲನೆಯವನು) ಎಂದು ಹೇಳಿರುವುದು ದೇಹದಲ್ಲಿ ಧರಿಸುವ ಲಿಂಗವನ್ನೇ ಈಶಾನನೆಂದು ತೋರಿಸುತ್ತದೆ.

ಈಶಾವಾಸ್ಯೋಪನಿಷತ್ತಿನಲ್ಲಿ ಇರುವ

“ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್”

ಎಂಬ ಮಂತ್ರದಲ್ಲಿ ಜಗತ್ಯಾಂ ಎಂಬ ಪದಕ್ಕೆ "ಜಗತ್ಯಾಂಭುವನಾಧ್ವಾನಂ" ಎಂದರೆ ಲಿಂಗದ ಜಗತಿ ಎಂಬ ಭಾಗವಲ್ಲಿ ಭುವನಾಧ್ವವಿದೆ ಎಂದು ಹೇಳುವ ಉಪ ಬೃಹ್ಮಣವಾಕ್ಯವು ದೊರಕುತ್ತದೆ. ಲಿಂಗದಲ್ಲಿ ವರ್ಣಾಧ್ವ ಪದಾಧ್ವ ಮಂತ್ರಾಧ್ವ ಭುವನಾಧ್ವ ಕಲಾಧ್ವ ತತ್ವಾಧ್ವ ಎಂಬ ಆರು ಅಧ್ವಗಳು ಇರುವುದಾಗಿ ಗ್ರಂಥಗಳ ಪ್ರಮಾಣವೂ ಇದೆ ಆದುದರಿಂದ ಇಲ್ಲಿ ಹೇಳುವ ಈಶನು ಲಿಂಗವೆಂದೇ ತಿಳಿಯಲಿಕ್ಕೆ ಬರುತ್ತದೆ.

"ಈಶ್ವರಃ ಸರ್ವಭೂತಾನಾಂ ಹೃದ್ದೇಶೇऽರ್ಜುನ ತಿಷ್ಠತಿ
ಭ್ರಾಮಯನ್ ಸರ್ವಲೋಕಾನಿ ಯಂತ್ರಾರೂಢಾನಿ ಮಾಯಯಾ
ತಮೇವ ಶರಣಂಗಚ್ಛ ಸರ್ವಭಾವೇನ ಭಾರತ
ತತ್‌ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ॥

ಅರ್ಜುನನೇ ಕೇಳು, ಸರ್ವಪ್ರಾಣಿಗಳ ಹೃದಯದಲ್ಲಿ ಈಶ್ವರನಿದ್ದಾನೆ. ಅವನು ಸರ್ವ ಪ್ರಾಣಿಗಳಿಗೆ ಲೋಕಭ್ರಮೆಯನ್ನು ಹುಟ್ಟಿಸಿ ಪ್ರಪಂಚ ಯಂತ್ರಕ್ಕೆ ಏರಿಸುತ್ತಾನೆ. ಅವನಿಗೆ ಸರ್ವಭಾವದಿಂದ ಶರಣುಹೋಗು. ಅವನ ಪ್ರಸಾದದಿಂದ ಶ್ರೇಷ್ಠವಾದ ಶಾಂತಿಯನ್ನು ಶಾಶ್ವತವಾದ ಸ್ಥಾನವನ್ನು ಪಡೆಯುತ್ತೀ ಎಂಬುದಾಗಿ ಭಗವದ್ಗೀತೆಯ ೧೮ನೆಯ ಅಧ್ಯಾಯಲ್ಲಿ ಹೇಳಲ್ಪಟ್ಟ ಈಶ್ವರನು ಲಿಂಗವೇ ಆಗಿದ್ದಾನೆ. ಏಕೆಂದರೆ ಮಹಾಭಾರತದಲ್ಲಿರುವ ಉತ್ತರಗೀತೆಯಲ್ಲಿ ನಿರಾಕಾರನಾದ ನಿರಂಜನನಾದ ಶಿವನನ್ನು ಹೃದಯಮಧ್ಯದಲ್ಲಿ ನೋಡಬೇಕೇ ಹೊರತು ಹೊರಗಿನ ಮಣ್ಣು ಕಲ್ಲು ಕಟ್ಟಿಗೆ ಮೊದಲಾದವುಗಳಿಂದ ನಿರ್ಮಿಸಲ್ಪಟ್ಟ ಸಾವಯವಮೂರ್ತಿಗಳಲ್ಲಿ ಎಂದೆಂದೂ ಕಾಣಲಿಕ್ಕೆ ಬರುವುದಿಲ್ಲ—ಎಂಬ ಅಭಿಪ್ರಾಯವು ಸ್ಪಷ್ಟವಾಗಿ ಇದೆ. ಅಲ್ಲಿ ಹೇಳಿದ ಹೃದಯದಲ್ಲಿನ ಶಿವನೇ ಕಠೋಪನಿಷತ್ತಿನಲ್ಲಿ ಹೇಳಿದ ಅಂಗುಷ್ಠ ಮಾತ್ರಪುರುಷನೆಂಬೂ ಅವನೇ ಲಿಂಗ ಎಂದೂ ಚನ್ನಾಗಿ ತಿಳಿಯಲಿಕ್ಕೆ ಬರುವಂತೆ ಇದೆ ಏಕೆಂದರೆ ಈ ಲಿಂಗವು ಸರ್ವಭೂತಾಂತರಾತ್ಮವೆಂದೂ ಸರ್ವಮೂಲವೆಂದೂ ಸರ್ವರ ಹೃದಯದಲ್ಲಿರುವವನೆಂದೂ ಕಠೋಪನಿಷತ್ತಿನಲ್ಲಿಯೇ ಹೇಳಿದೆ. (ಇದರಿಂದ ಪೂರ್ವಿಕ ಮಹನೀಯರ ವರ್ತನೆಯು ಲಿಂಗಪೂಜೆಯ ಕಡೆಗೇ ಹೆಚ್ಚು ಗಮನವುಳ್ಳದಾಗಿದ್ದಿತೆಂದು ತಿಳಿಯಲವಕಾಶವಾಗಿದೆ) ಇನ್ನು ವೀರಶೈವ ಗ್ರಂಥಗಳ ಕಡೆಗೆ ತಿರುಗಿ ನೋಡಿದರೆ ಇದೇ ಅಭಿಪ್ರಾಯವೇ ಹೊರಬೀಳುತ್ತದೆ. ವೀರಶೈವಾಮೃತ ಮಹಾಪುರಾಣ ೧ನೆಯ ಕಾಂಡ ೯ನೆಯ ಸಂಧಿಯಲ್ಲಿ "ಪರಶಿವ ಮಹಾಶಕ್ತಿಗಳ ಕೂಟವೇ ಶಿವಲಿಂಗವು. ಆ ಶಿವಶಕ್ತಿಯಿಂಪುಟ್ಟಿದ ಸಕಲ ತತ್ವರೂಪವಾದೀಶಿವಲಿಂಗವು ಮಹದಾದಿ ಸರ್ವ ತತ್ವಗಳಿಗೆ ಆಸ್ಪದವಾದುದು..........ಇದು ಲಿಂಗತತ್ವನಿಶಾರದರ ಮತ—— (ಸದಾನಂದೋಪನಿಷತ್ ಸಹಾ ಹೀಗೆಯೇ ಹೇಳುತ್ತದೆ.) ಎಂಬ ಹೇಳಿಕೆಯು ಸ್ಪಷ್ಟವಾಗಿರುವುದರಿಂದ ಮಹದಾದಿ ಸರ್ವತತ್ವಗಳಿಗೆ ಎಂದರೆ ಕಠೋಪನಿಷತ್ತಿನಲ್ಲಿ ಹೇಳ

ಲ್ಪಟ್ಟ ಮಹತ್ತತ್ತ್ವ ಅವ್ಯಕ್ತತತ್ತ್ವಗಳಿಗೆ ಮೂಲವಾದ ಪುರುಷತತ್ತ್ವವೇ ಲಿಂಗವು, ಅದೇ ಈ ಪುರಾಣದಲ್ಲಿ ಹೇಳಲ್ಪಟ್ಟ ಶಿವಲಿಂಗವು. ಹೀಗೆ ಎಲ್ಲ ಅಭಿಪ್ರಾಯಗಳೂ ಮೂಲ ಸ್ವರೂಪವಾದ ಲಿಂಗವನ್ನೇ ನಿರ್ದೇಶಿಸುತ್ತವೆ ಎಂಬುದು ಸ್ಪಷ್ಟಪಡುತ್ತದೆ.

ಇವೇ ಮುಂತಾದ ಅನೇಕ ಉದಾಹರಣೆಗಳಿಂದ ಬಹು ಪ್ರಾಚೀನಕಾಲದಲ್ಲಿ ಎಂದರೆ ಸುಮಾರು ಹತ್ತುಸಾವಿರ ವರ್ಷಗಳ ಹಿಂದೆ ಲಿಂಗಧಾರಕರು ಇದ್ದರೆಂದು ಚನ್ನಾಗಿ ತಿಳಿಯಲಿಕ್ಕೆ ಬರುತ್ತದೆ. ವೇದವ್ಯಾಸರು ತಮ್ಮ ಒಂದು ಕ್ರಮವಿಡಿದು ಬರೆದ ನಾಲ್ಕುವೇದಗಳ ಸಾರವಾದ ಉಪನಿಷತ್ತುಗಳ ಘೋಷಣೆಯಂತೆ ವರ್ತನಮಾಡುವ ಆರ್ಯಸಂಸ್ಕೃತಿ ಮತ್ತು ಅದಕ್ಕೆ ಮುಂಚಿನ ದ್ರಾವಿಡಸಂಸ್ಕೃತಿ ಈ ಸಂಸ್ಕೃತಿಗಳಿಗಿಂತ ಪೂರ್ವದಲ್ಲಿಯೇ ಲಿಂಗವಂತರ ಸಂಸ್ಕೃತಿ ಅಥವಾ ಶೈವಸಂಸ್ಕೃತಿಯು ಭಾರತದ ಉತ್ತರದ ಮೇರೆಯಾದ ಮೇರುಪರ್ವತ ಮೊದಲಾದವುಗಳಲ್ಲಿ ವ್ಯಾಪಿಸಿದ್ದಿತೆಂಬುದಕ್ಕೆ ಅನುಮಾನವೇನೂ ಇಲ್ಲ. ಏಕೆಂದರೆ ಭಾರತದ ಪ್ರಾಚೀನ ಗ್ರಂಥಗಳಾದ ಉಪನಿಷತ್ತು ಮೊದಲಾದವುಗಳಲ್ಲಿಯೇ ಈ ಲಿಂಗವಂತರ ಸಂಸ್ಕೃತಿಯ ಆಚರಣೆಯ ಗುರುತುಗಳು ಕಂಡುಬರುತ್ತವೆ. ಆದುದರಿಂದ ಶ್ರೀ ಮಾರ್ಷಲ್ ಅವರು ಶೋಧಿಸಿ ಕಂಡುಹಿಡಿದಂತೆ ಲಿಂಗವಂತರ ಸಂಸ್ಕೃತಿಯು ಭಾರತದ ಆದ್ಯ ಸಂಸ್ಕೃತಿಯೆಂದು ನಿರ್ಣಯಿಸುವಲ್ಲಿ ಆಕ್ಷೇಪಣೆ ಏನೂ ಬರಲಾರದು.

ಆದರೆ ಬಹು ಪ್ರಾಚೀನದ ಲಿಂಗವಂತರು ಈಗಿನ ದಕ್ಷಿಣ ಭಾರತದಲ್ಲಿ ವೀರಶೈವರಂತೆ ಒಂದೇ ವಿಧವಾದ ಪಂಚಸೂತ್ರದ ಲಿಂಗವನ್ನು ಧರಿಸುತ್ತಿದ್ದರೆಂದು ತಿಳಿಯಲಾಗುವುದಿಲ್ಲ. ಮೇಲೆ ಕಂಡ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ ಈ ಕೆಳಗೆ ಕಂಡಂತೆ ಇದೆ:—

(ಮೇಲೆ ಕಂಡ ಅಪ್ರಕಾಶಿತಾ ಉಪನಿಷದಃ ಎಂಬ ಪುಸ್ತಕ ಪುಟ ೩೮೦-೩೮೩ ರಲ್ಲಿಯೇ ಈ ಉಪನಿಷತ್ತು ಇದೆ.)

ಪುರಾ ದೇವಾಃ ಪಶು ಪಾಶಾದ್ ವಿಮುಕ್ತಾಃ
ಶಿವಂ ಪ್ರಾಜ್ಞೈವ ಹರಿಪದ್ಮಾದಯೋಽಪಿ
ಐಂದ್ರನೀಲಂ ಪೂಜಿತಂ ವಿಷ್ಣುನಾ ಹಿ ಲಿಂಗಂ
ವೈಢೂರ್ಯಂ ವಿಧಿನಾ ಪದ್ಮರಾಗಂ
ಶಕ್ರೇನ ಹೈಮಂ ಯಕ್ಷರಾಜೇನ
ವಿಶ್ವೇದೇವೈರ್ ರೌಪ್ಯಂ ವಸುಭಿಃ ಕಾಂಸ್ಯಕಂ ಚ
ಯಮದ್ವಾರಕೂಟಂ ವಾಯುನಾ ಪಾರ್ಥಿವಂ ತದಶ್ವಿಭ್ಯಾಮಾಸೀತ್
ಸ್ಫಾಟಿಕಂ ಪಾಶಿನಾಂ
ಆದಿತ್ಯೈಸ್ತಾಮ್ರಂ ಮೌಕ್ತಿಕಂ ದೇವಪತ್ನೀಭಿಃ ಸ್ತ್ರೀರಸಂತಾದ್ಯೈಃ
ಫಣಿಭಿಃ ಪ್ರವಾಳಂ ದೈತ್ಯೈರ್ವಜ್ರಂ ರಾಕ್ಷಸೈಸ್ತ್ರೈಲೋಹಂ

ಗಣೈಃ ಶೈಲಂ ಸೈಕತಂಮಾತೃಕಾಭಿಃ
ದಾರೂದ್ಭವಂ ನಿರುತಿನಾ ಯಮೇನ ಸುಪೂಜ್ಯಮಾಸೀನ್
ಮಾರಕತಂ ಚ ರುದ್ರೈಃ
ಸುಭಸ್ಮರೂಪಂ ಸೂಕ್ಷ್ಮರೂಪಂಚ ಲಕ್ಷ್ಮ್ಯಶ್ಶೈಲಾನ್ಯೇವ
ಮುನಯೋ ಭೇಜಿರೇ ತಥಾ
ಸರಸ್ವತಿ ರತ್ನರೂಪಂಚದುರ್ಗಾರ್ಕೈಮಂಲಿಂಗಂ ಪೂಜಯಾಮಾಸಭಕ್ತ್ಯಾ
ಜಲೈರುಷ್ಣೈಃ ಶೀತಲೈರ್ವಾ ಕದಾಚಿದಜ್ಞಾನಾದ್ವಾ ಪತಿತೈಃಪತ್ರಪುಷ್ಪೈಃ
ತುಷ್ಟೋಯಚ್ಛೇದ್ವಾಂಛಿತಾರ್ಥಂ ಮಹೇಶಃ ಕಿಂ ದುರ್ಲಭಂ
ಶಿವಭಕ್ತಸ್ಯಲೋಕೇ
ಅತ್ಯಲ್ಪಮಪಿ ನೈವೇದ್ಯಂ ಫಲಂ ವಾ ಜಲಮೇವ ವಾ
ತದೇವ ಪ್ರಾಶಯಿತ್ವಾಥ ಬ್ರಹ್ಮಭೂಯಾಯ ಕಲ್ಪತೇ.

ವಿಷ್ಣುವಿನಿಂದ ಇಂದ್ರನೀಲಲಿಂಗ, ಬ್ರಹ್ಮನಿಂದ ವೈಢೂರ್ಯಲಿಂಗ, ಇಂದ್ರನಿಂದ ಪದ್ಮರಾಗಲಿಂಗ, ಗಣಂಗಳಿಂದ ಶೈಲಲಿಂಗ, ಮಾತೃಕೆಯರಿಂದ ಮರಳಿನ ಲಿಂಗ, ವಾಯುವಿನಿಂದ ದಾರುಕೂಟಲಿಂಗ, ನಿರುತಿಯಿಂದ ಕಟ್ಟಿಗೆಯಲಿಂಗ. ಹೀಗೆ ಅನೇಕ ವಿಧದ ಲಿಂಗಗಳು ಪೂಜಿಸಲ್ಪಡುತ್ತಲಿದವೆಂದು ಮೇಲಿನ ಶ್ಲೋಕಗಳಿಂದ ತಿಳಿಯ ಬರುತ್ತದೆ ಲಕ್ಷ್ಮೀಸರಸ್ವತಿ ಮೊದಲಾದ ಹೆಂಗಸರುಗಳಿಂದ ಶಿಲಾದಿ ಬೇರೆ ಬೇರೆ ಲಿಂಗಗಳು ಪೂಜಿಸಲ್ಪಡುತ್ತಿದ್ದವು. ಲಿಂಗಪೂಜಕನಾದ ಶಿವಭಕ್ತನಿಗೆ ದುರ್ಲಭ ವಾದುದು ಯಾವುದೂ ಇಲ್ಲವೆಂದು ಹೇಳಲ್ಪಟ್ಟಿದೆ. "ಶಿವಭಕ್ತ" ಎಂಬುವರೇ ಎಲ್ಲರಿ ಗಿಂತ ಶ್ರೇಷ್ಠರೆಂದು ವ್ಯಾಸಋಷಿಯು ಪುರಾಣ ಸೂತಸಂಹಿತೆ ಮೊದಲಾದವುಗಳಲ್ಲಿ ಉಕ್ತವಾಗಿದೆ.

ಇದೇ ಪುಸ್ತಕದಲ್ಲಿನ "ಲಿಂಗೋಪನಿಷತ್" ಎಂಬುದರಲ್ಲಿ (ಪುಟ ೩೮೯-೩೧೧)
"ದೇಹೇ ಧಾರಣಂ ಯಸ್ಯ ನ ವಿದ್ಯತೆ ತದ್ದೇಹಂ ನ ಪಶ್ಯೇತ್"

(ನಪಶ್ಯೇತ್ ಎಂಬುದರ ಬದಲಾಗಿ ನ ದರ್ಶಯೇತ್ ಎಂದು ಪಾಠಾಂತರವು ಬೇರೆ ಓಲೆ ಪ್ರತಿಯಲ್ಲಿದೆ, ಲಿಂಗಧಾರಣವಿಲ್ಲದ ದೇಹವನ್ನು ನೋಡಬಾರದು ಎಂಬು ದಾಗಿ ಇಲ್ಲಿ ಬೋಧೆ ಇದೆ, ಈ ಆಚರಣೆಯೇ ಮುಖ್ಯವೆಂದೂ ಆ ಬಹು ಪ್ರಾಚೀನ ಕಾಲದಲ್ಲಿಯೂ ಲಿಂಗಧಾರಿಗಳು ಬಹಳವಾಗಿ ತುಂಬಿಕೊಂಡಿದ್ದರೆಂದೂ ತಿಳಿಯಲವ ಕಾಶವಾಗಿದೆ. ಒಟ್ಟಿನಲ್ಲಿ ಹರಪ್ಪ, ಮೊಹೆಂಜೋದಾರೋ ಪಟ್ಟಣಗಳಲ್ಲಿ ಶಿವಭಕ್ತರೇ ಬಹಳ ಹೆಚ್ಚಾಗಿದ್ದರೆಂದೂ ಲಿಂಗವಂತರ ಸಂಸ್ಕೃತಿಯೇ ಭಾರತದಲ್ಲಿನ ಆದ್ಯ ಸಂಸ್ಕೃತಿ ಎಂದೂ ನಿರ್ಣಯಿಸಲು ಆತಂಕವು ಬರಲಾರದು.

"ದೇವಸಹಿತ ಭಕ್ತನು ಮನೆಗೆ ಬಂದರೆ ನಿಮ್ಮ ಕುಲವಾವುದೆಂದು ಬೆಸಗೊಂಡಡೆ ನಿಮ್ಮಾಣೆ" ಎಂದು ಬಸವೇಶ್ವರನು ಹೇಳಿದ್ದಾನೆ. ಇಲ್ಲಿ ದೇವ ಎಂಬ ಪದಕ್ಕೆ ಲಿಂಗ

ಎಂದು ಸುಲಭವಾಗಿ ಅರ್ಥಮಾಡಬಹುದು. "ದ್ಯಾವಾ ಪೃಥಿವೀ ಜನಯನ್ ದೇವ ಏಕಃ"

ಸ್ವರ್ಗ ಮತ್ತು ಭೂಮಿ ಇವುಗಳನ್ನು ಹುಟ್ಟಿಸುವ ದೇವನು ಒಬ್ಬನೆ ಎಂಬ ವಚನವನ್ನೂ ಬಸವೇಶ್ವರನೇ ಹೇಳಿದ್ದಾನೆ. ಆದುದರಿಂದ "ದೇವ ಏಕಃ" ಎಂಬಲ್ಲಿ ದೇವ ಎಂದರೆ ಲಿಂಗ ಎಂದರ್ಥವಾಗುತ್ತದೆ. "ದೇವಧಾರಣಂ" ಎಂಬ ಪದವನ್ನು ಉಪನಿಷತ್ತುಗಳಲ್ಲಿಯೂ ಭಾರತ ಗ್ರಂಥಗಳಲ್ಲಿಯೂ ಅಲ್ಲಲ್ಲಿ ನೋಡಬಹುದಾಗಿದೆ. ಅಲ್ಲೆಲ್ಲಾ ಲಿಂಗಧಾರಣವೆಂದೇ ಅರ್ಥಮಾಡಬೇಕು. ಹೀಗೆ ಲಿಂಗಧಾರಣದ ಅಭಿಪ್ರಾಯವು ಚೆನ್ನಾಗಿ ದೊರಕುತ್ತದೆ.

ಇನ್ನು ವ್ಯಾಸಋಷಿಯ ಪುರಾಣಗಳ ಕಡೆಗೆ ತಿರುಗಿ ನೋಡೋಣ. ಲಿಂಗಪುರಾಣದಲ್ಲಿ ದೇವತೆಗಳು ಶಿವನನ್ನು ಕುರಿತು ಬೇಡಿಕೊಳ್ಳುವ ವಿಷಯವು ಹೀಗೆ ಹೇಳಲ್ಪಟ್ಟಿದೆ :—

ವಯಂ ಬ್ರಹ್ಮಾದಯಃ ಸರ್ವೇ ಪಶವಃ ಪರಿಕೀರ್ತಿತಾಃ
ತ್ವಮಸ್ಮಾಕಂ ಪತಿರ್ಯಸ್ಮಾತ್ ತಸ್ಮಾತ್ ಪಶುಪತಿಶ್ಶಿವಃ
ಅತೋ ಬ್ರಹ್ಮಾದಿ ದೇವಾನಾಮುಪಾಸ್ಯಃ ಶಿವ ಏವ ಹಿ
ತದಾದಿ ಭೂತಿರುದ್ರಾಕ್ಷ ಲಿಂಗಧಾರಕದೇಹಿನಃ
ಶುದ್ಧ ಸ್ಫಟಿಕಮಾಲಾಭಿರ್ಬದ್ಧ ಹಸ್ತಾಂಬುಜಾನಪಿ
ಬ್ರಹ್ಮ ವಿಷ್ಣ್ವಾದಿ ದೇವಾಂಶ್ಚ ದೃಷ್ಟ್ವಾ ಸಾಂಬಸ್ತ್ರಿಲೋಚನಃ

"ಬ್ರಹ್ಮಾದಿಗಳಾದ ನಾವೆಲ್ಲರೂ ಪಶುಗಳು. ಶಿವನೇ ನೀನು ನಮಗೆ ಪತಿ, ಎಂದರೆ ಪಶುಪತಿ. ಆದ್ದರಿಂದ ನೀನು ನಮ್ಮಗಳ ಉಪಾಸ್ಯನು" ಎಂದು ಹೇಳಿದ ಭಸ್ಮ ರುದ್ರಾಕ್ಷ ಲಿಂಗಧಾರಣದೇಹಿಗಳಾದ, ಶುದ್ಧವಾದ ಸ್ಫಟಿಕಮಣಿಮಾಲೆಯನ್ನು ಧರಿಸಿದ ಹಸ್ತಾಂಜಲಿಬದ್ಧರಾಗಿ ಕೈಮುಗಿದ ದೇವತೆಗಳನ್ನು ಮೂರು ಕಣ್ಣುಳ್ಳವನಾದ ಸಾಂಬನು ನೋಡಿದನು. ಎಂಬೀ ಅಭಿಪ್ರಾಯದ ಶ್ಲೋಕಗಳಿಂದ ಕೈಲಾಸದಲ್ಲಿನ ಅಂಬಿಕಾಪತಿಯಾದ ಮೂರು ಕಣ್ಣುಳ್ಳ ಶಿವನು ಪಶುಪತಿಯೆಂದೂ ಆ ಪಶುಪತಿಯ ಉಪಾಸಕರಾದ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಭಸ್ಮರುದ್ರಾಕ್ಷ ಲಿಂಗಧಾರಣವುಳ್ಳ ದೇಹವುಳ್ಳವರಾಗಿದ್ದರೆಂದೂ ಪಾಶುಪತರೆಂದೂ ಸ್ಪಷ್ಟವಾಗುತ್ತದೆ.

ಕಾಶೀಖಂಡ"ವಲ್ಲಿ ಪಾಶುಪತರ ಆಚಾರವು ಹೀಗೆ ಹೇಳಲ್ಪಟ್ಟಿದೆ :

"ಏತೇ ಪಾಶುಪತಾಃ ಸಿದ್ಧಾ ಆಬಾಲ ಬ್ರಹ್ಮಚಾರಿಣಃ
ಜಿತೇಂದ್ರಿಯಾಸ್ತಪೋನಿಷ್ಠಾಃ ಪಂಚಾರ್ಥಜ್ಞಾನ ನಿರ್ಮಲಾಃ
ಭಸ್ಮಕೂಟಶಯಾ ದಾಂತಾ ಸುಶೀಲಾ ಊರ್ಧ್ವರೇತಸಃ
ಲಿಂಗಾರ್ಚನರತಾನಿತ್ಯ ಮನನ್ಯೇಂದ್ರಿಯ ಮಾನಸಾಃ
ಸದೈವ ವಾರುಣಾಗ್ನೇಯ ಸ್ನಾನದ್ವಯ ಸುನಿರ್ಮಲಾಃ

ಕಂದಮೂಲ ಫಲಾಹಾರಾ ಪರತತ್ವಾರ್ಪಿತೇಕ್ಷಣಾಃ
ಸತ್ಯವಂತೋ ಜಿತಕ್ರೋಧಾ ನಿರ್ಮೋಹಾ ನಿಷ್ಪರಿಗ್ರಹಾಃ
ನಿರೀಹಾ ನಿಷ್ಪ್ರಪಂಚಾಶ್ಚ ನಿರಾತಂಕಾ ನಿರಾಮಯಾಃ
ನಿರ್ಭಗಾ ನಿರುಪಾಯಾಶ್ಚ ನಿಸ್ಸಂಗಾ ನಿರ್ಮಲಾಶಯಾಃ
ಸದೈವ ಮೇ ಮಹಾಪ್ರೀತಾ ಮತ್ಪುತ್ರಾ ಮತ್ಸ್ವರೂಪಿಣಃ
ಏತೇಪೂಜ್ಯಾ ನಮಸ್ಯಾಶ್ಚ ಮದ್ಬುದ್ಧ್ಯಾ ಮತ್ಪರಾಯಣೈಃ
ಅರ್ಚಿತೇಷ್ವೇಷ್ವಹಂ ಪ್ರೀತೋ ಭವಿಶ್ಯಾಮಿ ನ ಸಂಶಯ:
ಅಸ್ಮಿನ್ ವೈಶ್ವೇಶ್ವರೇಕ್ಷೇತ್ರೇ ಸಂಭೋಜ್ಯಾಃ ಶಿವಯೋಗಿನಃ
ಕೋಟಿಭೋಜ್ಯಫಲಂ ಸಮ್ಯಗೇಕೈಕ ಪರಿಶಂಖ್ಯಯಾ"

(ಭಾಗ ೨-ಅಧ್ಯಾಯ ೯೯-ಪುಟ ೧೮೨)

ಇವುಗಳ ಅಭಿಪ್ರಾಯವು ಹೀಗೆ ಇದೆ:–ಈ ಪಾಶುಪತರು ಸಿದ್ಧರೆನಿಸಿಕೊಂಡಿದ್ದಾರೆ. ಬಾಲ್ಯದ ಮೊದಲುಗೊಂಡು ಕೊನೆಯವರೆವಿಗೂ ಬ್ರಹ್ಮಚಾರಿಗಳಾಗಿದ್ದಾರೆ. ಜಿತೇಂದ್ರಿಯರು ತಪೋನಿಷ್ಠರು ಧರ್ಮ ಅರ್ಥ ಕಾಮ ಮೋಕ್ಷ ಭಕ್ತಿ ಎಂಬ ಪಂಚಾರ್ಥಗಳ ಜ್ಞಾನದಿಂದ ನಿರ್ಮಲರಾದವರು ಭಸ್ಮದ ರಾಶಿಯಮೇಲೆ ಮಲಗುವವರು, ಬಹಿರಿಂದ್ರಿಯ ನಿಗ್ರಹವುಳ್ಳವರು, ಒಳ್ಳೆಯ ಶೀಲವುಳ್ಳವರು, ಊರ್ಧ್ವ ರೇತಸ್ಕರಾಗಿ ಉನ್ಮನೀಮುಖದವರು, ದಿನಾಲೂ ಲಿಂಗಪೂಜೆಯನ್ನು ಮಾಡುವವರು, ಇತರರನ್ನು ಪೂಜಿಸದಿರುವ ಇಂದ್ರಿಯ ಮನಸ್ಸುಗಳುಳ್ಳವರು, ಯಾವಾಗಲೂ ಜಲ ಸ್ನಾನ ಭಸ್ಮಸ್ನಾನಗಳನ್ನು ಮಾಡುವವರು, ಗಡ್ಡೆ ಗೆಣಸುಹಣ್ಣುಗಳನ್ನು ತಿನ್ನುವವರು, ಪರತತ್ವಕ್ಕೆ ಅರ್ಪಿಸಲ್ಪಟ್ಟ ದೃಷ್ಟಿಯುಳ್ಳವರು, ಸತ್ಯವಂತರು, ಕ್ರೋಧವಿಲ್ಲದವರು, ಮೋಹವಿಲ್ಲದವರು, ಪರಿವಾರವಿಲ್ಲದವರು, ಈ ಲೋಕದ ಫಲಾಪೇಕ್ಷೆ ಇಲ್ಲದವರು, ಪ್ರಪಂಚಗಳಿಲ್ಲದವರು, ಆತಂಕವಿಲ್ಲದವರು, ಗುಣದೋಷವರ್ಜಿತರು, ನಿರೈಶ್ವರ್ಯರು ಉಪಾಯರಹಿತರು, ಲೌಕಿಕಸಂಗವಿಲ್ಲದವರು, ನಿರ್ಮಲವಾದ ಇಶೆಯುಳ್ಳವರು, ಯಾವಾಗಲೂ ನನ್ನಲ್ಲಿ ಮಹಾ ಪ್ರೀತಿ ಉಳ್ಳವರು, ನನ್ನಮಕ್ಕಳು, ನನ್ನಸ್ವರೂಪವುಳ್ಳವರು, ಇವರೇ "ಶಿವಸ್ವರೂಪರು" ಎಂಬ ಬುದ್ಧಿಯುಳ್ಳ ಶಿವಪರಾಯಣರಾದ ವರಿಗೆ ಪೂಜ್ಯರು. ನಮಸ್ಕಾರಕ್ಕೆ ಯೋಗ್ಯರು (ಆರಾಧ್ಯರು?) ಆಗಿದ್ದಾರೆ. ಇವರನ್ನು ಪೂಜೆಮಾಡಿದರೆ ನನಗೆ ಪ್ರೀತಿ. ಇವರು ಈ ಕಾಶಿಯಲ್ಲಿ ತೃಪ್ತಿಪಡಿಸಲ್ಪಡತಕ್ಕ ಶಿವಯೋಗಿಗಳು. ಇವರಲ್ಲಿ ಒಬ್ಬರಿಗೆ ತೃಪ್ತಿಪಡಿಸಿದರೆ ಕೋಟಿ ಜನರಿಗೆ ತೃಪ್ತಿಪಡಿಸಿದಂತೆ. ಹೀಗೆ ಶಿವನು ಪಾರ್ವತಿಗೆ ಹೇಳಿದ್ದಾನೆ.

ಈ ಹೇಳಿಕೆಯಿಂದ ಪಾಶುಪತರು ಸಿದ್ಧರೆನಿಸಿಕೊಂಡು ಆಬಾಲ ಬ್ರಹ್ಮಚಾರಿಗಳಾಗಿ ತಪೋನಿಷ್ಠರಾಗಿ ನಿತ್ಯವೂ ಲಿಂಗಾರ್ಚನೆ ಮಾಡತಕ್ಕವರಾಗಿ ಗೆಡ್ಡೆ ಗೆಣಸುಗಳನ್ನು ತಿನ್ನತಕ್ಕವರಾಗಿ ಶಿವಪರಾಯಣರಿಂದ ಪೂಜಿಸಲ್ಪಡತಕ್ಕವರಾಗಿ(ಆರಾಧ್ಯರಾಗಿ

ಕಾಶಿಯಲ್ಲಿ ಶಿವಯೋಗಿ ಎನಿಸಿಕೊಂಡು ತೃಪ್ತಿಪಡಿಸಲ್ಪಡುವುದಕ್ಕೆ ಯೋಗ್ಯರಾಗಿ ಇದ್ದರೆಂಬುವ ಅಭಿಪ್ರಾಯವು ಹೊರಬೀಳುತ್ತದೆ. ಮೇಲೆ ಕಂಡ ಸಿದ್ಧಾಂತಶಿಖೋಪ ನಿಷತ್ತಿನಲ್ಲಿ ವಿಷ್ಣುವೇ ಮೊದಲಾದ ಲಿಂಗಧಾರಿಗಳು ಪಶುಪಾಶದಿಂದ ಬಿಡಲ್ಪಟ್ಟವ ರೆಂದು ಹೇಳಲ್ಪಟ್ಟದ್ದರೆ ಈ ಪುರಾಣದಲ್ಲಿ ಹೇಳಲ್ಪಟ್ಟವರು ನಾವು ಪಶುಗಳು ನೀನು ಪಶುಪತಿ ಎಂದು ಕೈಲಾಸದ ಶಿವನನ್ನು ಆರಾಧಿಸುವ ಲಿಂಗಪೂಜಕರಾದ ಪಶುಪಾತ ಸಿದ್ಧರಾಗಿದ್ದಾರೆ. ಇವೆಲ್ಲವುಗಳನ್ನು ನೋಡಿದರೆ ಬಹುಪ್ರಾಚೀನಕಾಲದಲ್ಲಿ ದೇವತೆಗಳೇ ಮೊದಲಾದವರೆಲ್ಲರೂ ಪಾಶುಪತರಾಗಿ ಲಿಂಗಪೂಜೆಯನ್ನು ಮಾಡುತ್ತಿದ್ದರೆಂಬುದು ನಿರ್ವಿವಾದವಾಗಿ ಹೊರಬೀಳುವ ಅಂಶವಾಗಿದೆ.

ಆದರೆ ಈ ದೇವತೆಗಳೇ ಮೊದಲಾದವರು ಪಾಶುಪತರಾಗಿ ಆಚರಿಸುತ್ತಿದ್ದುದು ದಕ್ಷಿಣಭಾರತದ ವೀರಶೈವರು ಆಚರಿಸುತ್ತಿರುವ ಷಟ್‌ಸ್ಥಲಕ್ರಮದ ಲಿಂಗಾಂಗಸಾಮ ರಸ್ಯದ ಲಿಂಗಪೂಜೆಗೆ ಸರಿಯಾದುದೆಂದು ಹೇಳುವುದಕ್ಕೆ (ಮೇಲೆ ಹೇಳಿದಂತೆ) ಇಲ್ಲಿನ ಪ್ರಮಾಣಗಳಿಂದ ಕಂಡುಬರುದಿಲ್ಲ. ಇದಲ್ಲದೆ—

ಏಕದಾ ಸಮುನಿಃ ಶ್ರೀಮಾನ್ ಪರ್ಯಟನ್ ಪೃಥಿವೀತಲೇ
ಸಂಪ್ರಾಪ್ತೋ ನೈಮಿಷಾರಣ್ಯಂ ಯತ್ರಸಂತಿಮುನೀಶ್ವರಾಃ
ಅಷ್ಟಾಶೀತಿ ಸಹಸ್ರಾಣಿ ಶೌನಕಾದ್ಯಾಸ್ತಪೋಧನಾಃ
ತ್ರಿಪುಂಡ್ರಿತ ಮಹಾಭಾಲಾ ಲಸದ್ರುದ್ರಾಕ್ಷಮಾಲಿನಃ
ವಿಭೂತಿಧಾರಿಣೋಭಕ್ತ್ಯಾ ರುದ್ರಸೂಕ್ತ ಜಸಪ್ರಿಯಾನ್
ಲಿಂಗಾರಾಧನ ಸಂಸಕ್ತಾನ್ ಶಿವನಾಮ ಕೃತಾದರಾನ್
ವಿಲೋಕ್ಯ ಸ ಮುನಿರ್ವ್ಯಾಸಸ್ತಾನ್ ಸರ್ವಾನ್ ಗಿರಿಶಾತ್ಮನಃ

(ಕಾಶೀಖಂಡ ಭಾಗ ೨—ಅಧ್ಯಾಯ ೯೫-ಪುಟ ೧೬೧)

ಈ ಶ್ಲೋಕಗಳ ಅಭಿಪ್ರಾಯವು ಈ ರೀತಿ ಇದೆ:-“ಒಂದಾನೊಂದು ಕಾಲದಲ್ಲಿ ವ್ಯಾಸಮುನಿಯು ದೇಶಸಂಚಾರಕ್ಕೆ ಹೋದನು. ನೈಮಿಷಾರಣ್ಯಕ್ಕೆ ಬಂದಾಗ ಅಲ್ಲಿ ಶೌನಕಾದಿ ಎಂಬತ್ತೆಂಟು ಸಾವಿರ ಮುನೀಶ್ವರರು ಇದ್ದರು. ಅವರು ತ್ರಿಪುಂಡ್ರ ಭಸ್ಮ ಧಾರಣಮಾಡಿದ ಹಣೆಯುಳ್ಳವರಾಗಿಯೂ ಭಸ್ಮ ರುದ್ರಾಕ್ಷಧಾರಣ ಮಾಡಿದವ ರಾಗಿಯೂ ಲಿಂಗವನ್ನು ಪೂಜಿಸುವವರಾಗಿಯೂ ಶಿವನಾಮೋಚ್ಚಾರಣೆಯಲ್ಲಿ ಆದರ ವುಳ್ಳವರಾಗಿಯೂ ಇರುತ್ತಿದ್ದರು. ಆ ಶಿವಾತ್ಮರನ್ನು ಕಂಡನು” ಹೀಗಿರುವುದರಿಂದ ಶೌನಕಾದಿ ಋಷಿಗಳು ಲಿಂಗಧಾರಿಗಳಾಗಿ ಪಾಶುಪತರಾಗಿದ್ದರು, ಎಂದು ಹೇಳಲು ಅನುಮಾನವೇನೂ ಇಲ್ಲ, ಮತ್ತು

ಪ್ರಬುದ್ಧೋಪಸ್ಪೃಶ್ಯಹೃದಯಲಿಂಗ ತ್ರಿತಯ ಹೇತುಭಿಃ
.... .......................ಕಲಶೈಃ.......................
ಅಷ್ಟಮ್ಯಾಂಚ ಚತುರ್ದಶ್ಯಾಮುಪವಾಸೀ ನರೋತ್ತಮಃ

ಪ್ರಾತಃ ಸ್ನಾತ್ವಾಥ ಪೀತಾಂಭಸ್ತ್ವಂತರ್ಲಿಂಗ ಮಯೋಭವೇತ್
ಏಕಾದಶ್ಯಾಮುಪೋಷ್ಯಾತ್ರ ಪ್ರಾಶ್ನಾತಿ ಚಲುಕತ್ರಯಂ
ಹೃದಯೇತಸ್ಯ ಜಾಯಂತೇ ತ್ರೀಣಿಲಿಂಗಾನ್ಯಸಂಶಯಂ॥
(ಕಾಶೀಖಂಡ ಭಾ. ೨–ಅ. ೩೩–ಪುಟ ೨೦೮-೨೦೯)

ಇಲ್ಲಿ ಮೊದಲಿನ ಎರಡು ಸಾಲುಗಳು ಪೂರ್ತಿಯಾಗಿ ಇಲ್ಲದ್ದರಿಂದ ಸರಿಯಾದ ಅಭಿಪ್ರಾಯವನ್ನು ಗ್ರಹಿಸಲಿಕ್ಕೆ ಬರುವಂತಿಲ್ಲ. ಮನುಷ್ಯರಲ್ಲಿ ಉತ್ತಮರಾದವರು ಅಷ್ಟಮಿಯಲ್ಲಿ ಚತುರ್ದಶಿಯಲ್ಲಿ ಒಂದು ಪಕ್ಷದಲ್ಲಿ ಈ ಎರಡು ದಿನ ಉಪವಾಸಿಗಳಾಗಿರಬೇಕು. ಬೆಳಗಿನ ಹೊತ್ತು ಸ್ನಾನಮಾಡಿ ನೀರು ಕುಡಿದು ಹೃದಯದಲ್ಲಿ ಲಿಂಗವಿದೆ ಎಂದು ಆ ಲಿಂಗಮಯರಾಗಬೇಕು. ಏಕಾದಶಿ ದಿವಸ ಉಪವಾಸಮಾಡಿ ಮೂರು ಬೊಗಸೆ ನೀರನ್ನು ಕುಡಿಯಬೇಕು. ಅವನ ಹೃದಯದಲ್ಲಿ ಮೂರು ಲಿಂಗಗಳು ಹುಟ್ಟುತ್ತವೆ. ಇದಕ್ಕೆ ಸಂಶಯವಿಲ್ಲ, "ಇವರು ಅಂತರ್ಲಿಂಗಮಯರು" ಎಂದಿರುವುದರಿಂದ ಬಹಿರ್ಲಿಂಗಧಾರಿಗಳಹುದೋ ಅಲ್ಲವೋ ಎಂಬ ಸಂಶಯವು ತೋರಿಬರುತ್ತದೆ. (ಸದಾನಂದೋಪನಿಷತ್–ಈ ಭೇದವನ್ನು ತೋರಿಸುತ್ತದೆ.)

ಹೀಗೆ ಹೇಳಿರುವುದರಲ್ಲಿ ಹೃದಯದಲ್ಲಿ ಹುಟ್ಟುವ ಮೂರು ಅಂತರ್ಲಿಂಗಗಳು ಯಾವುವೆಂಬುದನ್ನು ಪರಿಶೋಧಿಸಬೇಕಾಗಿದೆ. ಅವು ವೀರಶೈವರ ಇಷ್ಟಪ್ರಾಣ ಭಾವ ಲಿಂಗಗಳಲ್ಲ. ಏಕೆಂದರೆ ಏಕಾದಶಿಯಲ್ಲಿ ಉಪವಾಸಮಾಡಿ ಮೂರು ಬೊಗಸೆ ನೀರನ್ನು ಕುಡಿದು ಇಷ್ಟಪ್ರಾಣ ಭಾವಲಿಂಗಗಳನ್ನು ಯಾವ ಷಟ್‌ಸ್ಥಲಾಚರಣೆಯ ವೀರಶೈವನೂ ಧರಿಸುವುದಿಲ್ಲ. ಅವನ ಸ್ಥೂಲತನುವು ಇಷ್ಟಲಿಂಗವಾಗಿಯೂ ಸೂಕ್ಷ್ಮತನುವು ಪ್ರಾಣ ಲಿಂಗವಾಗಿಯೂ ಕಾರಣತನುವು ಭಾವಲಿಂಗವಾಗಿಯೂ ಇರುವುದರಿಂದ ಅವನು ಲಿಂಗರೂಪನು (ನಿರಾಕಾರ ಶಿವರೂಪ) ಆಗಿದ್ದಾನೆ. ನಿರಾಕಾರ ಶಿವನು ಉಪವಾಸ ಮಾಡುವುದಿಲ್ಲ. ಇಲ್ಲಿ ಹೇಳಲ್ಪಟ್ಟ ಪಾಶುಪತರು ಮನುಷ್ಯೋತ್ತಮರಾಗಿದ್ದಾರೆ ಎಂದರೆ ತಮಗಿಂತ ಭಿನ್ನವಾಗಿ ಲಿಂಗವಿದೆ ಎಂದು ತಿಳಿದು ಪೂಜಿಸುವವರಾಗಿದ್ದಾರೆ. ಆದುದರಿಂದ ಅವರು ಮನುಷ್ಯರಲ್ಲಿ ಉತ್ತಮರು ಎಂದು ತಿಳಿಯಲು ಅನುಮಾನವೇನೂ ಇಲ್ಲ. ಆದರೆ ಅವರು ಪೂಜಿಸುವ ಲಿಂಗವು ವೀರಶೈವರ ಇಷ್ಟಲಿಂಗಕ್ಕೆ ಸರಿಯಾದುದಲ್ಲ, ಒಟ್ಟಿನಲ್ಲಿ ಇಲ್ಲಿ ಹೇಳಲ್ಪಟ್ಟ ಪಾಶುಪತರು ದೇಹದಲ್ಲಿ ಲಿಂಗವನ್ನು ಧರಿಸಿ ಹೃದಯದಲ್ಲಿ ಅಂತರ್ಲಿಂಗಾನುಸಂಧಾನವುಳ್ಳವರಾಗಿ ವ್ಯಾಸಮುನಿಯ ಕಾಲದಲ್ಲಿದ್ದರು ಎಂದರೆ ಆರ್ಯಸಂಸ್ಕೃತಿಯ ಪ್ರಾಬಲ್ಯಕಾಲದಲ್ಲಿ ಇದ್ದರೆಂದು ನಿರ್ಣಯಿಸಲು ಅನುಮಾನ ವೇನೂ ಇಲ್ಲ.

ಜ್ಞಾನೋದತೀರ್ಥ ಭಜನಾತ್ ಸಾ ಸುಶೀಲಾ ಕುಮಾರಿಕಾ
ಬಹಿರಂತಸ್ತದಾದ್ರಾಕ್ಷೀತ್ ಸರ್ವಂ ಲಿಂಗಮಯಂ ಜಗತ್
ಲಿಂಗತ್ರಯ ಶರೀರಿಣ್ಯಾಸ್ತಸ್ಯಾಸ್ಸಾನ್ನಿಧ್ಯತಃ ಸಹಿ
ದಿವ್ಯಂ ವಪುಸ್ಸಮಾಸಾದ್ಯ ರಾಕ್ಷಸಸ್ತ್ರಿದಿವಂ ಯಯೌ
(ಕಾಶೀಖಂಡ–ಭಾಗ ೧-ಅಧ್ಯಾಯ ೩೩-ಪುಟ ೨೧೧)

ಎಂಬ ಪ್ರಮಾಣವುಳ್ಳುದಾದ ಕಥೆಯಲ್ಲಿ ಸುಶೀಲೆ ಎಂಬ ಕನ್ಯೆಯು ಕಾಶಿಯಲ್ಲಿನ ಜ್ಞಾನವಾಪಿಯ ಜ್ಞಾನೋದಕವನ್ನು ಸೇವಿಸಿ ತನ್ನ ಒಳಗೆ ಮತ್ತು ಹೊರಗೆ ಸರ್ವವೂ ಲಿಂಗಮಯವೆಂದು ತಿಳಿದಳು ಲಿಂಗತ್ರಯ ಶರೀರವುಳ್ಳ ಆಕೆಗೆ ವಿರೋಧಮಾಡಿ ಮೃತಪಟ್ಟ ರಾಕ್ಷಸನು ದಿವ್ಯಶರೀರವನ್ನು ಹೊಂದಿ ಸ್ವರ್ಗಕ್ಕೆ ಹೋದನು. (ಇದೇ ಅಭಿಪ್ರಾಯವನ್ನೇ ಅನುಮೋದಿಸಿ ಉಡುತಡಿಯ ಮಹಾದೇವಿಯಕ್ಕನು ತನ್ನ ಲೌಕಿಕ ದೇಹವನ್ನು ಬಿಟ್ಟು ದಿವ್ಯ ಶರೀರವನ್ನು ಹೊಂದಿ ಕೈಲಾಸಕ್ಕೆ ಹೋದಳೆಂದು ಹರಿಹರ ಕವಿಯು ಬರೆಯುತ್ತಾನೆ. ಅದು ಲಿಂಗಾಂಗ ಸಾಮರಸ್ಯದ ಷಟ್‌ಸ್ಥಲದ ಆಚರಣೆಯವರ ವರ್ತನವಲ್ಲ.) ಆ ಸುಶೀಲೆಗೆ ಪ್ರೀತಿಪಾತ್ರನಾದ ವಿದ್ಯಾಧರಬಾಲನೂ ಸುಶೀಲೆಯೂ ಸಹ ರಾಕ್ಷಸನೊಡನೆ ಜಗಳವಾಡಿದಾಗ ಮೃತರಾದರು. ಆಮೇಲೆ ಸುಶೀಲೆಯು ಕರ್ಣಾಟಕ ದೇಶದಲ್ಲಿ ವಿದ್ಯಾನಗರದಲ್ಲಿ ರಾಜನ ಮಗಳಾಗಿ ಕಲಾವತಿ ಎಂಬ ಹೆಸರಿನಿಂದ ಹುಟ್ಟಿದಳು. ವಿದ್ಯಾಧರಬಾಲನು ಮಲಯ ದೇಶದ ಮಲಯ ಕೇತು ರಾಜನಿಗೆ ಮಾಲ್ಯಕೇತು ಎಂಬ ಮಗನಾಗಿ ಹುಟ್ಟಿದನು. ಇಬ್ಬರಿಗೂ ಮದುವೆಯಾಯಿತು. ಇವರಿಗೆ ಮೂರು ಮಕ್ಕಳು ಹುಟ್ಟಿದರು, ಎಂಬ ಕಥೆಯಿಂದ ತಿಳಿದು ಬರುವ ಸುಶೀಲೆಗೆ ಆದ ಎರಡನೆಯ ಜನ್ಮದ ಸ್ಥಿತಿಯು ಷಟ್‌ಸ್ಥಲ ವೀರಶೈವರ ಅಂತಿಮಸ್ಥಿತಿಗೆ ಸರಿಬೀಳುವುದಿಲ್ಲ.

ಇನ್ನೂ ತಿಳಿಯಬೇಕಾದ ಮುಖ್ಯ ವಿಷಯವೇನೆಂದರೆ:—

೧. ಏಕಃ ಪಾಶುಪತಶ್ರೇಷ್ಠೋ ವಾಲ್ಮೀಕಿರಿತಿ ಸಂಜ್ಞಿತಃ
........................ಕಪರ್ದೀಶಂ ಸಮರ್ಚಯನ್
ಚಕಾರ ಭಸ್ಮನಾ ಸ್ನಾನಮಾಪಾದ ತಲಮಸ್ತಕಂ
ಜಪನ್ ಪಂಚಾಕ್ಷರೀಂ ವಿದ್ಯಾಂ ಧ್ಯಾಯನ್ ದೇವಂ ಕಪರ್ದಿನಂ
ಹುಡುಂಕೃತ್ಯ ಹುಡುಂಕೃತ್ಯ ಹುಡುಂಕೃತ್ಯ ತ್ರಿರುಚ್ಚಕೈಃ

**(ಭಾ. ೨-ಅ. ೫೪-ಪು ೧೩)**

೨. ಕದಾಚಿದ್ದೈವ ಯೋಗಾತ್ಸದಮನೋನಾಮ ತಾಪಸಃ
ರೇವಾತಟೇ ನಿರೈಕ್ಷಿಷ್ಟ ತೀರ್ಥಂ ಚಾಮರ ಕಂಟಕಂ
ಮಹದಾಯತನಂ ಪುಣ್ಯಮೋಂಕಾರಸ್ಯಾಪಿ ತತ್ರ ವೈ
ದೃಷ್ಟ್ವಾ ಹೃಷ್ಟಮನಾ ಆಸೀಚ್ಚೇತಃ ಸ್ಥೈರ್ಯಮವಾಪಹ
ಅಥ ಪಾಶುಪತಾಂಸ್ತತ್ರ ಸ ನಿರೀಕ್ಷ್ಯ ತಪೋಧನಾನ್
ವಿಭೂತಿಭೂಷಿತ ತನೂನ್ ಕೃತ ಲಿಂಗಸಮರ್ಚನಾನ್
ವಿಹಿತಪ್ರಾಣ ಯಾತ್ರಾಂಶ್ಚ ಕೃತಾಗಮ ವಿಚಾರಣಾನ್
ಪ್ರಣಮ್ಯೋಪವಿಶತ್ತತ್ರ ತದಾಚಾರ್ಯಸ್ಯ ಸನ್ನಿಧೌ
ಪ್ರಬದ್ಧ ಹಸ್ತಯುಗಳಃ ಪ್ರಣಮತ್ತರ ಕಂಧರಃ

ಅಥ ಪಾಶುಪತಾಚಾರ್ಯೋ ಗರ್ಗೋನಾಮ ಮಹಾಮುನಿಃ
ವಾರ್ಧಕೇನ ಸಮಾಕ್ರಾಂತಸ್ತಪಸಾ ಕೃಶವಿಗ್ರಹಃ
ಶಂಭೋರಾರಾಧನೇನಿಷ್ಠಃ ಶ್ರೇಷ್ಠಸ್ಸರ್ವ ತಪಸ್ವಿಷು

(ಭಾ. ೨-ಅ. ೭೪-ಪುಟ ೧೦೨)

೩. ಕಪಿಲಶ್ಚೈವ ಸೌವರ್ಣಿಃ ಶ್ರೀಕಂಠಃ ಪಿಂಗಲೋಂಶುಮಾನ್
ಏತೇ ಪಾಶುಪತಾಸ್ಸಿದ್ಧಾಸ್ತಲ್ಲಿಂಗಾರಾಧನೇ ನಹಿ
ಇತ್ಯಾಖ್ಯಾಯ ಕಥಾಂ ರಮ್ಯಾಂ ಗರ್ಗಃ ಪಾಶುಪತೋತ್ತಮಃ
ಭಾರದ್ವಾಜೇನ ಸಹಿತಃ ಪ್ರಾಪ್ಯ ವಾರಾಣಸೀಂ ಪುರೀಂ
ದಮನೋऽಪಿಹಿ ಧರ್ಮಾತ್ಮಾ ಗರ್ಗಾಚಾರ್ಯೇಣ ಸಂಯತಃ
ಆರಾಧ್ಯ ಶ್ರೀ ಮದೋಂಕಾರಂ ತಸ್ಮಿಲ್ಲಿಂಗೇ ಲಯಂಗತಃ

(ಭಾ. ೨-ಅ. ೭೫-ಪು. ೧೦೩-೧೦೬)

೪. ದೂರ್ವಾಸಃ ಸಂಪರಿಪ್ರಾಪ್ತಃ ಶಂಭೋರಾನಂದ ಕಾನನಂ
ಪದೇಪದೇ ಮುನೀನಾಂಚ ಜಿತಕಾಲ ಮಹಾಭಿಯಾಂ
ದೃಷ್ಟ್ವೋಟಜಾನಿ ರಮ್ಯಾಣಿ ದೂರ್ವಾಸೋ ವಿಸ್ಮಿತೋऽಭವತ್
ದೂರ್ವಸಶ್ಚಾತಿ ಹೃಷ್ಟೋऽಭೂದ್ದೃಷ್ಟ್ವಾ ಪಾಶುಪತೋತ್ತಮಾನ್
ಭೂತಿಭೂಷಿತ ಸರ್ವಾಂಗಾನ್ ಜಟಾಜಟಿತ ಮೌಲಿಕಾನ್
ಕೌಪೀನ ಮಾತ್ರವಸನಾನ್ ಸ್ಮರಾರಿ ಧ್ಯಾನ ತತ್ಪರಾನ್
ಕಕ್ಷೀಕೃತ ಮಹಾಲಾಬೂನ್ ಹುಡುತ್ಕಾರ ಜಿತಾಂಬುದಾನ್
ಕರಂಡ ದಂಡ ಪಾನೀಯ ಪಾತ್ರ ಮಾತ್ರ ಪರಿಗ್ರಹಾನ್
ಕ್ವಚಿತ್ ತ್ರಿದಂಡಿನೋದೃಷ್ಟ್ವಾ ನಿಸ್ಸಂಗಾನ್ ನಿಷ್ಪರಿಗ್ರಹಾನ್

(ಭಾ. ೨--ಅ. ೭೫-ಪು. ೧೩೮)

೫. ಕುಂಡುಂ(ಡ?)ಚಾ ನಾರಕಾಖ್ಯಂ ವೈ ತತ್ರ ಸ್ನಾತೋ ನ ನಾರಕೀ
ವರಣಾಯಾಸ್ತಟೇ ರಮ್ಯೇ ವರಣೇಶಸ್ತದುಸ್ತರೆ
ತತ್ರ ಪಾಶುಪತಃ ಸಿದ್ಧಸ್ತ್ವಕ್ಷಪಾದೋ ಮಹಾಮುನೀ ?
ಅನೇನೈವ ಶರೀರೇಣ ಶಾಶ್ವತೀಂ ಸಿದ್ಧಿಮಾಗತಃ

(ಭಾ. ೨--ಅ. ೯೬-ಪು. ೧೭೧)

೬ ತತ್ರಪಾಶುಪತಃ ಸಿದ್ಧಸ್ತ್ರ್ಯಂಬಕೋನಾಮ ನಾಮತಃ
ಅನೇನೈವ ಶರೀರೇಣ ರುದ್ರಲೋಕಮವಾಪ್ತವಾನ್

೭ ತತ್ರಸಿದ್ಧಃ ಪಾಶುಪತಿಃ ಕಪಿಲರ್ಷಿರ್ಮಹಾತಪಃ
ತತ್ರಾಸ್ತಿ ಹಿ ಗುಹಾ ರಮ್ಯಾ ಕಪಿಲೇಶ್ವರ ಸನ್ನಿಧೌ

ತಾಂ ಗುಹಾಂ ಪ್ರವಿಶೇದ್ಯೋ ವೈ ನ ಸ ಗರ್ಭೇ ವಿಶೇತ್ ಕ್ವಚಿತ್
೮. ತತ್ರಯಜ್ಞೋದ ಕೂಪೋಽಸ್ತಿ ವಾಜಪೇಯ ಫಲಪ್ರದಃ
೯. ವ್ಯಾಸತೀರ್ಥಾತ್ ಪಶ್ಚಿಮತೋ ಘಂಟಾಕರ್ಣಹ್ರದೋಮಹಾನ್
ಘಂಟಾಕರ್ಣ ಸಮೀಪೇತು ಪಂಚಚೂಡಾಪ್ಸರಸ್ಸರಃ
ತದ್ದಕ್ಷಿಣೇ ಸಿದ್ಧಕೂಪಃ ಸಿದ್ಧಾಸ್ಸಂತಿ ಸಹಸ್ರಶಃ
ವಾಯುರೂಪಾಸ್ತುಯೇ ಸಿದ್ಧಾಯೇ ಸಿದ್ಧಾಭಾನುರಶ್ಮಿಗಾಃ
ತೈಃಸ್ಥಾಪಿತಂತು ಯಲ್ಲಿಂಗಂ ತತ್ ಸಿದ್ಧೇಶ್ವರ ಮೀರಿತಂ
ಲಿಂಗತ್ರಯಂ ಹೃದಬ್ಜೇ ಯಚ್ಛ್ರದ್ಧಯಾಪೀ ತಮರ್ಚಯೇತ್
ಯೈಸ್ತತ್ರ ತಜ್ಜಲಂ ಪೀತಂ ಕೃತಾರ್ಥಾಸ್ತೇ ನರೋತ್ತಮಾಃ
(ಭಾ. ೨-ಅ. ೯೬-ಪು ೧೭೨-೧೭೪-೧೭೬)

ಇವುಗಳ ತಾತ್ಪರ್ಯವು ಹೀಗೆ ಇವೆ:—

೧. ವಾಲ್ಮೀಕಿ ಎಂಬ ಪಾಶುಪತಶ್ರೇಷ್ಠನು ಒಬ್ಬ ಸಿದ್ಧನು........ಅವನು ಪಾದದಿಂದ ಮಸ್ತಕದವರೆವಿಗೂ ಭಸ್ಮಸ್ನಾನಮಾಡಿ ಪಂಚಾಕ್ಷರೀ ಮಂತ್ರವನ್ನು ಜಪಿಸಿ ಶಿವನನ್ನು ಧ್ಯಾನಮಾಡಿ ಹುಡಂ ಹುಡಂ ಹುಡಂ ಎಂಬುದಾಗಿ ಮೂರುಸಾರಿ ಉಚ್ಚಾರಮಾಡಿ (ಕೂಗಿ) ಕಪರ್ದೀಶನನ್ನು ಪೂಜಿಸುತ್ತಿದ್ದನು.

೨. ದಮನ ಎಂಬ ತಪಸ್ವಿಯು ಒಂದಾನೊಂದು ಕಾಲದಲ್ಲಿ ರೇವಾನದಿಯ ದಡದಲ್ಲಿ ಕೇದಗೆಯ ಮೆಳೆಯಿಂದ ವ್ಯಾಪ್ತವಾದ ಒಂದು ಕೊಳವನ್ನು (ತೀರ್ಥ) ನೋಡಿದನು. ಅಲ್ಲಿ ಓಂಕಾರೇಶ್ವರನ ಮಹಾದೇವಾಲಯವನ್ನು ಕಂಡನು. ಸಂತೋಷಯುಕ್ತನಾಗಿ ಆ ಮೇಲೆ ಸ್ಥಿರಮನಸ್ಕನಾದನು ಅಲ್ಲಿ ತಪಸ್ವಿಗಳಾದ ಅನೇಕ ಪಾಶುಪತರನ್ನು ನೋಡಿದನು. ಅವರು ವಿಭೂತಿಯನ್ನು ಧರಿಸಿಕೊಂಡು ಲಿಂಗಪೂಜೆ ಮಾಡುತ್ತಿದ್ದರು. ಆಗಮವಿಚಾರದಿಂದ ಪ್ರಾಣಾಯಾಮಕ್ರಮದಲ್ಲಿ ಕೂಡಿದವರಾಗಿದ್ದರು. ಇಂತಹ ಪಾಶುಪತರನ್ನು ಕಂಡು ನಮಸ್ಕರಿಸಿ ಅವರಲ್ಲಿ ಕೂಡಿ ಆ ಪಾಶುಪತರ ಆಚಾರ್ಯನಾದ ಗರ್ಗಮುನಿಯ ಸನ್ನಿಧಿಗೆ ಹೋಗಿ ಕೈಗಳನ್ನು ಜೋಡಿಸಿಕೊಂಡು ತಲೆ ಬಗ್ಗಿಸಿನಮಸ್ಕರಿಸಿದನು. ಆ ಮುನಿಯು ಮುದುಕನಾಗಿ ತಪಸ್ಸಿನಿಂದ ಸೊರಗಿದ ದೇಹವುಳ್ಳವನಾಗಿ ಶಿವಾರಾಧನೆಮಾಡಿ ಇತರ ತಪಸ್ವಿಗಳಿಗಿಂತ ಶ್ರೇಷ್ಠನಾಗಿದ್ದನು.

೩. ಕಪಿಲ ಸಾವರ್ಣಿ ಶ್ರೀಕಂಠ ಪಿಂಗಲ ಅಂಶುಮಂತ ಇವರು ಲಿಂಗಾರಾಧನೆಯಿಂದಲೇ ಪಾಶುಪತಸಿದ್ಧರಾದರು. ಈ ಕಥೆಯನ್ನು ಗರ್ಗಮುನಿಯು ದಮನನಿಗೆ ಹೇಳಿದನು. ಆ ಮೇಲೆ ಗರ್ಗಮುನಿಯೂ ಭಾರದ್ವಾಜನೂ ಸಹ ಕಾಶಿಗೆ ಹೋದರು. ಧರ್ಮಾತ್ಮನಾದ ದಮನನು ಗರ್ಗಾಚಾರ್ಯನೊಡನೆ ಕೂಡಿಕೊಂಡು ಓಂಕಾರೇಶ್ವರನನ್ನು ಪೂಜೆಮಾಡಿ ಆ ಲಿಂಗದಲ್ಲಿ ಅಂತರ್ಧಾನನಾದನು.

೪. ದೂರ್ವಾಸಮುನಿಯು ಶಂಭುವಿನ ಆನಂದಕಾನನ ಎಂಬ ಅಡವಿಗೆ ಹೋದನು. ಅಲ್ಲಿ ಕಾಲನ ಭಯವಿಲ್ಲದಿರುವ ಅನೇಕರ ಗುಡಿಸಲುಗಳನ್ನು ಅಲ್ಲಲ್ಲಿ ನೋಡಿ ಆಶ್ಚರ್ಯವಂತನಾದನು. ಈ ದೂರ್ವಾಸನು ಅಲ್ಲಿ ಪಾಶುಪತೋತ್ತಮರನ್ನು ನೋಡಿ ಹರ್ಷಪಟ್ಟನು. ಈ ಪಾಶುಪತೋತ್ತಮರು ಸರ್ವಾಂಗದಲ್ಲಿ ಭಸ್ಮವನ್ನು ಧರಿಸಿದ್ದರು. ಶಿರಸ್ಸಿನಲ್ಲಿ ಜಡೆಯನ್ನು ಬಿಟ್ಟಿದ್ದರು. ಕೌಪೀನ ಒಂದನ್ನೇ ಧರಿಸಿದ್ದರು. (ಮೈಮೇಲೆ ಉಳಿದ ಹೊದಿಕೆ ಏನೂ ಇರಲಿಲ್ಲ) ಕೈಲಾಸದ ಶಿವನ ಧ್ಯಾನಪರರಾಗಿದ್ದರು. ಕಂಕುಳಲ್ಲಿ ಭಸ್ಮಗುಟಿಕೆ (ಘಟ್ಟಿ) ಇಟ್ಟುಕೊಂಡಿದ್ದರು. ಹುಡುತ್ಕಾರ ಶಬ್ದದಿಂದ ತಮಸ್ಸನ್ನು ಕಳೆದಿದ್ದರು. ಕರಡಿಗೆ ದಂಡ ಕುಡಿಯುವ ನೀರಿನ ಪಾತ್ರೆ ಇಷ್ಟನ್ನೇ ಇಟ್ಟುಕೊಂಡಿದ್ದರು. ಕೆಲವರು ಮೂರುದಂಡವುಳ್ಳವರಾಗಿ ನಿಸ್ಸಂಗರಾಗಿದ್ದರು. ಪರಿವಾರದವರಿಲ್ಲದವರಾಗಿದ್ದರು.

೫. ಕಾಶಿಯಲ್ಲಿ ಅನಾರಕವೆಂಬ ಹೊಂಡವಿದೆ. ಅಲ್ಲಿ ಸ್ನಾನಮಾಡಿದವನು ನರಕಕ್ಕೆ ಹೋಗುವುದಿಲ್ಲ.

ವರಣಾನದಿಯ ದಡದಲ್ಲಿ ವರಣೇಶ ಎಂಬ ಗುಡಿ ಇದೆ. ಅಲ್ಲಿ ಪಾಶುಪತಸಿದ್ಧನಾದ ಅಕ್ಷಪಾದಮುನಿಯು ಇದ್ದನು. ಅವನು ಅದೇ ಶರೀರದಲ್ಲಿಯೇ ಸಿದ್ಧಿಯನ್ನು ಹೊಂದಿದನು.

೬. ಅಲ್ಲಿಯೇ "ತ್ರ್ಯಂಬಕ" ಎಂಬ ಪಾಶುಪತಸಿದ್ಧನು ಇದ್ದನು. ಆ ಸಿದ್ಧನು ಈ ಶರೀರದಿಂದಲೇ ರುದ್ರಲೋಕವನ್ನು ಪಡೆದನು.

೭. ಅಲ್ಲಿ ಕಪಿಲಋಷಿಯೆಂಬ ಮಹಾತಪಸ್ಸನ್ನು ಮಾಡಿದ ಪಾಶುಪತಸಿದ್ಧನಿದ್ದನು. ಅಲ್ಲಿಯೇ ಕಪಿಲೇಶ್ವರ ದೇವಾಲಯದ ಮುಂಭಾಗದಲ್ಲಿ ಒಂದು ಗವಿ ಇದ್ದಿತು. ಆ ಗವಿಯನ್ನು ಹೊಕ್ಕು ಒಳಗೆ ಎಲ್ಲಿಯಾದರೂ ಇದ್ದದ್ದಾದರೆ ಅವನು ಪುನಃ ಜನನವಾಗುವುದಿಲ್ಲ.

೮. ಅಲ್ಲಿಯೇ ಯಜ್ಞೋದವೆಂಬ ಹೊಂಡವಿದೆ. ಅದು ಅಶ್ವಮೇಧ ಯಜ್ಞ ಮಾಡಿದ ಫಲವನ್ನು ಕೊಡುತ್ತದೆ.

೯. ವ್ಯಾಸತೀರ್ಥದ ಪಶ್ಚಿಮದಿಕ್ಕಿನಲ್ಲಿ ದೊಡ್ಡದಾದ ಘಂಟಾಕರ್ಣವೆಂಬ ಹೊಂಡವಿದೆ. ಈ ಘಂಟಾಕರ್ಣ ಹೊಂಡದ ಸಮೀಪದಲ್ಲಿ ಪಂಚಚೂಡಾಪ್ಸರ ಸರೋವರವಿದೆ. ಅದರ ದಕ್ಷಿಣದಲ್ಲಿ ಸಿದ್ಧಕೂಪ ಎಂಬ ಹೊಂಡವಿದೆ. ಅಲ್ಲಿ ಸಾವಿರಗಟ್ಟಲೆ ಸಿದ್ಧರಿದ್ದಾರೆ. ಆ ಸಿದ್ಧರು ವಾಯುರೂಪರು. ಅವರು ಸೂರ್ಯಕಿರಣದಲ್ಲಿ ಸಂಚರಿಸುವರು. ಅವರಿಂದ ಸ್ಥಾಪಿಸಲ್ಪಟ್ಟ ಲಿಂಗವು ಸಿದ್ಧೇಶ್ವರ ಲಿಂಗ ಎಂದು ಹೇಳಲ್ಪಡುತ್ತದೆ.

ಯಾರಿಂದ ಅಲ್ಲಿನ ನೀರು ಕುಡಿಯಲ್ಪಡುತ್ತದೆಯೋ ಹೃದಯಕಮಲದಲ್ಲಿನ ಮೂರು ಲಿಂಗಕ್ಕೆ ಯಾರು ಶ್ರದ್ಧೆಯಿಂದ ತಾವು ಕುಡಿದದ್ದನ್ನು ಅರ್ಪಿಸುತ್ತಾರೆಯೋ ಅವರು ಕೃತಾರ್ಥರು, ಅವರು ಮನುಷ್ಯೋತ್ತಮರು.

ಮುಖ್ಯವಿಷಯವೆಂದು ಆರಿಸಿಕೊಳ್ಳಲ್ಪಟ್ಟ ಈ ಮೇಲಿನ ಶ್ಲೋಕಗಳ ಅಭಿಪ್ರಾಯದಿಂದ ಸಾವಿರಾರು ವರ್ಷಗಳ ಹಿಂದೆ ಸಾವಿರಗಟ್ಟಲೆ ಪಾಶುಪತರೂ, ಪಾಶುಪತ ಸಿದ್ಧರೂ ಇದ್ದರೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಇವರು ಲಿಂಗಧಾರಿಗಳಾಗಿಯೂ ಸ್ಥಾವರ ಲಿಂಗಪೂಜಕರಾಗಿಯೂ ಇದ್ದರೆಂಬುದೂ ತಿಳಿದುಬರುತ್ತದೆ. ಇಂತಹ ಲಿಂಗಧಾರಿಗಳು ಹರಪ್ಪ ಮೊಹೆಂಜೋದಾರೋ ಪಟ್ಟಣಗಳಲ್ಲಿ ಆ ಪಟ್ಟಣಗಳು ಪ್ರಬಲವಾಗಿದ್ದಾಗ ಅಲ್ಲಿ ವಾಸವಾಗಿದ್ದರೆಂದು ನಿರ್ವಿವಾದವಾಗಿ ನಿರ್ಣಯಿಸಲೇ ಬೇಕಾಗಿದೆ. ಇವರ ಧಾರ್ಮಿಕ ಆಚಾರವು ಹೇಗಿದ್ದಿತೆಂದು ತಿಳಿಯಲಿಕ್ಕೆ ಹೋಗುವುದಾದರೆ ಈ ಕೆಳಗಿನ ಸಂಗತಿಗಳು ಮೇಲಿನ ಶ್ಲೋಕಗಳಿಂದಲೇ ಹೊರಬೀಳುತ್ತಲಿವೆ.

"ಇವರು ಹುಟ್ಟಿದಲಾಗಾಯಿತು ಸಾಯುವವರೆವಿಗೂ ಬಾಲಬ್ರಹ್ಮಚಾರಿಗಳಾಗಿಯೇ ಇರುತ್ತಿದ್ದರು. ಕೌಪೀನವನ್ನು ಮಾತ್ರ ಧರಿಸಿ ಹೊದ್ದಿಕೆ ಏನೂ ಇಲ್ಲದೆ ತಪಸ್ಸನ್ನು ಮಾಡುತ್ತಾ ಕಾಲಯಾಪನೆ ಮಾಡುವವರಾಗಿದ್ದರು. "ಹುಡುಂ ಹುಡುಂ ಹುಡುಂ" "ಹುಡುತ್ ಹುಡುತ್ ಹುಡುತ್" ಎಂದು ಶಬ್ದಮಾಡಿ ತಾಮಸ ನಿವೃತ್ತಿಯಾಗುವುದೆಂದು ತಿಳಿದುಕೊಂಡಿದ್ದರು. "ಕಪರ್ದೀಶ" ಮೊದಲಾದ ಹೆಸರುಳ್ಳ ಲಿಂಗಗಳನ್ನು ಪೂಜಿಸುತ್ತಿದ್ದರು. ಪಾದದಿಂದ ಮಸ್ತಕದವರೆವಿಗೂ ಭಸ್ಮಸ್ನಾನವನ್ನು ಮಾಡುತ್ತಿದ್ದರು. ಕೈಲಾಸದ ಕಪರ್ದಿಯನ್ನು ಧ್ಯಾನಮಾಡಿ ಪಂಚಾಕ್ಷರ ಜಪವನ್ನು ಮಾಡುತ್ತಿದ್ದರು. ಆಗಮದಲ್ಲಿ ಹೇಳಲ್ಪಟ್ಟಂತೆ ಪ್ರಾಣಾಯಾಮವನ್ನು ಮಾಡುತ್ತಿದ್ದರು. ರುದ್ರಾಕ್ಷಿ ಮಾಲಿಕೆಯನ್ನು ಧರಿಸುತ್ತಿದ್ದರು. ಅನಾರಕವೆಂಬ ಹೊಂಡದಲ್ಲಿ ಸ್ನಾನಮಾಡಿ ತಾವು ಸಿದ್ಧರೆಂದು ತಿಳಿಯುತ್ತಿದ್ದರು. ತ್ರ್ಯಂಬಕನೆಂಬುವನು ಸಿದ್ಧನಾಗಿ ಈ ದೇಹದಿಂದಲೇ ರುದ್ರಲೋಕಕ್ಕೆ ಹೋದನು. ತಾವು ಕುಡಿಯುತ್ತಿರುವ ನೀರನ್ನು ತಮ್ಮ ಹೃದಯದಲ್ಲಿರುವ ಮೂರು ಲಿಂಗಕ್ಕೆ ಅರ್ಪಿಸುತ್ತಿದ್ದರು. ಹೀಗೆ ಅರ್ಪಿತವಾದ ನೀರನ್ನು ಕುಡಿದವರು ಮನುಷ್ಯೋತ್ತಮರು ಆಗಿದ್ದರು.

ಗರ್ಗಮಹಾಮುನಿ ಎಂಬ ಪಾಶುಪತಾಚಾರ್ಯನಿದ್ದನು. ಕಪಿಲ ಸೌವರ್ಣಿ ಶ್ರೀಕಂಠ ಪಿಂಗಲ ಅಂಶುಮಂತ ಎಂಬ ಪಾಶುಪತಸಿದ್ಧರ ಕಥೆಯನ್ನು ಆಚಾರ್ಯನು ಪಾಶುಪತರಿಗೆ ಬೋಧಿಸಿದನು. ಗರ್ಗಾಚಾರ್ಯನೊಡನೆ ಭಾರದ್ವಾಜನೂ ದಮನಕನೂ ಕಾಶಿಗೆ ಹೋಗಿ ಓಂಕಾರೇಶ್ವರ ಲಿಂಗವನ್ನು ಆರಾಧಿಸಿ ಆ ಲಿಂಗದಲ್ಲಿಯೇ ಲೀನರಾದರು. ವ್ಯಾಸಮಹರ್ಷಿಯು ಇಂತಹ ಪಾಶುಪತೋತ್ತಮರನ್ನು ಕಾಲದ ಬಾಧೆಯಿಲ್ಲದೆ ಗುಡಿಸಲಿನಲ್ಲಿ ವಾಸಮಾಡುತ್ತಿದ್ದವರನ್ನು ನೋಡಿ ಆಶ್ಚರ್ಯಪಟ್ಟನು. ಪಾಶುಪತರು ತ್ರಿದಂಡಿಗಳಾಗಿದ್ದರು. ಲಿಂಗಸನ್ನಿಧಿಯ ಗವಿಯಲ್ಲಿ ಪ್ರವೇಶಮಾಡುವುದರಿಂದ ಜನನ ಮರಣ ಭಯವಿಲ್ಲವೆಂದು ತಿಳಿಯುತ್ತಿದ್ದರು. ಯಜ್ಞೋದಕೂಪದಲ್ಲಿ ಸ್ನಾನಮಾಡಿದರೆ ಅಶ್ವಮೇಧಯಜ್ಞ ಮಾಡಿದ ಫಲವೆಂದು ತಿಳಿದಿದ್ದರು. ಈ ಸಿದ್ಧರು ಸ್ಥಾಪಿಸಿದ ಸ್ಥಾವರಲಿಂಗವು ಸಿದ್ಧೇಶ್ವರ ಎಂದು ಕರೆಯಲ್ಪಡುತ್ತಿದ್ದಿತು."

ಈಗಿನ ವೀರಶೈವರು ಎಲ್ಲರೂ ಕಡೆಯವರೆವಿಗೂ ಬ್ರಹ್ಮಚಾರಿಗಳಾಗಿರಬೇಕೆಂಬ ನಿಯಮವಿಲ್ಲ. ಯಾವ ಆಶ್ರಮದ ನಿಯಮದಿಂದಲೂ ಬಂಧಿಸಲ್ಪಟ್ಟಿಲ್ಲ. ಜಂಗಮರಿಗೆ ಸೂಚನಾರ್ಥದ ವಸ್ತ್ರಧಾರಣೆಯು ಹೊರತಾಗಿ ಉಡುಪಿನ ನಿರ್ಬಂಧವಾವುದೂ ಇಲ್ಲ. "ಹುಡುಂ ಹುಡುಂ ಹುಡುಂ" "ಹುಡುತ್ ಹುಡುತ್ ಹುಡುತ್" ಎಂದು ಮೂರು ಸಾರಿ ಉಚ್ಚರಿಸುವುದಿಲ್ಲ. ಹಾಗೆ ಉಚ್ಚರಿಸಿದರೆ ತಾಮಸವು ನಾಶವಾಗುವುದೆಂದು ಯಾರು ತಿಳಿದಿಲ್ಲ. "ಉಘೆ ಉಘೆ" "ಚಾಂಗುಭಲರೆ" ಎಂಬ ಶಬ್ದಗಳನ್ನು ಉತ್ಸವಗಳಲ್ಲಿ ಸಂತೋಷಾರ್ಥವಾಗಿ ಉಪಯೋಗಿಸಿರುವುದು ಗ್ರಂಥಗಳಲ್ಲಿ ಕಂಡುಬರುತ್ತದೆ.

ಶೈವರೆಲ್ಲರಿಗೂ ಭಸ್ಮರುದ್ರಾಕ್ಷಧಾರಣ ಶಿವಾಯನಮಃ ಎಂಬ ಪಂಚಾಕ್ಷರ ಮಂತ್ರ ಇವುಗಳು ಅವಶ್ಯಕವಾಗಿವೆ. ಪಾಶುಪತರಿಗೂ ಅವಶ್ಯಕ. ಆದರೆ ಇವರಂತೆ ವೀರಶೈವರಿಗೆ ಇರದೆ ತ್ರಿಪುಂಡ್ರಧಾರಣ, ಕಂಠಮಾಲೆ ಕರ್ಣ ಮೊದಲಾದವುಗಳಲ್ಲಿ ಕ್ರಮವಿಡಿದು ರುದ್ರಾಕ್ಷಧಾರಣ, ಸಗರ್ಭಷಡಕ್ಷರ ಜಪ ಇವುಗಳಿರುತ್ತವೆ. ಕೈಲಾಸದ ಶಿವನೊಬ್ಬನೇ ಪತಿಯು ಉಳಿದ ದೇವತೆಗಳೆಲ್ಲರೂ ಪಶುಗಳು ಎಂದು ನಂಬಿ ಪಾಶುಪತರಾಗಿದ್ದವರು ಆ ಕೈಲಾಸದ ಶಿವನರೂಪವೇ ದೇವಾಲಯದೊಳಗಿನ ಲಿಂಗ ಮತ್ತು ತಾವು ಧರಿಸುವ ಲಿಂಗ ಎಂದು ತಿಳಿದು ಓಂಕಾರೇಶ ಕಪರ್ದೀಶ ಮೊದಲಾದ ಹೆಸರುಗಳಿಂದ ಆ ಲಿಂಗಗಳಿಗೆ ಕರೆಯುತ್ತಿದ್ದರು, ಎಂದು ಊಹಿಸಬಹುದಾದರೂ ವೀರಶೈವರು ನಿರಾಕಾರ ಪರವಸ್ತು (ಪರಶಿವ) ರೂಪವೇ ಲಿಂಗವೆಂದೂ ಅದು ಸರ್ವಾಂಗದಲ್ಲಿಯೂ ಧರಿಸಲ್ಪಟ್ಟು ಇಷ್ಟಪ್ರಾಣ ಭಾವಲಿಂಗಗಳೆಂಬ ಹೆಸರನ್ನು ಹೊಂದಿ ಸರ್ವಜಗದ್ರೂಪವಾಗಿ ಅಲ್ಲಿಯೂ ಆ ಹೆಸರುಗಳನ್ನೇ ಹೊಂದಿ ಈ ಹೆಸರುಗಳೇ ಗುರು ಲಿಂಗ ಜಂಗಮ ಎಂಬ ಹೆಸರಿನಿಂದಲೂ ಕರೆಯಲ್ಪಟ್ಟು ಸರ್ವವೂ ಲಿಂಗವಾಗಿರುವುದೆಂದೂ ತಿಳಿದಿದ್ದಾರೆ. ಗ್ರಾಮದವರು ತಮ್ಮ ಊರಿನ ಉನ್ನತಿಗಾಗಿ ಲಿಂಗ ದೇವಾಲಯವನ್ನು ನಿರ್ಮಿಸಿ ಒಂದೊಂದು ಹೆಸರನ್ನು ಕರೆದರೆ ಅದೇ ಹೆಸರನ್ನೇ ತಮ್ಮ ನಿರಾಕಾರ ಪರಶಿವ ರೂಪಲಿಂಗಗಳಿಗೆ ಕರೆವಿರುವುದು ಶರಣರ ವಚನಗಳಿಂದ ಕಂಡುಬಂದರೂ ಅದು ಲೋಕನಿಮಿತ್ತವಾಗಿಯೇ ಹೊರತು ತಾತ್ವಿಕವಾಗಿ ಅಲ್ಲ. ಆದರೂ ವೀರಶೈವರಿಗೆ ಸ್ಥಾವರಲಿಂಗಪೂಜೆಯು ಸಿದ್ಧಾಂತಶಿಖಾಮಣಿಯ ೧೦೧ ಸ್ಥಲಗಳಲ್ಲಾಗಲಿ ಶಿವಶರಣರ ಷಟ್‌ಸ್ಥಲ ವಚನಗಳಲ್ಲಾಗಲಿ ಹೇಳಲ್ಪಟ್ಟಿಲ್ಲ. ಈ ದೆಸೆಯಿಂದ ಪಾಶುಪತರು ಧರಿಸಿರುವ ಲಿಂಗಕ್ಕೂ ವೀರಶೈವರು ಧರಿಸಿರುವ ಲಿಂಗಕ್ಕೂ ಭಾವನೆಯಲ್ಲಿಯೂ ನಿರ್ಮಾಣದಲ್ಲಿಯೂ ಬಹಳ ವ್ಯತ್ಯಾಸವಿದೆ ಎಂಬುದನ್ನು ಚನ್ನಾಗಿ ನೆನಪಿನಲ್ಲಿ ಇಡಬೇಕು. ಪಾಶುಪತರ ಪ್ರಾಣಾಯಾಮಕ್ಕೂ ವೀರಶೈವರ ಪ್ರಾಣಾಯಾಮಕ್ಕೂ ವ್ಯತ್ಯಾಸವಿದೆ. ವೀರಶೈವರು ಯಾವುದಾದರೂ ಹೊಂಡದ ನೀರಿನಲ್ಲಿ ನದಿ ನೀರಿನಲ್ಲಿ ಕ್ಷೇತ್ರದ ನೀರಿನಲ್ಲಿ ಸ್ನಾನಮಾಡಿದರೂ ಶುದ್ಧರಾದೆನೆಂದು ತಿಳಿಯುವುದಿಲ್ಲ.

"ನಸ್ಪೃಷ್ಟಿ ಬುದ್ಧ್ಯಾ ಸ್ನಾಯೀತ ನದಿಕುರ್ಯಾತ್ ಸಪಾತಕೀ"

ಎಂದರೆ ನಾನುಮುಟ್ಟುಪಡಾದುದರಿಂದ ಸ್ನಾನಮಾಡಿಶುದ್ಧನಾಗುತ್ತೇನೆ ಎಂದು ಸ್ನಾನಮಾಡಬಾರದು. ಹಾಗೆ ಮಾಡಿದರೆ ಪಾಪಿಯಾಗುತ್ತಾನೆ ಎಂದು ಪಾರಮೇಶ್ವರ ತಂತ್ರ ಪ್ರಮಾಣವಿದೆ. ಹಾಗೆ ತೀರ್ಥಸ್ನಾನಮಾಡಿ ರುದ್ರಲೋಕವನ್ನು ಸೇರಬೇಕೆಂಬ ಅಪೇಕ್ಷೆಯೂ ಇವರಿಗಿಲ್ಲ. ಬ್ರಹ್ಮಪದವಿಯನೊಲ್ಲೆ ವಿಷ್ಣುಪದವಿಯನೊಲ್ಲೆ ರುದ್ರಪದವಿಯನೊಲ್ಲೆ ಎಂದು ಬಸವೇಶ್ವರನ ವಚನವು ಘಂಟಾಘೋಷವಾಗಿ ಹೇಳುತ್ತಿದೆ. ಹೊಂಡದ ನೀರನ್ನು ಲಿಂಗಕ್ಕರ್ಪಿಸಿ ಕುಡಿದರೆ ರುದ್ರಲೋಕ ಪ್ರಾಪ್ತಿ ಎಂದು ಪಾಶುಪತರು ತಿಳಿದಂತೆ ವೀರಶೈವರು ತಿಳಿದಿಲ್ಲ. ತಾವು ಕುಡಿಯುತ್ತಿದ್ದ ಪವಿತ್ರವಾದ ಹೊಂಡದ ನೀರನ್ನು ಸಿದ್ಧಿಪಡೆಯುವುದಕ್ಕಾಗಿ ಪಾಶುಪತರು ತಮ್ಮ ಹೃದಯದಲ್ಲಿರುವ ಮೂರು ಲಿಂಗಗಳಿಗೆ ಅರ್ಪಿಸುತ್ತಿದ್ದರು, ಎಂಬಲ್ಲಿ ತೀರ್ಥದ ನೀರನ್ನು ತ್ರಿಲಿಂಗಕ್ಕರ್ಪಿಸುವ ವಿಷಯವು ಹೇಳಲ್ಪಟ್ಟಿದೆ. ವೀರಶೈವರು ಹೀಗೆ ಹೊಂಡದ ನೀರನ್ನು ತ್ರಿಲಿಂಗಕ್ಕೆ ಅರ್ಪಿಸುವವರಲ್ಲ. ಪಾಶುಪತರು ತಮ್ಮ ಹೃದಯದಲ್ಲಿನ ಲಿಂಗವು ಕಂಠಸ್ಥಳದಲ್ಲಿ ಮನಸ್ಸಿನಲ್ಲಿ ಭಾವದಲ್ಲಿ ಮೂರುಲಿಂಗಗಳಾಗಿ ವ್ಯಾಪಿಸಲ್ಪಟ್ಟಿರುವುದೆಂದು ಭಾವಿಸಿದ್ದರು. ಆದುದರಿಂದಲೇ ತಾವು ಕುಡಿಯುತ್ತಿದ್ದ ನೀರನ್ನು ಆ ಲಿಂಗಗಳಿಗೆ ಅರ್ಪಿಸಿದವರು ಉತ್ತಮರಾದ ಮನುಷ್ಯರು ಎಂದು ತಿಳಿಯುತ್ತಿದ್ದರು. ಹೀಗೆ ಮೂರುಲಿಂಗಗಳಿಗರ್ಪಿಸುವವರು ಮನುಷ್ಯರು ಎಂಬ ಭಾವನೆ ಅವರಲ್ಲಿದ್ದುದರಿಂದ ಅವರ ಹೃದಯದಲ್ಲಿನ ಲಿಂಗವಾಗಲಿ ಅವರ ಸಂಬಂಧದ ತ್ರಿಲಿಂಗಗಳಾಗಲಿ ಮನುಷ್ಯನಿಗಿಂತ ಭಿನ್ನವಾದವುಗಳು ಎಂಬ ಅಭಿಪ್ರಾಯವು ಹೊರಬೀಳುತ್ತದೆ. ವೀರಶೈವರಲ್ಲಿ ಹೃದಯದಲ್ಲಿನ ಲಿಂಗದ ಭಾವನೆ ಇಲ್ಲ. ಮಸ್ತಕದಲ್ಲಿನ ಚಿತ್ಕಳೆಯಿಂದ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಾಗುವುವೆಂದು ಭಾವಿಸುತ್ತಾರೆ. ಇದರಿಂದ ಇವರ ತನುವೂ ಲಿಂಗ, ಮನವೂ ಲಿಂಗ, ಭಾವವೂ ಲಿಂಗವಾಗಿ ಇವರು ಲಿಂಗರೂಪವೇ ಆಗುತ್ತಾರೆ. ಮನುಷ್ಯತ್ವವು ಇವರಲ್ಲಿ ಉಳಿದಿರುವುದಿಲ್ಲ. ತನುವೇ ಲಿಂಗ, ಮನವೇ ಲಿಂಗ, ಭಾವವೇ ಲಿಂಗ ಎಂದು ಪೂರ್ಣವಾಗಿ ವೀರಶೈವರು ತಿಳಿದಿರುವುದಕ್ಕೆ ಬದಲಾಗಿ ಹೃದಯದಲ್ಲಿ ಧ್ಯಾನಲಿಂಗ, ಮನದಲ್ಲಿ ಚಿಂತನ ಲಿಂಗ, ಮಂತ್ರದಲ್ಲಿ ಜಪರೂಪ ಲಿಂಗ ಎಂದು ಲಿಂಗವನ್ನು ಮೂರು ಕಡೆಯಲ್ಲಿ ಭಿನ್ನವಾಗಿ ತಿಳಿಯುವುದು ಪಾಶುಪತರ ಪದ್ಧತಿಯಾಗಿದೆ. ಆದುದರಿಂದಲೇ ಮನುಷ್ಯರಾಗಿ ತಾವು ಕುಡಿಯುವ ನೀರನ್ನು ಲಿಂಗಕ್ಕರ್ಪಿಸಿ ಕುಡಿಯುವವರು ಮನುಷ್ಯೋತ್ತರು ಎಂಬ ಭಾವನೆಯು ಅವರಲ್ಲಿ ಚನ್ನಾಗಿ ಮೂಡಿ ಇದೆ. ಆದುದರಿಂದ ವೀರಶೈವರ ಇಷ್ಟ ಪ್ರಾಣ ಭಾವಲಿಂಗಗಳಿಗೆ ಪಾಶುಪತರ ಮೂರು ಲಿಂಗಗಳ ಹೋಲಿಕೆಯು ಸರಿಬರುವುದಿಲ್ಲ. ವೀರಶೈವರಿಗೆ ಹೊಂಡದ ನೀರನ್ನು ಕುಡಿದು ಸಿದ್ಧರಾಗಬೇಕೆಂಬ ವಿಧಾಯಕವೂ ಇಲ್ಲ. ಪಾಶುಪತರಲ್ಲಿ ಗರ್ಗಮಹಾಮುನಿ ಎಂಬ ಹೆಸರುಳ್ಳ ಪಾಶುಪತಾಚಾರ್ಯನು ಓಂಕಾರೇಶ್ವರ ಎಂಬ ಸ್ಥಾವರ ಲಿಂಗವನ್ನು ಆರಾಧಿಸುತ್ತಿದ್ದನು. ಎಂದಿಷ್ಟು ಮಾತ್ರ ತಿಳಿದು ಬಂದಿದೆ. ಮೇಲೆ ಹೇಳಿದ ಪಾಶುಪತಧಾರ್ಮಿಕ ಆಚಾರಿಗಳು ದಮನ

ಶ್ರೀಕಂಠ ಮೊದಲಾದ ಪಾಶುಪತ ಸಿದ್ಧರಲ್ಲಿ ರೂಢಿಯಲ್ಲಿದ್ದವೆಂದು ತಿಳಿದು ಬರುತ್ತದೆ. ಈ ಮುಖ್ಯ ವಿಷಯಗಳಲ್ಲಿನ ಸಂಗತಿಗಳಿಂದ ಪಾಶುಪತರಾಗಲೀ ಪಾಶುಪತ ಸಿದ್ಧರಾಗಲೀ ಈಗಿನ ಷಟ್‌ಸ್ಥಲ ವೀರಶೈವರ ಆಚರಣೆಯಂತೆ ನಡೆಯುತ್ತಿರಲಿಲ್ಲ. ಆದುದರಿಂದ ಇವರನ್ನು ವೀರಶೈವರೆಂದು ತಿಳಿಯಲಾಗುವುದಿಲ್ಲ. ಈ ಪಾಶುಪತರು ವ್ಯಾಸಋಷಿಯ ಕಾಲದಲ್ಲಿ ಕಾಶಿಯಲ್ಲಿದ್ದರು. ಎಂಬುದು ಮೇಲಿನ ಆಧಾರಗಳಿಂದ ಸಿದ್ಧವಾಗುತ್ತದೆ. ವ್ಯಾಸ ಋಷಿಗಿಂತಲೂ ಬಹು ಪೂರ್ವದಲ್ಲಿ ಪ್ರಬಲವಾಗಿದ್ದ ಹರಪ್ಪ ಮೊಹೆಂಜೋದಾರೊ ಪಟ್ಟಣಗಳಲ್ಲಿ ಇದೇ ನಮೂನೆಯ ಪಾಶುಪತರಿದ್ದರೆಂಬುದನ್ನು ಸೂಚಿಸುವ ಕೆಲವು ಆಧಾರಗಳು ಮೇಲಿನ ಶ್ಲೋಕಗಳಲ್ಲಿ ಕಾಣಬರುತ್ತವೆ.

ಇಷ್ಟರ ಮೇಲಿಂದಲೇ ವೀರಶೈವರು ಬಹು ಪ್ರಾಚೀನದಲ್ಲಿ ಇದ್ದಿಲ್ಲವೆಂದು ತಿಳಿಯಲಿಕ್ಕೆ ಆಗುವುದಿಲ್ಲ. ಅಮರಸಿಂಹನು ರಚಿಸಿದ ಅಮರಕೋಶ ಎಂಬ ನಿಘಂಟಿನಲ್ಲಿ "ಸಂಘಾತೇ ಪ್ರಮಥೇ ಗಣಃ" ಎಂದರೆ ಗುಂಪಿನಲ್ಲಿಯೂ ಪ್ರಮಥರಲ್ಲಿಯೂ ಗಣ ಎಂಬ ಶಬ್ದವು ವರ್ತಿಸುತ್ತದೆ, ಎಂದು ಅಮರಸಿಂಹನು ಹೇಳಿದ್ದಾನೆ. ಈ ಅಮರಸಿಂಹನ ಕಾಲವು ಹಿಂದೆ ಸುಮಾರು ೧೬೦೦ ವರ್ಷ. ಇವನು ಪ್ರಮಥಗಣಂಗಳಿದ್ದರೆಂದು ಒಪ್ಪಿಕೊಂಡಿರುವುದರಿಂದ ಈ ಪ್ರಮಥಗಣಂಗಳು ಅಮರಸಿಂಹನಿಗಿಂತ ಮುಂಚೆಯೇ ಇದ್ದರೆಂಬುದು ನಿರ್ವಿವಾದವಾಗಿ ತಿಳಿಯುವಂತಾಗಿದೆ. ಪ್ರಮಥ ಶಬ್ದವು ಭಾರತೀಯರ ಬಹು ಪ್ರಾಚೀನದ ಗ್ರಂಥಗಳಲ್ಲಿ ಕಂಡುಬರುತ್ತದೆ. ಈ ಪ್ರಮಥರು ಕೈಲಾಸದ ಶಿವನ ಸಭೆಯಲ್ಲಿ ಇದ್ದರು ಎಂಬುದು ಗ್ರಂಥಗಳಲ್ಲಿ ಘಂಟಾಘೋಷವಾಗಿದೆ. ಈ ಪ್ರಮಥರಲ್ಲಿ ಈಗಿನ ವೀರಶೈವರ ಆಚಾರದಂತಹ ಧಾರ್ಮಿಕ ವರ್ತನೆ ಇದ್ದಿತೆಂದು ಸೂಚಿಸುವ ಕೆಲವು ಅಂಶಗಳು ಕಂಡುಬರುತ್ತಿವೆ. ಈ ಲೇಖನದ ಪ್ರಾರಂಭಭಾಗದಲ್ಲಿ ಹೇಳಲ್ಪಟ್ಟ "ಅಪ್ರಕಾಶಿತಾ ಉಪನಿಷದಃ" ಎಂಬ ಪುಸ್ತಕದಲ್ಲಿನ ಸಿದ್ಧಾಂತ ಶಿಖೋಪನಿಷತ್ತಿನಲ್ಲಿ "ಗಣೈಃಶೈಲಂ" ಗಣಂಗಳಿಂದ ಶೈಲಲಿಂಗವು (ಶಿಲಾಲಿಂಗ) ಪೂಜಿಸಲ್ಪಟ್ಟದ್ದಿತೆಂದು ಉಕ್ತವಾಗಿದೆ. ಈ ಗಣಂಗಳೇ ಪ್ರಮಥಗಣಂಗಳೆಂದು ಈ ಪ್ರಮಥರು ಧರಿಸುತ್ತಿದ್ದ ಶಿಲಾಲಿಂಗವೇ ವೀರಶೈವರು ಧರಿಸುತ್ತಿದ್ದ ನೀಲಬಣ್ಣದ ಲಿಂಗದ ನಮೂನೆಯೆಂದು ಊಹಿಸುವಂತಾಗಿದೆ. ಹರಪ್ಪ ಮೊಹೆಂಜೊದಾರೋ ಪಟ್ಟಣಗಳಲ್ಲಿ ಶಿಲಾಲಿಂಗಗಳು ಬಹಳವಾಗಿ ದೊರಕಿವೆ. ಕಲ್ಯಾಣದ ಬಸವೇಶ್ವರನೇ ಮೊದಲಾದವರಿಗೆ "ಬಸವಾದಿ ಪ್ರಮಥರು" ಎಂದು ಕರೆದಿರುವುದು ಅನೇಕ ಕಡೆಗಳಲ್ಲಿ ಇದೆ. ಕೈಲಾಸದ ಪ್ರಮಥರಲ್ಲಿ ಇದ್ದ ಆಚರಣೆಯೇ ಬಸವಾದಿಗಳಲ್ಲಿ ಇದ್ದುದರಿಂದ ಇವರೂ ಪ್ರಮಥರೆಂದು ಕರೆಯಲ್ಪಟ್ಟಿದ್ದಾರೆ. ಈ ದೆಸೆಯಿಂದ ನೀಲಬಣ್ಣದ ಲಿಂಗಧಾರಿಗಳಾದ ಪ್ರಮಥರೂ ಹರಪ್ಪ ಮೊಹೆಂಜೊದಾರೋ ಪಟ್ಟಣ

ಗಳಲ್ಲಿ ಇದ್ದರಿಂದು ಊಹಿಸಲಿಕ್ಕೆ ಅನುಮಾನವಿಲ್ಲ. ಆದರೆ ಬಸವೇಶ್ವರನ ವಚನ ಗಳಲ್ಲಿ ಪಾಶುಪತದ ವಿಷಯವು ಸಂಬಂಧಿಸದೇ ಉಳಿದಿಲ್ಲ. "ಬಾರದು ಬಾರದು ಪಶುಪತಿವ್ರತವು ವಿಷಯಿಗೆ" ಎಂಬ ವಾಕ್ಯವು ಬಸವೇಶ್ವರನ ವಚನದಲ್ಲಿ ಇದೆ. ಇದರಿಂದ ಪಾಶುಪತರ ವ್ರತವನ್ನು ಬಸವೇಶ್ವರನು ಒಪ್ಪಿಕೊಂಡಂತೆ ವ್ಯಕ್ತವಾಗುತ್ತದೆ. ಈ ಪಾಶುಪತರ ವ್ರತವು ಮೇಲೆ ಹೇಳಿದ ಪಾಶುಪತ ಪಾಶುಪತಸಿದ್ಧರ ಆಚಾರವಲ್ಲ. ಪಾಶುಪತರ ಆಚಾರಕ್ಕೂ ಪಾಶುಪತವ್ರತಿಗಳ ಆಚಾರಕ್ಕೂ ಬಹಳ ವ್ಯತ್ಯಾಸವಿದೆ. ಬಹು ಪ್ರಾಚೀನದಲ್ಲಿದ್ದ ಪ್ರಮಥರ ಆಚಾರವು ಸಾವಿರಾರು ವರ್ಷ ಗಳ ತರುವಾಯ ಪಾಶುಪತವ್ರತವಾಗಿ ಬದಲಾಯಿಸಲ್ಪಟ್ಟಿರಬೇಕು. ಈ ಪ್ರಮಥಾಚಾರ ಪಾಶುಪತವ್ರತಾಚಾರ ಇವುಗಳ ವಿಷಯವಾಗಿ ಇನ್ನೂ ಬಹಳ ಶೋಧನೆ ನಡೆಯಬೇಕಾಗಿದೆ.

ರೇವಾನದಿಯ ದಡದಿಂದ ಕಾಶಿಗೆ ಗರ್ಗಮಹಾಮುನಿಯು ಅನೇಕ ಪಾಶುಪತ ರೊಡನೆ ಬಂದನೆಂದು ಮೇಲೆ ಹೇಳಲ್ಪಟ್ಟಿದೆ. ರೇವಾನದಿಯು ಪಂಜಾಬ ದೇಶದಲ್ಲಿ (ಈಗ ಪಶ್ಚಿಮ ಪಾಕಿಸ್ಥಾನ) ಇರುವ ರಾವಿ ನದಿಯಾಗಿರಬೇಕು. ಈ ಸಂಗತಿ ಸರಿಯಾ ದರೆ ಪಂಜಾಬಿನಿಂದ ಕಾಶಿಗೆ ಪಾಶುಪತರು ಹೋದರೆಂದು ತಿಳಿಯಲಿಕ್ಕೆ ಬರುತ್ತದೆ. ಹರಪ್ಪ ಮೊಹೆಂಜೊದಾರೋ ಪಟ್ಟಣಗಳು ಪಂಜಾಬಿಗೆ ಆಗ್ನೇಯ ಮೂಲೆ ಯಲ್ಲಿ ಇರುವುದರಿಂದ ಬಹು ಪ್ರಾಚೀನ ಕಾಲದಲ್ಲಿ ಆ ಪಟ್ಟಣಗಳಿಗೂ ಕಾಶಿಗೂ ಹೋಗಿ ಬರುವ ಪ್ರಚಾರವು ರೂಢಿಯಲ್ಲಿದ್ದಿತೆಂದು ತಿಳಿಯಲಿಕ್ಕೆ ಬರುವಂತಿದೆ.

ದೂರ್ವಾಸ ಋಷಿಯು ಶಂಭವಿನ ಆನಂದ ಕಾನನಕ್ಕೆ ಹೋದನೆಂದು ತಿಳಿದು ಬರುತ್ತದೆ. ಈ ಶಂಭವಿನ ಆನಂದ ಕಾನನವು ಪಂಜಾಬ ದೇಶದ ಸಮೀಪದಲ್ಲಿಯೇ ಇದ್ದಿರಬಹುದೆಂದು ಊಹಿಸಲಾವಕಾಶವಿದೆ.

ಕಾಶಿಯಲ್ಲಿರುವ ಕಪಿಲ ಋಷಿಯ ಪ್ರತಿಮೆ ದಕ್ಷಬ್ರಹ್ಮನ ಪ್ರತಿಮೆ ಇವು ಗಳನ್ನು ನೋಡಿದಾಗ ಇವರು ಲಿಂಗಧಾರಕರಾಗಿದ್ದರೆಂದು ತಿಳಿಯಲಿಕ್ಕೆ ಬರುತ್ತದೆ. ಹಾವೇರಿಯಲ್ಲಿ ಸಿದ್ಧೇಶ್ವರ ದೇವಾಲಯದಲ್ಲಿಯೂ ಲಿಂಗಾಧಾರಕರಾದ ಋಷಿಗಳ ಪ್ರತಿಮೆಗಳಿವೆ. ಕಾಶಿಯಲ್ಲಿ ನರಕಾರ್ಣವತಾರಕ–ಎಂಬ ಹೆಸರಿನ ಪಂಚಮುಖ ಮೂರ್ತಿ ಶಿರಸಿನಲ್ಲಿ ಗಂಗೆ ಇರುವ ಕೈಲಾಸದ ಶಿವನ ಪ್ರತಿಮೆಯನ್ನು ನೋಡಿ ಕೈಲಾಸದ ಶಿವನೂ ಲಿಂಗಾಧಾರಕನಾಗಿದ್ದನೆಂದು ನಿರ್ಣಯಿಸಲಿಕ್ಕೆ ಬರುತ್ತದೆ. ಇದು ಅಲ್ಲದೆ ಶಿವಯೋಗೀಶ್ವರ ಎಂಬ ಹೆಸರಿನ ಮೂರ್ತಿಗಳು ಉತ್ತರ ಹಿಂದೂಸ್ಥಾನದಲ್ಲಿ ಒಂದು ದಕ್ಷಿಣ ಹಿಂದೂಸ್ಥಾನದಲ್ಲಿ ಒಂದು ಇರುವುದಾಗಿ ಶಾಸನದ ಇಲಾಖೆಯ ವರದಿಗಳಲ್ಲಿ ಹೇಳಲ್ಪಟ್ಟಿರುವುದಾಗಿ ಹಿಂದೆ ಹೇಳಿದೆ. ಇವುಗಳಿಂದಲೂ ಯೋಗೀಶ್ವರ ನಾದ ಶಿವನು ಲಿಂಗಾಧಾರಕನಾಗಿದ್ದನೆಂದು ವ್ಯಕ್ತವಾಗುತ್ತದೆ. ಇವೆಲ್ಲಾ ಸಂಗತಿ ಗಳಿಂದ ಅನೇಕ ಸಾವಿರ ವರ್ಷಗಳ ಸಿಂಧೂದೇಶದಲ್ಲಿಯೂ ಆ ಮುಂದೆ ಅಥವಾ

ಅದರ ಪ್ರಾಬಲ್ಯ ಕಾಲದಲ್ಲಿ ಕಾಶಿಯಲ್ಲಿಯೂ ಲಿಂಗಧಾರಕರ ಸಂಖ್ಯೆಯು ಅಸಂಖ್ಯಾತವಾಗಿ ಇದ್ದಿತೆಂದು ತಿಳಿಯಲವಕಾಶವಾಗಿದೆ. ಈಗ ಬಹಿರಂಗವಾಗಿ ಪ್ರಸಿದ್ಧವಾಗಿರುವ ಕಾಶೀಕ್ಷೇತ್ರವೇ ಲಿಂಗಧಾರಕರ ಚರಿತ್ರೆಯನ್ನು ಶೋಧಿಸುವ ಸ್ಥಾನವಾಗಿದೆ. ಈ ಕಾಶಿಯು ೫-೬ ಸಾವಿರ ವರ್ಷಗಳಿಂದಲೂ ಇದ್ದ ಪಟ್ಟಣವೆಂದು ಹೇಳಬಹುದಾಗಿದೆ. ಕೈಲಾಸದ ಶಿವನ ಕಾಲದಲ್ಲಿಯೂ ಆ ತರುವಾಯವೂ ಲಿಂಗ ಪ್ರತಿಷ್ಠಾಪನೆ ಮಾಡಿದ ಅನೇಕಾನೇಕ ಶಿವಾಲಯಗಳು ಇದ್ದವೆಂದು ನಿರ್ಣಯಿಸುವಲ್ಲಿ ಅನುಮಾನವೇನೂ ಇಲ್ಲ.

### ಸ್ಕಾಂದ ಪುರಾಣದೊಳಗಿನ ಕೇದಾರ ಖಂಡ

ತಥಾ ಚ ವೀರಭದ್ರಾಂಶಾಃ ಪೂಜಾರ್ಥಮಮರೈಃ ಕೃತಾಃ
ತತ್ರವಿಂಶತಿ ಸಂಸ್ಕಾರಾಸ್ತೇಷಾಮಷ್ಟಾಧಿಕಾಽಭವನ್
ಕಥಿತಾಶ್ಶಂಕರೇಣೈವ ಲಿಂಗಸ್ಯಾರ್ಚನಸೂಚಕಾಃ
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಸ್ಸನಾತನಾಃ
ವೀರಭದ್ರೋ ಯಥಾ ರುದ್ರಸ್ತ್ವನ್ಯೇ ಗುರವಃ ಸ್ಮೃತಾಃ
ಗುರೋರ್ಜಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ
ಲಿಂಗಸ್ಯ ಮಹಿಮಾನಂತು ನಂದೀ ಜಾನಾತಿ ತತ್ವತಃ
ತಥಾ ಸ್ಕಂದೋಹಿ ಭಗವಾನನ್ಯೇ ನಾಮಧಾರಕಾಃ
ಯಥೋಕ್ತಾಃ ಶಿವಧರ್ಮಾಹಿ ನಂದಿನಾಃ ಪರಿಕೀರ್ತಿತಾಃ
ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ
ಶವಸ್ಯೋಪರಿಲಿಂಗಂ ಚ ಧ್ರಿಯತೇ ಚ ಪುರಾತನೈಃ
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಂ
ಏತೇ ಧರ್ಮಾಃಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ
ಧರ್ಮಾಃ ಪಾಶುಪತಃ ಶ್ರೇಷ್ಠಃ ಸ್ಕಂದೇನ ಪ್ರತಿಪಾಲಿತಃ
ಶುದ್ಧಾ ಪಂಚಾಕ್ಷರೀ ವಿದ್ಯಾ ಪ್ರಸಾದೀ ತದನಂತರಂ
ಷಡಕ್ಷರೀ ತಥಾ ವಿದ್ಯಾ ಪ್ರಸಾದಸ್ಯ ಚ ದೀಪಿಕಾ
ಸ್ಕಂದಾತ್ತತ್ಸ ಮನು ಪ್ರಾಪ್ತಮಗಸ್ತ್ಯೇನ ಮಹಾತ್ಮನಾ
ಪಶ್ಚಾದಾಚಾರ್ಯ ಭೇದೇನ ಹ್ಯಾಗಮಾ ಬಹವೋಽಭವನ್

### ಆಚಾರ್ಯರಿಂದ ಆಗಮಗಳು

ಕಿಂನು ಪ್ರೈ ಬಹುನೋಕ್ತೇನ ಶಿವ ಇತ್ಯಕ್ಷರದ್ವಯಂ
ಉಚ್ಚಾರಯಂತಿ ಯೇ ನಿತ್ಯಂ ತೇ ರುದ್ರಾ ನಾತ್ರ ಸಂಶಯಃ
ಸತಾಂ ಮಾರ್ಗಂ ಪುರಸ್ಕೃತ್ಯ ಯೇ ಸರ್ವೇ ತೇ ಪುರಾಂತಕಾಃ
ವೀರಮಾಹೇಶ್ವರಾ ಜ್ಞೇಯಾಃ ಪಾಪಕ್ಷಯಕರಾ ನೃಣಾಂ

ಪ್ರಸಂಗೇನಾನುಷಂಗೇನ ಶ್ರದ್ಧಯಾ ಯದೃಚ್ಛಯಾ
ಶಿವಭಕ್ತಿಂ ಪ್ರಕುರ್ವಂತಿ ಯೇ ವೈತೇ ಯಾಂತಿ ಸದ್ಗತಿಂ

**(ಕೇ. ಖಂ. ಅಧ್ಯಾಯ ೭ ಪುಟ ೧೧-೧೨)**

(ಈ ಶ್ಲೋಕಗಳ ತಾತ್ಪರ್ಯವು ಹೀಗೆ ಇದೆ) :— ವೀರಭದ್ರನ ಅಂಶವವರು ದೇವತೆಗಳಿಂದ ಪೂಜೆಗೋಸ್ಕರವಾಗಿ ಅಂಗೀಕರಿಸಲ್ಪಟ್ಟರು. ಅವರ ಸಂಸ್ಕಾರಗಳು ೨೮ ಇದ್ದವು. ಇವು ಲಿಂಗಾರ್ಚನೆಯ (ಲಿಂಗವನ್ನು ಧರಿಸಿ ಲಿಂಗವಾಗಿ ಲಿಂಗವನ್ನು ಅರ್ಚಿಸುವ) ಸೂಚಕಗಳೆಂದು ಶಂಕರನಿಂದಲೇ ಹೇಳಲ್ಪಟ್ಟವುಗಳಾಗಿವೆ. ಇವು ರುದ್ರನಿಂದ ಹೇಳಲ್ಪಟ್ಟವುಗಳಾಗಿ ಸನಾತನ ಶಿವಧರ್ಮಗಳೆನಿಸಿಕೊಂಡು ಇರುತ್ತವೆ. ರುದ್ರನು ಹೇಗೋ ಹಾಗೆ ವೀರಭದ್ರನೂ ಇತರರೂ ಗುರುಗಳೆಂದು ತಿಳಿಯಲ್ಪಡುತ್ತಾರೆ. ಗುರುವಿನಿಂದ ಹುಟ್ಟಿದವರೇ ಗುರುಗಳು, ಎಂಬುದಾಗಿ ಮೂರು ಲೋಕದಲ್ಲಿ ಪ್ರಖ್ಯಾತರಾಗಿದ್ದಾರೆ ಲಿಂಗದ ಮಹಿಮೆಯನ್ನು ಯಥಾಸ್ಥಿತವಾಗಿ ನಂದೀಶ್ವರನು ತಿಳಿದಿದ್ದಾನೆ. ಹಾಗೆಯೇ ಭಗವಂತನಾದ ಷಣ್ಮುಖನು ತಿಳಿದಿದ್ದಾನೆ. ಉಳಿದವರು ಹೆಸರನ್ನು ಮಾತ್ರ ಧರಿಸಿದ ಗುರುಗಳು ಶಿಲಾದ ಋಷಿಯ ಮಗನಾದ ನಂದೀಶ್ವರನಿಂದ ಯಥಾಸ್ಥಿತವಾಗಿ ಹೇಳಲ್ಪಟ್ಟವುಗಳು. ಶಿವಧರ್ಮಗಳೆಂದು ಹೆಸರಾದವುಗಳು. ಲಿಂಗಧಾರಕರು ವಿಚಿತ್ರ ಲಕ್ಷಣಗಳುಳ್ಳವರು. ಹೆಣದ ಮೇಲೆ ಲಿಂಗವನ್ನು ಈ ಪುರಾತನರು (ಲಿಂಗಧಾರಕರು) ಧರಿಸುತ್ತಾರೆ. ಲಿಂಗದೊಡನೆ ಸಾಯುವುದು. ಲಿಂಗದೊಡನೆ ಬದುಕುವುದು ಈ ಶಿವಧರ್ಮ ಲಕ್ಷಣಗಳು ಶಿವಾದ ಪುತ್ರನಾದ ನಂದೀಶ್ವರನಿಂದ ಪ್ರತಿಷ್ಠಿಸಲ್ಪಟ್ಟವುಗಳಾಗಿವೆ. ಷಣ್ಮುಖನಿಂದ ಪಾಶುಪತ ಶ್ರೇಷ್ಠ ಧರ್ಮವು ಪ್ರತಿಪಾದಿಸಲ್ಪಟ್ಟಿದಾಗಿದೆ. ಶುದ್ಧವಾದ ಪಂಚಾಕ್ಷರೀ ವಿದ್ಯೆಯು ಪ್ರಸಾದಿ (ಪ್ರಸನ್ನತೆಯುಳ್ಳದ್ದು) ಆಗಿದೆ. ಆ ಮೇಲೆ ಅದರಂತೆಯೇ ಷಡಕ್ಷರೀ ವಿದ್ಯೆಯು ಪ್ರಸಾದದ ದೀಪ (ಜ್ಯೋತಿ) ಯಾಗಿದೆ. ಷಣ್ಮುಖನಿಂದ ಅಗಸ್ತ್ಯಋಷಿಗೆ ಚನ್ನಾಗಿ ಬೋಧಿಸಲ್ಪಟ್ಟಿದೆ. ಆ ಮೇಲೆ ಬಹು ವಿಧವಾದ ಆಚಾರ್ಯರ ಭೇದದಿಂದ ಬಹಳ ವಿಧವಾದ ಆಗಮಗಳು ಹುಟ್ಟಿದವು. ಬಹಳ ಮಾತಿನಿಂದ ಹೇಳಿ ಏನು ಪ್ರಯೋಜನ? "ಶಿವ" ಎಂಬ ಎರಡಕ್ಷರಗಳು ಮುಖ್ಯ. ಯಾರು ಈ ಎರಡು ಅಕ್ಷರಗಳನ್ನು ನಿತ್ಯವೂ ಉಚ್ಚರಿಸುತ್ತಾರೆಯೋ ಅವರು ರುದ್ರರು, ಇದಕ್ಕೆ ಸಂಶಯವಿಲ್ಲ. ಈ ಸದ್ಧರ್ಮದವರ ಮಾರ್ಗವನ್ನು ಯಾರು ಅಂಗೀಕರಿಸಿ ನಡೆಯುವರೋ ಅವರು ಶಿವರೂಪಿಗಳು, ಅವರು ಮನುಷ್ಯರಿಗೆ ತಗಲಿದ ಪಾಪವನ್ನು ಹೋಗಲಾಡಿಸುವವರಾಗಿ "ವೀರಮಾಹೇಶ್ವರರು" ಎಂದು ತಿಳಿಯಲ್ಪಡುತ್ತಾರೆ. ತಾತ್ಕಾಲಿಕ (ಒದಗಿದ ಸಂದರ್ಭ) ವಾಗಲಿ, ಬಳಿವಿಡಿದಾಗಲೀ, ಶ್ರದ್ಧೆಯಿಂದಾಗಲೀ, ಮನಸ ಬಂದಾಗಲಾಗಲೀ, ಯಾರು ಶಿವಭಕ್ತಿ (ಶಿವಧರ್ಮದ ಭಕ್ತಿ) ಯನ್ನು ಮಾಡುವರೋ ಅವರು ಸದ್ಗತಿ (ಸದ್ಧರ್ಮ ಗತಿ) ಯನ್ನು ಹೊಂದುತ್ತಾರೆ. ಹೀಗೆ ಹೇಳಲ್ಪಟ್ಟ ಅಂಶಗಳಿಂದ ತಿಳಿಯಬೇಕಾದುದೇನೆಂದರೆ :—

ಲಿಂಗಧಾರಿಗಳ ವಿಷಯವನ್ನು ತಿಳಿಯಲು ಇದೊಂದು ಮುಖ್ಯ ಭಾಗ, ಎಂದು ತಿಳಿಯಬೇಕಾಗಿದೆ. ಈ ಭಾಗದಲ್ಲಿ ಹೇಳಲ್ಪಟ್ಟ ವಿಷಯಗಳನ್ನು ಚನ್ನಾಗಿ ಸಮನಿಸ ಬೇಕಾಗಿದೆ. ಇದರಲ್ಲಿ ಕೈಲಾಸದ ಶಿವನ ಸುದ್ದಿಯೂ ಇದೆ. "ಲಿಂಗಾರ್ಚನೆ ಮಾಡುವುದನ್ನು ಸೂಚಿಸುವ ೨೮ ಸಂಸ್ಕಾರಗಳು ಕೈಲಾಸದ ಶಿವನಿಂದ ಹೇಳಲ್ಪಟ್ಟವು ಗಳು. ವೀರಭದ್ರನ ವಂಶದವರು ಲಿಂಗಾರ್ಚನೆ ಮಾಡುವರಾಗಿದ್ದರು. ದೇವತೆಗಳು ವೀರಭದ್ರನ ಅಂಶದವರೇ ಗುರುಗಳೆಂದು ನಂಬಿದ್ದರು, ಎಂಬ ಹೇಳಿಕೆಯಿಂದ ಕೈಲಾಸದಲ್ಲಿನ ಶಿವನು ಹೇಳಿದ ಲಿಂಗಾರ್ಚನೆಯ ಸಂಬಂಧದ ೨೮ ಸಂಸ್ಕಾರಗಳು ದೇಹದಲ್ಲಿ ಲಿಂಗವ ಧರಿಸಿದ ವೀರಶೈವರ ಸಂಸ್ಕಾರಗಳೇ ಎಂದು ತಿಳಿಯಬಹುದಾಗಿದೆ. ಇವೇ ಸನಾತನ ಶಿವ ಧರ್ಮಗಳು ಆಗಿವೆ. ಬದುಕಿದ್ದಾಗಲೂ ದೇಹದಲ್ಲಿ ಲಿಂಗ ಸತ್ತಾಗಲೂ ದೇಹದ ಮೇಲೆ ಲಿಂಗ, ಎಂಬದಾಗಿ ಮೇಲೆ ಹೇಳಿರುವುದು. ವೀರಶೈವರ ಲಿಂಗಧಾರಣ ಸಂಸ್ಕಾರವನ್ನೇ ತೋರಿಸುತ್ತದೆ. ಈಗಲೂ ವೀರಶೈವರಲ್ಲಿ ಈ ಸಂಸ್ಕಾರವೇ ರೂಢಿಯಲ್ಲಿ ಇದೆ. ಕೆರೆಯ ಪದ್ಮರಸರು ದೀಕ್ಷಾಬೋಧೆ ಎಂಬ ತಮ್ಮ ಗ್ರಂಥದಲ್ಲಿ "ಶಿವಧರ್ಮ, ಶಿವರಹಸ್ಯ" ಎಂಬ ಎರಡು ಗ್ರಂಥಗಳನ್ನೇ ಬಹಳ ಕಡೆ ಪ್ರಮಾಣವಾಗಿ ತೆಗೆದುಕೊಂಡಿರುವುದರಿಂದ ಶಿವಧರ್ಮ ಗ್ರಂಥದಲ್ಲಿನ ವಿಷಯ ಗಳೇ ಇಲ್ಲಿ ಕೈಲಾಸದ ಶಿವನು ಹೇಳಿದ ಸನಾತನ ಶಿವಧರ್ಮಗಳೆಂದು ಊಹಿಸಬಹು ದಾಗಿದೆ. "ಕೈಲಾಸದ ಶಿವನ ಹಾಗೆಯೇ ಕೈಲಾಸದಲ್ಲಿನ ವೀರಭದ್ರನೂ ಗುರುವು ಹಾಗೆಯೇ ಉಳಿದವರೂ ಗುರುಗಳೆಂದು ತಿಳಿಯಲ್ಪಡುತ್ತಾರೆ. ಗುರುವಿನಿಂದ ಹುಟ್ಟಿ ದವರೇ ಗುರುಗಳು" ಈ ಅಭಿಪ್ರಾಯದಿಂದ ಕೈಲಾಸದ ಶಿವನು ಗುರುವಾಗಿದ್ದನು. ಎಂದು ತಿಳಿಯಬಹುದಾಗಿದೆ. ಆದಿಗುರು ಶಂಭುಲಿಂಗ ಎಂದು ನಿಜಗುಣರು ಹೇಳಿರುವುದು ಇದೆ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. ಅನೇಕ ವೀರಶೈವ ಗ್ರಂಥಗಳು ಕೈಲಾಸದ ಶಿವನು ಗುರುವೆಂದು ಸಾರುತ್ತವೆ. "ಲಿಂಗದ ಮಹಿಮೆ ಯನ್ನು ಕೈಲಾಸದ ನಂದಿಯೊಬ್ಬನೇ ನಿಜವಾದ ಸ್ವರೂಪದಲ್ಲಿ ತಿಳಿದಿರುತ್ತಾನೆ. ಇದರಂತೆ ಶಿವನ ಮಗನಾದ ಷಣ್ಮುಖನೂ ತಿಳಿದಿದ್ದಾನೆ. ಇವರಿಬ್ಬರನ್ನೂ ನಿಜ ಗುರುಗಳೆಂದು ತಿಳಿಯಬೇಕು. ಉಳಿದವರೆಲ್ಲರೂ ಕೈಲಾಸದಲ್ಲಿ ಹೆಸರು ಮಾತ್ರಕ್ಕೆ ಗುರುಗಳು" ಎಂಬ ಮೇಲಿನ ಅಭಿಪ್ರಾಯದಿಂದ ಕೈಲಾಸದಲ್ಲಿ ನಂದೀಶ್ವರನು ಗುರು ವಾಗಿದ್ದನು ಎಂದು ಸ್ಪಷ್ಟಪಡುತ್ತದೆ. ವೀರಶೈವರಲ್ಲಿ ಅನೇಕರು ಪ್ರಾಚೀನ ಕಾಲದಲ್ಲಿ "ನಂದೀಶ್ವರನೇ ಗುರು" ಎಂದು ಹೇಳುವುದಕ್ಕೆ ಈ ಅಭಿಪ್ರಾಯವು ಆಧಾರ ವಾಗಿದೆ. "ಶಿಲಾದ ಋಷಿಯ ಮಗನಾದ ನಂದೀಶ್ವರನಿಂದ ಹೇಳಲ್ಪಟ್ಟ ಯಥಾ ಸ್ಥಿತವಾದ ಧರ್ಮಗಳು ಶಿವಧರ್ಮಗಳಾಗಿವೆ, ಎಂಬ ಹೇಳಿಕೆಯಿಂದ ವ್ಯಾಸಋಷಿಯ ಸಮಕಾಲೀನನಾದ ಶೈಲಾದ ನಂದೀಶ್ವರನು ಹೇಳಿದ ಧರ್ಮಗಳೂ ಶಿವಧರ್ಮ ಗಳಾಗಿವೆ. ಲಿಂಗಧಾರಕರು ವಿಚಿತ್ರರು ಹೆಣದ ಮೇಲೆ ಲಿಂಗವು ಈ ಪುರಾತನರಿಂದ ಧರಿಸಲ್ಪಡುತ್ತದೆ. ಲಿಂಗದೊಡನೆ ಬದುಕಿ ಲಿಂಗದೊಡನೆ ಲಯವಾಗುತ್ತಾರೆ" ಎಂಬ

ಮೇಲಿನ ಹೇಳಿಕೆಯಿಂದ ಶೈಲಾದನಾದ ನಂದೀಶ್ವರನಿಂದಲೂ ಪುನಃ ಲಿಂಗಧಾರಕರ ಧರ್ಮವು ಪ್ರತಿಷ್ಠಿತವಾಗಿದೆ ಎಂದು ತಿಳಿಯಲವಕಾಶವಾಗಿದೆ. ಇಲ್ಲಿ ದೇಹದ ಮೇಲೆ ಲಿಂಗವನ್ನು ಧರಿಸುವವರು ಪುರಾತನರು ಎಂದು ಹೇಳಲ್ಪಟ್ಟಿದೆ. ಬಸವೇಶ್ವರನೇ ಮೊದಲಾದವರು ಪುರಾತನರೆಂದು ವೀರಶೈವ ಗ್ರಂಥಗಳು ಸಾರುತ್ತಲಿವೆ. ಬಸವ ಪುರಾತನರ್ ಎಂದು ಮಗ್ಗೆಯ ಮಾಯಿದೇವನು ಹೇಳಿದ್ದಾನೆ. ಬಸವೇಶ್ವರನು ನಂದೀಶ್ವರನ ಅವತಾರವೆಂದು ಕರೆಯಲ್ಪಡುವುದಕ್ಕೆ ಈ ಶೈಲಾದನಾದ ನಂದೀಶ್ವರನನ್ನೇ ಮೂಲವಾಗಿ ಇಟ್ಟುಕೊಂಡರೆಂದು ತಿಳಿಯಬೇಕಾಗಿದೆ. "ಷಣ್ಮುಖನಿಂದ ಪ್ರತಿಪಾದಿಸಲ್ಪಟ್ಟ ಧರ್ಮವು ಪಾಶುಪತ ಶ್ರೇಷ್ಠವು ಎನಿಸಿಕೊಂಡಿದೆ. ಪಂಚಾಕ್ಷರೀ ವಿದ್ಯೆಯು ಷಣ್ಮುಖನಿಂದ ಅಗಸ್ತ್ಯನಿಗೆ ಭೋಧಿಸಲ್ಪಟ್ಟಿದು. ಪ್ರಸಾದಿ(ಪ್ರಸಾದರೂಪವಾದುದು ಆಗಿದೆ.) (ಜೀವನು ಶಿವನಾಗಲಿ ಎಂಬ ಅರ್ಥವುಳ್ಳದು "ನಮಃಶಿವಾಯ" ಎಂಬ ಪಂಚಾಕ್ಷರೀ ಮಂತ್ರವು. ಜೀವವು ಶಿವನಾಗುವುದರಿಂದ "ಪ್ರಾಣಪ್ರಸಾದ" ವಾಯಿತು) ಮುಂದೆ ಷಡಕ್ಷರಿ ಮಂತ್ರವು "ಓಂ ನಮಃ ಶಿವಾಯ" ಇಲ್ಲಿ ಸೋಹಂ ಎಂಬುದರ ಬದಲಾಗಿ ಓಂ ಇರುವುದರಿಂದ ಮೇಲೆ ಕಂಡ ಪ್ರಾಣ ಪ್ರಸಾದದ ಜ್ಞಾನವಾಗಿ ಶಿವನೇ ನಾನು ಎಂಬ ಜ್ಞಾನ ಬರುವುದರಿಂದ ಅದು ಪ್ರಾಣಪ್ರಸಾದದ ಜ್ಯೋತಿಯು, ಈ ಎರಡು ಮಂತ್ರಗಳ ವಿಚಾರವು ಷಣ್ಮುಖನಿಂದ ಅಗಸ್ತ್ಯನಿಗೆ ಬೋಧೆಯಾಯಿತು. ಇದರಂತೆಯೇ ಸಿದ್ಧಾಂತ ಶಿಖಾಮಣಿಯಲ್ಲಿಯೂ "ಪಂಚಾಕ್ಷರೀ ಜಪಸ್ಥಳ" ಎಂಬ ಶಿರೋಲೇಖದ ಕೆಳಗೆ ಷಡಕ್ಷರ ಮಂತ್ರವನ್ನು ಹೇಳಿರುವುದರಿಂದ ಪಂಚಾಕ್ಷರೀವಿದ್ಯಾ ಷಡಕ್ಷರೀವಿದ್ಯಾ ಎರಡೂ ರೇಣುಕರಿಂದ ಅಗಸ್ತ್ಯರಿಗೆ ಭೋದೆಯಾದಂತಾಗಿದೆ. ಶಿವ ಎಂಬ ಎರಡಕ್ಷರಗಳ ವಾಚ್ಯರೂಪರಾಗಿ (ಉಚ್ಚರಿಸಿದವರು) ರುದ್ರರು ಎಂದು ಮೇಲೆ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುವುದು ಶಿವಭಕ್ತಿಯುಳ್ಳ "ವೀರ ಮಾಹೇಶ್ವರರಿಗಾಗಿ" ಎಂದು ತಿಳಿಯಬೇಕು. ಇವರನ್ನನುಸರಿಸಿ ಭಕ್ತಿಯಿಂದ ನಡೆಯುವ ಮನುಷ್ಯರು ಸದ್ಧರ್ಮಗತಿಯನ್ನು ಹೊಂದುತ್ತಾರೆ ಎಂದು ಮೇಲೆ ಹೇಳಲ್ಪಟ್ಟಿದೆ. ಈ ಸಂಗತಿಗಳನ್ನೆಲ್ಲಾ ಯೋಚಿಸಿದರೆ ಈಗಿನ ವೀರಶೈವರಲ್ಲಿನ ಸಂಸ್ಕಾರಗಳು ಈ ಮುಖ್ಯಭಾಗದಲ್ಲಿ ಹೇಳಲ್ಪಟ್ಟಿವೆ, ಎಂದು ತಿಳಿಯಲನುಮಾನವೇನೂ ಇಲ್ಲ. "ವೀರಮಾಹೇಶ್ವರರು" ಎಂದು ವೀರಶೈವರಿಗೆ ಕರೆದಿರುವುದು. ಗ್ರಂಥಗಳಿಂದ ಕಂಡುಬರುತ್ತದೆ. ಈ ಹಿಂದೆ ಮುಖ್ಯ ವಿಷಯಗಳು ಎಂಬುದಾಗಿ ಗೊತ್ತು ಮಾಡಲ್ಪಟ್ಟ ಪಾಶುಪತಾಚಾರಗಳು ವೀರಶೈವವಲ್ಲ. ಈಗಿನ ವೀರಶೈವರ ಆಚರಣೆಯಂತೆ ನಡೆಯುವ ಶಿವಧರ್ಮಮಾರ್ಗದವರು ಅತ್ಯಂತ ಪ್ರಾಚೀನ ಕಾಲದಲ್ಲಿಯೂ ಇದ್ದರೆಂಬುದನ್ನು ನಿರ್ವಿವಾದವಾಗಿ ಅಂಗೀಕರಿಸಲೇಬೇಕು. (ಮೇಲೆ ಧಾರ್ಮಿಕ ವಿಷಯಗಳ ಹೋಲಿಕೆಯ ವಿವರಣೆಗಾಗಿ ಮೊದಲು ಹೇಳಿದ ಅಂಶಗಳನ್ನು ಪುನಃ ವಿವರಿಸಿ ಇಲ್ಲಿ ತೋರಿಸಿದೆ )

ಈ ಹಿಂದೆ ಪಾಶುಪತಧರ್ಮವನ್ನು ನಡಸುವವರಿಗೆ ಪಾಶುಪತರು, ಪಾಶುಪತ ಸಿದ್ಧರು ಎಂದು ಕರೆದಿದ್ದಾರೆ, ಈ ಪಾಶುಪತಸಿದ್ಧರು ರುದ್ರಲೋಕಕ್ಕೆ ಹೋಗುತ್ತಾರೆ ಎಂದು ಹೇಳಿದರೆ ಇದೇ ಧರ್ಮದ ಪಾಶುಪತಶ್ರೇಷ್ಠರು, ಇವರು ರುದ್ರರೇ (ರುದ್ರ ಸ್ವರೂಪರೇ) ಎಂದು ಹೇಳಲ್ಪಟ್ಟಿರುವುದರಿಂದ ಪಾಶುಪತರಿಗೂ ಪಾಸುಪತ ಶ್ರೇಷ್ಠ ರಿಗೂ ಬಹಳ ವ್ಯತ್ಯಾಸವಿದೆ ಎಂದು ಸ್ಪಷ್ಟವಾಗಿ ತಿಳಿದುಕೊಳ್ಳುವಂತಾಗಿದೆ. ಈ ಸ್ಕಂದ ಪಾಲಿತರಾದ ಪಾಶುಪತಶ್ರೇಷ್ಠರನ್ನೇ ಬಸವೇಶ್ವರನು ತನ್ನ ವಚನಗಳಲ್ಲಿ ಹೇಳಿದ್ದಾ ನೆಯೇ ಎಂಬುದನ್ನು ಇನ್ನೂ ಪರಿಶೋಧಿಸಿ ನೋಡಬೇಕಾಗಿದೆ. ಅತಿ ಪ್ರಾಚೀನಕಾಲ ದಲ್ಲಿ ಪಾಶುಪತರಲ್ಲಿ ಅನೇಕ ಭೇದಗಳಿದ್ದವೆಂದು ಮೇಲಿನ ಅಂಶಗಳಿಂದ ನಿರ್ವಿವಾದ ವಾಗಿ ನಿರ್ಣಯಿಸಲಿಕ್ಕೆ ಬರುತ್ತದೆ. ಪಾಸುಪತ ಎಂಬ ಹೆಸರನ್ನು ಕಂಡಮಾತ್ರದಿಂದಲೇ ಅವರು ವೀರಶೈವರೆಂದು ಎಲ್ಲಾ ಕಡೆಗಳಲ್ಲಿಯೂ ತಿಳಿಯ ಲಾಗುವುದಿಲ್ಲ.

ಇಲ್ಲಿ ನಂದೀಶ್ವರನು ಎಂಬುವನು ಶಿವನ ಸಭೆಯಲ್ಲಿ ಇದ್ದವನು ಮತ್ತು ವ್ಯಾಸ ಋಷಿಯ ಸಹಕಾಲೀನನಾದ ಶಿಲಾದನ ಮಗ ನಂದೀಶ್ವರನೊಬ್ಬನು ಇವರು ಬೇರೆ ಬೇರೆ ಎಂದು ಗುರ್ತಿಸಲ್ಪಟ್ಟಿದೆ. ಆದರೆ ಎಲ್ಲಾ ಶ್ಲೋಕಗಳ ಅಭಿಪ್ರಾಯದಿಂದ ಒಬ್ಬನೇ ಎಂದು ಧ್ವನಿಯೂ ತೋರುತ್ತದೆ. ಒಬ್ಬನೇ ಎಂದು ತಿಳಿಯುವುದಾದರೆ ಶಿವ, ನಂದೀಶ್ವರ, ಷಣ್ಮುಖ, ಅಗಸ್ತ್ಯ ವೀರಭದ್ರ, ವ್ಯಾಸಋಷಿ ಇವರೆಲ್ಲರೂ ಒಂದೇ ಕಾಲದವರಾಗುತ್ತಾರೆ. ಕೈಲಾಸದ ಶಿವನ ತರುವಾಯ ಸಾವಿರಾರು ವರ್ಷಗಳ ಮೇಲೆ ವ್ಯಾಸಋಷಿಯ ಕಾಲವು ಇದ್ದಿತೆಂದು ಐತಿಹಾಸಿಕವಾಗಿ ತಿಳಿಯ ಲವಕಾಶವಿದೆ. ಹಾಗಲ್ಲದೆ ಇವರೆಲ್ಲರೂ ಒಂದೇ ಕಾಲದವರೆಂದು ತಿಳಿಯುವುದಾದರೆ ಸ್ಕಾಂದಪುರಾಣದೊಳಗಿನ ಈ ಕೇದಾರ ಖಂಡವು ಐತಿಹಾಸಿಕಕ್ಕೆ ದೂರವಾಗಿದೆ ಎಂದು ಎಲ್ಲರೂ ಚೆನ್ನಾಗಿ ತಿಳಿದಿರಬೇಕಾಗಿದೆ.

ಹರಪ್ಪ,ಮೊಹೋಂಜೋದಾರೋ ಪಟ್ಟಣಗಳಲ್ಲಿನ ಲಿಂಗಧಾರಕರ ಸಂಸ್ಕೃತಿಯು ವ್ಯಾಸಋಷಿಗಳ ಕಾಲದ ಕಾಶೀಪಟ್ಟಣದ ಲಿಂಗಧಾರಕರ ಸಂಸ್ಕೃತಿಗಿಂತ ಪ್ರಾಚೀನ ವಾದುದು ಎಂಬುದಕ್ಕೆ ಶಿವನ ಪಂಚಮುಖ ವಿಗ್ರಹವು ಲಿಂಗಧಾರಣೆಯೊಡನೆ ಕಾಶೀ ಪ್ರಾಂತದಲ್ಲಿ ಸಿಕ್ಕಿರುವುದೇ ಸಾಕ್ಷಿಯಾಗಿದೆ. ಕೈಲಾಸದ ಶಿವನ ಲಿಂಗಧಾರಣೆಯ ಸಂಸ್ಕಾರವೂ ಹರಪ್ಪ,ಮೊಹೊಂಜೋದಾರೋ ಪಟ್ಟಣಗಳಲ್ಲಿ ನೆಲೆಸಿದ್ದಿತೆಂದು ತಿಳಿಯ ಲನುಮಾನವೇನೂ ಇಲ್ಲ.

ಮುಖ್ಯಭಾಗವೆಂದು ಗುರ್ತಿಸಿದ ಮೇಲಿನ ಶ್ಲೋಕಗಳಲ್ಲಿ ರುದ್ರ ಶಂಕರ ಎಂಬ ಎರಡು ಹೆಸರುಗಳಿವೆ, ಇವು ಒಬ್ಬ ವ್ಯಕ್ತಿಗೆ ಸಂಬಂಧಿಸಿದುವುಗಳಾಗದೆ ಕಾಲಾಂತರ ದಲ್ಲಿ ಅವತರಿಸಿದ ಭಿನ್ನ ವ್ಯಕ್ತಿಗಳಿಗೆ ಸಂಬಂಧಿಸಿದವುಗಳಾಗಿವೆ ಎಂಬುದನ್ನು ಚಾರಿತ್ರಕವಾಗಿ ಇನ್ನೂ ಶೋಧಿಸಬೇಕಾಗಿದೆ. ನಂದೀಶ್ವರನು ಆಚರಿಸಿದ ಧರ್ಮವು ಶಿವಧರ್ಮವೆಂದೂ ಷಣ್ಮುಖನು ಪ್ರತಿಪಾಲಿಸಿದ ಧರ್ಮವು ಶ್ರೇಷ್ಠವಾದ ಪಾಶುಪತ

ವೆಂದೂ ಮೇಲಿನ ಶ್ಲೋಕಗಳಿಂದ ಧ್ವನಿತವಾಗುತ್ತದೆ. ಇವೆರಡಕ್ಕೂ ಭೇದವೇ ನೆಂಬುದನ್ನು ಇನ್ನೂ ಶೋಧಿಸಬೇಕಾಗಿದೆ. ಲಿಂಗದೊಡನೆ ಪಂಚತ್ವ ಲಿಂಗದೊಡನೆ ಜೀವನ ಎಂಬುದಾಗಿ ನಂದೀಶ್ವರನಿಂದ ಹೇಳಲ್ಪಟ್ಟ ಶಿವಧರ್ಮವೇ ಈಗಿನ ವೀರಶೈವ ರಲ್ಲಿ ಪ್ರಚಲಿತವಾಗಿರುವುದೆಂದು ತಿಳಿಯಲನುಮಾನವಿಲ್ಲ. ಈ ಸನಾತನ ಶಿವ ಧರ್ಮವೂ ಹಂಪ್ಪ ಮೋಹೋಂಜೋದಾರೋ ಪಟ್ಟಣಗಳ ಲಿಂಗಧಾರಿಗಳ ಸಂಸ್ಕೃತಿ ಯಲ್ಲಿ ಸೇರಿದ್ದುದೆಂದು ತಿಳಿಯಲಿಕ್ಕೆ ಯಾರಿಗೂ ಅನುಮಾನವೂ ಬರಲಾರದು. ಆಚಾರ್ಯ ಬೇಧದಿಂದ ಆಗಮಗಳ ಬೇಧವೆಂಬ ಹೇಳಿಕೆಯಲ್ಲಿ ಈ ಶಿವಧರ್ಮವೂ ಶ್ರೇಷ್ಠ ಪಾಶುಪತ ಧರ್ಮವೂ, ಬೇರೆ ಬೇರೆಯಾಗಿ ಸೇರಿದವುಗಳೇ ಆಗಿರಬೇಕು. ಈ ವಿಷಯುವನ್ನು ಇನ್ನೂ ಶೋಧನೆ ಮಾಡಬೇಕಾಗಿಯೇ ಇದೆ. ಪೂರ್ವಿಕ ಮಹನೀ ಯರು ಹೇಳಿದ ಸಂಗತಿಗಳನ್ನು ಆಯಾಯ ಕಾಲದಲ್ಲಿನ ಆಚರಣೆಯ ದೃಷ್ಟಿಯಿಂದ ಪರಿಶೋಧಿಸಬೇಕಲ್ಲದೆ ಈಗಿನ ಆಚರಣೆಗಳನ್ನು ಸೇರಿಸಿಕೊಂಡು ಪರಿಶೋಧಿಸುವುದು ಸರಿಯಲ್ಲ.

**ವ್ಯಾಸಋಷಿಗಳು ಕೇದಾರ ಖಂಡದಲ್ಲಿ ಹೇಳಿದ ಲಿಂಗಧಾರಿಗಳ ವಿಷಯ**

ಪೀಠಿಕಾ ವಿಷ್ಣುರೂಪಂ ಸ್ಯಾತ್--ಲಿಂಗರೂಪೀ ಮಹೇಶ್ವರಃ
ತಸ್ಮಾಲ್ಲಿಂಗಾರ್ಚನಂ ಶ್ರೇಷ್ಠಂ ಸರ್ವೇಷಾಮಪಿ ವೈ ದ್ವಿಜಾಃ
ಬ್ರಹ್ಮಾ ಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ
ಇಂದ್ರೋ ರತ್ನಮಯಂ ಲಿಂಗಂ ಚಂದ್ರೋ ಮುಕ್ತಾಮಯಂ ತಥಾ
ಭಾನುಸ್ತಾಮ್ರಮಯಂ ಲಿಂಗಂ ಪೂಜಯತ್ಯನಿಶಂ ಶುಭಂ
ರೌಕ್ಮಂ ಲಿಂಗಂ ಕುಬೇರಶ್ಚ ಪಾಶೀಚಾಲಕ್ತಮೇವಚ
ಯಮೋ ನೀಲಮಯಂ ಲಿಂಗಂ ರಾಜತಂ ನೈರುತ ಸ್ತಥಾ
ಕಾಶ್ಮೀರಂ ಪವನೋ ಲಿಂಗಮರ್ಚಯತ್ಯನಿಶಂ ವಿಭೋಃ
ಏವಂ ತೇ ಲಿಂಗಿತಾಃ ಸರ್ವೇ ಲೋಕಪಾಲಾಃ ಸವಾಸವಾಃ
ತಥಾ ಸರ್ವೇಪಿ ಪಾತಾಲೇ ಗಂಧರ್ವಾಃ ಕಿನ್ನರೈಃ ಸಹ
ದೈತ್ಯಾನಾಂ ವೈಷ್ಣವಾಃ ಕೇಚಿತ್ ಪ್ರಲ್ಹಾದ ಪ್ರಮುಖಾ ದ್ವಿಜಾಃ
ಏತಲ್ಲಿಂಗಂ ತ್ವಯಾ ವಿಷ್ಣೋ ಧೃತಂ ವೈಪಿಂಡಿರೂಪಿಣಾ
ಮಹಾವಿಷ್ಣು ಸ್ವರೂಪೇಣ ಘಾತಿತೌ ಮಧುಕೈಟಭೌ

(ಅಧ್ಯಾಯ ೮—ಪುಟ—೧೨—೧೩—೧೪)

"ಲಿಂಗದ ಪೀಠವು ವಿಷ್ಣುರೂಪ. ಲಿಂಗದ ಬಾಣವು ಶಿವರೂಪ. ಅದುದರಿಂದ ಎಲ್ಲ ಜನರಿಗೂ ಲಿಂಗಪೂಜೆ ಮಾಡುವುದು ಶ್ರೇಷ್ಠವಾದ ಧರ್ಮವಾಗಿದೆ. ಬ್ರಹ್ಮನು ಮಣಿಯಿಂದ ಮಾಡಿದ ಲಿಂಗವನ್ನು ಯಾವಾಗಲೂ ಪೂಜಿಸುತ್ತಾನೆ ಇಂದ್ರನು ರತ್ನದಿಂದ ಮಾಡಿದ ಲಿಂಗವನ್ನೂ, ಚಂದ್ರನು ಮುತ್ತಿನಿಂದ ಮಾಡಿದ ಲಿಂಗವನ್ನೂ

ಸೂರ್ಯನು ತಾಮ್ರದಿಂದ ಮಾಡಿದ ಲಿಂಗವನ್ನೂ, ಕುಬೇರನು ಬಂಗಾರದ ಲಿಂಗ ವನ್ನೂ, ವರುಣನು ಅರಗಿನಿಂದ ಮಾಡಿದ ಲಿಂಗವನ್ನೂ, ಯಮನು ನೀಲದಿಂದ ಮಾಡಿದ ಲಿಂಗವನ್ನೂ, ನಿರುತಿಯು ಬೆಳ್ಳಿಯಿಂದ ಮಾಡಿದ ಲಿಂಗವನ್ನೂ; ವಾಯುವು ಕಾಶ್ಮೀರ ಲಿಂಗವನ್ನೂ ಯಾವಾಗಲೂ ಪೂಜಿಸುತ್ತಾರೆ. ಇದಲ್ಲದೆ ಪಾತಾಳಲೋಕದಲ್ಲಿರುವ ಗಂಧರ್ವರು, ಕಿನ್ನರರು, ಕೆಲವರು ವಿಷ್ಣುಭಕ್ತರಾದ ದೈತ್ಯರೂ (ಪ್ರಲ್ಹಾದನೇ ಮೊದಲಾದವರು) ಲಿಂಗಪೂಜೆ ಮಾಡುವವರಾಗಿದ್ದಾರೆ. ಎಲೆ ವಿಷ್ಣುವೇ ನೀನು ಕೂಡ ಪಿಂಡೀಭೂತವಾದ (ಸಾಕಾರ ಸ್ಥೂಲರೂಪ) ಲಿಂಗವನ್ನು ಧರಿಸಿರುವೆ.

ಹೀಗೆ ವ್ಯಾಸಋಷಿಯು ಹೇಳಿರುವುದನ್ನು ನೋಡಿದರೆ ಅತ್ಯಂತ ಪ್ರಾಚೀನ ಕಾಲದಲ್ಲಿ ಎಲ್ಲರೂ ಲಿಂಗಧಾರಿಗಳಾಗಿಯೇ ಇದ್ದರು, ಎಂದು ವ್ಯಕ್ತಪಡುತ್ತದೆ. (ಈ ಮಾತು ನಿಜವೆ. ಭೂಮ್ಯಾದಿ ಆರು ಭೂತಗಳು ಗೋಳಕಾಕಾರ; ಸೂರ್ಯ ಚಂದ್ರ ನಕ್ಷತ್ರಾದಿಗಳು ಗೋಳಕಾಕಾರ, ಬತ್ತ ಗೋಧಿ ಮೊದಲಾದ ಎಲ್ಲಾ ಧಾನ್ಯ ಗಳೂ ಗೋಳಕಾಕಾರ, ಮನುಷ್ಯಾದಿ ಪ್ರಾಣಿಗಳೂ ತಾಯಿಯ ಗರ್ಭದಲ್ಲಿ ಚೀಲದೊಳ ಗಿರುವಾಗ ಆ ಚೀಲವು ಗೋಳಕಾಕಾರ, ಗೋಳಕಾಕಾರವೆ ಲಿಂಗಾಕಾರ ಹೀಗೆ ಎಲ್ಲವೂ ಲಿಂಗಾಕಾರವಾಗಿರುವಲ್ಲಿ ನಿರಾಕಾರ ಪರವಸ್ತುವು ಲಿಂಗರೂಪವೆಂದೂ ಆ ಲಿಂಗ ರೂಪನೇ ತಾನೆಂದೂ ತಿಳಿದು ಲಿಂಗವನ್ನು ಧರಿಸಿ ಪೂಜಿಸುವುದು ಮನುಷ್ಯನಿಗೆ ತಪ್ಪಿನ ಕೆಲಸವೇನೂ ಅಲ್ಲ. ) ವಿಷ್ಣುವು ಲಿಂಗಧಾರಣೆ ಮಾಡಿದ್ದನೆಂಬುದಕ್ಕೆ ಪಂಡರಾಪುರದ ಪಾಂಡುರಂಗನ ಪ್ರತಿಮೆ ಇದೆ. ಋಷಿಗಳೇ ಮೊದಲಾದವರು ಲಿಂಗಧಾರಣೆ ಮಾಡಿದ ಪ್ರತಿಮೆಗಳು ಬೇಕಾದಷ್ಟಿವೆ. ಇದರಂತೆ ಲಿಂಗಧಾರಿ ದೇವತೆಗಳ ಪ್ರತಿಮೆ ಗಳು ಎಲ್ಲೆಲ್ಲಿವೆ ಎಂಬುದನ್ನು ಇನ್ನೂ ಶೋಧಿಸಬೇಕಾಗಿದೆ. ಇದಕ್ಕಾಗಿ ಕಾಶೀಪಟ್ಟಣ ಮತ್ತು ಪುರಾತನ ಪಟ್ಟಣಗಳು ಇವುಗಳನ್ನು ಚನ್ನಾಗಿ ಶೋಧಿಸಬೇಕಾಗಿದೆ. ಸಮುದ್ರದ ತಳವನ್ನು ಹಿಮಾಲಯ ಪರ್ವತದ ಮೇಲ್ಭಾಗವನ್ನಾಗಿ ಮಾಡಿದ ಮಹಾ ಪ್ರಳಯವು (ದೊಡ್ಡ ಭೂಕಂಪ=Grate Earth-quake) ಆಗದೆ ಇದ್ದಿದ್ದರೆ ಈ ದಿಶೆಯಲ್ಲಿ ವಿಪುಲವಾದ ಪ್ರಮಾಣಗಳೂ ಚಾರಿತ್ರಿಕ ಸಂಗತಿಗಳೂ ನಮಗೆ ದೊರಕುತ್ತಿದ್ದವು. ಈ ಮಹಾಪ್ರಳಯಕ್ಕೊಳಗಾದ ಸಿಂಧೂದೇಶದ ಬುಡದಲ್ಲಿದ್ದ ಹರಪ್ಪ ಮೊಹೋಂಜೋದಾರೊ ಪಟ್ಟಣಗಳಲ್ಲಿನ ನಗರದ ನಿರ್ಮಾಣವು ಸಂಶೋಧನ ವಾಗಿದ್ದಿತೆಂದು ಶ್ರೀ ಮಾರ್ಷಲ್ ಅವರೇ ಅಭಿಪ್ರಾಯ ಪಟ್ಟಿದ್ದಾರೆ.(ಶ್ರೀ ಮಾರ್ಷಲ್ ಅವರು ಆರ್ಯಸಂಸ್ಕೃತಿಗಿಂತ ಮುಂಚೆ ದ್ರಾವಿಡಸಂಸ್ಕೃತಿ ಇದ್ದು ಆ ಸಂಸ್ಕೃತಿಯಲ್ಲಿ ಲಿಂಗಧಾರಿಗಳಿದ್ದರೆಂದು ಅಭಿಪ್ರಾಯ ಪಡುತ್ತಾರೆ. ಮೇಲೆ ಹೇಳಿದಂತೆ ಕಠೋಪ ನಿಷತ್ತಿನಲ್ಲಿ ಅಂಗುಷ್ಠಮಾತ್ರನಾದ ಪುರುಷನು ಎಂದರೆ ಲಿಂಗವು ಹೊಗೆ ಇಲ್ಲದ ಜ್ಯೋತಿ ರೂಪವಾಗಿದ್ದು ಹಿಂದಿನ ಮುಂದಿನ ಸೃಷ್ಟಿಗೆ ಕಾರಣನಾಗಿದ್ದು ಇವನೇ ಆದ್ಯ ನೆಂದು ಹೇಳಲ್ಪಟ್ಟಿರುವುದರಿಂದ ಲಿಂಗಧಾರಿಗಳ ಸಂಸ್ಕೃತಿಯು ಆದ್ಯವೆಂದೇ ತಿಳಿಯ

ಬೇಕಾಗಿವೆ. ಮೇಲೆ ಹೇಳಿದಂತೆ ದೇವತೆಗಳಲ್ಲಿ ಪಂಚಮುಖ ಶಿವನೂ ಲಿಂಗವನ್ನು ಪೂಜಿಸಿದಂತೆ ಇರುವ ಪ್ರತಿಮೆಯು ಸಿಕ್ಕಿರುವುದರಿಂದಲೂ ಶಿವನಿಗಿಂತ ಮುಂಚಿನವರು ಯಾರೆಂಬುದನ್ನು ಭಾರತೀಯ ಧರ್ಮಗ್ರಂಥಗಳು ಯಾವುವೂ ಹೇಳುವುದಿಲ್ಲವಾದುದರಿಂದಲೂ ಶಿವನೇ ಆದ್ಯನು ಸನಾತನನು, ಎಂದು ಅನೇಕ ಗ್ರಂಥಗಳಲ್ಲಿ ನೋಡಬಹುದಾದುದರಿಂದಲೂ ಲಿಂಗಧಾರಿಗಳ ಸಂಸ್ಕೃತಿಯು ಆದ್ಯವೆಂದೂ ಸನಾತನವೆಂದೂ ಒಪ್ಪಲೇಬೇಕು. ಶ್ರೀ ಮಾರ್ಷಲ್ ಅವರು ತಿಳಿದಿರುವ ದ್ರಾವಿಡ ಸಂಸ್ಕೃತಿಯುವರೂ ಆದ್ಯ ಲಿಂಗಧಾರಿಗಳ ಸಂಸ್ಕೃತಿಯ ತರುವಾಯದವರೆಂದೇ ತಿಳಿಯಬೇಕು. ಈ ಆದ್ಯ ಸಂಸ್ಕೃತಿಗೆ ಕೈಲಾಸದ ಶಿವನ ಸಂಸ್ಕೃತಿ; ದೇವಸಂಸ್ಕೃತಿ ಲಿಂಗಸಂಸ್ಕೃತಿ ಎಂತಲೂ ಕರೆಯಲಿಕ್ಕೆ ಬರುವಂತೆ ಇದೆ. ದೇವತೆಗಳು ಪಾಶುಪತರಾಗಿ ಲಿಂಗಧಾರಿಗಳಾಗಿದ್ದರೆಂಬುದಕ್ಕೆ ಗ್ರಂಥಗಳ ಪ್ರಮಾಣವು ಈ ಹಿಂದೆ ತೋರಿಸಲ್ಪಟ್ಟಿದೆ (ಇವೇ ಮುಂತಾದ ವಿಷಯಗಳನ್ನು ಸರ್ವರೂ ಚನ್ನಾಗಿ ಗ್ರಹಿಸಿರಬೇಕಾಗಿದೆ.) ಲಿಂಗಧಾರಿಗಳ ನಾಗರಿಕತೆಯು ಸಂಸ್ಕೃತಿಯು ಭೂಮಿಯಲ್ಲಿ ಹೂತುಹೋಗಿದೆ. ಈಗಿನ ಲಿಂಗಧಾರಿಗಳಾದ ವೀರಶೈವರ ಸಂಸ್ಕೃತಿಯು ಗ್ರಂಥಸ್ತವಾಗಿ ಕೈ ಬರಹವ ಹೊತ್ತಗೆಗಳಲ್ಲಿ ಹೂತುಹೋಗಿದೆ. ಎಲ್ಲೋ ಅಲ್ಪ ಸ್ವಲ್ಪ ಮುದ್ರಣವಾದರೆ ಓದಬೇಕೆಂಬುವವರೂ ಬಹಳ ಕಡಿಮೆ. ಹೀಗೆ ಹೂತುಹೋಗಿರುವ ಜ್ಞಾನನಿಧಿಯು ಯಾವಾಗ ಚನ್ನಾಗಿ ಪ್ರಚಾರವಾಗುವುದೋ ಏನೋ! ಪರವಸ್ತುವಿನ ಲೀಲೆ ಎಂತಿರುವುದೋ ನೋಡಬೇಕು!! ಸೂಕ್ಷ್ಮ ವಿಷಯಗಳನ್ನು ಇದ್ದುದನ್ನು ಇದ್ದಂತೆ ತಿಳಿದುಕೊಳ್ಳುವ ಸುಯೋಗವು ವಿಜ್ಞಾನಶಾಸ್ತ್ರದ ಪ್ರಬಲ ಪ್ರಚಾರವಿರುವ ಈ ಕಾಲದಲ್ಲಿಯೂ ಸಾಧ್ಯವಾಗಿಲ್ಲವೇ!!

ವ್ಯಾಸಮುನಿಯು ಪುರಾಣಗಳೆಲ್ಲವನ್ನೂ ಓದಿ ಶೋಧಿಸಿದರೆ ಲಿಂಗಧಾರಿಗಳ ಸಂಸ್ಕಾರದ ವಿಷಯವು ಇನ್ನೂ ಬಹಳವಾಗಿ ತೋರಬೀಳಬಹುದು. ವೀರಶೈವರ ಪ್ರಾಚೀನತೆಯನ್ನು ತಿಳಿಯುವುದಕ್ಕೂ ಸಹ ವೀರಶೈವ ಮಹಾಸಭೆಯವರೂ ಮಹಾಪೂಜ್ಯರಾದ, ಗುರುವಿರಕ್ತ ಮಹಾಸ್ವಾಮಿಗಳವರೂ, ಶ್ರೀಮಂತರೂ. ಧರ್ಮಾಭಿಮಾನಿಗಳೂ ಬಹಳ ಹೆಚ್ಚಾಗಿ ಪ್ರಯತ್ನಿಸಬೇಕಾಗಿದೆ, ಶ್ರಮಿಸಬೇಕಾಗಿದೆ; ಮುದ್ರಣ ಮಾಡಿಸಬೇಕಾಗಿದೆ, ಪ್ರಚಾರಮಾಡಿಸಬೇಕಾಗಿದೆ. ಎಲ್ಲ ಸಮಾಜದವರೂ ಧರ್ಮೋನ್ನತಿಯ ಮಾರ್ಗದಲ್ಲಿ ನಡೆಯುವಂತೆ ಅನುಕೂಲಪಡಿಸಬೇಕಾಗಿದೆ ಎಂಬುದನ್ನು ಸರ್ವರೂ ಬಹಳ ಚೆನ್ನಾಗಿ ಗಮನದಲ್ಲಿ ಇಡಬೇಕಾಗಿದೆ ಎಂದು ಈ ಲೇಖಕನು ಪ್ರಾರ್ಥಿಸುತ್ತಾನೆ.

# ವಚನವಾಙ್ಮಯದಲ್ಲಿ ವೀರಶೈವಧರ್ಮದ ವಿಶ್ವತತ್ವಗಳು

**ವಚನಶಾಸ್ತ್ರಾಚಾರ್ಯ-ವಚನ ವಾಙ್ಮಯವಿಶಾರದ**
**ಜೀರಿಗೆ ಕಟ್ಟೆ ಬಸವಪ್ಪ**

ಪ್ರಪಂಚದ ಧರ್ಮಗಳಲ್ಲಿ ವೀರಶೈವಧರ್ಮವು ಅತ್ಯಂತ ಪ್ರಾಚೀನವಾದ, ವಿಶಾಲವಾದ, ಉದಾರವಾದ ಕಲ್ಯಾಣಪ್ರದಧರ್ಮವಾಗಿದೆ. ವೀರಶೈವ ಧರ್ಮದ ಚರಿತ್ರೆ ಸಹಸ್ರಾರು ವರ್ಷಗಳ ಹಿಂದೆ ಹೋಗುತ್ತದೆ. ಈ ಧರ್ಮದ ಮೂಲವು ವೇದೋಪನಿಷತ್ತುಗಳ ಕಾಲಕ್ಕೆ ಮುಂಚೆಯೇ ಉಪಲಬ್ಧವಿದ್ದು, ಭರತ ಖಂಡದಲ್ಲಿ ಮಾತ್ರವಲ್ಲದ ಪ್ರಪಂಚದ ಇತರ ನಾನಾ ಭಾಗಗಳಲ್ಲಿ ವ್ಯಾಪಿಸಿತ್ತೆಂಬ ಅಂಶವು ಪರಿಶೋಧನೆಗಳಿಂದ ಕಂಡುಬಂದಿದೆ. ವೀರಶೈವ ಧರ್ಮದ ಪೂರ್ವರೂಪಗಳು ಆರ್ಯರ ಆಗಮನಕ್ಕೆ ಹಿಂದೆಯೇ ಭಾರತದ ಮೂಲ ನಿವಾಸಿಗಳಾದ ದ್ರಾವಿಡರಲ್ಲಿ ಇದ್ದುವೆಂಬ ಅಂಶವು ಸಿಂಧುತೀರದ ಅವಶೇಷಗಳಿಂದ ಕಂಡುಬರುತ್ತದೆ. ವೀರಶೈವ ಧರ್ಮವು ಶೈವಧರ್ಮದ ಪೂರ್ಣವಿಕಾಸವನ್ನು ಪ್ರತಿಪಾದಿಸುತ್ತದೆ. ಭಾರತದ ಮೂಲನಿವಾಸಿಗಳ ಕಾಲದಲ್ಲಿ ಈ ಧರ್ಮವು ಮೊಳಕೆಯಾಗಿ ಆವಿರ್ಭವಿಸಿ, ಶತಮಾನಗಳ ಕಾಲಕ್ರಮೇಣ ಮಹಾವೃಕ್ಷವಾಗಿ ಬೆಳೆದು, ಹತ್ತು ಹನ್ನೆರಡನೆಯ ಶತಮಾನಗಳ ಕಾಲಕ್ಕೆ ಪರಿಪಕ್ವ ಫಲವನ್ನು ಕೊಡುತ್ತ ಬಂದಿರುವುದು ನಮಗೆ ಚರಿತ್ರೆಯಿಂದ ಗೋಚರವಾಗುತ್ತದೆ.

ವೀರಶೈವವು ಶೈವದ ವಿಕಾಸವೆಂಬುದಕ್ಕೆ ವೀರಶೈವ ಪದವೇ ಸಾಕ್ಷಿಯಾಗಿದೆ. ವಿ-ಎಂದರೆ ವಿದ್ಯೆ, ರ - ಎಂದರೆ - ರಮಿಸುವುದು. ಯಾರು ಶೈವವಿದ್ಯೆಯಲ್ಲಿ ರಮಿಸುವರೋ ಅವರು ವೀರಶೈವರು. ಈ ವಿವರಣೆಯನ್ನು ವಾತುಲಾಗಮ ಈ ರೀತಿ ಸಮರ್ಥಿಸುತ್ತ :—

"ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತುತೇ ಮತಾಃ ॥"

ಇದು ಒಂದು ರೀತಿಯ ಅರ್ಥವಿವರಣೆ. ಯಾರು ಶಿವನಿಷ್ಠೆಯಲ್ಲಿ ವೀರತನವನ್ನು ತೋರಿಸುವರೋ ಅವರು ವೀರಶೈವರು. ಇದು ಮತ್ತೊಂದು ಅರ್ಥವಿವರಣೆ. ಈ ವಿವರಣೆಯನ್ನು ಪಾರಮೇಶ್ವರಾಗಮ ಈರೀತಿ ಸಮರ್ಥಿಸುತ್ತದೆ :—

"ಯಥಾ ವೀರೋ ರಣೇಶೂರೋ ವೀರಶೈವ ಮತೇತಥಾ|
ಭಕ್ತ್ಯಾವೀರೋ ನ ವೈರೇಣ ನ ಬಲೇನಚ ಕಾರ್ಯತಃ ||"

ಈ ಅರ್ಥ ವಿವರಣೆಗಳು ಏನೇ ಇರಲಿ, ಒಟ್ಟಿನಲ್ಲಿ ಶಿವಭಕ್ತಿ ವಿಶೇಷವೇ ವೀರ ಶೈವವು. ಶೈವವು ವೀರಶೈವದ ಮೂಲ ಅಂಕುರವೆಂಬುದನ್ನೂ, ವೀರಶೈವವು ಶೈವದ ಪೂರ್ಣ ವೃಕ್ಷವೆಂಬುದನ್ನೂ ವೀರಶೈವ ಪದದಿಂದ ನಿರ್ವಚನಮಾಡಬಹುದು. ಈ ಕಾರಣದಿಂದಲೇ ಸಿದ್ಧಾಂತಗಳಲ್ಲೆಲ್ಲಾ ವೀರಶೈವ ಸಿದ್ಧಾಂತವು ವಿಜ್ಞಾನ ಪ್ರಜ್ಞಾನ ಗಳಿಗೆ ಒಪ್ಪುವಂಥ ಸಮನ್ವಯತ್ವವನ್ನು ಹೊಂದಿ ಪರಿಪೂರ್ಣ ಸಿದ್ಧಾಂತವಾಗಿದೆ ಯೆಂದು ಶ್ರೀಕರಭಾಷ್ಯವು ಈರೀತಿ ನುಡಿದಿದೆ :—

"ದ್ವೈತಾದ್ವೈತಮತೇ ಶುದ್ಧೇ ವಿಶಿಷ್ಟಾದ್ವೈತ ಸಂಜ್ಞಕೇ |
ವೀರಶೈವಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ ||"

ಶಿವನ ಪುತ್ರನಾದ ವೀರಭದ್ರ, ಶಿವನ ವಾಹನವಾದ ವೃಷಭೇಶ್ವರ - ಇವರು ಗಳಿಗೂ ವೀರಶೈವಧರ್ಮಕ್ಕೂ ನಿಕಟವಾದ ಸಂಬಂಧವಿದ್ದು ಇದೂ ಸಹ ಶೈವಧರ್ಮದ ವಿಕಾಸವನ್ನು ಸೂಚಿಸುತ್ತದೆ. ವೀರಭದ್ರನು ದುಷ್ಟಶಿಕ್ಷಣಕ್ಕೂ, ವೃಷಭೇಶ್ವರನು ಶಿಷ್ಟ ಪರಿಪಾಲನೆಗೂ ಪ್ರಸಿದ್ಧರಾಗಿದ್ದಾರೆ. ವೀರಭದ್ರನು ಹಿಂಸಾತ್ಮಕವಾದ ಯಜ್ಞಗಳ ಧ್ವಂಸಕನಾಗಿ ಉಪಕರಿಸಿದ್ದಾನೆ. ವೃಷಭೇಶ್ವರನು ಲೋಕೋಪಕಾರಿಯಾದ ಮಹಾ ಭಕ್ತನಾಗಿ ಉಪಕರಿಸಿದ್ದಾನೆ. ಇಂದಿಗೂ ಭಾರತದಲ್ಲೆಲ್ಲಾ ವೀರಭದ್ರನ ಹಾಗೂ ವೃಷಭೇಶ್ವರನ ಗುಡಿಗಳು ಇದ್ದು ಅವುಗಳ ಅರ್ಚನಾದಿಗಳನ್ನು ವೀರಶೈವ ಸಮಾಜವು ನೋಡಿಕೊಳ್ಳುತ್ತಿದೆ. ಅಲ್ಲದೆ ವೀರಶೈವರ ಹಬ್ಬ ಹುಣ್ಣಿಮೆಗಳಲ್ಲಿ ವೀರಭದ್ರ ಖಡ್ಗವನ್ನೂ, ವೃಷಭಧ್ವಜವನ್ನೂ ಮೆರೆಯಿಸಲಾಗುವುದು. ದ್ರಾವಿಡರ ಸಂಪರ್ಕಕ್ಕೆ ಮೊದಲು ಆರ್ಯರು ಹಿಂಸಾತ್ಮಕ ಯಜ್ಞಗಳನ್ನು ಮತ್ತು ಗೋವಧೆಯನ್ನೂ ಮಾಡುವವರಾಗಿದ್ದರು. ಇವನ್ನು ತಪ್ಪಿಸಿ ಆರ್ಯರನ್ನು ಸಜ್ಜನರನ್ನಾಗಿಮಾಡಿದ ಕೀರ್ತಿ ವೀರಶೈವ ಧರ್ಮಕ್ಕೆ ಪೂರ್ಣಸ್ವರೂಪವನ್ನು ತಂದುಕೊಟ್ಟು ಕೀರ್ತಿವಂತರಾದ ಶರಣಾಗ್ರಣಿ ಬಸವಣ್ಣನವರನ್ನು ವೃಷಭೇಶ್ವರನ ಅವತಾರವೆಂದೂ, ಶೂರಾಗ್ರಣಿ ಮಡಿವಾಳ ಮಾಚಿದೇವರನ್ನು ವೀರಭದ್ರನ ಅವತಾರವೆಂದೂ ಕರೆಯುವುದು ಸಂಪ್ರದಾಯವಾಗಿದೆ. ಅಲ್ಲದೆ ವೀರಶೈವ ಧರ್ಮಕ್ಕೆ ಶೋಭಾಯಮಾನವಾದ ಪೂರ್ಣತ್ವವನ್ನು ತಂದುಕೊಟ್ಟುದಕ್ಕಾಗಿ ಬಸವಣ್ಣನವರನ್ನು ದ್ವಿತೀಯ ಶಂಭುವೆಂದು ಕರೆಯುವ ವಾಡಿಕೆಯಿರುವುದಲ್ಲದೆ ಬಸವಣ್ಣನವರು ವೀರಶೈವಸಮಾಜಕ್ಕೂ ಜಗತ್ತಿಗೂ ಗುರುಲಿಂಗ ಜಂಗಮ ಸ್ವರೂಪವಾಗಿದ್ದಾರೆಂದೂ ಮುಕ್ತಕಂಠದಿಂದ ಸ್ತುತಿಸುವುದೂ ರೂಢಿಯಲ್ಲಿದೆ.

ಶೈವವು ವೀರಶೈವವಾದವಿಕಾಸ ಚರಿತ್ರೆಯಲ್ಲಿ ಹಲವು ರೂಪಾಂತರಗಳನ್ನು ಹೊಂದಿತು. ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ—ಎಂದು ನಾಲ್ಕು ವಿಕಾಸಹಂತಗಳನ್ನು ಸೂಕ್ಷ್ಮಾಗಮ ಸೂಚಿಸುತ್ತದೆ. ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ, - ಎಂದು ಏಳು ವಿಕಾಸ ಪ್ರಭೇದಗಳನ್ನು ಬೇರೆ ಆಧಾರಗಳು ಸೂಚಿಸುತ್ತವೆ. ಇವುಗಳಲ್ಲಿ ಮತ್ತೆ ಅನೇಕ ಉಪಭೇದಗಳು ಉಂಟೆಂದು ಮತ್ತೆ ಕೆಲವು ಆಧಾರಗಳು ಸೂಚಿಸುತ್ತವೆ. ವೀರಶೈವ ಧರ್ಮದಲ್ಲಿ ಪ್ರತಿಪಾದಿತವಾದ ಆಚಾರ ವಿಚಾರಗಳಿಗೆ ಅನುಸಾರವಾಗಿ ವೀರಶೈವ ದರ್ಶನಕ್ಕೆ ಅನೇಕ ಹೆಸರುಗಳೂ ಪ್ರಾಪ್ತವಾಗಿರುತ್ತವೆ. ಶಿವಾದ್ವೈತ, ಶಕ್ತಿ ವಿಶಿಷ್ಟಾದ್ವೈತ, ವಿಶೇಷಾದ್ವೈತ, ದ್ವೈತಾದ್ವೈತ, ಭೇದಾಭೇದ, ಷಟ್‌ಸ್ಥಲ ಸಿದ್ಧಾಂತ, ಪ್ರೌಢದರ್ಶನ, ಶಿವ ಸಿದ್ಧಾಂತ—ಇವು ಈ ಹೆಸರುಗಳಲ್ಲಿ ಮುಖ್ಯವಾದುವು.

ಪ್ರಪಂಚದ ಯಾವುದೇ ಧರ್ಮಕ್ಕಾಗಲಿ: ಮೂರು ವಿಭಾಗಗಳು ಅನಿವಾರ್ಯವೆಂದೂ, (1) Creed of Philosophy (ದರ್ಶನ), (2) Code of Conduct (ಆಚಾರ), (3) Cult of Worship (ಅರ್ಚನ) — ಇವು ಮೂರೇ ಆ ಅನಿವಾರ್ಯ ವಿಭಾಗಗಳೆಂದೂ ಪ್ರಸಿದ್ಧ ಪಾಶ್ಚಿಮಾತ್ಯ ದಾರ್ಶನಿಕ ಅಗಸ್ಟೆ ಕಾಮ್ಟೆ (Auguste Comte) ಪ್ರತಿಪಾದಿಸಿದ್ದಾನೆ. ಈ ಮೂರು ವಿಭಾಗಳ ಧರ್ಮವನ್ನು ಯಾರು ಜಾತಿ ಮತ ಪಂಥಗಳ ಭೇದವಿಲ್ಲದೆ ಸಕಲಮಾನವರ ಉದ್ಧಾರಕ್ಕಾಗಿ ಬಳಸುತ್ತಾರೋ ಅವರೇ ಶರಣರೆಂದೂ, ಅಂಥ ಶರಣರನ್ನು ನೆನೆದು ಗೌರವಿಸುವುದು ಭಕ್ತರ ಕರ್ತವ್ಯವೆಂದೂ ಅವನು ತನ್ನ ಪಾಜಿಟಿವಿಜಮ್ (Positivism) ಎಂಬ ದರ್ಶನದಲ್ಲಿ ನುಡಿದಿದ್ದಾನೆ. ಅವನ ವಿಭಜನೆಯ ಮೇರೆಗೆ ವೀರಶೈವ ಸಿದ್ಧಾಂತದಲ್ಲಿ ಷಟ್‌ಸ್ಥಲವೇ ದರ್ಶನ ವಿಭಾಗ (Creed of Philosophy). ಪಂಚಾಚಾರವೇ ಆಚಾರ ವಿಭಾಗ (Code of Conduct), ಅಷ್ಟಾವರಣವೇ ಅರ್ಚನ ವಿಭಾಗ (Cult of Worship), ಕಾಮ್ಟೆಯ ಪ್ರತಿಪಾದನೆಗೆ ಅನುಸಾರವಾಗಿಯೇ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳು ವೀರಶೈವ ಧರ್ಮಕ್ಕೆ ಪೂರ್ಣತ್ವವನ್ನು ಕೊಡುವ ತ್ರಿಪುಟಿಗಳಾಗಿವೆ.

ಶೈವವು ವೀರಶೈವದಲ್ಲಿ ವಿಕಾಸ ಹೊಂದಿ ಪೂರ್ಣತ್ವವನ್ನು ಪಡೆದಂತೆ ವೀರಶೈವ ದರ್ಶನ ಶಾಸ್ತ್ರವು ಶರಣರ ವಚನ ವಾಙ್ಮಯದಲ್ಲಿ ವಿಕಾಸಹೊಂದಿ ಪೂರ್ಣತ್ವವನ್ನು ಪಡೆದಿರುತ್ತದೆ. ಶರಣರು ನಿತ್ಯ ಜೀವನದ ಪ್ರಯೋಗಶಾಲೆಯಲ್ಲಿ ತತ್ವಸಿದ್ಧಾಂತಗಳನ್ನು ವಿಮರ್ಶಿಸಿ, ವಿಶ್ಲೇಷಿಸಿ, ಪರಿಶೀಲಿಸಿ, ಪ್ರಯೋಗಿಸಿ ಅನುಭವದ ಸಾರಸರ್ವಸ್ವದ ರಸಘಟ್ಟಿಯನ್ನು ಜನತೆಗೆ ಅರ್ಪಿಸಿದ್ದಾರೆ.

ವಚನ ಸಾಹಿತ್ಯವು ಕನ್ನಡ ಸಾಹಿತ್ಯದ ಒಂದು ಅಪೂರ್ವವಾದ ಮತ್ತು ಅಮೋಘವಾದ ಭಾಗವಾಗಿದೆ. ಗದ್ಯದ ಸರಳತೆಯನ್ನೂ ಮತ್ತು ಪದ್ಯದ ಲಾಲಿತ್ಯ

ವನ್ನೂ ಒಂದು ಗೂಡಿಸಿಕೊಂಡು ಈಶ್ವರ ಜೀವ ಜಗತ್ತುಗಳ ವಿಮರ್ಶೆಯನ್ನು ಪ್ರತಿಪಾದಿಸುವ ಒಂದು ವಿಶಿಷ್ಟವಾದ ಕಾವ್ಯಮಯ ದಾರ್ಶನಿಕ ಸಾಹಿತ್ಯವಾಗಿದೆ. ಸ್ವತಂತ್ರ ವಿಚಾರಧಾರೆ ವಚನ ಸಾಹಿತ್ಯಕ್ಕೆ ಆಧಾರವಾಗಿದೆ. ಯಾರ ಭಯ ದಾಕ್ಷಿಣ್ಯಗಳಿಗೂ ಒಳಗಾಗದೆ ಯಾವ ಶಾಸ್ತ್ರ ಸಂಪ್ರದಾಯ ಗಳ ಬಂಧನಕ್ಕೂ ಸಿಕ್ಕದೆ ಸತ್ಯಾನ್ವೇಷಣೆಯ ಏಕೈಕ ಗುರಿಯಿಂದ ಪ್ರತ್ಯಕ್ಷ ಅನುಭವದ ಅಡಿಗಲ್ಲ ಮೇಲೆ ನಿಂತಿರುವುದಾಗಿದೆ.

ವಚನ ಸಾಹಿತ್ಯದ ಉಗಮ ಯಾವಾಗ ಆಯಿತೆಂಬುದನ್ನು ನಿರ್ದಿಷ್ಟವಾಗಿ ಹೇಳಲು ಬಾರದಿದ್ದರೂ, ಅದರ ವಿಮರ್ಶಾಧೋರಣೆಯುಬುದ್ಧ ದೇವರ ತಾರ್ಕಿಕ ಸಂಭಾಷಣೆಗಳಲ್ಲಿಯೂ, ಉಪನಿಷತ್ಕಾರರ ಜೈಜ್ಞಾಸಿಕ ಚರ್ಚೆಗಳಲ್ಲಿಯೂ ಕಾಶ್ಮೀರ ಮೊದಲಾದ ನಾಡುಗಳ ಶೈವಾಚಾರ್ಯರ ಸಿದ್ಧಾಂತ ವಾಕ್ಯಗಳಲ್ಲಿಯೂ, ತಮಿಳು ನಾಡಿನ ನಾಯನಾರರ ಭಕ್ತಿಗೀತೆಗಳಲ್ಲಿಯೂ ಮತ್ತು ಅದರ ಸಾಹಿತ್ಯ ಸ್ಫುರಣವು ೧೨ ನೆಯ ಶತಮಾನಕ್ಕೆ ಸ್ವಲ್ಪ ಹಿಂದೆ "ಸೂರ್ಯೋದಯಕ್ಕೆ ಮೊದಲಿನ ಅರುಣೋದಯದಂತೆ" ದೇವರ ದಾಸಿಮಾರ್ಯ, ಶಿವಯೋಗಿ ಮಲ್ಲರಸ, ಅನಿಮಿಷದೇವ, ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಇವರೇ ಮೊದಲಾದವರ ಭಕ್ತಿ ವಾಕ್ಯಗಳಲ್ಲಿಯೂ ಕಂಡು ಬರುತ್ತದೆ. ಕಲ್ಯಾಣದಲ್ಲಿ ಕಲಚೂರ್ಯ ಬಿಜ್ಜಳರಾಜನ ಮುಖ್ಯ ಮಂತ್ರಿ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದ ಧರ್ಮ ಚರ್ಚೆಯ ಪರಿಣಾಮವಾಗಿ ವಚನ ಸಾಹಿತ್ಯವು ಪರಿಪಕ್ವತೆಯನ್ನು ಮುಟ್ಟಿ ಪೂರ್ಣ ಪ್ರಕಾಶವನ್ನು ಹೊಂದಿ ವಿಜೃಂಭಿಸಿತು. "ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು ತವರಾಜದ ನೊರೆ, ತೆರೆಯಂತೆ ಆದ್ಯರ ವಚನವಿರಲು, ಬೇರೆ ಬಾವಿಯ ತೋಡಿ ಉಪ್ಪುನೀರುಂಟುವನ ವಿಧಿಯಂತೆ ಆಯಿತೆನ್ನಮತಿ ಕೂಡಲ ಸಂಗಮದೇವಾ!" ಎಂಬ ಅದ್ವಿತೀಯ ಪ್ರಶಸ್ತಿಯನ್ನು ಪಡೆಯಿತು.

ವಚನ ಸಾಹಿತ್ಯವು ಸರ್ವತಂತ್ರ ಸ್ವತಂತ್ರ ಸಿದ್ಧಾಂತವಾಗಿದೆ. ವಚನ ಸಾಹಿತ್ಯಕ್ಕೆ ಸ್ವಾನುಭವವು ತಳಹದಿಯಾಗಿರುವುದೇ ಇದಕ್ಕೆ ಕಾರಣವಾಗಿದೆ. "ವಚನ ಸಾಹಿತ್ಯ ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಯಾರ್ಜಿತ ಸ್ವತ್ತು" ಎಂದು ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳುವ ಮಾತು ಸತ್ಯವಾದುದು.

ಈ ರೀತಿ ಸ್ವಾನುಭವಪೂರ್ಣ, ಭಕ್ತಿ ವಿಶಿಷ್ಟ ಅನುಸಂಧಾನದ ಪರಿಣಾಮವಾಗಿ ಉದ್ಭವಿಸಿದ ವಚನ ಸಾಹಿತ್ಯವು ಇಡಿ ಮಾನವ ಕೋಟಿಯ ಉದ್ಧಾರಕ್ಕೆ ಸಂಬಂಧ ಪಟ್ಟ ತ್ರಿಕಾಲಾಬಾಧಿತ ವಿಶ್ವತತ್ವಗಳನ್ನು ಒಳಗೊಂಡಿರುತ್ತದೆ. ಜಗದಾದಿಯಿಂದ ಇಲ್ಲಿಯವರೆಗೆ ಮಾನವನನ್ನು ಒಂದಲ್ಲ ಒಂದು ರೀತಿಯಲ್ಲಿ ತಿಕ್ಕಿ ಮುಕ್ಕುತ್ತ ಬಂದಿರುವ ಹಲವಾರು ಸಮಸ್ಯೆಗಳನ್ನು ಪರಿಹರಿಸಲು ಬೇಕಾದ ಸಾಧನೋಪಾಯಗಳನ್ನು ವಚನ ಸಾಹಿತ್ಯವು ತನ್ನದೇ ಆದ ಸರಸ ಸಹಜ ಶೈಲಿಯಲ್ಲಿ ಬಾಲವೃದ್ಧರೆನ್ನದೆ, ಸ್ತ್ರೀಪುರುಷರೆನ್ನದೆ ಸರ್ವರಿಗೂ ಅರ್ಥವಾಗುವ ರೀತಿಯಲ್ಲಿಹೇಳಿ ಕೊಡತಕ್ಕದಾಗಿದೆ. ಇಟುವಾದರೂ

ದಿಟವಾದ ವಿಚಾರಗಳನ್ನು ಪ್ರತಿಪಾದಿಸಿ ಮಾನವನಿಗೆ ಸುಖ ಸಂಪದ ಸೌಭಾಗ್ಯ ಗಳನ್ನು ಉಂಟುಮಾಡಿ ಕೊಡುವ ದಿವ್ಯಸಾಧನವಾಗಿದೆ. "ಆದ್ಯರ ವಚನ ಪರುಷ ಕಂಡಯ್ಯ ! ನಂಬಲೊಡನೆ ವಿಜಯ ನೋಡಯ್ಯಾ ! ಅಧರಕ್ಕೆ ಕಹಿ ಉದ ರಕ್ಕೆ ಸಿಹಿ ! ಕೂಡಲ ಸಂಗನ ವಚನ ಬೇವ ಸವಿದಂತೆ" ಸಾಹಿತ್ಯದ ನಿಖರವಾದ ಬೆಲೆಯನ್ನು ಕಟ್ಟಿ ಅದನ್ನು ಕಾವ್ಯಮಯವಾಗಿ ವರ್ಣಿಸಿದ್ದಾರೆ.

ಇಂಥ ಪರಮ ಪವಿತ್ರ ವಚನ ಸಾಹಿತ್ಯದಲ್ಲಿ ಪ್ರತಿಪಾದಿತವಾದ ಸನಾತನ ವೀರ ಶೈವ ಧರ್ಮದ ವಿಶ್ವ ತತ್ವಗಳು ಇಂದಿಗೂ ಮಾನವನಿಗೆ ಮಾರ್ಗದರ್ಶನ ಮಾಡಿ ಆವನ ಬಹುಮುಖ ಸಮಸ್ಯೆಗಳಿಗೆ ಪರಿಪೂರ್ಣ ಪರಿಹಾರವನ್ನು ಒದಗಿಸಿಕೊಡತಕ್ಕು ವಾಗಿವೆ. ಮಾನವನ ಇಂದಿನ ಮುಖ್ಯ ಸಮಸ್ಯೆಗಳ ಮತ್ತು ಅವುಗಳನ್ನು ಪರಿಹರಿ ಸುವ ವಚನ ಸಾಹಿತ್ಯ ಪ್ರತಿಪಾದಿತ ವೀರಶೈವ ಧರ್ಮದ ವಿಶ್ವತತ್ವಗಳ ಅವಲೋಕನ ಈ ಲೇಖನದ ಗುರಿಯಾಗಿದ್ದು ಅವುಗಳನ್ನು ಇಲ್ಲಿ ವಚನ ಸಾಹಿತ್ಯ ಸಿದ್ಧಾಂತದ ಷಟ್ಸ್ಥಲ ಶಾಸ್ತ್ರರೀತ್ಯ ಆರು ವಿಭಾಗಗಳಾಗಿ ವಿಂಗಡಿಸಿ ವಿವರಿಸಿದೆ.

### ೧. ದಾರಿದ್ರ್ಯ ನಿರ್ಮೂಲನ (Eradication of Poverty)

ಇದು ಮಾನವನನ್ನು ಮೊದಲಿನಿಂದಲೂ ಪೀಡಿಸುತ್ತ ಬಂದಿರುವ ಸಮಸ್ಯೆ. ಹುಟ್ಟಿನಿಂದ ಸಾವಿನವರೆಗೆ ಮಾನವನ ಇರುವಿಕೆಗೆ ಸಂಬಂಧಪಟ್ಟ ಸಮಸ್ಯೆ. ಮಾನ ವನ ಇಡಿಯ ಜೀವನದ ಮೇಲೆ ವ್ಯಾಪಕವಾದ ಪ್ರಭಾವವನ್ನು ಹೊಂದಿರುವ ಸಮಸ್ಯೆ (Problem of problems) ಎಂದು ಕರೆದರೂ ತಪ್ಪಿಲ್ಲ. ದಾರಿದ್ರ್ಯವನ್ನು ಹೋಗಲಾಡಿಸಲು ಮಾನವನು ಆದಿಯಿಂದಲೂ ಘೋರವಾದ ಹೋರಾಟವನ್ನು ನಡೆಸುತ್ತ ಬಂದಿರುವುದು ನಮಗೆ ಚರಿತ್ರೆಯಿಂದ ಕಂಡು ಬಂದಿದೆ. ಬಡತನ ಮಾನವ ನನ್ನು ಹೀನವಾದ ಸ್ಥಿತಿಗೆ ಒಯ್ದು ಅವನನ್ನು ದಾರುಣವಾದ ಕಷ್ಟಗಳಿಗೆ ಗುರಿಮಾಡು ವಂತಹುದು. "Poverty is the parent of revolution and Crime" (ಬಡತನವು ಕ್ರಾಂತಿ ಹಾಗು ಅಪರಾಧಗಳ ತೌರಾಗಿದೆ.) ಎಂದು ಮಹಾತತ್ವಜ್ಞಾನಿ ಅರಿಸ್ಟಾಟಲ್ (Aristatle) ನುಡಿದಿರುವುದು ಸತ್ಯವಾದುದು. "The inevitable consequence of poverty is dependence" (ಬಡತನದ ಅನಿವಾರ್ಯ ಪರಿಣಾಮವೆಂದರೆ ಪರಾವಲಂಬನ) ಎಂದು ಡಾ|| ಸ್ಯಾಮ್ಯುಯಲ್ ಜಾನ್ಸನ್ (Dr. Samuel Johnson) ಹೇಳಿರುವ ಮಾತು ಸಹಜವಾದುದು.

"Love and business and family and religion and art and patriotism are nothing but shadows of words when a man is starving" (ಮಾನವನು ಹೊಟ್ಟೆಗಿಲ್ಲದೆ ನರಳುತ್ತಿರುವಾಗ, ಪ್ರೇಮ, ದಂಧೆ, ಕುಟುಂಬ, ಧರ್ಮ, ಕಲೆ, ದೇಶಭಕ್ತಿ–ಎಂಬುವು

ಕೇವಲ ಶಬ್ದ ಛಾಯೆಗಳು) ಎಂದು ಓ. ಹೆನ್ರಿ (O. Henry) ಅಂಕಿತದ ವಿಲಿಯಂ ಸಿಡ್ನಿ ಪೋರ್ ಟರ್(William sydney porter) ಎಂಬ ಖ್ಯಾತ ಸಾಹಿತಿಯು ಅಣಕವಾಡಿರುವುದು ತುಣುಕು ಮಾತೇನಲ್ಲ! "poverty any where is danger every where" (ಬಡತನ ಎಲ್ಲೇ ಇರಲಿ ಅದು ಎಲ್ಲ ಕಡೆಯಲ್ಲೂ ಅಪಾಯವನ್ನು ತರುವಂತಹುದು) ಎಂಬ ಮಾತು ಆಧುನಿಕ ರಾಜಕಾರಣದ ಸೂತ್ರ ವಾಕ್ಯವಾಗಿದೆ. ಈ ಕಾರಣದಿಂದಲೇ ಶಿವಶರಣರು ದಾರಿದ್ರ್ಯ ನಿರ್ಮೂಲನ ಸಮಸ್ಯೆಯ ಕಡೆಗೆ ತಮ್ಮ ಚಿತ್ತವನ್ನು ಹರಿಸಿ ಅದರ ಪರಿಹಾರಕ್ಕೆ ಸೂಕ್ತ ಕ್ರಮಗಳನ್ನು ಸೂಚಿಸಿದ್ದಾರೆ. ಅವರು ಪ್ರತಿಪಾದಿಸಿರುವ ಷಟ್‌ಸ್ಥಲ ದರ್ಶನದಲ್ಲಿ ಮೊದಲನೆಯ ಸ್ಥಲವಾದ ಭಕ್ತಸ್ಥಲದಲ್ಲಿ ಈ ಸಮಸ್ಯೆಯನ್ನು ಸುದೀರ್ಘವಾಗಿ ಪ್ರಸ್ತಾಪಿಸಿ ಮಾರ್ಗ ದರ್ಶನ ಮಾಡಿರುತ್ತಾರೆ. ವಚನಕಾರರ ಮಾತಿನಲ್ಲಿ ಪ್ರತಿಯೊಬ್ಬ ಮಾನವನ ಸ್ಥಿತಿ "ಕಾಲ ಸಾಲ ದಾರಿದ್ರ್ಯಕ್ಕಂಜಿ ಮಸಿಯ ಪೂಸಿ ನೇರಿಲ ಹಣ್ಣ ಮಾರುವನಂತೆ" ಅತ್ಯಂತ ಚಿಂತಾಜನಕವಾಗಿದೆ. ದಾರಿದ್ರ್ಯಕ್ಕೆ ಔಷಧಿ ಬಯಕೆಯಲ್ಲ, ಭಿಕ್ಷೆಯಲ್ಲ, ಕಳವಲ್ಲ, ಕೊಲೆಯಲ್ಲ, ಹುಸಿಯಲ್ಲ, ಮುನಿಸಲ್ಲ! "ದರಿದ್ರ ಸಿರಿವಂತನ ನೆನೆದೊಡೆ ಸಿರಿವಂತನಾಗಬಲ್ಲನೇ ?", "ಬೇಡಲಾಗದು ಭಕ್ತ", "ಬೇಡುವ ಗುಣ ಅಮಳೇಶ್ವರ ಲಿಂಗಕ್ಕೆ ದೂರ", "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಸು ಗೊಳ್ಳಲು ಬೇಡ." ಎಂದ ಮೇಲೆ ಬಡತನಕ್ಕೆ ಇರುವ ಒಂದೇ ಒಂದು ಪರಿಹಾರ ವೆಂದರೆ ದುಡಿಮೆ. ದುಡಿಮೆಯನ್ನು ಶರಣರು ತಮ್ಮ ವಚನವಾಙ್ಮಯದ ಪರಿಭಾಷೆಯಲ್ಲಿ "ಕಾಯಕ" ಎಂದು ಕರೆದಿದ್ದಾರೆ. ಕಾಯದಿಂದ ಮಾಡುವ ಕರ್ಮವೇ ಕಾಯಕ. ಬೇಸಾಯ, ವ್ಯಾಪಾರ, ಪರಸೇವೆ ಇವೇ ಮುಂತಾದವು ಕಾಯಕದ ಹಲವು ರೂಪಾಂತರಗಳು. "ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು! ಬೆವಹಾರವ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು!" ಇದು ಶರಣಾಗ್ರಣಿ ಬಸವಣ್ಣನವರ ಕಾಯಕದ ಮಹೋನ್ನತ ಪ್ರತಿಜ್ಞೆ. ಯಾವ ಕಾಯಕವನ್ನು ಮಾಡಿದರೂ ಅದರ ಪ್ರತಿಫಲವನ್ನು ದೇವರು ಕೊಟ್ಟೇ ಕೊಡುವನೆಂಬ ಭರವಸೆ ಇರುವ ಕಾರಣ, ಬಂದ ಸಂಪಾದನೆಯನ್ನು ಅಥವಾ ಉತ್ಪಾದನೆಯನ್ನು ಜನಹಿತಕ್ಕಾಗಿ ಬಳಸುವುದೇ ದಿವ್ಯಮಾರ್ಗ.

"ನಾನಾವಾವ ಕರ್ಮಂಗಳ ಮಾಡಿದಡೆಯೂ ಆ ಕರ್ಮಂಗಳ ಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆನಾಗಿ ನೀ ಕೊಟ್ಟದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನಯ್ಯಾ!" ಇದು ಮಾನವನ ದಾರಿದ್ರ್ಯವಿಮೋಚನೆಯ ದಿವ್ಯ ಸಿದ್ಧಾಂತ. "The latest gospel in the world is know thy work and do it" (ನಿನ್ನ ಕೆಲಸವೇನೆಂಬುದನ್ನು ತಿಳಿದು ಅದನ್ನು ಮಾಡುವುದೇ ಅತ್ಯಂತ ಈಚಿನ ಸುವಾರ್ತೆ) ಎಂಬ ಥಾಮಸ್ ಕಾರ್ಲೈಲ್ (Thomas Carlyle)ನ ನುಡಿ ಕಾಯಕ ಸಿದ್ಧಾಂತವನ್ನು ಸ್ಪಷ್ಟೀಕರಿಸುತ್ತದೆ. ಶ್ರದ್ಧೆಯಿಂದ ಕಾಯಕವನ್ನು

ಮಾಡುವ ಮಾನವ ಸಮೃದ್ಧವಾದ ಸಂಪತ್ತನ್ನು ಹೊಂದಿರುತ್ತಾನೆ. "ಚಿತ್ತಶುದ್ಧನಾಗಿ ಕಾಯಕವ ಮಾಡುವ ಸದ್ಭಕ್ತಂಗೆ ಎತ್ತ ನೋಡಿದಡೆ ಅತ್ತ ಲಕ್ಷ್ಮಿ ತಾನೆ ತಾನಾಗಿ ಪ್ಪಳು" ಎಂಬ ಆಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮನ ನುಡಿ ಕಾಯಕದ ಮಹಿಮೆ ಯನ್ನು ಅಸಂದಿಗ್ಧವಾಗಿ ಸಾರುತ್ತದೆ. ಇದೇ ಸತ್ಯವನ್ನು ಸರ್ ವಿಲಿಯಂ ಆಸ್ಲರ್ (Sir william osler) ಈ ರೀತಿಯಾಗಿ ಸಮರ್ಥಿಸಿದ್ದಾನೆ:–"Though a little one, the master word (WORK) looms large in meaning. It is the open sesame to every portal, the great equalizer in the world, the true philosophers' stone which transmutes all the base metal of humanity into gold." (ಕಾಯಕ-ಎಂಬುದು ಚಿಕ್ಕ ಪದವಾದರೂ ದೊಡ್ಡ ಅರ್ಥವನ್ನು ಹೊಂದಿರುವ ಸಮರ್ಥ ಪದವಾಗಿದೆ. ಅದು ಪ್ರತಿ ಮಹಾದ್ವಾರವನ್ನೂ ತೆರೆಸಿಕೊಡುವ ದಿವ್ಯಮಂತ್ರವಾಗಿದೆ. ಜಗತ್ತಿನಲ್ಲಿ ಸಮಾನತೆಯನ್ನು ಸ್ಥಾಪಿಸುವ ಮಹತ್ವದ ಸಾಧನವಾಗಿದೆ. ಮನುಷ್ಯನ ದುರ್ಗುಣದ ಅವಲೋಹವನ್ನೆಲ್ಲ ಸದ್ಗುಣದ ಬಂಗಾರವನ್ನಾಗಿ ಪರಿವರ್ತಿಸುವ ಪರುಷಮಣಿಯಾಗಿದೆ) ಈ ದೆಸೆಯಿಂದಲೇ ಶರಣರು ಕಾಯಕಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟು, ಷಟ್ಸ್ಥಲ ದರ್ಶನದಲ್ಲಿ ಈಶ್ವರ, ಜೀವ, ಜಗತ್ತು ಎಂಬ(ತ್ರಿಪುಟಿಯ ಪವಿತ್ರ ಪ್ರತೀಕಗಳಾದ ಲಿಂಗ-ಜಂಗಮ ಗುರು ಎಂಬ ತ್ರಿಪುಟಿಯ ಸೇವೆಗೆ ಕಾಯಕವು ಮೂಲಾಧಾರವಾಗಿರುವ ಕಾರಣ "ಕಾಯಕದಲ್ಲಿ ನಿರತನಾದಡೆ, ಗುರುದರ್ಶನವಾದರೂ ಮರೆಯಬೇಕು, ಲಿಂಗಪೂಜೆ ಯಾದರೂ ತ್ಯಜಿಸಬೇಕು, ಜಂಗಮ ಮುಂದಿದ್ದರೂ ಹಂಗು ಹರಿಯಬೇಕು" ಎಂದು ವಿಮರ್ಶಿಸಿ, "ಕಾಯಕವೇ ಕೈಲಾಸ" ಎಂಬ ಸಿದ್ಧಾಂತವನ್ನು ಸ್ಥಾಪಿಸಿ, ಜಗತ್ತಿನ ದಾರಿದ್ರ್ಯ ನಿರ್ಮೂಲನೆಯ ಮಹಾ ಸಮಸ್ಯೆಯನ್ನು ಸರ್ವಕಾಲಕ್ಕೂ ಬಿಡಿಸಿ ಉಪ ಕರಿಸಿದ್ದಾರೆ.

೩. **ಅನಕ್ಷರತಾ ನಿವಾರಣ** (Liquidation of illiteracy) ಇದು ಜಗತ್ತಿನ ಎರಡನೆಯ ಮುಖ್ಯ ಮಹಾ ಸಮಸ್ಯೆ. ವಿದ್ಯೆ ಮಾನವನ ಸುಖ. ಸಂತೋಷ ಸ್ವಾತಂತ್ರ್ಯಗಳಿಗೆ ಅಡಿಗಲ್ಲಾಗಿದೆ. ವಿದ್ಯೆಯಿಲ್ಲದ ಮಾನವ ಪಶು. "ವಿದ್ಯಾವಿಹೀನಃ ಪಶುಃ". ವಿದ್ಯಾವಂತ ಸಿಂಹದಂತೆ. ಅವಿದ್ಯಾವಂತ ಕೋಣನಂತೆ. "ವಿದ್ಯವನುಳ್ಳಂ ಸಿಂಹಸಮಾನಂ, ವಿದ್ಯಾಹೀನಂ ಮಹಿಷಸಮಾನಂ" "Knowledge is power" (ಜ್ಞಾನವೇ ಶಕ್ತಿ) ಎಂದು ಫ್ರಾನ್ಸಿಸ್ ಬೇಕನ್ ಸತ್ಯವನ್ನೇ ನುಡಿದಿದ್ದಾನೆ. "ನ ಹಿ ಜ್ಞಾನೇನ ಸದೃಶಂ" (ಜ್ಞಾನಕ್ಕೆ ಸಮಾನವಾದುದು ಮತ್ತೊಂದಿಲ್ಲ)ಎಂಬ ಋಷಿವಾಣಿ ಈ ಸತ್ಯವನ್ನು ಸಮರ್ಥಿಸುತ್ತದೆ. "So long as we have illiteracy, ill health, intellectual

serfdom and spiritual slarvery, we have no true liberty" (ಎಲ್ಲಿಯವರೆಗೆ ನಾವು ಅಶಕ್ತತೆ; ಅನಾರೋಗ್ಯ, ಬೌದ್ಧಿಕ ಹಾಗೂ ಆಧ್ಯಾತ್ಮಿಕಗುಲಾಮತನ ಇವುಗಳನ್ನು ಹೊಂದಿರುವೆವೋ ಅಲ್ಲಿಯವರೆಗೆ ನಮಗೆ ನಿಜವಾದ ಸ್ವಾತಂತ್ರ್ಯ ಇರುವುದಿಲ್ಲ) ಎಂಬ ನಮ್ಮ ರಾಷ್ಟ್ರಪತಿ ಡಾ. ರಾಧಾಕೃಷ್ಣ ಅವರ ನುಡಿ ಗಮನಾರ್ಹವಾಗಿದೆ. ತತ್ತ್ವಜ್ಞಾನಿ ಇಮ್ಯಾನ್ಯುಯಲ್ ಕ್ಯಾಂಟ್ ಮಾತಿನಲ್ಲಿ ಹೇಳುವುದಾದರೆ, ವಿದ್ಯೆ ಮಾನವರು ಎದುರಿಸಬೇಕಾದ ಅತ್ಯಂತದೊಡ್ಡ ಮತ್ತು ಅತ್ಯಂತ ಕಠಿಣ ಸಮಸ್ಯೆಯಾಗಿದೆ (Education is the greatest and most difficult problem mankind has to face). ಇನ್ನು ಉತ್ತಮ ವಿದ್ಯೆಗೆ ಉತ್ತಮ ಬುದ್ಧಿ ಬೇಕು. ಉತ್ತಮ ಬುದ್ಧಿಗೆ ಉತ್ತಮ ಶರೀರ ಬೇಕು. ಆರೋಗ್ಯದಿಂದ ಕೂಡಿದ ಶರೀರ ಆರೋಗ್ಯದಿಂದ ಕೂಡಿದ ಬುದ್ಧಿಯನ್ನು ಕೊಡುತ್ತದೆ. "Sound mind in a sound body" (ಒಳ್ಳೆಯ ಶರೀರದಲ್ಲಿ ಒಳ್ಳೆಯ ಮನಸ್ಸು) ಎಂಬುದು ಅನುಭವದ ವಾಣಿ. ಈ ದೆಸೆಯಿಂದಲೇ ಶರಣರು ವಿದ್ಯಾರ್ಜನೆಯ ಯೋಜನೆಯಲ್ಲಿ ಶರೀರದ ಅಚ್ಚುಕಟ್ಟಿಗೆ ಹೆಚ್ಚಿನ ಗಮನ ಕೊಟ್ಟಿರುತ್ತಾರೆ. ದೇಹ ದೇವಸ್ಥಾನವಾಗಬೇಕು ಎಂಬುದು ಅವರ ಸಿದ್ಧಾಂತ. "ದೇಹವೇ ದೇಗುಲ" ಎಂಬುದು ಅವರ ಸೂತ್ರವಾಕ್ಯ. ಶರೀರದ ತರಬಿಯತಿಯ ಅನಂತರ ಮನಸ್ಸಿನ ತರಬಿಯತಿಗೆ ತೊಡಗಬೇಕು. ಮನಸ್ಸು ಕೋತಿಯಂತೆ ಬಹಳ ಚಂಚಲವಾದುದು. "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು! ನಿಂದಲ್ಲಿ ನಿಲ್ಲಲೀಯದು! ಹೊಂದಿದಲ್ಲಿ ಹೊಂದಲೀಯದು!" ಮನಸ್ಸು ನಾಯಿಯಂತೆ ಕೆಟ್ಟ ಚಟಗಳ ಕಡೆಗೆ ಹರಿಯುತ್ತದೆ. "ಅಂದಣವನೇರಿದ ಸೊಣಗ ಕಂಡಡೆ ಬಿಡದು ಮುನ್ನಿನ ಸ್ವಭಾವವನು! ಸುಡು! ಸುಡು! ಮನವಿದು ವಿಷಯಕ್ಕೆ ಎಳಸುವುದು! ಮೃಡ! ನಿಮ್ಮ ಅನುದಿನ ನೆನೆವಂತೆ ಮಾಡು ಎನ್ನ ಮನವ!" ಉತ್ತಮ ಹಾಗೂ ಹಿತ ಮಿತ ಆಹಾರ, ವ್ಯಾಯಾಮ, ವಿಶ್ರಾಂತಿ, ಧ್ಯಾನ, ಕ್ರೀಡೆ, ಕಾಯಕ ಇತ್ಯಾದಿ ದಿನಚರಿ ಕ್ರಿಯೆಗಳ ಮೂಲಕ ನಾವು ಮನಸ್ಸನ್ನು ಹತೋಟಿಗೆ ತಂದುಕೊಳ್ಳಬೇಕು. "ಹಲವು ಕಡೆಗೆ ಹರಿವ ಚಿತ್ತವ ಮನವ ನೆನಹಿನ ಹಸ್ತದಿಂದಲಿ ಹಿಡಿದು ಇಷ್ಟ ಲಿಂಗದೊಳು ಬೆರಸಿ, ಲಿಂಗಯೋಗವನಾಚರಿಸಿ, ದೃಢತನು ಮನಂಗಳ ಗಳಿಸಿ, ಕೃತ ನಿಶ್ಚಯದಿಂ ಅನಿಷ್ಟವ ಪರಿಹರಿಸಬಲ್ಲಡೆ ಅದೇ ಲಿಂಗಾಚಾರವು. ಮನಸ್ಸು ಒಮ್ಮೆ ಹತೋಟಿಗೆ ಬಂದಿತೆಂದರೆ ವಿದ್ಯೆಯತ್ತಣ ಹಾದಿ ಒಹುಮಟ್ಟಿಗೆ ಸುಗಮವಾಯಿತೆಂತಲೇ! ಆದರೆ ವಿದ್ಯಾರ್ಜನೆಯ ಹಾದಿಯ ಪ್ರಾರಂಭದಲ್ಲಿ ಸರ್ವಸಾಮಾನ್ಯವಾಗಿ ಒಂದು ಮುಖ್ಯ ಅಡಚಣೆ ತಲೆ ಹಾಕುತ್ತದೆ. ನಮ್ಮ ಶಕ್ತಿಯಲ್ಲಿ ನಮಗೇ ನಂಬಿಕೆಯಿಲ್ಲದಿರುವುದೇ ಆ ಅಡಚಣೆ. ಇದನ್ನು ಮನಶ್ಶಾಸ್ತ್ರದಲ್ಲಿ "Inferiority complex" (ನ್ಯೂನ್ಯಭಾವ) ಎಂದು

ಕರೆಯಲಾಗುವುದು. ಈ ನೈಚ್ಯ ಭಾವವನ್ನು ನಾವು ಮೊದಲು ಹೋಗಲಾಡಿಸಿ ಕೊಳ್ಳಬೇಕು. "ಆಡಿಕೊಂಡಾರೆಂದು ಅಂಜಲದೇಕೆ? ನಾಸ್ತಿಕರಾಹೇವೆಂದು ನಾಚಲ ದೇಕೆ? ಏನನೂ ಅರಿಯೆವೆಂದು ಮೌನಗೊಂಡಿರಲೇಕೆ? ಕೂಡಲ ಸಂಗಮದೇವನ ಮುಂದೆ ದಂಪಣ-ದತ್ತಣ ಎನ್ನಿ!". ಈ ಒಂದು ಮನೋಧೈರ್ಯ ಬಂದಿತೆಂದರೆ ವಿದ್ಯಾರ್ಜನೆ ಸುಲಭ. "ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಸ್ಫಟಿಕದ ಶಲಾಕೆ ಯಂತಿರಬೇಕು, ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು" ನಮ್ಮ ನುಡಿ ಒಳ್ಳೆಯ ಪದ, ಅರ್ಥ, ರಸ, ಭಾವಗಳಿಂದ ಕೂಡಿರಬೇಕು. ಇದು ವಿದ್ಯಾವ್ಯಾಸಂಗದ ಮೊದಲ ಘಟ್ಟ ಈ ಘಟ್ಟದಲ್ಲಿ ಪರಿಣತನಾದ ಮೇಲೆ ಅಷ್ಟಕ್ಕೇ ನಿಂತರೆ ಸಾಲದು! ನಮ್ಮ ನುಡಿ ಕಾವ್ಯಮಯವೂ ಆಗಬೇಕು. ಮಾನವ ಕೇವಲ ಓದು ಬರೆಹ ಲೆಕ್ಕ (The three R's) ಕಲಿತರೆ ಸಾಲದು. ಅವನು ಕವಿಯೂ ಆಗಬೇಕು. ಇದು ವಿದ್ಯಾವ್ಯಾಸಂಗದ ಎರಡನೆಯ ಘಟ್ಟ. "ತಾಳ ಮಾನ ಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ, ದೇವಗಣ ಅಮೃತಗಣವನರಿಯೆ! ಕೂಡಲ ಸಂಗಮದೇವಾ ನಿನಗೆ ಕೇಡಿಲ್ಲವಾಗಿ ನಾನು ಒಲಿದಂತೆ ಹಾಡುವೆ!" ಇಲ್ಲಿ ನಾವು ನೆನಪಿಟ್ಟು ಕೊಳ್ಳಬೇಕಾದ ಮುಖ್ಯ ಅಂಶವೆಂದರೆ 'ಒಲಿದಂತೆ ಹಾಡುವುದು.' ಅಲಂಕಾರ ಛಂದೋನಿಯಮಗಳ ನಲಿಮೆಗಿಂತಲೂ ರಸಭಾವ ಸ್ಫೂರ್ತಿಗೆ ಒಲಿಮೆ ಮುಖ್ಯ. ಈ ಒಲಿಮೆಯೇ ಕಾವ್ಯದ ತಿರುಳು. ಇದನ್ನು ಕಾವ್ಯಶಾಸ್ತ್ರದಲ್ಲಿ ರಸವೆಂದು ಕರೆಯ ಲಾಗುವುದು. ಹೀಗೆ ಈ ಘಟ್ಟದಲ್ಲಿ ಸಾಮರ್ಥ್ಯವನ್ನು ಪಡೆದ ಮೇಲೆ ಮುಂದೆ ವಿದ್ಯಾವ್ಯಾಸಂಗದ ಮೂರನೆಯ ಘಟ್ಟವುಂಟು. ಇದೇ ಅನುಸಂಧಾನದ ವಿದ್ಯೆಯ ಘಟ್ಟ. ಅನುಸಂಧಾನವೆಂದರೆ ಯಾವುದೇ ವಸ್ತುವನ್ನು ಅಥವಾ ವಿಚಾರವನ್ನು ಕುರಿತು ಮನಸ್ಸನ್ನು ಕೇಂದ್ರೀಕರಿಸುವುದು. ಈ ಕೇಂದ್ರೀಕರಣವನ್ನು ಯೋಗ–ಎಂದೂ, ಕೇಂದ್ರೀಕರಣ ಸಾಮರ್ಥ್ಯವನ್ನು "Intuition" ಅಂತರ್ದೃಷ್ಟಿ ಎಂದೂ, ಈಕೇಂದ್ರೀಕರಣ ಕ್ರಿಯೆಯನ್ನು "Tuning with the Infinite"(ಅನಂತ ದೊಡನೆ ಶ್ರುತಿಗೂಡಿಸುವುದು) ಎಂದೂ ಬಗೆಬಗೆಯಾಗಿ ಕರೆಯಲಾಗುವುದು. ಈ ಮೂರನೆಯ ಘಟ್ಟದ ವಿದ್ಯಾವ್ಯಾಸಂಗದಲ್ಲಿ ಪರಿಣತನಾದ ಮಾನವನಿಗೆ ವಿಶ್ವದ ನಿಗೂಢ ತತ್ವಗಳ ನಿಶ್ಚಿತ ಅರಿವು ಉಂಟಾಗುವುದು. "ಭಕ್ತಿಯೆಂಬ ಪೃಥ್ವಿಯ ಮೇಲೆ ಗುರು ವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು, ವಿಚಾರವೆಂಬ ಹೂವಾ ಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿಯೆಂಬ ಹಣ್ಣಾಯಿತ್ತು! ನಿಷ್ಪತ್ತಿ ಯೆಂಬ ಹಣ್ಣು, ತೊಟ್ಟು ಬಿಟ್ಟು ಕಳಚಿಬೀಳುವಲ್ಲಿ, ಕೂಡಲ ಸಂಗಮ ದೇವನು ತನಗೆ ಬೇಕೆಂದು ಎತ್ತಿಕೊಂಡ!" "ಏನೆಂಬೆ ಏನೆಂಬೆ ಒಂದು ಎರಡಾದುದ! ಏನೆಂಬೆ ಏನೆಂಬೆ ಎರಡು ಒಂದಾದುದ!", "ಸಮಸ್ತ ಕತ್ತಲೆಯೆ ಮುಸುಕವ ಕಳೆದು, ಬೆಳಗು ಬೆಳಗಿಂಗೆ ಸಿಂಹಾಸನವಾಗಿ, ಬೆಳಗು ಬೆಳಗ ಕೂಡಿದ ಕೂಟವ ಕೂಡಲ ಸಂಗಯ್ಯ

ತಾನೇ ಬಲ್ಲ!", "ಒಡಲೆಂಬ ಗುಡಿಯೊಳಗೆ ಒಡೆದು ಮೂಡಿದ ಲಿಂಗದ ಎಡೆಯ ನೋಡಲೆಂದು ಹೋದರೆ ನೋಡುವ ನೋಟವೆಲ್ಲ ಲಿಂಗವಾಯಿತ್ತು! ಈ ಬೆಡಗು ಬಿನ್ನಾಣದ ಲಿಂಗವ ತುಡುಕಿ ಹಿಡಿದು ಕೂಡ ಬಲ್ಲಾತ ಮೃಡನಲ್ಲದೆ ಮಾನವನಲ್ಲ-ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ!", "ಕಾಯ ಮುನ್ನವೋ, ಕಾಯದಲ್ಲಿಪ್ಪ ಮನ ಮುನ್ನವೋ? ಮನದಲ್ಲಿಪ್ಪ ಚೈತನ್ಯ ಮುನ್ನವೋ? ಚೈತನ್ಯದಲ್ಲಿಪ್ಪ ಮಾಯೆ ಮುನ್ನವೋ? ಇವಾವೂ ಮುನ್ನವಲ್ಲ, ಮುನ್ನವಲ್ಲ! ಕಪಿಲ ಸಿದ್ಧಮಲ್ಲಿಕಾರ್ಜುನಾ-ನಿನ್ನ ನಿರಾಳದ ನಿಜದ ನಿರ್ಮಾಯಲಿನ ಶೂನ್ಯದ ಶೂನ್ಯವೇ ಮುನ್ನ ನೋಡು!", "ನೋಟವೇ ಕೂಟ, ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ, ಸಮರಸವೇ ಲಿಂಗ, ಲಿಂಗವೇ ಪರಿಪೂರ್ಣ, ಪರಿಪೂರ್ಣವೇ ಪರಬ್ರಹ್ಮ, ಪರಬ್ರಹ್ಮವೇ ತಾನು! ಇಂತೀ ನಿಜವ ನಿಮ್ಮ ಶರಣರು ಬಲ್ಲರಲ್ಲದೆ ಕಣ್ಣುಗೆಟ್ಟ ಅಣ್ಣಗಳೆತ್ತ ಬಲ್ಲರು ಗುಹೇಶ್ವರಾ!" ಹೀಗೆ ಮಾನವನು ಈ ಮೂರನೆಯ ಘಟ್ಟದಲ್ಲಿ ಪಿಂಡಾಂಡ ಬ್ರಹ್ಮಾಂಡಗಳ, ಜೀವಾತ್ಮ ಪರಮಾತ್ಮರುಗಳ, ಹುಟ್ಟು ಸಾವುಗಳ, ಸತ್ಯ ಮಿಥ್ಯೆಗಳ, ಪಾಪಪುಣ್ಯಗಳ, ಸ್ವರ್ಗ ನರಕಗಳ-ಹೀಗೆ ಅನಂತ ವಿಚಾರಗಳ ಸತ್ಯ ನಿತ್ಯ ಅಂಶಗಳನ್ನು ಅರಿಯುತ್ತಾನೆ. ಈ ರೀತಿ ಸುವ್ಯವಸ್ಥಿತವಾದ ಮೂರು ಘಟ್ಟಗಳಿಂದ ಕೂಡಿದ ಈ ಪರಿಪೂರ್ಣ ವಿದ್ಯಾವ್ಯಾಸಂಗದ ಪರಿಣಾಮವಾಗಿ ಮಾನವನು ಪ್ರಾಪಂಚಿಕ ಪಾರಿಭಾಷಿಕ, ಹಾಗೂ ಪಾರಮಾರ್ಥಿಕ ಜ್ಞಾನದಲ್ಲಿ ಅರಿತವನಾಗುವನು, ನುರಿತವನಾಗುವನು. ವಿಜ್ಞಾತನಾಗುವನು, ವಿಖ್ಯಾತನಾಗುವನು. ಇವನಿಗೆ ಷಟ್ಸ್ಥಲ ಶಾಸ್ತ್ರದಲ್ಲಿ ಮಾಹೇಶ್ವರನೆಂಬ ಅಭಿಧಾನವಿದೆ. ಈ ಮಾಹೇಶ್ವರನನ್ನು ಪಾಶ್ಚಿಮಾತ್ಯ ದಾರ್ಶನಿಕರು "Superman" (ದಿವ್ಯಮಾನವ) ಎಂದು ಕರೆಯುವುದುಂಟು. ಈ ರೀತಿಯಾಗಿ ಮಾನವನನ್ನು ದಿವ್ಯಮಾನವನನ್ನಾಗಿ ಮಾಡುವ ಈ ವಿದ್ಯಾವ್ಯಾಸಂಗದ ಪೂರ್ಣ ಪ್ರಯೋಗವು ಷಟ್ಸ್ಥಲ ಶಾಸ್ತ್ರದ ಎರಡನೆಯ ಸ್ಥಲವಾದ ಮಾಹೇಶ್ವರ ಸ್ಥಲದಲ್ಲಿ ಪ್ರತಿಪಾದಿತವಾಗಿ ಜಗತ್ತಿನ ಅನಕ್ಷರತಾನಿವಾರಣೆಯ ಎರಡನೆಯ ಮಹಾ ಸಮಸ್ಯೆಗೆ ಫಲಪ್ರದ ಉತ್ತರವನ್ನು ಒದಗಿಸುವುದಾಗಿದೆ.

### ೩. ಸಂಪತ್ತಿನ ಸಮವಿನಿಯೋಗ (Equal distribution of wealth)

ಇದು ಜಗತ್ತಿನ ಮೂರನೆಯ ಮಹಾ ಸಮಸ್ಯೆ. ಸಂಪತ್ತಿನ ಅಸಮ ಹಂಚಿಕೆ ಕೇವಲ ವ್ಯಕ್ತಿಗಳ ಹಾಗೂ ಕುಟುಂಬಗಳ ಸಮಸ್ಯೆಯಾಗಿರದೆ ದೇಶಗಳ ಹಾಗೂ ರಾಷ್ಟ್ರಗಳ ಸಮಸ್ಯೆಯಾಗಿದೆ. ಉದ್ಯೋಗ ಉತ್ಪಾದನೆಗಳು ಸಾಕಷ್ಟು ಇಲ್ಲದಿರುವುದು, ಉಳ್ಳವರು ಇಲ್ಲದವರ ಅಸಹಾಯಕತೆಯನ್ನು ದುರುಪಯೋಗಪಡಿಸಿಕೊಂಡು ಅವರ ದೈಹಿಕ ಹಾಗೂ ಮಾನಸಿಕ ದುಡಿಮೆಗೆ ತಕ್ಕಷ್ಟು ಸಂಬಳ, ಕೂಲಿ ಹಾಗೂ ಸಂಭಾವನೆಗಳನ್ನು ಕೊಡದಿರುವುದು. ಶ್ರೀಮಂತರು ತಮ್ಮ ಹಣವನ್ನು ಯಾವ ಉದ್ಯಮಗಳಿಗೂ ವಿನಿಯೋಗಿಸದೆ ಬಚ್ಚಿಡುವುದು, ಅತಿವೃಷ್ಟಿ ಅನಾವೃಷ್ಟಿಗಳು,

ಭೂಕಂಪ ಪ್ರವಾಹ ಮುಂತಾದ ಪ್ರಕೃತಿಯ ವಿಕೋಪಗಳು, ಯುದ್ಧಗಳು, ಕ್ರಾಂತಿಗಳು, ವ್ಯರ್ಥವಾದ ದುಂದುಗಾರಿಕೆಗಳು, ಉತ್ಪಾದಕವಲ್ಲದ ಸಾಲ ಸೋಲಗಳು— ಇವೇ ಮುಂತಾದುವು ಸಂಪತ್ತಿನ ಅಸಮ ಹಂಚಿಕೆಗೆ ಕಾರಣಗಳಾಗಿವೆ. ಈ ಅಸಮ ಹಂಚಿಕೆಯ ದೆಸೆಯಿಂದ ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುವುದೂ, ದರಿದ್ರರು ಮತ್ತಷ್ಟು ದರಿದ್ರರಾಗುವುದೂ ಸಹಜವಾಗಿದೆ. ಇದರಿಂದ ಮಾನವನ ಬಾಳುವೆ ಕಷ್ಟಮಯವೂ ದುಃಖಪೂರಿತವೂ ಆಗುತ್ತದೆ. ಸರ್ವ ಸಂಪತ್ತುಗಳ ಪ್ರತೀಕವಾದ ಹಣವು ಶರೀರದಲ್ಲಿ ಚಲಿಸುವ ರಕ್ತವಿದ್ದಂತೆ. ರಕ್ತ ಎಲ್ಲ ಅಂಗಗಳಲ್ಲೂ ಚಲಿಸದೆ ಒಂದು ಅಥವಾ ಕೆಲವೇ ಅಂಗಗಳಲ್ಲಿ ನಿಂತು ಹೆಪ್ಪುಗಟ್ಟಿದಲ್ಲಿ ಉಳಿದ ಅಂಗಗಳು ಕೆಡುವುದಲ್ಲದೆ ಕೊನೆಯಲ್ಲಿ ಶರೀರವೆಲ್ಲ ಕೆಡುವಂತೆ, ಹಣವೆಲ್ಲ ಜನತೆಯಲ್ಲಿ ಚಲಿಸದೆ ಒಬ್ಬರ ಅಥವಾ ಕೆಲವೇ ಜನರ ಕೈಯಲ್ಲಿ ಕೇಂದ್ರಿತವಾದಲ್ಲಿ ಉಳಿದ ಜನರು ಕೆಡುವುದು ಮಾತ್ರವಲ್ಲದೆ ಜನತೆಯಾದ್ಯಂತ ಕೆಡುವುದು ಜಗತ್ತಿನ ಜನಾಂಗಗಳ ಇತಿಹಾಸದಿಂದ ಕಂಡು ಬಂದಿದೆ. ಈ ಸಮಸ್ಯೆಯ ಪರಿಹಾರಕ್ಕೆ ಹಲವರು ಧರ್ಮಾತ್ಮರು, ಸಮಾಜವಾದಿಗಳು ರಾಜಕಾರಣಿಗಳು ಪ್ರಯತ್ನಗಳನ್ನು ಮಾಡಿರುವುದೂ ಸಹ ನಮಗೆ ಚರಿತ್ರೆಯಿಂದ ಗೊತ್ತಾಗುತ್ತದೆ. ಆಧುನಿಕ ರಾಜಕೀಯ ಸಂತರಾದ ಮಹಾತ್ಮ ಗಾಂಧಿಯವರು ಈ ಬಗೆಗೆ ನುಡಿದಿರುವ ಗಮನಾರ್ಹ ಮಾತುಗಳಾಗಿವೆ. Economic equality is the master—Key to non-violent independence. Working for economic equality means abolishing the eternal con-flict between Capital and Labour" (ಆರ್ಥಿಕ ಸಮಾನತೆ ಅಹಿಂಸಾತ್ಮಕ ಸ್ವಾತಂತ್ರ್ಯಕ್ಕೆ ಸಮರ್ಥ ಪರಿಹಾರವಾಗಿದೆ. ಆರ್ಥಿಕ ಸಮಾನತೆಗಾಗಿ ಕಾರ್ಯ ಕೈಗೊಳ್ಳುವುದೆಂದರೆ ಬಂಡವಾಳಗಾರರ ಹಾಗು ದುಡಿಮೆಗಾರರ ನಡುವೆ ಇರುವ ನಿರಂತರ ಹೋರಾಟವನ್ನು ಹೋಗಲಾಡಿಸುವುದು ಎಂದು ಅರ್ಥ) ಈ ಅರ್ಥವನ್ನು ಸಮರ್ಥಿಸಿ ಪ್ರಸಿದ್ಧ ಸಮಾಜ ಸಿದ್ಧಾಂತಿಯಾದ ಕಾರ್ಲಮಾರ್ಕ್ಸ್ ಈ ಮುಂದೆ ಕಂಡ ಸೂತ್ರವನ್ನು ಪ್ರತಿಪಾದಿಸಿದ್ದಾನೆ. From each according to his abilities to each according to his needs" ಪ್ರತಿಯೊಬ್ಬನಿಂದಲೂ ಅವನ ಸಾಮರ್ಥ್ಯಕ್ಕೆ ತಕ್ಕಂತೆ ಪ್ರತಿಯೊಬ್ಬನಿಗೂ ಅವನ ಆವಶ್ಯಕತೆಗೆ ತಕ್ಕಷ್ಟು) ಈ ಅರ್ಥ ಮತ್ತು ಸೂತ್ರಗಳನ್ನು ಕಾರ್ಯರೂಪಕ್ಕೆ ತರುವುದೇ ಇಂದು ಜಗತ್ತಿನ ಮುಂದಿರುವ ಮಹಾ ಸಮಸ್ಯೆ. ಈ ಸಮಸ್ಯೆಯ ಪರಿಹಾರಕ್ಕೆ ಶರಣರು ದಾಸೋಹ ಕ್ರಿಯೆಯನ್ನು ಪ್ರತಿಪಾದಿಸಿದ್ದಾರೆ. "ಸೋಹಂ—ಎಂಬುದು ಅಂತರಂಗದ ಮದ ! ಶಿವೋಹಂ—ಎಂಬುದು ಬಹಿರಂಗದ

ಮದ! ಈ ದ್ವಂದ್ವವ ಅಳಿದು ದಾಸೋಹಂ—ಎಂದೆನಿಸಯ್ಯ—ಕಪಿಲ ಸಿದ್ಧಮಲ್ಲಿ ಕಾರ್ಜುನಾ!" ತಾನು ಮಾಡುವ ಉತ್ಪಾದನೆಯಲ್ಲಿ ತನ್ನ ನಿತ್ಯಜೀವನಕ್ಕೆ ಬೇಕಾದಷ್ಟನ್ನು ಇಟ್ಟುಕೊಂಡು ಉಳಿದುದನ್ನು ಇಲ್ಲದವರಿಗೆ ಹಂಚುವುದೇ ದಾಸೋಹ. ವಚನ ಶಾಸ್ತ್ರದ ಪರಿಭಾಷೆಯಲ್ಲಿ "ತನು ಮನ ಧನ" ಗಳನ್ನು "ಗುರು ಲಿಂಗ ಜಂಗಮ"ಕ್ಕೆ ಅರ್ಪಿಸಬೇಕು ಅರ್ಪಿಸಿದ ಮೇಲೆ ಉಳಿಯುವುದೇ ಪ್ರಸಾದ ಪ್ರಸಾದ ಪ್ರಸನ್ನತೆಯನ್ನು ಉಂಟು ಮಾಡುವ ವಸ್ತು. ಪ್ರಸಾದದಿಂದಲೆ ಜಗತ್ತಿನ ಕಲ್ಯಾಣ ಸಾಧ್ಯ" ದಾಸೋಹವಿಲ್ಲದೆ ತನ್ನ ಒಡಲ ಹೊರೆವವನು ಸದ್ಭಕ್ತರೊಳಗೆ ಸಲ್ಲ. ಅವನಿಗೆ ಪ್ರಸಾದವಿಲ್ಲ. ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ ಅವನು ಉಭಯ ಭ್ರಷ್ಟ. ಇದನರಿತು ಪರರ ತನ್ನಂತೆ ಭಾವಿಸಿ ವಿಶ್ವಾಸದಿಂ ದಾಸೋಹವ ಮಾಡಲು ಇಹಸಿದ್ಧಿ ಪರಸಿದ್ಧಿ, ಸರ್ವಸಿದ್ಧಿ,—ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ!" ತನು ದಾಸೋಹಕ್ಕೆ ಉಬ್ಬುವಂತೆ ಮಾಡು, ಮನ ದಾಸೋಹಕ್ಕೆ ಹಿಗ್ಗುವಂತೆ ಮಾಡು! ಧನ ದಾಸೋಹಕ್ಕೆ ಹೆಚ್ಚುವಂತೆ ಮಾಡು! ನಿಮ್ಮ ಶರಣರ ಪ್ರಸಾದದಲ್ಲಿ ನಾನು ನಿರಂತರ ಆಡಿ ಹಾಡಿ, ನೋಡಿ ಕೂಡಿ,ಭಾವಿಸಿ ಸುಖಿಸಿ ಪರಿಣಾಮಿಸುವಂತೆ ಮಾಡು–ಕೂಡಲ ಸಂಗಮ ದೇವಾ!" "ಶುದ್ಧ ಪ್ರಸಾದ ಗುರುವಿನದು, ಸಿದ್ಧ ಪ್ರಸಾದ ಲಿಂಗದ್ದು ಪ್ರಸಿದ್ಧ ಪ್ರಸಾದ ಜಂಗಮದ್ದು! ಇಂತೀ ತ್ರಿವಿಧ ಪ್ರಸಾದ ಒಂದಾದವರ ತೋರಾ ಕೂಡಲ ಸಂಗಮದೇವಾ!" ಈ ರೀತಿಯಾಗಿ ಪ್ರತಿಯೊಬ್ಬ ಪ್ರಜೆಯ ಸಂಪಾದನೆಯೂ ದಾಸೋಹದ ಮೂಲಕ ಪ್ರಸಾದವಾಗಿ ಪರಿವರ್ತಿತವಾದಾಗಲೇ ಜಗತ್ತಿನಲ್ಲಿ ಸಂಪತ್ತಿನ ಸಮ ವಿನಿಯೋಗವು ಕಾರ್ಯಗತವಾಗಿ ಮಾನವ ಕೋಟಿಗೆ ಕಲ್ಯಾಣವಾಗುವುದೆಂಬುದೇ ಶರಣರ ದಿವ್ಯ ಸಂದೇಶವಾಗಿದೆ. ಸಂಪತ್ ಸಮ ವಿನಿಯೋಗದ ಯೋಜನೆಯನ್ನು ವಚನಕಾರರು ಷಟ್ಸ್ಥಲ ಶಾಸ್ತ್ರದಲ್ಲಿ ಮೂರನೆಯ ಸ್ಥಲವಾದ ಪ್ರಸಾದಿ ಸ್ಥಲದಲ್ಲಿ ಸವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ.

೪. **ಜಾತ್ಯತೀತ ಸಮಾಜ ನಿರ್ಮಾಣ** (Creation of a class-less Society)

ಇದು ಜಗತ್ತಿನ ನಾಲ್ಕನೆಯ ಮಹಾ ಸಮಸ್ಯೆ. ಈ ಸಮಸ್ಯೆಯನ್ನು ಶರಣರು ಷಟ್ಸ್ಥಲ ಶಾಸ್ತ್ರದ ನಾಲ್ಕನೆಯ ಸ್ಥಲವಾದ ಪ್ರಾಣಲಿಂಗಿ ಸ್ಥಲದಲ್ಲಿ ಸವಿಸ್ತಾರವಾಗಿ ವಿಮರ್ಶೆ ಮಾಡಿದ್ದಾರೆ. ಜಾತಿ ಎಂಬುದು ಮಾನವನನ್ನು ಬಹುಕಾಲದಿಂದ ಪೀಡಿಸುತ್ತ ಬಂದಿರುವ ಒಂದು ಭಯಂಕರ ಹಳೆಯ ರೋಗವಾಗಿದೆ. ಗುಣಕ್ಕೆ ಪ್ರಾಧಾನ್ಯವನ್ನು ಕೊಡುವ ಬದಲು ಹುಟ್ಟು, ಬಣ್ಣ, ಕಸುಬು, ಭಾಷೆ, ಮತ ಪಂಥ ಮುಂತಾದ ಬಾಹ್ಯ ವಿಚಾರಗಳಿಗೆ ಪ್ರಾಧಾನ್ಯವನ್ನು ಕೊಟ್ಟುದರಿಂದ ಮಾನವರಲ್ಲಿ ಉಚ್ಚ ನೀಚ, ಶ್ರೇಷ್ಠ ಕನಿಷ್ಠ, ಪವಿತ್ರ ಅಪವಿತ್ರ ಎಂಬ ತರತಮ ಭಾವಗಳು ಉದ್ಭವಿಸಿ ಮಾನವ ಕುಲ ಗುಂಪುಗಳಾಗಿ ಒಡೆದು ಹೋಗಿ, ಪ್ರಗತಿ ಕುಂಠಿತವಾಗಿರುವುದು ಇತಿಹಾಸಪ್ರಸಿದ್ಧ

ಅಂಶವಾಗಿದೆ. ಜಗತ್ತಿನ ಅತ್ಯಂತ ಹಳೆಯ ಗ್ರಂಥವೆಂದು ಪರಿಗಣಿತವಾದ ಋಗ್ವೇದದಲ್ಲಿ "ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ ಸಂಭ್ರಾತರೋ ವಾವೃದುಃ ಸೌಭಗಾಯ(ಯಾರೂ ದೊಡ್ಡವರಲ್ಲ; ಯಾರೂ ಚಿಕ್ಕವರಲ್ಲ. ಎಲ್ಲರೂ ಸೋದರರಂತೆ ವರ್ತಿಸಿ ಸೌಭಾಗ್ಯವನ್ನು ಹೆಚ್ಚಿಸೋಣ)ಎಂಬ ಮಂತ್ರ ಮಾನವರೆಲ್ಲರೂ ಸೋದರರು; ಆದಕಾರಣ ಅವರೆಲ್ಲರೂ ಸಮಾನರು ಎಂದು ಸಾರಿದರೂ ಅದೇ ಋಗ್ವೇದದ ಪುರುಷ ಸೂಕ್ತ ಮಂತ್ರದ "ಬ್ರಾಹ್ಮಣೋಽಸ್ಯ ಮುಖಮಾಸೀತ್ ! ಬಾಹೂ ರಾಜನ್ಯಃ ಕೃತಃ ! ಊರೂ ತದಸ್ಯ ಯದ್ವೈಶ್ಯಃ ! ಪದ್ಭ್ಯಾಗ್ಂ ಶೂದ್ರೋ ಅಜಾಯತ" ಬ್ರಾಹ್ಮಣ ಪುರುಷನ ಮುಖದಿಂದಲೂ, ಕ್ಷತ್ರಿಯ ಪುರುಷನ ಬಾಹುವಿನಿಂದಲೂ, ವೈಶ್ಯ ಪುರುಷನ ಊರುವಿನಿಂದಲೂ ಶೂದ್ರ ಪುರುಷನ ಪಾದದಿಂದಲೂ ಆದರು) ಎಂಬ ಮಂತ್ರ ಅಪಾರ್ಥ ಮಾಡಲ್ಪಟ್ಟ ಕಾರಣ ಮೊದಲು ನಾಲ್ಕು ಜಾತಿಗಳಿಗೆ ದಾರಿಯಾಗಿ ಮುಂದೆ ಈ ನಾಲ್ಕು ಜಾತಿಗಳೇ ನೂರೆಂಟು ಜಾತಿಗಳಾಗಿ ಪರಿಣಮಿಸಿದುದು ದೌರ್ಭಾಗ್ಯವೇ ಸರಿ. ಜಾತಿಗಳ ಜಗಳ ಭಾರತದಲ್ಲಿ ಮಾತ್ರವೇ ಅಲ್ಲ. ಇತರ ದೇಶಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಂಡು ಮಾನವನ ಅಭ್ಯುದಯಕ್ಕೆ ಹೆಚ್ಚಿನ ಅಡಚಣೆಯನ್ನು ಉಂಟು ಮಾಡಿರುತ್ತದೆ. ಜಾತಿ ದ್ವೇಷದ ಭಯಂಕರ ಪರಿಣಾಮವನ್ನು ಅರಿತು ಧರ್ಮಾತ್ಮರು ಮೊದಲಿನಿಂದಲೂ ಜಾತ್ಯತೀತ ಸಮಾಜ ನಿರ್ಮಾಣಕ್ಕೆ ಶ್ರಮಿಸಿರುತ್ತಾರೆ. ಬುದ್ಧ, ಕೃಷ್ಣ, ಕ್ರಿಸ್ತ ನೊದಲಾದ ಮಹಾ ತತ್ವಜ್ಞಾನಿಗಳು ಜಾತಿಯನ್ನು ಖಂಡಿಸಿ ಮಾನವನನ್ನು ಜಾತಿ ದ್ವೇಷದ ಜ್ವಾಲೆಯಿಂದ ಪಾರುಮಾಡಲು ಪ್ರಯತ್ನಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಶಿವಶರಣರೂ ಸಹ ಜಾತಿಯ ಅನರ್ಥ ಪರಂಪರೆಯನ್ನು ಅರಿತು ಜಾತೀಯತೆಯನ್ನು ಉಗ್ರವಾಗಿ ಖಂಡಿಸಿ, ಜಾತ್ಯತೀತ ಸಮಾಜ ರಚನೆಗೆ ಅಪ್ರತಿಮ ಪ್ರಯತ್ನ ನಡೆಸಿ, ವೀರಶೈವ ಸಿದ್ಧಾಂತದಲ್ಲಿ ಜಾತ್ಯತೀತ ಸಮಾಜ ರಚನೆಗೆ ಒಂದು ಮಹತ್ವದ ಸ್ಥಾನವನ್ನು ಕೊಟ್ಟು, ಒಂದು ವ್ಯವಸ್ಥಿತ ವಿವೇಕಪೂರ್ಣ ಕಲ್ಯಾಣಪ್ರದ ಸಮಾಜ ಶಾಸ್ತ್ರವನ್ನೇ ನಿರ್ಮಾಣ ಮಾಡಿರುತ್ತಾರೆ. ಮಾನವರಲ್ಲಿ ನಡೆ ನುಡಿಗಳ ಆಧಾರದ ಮೇಲೆ ಒಳ್ಳೆಯವರು ಕೆಟ್ಟವರು ಎಂಬ ಎರಡು ಜಾತಿಗಳನ್ನು ಹೇಳಬಹುದೇ ಹೊರತು ಉಳಿದ ಜಾತಿಗಳನ್ನು ಹೇಳುವುದು ನ್ಯಾಯವಲ್ಲವೆಂದು ಪ್ರತಿಜ್ಞೆ ಮಾಡಿದ್ದಾರೆ."ದೇವ ದೇವ,ಬಿನ್ನಪವ ಅವಧಾರು! ವಿಪ್ರಮೊದಲು ಶ್ವಪಚ ಕಡೆಯಾಗಿ ಭಕ್ತರಾದವರನೆಲ್ಲ ಒಂದೇ ಎಂಬೆ! ಅಗ್ರಜ ಮೊದಲು ಅಂತ್ಯಜಕಡೆಯಾಗಿ ಭವಿಯಾದವರನೆಲ್ಲ ಒಂದೇ ಎಂಬೆ !" ಹುಟ್ಟಿನಿಂದ ಯಾರೂ ಶ್ರೇಷ್ಠರಾಗುವುದಿಲ್ಲ. ಗುಣದಿಂದ ಮಾತ್ರ ಶ್ರೇಷ್ಠರಾಗುತ್ತಾರೆ. ಋಷಿಗಳ ಚರಿತ್ರೆಯನ್ನು ತೆಗೆದುಕೊಂಡರೆ"ವ್ಯಾಸ ಬೇಡ, ವಸಿಷ್ಠ ಡೊಂಬ, ದೂರ್ವಾಸ ಮಚ್ಚಿಗ, ಕೌಂಡಿನ್ಯ ನಾಯಿಂದ, ಅಗಸ್ತ್ಯ ಕುಂಬಾರ, ಕಶ್ಯಪ ಕಮ್ಮಾರ,ಮಾರ್ಕಂಡೇಯ ಮಾದಿಗ, ಸಾಂಖ್ಯಹೊಲೆಯ ಇಂತಪ್ಪಋಷಿಜನಂಗ

ಳೆಲ್ಲ ಗುರುಕಾರುಣ್ಯವಂ ಪಡೆದು, ವಿಭೂತಿ ರುದ್ರಾಕ್ಷಿಗಳಂ ಧರಿಸಿ, ಶಿವಲಿಂಗಾರ್ಚನೆಯ ಮಾಡಿ, ತೀರ್ಥ ಪ್ರಸಾದಂಗಳಂ ಕೊಂಡು, ನುಡಿ ನಡೆ ಸತ್ಯ ಶುದ್ಧವಾಗಿ, ಕುಲ ಶ್ರೇಷ್ಠರೆಂದೆನಿಸಿಕೊಂಡರು! ಇದು ಕಾರಣ ಕೂಡಲ ಸಂಗಯ್ಯನ ಬಿಡದೆ ಪೂಜಿಸಿ ಅರಿತು ಬಾಳ್ವಾತನೇ ಕುಲಶ್ರೇಷ್ಠನು!" ಕಸುಬಿನಿಂದಲೂ ಯಾರೂ ಶ್ರೇಷ್ಠ ಕನಿಷ್ಠರೆನಿಸಿಕೊಳ್ಳುವುದಿಲ್ಲ. "ಕಾಸಿ ಕಮ್ಮಾರನಾದ! ಬೀಸಿ ಮಡಿವಳನಾದ! ಹಾಸನಿಕ್ಕಿ ಸಾಲಿಗನಾದ! ವೇದವನೋದಿ ಬ್ರಾಹ್ಮಣನಾದ! ಕರ್ಣದಲಿ ಜನಿಸಿದವರುಂಟೇ ಜಗದೊಳಗೆ? ಇದು ಕಾರಣ ಲಿಂಗಸ್ಥಲವ ಅರಿದವನೇ ಕುಲಜನು!" ಶಾಸ್ತ್ರಗ್ರಂಥಗಳು ಏನೇ ಹೇಳಿದರೂ ದೇವರು ಮಾತ್ರ ಜಾತಿಯನ್ನು ಒಪ್ಪುವುದಿಲ್ಲ ಎಂದು ಶರಣರು ಹೀಗೆ ಆಶ್ವಾಸನ ನೀಡಿದ್ದಾರೆ. "ವೇದ ನಡನಡುಗಿದ್ದಿತು! ಶಾಸ್ತ್ರ ಕೆಲಕ್ಕೆ ಸಾರಿದ್ದಿತು! ತರ್ಕತರ್ಕಿಸಲರಿಯದೆ ಮೂಗುವಟ್ಟಿದ್ದಿತು! ಆಗಮ ಗಮಿಸಲರಿಯದೆ ಅಗಲಿದ್ದಿತು! ಕೂಡಲ ಸಂಗಯ್ಯನು ಮಾದರ ಚೆನ್ನಯ್ಯನ ಮನೆಯಲಿ ಉಂಡಕಾರಣ!" ಈರೀತಿಯಾಗಿ ಶರಣರು ಹಲವು ವಿಧಿ ವಿಧಾನಗಳಲ್ಲಿ ತರ್ಕಮಾಡಿ, ಗುಣ ಆಚಾರ ಸಂಸ್ಕೃತಿಗಳಿಗೆ ಬೆಲೆಯನ್ನು ಕೊಟ್ಟು, ಜಾತೀಯ ಭೂತವನ್ನು ಜಾಡಿಸಿದ್ದಾರೆ. ಇದಕ್ಕಾಗಿ ಅವರು ಅನುಭವ ಮಂಟಪದಲ್ಲಿ ಗೋಷ್ಠಿಗಳನ್ನು ಏರ್ಪಡಿಸಿ, ಚರ್ಚೆಗಳನ್ನು ನಡೆಸಿ, ವೀರಶೈವ ಸಿದ್ಧಾಂತದಲ್ಲಿ "ಪೂರ್ವಾಶ್ರಮ ನಿರಸನ ಸ್ಥಲ" ಎಂಬ ಒಂದು ವಿಶೇಷ ಸ್ಥಲವನ್ನು ನಿರ್ಮಿಸಿ, ಈ ಸ್ಥಲವನ್ನು ನಿತ್ಯದಲ್ಲಿ ಅನುಷ್ಠಾನಕ್ಕೆ ತರಲು ಪಂಚ ಆಚಾರಗಳಲ್ಲಿ "ಶಿವಾಚಾರ" ಎಂಬ ಒಂದು ಮಹತ್ವದ ಆಚಾರವನ್ನು ಪ್ರತಿಪಾದಿಸಿ, ಜಾತ್ಯತೀತ ಸಮಾಜ ನಿರ್ಮಾಣಕ್ಕೆ ಸುಭದ್ರವಾದ ಅಡಿಗಲ್ಲನ್ನು ಹಾಕಿ ಜಗತ್ತಿಗೆ ಮಹೋಪಕಾರ ಮಾಡಿದ್ದಾರೆ.

೫. **ವ್ಯಕ್ತಿ ಸ್ವಾತಂತ್ರ್ಯ ಸ್ಥಾಪನ** (Establishment of individual liberty):—ಇದು ಜಗತ್ತಿನ ಐದನೆಯ ಮಹಾ ಸಮಸ್ಯೆ. ಸ್ವಾತಂತ್ರ್ಯವು ಮಾನವನ ಆಜನ್ಮಸಿದ್ಧವಾದ ಹಕ್ಕು "The god who gave us life, gave as liberaly at the same time" (ನಮಗೆ ಜೀವವನ್ನು ಕೊಟ್ಟ ದೇವರು ನಮಗೆ ಸ್ವಾತಂತ್ರ್ಯವನ್ನೂ ಸಹ ಜೊತೆಗೇ ಕೊಟ್ಟಿರುತ್ತಾನೆ) ಎಂದು ವಿಖ್ಯಾತ ರಾಜಕಾರಣಿ ಥಾಮಸ್ ಜೆಫರ್‌ಸನ್ ಮಾನವ ಜೀವನದಲ್ಲಿ ಸ್ವಾತಂತ್ರ್ಯದ ಸ್ಥಾನವನ್ನು ನಿರ್ದಿಷ್ಟಗೊಳಿಸಿದ್ದಾನೆ. ಸಕಲ ಸಂಪದಗಳಲ್ಲಿ ಸ್ವಾತಂತ್ರ್ಯ ಸಂಪದ ಹೆಚ್ಚಿನದು. ಸ್ವಾತಂತ್ರ್ಯ ಸಂಪದವಿಲ್ಲದಿದ್ದಲ್ಲಿ ರೂಪ, ಯೌವನ ವಿದ್ಯೆ, ಐಶ್ವರ್ಯ, ಅಧಿಕಾರ ಮುಂತಾದ ಸಂಪದಗಳು ವ್ಯರ್ಥವೇ ಸರಿ. "What shall it profit a man if he shall gain the whole world and loose his own soul?" (ಮಾನವ ಜಗತ್ತನ್ನೆಲ್ಲ ಗೆದ್ದು ತನ್ನ ಆತ್ಮವನ್ನು ಕಳೆದುಕೊಂಡರೆ ಅವನಿಗೆ ಲಾಭವೇನು ಬಂದಂತಾಯಿತು?) ಎಂಬ ಮಹಾತ್ಮ ಏಸುಕ್ರಿಸ್ತನ ಪ್ರಶ್ನೆ ಸ್ವಾತಂತ್ರ್ಯದ ಬೆಲೆಯೇನೆಂಬುದನ್ನು ತೋರಿಸಿ

ಕೊಡುವುದಾಗಿದೆ. ಸ್ವಾತಂತ್ರ್ಯವು ಮಾನವನ ಅತ್ಯಂತ ಆತ್ಮೀಯ ವಸ್ತುವಾಗಿದೆ. ಮಾನವನವ್ಯಕ್ತಿತ್ವ ಅವನಸ್ವಾತಂತ್ರ್ಯವನ್ನೇ ಅವಲಂಬಿಸಿದೆ.ಜಗತ್ತಿನ ಸ್ವಾತಂತ್ರ್ಯಕ್ಕೆ ವ್ಯಕ್ತಿ ಸ್ವಾತಂತ್ರ್ಯವೇ ತಳಹದಿಯಾಗಿದೆ. ಸ್ವಾತಂತ್ರ್ಯವೆಂಬುದು ಕೆಲವರು ಮಾತ್ರವೇ ಹಂಚಿಕೊಳ್ಳಬಹುದಾದ ವಿಭಜನೆಯ ವಸ್ತುವಲ್ಲ. "Freedom is an indivisible word, if we want to enjoy it and fight for it, we must be prepared to extend it to every one, whether they are rich or poor, whether they are with us or not, no matter what their race or the colour of their skin" (ಸ್ವಾತಂತ್ರ್ಯವೆಂಬುದು ಅವಿಭಾಜ್ಯವಾದ. ಸ್ವಾತಂತ್ರ್ಯವನ್ನು ನಾವು ಅನುಭವಿಸಬೇಕಾದರೆ ಮತ್ತು ಅದಕ್ಕಾಗಿ ನಾವು ಹೋರಾಡಬೇಕಾದರೆ, ನಾವು ಅದನ್ನು ಪ್ರತಿಯೊಬ್ಬರಿಗೂ-ಅವರು ಸಿರಿವಂತರಾಗಿರಲಿ ಅಥವಾ ಬಡವರಾಗಿರಲಿ, ಅವರು ನಮ್ಮೊಡನೆ ಸಮ್ಮತಿಸಲಿ ಅಥವಾ ಸಮ್ಮತಿಸದಿರಲಿ, ಅವರು ಯಾವ ಜನಾಂಗ ದವರಾಗಿರಲಿ ಅಥವಾ ಯಾವ ವರ್ಣದವರಾಗಿರಲಿ-ವಿಸ್ತರಿಸಲು ಸಿದ್ಧರಾಗಿರಬೇಕು" ಎಂಬುದಾಗಿ ಪ್ರಸಿದ್ಧ ಸಾಹಿತಿಯಾದ ವೆಂಡಲ್ ಲ್ಯೂಯಿಸ್ ವಿಲ್ಕಿ (Wendell Lewis willkie) ಹೇಳಿರುವುದು ನಿತ್ಯ ಸತ್ಯವಾಗಿದೆ. ಸ್ವಾತಂತ್ರ್ಯವೇ ನಿಜವಾದ ಸ್ವರ್ಗವೆಂದು ವಿಶ್ವ ಕವಿ ರವೀಂದ್ರನಾಥ ಠಾಕೂರರು ಹೀಗೆ ವರ್ಣಿಸಿದ್ದಾರೆ:

"Where the mind is without fear and the head is held high ; where knowledge is free ; where world has not been broken up into fragments by narrow domestic walls ; where words come out from the depth of truth ; where tireless striving stretches its arms towards perfection ; where the clear stream of reason has not lost its way into the dreary desert sand of dead habit ; where the mind is led forward by thee into ever widening thought and action into that heaven of freedom, my father, let my country awake !" ಎಲ್ಲಿ ಮನಸ್ಸಿಗೆ ಭಯ ಇಲ್ಲವೋ, ಎಲ್ಲಿ ತಲೆ ಎತ್ತಲು ಅವಕಾಶ ಇದೆಯೋ,ಎಲ್ಲಿ ಜ್ಞಾನ ಉಚಿತವಾಗಿ ದೊರೆಯುವುದೋ, ಎಲ್ಲಿ ಸಂಕುಚಿತಭಿನ್ನತೆಗಳು ಇಲ್ಲವೋ, ಎಲ್ಲಿ ಸತ್ಯದ ಬುಗ್ಗೆಯಿಂದ ಮಾತುಗಳು ಹೊರಡುವುವೋ, ಎಲ್ಲಿ ಪರಿಪೂರ್ಣತೆಗಾಗಿ ಅವಿಶ್ರಾಂತಶ್ರಮ ಇರುವುದೋ, ಎಲ್ಲಿ ವಿವೇಚನೆಯ ಶುಭ್ರ ಹೊಳೆ ಶುಷ್ಕ ಸಂಪ್ರದಾಯದ ಮರಳುಕಾಡಿಗೆ ಸಿಕ್ಕದೆ ಹರಿಯುವುದೋ, ಎಲ್ಲಿ ಪರಮಾತ್ಮನಾದ

ನೀನು ತೋರುವ ಹಾದಿಯಲ್ಲಿ ಮನಸ್ಸು ಸತತ ವಿಸ್ತರಣಗೊಳ್ಳುವ ಆಲೋಚನೆಗಳ ಮತ್ತು ಕ್ರಿಯೆಗಳ ಕಡೆಗೆ ಹೊರಳುವುದೋ ಅಂಥ ಸ್ವಾತಂತ್ರ್ಯದ ಸ್ವರ್ಗವನ್ನು ದೇಶಕ್ಕೆ ಲಭಿಸುವಂತೆ ಕೃಪೆಮಾಡು, ಓ, ನನ್ನ ತಂದೆಯೇ!) ಇನ್ನು ಸಮಾಜವಾದ ವ್ಯಕ್ತಿ ಸ್ವಾತಂತ್ರ್ಯವಾದವೇ ಆಗಿದೆ. **ಮಹಾತ್ಮ ಗಾಂಧಿಯವರು** (Mahatma Gandhiji) ಈ ಬಗ್ಗೆ ನುಡಿದಿರುವ ಮಾತುಗಳು ಗಮನಾರ್ಹವಾಗಿವೆ: "Individual freedom alone can make a man voluntarily surrender himself completely to the service of the Society If it is wrested from him, he becomes an automaton and society, is ruined. No society Con possiby be built on a denial of individual freedom (ವ್ಯಕ್ತಿ ಸ್ವಾತಂತ್ರ್ಯವೊಂದೇ ಮನುಷ್ಯನನ್ನು ಸ್ವಯಂ ಪ್ರೇರಣೆಯಿಂದ ಸಮಾಜ ಸೇವೆಯಲ್ಲಿ ಸಂಪೂರ್ಣವಾಗಿ ತೊಡಗುವಂತೆ ಮಾಡುವುದು. ಅವನಿಂದ ಸ್ವಾತಂತ್ರ್ಯವನ್ನು ಕಸಿದುಕೊಂಡಲ್ಲಿ ಅವನು ನಿರ್ಜೀವಯಂತ್ರವಾಗಿ ಸಮಾಜವು ಹಾಳಾಗುವುದು. ವ್ಯಕ್ತಿ ಸ್ವಾತಂತ್ರ್ಯವನ್ನು ನಿರಾಕರಿಸಿ ಯಾವ ಸಮಾಜವನ್ನೂ ಕಟ್ಟಲು ಸಾಧ್ಯವಿಲ್ಲ.) ಈರೀತಿಯಾಗಿ ಮಾನವನ ಜೀವಿತದ ಸಾರಸರ್ವಸ್ವವಾಗಿರುವ ವ್ಯಕ್ತಿ ಸ್ವಾತಂತ್ರ್ಯದ ಮಹತ್ವವನ್ನೂ ಮತ್ತು ಅದರ ಆವಶ್ಯಕತೆಯನ್ನೂ ಶಿವಶರಣರು ಮನಗಂಡು, ಅದರ ಅನ್ವಯವನ್ನು ಮತ್ತಷ್ಟು ಹರಿತಮಾಡಿ ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಮೊದಲಾದ ಎಲ್ಲ ಕ್ಷೇತ್ರಗಳಲ್ಲಿಯೂ ಮಾನವ ವಿಚಾರವಂತನಾಗಿ ಹಾಗೂ ಕ್ರಿಯಾಶೀಲನಾಗಿ, ವಿವೇಕಯುತವಾದ ಹಾಗೂ ಅನುಭವ ಸಮ್ಮತವಾದ ರೀತಿಯಲ್ಲಿ ನಡೆದು ಬಾಳನ್ನು ಸುಖಮಯವಾಗಿ ಸಂಪದ್‌ಭರಿತವಾಗಿ ಮಾಡಿಕೊಳ್ಳಲು ಮಾರ್ಗದರ್ಶನ ಮಾಡಿದ್ದಾರೆ. ವಿಚಾರ ಸ್ವಾತಂತ್ರ್ಯ, ಆಚಾರ ಸ್ವಾತಂತ್ರ್ಯ, ಅರ್ಜನ ಸ್ವಾತಂತ್ರ್ಯ –ಇವೇ ಮೊದಲಾದ ವ್ಯಕ್ತಿ ಸ್ವಾತಂತ್ರ್ಯ ಪ್ರಭೇದಗಳನ್ನು ಶರಣರು ಸವಿಸ್ತಾರವಾಗಿ ಚರ್ಚಿಸಿ ವಿಮರ್ಶಿಸಿ ಪ್ರಯೋಗಿಸಿ ಸಮರ್ಥಿಸಿದ್ದಾರೆ. ಶರಣರ ವಿಚಾರ ಸ್ವಾತಂತ್ರ್ಯ ಪ್ರತಿಪಾದನೆಯನ್ನು ಅವರು ಅನುಭವ ಮಂಟಪದಲ್ಲಿ ಚರ್ಚಿಸಿ ಸಮರ್ಥಿಸಿದ ಷಟ್‌ಸ್ಥಲ ಸಿದ್ಧಾಂತಗಳಿಂದಲೂ, ಅವರ ಆಚಾರ ಸ್ವಾತಂತ್ರ್ಯದ ಪ್ರತಿಪಾದನೆಯನ್ನು ಅವರು ವಿಮರ್ಶಿಸಿ ಅನುಷ್ಠಾನಕ್ಕೆ ತಂದ ಪಂಚಾಚಾರ ಸಿದ್ಧಾಂತಗಳಿಂದಲೂ, ಅವರ ಅರ್ಜನ ಸ್ವಾತಂತ್ರ್ಯ ಪ್ರತಿಪಾದನೆಯನ್ನು ಅವರು ಪ್ರಯೋಗಿಸಿ ಅನುಸಂಧಾನ ಮಾಡಿದ ಅಷ್ಟಾವರಣ ಸಿದ್ಧಾಂತಗಳಿಂದಲೂ, ಅವರ ಇನ್ನಿತರ ವ್ಯಕ್ತಿ ಸ್ವಾತಂತ್ರ್ಯ ಪ್ರತಿಪಾದನೆಗಳನ್ನು ಅವರ ಅಂದಂದಿನ ಅನುಭವದ ನಡೆನುಡಿಗಳ ಸಿದ್ಧಾಂತಗಳಿಂದಲೂ ನಾವು ಅರಿಯಬಹುದಾಗಿದೆ.

"ಅಂದಿಂಗೆ ಎಳೆಯ ನೀನು, ಹಳೆಯ ನಾನು" "ನಂಬಿ ಕರೆದೊಡೆ ಓ ಎನ್ನನೇ ಶಿವನು !", "ನ್ಯಾಯ ನಿಷ್ಠುರ ! ದಾಕ್ಷಿಣ್ಯ ಪರನಲ್ಲ ! ಲೋಕವಿರೋಧಿ ! ಆರಿಗೂ ಅಂಜುವನಲ್ಲ!", "ಲೇಸೆನಿಸಿಕೊಂಡು ಒಂದುದಿನ ಬದುಕಿದರೆ ಸಾಲದೆ ?", " ಏನನೂ ಅರಿಯೆನೆಂದು ಮೌನ ಗೊಂಡಿರಲೇಕೆ ? ಕೂಡಲಸಂಗಮದೇವ" "ನಾದಪ್ರಿಯನೂ ಅಲ್ಲ! ವೇದಪ್ರಿಯನೂಅಲ್ಲ ! ಭಕ್ತಿಪ್ರಿಯ ಕೂ ಡ ಲ ಸ ಂ ಗ ಮ ದೇ ೀ ವ!" "ಸತ್ಯವ ನುಡಿವುದೇ ದೇವಲೋಕ ! ಮಿಥ್ಯವ ನು ಡಿ ವು ದೇ ೀ ಮರ್ತ್ಯ ಲೋಕ !", "ಅಯ್ಯಾ–ಎಂದೊಡೆ ಸ್ವರ್ಗ ! ಎಲವೋ-ಎಂದೊಡೆ ನರಕ!" "ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನರೆಮನೆಯ ಸುಡದು!" "ಎತ್ತೆತ್ತ ನೋಡಿದರೆ ಅತ್ತತ್ತ ನೀನೆ ದೇವಾ ! ಸಕಲ ವಿಸ್ತಾರದ ರೂಹು ನೀನೇ ದೇವಾ!" "ದೇವನೊಬ್ಬ ನಾಮ ಹಲವು", "ಕಂಗಳು ತಪ್ಪಿನೋಡಿದರೆ ಮಾರಿ ! ನಾಲಗೆ ತಪ್ಪಿ ನುಡಿದರೆ ಮಸಣಿ !", "ಭಕ್ತಿ ಇಲ್ಲದೆ ಮುಕ್ತಿ ಇಲ್ಲ !", "ಭಕ್ತಿಗೆ ಅನುಭವವೇ ಬೀಜ ಕಾಣಿರೋ !", "ಆವಲ್ಲಿ ತಾನೆಂಬ ತೋರಿಕೆ ಹುಟ್ಟದಿಹುದು ಅದೀಗ ಬ್ರಹ್ಮಜ್ಞಾನ!", "ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ-ಬುದ್ಧಿಯ ಕಲಿಸಿದರೆ ಆಗಲಿ ಮಹಾ ಪ್ರಸಾದವೆಂದೆನಯ್ಯ !", "ಹೊನ್ನು ಮಾಯೆಯಲ್ಲ ! ಹೆಣ್ಣು ಮಾಯೆಯಲ್ಲ! ಮಣ್ಣು ಮಾಯೆಯಲ್ಲ ! ಮನದ ಮುಂದಣ ಆಶೆಯೆ ಮಾಯೆ !" "ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖನೋಡಾ.", "ಹಿರಿದು ಕಿರಿದೆಂಬ ಶಬ್ದ ಅಡಗಿದರೆ ಆತನೇ ಶರಣ" "ತನ್ನ ತಾ ಅರಿದವರಿಗೆ ಅರಿವೇ ಗುರು" ಇವೇ ಮೊದಲಾದ ಅನಂತ ವಾಕ್ಯಗಳು ಶರಣರ ವಿಚಾರ ಸ್ವಾತಂತ್ರ್ಯ ಪ್ರತಿಪಾದನೆಯನ್ನು ಸಮರ್ಥಿಸತಕ್ಕುವಾಗಿವೆ.

"ಛಲಬೇಕು ಶರಣಂಗೆ ಪರಧನವ ಒಲ್ಲೆನೆಂಬ ! ಛಲಬೇಕು ಶರಣಂಗೆ ಪರಸತಿಯ ಒಲ್ಲೆನೆಂಬ ! ಛಲಬೇಕು ಶರಣಂಗೆ ಪರಹಿಂಸೆಯ ಒಲ್ಲೆನೆಂಬ !", "ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು ! ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು ! ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು!" "ಬೇಡುವ ಗುಣ ಅಮುಳೇಶ್ವರ ಲಿಂಗಕ್ಕೆ ದೂರ !", "ಚಿತ್ತಶುದ್ಧವಾಗಿ ಕಾಯಕ ! ಮಾಡುವ ಸದ್ಭಕ್ತರಿಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನೆತಾನಾಗಿಪ್ಪಳು !", "ಎಮ್ಮವರು ಬೆಸಗೊಂಡರೆ ಶುಭಲಗ್ನವೆಂದೆನ್ನಿರಯ್ಯ ! ನಾಳಿನ ದಿನಕ್ಕಿಂತ ಇಂದಿನ ದಿನ ಲೇಸೆಂದು ಹೇಳಿರಯ್ಯ ! ", "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ ! ", "ಹೊಯ್ದರೆ ಹೊಯ್ಗಳು ಕೈಮೇಲೆ! ಬಯ್ದರೆ ಬೈಗಳು ಕೈಮೇಲೆ ! "ಬಂದುದ ಕೈಕೊಳ್ಳಬಲ್ಲರೆ ನೇಮ ! ಇದ್ದುದ ವಂಚನೆ ಯಮಾಡದಿರೆ ನೇಮ !", ಆಚಾರವೇ ಸ್ವರ್ಗ ! ಅನಾಚಾರವೇ ನರಕ!", "ದಯೆಯೇ ಧರ್ಮದ ಮೂಲವಯ್ಯಾ "—ಇವೇ ಮೊದಲಾದ ಅನಂತ ವಾಕ್ಯಗಳು ಶರಣರ ಆಚಾರ ಸ್ವಾತಂತ್ರ್ಯ ಪ್ರತಿಪಾದನೆಯನ್ನು ಸಮರ್ಥಿಸತಕ್ಕುವಾಗಿವೆ.

"ಭಕ್ತನಮುಖದರ್ಪಣದಲ್ಲಿ ಲಿಂಗವಕಾಂಬುದು" "ಲಿಂಗಪೂಜೆಯು ಬೇಟ,ದುರಿತ ಬಂಧನದೋಟ! ಜಂಗಮಾರ್ಚನೆಯ ಮಾಟ, ಕೂಡಲಸಂಗನ ಕೂಟ!" "ತಾಪತ್ರಯ ಲಿಂಗ ಒಲ್ಲ! ತಾಪತ್ರಯವ ಕಳೆದು ಪೂಜಿಸಿ!", ಲಿಂಗ-ಜಂಗಮ ಒಂದೇ ಎಂಬುದು ಕೂಡಲ ಸಂಗನ ವಚನ", "ಜಂಗಮಕ್ಕೆ ಎರದರೆ ಸ್ಥಾವರ ನೆನೆಯಿತ್ತು", "ಕಿಂಚಿತ್ ಗೀತ ಅನಂತ ಕೋಟಿ ಜಪನಯ್ಯಾ", "ಸತಿಪತಿಗಳೊಂದಾದ ಭಕ್ತಿ ಹಿತ ವಾಗಿಪ್ಪುದು ಶಿವಂಗೆ",

"ಸಜ್ಜನಳಾಗಿ ಮಜ್ಜನಕ್ಕೆರೆವೆ! ಶಾಂತಳಾಗಿ ಪೂಜೆ ಮಾಡುವೆ! ಸಮರತಿ ಯಿಂದ ನಿಮ್ಮ ಕೂಡುವೆ!"-ಇವೇ ಮೊದಲಾದ ಅನಂತ ವಾಕ್ಯಗಳು ಶರಣರ ಆಚಾರ ಸ್ವಾತಂತ್ರ್ಯ ಪ್ರತಿಪಾದನೆಯನ್ನು ಸಮರ್ಥಿಸತಕ್ಕವಾಗಿವೆ.

ಈ ರೀತಿಯಾಗಿ ವಿವಿಧ ಮುಖಗಳಿಂದ ಕೂಡಿದ ವ್ಯಕ್ತಿ ಸ್ವಾತಂತ್ರ್ಯ ಸ್ಥಾಪನೆಯ ಸಮಸ್ಯೆಯನ್ನು ಶರಣರು ಷಟ್‌ಸ್ಥಲ ಶಾಸ್ತ್ರದ ಐದನೆಯ ಸ್ಥಲವಾದ ಶರಣ ಸ್ಥಲದಲ್ಲಿ ವಿಮರ್ಶಿಸಿ ತಮ್ಮ ಅನುಭವ ಪೂರ್ಣವಾದ ನಡೆನುಡಿಗಳಿಂದ ಜಗತ್ತಿಗೆ ದಿವ್ಯವಾದ ಮಾರ್ಗದರ್ಶನ ಮಾಡಿರುತ್ತಾರೆ.

೬. **ವಿಶ್ವಶಾಂತಿ ಪಾಲನ**(maintenance of world peace):- ಇದು ಜಗತ್ತಿನ ಆರನೆಯ ಮಹಾಸಮಸ್ಯೆ. ಇಂದು ಜಗತ್ತು ಬಹುವಾಗಿ ಸಮೀಪ ಗೊಳ್ಳುತ್ತಿದೆ. ಜೆಟ್ ವಿಮಾನಗಳು, ಹೆಲಿಕಾಪ್ಟರುಗಳು, ಅಟಾಮಿಕ್ ಶಕ್ತಿಯಿಂದ ಚಲಿಸುವ ರೈಲು ಗಾಡಿಗಳು ಮತ್ತು ಹಡಗುಗಳು, ರೇಡಿಯೋ ಶ್ರವಣ ಹಾಗೂ ಚಿತ್ರ ಯಂತ್ರಗಳು, ಟೆಲಿವಿಜನ್ ಯಂತ್ರಗಳು, ರಾಡರ್‌ಗಳು ಹೀಗೆ ದಿನದಿನಕ್ಕೂ ಹೊಸ ಹೊಸದಾಗಿ ನಿರ್ಮಿತವಾಗುತ್ತಿರುವ ಸಾರಿಗೆ ಸಂಪರ್ಕ ಸಾಧನಗಳ ದೆಸೆಯಿಂದ ನಮ್ಮ ಭೂಮಿಯ ಯಾವ ಸ್ಥಳವಾಗಲಿ ದೂರವೆಂದೆನ್ನುವಂತಿಲ್ಲ. ನಮ್ಮ ಭೂಮಿಯ ಯಾವ ಭಾಗದ ಜನರನ್ನಾಗಲಿ ಪಕ್ಕದ ಮನೆಯವರೆಂದೇ ಪರಿಗಣಿಸಬೇಕಾದ ಕಾಲವಿದಾಗಿದೆ. ಇಷ್ಟೇ ಅಲ್ಲದೆ ಸ್ಪೇಸ್ ಕ್ರಾಫ್ಟ್ (ಅಂತರಿಕ್ಷ ಕ್ಷಿಪಣಿ)ಗಳ ನಿರ್ಮಾಣದಿಂದ ನಮ್ಮ ಸೌರವ್ಯೂಹದ ಗ್ರಹಗಳೂ ಸಹ ನಮಗೆ ಹತ್ತಿರವಾಗಲು ಪ್ರಾರಂಭಿಸಿವೆ. ಎಂದ ಮೇಲೆ ಎಂದಿಗಿಂತಲೂ ಇಂದು ಜಗತ್ತಿನ ಜನರು ಕೂಡಿ ಬಾಳುವುದು ಅನಿವಾರ್ಯವೂ ಆವಶ್ಯಕವೂ ಆಗಿದೆ.

"There are no distant points in the world to-day any longer.... .... The myriad millions of human beings of the Far East are as close to us as Los-Angeles is to Newyork by the fastest trains.... .... In the future waht concerns them must concern us, almost as much as the problems of the people of

California concern the people of New York. Our thinking in the future must be world-wide''

(ಇನ್ನು ಮುಂದೆ ನಮ್ಮ ಭೂಮಿಯ ಮೇಲೆ ದೂರದ ಪ್ರದೇಶಗಳೇ ಇಲ್ಲ..... ವೇಗದ ರೈಲುಗಾಡಿಗಳ ಮೂಲಕ ನ್ಯೂಯಾರ್ಕ್ ಜನ ಲಾಸ್‌ಅಂಜೆಲೆಸ್ ಜನಕ್ಕೆ ಎಷ್ಟು ಹತ್ತಿರವಾಗಿರುವರೋ ಅಷ್ಟೇ ದೂರಪ್ರಾಚ್ಯದ ಲಕ್ಷೋಪಲಕ್ಷ ಜನ ನಮಗೆ ಹತ್ತಿರವಾಗಿರುವರು....ಇನ್ನು ಮುಂದೆ ಇವರ ಸಮಸ್ಯೆಗಳು ನಮಗೆ ಕ್ಯಾಲಿಫೋರ್ನಿಯಾ ಜನರ ಸಮಸ್ಯೆಗಳು ನ್ಯೂಯಾರ್ಕ್ ಜನರಿಗೆ ಹೇಗೆ ಸಂಬಂಧಪಟ್ಟಿರುವವೋ ಹಾಗೆ ಸಂಬಂಧಪಟ್ಟವಾಗಿವೆ. ಇನ್ನು ಮೇಲೆ ನಮ್ಮ ಆಲೋಚನೆಗಳು ಇಡೀಯ ಜಗತ್ತಿಗೇ ಸಂಬಂಧಪಟ್ಟವುಗಳಾಗಿರಬೇಕು) ಎಂದು ಈ ಹಿಂದೆ ನಾವು ಉದಹರಿಸುವ ವೆಂಡಲ್ ಲ್ಯೂಯಿಸ್ ವಿಲ್ಕಿ(Wendell Lewis Willkie)ಯ ಮಾತುಗಳು ಸತ್ಯವಾಗಿವೆ. ಆ ದೇಶ, ಈ ದೇಶ, ಆ ಜನಾಂಗ, ಈ ಜನಾಂಗ-ಎನ್ನದೆ ಸರ್ವದೇಶಗಳ ಮತ್ತು ಸರ್ವಜನಾಂಗಗಳ ಹಿತವನ್ನು ಕೋರುವ ಕಾಲ ಇದಾಗಿದೆ. ಇಡಿಯ ಜಗತ್ತೇ ಒಂದು ಕುಟುಂಬವಾಗಿ ಒಂದು ಸರ್ಕಾರವಾಗಿ ಬಾಳುವ ಕಾಲ ಇದಾಗಿದೆ. ಇದಕ್ಕಾಗಿ ಜಗತ್ತಿನ ಎಲ್ಲ ಪ್ರಜೆಗಳು, ಸರ್ಕಾರಗಳು, ಸಂಘಗಳು, ಸಂಸ್ಥೆಗಳು ತಮ್ಮ ಸಾಮರ್ಥ್ಯಗಳನ್ನು ಜಗತ್ತಿನ ಶಾಂತಿಗೆ ಮತ್ತು ಸುಖಕ್ಕೆ ವಿನಿಯೋಗಿಸಬೇಕಾದುದು ಅಗತ್ಯವಾಗಿದೆ.

"The world cannot be peaceful and happy unless all the people every where have the means to avail themselves of the good things which await creation by the skilled mind and hand"

(ಬೌದ್ಧಿಕ ಹಾಗೂ ದೈಹಿಕ ನಿಪುಣರು ತಯಾರಿಸುವ ಒಳ್ಳೆಯ ವಸ್ತುಗಳನ್ನು ಎಲ್ಲ ಸ್ಥಳಗಳ ಎಲ್ಲ ಜನರೂ ಬಳಸಿಕೊಳ್ಳಲು ಬೇಕಾದ ವ್ಯವಧಾನವಿದ್ದ ಹೊರತು ಜಗತ್ತು ಶಾಂತಿಯಿಂದಿರಲು ಮತ್ತು ಸುಖದಿಂದಿರಲು ಸಾಧ್ಯವಿಲ್ಲ) ಎಂದು ವಿಲಿಯಂ ಸ್ಟುವಾರ್ಟ್ ನೆಲ್‌ಸನ್ (William Stuart Nelson) ನುಡಿದಿರುವುದು ವಸ್ತುಸ್ಥಿತಿಯ ಪೂರ್ಣ ಚಿತ್ರವಾಗಿದೆ. ಇಂದು ನಾವು ಗಮನಿಸಬೇಕಾದ ಮತ್ತೊಂದು ಮುಖ್ಯ ಸತ್ಯಾಂಶವೇನೆಂದರೆ ವಿಜ್ಞಾನದ ಅಭೂತಪೂರ್ವ ಮುನ್ನಡೆಯ ಕಾರಣ ಧರ್ಮದ ಸಾಂಪ್ರದಾಯಕ ಪ್ರತಿಪಾದನೆಯಲ್ಲಿ ಜನರಿಗೆ ಶ್ರದ್ಧೆ ಕಡಮೆಯಾಗುತ್ತಿರುವುದು. ಇಂದು ನಾವು ಧರ್ಮವನ್ನು ವೈಜ್ಞಾನಿಕವಾಗಿ ಪ್ರತಿಪಾದನೆ ಮಾಡುವುದು ಅವಶ್ಯಕವಾಗಿದೆ.

ಪ್ರಸಿದ್ಧ ಸಾಹಿತಿ ಜಾನ್‌ಗಾಲ್ಸ್‌ವರ್ದಿಯ (John Galsworthy ಮಾತುಗಳಲ್ಲಿ "Religion is nearly dead because there is no longer real belief in future life: but some

thing is struggling to take its peace-service-social service-the ants' creed - the bees' creed"

(ಇಂದು ಪುನರ್ ಜನ್ಮದಲ್ಲಿ ನಿಜವಾದ ನಂಬುಗೆ ಹೋಗುತ್ತಿದೆ. ಇದರಿಂದ ಧರ್ಮ ಬಹುಮಟ್ಟಿಗೆ ಸತ್ತಂತೆ ಆಗಿದೆ. ಆದರೆ ಆದರ ಸ್ಥಾನದಲ್ಲಿ ಮತ್ತೊಂದು ನೆಲ ಸಲು ಶ್ರಮಿಸುತ್ತಿದೆ. ಅದಾವುದೆಂದರೆ-ಸೇವೆ, ಸಾಮಾಜಿಕ ಸೇವೆ. ಇದು ಇರುವೆಯ-ಜೇನಿನ ಧರ್ಮ ಆಗಿದೆ.) ಶಿವಶರಣರು ಜಗತ್ತಿಗೆ ಸಾರಿದುದು ಈ ಇರುವೆಯ ಈ ಜೇನಿನ ಧರ್ಮವನ್ನೇ ಸೇವೆಯೊಂದೇ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸುವ ಧರ್ಮವಾಗಿದೆಯೆಂದು ಶರಣರು ಸ್ಪಷ್ಟವಾಗಿ ದಿಟ್ಟತನದಿಂದ ಹೇಳಿದ್ದಾರೆ. "ಲಿಂಗವ ನೋಡುವ ಅಣ್ಣಗಳೇ ಜಂಗಮವ ನೋಡಿದರೇ !", "ಸ್ಥಾವರ ಜಂಗಮ ಒಂದೇ ಎಂದುದು ಕೂಡಲ ಸಂಗನ ವಚನ", "ಸ್ಥಾವರಕ್ಕೆ ಎರೆದರೆ ಜಂಗಮ ನೆನೆಯಿತ್ತು", "ಬ್ರಹ್ಮ ಪದವಿಯನೊಲ್ಲೆ! ವಿಷ್ಣು ಪದವಿಯನೊಲ್ಲೆ! ರುದ್ರಪದವಿಯನೊಲ್ಲೆ! ಸದ್ಭಕ್ತರ ಪಾದವನರಿದಿಪ್ಪ ಮಹಾ ಪದವಿಯನೊಂದನೇ ಕರುಣಿಸಾ- ಕೂಡಲಸಂಗಮದೇವಾ!" "ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ! ಪರಮ ಪದವಿಯ ನಿಮ್ಮ ಎದೆಯಲ್ಲಿ ಇರಿಸಿಕೊಳ್ಳಿ! ಎನಗೆ ಮಹಾಲಿಂಗ ಕಲ್ಲೇಶ್ವರನ ಭಕ್ತರ ತೊತ್ತು ಸೇವೆಯೇ ಸಾಕು !", "ಎನಗಿಂತ ಕಿರಿಯರಿಲ್ಲ, ಭಕ್ತರಿಗಿಂತ ಹಿರಿಯರಿಲ್ಲ !", "ಕೀಳಿಂಗಲ್ಲದೆರಿ ಹಯನ ಮೇಲಿಂಗೆ ಕರೆವುದೇ? ನಿಮ್ಮ ಶರಣರಪಾದಕ್ಕೆ ಕೀಳಾಗಿರಿಸು ಕೂಡಲ ಸಂಗಮ ದೇವಾ !"—ಎಂಬಿವೇ ಮೊದಲಾದ ಅನಂತ ಅಮೃತವಾಕ್ಯಗಳು ಮಹೋನ್ನತ ಸೇವಾಧರ್ಮವನ್ನು ಪ್ರತಿಪಾದಿಸುತ್ತವೆ.

"If any man desires to be first, the same shall be last of all and the servant of all"

(ಯಾರು ಮೊದಲನೆಯವರಾಗಬೇಕೆನ್ನುವರೋ ಅವರು ಎಲ್ಲರಿಗೂ ಕೊನೆಯವರಾಗಿ ಎಲ್ಲರ ಸೇವಕರಾಗಬೇಕು) ಎಂಬ ಮಹಾತ್ಮ ಏಸುಕ್ರಿಸ್ತನ ಮತ್ತೊಂದು ನುಡಿ ಶರಣರ ಸೇವಾ ಧರ್ಮವನ್ನು ಸಮರ್ಥಿಸುವುದಾಗಿದೆ. ಸೇವಾಧರ್ಮಕ್ಕೆ ಇರಬೇಕಾದ ವಿಶೇಷ ಗುಣವೆಂದರೆ ಪ್ರೇಮ. ಪ್ರೇಮವನ್ನು ಶರಣರು ಭಕ್ತಿ ಎಂದು ತಮ್ಮ ಪರಿಭಾಷೆಯಲ್ಲಿ ಕರೆದು ಷಟ್ಸ್ಥಲ ಶಾಸ್ತ್ರದಲ್ಲಿ ಆರನೆಯ ಸ್ಥಲವಾದ ಐಕ್ಯ ಸ್ಥಲದಲ್ಲಿ, ಸಮರಸ ಭಕ್ತಿಯ ಸಕೀಲವನ್ನು ಪ್ರತಿಪಾದಿಸಿ ವಿಶ್ವಶಾಂತಿಪಾಲನೆಗೆ ತಳಹದಿಯನ್ನು ಹಾಕಿರುತ್ತಾರೆ. ಜಾತಿ ಮತ ಪಂಥ ವರ್ಣ ಭಾಷೆಗಳ ಯಾವ ತಾರತಮ್ಯವನ್ನೂ ಮಾಡದೆ, ಜಗತ್ತಿನ ಎಲ್ಲ ಮಾನವರನ್ನೂ ಪ್ರೀತಿಸಿ, ಅವರೆಲ್ಲರು ನಮ್ಮವರು ನಮ್ಮ ಸೋದರರು ಎಂದು ಪರಿಗಣಿಸಿ ವಿಶ್ವಭ್ರಾತೃತ್ವವನ್ನು ಅನುಷ್ಠಾನಕ್ಕೆ ತರ ಬೇಕೆಂಬುದೇ ಶರಣರ ದಿವ್ಯಸಂದೇಶ. "ಇವನಾರವ, ಇವನಾರವ, ಇವನಾರವ

ಎಂದೆನಿಸದಿರಯ್ಯ! ಇವ ನಮ್ಮವ, ಇವ ನಮ್ಮವ, ಇವ ನಮ್ಮವ ಎಂದಿನಿಸಿರಯ್ಯ!" ಎಂಬ ಶರಣಾಗ್ರಣಿ ಬಸವೇಶ್ವರ ಮಹಾನುಭಾವನ ನುಡಿ ವಿಶ್ವಶಾಂತಿ ಪಾಲನೆಗೆ ನಾಂದಿಯಾಗಿದೆ. ಹೀಗೆ ಪ್ರೇಮಪೂರಿತ ಸೇವೆಯೊಂದೇ ವಿಶ್ವಶಾಂತಿಗೆ ಏಕೈಕ ಸಾಧನವಾಗಿದೆಯೆಂಬುದನ್ನು ಶರಣರು ಸಿದ್ಧಾಂತಮಾಡಿ ವಿಶ್ವಶಾಂತಿಪಾಲನೆಯ ಸಮಸ್ಯೆಗೆ ಶಾಶ್ವತವಾದ ಪರಿಹಾರವನ್ನು ತೋರಿಸಿಕೊಟ್ಟಿದ್ದಾರೆ.

ಈ ರೀತಿಯಾಗಿ ಶಿವಶರಣರು ಪರಮಪವಿತ್ರ ವಚನ ಸಾಹಿತ್ಯದಲ್ಲಿ ಪ್ರತಿಪಾದಿಸಿದ ಸನಾತನ ವೀರಶೈವ ಧರ್ಮದ ವಿಶ್ವತತ್ವಗಳು ಇಂದಿಗೂ ಮಾನವನಿಗೂ ಮಾರ್ಗದರ್ಶನ ಮಾಡಿ ಅವನ ಬಹುಮುಖ ಸಮಸ್ಯೆಗಳಿಗೆ ಪರಿಪೂರ್ಣ ಪರಿಹಾರವನ್ನು ಒದಗಿಸಿ ಕೊಡತಕ್ಕವಾಗಿವೆ.

—:o:—

# ಶೈವ-ವೀರಶೈವ

### ಸಮ್ಯಗ್‌ಜ್ಞಾನಿ ಚನ್ನಬಸವಣ್ಣನವರ ವಚನ

ಅಯ್ಯಾ, ಆದಿಸೃಷ್ಟಿಯಿಂದ ಇಂದು ಪರ್ಯಂತವೂ ನಾನಾ ಯೋನಿಯಲ್ಲಿ
ಹುಟ್ಟಿ ಹುಟ್ಟಿ ಬಳಲಿ ಬಾಯಾರಿದವಂಗೆ, ಅಂಧ-ಟಿಟ್ಟಿಭ ನ್ಯಾಯದಂತೆ ;
ಅಕಸ್ಮಾತ್ ಅರಿವುಳ್ಳ ನರಜನ್ಮವು ದೊರೆದುದೇ ದುರ್ಲಭ !
ಅವರಲ್ಲಿಯೂ ಶೈವ ಕುಲದಲ್ಲಿ ಜನ್ಮ ಪೆತ್ತಿರ್ಪುದು ಅತಿದುರ್ಲಭ !
ಅದಕ್ಕಿಂತಲೂ ವೀರಶೈವ ವಂಶದಲ್ಲಿ ಜನ್ಮಿಸಿಹುದು ಅತ್ಯಂತ
ದುರ್ಲಭವಾಗಿಪ್ಪುದು ಕಾಣಾ :

"ಕಿಮಸ್ತಿ ಬಹುನೋಕ್ತೇನ ಮಾನುಷಂ ಜನ್ಮ ದುರ್ಲಭಃ ।
ತತ್ರಾಪಿ ದುರ್ಲಭಂ ಜನ್ಮ ಕುಲೇ ಶೈವಸ್ಯ ಕಸ್ಯಚಿತ್ ॥
ವೀರಶೈವಾನ್ವಯೇ ಜನ್ಮ ಪರಮಂ ದುರ್ಲಭಂ ಸ್ಮೃತಂ ।

ಎಂದುದಾಗಿ ಸಕಲ ಪ್ರಾಣಿಗಳಲ್ಲಿ ವೀರಶೈವನೇ
ಸರ್ವೋತ್ತಮನಯ್ಯಾ, ಕೂಡಲ ಚನ್ನ ಸಂಗಮದೇವಾ !"

---

# ಪುರಾತನ ವೀರಶೈವರು,

### ದೇವಗಣಂಗಳು—ಋಷಿಗಣಂಗಳು.

"ಇತಿಹಾಸೇಷು ವೇದೇಷು ಪುರಾಣೇಷು ಪುರಾತನೈಃ ।
ಮಹರ್ಷಿಭಿರ್ಮಹಾದೇವೋ ಮಹನೀಯಃ ಪ್ರತಿಷ್ಠಿತಃ ॥

ಇಂತೆಂದುದಾಗಿ ಪುರಾತನರಲ್ಲಿ ಆದ್ಯಂತರಾಗಿದ್ದ ಮಹರ್ಷಿಗಳೆಲ್ಲರು ರತ್ನ
ಸುವರ್ಣ, ರಜತ, ತಾಮ್ರ; ಚಂದ್ರಕಾಂತ, ಸ್ಫಟಿಕ, ಪವಳ-
ಇಂತನಂತ ವರ್ಣದ ಲಿಂಗಂಗಳನಾರಾಧಿಸಿದರು.
ಆಗಸ್ತ್ಯ,ದಧೀಚಿ,ಕಂಕದ,ಬಾಣಾಸುರ,ಪುರಂದರ, ಬ್ರಹ್ಮ, ವಿಷ್ಣು,ದೂರ್ವಾಸ,
ನಂದಿಕೇಶ್ವರ, ಸ್ಕಂದ, ಭೃಂಗಿ, ರಿಟಿ, ವೀರಭದ್ರ ಪ್ರಮಥಾದಿಗಣಂಗಳೆಲ್ಲರು,

"ರುದ್ರೇಣ ದೀಕ್ಷಿತೋ ಭೂತ್ವಾ ಸ್ಕಂದಃ ಶಿವಸಮುದ್ಭವಃ ।

ಶಿವಾಚಾರ ರಹಸ್ಯಸ್ಯ ಪಾತ್ರತಾಂ ಪರಮಾಂ ಗತಃ ॥
ಇದನರಿದು ಪರಶುರಾಮ, ಪರಾಶರ, ವಶಿಷ್ಠ, ವಾಲ್ಮೀಕಿ, ಕಮಲಾಕರ,
ವಿಶ್ವಾಮಿತ್ರ-ಮಹಾ ಮುನಿಗಳೆಲ್ಲರು,

"ಪಾಣಿನಿಶ್ಚ ಕಣಾದಶ್ಚ ಕಪಿಲೋ ಗೌತಮಾದಯಃ ।
ಪ್ರಸಾದ ಸೇವನಾದ್ಭಾಷ್ಯನಾದರ್ಶನಾದ್ಧಾರಣಾದಪಿ ॥
ಇಂತೆಂದುದಾಗಿ, ಕೂಡಲ ಚನ್ನಸಂಗಮದೇವರನಾರಾಧಿಸಿ,

ಪಾದೋದಕ ಪ್ರಸಾದವನು ಕೊಂಡರು
ಎಲ್ಲ ದೇವಗಣಂಗಳು, ಎಲ್ಲ ಋಷಿಗಣಂಗಳು.

ಭಾಗ-೩

# ಸಾಹಿತ್ಯ ದರ್ಶನ

ಕನ್ನಡ ಸಾಹಿತ್ಯ
ಕವನಗಳು ಮತ್ತು
ಬಿಡಿ ಬರೆಹಗಳು

# ಧೂಳಿಯ ದೇಗುಲ

ಕವೀಂದ್ರ ರವೀಂದ್ರರ ಒಂದು ಬಂಗಾಲಿ ಕವನದಿಂದ ಅನುವಾದ

—ಶ್ರೀ ನಾರಾಯಣ ಸಂಗಮ

೧

ಭಜನ ಪೂಜನ ಯಜನ ಸಾಧನ ಎಲ್ಲ ಬಿದ್ದಿರಲಂತಿರೆ
ಬಾಗಿಲಿಕ್ಕಿದ ದೇಗುಲಿರೆ ಬಂತೇನು ಮೂಲೆಗೆ ಕುಳಿತರೆ ?
  ಕತ್ತಲಲಿ ಮರೆಮರೆಗೆ ನೈಮರೆತು
  ಯಾರ ಪೂಜಿಪೆ ಗುಪ್ತವಾಗಿರಲಿಂತು ?
ನೋಡು ನೋಡಕೋ ! ಕಣ್ಣು ತೆರೆತೆರೆ, ಇಲ್ಲ ಗುಡಿಯೊಳು ದೇವರೆ !
ಭಜನ ಪೂಜನ ಯಜನ ಸಾಧನ ಎಲ್ಲ ಬಿದ್ದಿರಲಂತಿರೆ.

೨

ಆತ ಹೋಗಿಹ ಕೃಷಿಕ ನೆಲವನು ಕಡಿದು ಹೊಲ ಮಾಡುವ ಕಡೆ
ಕಲ್ಲು ಕುಟಿಕನು ಪಥಕೆ ಪ್ರತಿದಿನ ದುಡಿದು ಕಲ್ಲನು ಒಡೆವೆಡೆ
  ಬಿಸಿಲು ನೀರೊಳು ಸಕಲರ ಜೊತೆಗೆ
  ನಿಲುವನು ಹುಡಿ ತೊಡೆದೆರಡೂ ಕೈಗೆ
ಆತನೊಲು ಬಿಳಿ ಬಟ್ಟೆ ತೊರೆ ತೊರೆ. ಬಾರೊ ಹುಡಿಯಲಿ ದುಡಿವರೆ
ಬಾಗಿಲಿಕ್ಕಿದ ದೇಗುಲಿರೆ ಬಂತೇನು ಮೂಲೆಗೆ ಕುಳಿತರೆ

೩

ಮುಕ್ತಿ ಬೇಕೆ ? ಮುಕ್ತಿ ಎಲ್ಲಿದೆ ? ಪಡೆವೆ ನುಡಿ ನುಡಿ ಯಾವೆಡೆ
ಪ್ರಭುವೆ ಸೃಷ್ಟಿಯ ಬಂಧದಲ್ಲಿಹ, ಇಲ್ಲ ಆತಗು ಬಿಡುಗಡೆ !
  ಬಿಟ್ಟು ಬಿಡು ನೀ ಧ್ಯಾನ, ಇಟ್ಟು ಬಿಡು ಮಾಲೆ
  ಬಟ್ಟೆ ಹರಿಯಲಿ ಪೂಸಿ ಧೂಳಿ ಕೆಸರು ಕೊಳೆ
ಕರ್ಮಯೋಗದಿ ಬೆರೆಯುವನೊಡನೆ, ಘರ್ಮ ಬಿಂದು ಬಸಿದು ಬರೆ
ಭಜನ ಪೂಜನ ಯಜನ ಸಾಧನ ಎಲ್ಲ ಬಿದ್ದಿರಲಂತಿರೆ

—"ಗೀತಾಂಜಲಿ"

# ಕವಣೆ

ಕೃಷೀ ಮಾಡತಾನ ಋಷಿ । ಆಗ ।
ಮಣ್ಣೆಲ್ಲ ಆಗತದ ಮಷೀ ‖ ಪ ‖

ಹಸಿ ಹಸೀ ಕಾಗದಾ ಬಿಸೀ ಮಾಡಿ
ಹಸಿರಾಗಿ ಮೂಡತದ ಖುಷೀ
ಕೃಷೀ ಬೆಳ್ಳಿ–ಬಂಗಾರ ಬೆಳಸು
ನಂಬದುಕು ಆಗತದ ಮುಸೀ ೧

ನುಸೀ ಹುಳಾ ಮೇದಾವು ಅಂತ ಬೆಳ
ಹೋಗಬಾರದೇ ಹುಸೀ !
ತುಸಾಕಸಾ ಕಳಿದುಳಿದ ಹಸಾ
ಬೆಸವಾಗ ಬೇಕು ದಿಗ್ದಶೀ ೨

ಉಸಿರುಸಿರ ಅಸೀಮಸೆದಾಡಿಕಾದು
ತೃಷಿ ಮರೆತು ಕಳೆದೆವೋ ನಿಶೀ
ಹೊಸಾ ಹಾಡು ಬೀಸಿದರ ಕವಣೆ
ಮುಸೀ ಮುಸೀ ನಕ್ಕನೋ ಶಶೀ ೩

— ಅಂಬಿಕಾತನಯದತ್ತ



# ಓ ರಶ್ಮಿ

ಓ ರಶ್ಮಿ ! ಓ ಬಾಲರವಿರಶ್ಮಿ
ಬ್ರಾಹ್ಮರದ ಹೂವಿನಂತರಳಿರ್ದ ಹೃದ್ಧರ್ವಿರ್ಗ
ಆಧ್ಯಾತ್ಮವೆಂತೆಂಬ ಹೊನ್ನೆಲನ
ಬೆಳ್ಳನೇ ಬೆಳಗಿರ್ದ ಸತ್ಕರ್ವಿರ್ಗ ಓ ರಶ್ಮಿ !

ಇರುಳ ಕಳೆದು ಮರುಳ ನಿದ್ದೆಯ ಕಳೆದು
ಇರದೆ ಹೊದ್ದಿರುವ ಹೊದಿಕೆಯು ತೆಗೆದು
ಇರಿಕೆಳಸಿ ಬರ್ಪ ಇಕ್ಕಟ್ಟು ತೊಡೆದು
ಭರದಲ್ಲಿ ಬಂದು ನಿಂದ ಓ ರಶ್ಮಿ !

ನಿನಗೆಲ್ಲಿ ಕಾಯ್ದಿತ್ತು ಈ ರಂಗ
ತೃಣದ ತುದಿಯ ತುಷಾರ ಕಣಸಂಗ ?
ನಿನ್ನಿಂದ ತುಷಾರ ಮುತ್ತಾಗಿ ಹೊಳೆದಿತ್ತು
ನಿನಗಿಲ್ಲ ನಿಜಶಾಂತಿ ನಿಜಸುಖದ ಸವಿದುತ್ತು

ನೀ ಬಯಸಿ ಬಂದೆ ಕ್ಷೀರಸಾಗರ
ನೀ ಬಳಸಿ ನಿಂದೆ ಈ ತುಷಾರ !
ನಿನ್ನೆದೆಯ ನಲ್ದುಂಬಿ ಬಂದುಂಬದಿಹ ಮುನ್ನ
ಮುನ್ನರಿಯದರ್ಚಕನು ತರದಿಕ್ಕಿಬನು ನಿನ್ನ !

ಕೆಂಪೇರಿತಿದೋ ನೋಡು ನಿನ್ನ ಕದಪು
ತಂಪೀಯದೇರುತಿದೆ ನಿನ್ನ ಹೊಳಪು
ಬೇಗೆಯಲಿ ಬೇಯುತಿದೆ ಈ ರೂಪು
ಯೋಗವಿಲ್ಲದೊದಗದಾ ಸ್ವರೂಪು

ಹಾಡುತಿದೆ ಓ ರಶ್ಮಿ ನಿನ್ನೆದೆಯ ಚೆಲ್ವಕ್ಕಿ
ತೀಡುತಿವೆ ಓ ರಶ್ಮಿ ನಿನ್ನುಸಿರು ತಂಪಿಕ್ಕಿ
ಮಾಡುತಿದೆ ಭಾವವಿದು ಶಿವಪೂಜೆಯನು ಉಕ್ಕಿ
ಕೊಡದಿದೆ ಶಿವಸೌಖ್ಯ ಭವಗಜ ತಾ ಸೊಕ್ಕಿ !

ಚಿನ್ನ ಮಣ್ಣೊಳಗಿಹುದು ರನ್ನ ಮಸಿಯೊಳಗಿಹುದು
ಮಿಂಚು ಮೋಡದೊಳಿಹುದು ಪ್ರಕೃತಿಯಲ್ತೆ ನೋಡಿದು !

—ಶ್ರೀ ಜ. ಚ. ನಿ.

# ಮಹಾಮನೆಯ ಮಹಾತಾಯಿ

೧

ಸದುವಿನಯದ ತುಂಬಿದ ಕೊಡ
ತಂದಳು ನೀಲಾಂಬಿಕೆ,
ಕಲ್ಯಾಣದ ಅಂಗಳದಲಿ
ತಳಿ ಹೊಡೆದಳು ಛಂದಕೆ.
ಸಮಚಿತ್ತದ ರಂಗೋಲಿಯು
ಒಳ-ಹೊರಗೂ ಧೂಪವು,
ಹಾದಾಡುವ ಹೊಸತಿಲಲ್ಲಿ
ಹೊಯ್ದಾಡದ ದೀಪವು.

೨

ಮಹಾಮನೆಯ ಮಹಾತಾಯಿ
ಮಾಸದ ಮಡಿ ಹಾಸಲು
ದಾಸೋಹಕೆ ಮೀಸಲಾದ
ತೃಪ್ತಿಯ ನಗೆ ಸೂಸಲು
ಎಲ್ಲೆಲ್ಲಿಯು ಗಣ್ಯ ತಿಂಥಿಣಿ
ತಣಿದು ಹಾಡಿ ಹರಸಲು
ಭಕ್ತಿಯ ಭಂಡಾರ ತುಂಬಿ
ಹರಡಿತು ಬೆಳುದಿಂಗಳು.

೩

ಅಯ್ಯನ ಕೈ ನೋವುದೆನಲು
ಆಭರಣವ ಕೊಟ್ಟಳು
ಅನುಭಾವದ ಅಲಂಕಾರ
ಆಚರಣೆಯ ತೊಟ್ಟಳು.
ನೆರಳಾದಳು ಬಸವಣ್ಣನ
ಹರಳಾದಳು ಬೆರಳಿಗೆ,
ಅರಳಾದಳು ಲಿಂಗದಲ್ಲಿ
ಪರಿಮಳಿಸುತ ಪೂಜೆಗೆ.

೪

ಏನು ನೋವೊ ಹೇಳಲಿಲ್ಲ
ಕೇಳಲಿಲ್ಲ ಮಡದಿಗೆ,
ಹಾಗೆ ಹೊರಟು ಹೋದರಣ್ಣ
ಕಲ್ಯಾಣದ ಹುಡದಿಗೆ.
ಕೂಡಲದಲಿ ನೀರು ಹಂದು
ತಿಳಿಗೊಂಡಿತು ಬನ್ನಿರಿ,
ನೀಲಾಂಬಿಕೆ ನೆನಪಾದಳು
ಬೇಗನೆ ಕರೆತನ್ನಿರಿ.

೫

ಕರಸ್ಥಲದಿ ಬಸವ ರೂಪು
ಪರಿಣಾಮವ ಮೀರಿಸಿ,
ಬಸವಯ್ಯನು ಮಾಡಿದಾಟ
ಲಿಂಗದೆಡೆಗೆ ತೋರಿಸಿ,
ಅಲ್ಲಿ ಇಲ್ಲಿ ಉಭಯವಳಿದು
ಅಂಗೈಯಲಿ ಸಂಗಮ
ಅಲ್ಲಿದ್ದರು, ಇಲ್ಲಿಲ್ಲವೆ ?
ಜಗದ ಜೀವ ಜಂಗಮ.

೬

ನೀಲಾಂಬೆಯ ನಿಲವಿನಲ್ಲಿ
ಮಹಾಲಿಂಗ ಹೊಳೆಯಲು,
ಬಸವಣ್ಣನ ಭಕ್ತಿ ಕಲಶ
ಸಂಗಮನಡಿ ತೊಳೆಯಲು–
ಗಾಳಿಯಲ್ಲಿ ಗಾಳಿಯಾಗಿ
ಮಹಾ ಬೆಳಗು ಸಂದಿತು :
ಪ್ರಾಣಲಿಂಗದಲ್ಲಿ ಕರಗಿ
ನೀಲಾಂಬರ ಮಿಂಚಿತು.

—ಚನ್ನವೀರ ಕಣವಿ

## ಸಂಚಾರಿ

೧

ಇಲ್ಲಿ ನಿಂತಿದ್ದಾನೆ ಮರದ ನೆರಳಿನ ಕೆಳಗೆ
ದಾರಿ ದಣಿವಾರಿಸಲು ಒಂದು ಗಳಿಗೆ.
ನಡೆದು ಬಂದೇ ಬಂದ.... ಈ ದೂರಕೆ
ಮೈ ಮನಸು ಒಳ ಒಳಗೆ ಮಾತಾಡಿಕೊಂಡಿಹವು
ಕಥೆ ಹೇಳುತಿಹವು !
ಕೆಳಗೆ ಕಂದಕ ದಾರಿ ತಲೆ ಮೇಲೆ ಗಿರಿ ಏರಿ
ಅವನೊ....?
ಹುಟ್ಟು ಸಾವಿನ ನಡುವೆ ಸಾಗಿರುವ ಸಂಚಾರಿ
ತನ್ನ ಪ್ರತಿನಿಧಿ ತಾನೆ–ರಾಯಭಾರಿ !

೨

ಆಗೀಗ ಚಡಪಡಿಸಿ ಮನಸು ಕೈ ಚಾಚುತಿದೆ
ಅವ ಬಿಟ್ಟು ಬಂದಿರುವ ಹಳೆ ಹಾದಿಗೆ ;
ನೂರೆಂಟು ನಂಟುಗಳ ಗಂಟು ಇದ್ದಿತೊ ಹಾಗೆ
ಅಲ್ಲಿ ಹೊರಳಾಡಿದ್ದ ಈ ಬಾಳಿಗೆ
ಕಂಡದ್ದು ಉಂಡದ್ದು—
ಮನಸಿನೇಕೋಭಾವದಲಿ ಮನೆಮಾಡಿಕೊಂಡದ್ದು
ಎಲ್ಲ ಸಿಡಿದೇಳುವದೊ. ಮೈಯ ಮುರಿದು
ಒಲ್ಲೆನೆಂದರು ಕೂಡ ಬೆನ್ನ ಬಿಡದು.
ಆಗಾಗ ನಗುವು ನರಳಿಕೆ ನೋವು
ಮಳೆಗಾಲದಲಿ ಬರುವ ಬಿಸಿಲು-ನೆರಳು
ಹೃದಯ ಹಗುರಾಗಿ-ಕರಗಿ ನೂರು ಕರಳು !

೩

ಹಳೆಯ ಮನೆಯಲಿ ಬದುಕು ಮೈಮುದುರಿಕೊಂಡಿತ್ತು
ಎದೆಯ ಏಸೋ ಕನಸು ತುಕಡಿ-ತುಕಡಿ ;
ಸಾವು ಸುಮ್ಮನೆ ಇತ್ತು—

ಅದೂ ಬರಲಿಲ್ಲ ಕೋಡಿ
ಅಲ್ಲಲ್ಲಿ ಪ್ರೀತಿ ಗುರುತಾಗಿ ನಿಂತಿತ್ತು
ತಾನೊಲಿದ ಬಳ್ಳಿಗೋ ನೀರ ಹೊತ್ತು.
ಹೃದಯ ಸಂಸಾರ ತೀರ ಅಪರಂಪಾರ
ಎತ್ತ ಹೊರಳಿದರೂನು ದುಃಖಪೂರ!
ಯಾವ ಬಯಕೆಯ ಹೊತ್ತು ನಡೆದು ಬಂದಿತೊ ಜೀವ
ನೂರು ನರಳಿಕೆ ಸಹಿಸಿ ದೇಹಭಾರ
ಹೃದಯ ಹಣ್ಣಾಗಿ ಮಣ್ಣಿನಲಿ ಹೊರಳಾಡಿ
ಉಸಿರುಗಟ್ಟಿತು ಬಾಯಿ,
ಬಿಕ್ಕಿತ್ತು ಜೀವನಾಡಿ!
ಆದರೂ ಮಾಯ ಮೈಮರೆಸಿತ್ತು
ಮೈಯ ಒಲೆದೆಳೆದಿತ್ತೊ ಕಣ್ಣ ಕುಣಿಸಿ;
ಈ ಮನಸು ಕರೆದಲ್ಲಿ ನೆಲೆನಿಂತರೇನು ಗತಿ?
ಹೊರಟು ಬಂದನು ಅಂತೆ
ಸುತ್ತಲಿನ ಗೊಂದಲವ ಬದಿಗೆ ಸರಿಸಿ.

೪

ಅದು ಎಲ್ಲ ಕನಸಿನಲಿ ಕಂಡಂತೆ
ಈ ಬದುಕು ಅಲ್ಲಲ್ಲಿ ನೆರೆದ ಸಂತೆ!

೦ ೦ ೦ ೦

ನಡೆದು ಬಂದೇ ಬಂದ-
ಆ ಜೀವ ಸಂಚಾರಿ
ತಿರುತಿರುಗಿ ಈ ದಾರಿಗೆ
ಇಲ್ಲಿ ನಿಂತಿದ್ದಾನೆ-
ದಾರಿ ದಣಿವಾರಿಸಲು ಒಂದು ಗಳಿಗೆ
ಸುತ್ತು ಸಂಸಾರ ಪಾರಾವಾರ
ಕನಸೂ ಮನಸೂ ಈಗ ನಿರ್ವಿಕಾರ
ಉರಿಯುತಿದೆ ಎದೆಯಲ್ಲಿ
ಪ್ರೀತಿ ಮಣ್ಣ ಹಣತಿ!
ಯಾರಾದರೂ ಇಂದು ಹೇಳಬಹುದೇ ಅವಗೆ

೨

ಈಗ ಸಾಗಿಹ ದಾರಿ ಕೊನೆಯು ಸರತಿ !
ಮುಂದಿರುವ ದಾರಿಯಲಿ ಹೆಜ್ಜೆ ಹೆಜ್ಜೆಯ ಬಿಡಿಸಿ
ಸಾಗಲೇಕೋ ಮೇಲೆ ಉಳಿದ ಕಾಲ
ಅಲ್ಲಿ ಕಾಣುವದೇನು ?
ಬರೀ ಬಟ್ಟೆ ಬಯಲ !

—ಸಿದ್ದಣ್ಣ ಮಸಳಿ

---

## ಮಾತು - ಮೌನ

ಮೌನಕ್ಕೆ ಮಾತುಂಟೇ
ಮಾತಿಗೂ ಮೌನನಂಟೇ ?
ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಂ !
ಜಡದೊಳಗೆ ನಡೆಯುತಿಹ ಚೇತನದ ಕರ್ಮ
ಕಾಣ್ಬರುವುದುಂಟೇ ?
ವಿಜ್ಞಾನಿ ನೆನಸರಸಿ ತಪಿಸಿ ನುಡಿದಂತ ಮರ್ಮ
ಹೀಗೊಂದುಂಟೇ ?

ಜಡದ ಕಣ ಕಣಗಳಲಿ ನಿರಂತರ ಚಲನ
ಜಡದ ಸ್ಥಿತಿತ್ರಯ ಘನ, ದ್ರವ, ಅನಿಲಗಳಲಿ ವಿವಿಧ ಸ್ಪಂದನ
ಘನದಿಂದ ದ್ರವ, ದ್ರವದಿಂದ ಅನಿಲ,-ಪರಿವರ್ತನ
ಕಣಕಣದ ವೈವಿಧ್ಯ ನಟರಾಜ ನರ್ತನ,
ಕವಿ ನುಡಿದ, ತನ್ನ ಕವಿ ನುಡಿಯ ಸಿಂಗಾರವಿಟ್ಟು
‘ಜಡವೆಂಬುದು ಚೇತನದ ಲೀಲೆ’
ಯಾವ ಚಿಂತನೆಯಿಂದುದಿಸಿರೇ ಗುಟ್ಟು
ಚೇತನವು ಜಡದ ಒಳಗೆ ಮಾಣೆ!
ಚೈತ್ಯ ಚೇತನವು ಶಿಶುವಾಗಿ ತಾ ಮಲಗಿದ ಮೇಲೆ
ಜಡದಂತೆ ರೂಪ ಲೀಲೆ !

ಕಲಾಂಗಣದ ಸಂಗೀತ ಸ್ತಂಭದೊಳು
ಸಂಗೀತ ಸಪ್ತ ಸ್ವರ ಸೃಷ್ಟಿ ಕೊಳಲು
ಒಳಗಿವಿಗೆ ಭಾವ ಧ್ವನಿಯ ರಾಗ ಕೊಳಲು

ಮೌನಕ್ಕೂ ಮಾತು ಬಂತು, ಮಾತಿಗೂ ಮೌನ ಬಂತು;
ಅರಿತು ಆಡಿದ ಮಾತು ಜ್ಯೋತಿರ್ಲಿಂಗವಾಗಿತ್ತು
ಹೆಂಗೆ ಇದು ಹೆಂಗೆ ಇದು....ಅಚ್ಚರಿಯ ಪ್ರಶ್ನೆ
ಫ್ಯಾನು ತಿರುಗುವ ಮುನ್ನ ಕಾಣುತ್ತಿದ್ದ ರೆಕ್ಕೆ
ಸ್ವಿಚ್ ನೊತ್ತುತಲೆ ತಿರುಗಿತೋ ರಭಸದಲಿ....ಎಲ್ಲಿ ಆ ರೆಕ್ಕೆ ?
ಗಾಳಿ ಕಂಪಿಸಿದ ರೀತಿಯದು ಕಿವಿಯ ಕುಕ್ಕೆ
ಶ್ರವಣಾತೀತ ಶಬ್ದವಾದಂದು ಶಬ್ದವು ತಾಗಿತೇ ಕಿವಿಯ ತಮಟೆಗೆ ?
ಇಂದ್ರಿಯಾನುಭವಕೆ ಮೀರಿದೊಡೆ ಸತ್ಯ ಸಟೆಯೇ?
ಇಂದ್ರಿಯಾಸುಭವಕೆ ಸಿಲುಕಿದೊಡೆ ಸಟೆ ಸತ್ಯವೆ ?
........ಅಂತೆ
ಭಕ್ತಿಯದು ಉಕ್ತಿಯಾದಾಗ
ಕಾಯಕವು ಕೈಲಾಸವೆಂದಾಗ
ಶಿಲೆಯೊಳಗೆ ಕಲೆಯನಾಡಿಸುತ
ಕುಶಲತೆಯ ನೆಲೆ ಎಂದಾಗ
ಮಾತು ಮಹತ್ತಾಗಿ ತಾ ಬೆಳಗುವಾಗ
ಜಡದೊಳಗೆ ಚೇತನವುಂಟು.
ಮಾತೊಳಗೆ ಮೌನವೆಂಬುದುಂಟು.
ಮೌನದೊಳಗೆ ಮಾತೆಂಬುದುಂಟು.

—'ಅಚಲ ಶರಣ್'



# ಕಣ್ಣಡಿಕರು-ಕನ್ನಡಿಗರು

—ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಚ. ನಿ.

ಕಣ್ಣಡಿಕನೆಂದರೆ ವೀರಭದ್ರ. ಕಣ್ಣಡಿಕರೆಂದರೆ ವೀರಭದ್ರನ ವಂಶಜರು; ವೀರಶೈವರು.

ಕಣ್ಣನ್ನು ಅಡಿಯಲ್ಲಿ ಮುಡಿದಾತನು ಕಣ್ಣಡಿಕನು. ಹರಿಯ ನಯನವನ್ನು ಚರಣದಲ್ಲಿ ಧರಿಸಿದಾತನು ವೀರಭದ್ರನು. ದಕ್ಷನ ಯಜ್ಞಧ್ವಂಸಸಮಯದಲ್ಲಿ ಭಯ ಸಂತ್ರಸ್ತನಾದ ಹರಿಯು ಆತನನ್ನು ಒಲಿಸಲು ಸಂತೈಸಲು ನಿತ್ಯ ಸಾವಿರ ತಾವರೆಗಳಿಂದ ಆರಾಧಿಸುವ ವ್ರತಸ್ಥನಾಗುವನು. ಒಂದು ದಿನ ಒಂದು ತಾವರೆ ಕಮ್ಮಿಯಾಗುವುದು. ಎಲ್ಲಿ ಹುಡುಕಿದರೂ ಎಷ್ಟು ಬೆದಕಿದರೂ ದೊರೆಯದಾಗುವುದೇ ಆಗ ತನ್ನ ಕಣ್ಣನ್ನೇ ಕಮಲವನ್ನಾಗಿಸಿ ಶ್ರೀ ಚರಣಕ್ಕೆ ಸಮರ್ಪಿಸುವನು. ಅದನ್ನು ವೀರಭದ್ರನು ತನ್ನ ಚರಣಾಂಗುಷ್ಠದಲ್ಲಿ ಭಕ್ತನ ಭಕ್ತಿಯ ಕುರುಹಿಗಾಗಿ ಧರಿಸಿಕೊಂಡಿರುವನು. ಅದರಿಂದಾಗಿ ಆತನು ಕಣ್ಣಡಿಕನೆಂದು ಹೆಸರಾದನು. ಆತನ ವಂಶೀಯರು ಕಣ್ಣಡಿಕರೆಂದೆನಿಸಿದರು. ಅವರೇ ಬರಬರುತ್ತ "ಕನ್ನಡಿಗರು" ಎಂದೆನಿಸುವರು.

ಕಣ್ಣಡಿಕ ಅಂದರೆ ವೀರಭದ್ರನ ಭಾಷೆ ಕನ್ನಡ. ಕನ್ನಡ ನುಡಿಯ ಉತ್ಪಾದಕನು ಆತನು. ಆದ್ದರಿಂದ ಆತನು ಆದಿ ಕನ್ನಡಿಗನು. ಆತನ ಅನುಯಾಯಿಗಳು ಕನ್ನಡಿಗರು. ಕನ್ನಡಿಗರು ವೀರಶೈವರು.

ವೀರಭದ್ರನಿಗೆ 'ವೀರಶಿವ' ಎಂದು ಮತ್ತೊಂದು ಹೆಸರು. ಭದ್ರಪದವು ಶಿವಪದದ ಪರ್ಯಾಯ ಪದವು. 'ಭದ್ರಂ ಶಿವಂ ಮಂಗಲಂ' ಎಂದಿದೆ ಅಮರಕೋಶ. ಆ ವೀರಶಿವನ ಆರಾಧಕರೇ ವೀರಶೈವರು.

ಕಣ್ಣಡಿಕ—ಕನ್ನಡಿಗ ಈ ಎರಡು ನುಡಿಗಳು ಹೆಚ್ಚು ಹಳೆಮಾತುಗಳು. ಕಣ್ಣಡಿಕ ಇತಿಹಾಸ ಬಹು ಪುರಾತನದ್ದು. ದಕ್ಷಯುಗದ್ದು.

ವಿಷ್ಣು ವೀರಶಿವನಿಗೆ ತನ್ನ ನಯನ ಕಮಲವನ್ನು ಸಮರ್ಪಿಸಿದ ಕಥೆ ಪುರಾಣದಲ್ಲಿ ಪ್ರಸಿದ್ಧವಿದೆ.

> "ಹೊಳೆವ ಜಡೆಯ ಮೇಲೆ ಎಳೆವೆಳೆದಿಂಗಳು
> ಫಣಿ ಮಣಿ ಕರ್ಣ ಕುಂಡಲದವ ನೋಡವ್ವ !
> ರುಂಡ ಮಾಲೆಯ ಕೊರಳವನ ಕಂಡರೆ ಒಮ್ಮೆ ಬರಹೇಳವ್ವ !
> ಗೋವಿಂದನ ನಯನ ಉಂಗುಟದ ಮೇಲಿಪ್ಪುದು
> ಚನ್ನ ಮಲ್ಲಿಕಾರ್ಜುನ ದೇವನ ಚನ್ನ ಕುರುಹವ್ವ !

ಮಹಾದೇವಿಯಕ್ಕನ ಈ ಹೇಳಿಕೆಯು ನಮ್ಮ ಅಭಿಪ್ರಾಯವನ್ನೆ ಎತ್ತಿ ಸಮರ್ಥಿಸಿದೆ. ರುಂಡ ಮಾಲೆಯ ಕೊರಳವ ವೀರಭದ್ರನಲ್ಲದೆ ಇನ್ನಾರು ? ಆತನ ಉಂಗುಟದಮೇಲೆ ಗೋವಿಂದನ ನಯನವಿದೆಯಂತೆ ! ಅಂತೆಯೇ ವೀರಭದ್ರನು ಕಣ್ಣಡಿಕನು.

ಕಣ್ಣಡಿಕಸಿಗೂ ನಿಡುಮಾಮಿಡಿಗೂ ನಿಕಟ ಸಂಬಂಧ. 'ನಿಡುಮಾಮಿಡಿ' ಈ ನುಡಿಯ ಮೂಲವನ್ನು ನೋಡಬೇಕು. 'ನಿಡುಮಾಡಿ' ಇದು ನಿಡುಮಾಮಿಡಿಯ ನಿಜವಾದ ಮೂಲಪದ. ಅದು ಬರಬರುತ್ತ ನಿಡುಮಾಗಡಿ–ನಿಡುಮಾಮಡಿ–ನಿಡುಮಾಮಿಡಿ ಎಂದು ಆ ಕಾಲದ ಕಾರ್ಯಕಥನಗಳಿಂದ ಅನ್ವರ್ಥಕವಾಗಿ ಮಾರ್ಪಡುತ್ತ ಬಂದಿದೆ.

"ನಿಡು-ಮಾ ಅಡಿ" ಈ ಮೂರು ನುಡಿ ಸೇರಿ ನಿಡುಮಾಡಿ ಆಗಿದೆ. ಉದ್ದಾದ ದೊಡ್ಡದಾದ ಅಡಿ ಎಂದರ್ಥ. ಈ ಪೀಠದ ಪುರಾತನ ಮುಖ್ಯ ಗುರುಗಳಲ್ಲಿ ಒಬ್ಬರು ವಿರೂಪಾಕ್ಷ ದೇಶಿಕೇಂದ್ರರು ಇವರು ಸಾಕ್ಷಾತ್ ವಿರೂಪಾಕ್ಷ ಸ್ವರೂಪರು. ಇವರ ರಕ್ಷಣೆಗಾಗಿ ಸೇವೆಗಾಗಿ ವೀರಭದ್ರನು ಭದ್ರಕಾಳಿ ಸಹಿತನಾಗಿ ಭೂಲೋಕಕ್ಕೆ ಬರುವನು. ವಿರೂಪಾಕ್ಷ ದೇಶಿಕೇಂದ್ರ ಜಗದ್ಗುರುಗಳ ಪ್ರಯಾಣಕ್ಕೆ ಸಹಾಯಕನಾಗಿ ಶ್ರೀರಾಮನಿಗೆ ಹನುಮಂತನಂತಿರುವನು. ಪ್ರಯಾಣದಲ್ಲಿ ವೀರಭದ್ರನು ತನ್ನ ದೊಡ್ಡ ಅಡಿಗಳಿಂದ ಹೆಚ್ಚು ಉದ್ದಾಗಿ ಹೆಜ್ಜೆಗಳನ್ನು ಹಾಕುತ್ತಿದ್ದನು. ಅದರಿಂದಾಗಿ 'ನಿಡುಮಾಡಿಗ' ಎಂದು ಹೆಸರುಳ್ಳವನಾಗುವನು. ಆತನ ಸೇವೆಯ ಸ್ಮಾರಕವಾಗಿ ಅದೇ ಹೆಸರನ್ನು ಆತನ ಕೋರಿಕೆಯಂತೆ ಸಂಸ್ಥಾನ ವಂಶದ ಹೆಸರಿಗೆ ಸೇರಿಸುವ ವಾಡಿಕೆಬಂದಿದೆ.

ಪೀಠದ ಸ್ಥಳ ವ್ಯಾಪ್ತಿ ನಾಡಿನಲ್ಲಿ ಹೆಚ್ಚಿದಾಗ ಅದೇ ನಿಡು-ಮಾ-ಗಡಿಯಾಗಿ ಪ್ರಯುಕ್ತವಾಯಿತು. ಆ ಬಳಿಕ ಜಗದ್ಗುರು ಕರಿಬಸವೇಂದ್ರರು ಒಣ ಮಾವಿನ ಮರವನ್ನು ಚಿಗುರಿಸಿ ಹೂವಾಗಿಸಿ ಕಾಯಾಗಿಸಿದ ಪವಾಡದ ಫಲವಾಗಿ ಅದೇ 'ನಿಡುಮಾಮಿಡಿ'ಯಾಗಿ ಪರಿವರ್ತಿತವಾಗಿ ರೂಢಿಗೊಂಡಿತು. ಈ ಎಲ್ಲ ಪದ ಪ್ರಯೋಗಗಳು ಕಾವ್ಯಗಳಲ್ಲಿ ಜನವಾಣಿಗಳಲ್ಲಿ ಕಾಣಬರುತ್ತವೆ; ಕೇಳ ಬರುತ್ತವೆ. ಪೀಠದ ಪುರಾಣದಲ್ಲಿಯೂ ಪತ್ರಗಳಲ್ಲಿಯೂ ರಿಕಾರ್ಡುಗಳಲ್ಲಿಯೂ ಉಲ್ಲಖಿತವಾಗಿವೆ.

ಯಾಗ ಕೋಲಾಹಲ ವೀರಭದ್ರನಿಂದ ಮೊದಲ್ಗೊಂಡು ಮಾಯಾ ಕೋಲಾಹಲ ಅಲ್ಲಮಾಪ್ರಭುವಿನವರೆವಿಗೂ ಅಂಗಾಲ ಕಣ್ಣುಳ್ಳ ಕಣ್ಣಡಿಕರು. ಇದು ಕಣ್ಣಡಿಕರ ಸಂಪ್ರದಾಯ ಬೆಳೆದು ಬಂದ ಬಗೆ.

"ಒಂದು ಲಿಂಗ ಸ್ವಲೀಲೆಯೇ ಸಹಸ್ರ ಚಿದ್ವಿಲಾಸವಾಗಿ
ಕಣ್ಣು ಅಡಿಯಲ್ಲಿ ಧರಿಸಿದ ಕಣ್ಣಡಿಕರು; ಹರಿನೇತ್ರ
ಕಮಲಧರ ಪಾದ ಕಣ್ಣಡಿಕರೇ ಮಣಿಪಾದ ವಾಚ್ಯರು.
....ಕಣ್ಮಣಿ ಧರಿಸಿದ ಮಣಿಪಾದ ಪಟ್ಟವರ್ಧನರು
ಪಾದ ಪಟ್ಟಾಭಿಷೇಕ ವರ್ಧನರು." (ಪುಟ ೮೮-೮೯)

—ಅನಾದಿ ವೀರಶೈವ ಸಂಗ್ರಹ

ಈ ಕೃತಿಯು ವೀರಭದ್ರನ ಮತ್ತು ಆತನ ಅನುಯಾಯಿಗಳ ಕಣ್ಣಡಿಕತನವನ್ನು ಉಗ್ಗಡಿಸಿದೆ.

"ಎರಡು ಕಣ್ಣುಳ್ಳರೆ ಚತುರ್ಭುಜನೆಂಬೆನು
ಮೂರು ಕಣ್ಣುಳ್ಳರೆ ಮಹೇಶ್ವರನೆಂಬೆನು
ಮೈಯೆಲ್ಲ ಕಣ್ಣಾದರೆ ಸದಾಶಿವನೆಂಬೆನು.
ಗುಹೇಶ್ವರ, ನಿಮ್ಮ ಶರಣಂಗೆ ಅಂಗಾಲ ಕಣ್ಣು
ಮೂಡಿದರೆ ನಿರುಪಮ ಮಹಿಮ ಅಲ್ಲಯ್ಯನೆಂಬೆನು"

ಈ ವಚನದಿಂದ ಅಲ್ಲಯ್ಯನು ಅರ್ವಾಚೀನ ಕಣ್ಣಡಿಕನು ಎಂಬುದು ಎಗ್ಗಳ ವಾಗುತ್ತದೆ.

ಈ ವೀರಭದ್ರನೇ ಮೊದಲಾದ ಕಣ್ಣಡಿಕರೇ ಕನ್ನಡ ಭಾಷಾ ಜನಕರು, ಕನ್ನಡ ನಾಡಿಗರು. ಇವರಿಂದ ಕನ್ನಡ ನಾಡನುಡಿಗಳು ರೂಪುಗೊಂಡವೆಂದು ಹೇಳಿದರೆ ಹೆಚ್ಚೆನಿಸಲಿಕ್ಕಿಲ್ಲ. ಊಹಿಸಿದರೆ ಉಪೇಕ್ಷಿಸತಕ್ಕುದಲ್ಲ.

ಈ ವಿಷಯವಾಗಿ ಮೈಸೂರಿನ ಪ್ರಸಿದ್ಧ ವೈದ್ಯರಾದ ಡಾ|| ಎಂ. ಅಣ್ಣಾಜಪ್ಪನವರು ಸಾಡರ್ನ ಫಾರ್ಮಸಿ ಅವರು ಅನಾದಿ ವೀರಶೈವ ಸಂಗ್ರಹ ಗ್ರಂಥದ ಮುನ್ನುಡಿಯಲ್ಲಿ ಹೀಗೆ ನುಡಿದಿದ್ದಾರೆ:

ವೀರಶೈವರು ಕಣ್ಣಡಿಕರು ಮತ್ತು ಅವರ ಸನಾತನತ್ವ "ಒಂದು ಲಿಂಗ ಸ್ವಲೀಲೆಯೋ ಸಹಸ್ರ ಚಿದ್ವಿಲಾಸವಾಗಿ ಕಣ್ಣು ಅಡಿಯಲ್ಲಿ ಧರಿಸಿದ ಕಣ್ಣಡಿಕರು ಮಣಿಪಾದ ವಾಚ್ಯರು. (ಪುಟ ೮೯)

ಈ 'ಕಣ್ಣಡಿಕರು' ಎಂಬ ಪದದಿಂದ ಕನ್ನಡಿಗರು ಎಂಬುದೂ, ಇವರ ಭಾಷೆಗೆ ಕನ್ನಡ ಎಂಬುದೂ ಹೆಸರು ಬಂದಂತೆ ತೋರುತ್ತದೆ. ಕನ್ನಡವು ವೀರಶೈವರ ಬಳಕೆಯ ಮುಖ್ಯ ಭಾಷೆ. ತೆಲುಗು ದೇಶದಲ್ಲಿ ತೆಲುಗು ಭಾಷೆಯು ಹೆಚ್ಚು ಪ್ರಚಾರವಾದಾಗ್ಯೂ ಅಲ್ಲಿನ ವೀರಶೈವರು ಒಂದೆರಡಾದರೂ ಕನ್ನಡ ಹಾಡುಗಳನ್ನು ಕಲಿತಿರಬೇಕೆಂದು ಅವಶ್ಯಕತೆಯ ಆಕಾಂಕ್ಷೆಯುಳ್ಳವರು, (ಶಿವಾನುಭವ IV ೨-೩) ಶಿವಪೂಜೆ ಮಾಡುವಾಗ ಕನ್ನಡ ಭಾಷೆಯ ಮಂಗಳಾರತಿ ಒಂದನ್ನಾದರೂ ಹೇಳುತ್ತಾರೆಂದು ತಿಳಿದಿದೆ. ಫಾದರ್ ಹೆರಾಸ್‌ರವರು, (The Rev. H. Heras S. J. M. A) "Karnataka and Mohenjo Daro" ಎಂಬ ಲೇಖನವನ್ನು (The Karnataka Historical Review IV-1 and 2 numbers) ಬರೆಯುತ್ತಾ

"The people of Karnataka are apparently reffered to in one of the real inscriptions of Mohenjo Daro as one of the ancient tribes of the land. The sign used to mention them in this (Here is a sign

like triangle) It means "eye". Therefore in the proto Dravidian language of Mohenjo Daro it will read "Kan" "eye" or "to see".

The small sign placed above it is the determinative of personality........26 We finally complete the sign by ending two strokes ineach side which are the determinatives of colletively........ the complete sign will read Kananir "people who have eyes" (ಕಣ್ಣುಳ್ಳವರು) This evidently refers number of people called so. The ancient word Kannadigas by which the people of Modern Karnataka are mentioned, seems to be but a sanskrit modification of Kananir."

ಈಗಿನ ಕರ್ನಾಟಕ ಜನರಿಗಾಗಿ ಉಪಯೋಗಿಸುವ ಕನ್ನಡಿಗರು ಎಂಬ ಹಳೆಯ ಶಬ್ದವು ಕನನಿರ್ ಎಂಬುದರ ಸಂಸ್ಕೃತ (ತಿದ್ದಿದ) ರೂಪವಾಗಿ ತೋರುತ್ತದೆ.

ತಾತ್ಪರ್ಯ :—ಇದರಿಂದ 'ಕನ್ನಡಿಗರು' ಎಂಬುದು ಹಳೆಯ ಶಬ್ದವೆಂದು ತೋರುತ್ತದೆ. ಇದು ಕಣ್ಣಡಿಗರು ಎಂದು ಬದಲಾಯಿಸಲ್ಪಡುವುದಕ್ಕೆ ಬಹಳ ವ್ಯತ್ಯಾಸವೇನೂ ಇಲ್ಲ. ಮೊಹೆಂಜೋದಾರೋ ಪಟ್ಟಣದಲ್ಲಿ ಕಣ್ಣಡಿಗರು ಇದ್ದರೇ ಎಂಬುದನ್ನು ಶೋಧಕರು ಸೂಕ್ಷ್ಮದೃಷ್ಟಿಯಿಂದ ಶೋಧಿಸಬೇಕಾಗಿದೆ. ದಕ್ಷಿಣ ಕರ್ನಾಟಕದ ಲಿಂಗವಂತರು ಪೂಜೆ ಮಾಡುವಂತಹ ಲಿಂಗಗಳು ಮೊಹೆಂಜೋ-ದಾರೋ ಪಟ್ಟಣದಲ್ಲಿ ಸಿಕ್ಕಿರುವುದಾಗಿ ಅವನ್ನು ಪ್ರಕಟಿಸಿದ ಡಾ|| ಮಾರ್ಷಲ್‌ರವರು ಬರೆದಿರುತ್ತಾರೆ. ಕಂಥೆಯ ಧರಿಸಿದ ಲಿಂಗವೊಂದು ಅಲ್ಲಿನ ವಸ್ತುಗಳೊಳಗೆ ಇರುವುದನ್ನು ಮೈಸೂರು ಶಾಸನದ ಇಲಾಖೆಯ ಕಾರ್ಯಾಲಯದಲ್ಲಿ ನೋಡಲಾಗಿದೆ.

ಇದರಿಂದ ವೀರಶೈವ ಪದ್ಧತಿಯು ಸನಾತನವಾದುದು ಎಂದು ಊಹಿಸುವಂತಾಗಿದೆ.

ಪಟವರ್ಧನ ಎಂಬ ಪದವೂ ಜನಿವಾರವನ್ನು ಧರಿಸದಿರುವ ಬರಿಯ ಲಿಂಗಧಾರಿಗಳಿಗಾಗಿ ದೇವರ ದಾಸಿಮಯ್ಯನವರ ಪುರಾಣದಲ್ಲಿ ಉಪಯೋಗಿಸಲ್ಪಟ್ಟಿದೆ. ಬಸವಣ್ಣ ಪ್ರಧಾನಿ ಪಟವರ್ಧನ ಎಂಬ ಶಬ್ದಗಳನ್ನೊಳಗೊಂಡಿರುವ ಒಂದು ಶಾಸನವು ಮೈಸೂರು ದೇಶದ ಶಿವಮೊಗ್ಗಾ ಜಿಲ್ಲೆಯ ಬಳ್ಳಿಗಾವಿಯಲ್ಲಿ ಇದೆ.

ದ್ರಾವಿಡರಿಗಿಂತಲೂ ಪೂರ್ವದಲ್ಲಿ ಹಿಂದೂ ದೇಶದಲ್ಲಿ ಸಂಜ್ಞೆಗಳಿಂದ ಬರೆಯುವ ರೂಢಿಯಿದ್ದಿತು. ಆಗ ಕಣ್ಣು ಎಂಬುದನ್ನು ರೇಖಾಗಣಿತದಲ್ಲಿ ಉಪಯೋಗಿಸುವ

ತ್ರಿಕೋಣದಿಂದ ಗುರ್ತು ಮಾಡುತ್ತಿದ್ದರು ಎಂದು ಮೇಲಿನ ವಿಷಯಗಳಿಂದ ತಿಳಿದಿದೆ. ಈಗ ವೀರಶೈವರು ಲಿಂಗಪೂಜೆ ಮಾಡುವಾಗ ಲಿಂಗವನ್ನಿಡುವ ಅಂಗೈಯಲ್ಲಿ ಎರಡು ತ್ರಿಕೋಣಗಳನ್ನು ಕೆಳಗಿನದು ತಲೆ ಕೆಳಕಾಗಿರುವಂತೆ ಕೂಡಿಸಿ ಬರೆದು ಷಟ್ಕೋಣ ವನ್ನು ರಚಿಸುತ್ತಾರೆ. ಅದರ ಮೇಲೆ ಲಿಂಗವನ್ನು ಇಡುತ್ತಾರೆ. ಇದು ಮೇಲಿನ ಕಣ್ಣು ಅಡಿಯಾಗಿ (ತಲೆಕೆಳಗಾಗಿ) ಬಿದ್ದುದು ಎಂಬುದನ್ನು ತೋರಿಸುತ್ತದೆ. ಲಿಂಗದ ಅಡಿಯಲ್ಲಿ ಈ ಕಣ್ಣು ಇರುವುದರಿಂದ ಕಣ್ಣಡಿಗ ಲಿಂಗವೆಂದು ತಿಳಿಯಬಹುದು. ಆಗ ಲಿಂಗರೂಪರಾದ ವೀರಶೈವರು ಕಣ್ಣಡಿಗರೇ ಆಗುತ್ತಾರೆ. ಈ ಕಣ್ಣಡಿಗ ಶಬ್ದದಿಂದ ಕನ್ನಡಿಗ ಆಗಬಹುದು. ಇವರ ಭಾಷೆಗೆ ಕಣ್ಣಡ ಅಥವಾ ಕನ್ನಡ ಎಂಬ ಹೆಸರಾಗ ಬಹುದು. ಚರಿತ್ರ ಶೋಧಕರ ಗಮನಕ್ಕೆ ಈ ವಿಷಯವನ್ನು ಇಟ್ಟಿದೆ. ಮುಂದೆ ಇದರ ವಿಮರ್ಶೆಯು ನಡೆಯಲಿ.

ಒಟ್ಟಿನಲ್ಲಿ ಕನ್ನಡ ಭಾಷೆಯ ಜನಕರು ವೀರಶೈವರೇ ಎಂಬುದನ್ನು ಚೆನ್ನಾಗಿ ಜ್ಞಾಪಕದಲ್ಲಿ ಇಟ್ಟಿರಬೇಕು.



# ಕೊಂಡಗುಳಿ ಕೇಶಿರಾಜ

(ಒಂದು ವಿವೇಚನೆ)

—ಸಿದ್ದಣ್ಣ ಮಸಳಿ, ಎಂ. ಎ.

ಕೊಂಡಗುಳಿ ಕೇಶಿರಾಜ ಶರಣನಾಗಿದ್ದ, ಕವಿಯಾಗಿದ್ದ, ದಂಡನಾಯಕನಾಗಿದ್ದ-ಎಂದು ಹಲವಾರು ಆಧಾರಗಳಿಂದ ತಿಳಿದುಬರುತ್ತದೆ. ಆದರೆ ಈ ಎಲ್ಲ ಆಧಾರಗಳಲ್ಲಿ ಕಾಣಬರುವ ಕೇಶಿರಾಜ ಒಬ್ಬನಾಗಿದ್ದನೊ? ಇಬ್ಬರಾಗಿದ್ದರೊ? ಎನ್ನುವದು ವಿವಾದಕ್ಕೆ ಎಡೆ ಕೊಟ್ಟದೆ. ಮೊದಲು ಈ ಆಧಾರಗಳಲ್ಲಿ ಚಿತ್ರಿತವಾದ ಕೇಶಿರಾಜನ ಚಿತ್ರವನ್ನು ಬಿಡಿಸಿ, ಅವನ ಕಾಲ, ಹಾಗೂ ವ್ಯಕ್ತಿತ್ವಗಳ ಬಗ್ಗೆ ಅರಿತುಕೊಳ್ಳಬಹುದು. ಆದರೆ ಅದು ಸುಲಭಸಾಧ್ಯವಾದ ಕೆಲಸವೇನೂ ಅಲ್ಲ.

**ಆಧಾರಗಳು :**

೧. **ಕವಿಚರಿತೆ–ಸಂಪುಟ :** ೧.

ಈತನ ಕಾಲ ಕ್ರಿ. ಶ. ೧೧೬೦. ವೀರಶೈವ ಕವಿ; ಷಡಕ್ಷರ ಕಂದವನ್ನು ಬರೆದಿದ್ದಾನೆ. ಈತನ ಬಗ್ಗೆ "ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ" ದಲ್ಲಿ ಹೀಗೆ ಹೇಳಲಾಗಿದೆ: ಕೊಂಡಗುಳಿ ಎಂಬ ಊರಲ್ಲಿ ಕೇಶಿರಾಜಯ್ಯನು ವಸ್ತುಕ ವರ್ಣಕದಿಂದ ಷಡಕ್ಷರ ಮಂತ್ರ ಮಹತ್ವವನ್ನು ನವರಸಾರ್ಥಯುಕ್ತವಾಗಿ ಸ್ತುತಿಸೈಯುತ್ತಿದ್ದನು. ಕಲ್ಯಾಣದಿಂದ ಪೆರ್ಮಾಡಿ ರಾಜನು ನಿಯೋಗ ಕಳುಹಿ, ಕರೆತರಿಸಿ, ಪ್ರಧಾನ ಪಟ್ಟಮಂ ಕಟ್ಟಿ, ಕೇಶಿದಣಾಯಕನೆಂದು ಹೆಸರಿಟ್ಟನು. ಹೀಗಿರಲು ಪರವಾದಿಗಳು ಕೃತಕದಿಂದ, ದಣಾಯಕನ ಸಂದಿಮುದ್ರೆಯುಂಗುರವಂ ಅರಸು ತೆಗೆದುಕೊಳ್ಳಲು ಕೇಸಿ ಕೈ ಮುಗಿಯದೆ ಮನೆಗೆ ಹೋದ

೨. **ಷಿಕಾರಿಪುರದ ೧೧೯ ನೆಯ ಮತ್ತು ೧೨೩ನೆಯ ಶಾಸನಗಳು :**

(Epigraphia carnatica Vol VII ಪುಟಗಳು-೧೧೯ ಹಾಗೂ ೧೨೩)

ಈ ಎರಡು ಶಾಸನಗಳಿಂದ ಈತನ ವಿಷಯವಾಗಿ ಈ ಕೆಳಗಿನ ಅಂಶಗಳು ತಿಳಿಯುತ್ತವೆ.

"ಈತನು ಭಾರದ್ವಾಜ ಗೋತ್ರದವನು. ತಂದೆ ಹೊಳಲಮರಸ; ತಾಯಿ ದುರ್ಗಾದೇವಿ. ಈತನು ಬಿಜ್ಜಳರಾಯನ (ಕ್ರಿ. ಶ. ೧೧೫೬-೧೧೬೭) ಕೈ ಕೆಳಗೆ ದಂಡನಾಯಕನಾಗಿ 'ಬನವಸೆ ಪನ್ನಿಛ್ಛಾಸಿರ'ವನ್ನು ಆಳುತ್ತ ಬಲಿಪುರದಲ್ಲಿ ಇದ್ದನು. ಬಿಜ್ಜಳನ ಕಾಲವಾದ ಮೇಲೆ ಅವನ ಮಗ ರಾಯಮುರಾರಿ ಸೋವಿದೇವನ ಕಾಲದಲ್ಲೂ ಇದ್ದನು. ಈತನು ಬಹು ಪರಾಕ್ರಮಶಾಲಿಯಾಗಿದ್ದನು."

ಇವನನ್ನು ಸ್ತುತಿಸುವ ಒಂದು ಶಾಸನದಲ್ಲಿ "ಕೇಶವನಿದೇನುದಾತ್ತನೊ ಧರಿಯೊಳ್"—"ಹೊಂಗಳನೆ ಕೇಶವಂ ಕುಡುತಿರ್ಪಂ"—ಎಂದು ಹೇಳಿದೆ.

**೩. ಶಿವಶರಣರ ಕಥೆಗಳು** : ಸಂ: ಶ್ರೀ. ಫ. ಗು. ಹಳಕಟ್ಟಿ.

ಶಿವಶರಣರ ಕಥೆಗಳಲ್ಲಿ ಬರುವ ಕೇಶಿರಾಜನ ಬಗ್ಗೆ, ಈ ಕೆಳಗಿನ ಸಂಗತಿಗಳು ದೊರೆಯುತ್ತವೆ:

ಕೇಶಿರಾಜನ ಊರು, ಕಲಬುರ್ಗಿಜಿಲ್ಲೆಯ ಕೊಂಡಗುಳಿ. ಕೇಶಿರಾಜನ ಹೆಂಡತಿಯ ಹೆಸರು ಗಂಗಾದೇವಿ; ಗುರು ವಿರೂಪಾಕ್ಷ. ಇಷ್ಟದೇವತೆ ಸೋಮನಾಥ. ಅವನು ಕಂದ, ತ್ರಿಪದಿ, ರಗಳೆ, ವಚನ, ದಂಡಕ ಮತ್ತು ಅಷ್ಟಕಗಳನ್ನು ರಚಿಸಿದ. ೮೮ ಮಂತ್ರಗಳಿಂದ ಷಡಕ್ಷರಿ ಮಂತ್ರದ ಮಹಿಮೆಯನ್ನು ಹೊಗಳಿದ್ದಾನೆ. ಪುರಾತನ ಶಿವಶರಣರಲ್ಲಿ ವಿದ್ವಾಂಸನಾಗಿದ್ದ. ಕೊಂಡಗುಳಿಯಿಂದ ಎಂಟು ಮೈಲು ದೂರವಿರುವ ಮಂಗಳೂರಿಗೆ ಹೋದ. ಅಲ್ಲಿಂದ ಕಲ್ಯಾಣದ ಸಮೀಪವಿರುವ ಶಿವಪುರಕ್ಕೆ ಬಂದ. ಅಲ್ಲಿ ಶಿವಾನುಭವಿ ಎಂದು ಪಸಿದ್ಧನಾದ. "ಪೆರ್ಮಾಡಿ" ಕೇಶಿರಾಜನನ್ನು ಕೇಶಿ ದಣ್ಣಾಯಕನನನ್ನಾಗಿ ಮಾಡಿಕೊಂಡ. ಪರಮತವಾದಿಗಳ ಕುಹಕದಿಂದ ಪೆರ್ಮಾಡಿಯ ರಾಜಧಾನಿಯನ್ನು ಬಿಟ್ಟು ಕೇಶಿರಾಜ ತಿರುಗಿ ಶಿವಪುರಕ್ಕೆ ಬಂದ. ಆ ನಂತರ ಕಲ್ಯಾಣದ ಕೆಲವು ಭಕ್ತರು ಕೇಶಿರಾಜನ ಕಡೆಗೆ ಬಂದರು. ಜನರು ಅವನ ಮನವೊಲಿಸಿ, ಶಿವಪುರದಿಂದ ಕಲ್ಯಾಣದ ತ್ರಿಪುರಾಂತಕ ದೇವಾಲಯದವರೆಗೂ ಮಂಟಪ ಕಟ್ಟಿ, ಮೆರವಣಿಗೆಯಲ್ಲಿ ಸಾಗಿಸಿದರು. ಪೆರ್ಮಾಡಿ ಅದನ್ನು ಕಂಡು, ತನ್ನ ತಪ್ಪನ್ನು ಮನ್ನಿಸಬೇಕೆಂದು ಕೇಶಿರಾಜನ ಕ್ಷಮೆ ಬೇಡಿದ. ಕೇಶಿರಾಜ ಅರಮನೆಗೆ ಹೋಗದೆ, ತಿರುಗಿ ಶಿವಪುರಕ್ಕೆ ಬಂದ.

**೪. ಅಬ್ಬಲೂರು ಶಾಸನ** :

(Epigraphia Indica : Vol V. ಪುಟ ೨೪೫)

ಶಾಸನದ ಕಾಲ ಕ್ರಿ. ಶ. ೧೧೯೫.

ಈ ಅಬ್ಬಲೂರು ಶಾಸನದಲ್ಲಿ ಶರಣ ಏಕಾಂತ ರಾಮಯ್ಯನ ಬಗ್ಗೆ ಕೆಲವು ವಿವರಗಳಿವೆ. ಕೇಸವರಾಜ ಚಮೂಪ ಅಬ್ಬಲೂರು ಶಾಸನವನ್ನು ಬರೆದವನು. ಸರಣನೆಂಬ ಇನ್ನೊಬ್ಬ ಕವಿ ಅದನ್ನು ತಿದ್ದಿ ಬರೆದ.

"ಕೇಶವರಾಜ ಚಮೂಪಂ ಶಾಸನಮಂ ಪೇಳ್ದನಂತದಂ ತಿರ್ದಿ ನಿರಾಯಾಸದೆ ಬರೆದ ನವನೀಶನದಾಸಂ ಶಿವಶರಣ ಕಮಲ ಶರಣಂ ಸರಣಂ"

—ಎಂದಿರುವ ಈ ಶಾಸನದಲ್ಲಿ ಕೇಶವರಾಜ ಚಮೂಪನು ಪುರಾತನ ಭಕ್ತರ ಗೋಷ್ಠಿಯಲ್ಲಿ ಕೊಂಡಗುಳಿ ಕೇಶಿರಾಜನನ್ನು ಸ್ತುತಿಸುತ್ತಾನೆ. ಇದೇ ಶಾಸನದಲ್ಲಿ ಏಕಾಂತ ರಾಮಯ್ಯನ ಬಗ್ಗೆ ಇರುವ ವಿವರಗಳು ಇಂತು :

"ಏಕಾಂತ ರಾಮಯ್ಯನ ಊರು ಕಲಬುರ್ಗಿ ಜಿಲ್ಲೆಯ ಆಳಂದೆ (ಈಗಿನ ಅಲ್ದಿ —ಆಳಂದ್) ಜಾತಿ ಬ್ರಾಹ್ಮಣ ತಂದೆ ಪುರುಷೋತ್ತಮ. ತಾಯಿ ಪದ್ಮಾಂಬಿಕೆ. ಶಿವನನ್ನು ಏಕಾಂತದಲ್ಲಿ ಧ್ಯಾನ ಮಾಡಿದ ಕಾರಣ-ಏಕಾಂತ ರಾಮಯ್ಯನೆಂದು ಹೆಸರು ಬಂತು. ಮುಂದೆ ಅವನು ಪುಲಿಗೆರೆಗೆ ಹೋಗಿ ಸೋಮೇಶ್ವರ ದೇವಾಲಯದಲ್ಲಿ ಇದ್ದ. ಆ ನಂತರ ಅಬ್ಬಲೂರಿಗೆ ಹೋಗಿ ಬ್ರಹ್ಮೇಶ್ವರ ದೇವಾಲಯದಲ್ಲಿ ಇದ್ದು-ಪವಾಡ ಮಾಡಿದ. ಅಲ್ಲಿ ವೀರ ಸೋಮನಾಥನನ್ನು ಪ್ರತಿಷ್ಠಾಪಿಸಿದ. ಬಿಜ್ಜಳ (ಕ್ರಿ. ಶ. ೧೧೫೬-೧೧೬೭) ಅವನಿಗೆ ಜಯ ಪತ್ರ ಬರೆದುಕೊಟ್ಟು, ಗೋಗಾವೆ ಗ್ರಾಮವನ್ನು ವೀರ ಸೋಮೇಶ್ವರನ ಅಂಗಭೋಗಕ್ಕೆ ದತ್ತಿ ಕೊಟ್ಟ."

"ಕ್ರಿ. ಶ. ೧೧೮೦-೮೯ರ ಮಧ್ಯದಲ್ಲಿ ಚಾಲುಕ್ಯ ತ್ರಿಭುವನಮಲ್ಲ ವೀರ ಸೋಮೇಶ್ವರ ದೇವನು ಇವನನ್ನು ಬರಮಾಡಿಕೊಂಡು ಸತ್ಕರಿಸಿ, ಅಬ್ಬಲೂರನ್ನು ವೀರ ಸೋಮೇಶ್ವರನ ಅಂಗಭೋಗಕ್ಕೆ ದತ್ತಿ ಕೊಟ್ಟ."

"ಕದಂಬ ಕಾಮರಸನು (ಕ್ರಿ. ಶ. ೧೧೮೧-೧೨೦೩) ಇವನನ್ನು ಹಾನುಂಗಲ್ಲಿಗೆ ಕರೆಸಿ ವೀರಸೋಮೇಶ್ವರನ ಅಂಗಭೋಗಾದಿಗಳಿಗೆ ಮಳವಳ್ಳಿಯನ್ನು ದತ್ತಿ ಕೊಟ್ಟ."

೫. **ಹರಿಹರನ ಕೇಶಿರಾಜನ ರಗಳೆ** : ಸಂ। ಫ. ಗು. ಹಳಕಟ್ಟಿ.

ಹರಿಹರನು ಕೇಶಿರಾಜನ ಬಗ್ಗೆ ರಗಳೆಯಲ್ಲಿ ಹೀಗೆ ಬರೆದಿದ್ದಾನೆ:

"ಪಂಚಾಕ್ಷರಾನುಬಂಧಂ ಛಂದವನುವಾಗೆ
ಪಂಚಮುಖ ನಾಮದಭಿದಾನ ಬುದ್ಧಿಯದಾಗೆ
ಶಿವವಾಕ್ಯ ಶಬ್ದ ಶುದ್ಧಿ ವ್ಯಾಕರಣಮಾಗೆ
ಶಿವಭಕ್ತಿ ವೃತ್ತಕ್ಕಲಂಕಾರದಂತಾಗೆ
ಪದ್ಯಂಗಳಂ ಶಿವಂಗನುದಿನಂ ಪೇಳುತಂ
ಚೋದ್ಯವೆನೆ ಶಂಕರ ಸ್ತೋತ್ರದೊಳೆ ಬಾಳುತಂ"

## ವಾದಭೂಮಿ :

ಈ ಮೇಲಿನ ಎಲ್ಲ ಸಂಗತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, 'ಪೆರ್ಮಾಡಿ'ಯ ದಂಡನಾಯಕನಾಗಿದ್ದ ಕೇಶಿರಾಜ ಒಬ್ಬನೇ ಅಲ್ಲ—ಎನ್ನುವ ಮಾತಿಗೆ ಮನ್ನಣೆ ಸಿಗುತ್ತದೆ. ಹಾಗಾದರೆ ಇಬ್ಬರು ಅದೇ ಹೆಸರಿನ ದಂಡ ನಾಯಕರಿರಬಹುದೇ ಎನ್ನುವ ಸಂಶಯಕ್ಕೆ ಎಡೆಕೊಡುತ್ತದೆ.

ಈ ಎಲ್ಲ ಸಂಗತಿಗಳಲ್ಲಿ ಸಾಮಾನ್ಯವಾಗಿ ಅವನೊಬ್ಬ ದಂಡಾಧಿಪತಿಯಾಗಿದ್ದ ಎನ್ನುವದು ಒಂದು ಮುಖ್ಯ ಸಂಗತಿ. ಶಿಕಾರಿಪುರದ ಶಾಸನವೊಂದನ್ನು ಹೊರತು ಪಡಿಸಿ ಉಳಿದ ಕಡೆಗಳಲ್ಲಿ ಅವನು ದಂಡಾಧಿಪತಿಯಲ್ಲದೆ ಶರಣ, ಕವಿ, ಮತ್ತು ಪವಾಡಪುರುಷ ಎನ್ನುವದು ನಿಚ್ಚಳವಾಗಿದೆ. ಅವನು ಸಾಮಾನ್ಯ ಪುರುಷನಾಗಿರಲಿಲ್ಲವೆನ್ನುವದೂ ಖಚಿತ.

ಆದರೆ ಮುಖ್ಯವಾಗಿ ಅಬ್ಬಲೂರು ಶಾಸನದಲ್ಲಿ ಕೇಶವರಾಜ ಚಮೂಪನು ಕೊಂಡಗುಳಿ ಕೇಶಿರಾಜನನ್ನು ಸ್ಮರಿಸಿರುವದರಿಂದ ಇವರಿಬ್ಬರೂ ಭಿನ್ನ ಭಿನ್ನ ವ್ಯಕ್ತಿಗಳಿರಲೇಬೇಕು. ಮೆ॥ ಫ್ಲೀಟ ಸಾಹೇಬರು ಕ್ರಿ. ಶ. ೧೧೬೮ ರಿಂದ ೧೧೮೧ರ ವರೆಗೆ ಆಳಿದುದಾಗಿ ಶಾಸನಗಳಿಂದ ತಿಳಿದು ಬಂದಿರುವ ದಂಡನಾಯಕ ಬೋಳಿಕೆಯ ಕೇಶಿರಾಜಯ್ಯನಾಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ (Epigraphia Indica Vol. V ಪುಟಗಳು-೨೩೮.೩೯) ಆದ್ದರಿಂದ ಕೇಶವರಾಜ ಚಮೂಪ, ಬೋಳಿಕೆಯ ಕೇಶಿರಾಜು ಮತ್ತು ಕೊಂಡಗುಳಿ ಕೇಶಿರಾಜ ಎನ್ನುವ ಮೂರು ವ್ಯಕ್ತಿಗಳಿದ್ದರೆಂದು ಅರ್ಥವಾಗುತ್ತದೆ ಮೆ॥ ಫ್ಲೀಟ್ ಸಾಹೇಬರು ಅದಕ್ಕೆ ಕಾರಣವನ್ನು ಕೊಡಲು ಮನಸ್ಸು ಮಾಡಿಲ್ಲವಾದ್ದರಿಂದ ಕೇಶವರಾಜ ಚಮೂಪ ಮತ್ತು ಬೋಳಿಕೆಯ ಕೇಶಿರಾಜಯ್ಯ ಇವರು ಬೇರೆ ಬೇರೆ—ಒಂದೇ ಹೆಸರಿನ ದಂಡನಾಯಕರಾಗಿರಬಹುದಾದರೂ—ಒಬ್ಬನೇ ಎಂದು ಹೇಳಲೂ ಸಾಧ್ಯವಿಲ್ಲ! ಅಂತೂ ಈಗ ಕೇಶವರಾಜ ಚಮೂಪ ಮತ್ತು ಕೊಂಡಗುಳಿ ಕೇಶಿರಾಜ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೆನ್ನುವದನ್ನು ಮಾತ್ರ ಒಪ್ಪಿಕೊಳ್ಳಲೇಬೇಕು. ಅಬ್ಬಲೂರು ಶಾಸನವನ್ನು ಬರೆದ ಕೇಶವರಾಜ ಚಮೂಪನ ಕಾಲ ಕ್ರಿ. ಶ. ೧೧೯೫ ಎನ್ನುವದನ್ನು ಗಮನಿಸಬೇಕು.

ಇನ್ನು ಈ ಶರಣ ಕೊಂಡಗುಳಿ ಕೇಶಿರಾಜ ಯಾರು? ಯಾವ ಕಾಲದಲ್ಲಿ ಇದ್ದ?–ಎನ್ನುವ ವಿಷಯವನ್ನು ಮಾತ್ರ ವಿಚಾರಿಸಬೇಕು.

ಅಬ್ಬಲೂರು ಶಾಸನದಲ್ಲಿ ಕೊಂಡಗುಳಿ ಕೇಶಿರಾಜನ ಕೂಡ ಏಕಾಂತರಾಮಿತಂದೆಯ ಹೆಸರೂ ಬರುತ್ತದೆ. ಏಕಾಂತ ರಾಮಿತಂದೆ ಮೊದಲು ಬ್ರಾಹ್ಮಣನಾಗಿ ನಂತರ ಶರಣನಾಗಿ ವಚನಗಳನ್ನು ಬರೆದ. ಈ ರಾಮಿತಂದೆಯ ಚರಿತ್ರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ–ಆತನು ಬಸವಣ್ಣನವರಿಗಿಂತ ಮೊದಲು ಹುಟ್ಟಿ, ಅವರ ಸಮಕಾಲೀನನಾಗಿ ಇದ್ದು, ಬಸವಣ್ಣನವರು ಲಿಂಗೈಕ್ಯರಾದ ನಂತರವೂ ಬದುಕಿದ್ದ ಎನ್ನುವ ಸಂಗತಿ ಸ್ಪಷ್ಟವಾಗುತ್ತದೆ. ಅಬ್ಬಲೂರು ಶಾಸನ ಇದಕ್ಕೆ ಸಾಕಷ್ಟು ಆಧಾರ ನೀಡುತ್ತದೆ. ಅವರು ಮಹಾಪುರುಷರಾಗಿದ್ದರು, ರಾಜ ಮನ್ನಣೆ ಪಡೆದರು ಎನ್ನುವದೂ ಸರಿಯೆ!

ಅಬ್ಬಲೂರು ಶಾಸನದಲ್ಲಿ ಉಕ್ತವಾದ ಕೊಂಡಗುಳಿ ಕೇಶಿರಾಜ ಏಕಾಂತರಾಮಿತಂದೆಯ ಸಮಕಾಲೀನನೆ?-ಎನ್ನುವ ಸಂಗತಿಯನ್ನು ವಿಚಾರಿಸಬೇಕು.

ಕವಿ ಚರಿತೆಕಾರರು ಕೊಡುವ ಸಂಗತಿ ಹಾಗೂ ಶಿಕಾರಿಪುರದ ಶಾಸನಗಳಿಂದ ಕೇಶಿರಾಜನ ಮತದ ಬಗ್ಗೆ ವಾದ ವಿವಾದ ಮೂಡುತ್ತದೆ. ಶಿಕಾರಿಪುರದ ಶಾಸನದಲ್ಲಿ ಉಕ್ತನಾದ ಕೇಶಿರಾಜ ಭಾರದ್ವಾಜ ಗೋತ್ರದವನು. ತಾಯಿ-ತಂದೆ ಮುಂತಾದ ಸಂಗತಿಗಳು ಶೈವ ಸಂಪ್ರದಾಯವನ್ನು ಸೂಚಿಸುತ್ತವೆ ಮತ್ತು ರಾಯ ಮುರಾರಿ ಸೋಯಿದೇವನ ಕಾಲಕ್ಕೂ ಅವನು ಇದ್ದನೆಂದು ಅವರು ಹೇಳುತ್ತಾರೆ. ಬಿಜ್ಜಳ ರಾಜನ (ಕ್ರಿ. ಶ. ೧೧೫೬-೧೧೬೭) ಕೈ ಕೆಳಗೆ ದಂಡನಾಯಕನಾಗಿ "ಬನವಸೆ ಪನ್ನಿರ್ಛಾಸಿರ"ವನ್ನು ಆಳಿದ ಸೇನಾಧಿಪತಿ, ಅದೇ ಹೆಸರಿನ ಇನ್ನೊಬ್ಬ ವ್ಯಕ್ತಿಯಾಗಿರಬಹುದು. ಅವನೇನು ಶರಣನಾಗಿರಲಿಲ್ಲ; ಕವಿಯೂ ಆಗಿರಲಿಲ್ಲ. ಸಾಮಾನ್ಯ ದಂಡಾಧಿಪತಿಯಾಗಿ ಮಾತ್ರ ಇದ್ದಿರಬಹುದು.

ಇನ್ನು 'ಪೆರ್ಮಾಡಿ' ಎನ್ನುವ ಹೆಸರು ಬಿಜ್ಜಳನ ತಂದೆಗೆ ಇತ್ತು. ಬಿಜ್ಜಳನ ತಂದೆ ತರ್ದೆವಾಡಿ ನಾಡನ್ನು ಆಳುವ ಮಂಡಳೇಶ್ವರನಾಗಿದ್ದ. ಅವನು ಕೆಲವು ಕಾಲ ಮಂಗಳವಾಡದಲ್ಲಿಯೂ ಕೆಲವು ಕಾಲ ಬನವಸೆಯಲ್ಲೂ ರಾಜ್ಯಭಾರ ಮಾಡುತ್ತಿದ್ದ. ಆದ್ದರಿಂದ ಕೇಶಿರಾಜನು ಅವನ ಕಾಲಕ್ಕೆ, ಅವನ ದಂಡಾಧಿಪತಿಯಾಗಿ ಇರಲು ಸಾಧ್ಯವೇ ಇಲ್ಲ.

ಪೆರ್ಮಾಡಿ ಎನ್ನುವ ಹೆಸರು ಕ್ರಿ. ಶ ೧೦೭೬ ರಿಂದ ೧೧೨೬ರವರೆಗೆ ಕಲ್ಯಾಣದಲ್ಲಿ ರಾಜ್ಯವಾಳಿದ ಚಾಲುಕ್ಯರ ೬ನೆಯ ವಿಕ್ರಮಾದಿತ್ಯನಿಗೆ ಇತ್ತು. ಕೊಂಡಗುಳಿ ಕೇಶಿರಾಜ ಈ ಚಾಲುಕ್ಯ ೬ನೆಯ "ತ್ರಿಭುವನ ಮಲ್ಲ ವಿಕ್ರಮಾದಿತ್ಯ ಪೆರ್ಮಾಡಿ ರಾಯ"ನ ಕೈ ಕೆಳಗೆ ಪ್ರಧಾನಮಂತ್ರಿ ಮತ್ತು ದಂಡನಾಯಕನಾಗಿ ಇದ್ದಿರಬಹುದು. ಕೇಶಿರಾಜನ ಚರಿತ್ರೆಯಲ್ಲಿ ತರ್ದೆವಾಡಿಯ ಉಲ್ಲೇಖವಿರದೆ, ಕಲ್ಯಾಣದ ಉಲ್ಲೇಖವಿರುವದೂ ಒಂದು ಪ್ರಬಲವಾದ ಕಾರಣ ಇದಕ್ಕೆ. ಕೇಶಿರಾಜನಂತೆಯೆ, ಬಾಹೂರು ಬೊಮ್ಮಯ್ಯ ಇಲಿಹಾಳ ಬೊಮ್ಮಯ್ಯ, ತೆಲುಗುಜೊಮ್ಮಯ್ಯ ಇವರೂ 'ಪೆರ್ಮಾಡಿ'ಯ ಆಸ್ಥಾನದಲ್ಲಿ ಇದ್ದರು. ಆದರೆ ಬಸವಣ್ಣನವರ ಚರಿತ್ರೆಗಳಲ್ಲಿ ಕೇಶಿರಾಜನ ಉಲ್ಲೇಖವೇ ಇಲ್ಲ. ಇದೊಂದು ಚೋದ್ಯದ ಸಂಗತಿ. ಏನೇ ಆದರೂ ಕೇಶಿರಾಜ ಬಸವಣ್ಣನವರಿಗಿಂತ ಹಿರಿಯನಾಗಿದ್ದ ಎನ್ನುವ ಸಂಗತಿಯನ್ನು ಒಪ್ಪಿಕೊಳ್ಳಬೇಕು.

ಕೊನೆಯದಾಗಿ–ಒಂದನೆಯ ಜಗದೇಕ ಮಲ್ಲನೆಂಬ ಬಿರುದಾಂಕಿತನಾದ ಪಶ್ಚಿಮ ಚಾಳುಕ್ಯರ ಅರಸು ಜಯಸಿಂಹನು ಕಾಲ್ಯಾಣದಲ್ಲಿ ಆಳುತ್ತಿರುವಾಗ ಜೇಡರ (ದೇವರ) ದಾಸಮಯ್ಯನು ಅವನ ರಾಣಿ ಸುಗ್ಗಲೆಗೆ ಗುರುವಾಗಿದ್ದನೆಂದು ಬಸವ ಪುರಾಣದಿಂದ ತಿಳಿದು ಬರುತ್ತದೆ. ಈ ಸುಗ್ಗಲೆ ಐತಿಹಾಸಿಕ ವ್ಯಕ್ತಿಯೆಂದು ಶಾಸನಾಧಾರಗಳಿವೆ. ಈ ಜೇಡರ ದಾಸಿಮಯ್ಯನು ತನ್ನ ವಚನಗಳಲ್ಲಿ ಅನೇಕ ಶರಣರನ್ನು ಸ್ತುತಿಸಿದ್ದಾನೆ. ಕೊಂಡಗುಳಿ ಕೇಶಿರಾಜನ ಹೆಸರೂ ಅವನ ವಚನಗಳಲ್ಲಿ ಬರುತ್ತವೆ. ದಾಸಮಯ್ಯನ ಕಾಲ ಕ್ರಿ. ಶ. ೯೮೦-೧೦೪೦ ಎಂದು ಸಾಮಾನ್ಯವಾಗಿ ಗೊತ್ತಾಗಿದೆ. "ದೇವರ ದಾಸಿ

ಮಾರ್ಯ ಪ್ರಶಸ್ತಿ"ಯಲ್ಲಿ ಈ ಬಗೆಗೂ ಚರ್ಚಿಸಲಾಗಿದೆ. ಹಾಗಾದರೆ ಈ ಕೊಂಡ ಗುಳಿ ಕೇಶಿರಾಜ ದಾಸಮಾರ್ಯನ ಹಿರಿಯ ಅಥವಾ ಕಿರಿಯ ಸಮಕಾಲೀನನಾಗಿರ ಬೇಕು. ಶರಣರಲ್ಲಿ ಹಿರಿಯರು, ಕಿರಿಯರು ಎಂಬ ಭೇದ ಭಾವವಿಲ್ಲ. 'ಎನಗಿಂತ ಕಿರಿಯರಿಲ್ಲ' ಎನ್ನುವ ಮಹಾನುಭಾವ ತತ್ವವೇ ಅಲ್ಲಿದೆ. ದೊಡ್ಡವರಿರಲಿ, ಸಣ್ಣವ ರಿರಲಿ, ಪೂಜನೀಯ ವ್ಯಕ್ತಿಯಾಗಿದ್ದರೆ, ಅವರನ್ನು ಸ್ತುತಿಸುವದು ವೀರಶೈವ ಗುಣ. ಆದ್ದರಿಂದ ಈ ಮಾತನ್ನು ಹೀಗೆ ಎಳೆಯಬಹುದು.

ಕೊಂಡಗುಳಿ ಕೇಶಿರಾಜ ಜೇಡರ ದಾಸಮಾರ್ಯನ ಕಿರಿಯ ಸಮಕಾಲೀನ ನಾಗಿರಬೇಕು. ಕ್ರಿ. ಶ. ೧೦೪೦ರಲ್ಲೂ ಇದ್ದು ಆ ನಂತರವೂ ರಾಜ್ಯವಾಳಿದ "ಚಾಲುಕ್ಯ ವಿಕ್ರಮ ಪೆರ್ಮಾಡಿರಾಯ"ನ ಪ್ರಧಾನ ಮಂತ್ರಿಯಾಗಿ ದಂಡಾಧಿಪತಿ ಯಾಗಿ ಕೆಲಕಾಲ ರಾಜ್ಯಭಾರ ಮಾಡಿರಬಹುದು. ಪರವಾದಿಗಳ ಕೃತಕದಿಂದ ಪೆರ್ಮಾಡಿರಾಯ ಅವನ ನಂದಿ ಮುದ್ರೆಯನ್ನು ಇಸಿದುಕೊಂಡು ಅವನನ್ನು ಕಾರ್ಯ ಭಾರದಿಂದ ಕಡಿಮೆ ಮಾಡಿರಬಹುದು. ಕೇಶಿರಾಜ ಅವನಿಗೆ ವಂದನೆ ಸಲ್ಲಿಸದೆ ಶಿವ ಪುರಕ್ಕೆ ಬಂದು, ಷಡಕ್ಷರಕಂದ, ರಗಳೆ, ತ್ರಿಪದಿ, ವಚನ ಹಾಗೂ ದಂಡಕಗಳನ್ನು ಬರೆದಿರಬೇಕು. ಅವನು ವೀರಶೈವನಿದ್ದು, ಗುರು ವಿರೂಪಾಕ್ಷರಿಂದ ದೀಕ್ಷೆ ಪಡೆದು ಸೋಮನಾಥನನ್ನೇ ಇಷ್ಟದೇವತೆಯನ್ನಾಗಿ ಮಾಡಿಕೊಂಡು ವಚನ ರಚನೆ ಮಾಡಿರ ಬೇಕು. ಜನಪ್ರಿಯ ಕವಿಯಾಗಿ, ಮಹಾ ಶಿವಶರಣನಾಗಿ, ಶಿವಪುರದಲ್ಲಿ ಬಾಳಿದ ಕೊಂಡಗುಳಿ ಕೇಶಿರಾಜ ಕಲಬುರ್ಗಿ ಜಿಲ್ಲೆಯ ಕೊಂಡಗುಳಿಯವನೇ ಆಗಿರಬೇಕು.



# ಪಾಲಿ
## (ವ್ಯುತ್ಪತ್ತಿ ಮತ್ತು ಅರ್ಥ)

–ಪ್ರೊ|| ಬಿ. ಎಸ್. ಕುಲಕರ್ಣಿ, ಎಂ. ಎ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

"ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ" ಪತ್ರಿಕೆಯ ಹಳೆಯ ಸಂಪುಟಗಳನ್ನು ತಿರುವುತ್ತಲಿರುವಾಗ "ಪಾಲಿ" (ಭಾಷೆ)ಯ ನಿಷ್ಪತ್ತಿ ಬಗ್ಗೆ ನಡೆದ ಚರ್ಚೆಯೊಂದು ನನ್ನ ಗಮನಕ್ಕೆ ಬಂದಿತು. (ಸಂಪುಟ ೪೭ ಪುಟ ೭೭೩ ಮತ್ತು ಸಂಪುಟ ೭, ಪುಟ ೩೭೭). ಪ್ರಾಚೀನ ಭಾರತದ ಸಂಸ್ಕೃತಿಯ ಇತಿಹಾಸದ ದೃಷ್ಟಿಯಿಂದ 'ಪಾಲಿ' ಯಂತಹ ಉಪಯುಕ್ತ ಹಾಗೂ ದೊಡ್ಡ ಭಾಷೆಯ ಖಚಿತವಾದ ಅರ್ಥವನ್ನು ತಿಳಿಯುವುದರಲ್ಲಿ ನನಗೂ ಆಸ್ಥೆಯಿತ್ತು. ಕಾರಣ ಮೇಲಿನ ಸಂಪುಟಗಳಲ್ಲಿ ನಡೆದ ಚರ್ಚೆಯನ್ನು ಕುತೂಹಲದಿಂದ ಓದಿದೆನು.

'ಪಾಲಿ' ನಿಷ್ಪತ್ತಿಯ ಬಗ್ಗೆ ಮೊದಲು ಬರೆದ ಡಾಕ್ಟರ 'ವ್ಯಾಲೆಸರ' ಎಂಬವರು 'ಪಾಲಿ'ಯು 'ಪಾಟಲಿ ಪುತ್ರ'ದಿಂದ ನಿಷ್ಪತ್ತಿಯಾಗಿರಬೇಕೆಂದು ಹೇಳುತ್ತಾರೆ. ಅಂದರೆ ಆ ಪಟ್ಟಣದ(ಪಾಟಲಿಪುತ್ರದ) ಭಾಷೆಯೆಂದು ಅದಕ್ಕೆ ಆ ಹೆಸರು ಬಂದಿತು ಎಂಬುದು ಅವರ ಅಭಿಪ್ರಾಯ. ಆದರೆ ಒಂದು ನಗರ ಅಥವಾ ಪಟ್ಟಣದಿಂದ ಒಂದು ಜನಾಂಗದ ಅಥವಾ ಬಂದು ವಿಶಾಲ ಕ್ಷೇತ್ರದ ಭಾಷೆಯು ತನ್ನ ಹೆಸರನ್ನು ಪಡೆಯುತ್ತದೆಂಬುದು ಹೆಚ್ಚು ಅಸಂಭವನೀಯವು. ಯಾವುದೇ ಭಾಷೆಯ ಇತಿಹಾಸದಲ್ಲಿ ಇಂತಹ ಮಾದರಿಯ ಉದಾಹರಣೆ ಸಿಕ್ಕುವುದಿಲ್ಲ. ಆದರೂ ಅವರು ಹಾಗೆ ಹೇಳುವಲ್ಲಿ ಸ್ವಲ್ಪಾದರೂ ಸತ್ಯಾಂಶವಿಲ್ಲದಿಲ್ಲ. ಇದನ್ನು ಇಲ್ಲಿಯೇ ಮುಂದೆ ಕಾಣಬಹುದು.

ಈ ಚರ್ಚೆಯ ಅಂಗವಾಗಿ ಪುಟ್ಟ ಲೇಖನವೊಂದನ್ನು ಬರೆದ ಶ್ರೀ ಎಸ್. ವಿ. ವಿಶ್ವನಾಥ ಎಂಬವರು "ಪಾಲಿ"ಯು "ಪಾಳಿ"ಯಿಂದ ನಿಷ್ಪತ್ತಿಯಾಗಿದೆಯೆಂದು ಬರೆಯುತ್ತಾರೆ. "ಪಾಳಿ" ಎಂದರೆ "ಮುನಿಗಳ ವಾಸಸ್ಥಾನ" ಅಥವಾ "ಮಸೀದೆ"ಎಂದು ಅರ್ಥಕೊಟ್ಟಿದ್ದಾರೆ. ಶ್ರೀ ವಿಶ್ವನಾಥ ಇವರ ಹೇಳಿಕೆಯು ಅಂದರೆ 'ಪಾಳಿ'ಯಿಂದ

'ಪಾಲಿ'ಯು ಬಂದಿತೆಂಬುದು ಸತ್ಯವಿರುವುದರ ಶಕ್ಯತೆ ಇದೆ. ಆದರೆ 'ಪಾಳಿ'ಶಬ್ದಕ್ಕೆ ಅವರು ಹೇಳುವ ಅರ್ಥ ಮಾನ್ಯವಾಗುವಂತಿಲ್ಲ. ಏಕೆಂದರೆ ಭಾಷೆ ಮೈದಾಳುವುದು ಸಾಮಾಜಿಕ ಪರಿಸರದ ವ್ಯವಹಾರದಲ್ಲಿಯೇ ಹೊರತು ಯಾವುದೇ ಒಂದು ಪಟ್ಟಣ ಅಥವಾ ಒಂದು ವಿಶಿಷ್ಟ ಗುಡಿ ಅಥವಾ ಮುನಿಗಳ ವಾಸಸ್ಥಾನದಿಂದ ಅಲ್ಲ. ಆದರೆ ಇವೆಲ್ಲ ಭಾಷೆಗೆ ಪೋಷಕ ಕಾರಣವಾಗಬಲ್ಲುವೇ ಹೊರತು ಅವೇ ಕೇವಲ ಉಗಮ ಸ್ಥಾನಗಳಾಗಲಾರವು.

ಜನರು, ಪಶುಪಾಲನೆ ಮಾಡುತ್ತ ಬೇರೆ ಬೇರೆ ಪ್ರದೇಶಗಳಲ್ಲಿ ತಿರುಗುತ್ತ, ಕಾಲ ಕಳೆಯುವ ಕಾಲವೊಂದಿತ್ತು. ಈ ಕಾಲದಲ್ಲಿ ಬಹುಶಃ ಜನಾಂಗದ ಹೆಸರು ಭಾಷೆಗೆ ಬಂದಿತೆಂದು ಕಾಣುತ್ತದೆ. ಆದರೆ ಮುಂದೆ ಆ ಜನಾಂಗವು ಒಂದೇ ಕಡೆಗೆ ವಾಸಿಸಲು ಆರಂಭಿಸಿದ ಮೇಲೆ ಅವರು ವಾಸಿಸುವ ಪ್ರದೇಶದ ಹೆಸರು ಭಾಷೆಗೆ ಬಂದವು.

ಶ್ರೀ ಎಸ್. ವಿ. ವಿಶ್ವನಾಥರು ತಮಿಳು ಶಬ್ದಕೋಶದಿಂದ "ಪಾಳಿ"ಯ ಅರ್ಥವನ್ನು ಈ ರೀತಿ ಕೊಟ್ಟಿದ್ದಾರೆ. ಪಾಳಿ-ಮುನಿವರವಾಸಮ್ ಅಂದರೆ ಮುನಿಗಳ ವಾಸಸ್ಥಾನ ಅಥವಾ ಮಸೀದೆ. ಈ ಅರ್ಥವು ಸರಿಯಾದುದೇ ಇದೆ. ಆದರೂ 'ಪಾಳಿ'ಯ ಅರ್ಥ ಇದೊಂದೇ ಅಲ್ಲ. 'ಪಾಳಿ' ಎಂದರೆ "ಮುನಿವರವಾಸಮ್" ಎಂಬುದು ಯಾವುದೋ ಸಂದರ್ಭದಲ್ಲಿ ಬರುವ ವಿಶೇಷಾರ್ಥ ಮಾತ್ರ! ಆದರೆ 'ಪಾಳಿ' ಅಥವಾ 'ಪಳ್ಳಿ' ಇದರ ಸಾಮಾನ್ಯ ಅರ್ಥವೆಂದರೆ "ವಾಸಸ್ಥಾನ" ವೆಂದಿದೆ. ಈ 'ಪಾಳಿ' ಅಥವಾ 'ಪಳ್ಳಿ'ಗಳು ಉತ್ತರ ಭಾರತದಲ್ಲಿ ಕ್ರಿಸ್ತಶಕದ ಆರಂಭದಿಂದಲೇ ರೂಢವಾಗಿದ್ದುದನ್ನು ನಾವು ಕಾಣುತ್ತೇವೆ. ಸಂಸ್ಕೃತದಲ್ಲಿ "ಪಲ್ಲಿ" ಎಂದರೆ ಗುಡಿಸಲು, ಮನೆ, ಕಾಡು ಜನಾಂಗಗಳ ಸ್ಥಾನವೆಂದು ಅರ್ಥವಿದೆ. ದ್ರಾವಿಡ ಭಾಷೆಗಳಲ್ಲಿ 'ಪಳ್ಳಿ' ಎಂದು ಮನುಷ್ಯರು ಮಲಗುವ ಸ್ಥಳ, ಸಣ್ಣಕೆರೆ, ಹೆಗ್ಗಣ ಅಥವಾ ಇಲಿಯ ಬಿಲವೆಂದು, ಅರ್ಥವಿದೆ.

"ಪಾಳಿ," "ಪಳ್ಳಿ," "ಪಲ್ಲಿ" ಈ ಶಬ್ದಕ್ಕೆ 'ವಾಸಸ್ಥಾನ'ವೆಂಬ ಅರ್ಥವು ಹೇಗೆ ಬಂದಿತೆಂಬುದನ್ನು ಅರಿಯಲು, ಈ ಶಬ್ದದ ಮೂಲ ಅರ್ಥವೇನೆಂಬುದನ್ನು ನಾವು ತಿಳಿಯುವುದವಶ್ಯ!

ಸಂಸ್ಕೃತದಲ್ಲಿರುವ 'ಪಲ್ಲಿ'-ಈ ಶಬ್ದದ ಮೂಲವು ಆರ್ಯರ ಭಾಷೆಗಳಲ್ಲಿ ಇರುವದಿಲ್ಲವೆಂಬುದು ಆಧುನಿಕ ಭಾಷಾಶಾಸ್ತ್ರಜ್ಞರ ಅಭಿಮತವಾಗಿದೆ ದಕ್ಷಿಣ ಭಾರತದ ತುಂಬ 'ಪಾಳ್ಯ'ಗಳು ಹರಡಿಕೊಂಡಿರುವುದನ್ನು ನಾವು ನೋಡುತ್ತೇವೆ. ಸಂಸ್ಕೃತದ 'ಪಾಲಯ' ಶಬ್ದದಿಂದ ಈ 'ಪಾಳ್ಯ'ವು ಬಂದಿರುತ್ತದೆಂದು ಕೆಲವು ಪಂಡಿತರು ತಿಳಿಯುತ್ತಾರೆ. ಪಾಳೆಯಗಾರರ ಸೈನ್ಯಗಳ ಗುಂಪುಗಳಿದ್ದುವೆಂಬುದು ಹಾಗೂ ಅಲ್ಲಿಂದ ಅವರು ಕೆಲವೊಂದು ಪ್ರದೇಶವನ್ನು ಆಳುತ್ತಿದ್ದರೆಂಬುದೂ ಅರ್ವಾಚೀನ ಇತಿಹಾಸ ಓದಿದವರಿಗೆಲ್ಲ ತಿಳಿದ ಮಾತು. ಪಾಳೆಗಾರ (ಪಾಲಯತಿ-ಇತಿ)ದಿಂದ, ಆ ಕ್ಷೇತ್ರವು

'ಪಾಳ್ಯ' ವಾಯಿತು. ಆದರೆ ಮೊನಿಯರ ವಿಲಿಯಮ್ಸ ಎಂಬ ವಿದ್ವಾಂಸರು 'ಪಾಲಯ' ಈ ಶಬ್ದವು "ಇಂಡೋ-ಯುರೋಪಿಯನ್" ಶಬ್ದವು ಎಂಬುದಕ್ಕೆ ಸಂಶಯ ಪಡುತ್ತಾರೆ. ಆ ಶಬ್ದದ ಬಗ್ಗೆ ಅವರು ಹೀಗೆ ಉದ್ಗಾರ ತೆಗೆದಿದ್ದಾರೆ—"as perhaps invented to account for palayati" (ಅಂದರೆ 'ಪಾಲಯತಿ' ಎಂಬುದರ ಅಸ್ತಿತ್ವವನ್ನು ಸ್ಥಿರಪಡಿಸುವ ಸಲುವಾಗಿ ಈ ಶಬ್ದವು, ಬಹುಶಃ ಬುದ್ಧಿಪೂರ್ವಕವಾಗಿ ಸಿದ್ಧಪಡಿಸಲ್ಪಟ್ಟಂತಿದೆ). ಇದರಿಂದ 'ಪಾಳ್ಯ'ವು 'ಪಾಳಿ'ಯ ಸಂಸ್ಕೃತ ರೂಪವೆಂದು ಮೇಲೆಯೇ ಕಾಣುತ್ತದೆ.

"ಪಡು" ಎನ್ನುವ ಮೂಲ ರೂಪ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಇದೆ.

"ಪಡು"—to come into existance: to appear; to recline, to lean over; to suffer: to put up with: to be buried; to spread at as bedding: to lie horizontally to lie down: to sleep (as birds) etc; (Tamil Lexicon–ತಮಿಳ ಲೆಕ್ಸಿಕಾನ್)

"ಪಡು"—(I) to lie down; to repose: to go down:
(ii) to experience: to feel: to suffer:-(ಕಿಟೆಲ್ ಕನ್ನಡ ಶಬ್ದಕೋಶ). ದ್ರಾವಿಡ ಭಾಷೆಗಳ ವೈಲಕ್ಷಣ್ಯವೇನೆಂದರೆ-ಒಂದೇ ಶಬ್ದವು ಕ್ರಿಯಾ ಹಾಗೂ ನಾಮ ಎರಡರ ಅರ್ಥವನ್ನೂ ಕೊಡುತ್ತದೆ.

"ಪಡು"-(ನಾಮ) a place (hollow or hole) of refuge (for world animals) between stones or rocks (ಕಿಟೆಲ್)

"ಪಟ್ಟಿ"-"ಪಡು"-cowstall: sheep fold: cattle Pond: hamlet; village: place(small village)—(ತಮಿಳು ಲೆಕ್ಸಿಕಾನ್).

"ಪಟ್ಟಿ"–a place of living down, ie; pen or fold; an abode; a hamlet; ಉದಾಹರಣೆಗಾಗಿ-"ತುರುಕಾರಪಟ್ಟಿ"-(ಕಿಟೆಲ್-ಕನ್ನಡ ಶಬ್ದಕೋಶ).

ಪಟ್ಟಿ–ಪಡು-a hamlet: a small town: (ತಮಿಳ ಲೆಕ್ಸಿಕಾನ್).

ಆರ್ಯ-ದ್ರಾವಿಡರ ಸಂಪರ್ಕದಿಂದಾಗಿ, ಎರಡೂ ಜನಾಂಗಗಳ ಭಾಷೆಗಳಲ್ಲಿ ಶಬ್ದಗಳ ಉಚ್ಚಾರಣೆಯಲ್ಲಿ ಬದಲಾವಣೆ ಕಂಡುಬಂದವು.

ಉದಾ:-ಮಾರ್ಗ > ಮಗ್ಗ > ಮಾಗ; ವ್ಯಾಘ್ರ > ವಗ್ಘ > ವಾಘ;....ಇದರಂತೆ "ಪಟ್ಟಿ"ಯು "ಪಾಟಿ" ಅಥವಾ "ಪಾಡಿ" ಎಂದಾಯ್ತು.

"ಪಾಡಿ"—A hamlet: quarter: pastoral village: town or city (ತಮಿಳು).

"ಪಾಡಿ"–a hamlet; a settlement (ಕನ್ನಡ-ಕಿಟೆಲ್).

ಈ ಅರ್ಥವನ್ನು ಕೊಡುವ ಇದೇ ಶಬ್ದವು ಕೇವಲ ಮಹಾರಾಷ್ಟ್ರದಲ್ಲಿಯಲ್ಲ, ಇಡೀ ಭಾರತದಲ್ಲೆಲ್ಲ ರೂಢಿಯಲ್ಲಿದೆ. ಉತ್ತರ ಭಾರತದ ಪ್ರಾಚೀನ ಶಾಸನಗಳಲ್ಲಿ 'ಪಾಡಿ'ಗಳ ಉಲ್ಲೇಖವಿದೆ. ಮಾತನಾಡುವ ಭಾಷೆಯಲ್ಲಿ 'ಪಾಡಿ'ಯು 'ಪಾವಿ' ಆಗುತ್ತದೆ. ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ಹಳ್ಳಿ ಅಥವಾ ಊರು ಅಥವಾ ವಾಸಸ್ಥಾನ (village or settlements) ಎಂಬ ಅರ್ಥ ಕೊಡುವ ಅನೇಕ 'ಪಾಳಿ'ಗಳಿವೆ, ಈ ದೃಷ್ಟಿಯಿಂದ ಗುಜರಾಥದಲ್ಲಿರುವ "ಪಾಳಿ-ಠಾಣಾ" ಎಂಬ ಊರಿನ ಹೆಸರು ಗಮನಾರ್ಹವಾಗಿದೆ. 'ಪಾಳಿ-ಠಾಣಾ'–ಇದು ದ್ವಿರುಕ್ತಿ. ಇಲ್ಲಿ ಒಂದೇ ಅರ್ಥವನ್ನು ಕೊಡುವ ಎರಡು ಶಬ್ದಗಳನ್ನು ಸೇರಿಸುವ ಅಗತ್ಯವೇನಿತ್ತು ? ದ್ವಿರುಕ್ತಿಗಳಲ್ಲಿ ಪ್ರಾರಂಭದ ಶಬ್ದವು ತನ್ನ ಅರ್ಥವನ್ನು ಕಳೆದುಕೊಂಡಾಗ, ಅದೇ ಅರ್ಥವನ್ನು ಕೊಡುವ-ರೂಢಿಯಲ್ಲಿದ್ದ ಶಬ್ದವನ್ನು ಉಪಯೋಗಿಸುವುದು ಅಗತ್ಯವಾಗುತ್ತದೆ; ಅನಿವಾರ್ಯವಾಗುತ್ತದೆ.

"ಪಲ್ಲಿ," "ಪಾಡಿ," "ಪಳ್ಳಿ" ಇವು ಊರ ಹೆಸರುಗಳು ಅಂತ್ಯಕ್ಕೆ ಬರುತ್ತವೆ; ಸ್ವತಂತ್ರವಾಗಿಯೂ ಸಹ ಸಿಕ್ಕುತ್ತವೆ.

'ಪಡು' ಶಬ್ದದ, ವಿವಿಧತೆಯಿಂದ ಹಾಗೂ ನಾವೀನ್ಯತೆಯಿಂದ ಕೂಡಿದ, ಅರ್ಥ ಬಹು ಬೆಳಕನ್ನು ಬೀರುವಂತಹವಿವೆ. ಆ ಶಬ್ದವು ಜನರ ಜೀವನ ವಿಕಾಸ ಕ್ರಮದ ಮೇಲೆಯೇ ಬೆಳಕನ್ನು ಚೆಲ್ಲುತ್ತದೆ. 'ಪಡು' (ನಾಮ)–a place of refuge between stones or rocks (ಕಲ್ಲು ಬಂಡೆಗಳ ನಡುವಿನ ಆಶ್ರಯಸ್ಥಾನ)- ಎಂಬುದು, ಅರ್ಥವನ್ನೇ ಅಕ್ಷರಶಃ ನೋಡಿದಾಗ, ಬಹುಶಃ ಮಾನವನು ಬೇಟೆಯಾಡುತ್ತ, ಕಲ್ಲುಬಂಡೆಗಳ ಸಂದುಗಳಲ್ಲಿ ಅಥವಾ 'ಹೊದರು' ಅಥವಾ 'ತಗ್ಗು'ಗಳಲ್ಲಿ ವಾಸಿಸುತ್ತಿದ್ದ ಅವಸ್ಥೆಯನ್ನು ಸೂಚಿಸುವಂತಿದೆ.

'ಪಡು' ಅಂದರೆ ಕಲ್ಲು ಪಡೆಗಳ ನಡುವಿನ ಪೊಳ್ಳು ಪ್ರದೇಶ. ಇದೇ ಅರ್ಥವನ್ನು ಕೊಡುವ ಇನ್ನೊಂದು ಶಬ್ದವಾಗಿದೆ-'ಗುಹಾ' ಅರ್ಥಾತ್ 'ಪಡು' ಅಥವಾ 'ಪಾಳಿ.' ಸಾಮಾನ್ಯವಾಗಿ ಸನ್ಯಾಸಿಗಳು ಅಥವಾ ಮುನಿಗಳು ಈ 'ಗುಹೆ' ಗಳಲ್ಲಿಯೇ ಅಂದರೆ 'ಪಡು' ಅಥವಾ 'ಪಾಳಿ'ಗಳಲ್ಲಿಯೇ ವಾಸಿಸುತ್ತಿದ್ದರು. ಶ್ರೀ ವಿಶ್ವನಾಥನ್ ಅವರ ವಿಚಾರ ಸರಣಿಯಂತೆ 'ಪಾಳಿ'ಯು 'ಮುನಿವರವಾಸಮ್' ಅಲ್ಲ. 'ಪಾಳಿಗಳ ಸಂಗಡ ಮುನಿಗಳ ಸಂಪರ್ಕ ಬಂದ ಮೇಲೆ ಈ ಅರ್ಥ ಬಂದಿತು. ಆದ್ದರಿಂದ ಮುನಿಗಳಿಗಿಂತ 'ಪಾಳಿ'ಯು ಹೆಚ್ಚು ಪ್ರಾಚೀನವೆಂಬುದು ಸ್ವತಸ್ಸಿದ್ಧವಾದಂತಾಯಿತು.

ದ್ರಾವಿಡ ಸ್ಥಲನಾಮಗಳು ಕೇವಲ ಬಂಗಾಲದಲ್ಲಿಯಷ್ಟೇಯಲ್ಲ, ಇಡೀ ಉತ್ತರ ಭಾರತದ ತುಂಬೆಲ್ಲ ಸಿಕ್ಕುತ್ತವೆಂಬುದು ಸಂಶಯಾತೀತವಾಗಿ ಸಿದ್ಧವಾಗಿದೆ. ಕಾರಣ ಬಹು ಪ್ರಾಚೀನ ಕಾಲದಿಂದಲೇ ದ್ರಾವಿಡ ಉತ್ಪತ್ತಿಯ 'ಪಾಳಿ'ಯು ಉತ್ತರ ಭಾರತದಲ್ಲಿ ಇದ್ದುದಕ್ಕೆ ಯಾರೂ ಆಶ್ಚರಿಸಬೇಕಿಲ್ಲ.

'ಪಟ್ಟಿ' ಇದು 'ಪಡು'ದಿಂದ ಉತ್ಪತ್ತಿಯಾದ ಕ್ರಿಯಾನಾಮ.

'ಪಟ್ಟಿ' ಅಂದರೆ ಮನುಷ್ಯರ ವಾಸಸ್ಥಳ (a place of human habitation), ಗುಡಿಸಲು (a hut); ದನ ಅಥವಾ ಕುರಿಗಳ ದಡ್ಡಿ (a place of cattle or sheep) ಎಂದೂ ಅರ್ಥವಾಗುತ್ತದೆ. ಇದು ನಿಶ್ಚಯವಾಗಿಯೂ, ಜನರು ಬೇಟೆಯಾಡುತ್ತ ತಿರುಗುತ್ತಿದ್ದ (hunting period) ಕಾಲದ ಮುಂದಿನ ಹಂತ ಅಥವಾ ಹೆಜ್ಜೆ (Stage)!

'ಪಳ್ಳಿ' ಅಥವಾ 'ಪಾಳಿ' ಇದು ಸಾಮಾನ್ಯವಾಗಿ ಹಳ್ಳಿಗಳಿಗೆ ಹೆಸರು. ಪ್ರಾಚೀನ ಮರಾಠಿಯಲ್ಲಿ 'ಹಾಳಿ-ಪಾಳಿ' ಎಂದರೆ 'ಹಳ್ಳಿಗಳು' ಎಂಬ ಒಂದು ನುಡಿ (phrase) ಇದೆ. ಮಹಾರಾಷ್ಟ್ರದ ಮಹಾನುಭಾವ ಪಂಥದ ಸಂಸ್ಥಾಪಕನಾದ ಚಕ್ರಧರನು, ತನ್ನ ಕೊನೆಯ ಸಂದೇಶದಲ್ಲಿ ಸಾಮಾನ್ಯ ಮನುಷ್ಯನ ಜೀವನವನ್ನು ಉದ್ಧಾರ ಮಾಡಲು (ಜೀವೋದ್ಧಾರಣಾರ್ಥ) ಪುರ-(ಪಟ್ಟಣ ನಗರೀ—ಪಟಣೀ)ಗಳಲ್ಲಿ ವಾಸಿಸದೆ ಹಳ್ಳಿ-ಪಳ್ಳಿಗಳಲ್ಲಿ ವಾಸಿಸಬೇಕೆಂದು ತನ್ನ ಅನುಯಾಯಿಗಳಿಗೆ ಆಜ್ಞೆ ಮಾಡಿದನು.

'ಪಾಳಿ'ಯ ಸಂಸ್ಕೃತೀಕರಣವಾದ (sanskritised form) ರೂಪ 'ಪಾಲಿ' ಆದ್ದರಿಂದ, 'ಪಾಲಿ' ಯೆಂದರೆ 'ಪಾಳಿ'ಯ ಭಾಷೆ ಅರ್ಥಾತ್ ಹಳ್ಳಿಗಳ-ಹಳ್ಳಿಗರ-ಸಾಮಾನ್ಯರ ಭಾಷೆ, ಪಂಡಿತರ ಭಾಷೆಯಲ್ಲವೆಂಬುದು ನನ್ನ ಅಭಿಪ್ರಾಯವಷ್ಟೆ!

ಉತ್ತರ ಭಾರತ 'ನಾಥ' ಪಂಥದವರ ಸಂಪ್ರದಾಯವು, ಒಂದಿಲ್ಲೊಂದು ರೀತಿ 'ಚಕ್ರಧರ' ಹಾಗೂ ಸಂತ 'ಜ್ಞಾನೇಶ್ವರ'ರನ್ನು ಉದ್ದೀಪನಗೊಳಿಸಿದೆ. ನಾಥ ಸಂಪ್ರದಾಯದವರ ಸುಳಿವು, ಸಂತರದ ಬೌದ್ಧಧರ್ಮದಲ್ಲಿ ಸಿಕ್ಕುತ್ತವೆ. ಸಾಮಾನ್ಯ ಮನುಷ್ಯನನ್ನು ಉದ್ಧರಿಸಬೇಕೆಂಬ ಅನುಕಂಪೆಯಿಂದೊಡಗೂಡಿದ ಉತ್ಸಾಹವನ್ನು ಬಹುಶಃ ಬೌದ್ಧ ಧರ್ಮದಿಂದ ಪಡೆದಂತಿದೆ-ಚಕ್ರಧರ ಹಾಗೂ ಸಂತಜ್ಞಾನೇಶ್ವರರು! ಸಾಮಾನ್ಯ ಜನರಿಗೆ ತಮ್ಮ ತತ್ತ್ವಗಳನ್ನು ತಿಳಿಸಲು ಮರಾಠಿ (ಭಾಷೆ)ಯನ್ನು ಬಳಸಲು ಆರಂಭ ಮಾಡಿದವರೆಂದರೆ-ಮಹಾರಾಷ್ಟ್ರದ ಈ ಇಬ್ಬರು ಮಹಾತ್ಮರು!!

ಸಂಸ್ಕೃತವು ಮೇಲ್ಪಟ್ಟದವರ ಅರ್ಥಾತ್-ಪಂಡಿತರ ಭಾಷೆಯಾಗಿತ್ತು. ಸಾಮಾನ್ಯ ಮನುಷ್ಯನ ಉದ್ಧಾರವನ್ನೇ ತನ್ನ ಉದ್ದೇಶವನ್ನಾಗಿಟ್ಟುಕೊಂಡ ಗೌತಮ ಬುದ್ಧನು ತನ್ನ ತತ್ತ್ವಗಳನ್ನು ಉಪದೇಶಿಸಲು, ಸಾಮಾನ್ಯರ ಭಾಷೆಯನ್ನೇ ಅಂದರೆ 'ಪಾಳಿ'ಗಳ ಭಾಷೆ ('ಪಾಳಿ'ಗಳಲ್ಲಿರುವವರ ಭಾಷೆ)ಯನ್ನೇ ಆರಿಸಿದ್ದುದು ಸ್ವಾಭಾವಿಕವೇ ಆಗಿದೆ; ಸಮಂಜಸವೂ ಆಗಿದೆ. ಕಾರಣ, ಬೌದ್ಧ ಧರ್ಮದ ತತ್ತ್ವ ಸಾಹಿತ್ಯಗಳೆಲ್ಲ 'ಪಾಳಿ'-'ಪಾಲಿ' ಭಾಷೆಯಲ್ಲಿ (ಹಳ್ಳಿಗರ ಭಾಷೆಯಲ್ಲಿ) ಸಿಕ್ಕುತ್ತಲಿವೆ, ಆದ್ದರಿಂದ 'ಪಾಳಿ' ಎಂದರೆ 'ಹಳ್ಳಿ' ಎಂದು ಸಾಮಾನ್ಯ ಅರ್ಥ.

## ಅಡಿ ಟಿಪ್ಪಣಿಗಳು

೧. 'ಪಟ್ಟ,' 'ಪಾಡಿ,' 'ಪಾಳಿ'—ಇದರ ಹೆಚ್ಚಿನ ಅಭ್ಯಾಸಕ್ಕಾಗಿ ಶ್ರೀ ಶಂ.ಬಾ. ಜೋಶಿ ಅವರ ಕೆಳಗೆ ಕಾಣಿಸಿದ ಲೇಖನಗಳನ್ನು ನೋಡಬಹುದು.

(i) 'ಪಟ್ಟ,' 'ಪಾಡಿ' 'ಪಾಳಿ'—ಭಂಡಾರಕರ ಓರಿಯಂಟಲ್ ರಿಸರ್ಚ ಇನ್‌ಸ್ಟಿಟ್ಯೂಟ್, ಪುಣೆ (ಸಂ. ೩೩, ಪುಟ ೪೧-೫೬).

(ii) 'ಪ್ಲೇಸ್‌ನೇಮ್ಸ ಆಫ್ ಮಹಾರಾಷ್ಟ್ರ'-ಮರಾಠಿ ಸಾಹಿತ್ಯಪರಿಷತ್ಪತ್ರಿಕೆ-ಪುಣೆ ೧೯೫೬ ಹಾಗೂ 'ನವಭಾರತ' ಮುಂಬಯಿ ೧೯೫೪.

೨. ಪುಣೆ (ಮಹಾರಾಷ್ಟ್ರ)ಯ ಹತ್ತಿರ ಇರುವ 'ಫಲ್ಟಣ' ಈ ಊರಿನ ಪ್ರಾಚೀನ ಹೆಸರು 'ಪಳಯತ್ಥಾಣಾ' ಎಂದಿತ್ತು. ನನ್ನ ಅಭಿಪ್ರಾಯದಲ್ಲಿ ಇದು ಮೇಲೆ ಹೇಳಿದಂತೆ 'ಪಾಳೆ-ಠಾಣಾ' ೧೩ನೆಯ ಶತಮಾನದ ಮಹಾನುಭಾವ ಸಾಹಿತ್ಯದಲ್ಲಿ ಹೆಸರು 'ಫಲೆ-ಠಾಣಾ' ಎಂದು ಉಕ್ತವಾಗಿದೆ. ಈ ತರಹದ ಬದಲಾವಣೆಗೆ (ಅಕ್ಷರಗಳ ವ್ಯತ್ಯಾಸಕ್ಕೆ) ಮರಾಠಿಯ ವಿಶಿಷ್ಟ ಉಚ್ಚಾರಣಾ ಕ್ರಮವೇ ಕಾರಣ. 'ಪಾಳಿ'ಯ ಪ್ರಾಚೀನ ಅರ್ಥವನ್ನು ವಿವರಿಸಲು ಇರುವ ದ್ವಿರುಕ್ತಿ ಶಬ್ದವಾದ ಠಾಣಾ ಶಬ್ದ ಇಲ್ಲದೆಯೆ ಮಹಾರಾಷ್ಟ್ರದಲ್ಲಿ ಅನೇಕ 'ಪಾಳಿ'ಗಳಿವೆ.

ಕೆಲವರು ಇದನ್ನು 'ಪಳಯ ತ್ಥಾಣಾ'ಅಂದರೆ 'ಹಳೆಯ ವಸತಿಸ್ಥಾನ'ಎಂದೂ ಅರ್ಥಮಾಡುತ್ತಾರೆ. ಆದರೆ ಕಿ. ಶ. ೧೨ನೆಯ ಶತಮಾನದ ಮೊದಲು 'ಹಳೆಯದು ಪೂರ್ವದ್ದು'ಎಂದು ಅರ್ಥಕೊಡುವಂತೆ-ವಿಶೇಷಣವಾಗಿ 'ಪಳೆಯ'ಉಪಯೋಗವಾದ ಯಾವ ಊರಿನ ಹೆಸರೂ ನಮಗೆ ಇಲ್ಲಿಯವರೆಗೆ ದೊರೆತಿಲ್ಲ. ನಮ್ಮ ಈ ವಿಚಾರಕ್ಕೆ ವಿರೋಧವಾಗಿ 'ಹಳೆಯಬೀಡು' ಒಂದು ಒಳ್ಳೆಯ ಉದಾಹರಣೆಯಾಗಿಲ್ಲವೇ ? ಎಂದು ಯಾರಾದರೂ ಹೇಳಬಹುದು. ಆದರೆ ಪ್ರಾಚೀನ ಕಾಲದಲ್ಲಿ ಯಾವುದಾದರೂ ಹಳ್ಳಿ, ಅಥವಾ ಪಟ್ಟಣ ಪ್ರಾಚೀನ ಕಾಲದ್ದೆಂದು ತೋರಿಸಲು 'ಪಳೆಯ'ದ ಬದಲು 'ಮುನ್ನ' ಶಬ್ದವು ಉಪಯೋಗಿಸಲ್ಪಡುತ್ತಿತ್ತು. ಉದಾ:-ಮುನ್ನವಳ್ಳಿ. 'ಮುನ್ನ'ದಂತೆ, ಕೆಲವು ಸಲ, 'ಮುದು'-(ಹಳೆಯ)-ಶಬ್ದವು ಉಪಯೋಗವಾಗುತ್ತಿತ್ತು; ಆದರೆ 'ಪರಿಯ'ಅಲ್ಲ. ಉದಾ:-"ಮುದುವೂರಿಲ್" ಆದ್ದರಿಂದ 'ಪಳಯತ್ಥಾಣಾ'ದಲ್ಲಿಯ 'ಪಳೆಯ' ಇದು 'ಪಾಳಿ'ಯ ಅಂದರೆ 'ಹಳ್ಳಿ' ಎಂದು ಅರ್ಥಕೊಡುವ ಶಬ್ದದ ಇನ್ನೊಂದು ರೂಪಾಂತರವೆಂದು ಮೇಲೆಯೇ ಸಿದ್ಧವಾಗುತ್ತದೆ. ತಮಿಳು ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಆರಂಭದಲ್ಲಿ, 'ಪರಿಯ' (ಪರೆ) ಈ ಶಬ್ದವು ಹಣ್ಣಾದದ್ದು, ಕೊಳೆತದ್ದು ಎಂದು ಅರ್ಥ ತೋರಿಸುತ್ತದೆ. ಕಾರಣ ಈ ಶಬ್ದದಲ್ಲಿಯ 'ಕಾಲ'ದ ಕಲ್ಪನೆಯ ಸ್ಥಾನ ಎರಡನೆಯದ್ದಾಗಿದೆ. ಆದರೆ 'ಪ್ರಾಚೀನ ಕಾಲದ್ದು' ಎಂಬ ಅರ್ಥ 'ಮುನ್ನ'ದಲ್ಲಿ ಸುಸ್ಪಷ್ಟವಿದೆ

೩. ಉಚ್ಚಾರ ಶಾಸ್ತ್ರ (phonetics)ದ ತೀಕ್ಷ್ಣವಾದ ಒರೆಗಲ್ಲಿಗೆ ಹಚ್ಚಿ ಮಾತನಾಡುವುದಾದರೆ ಪಾಡಿ, ಪಾರೆ, ಪಾಳಿ, ಪಾಲಿ ಹೀಗೆ ನೇರವಾಗಿ ವ್ಯುತ್ಪತ್ತಿಸಿದ್ಧವಿರುವುದರಿಂದ-ಸಿದ್ಧವಾಗುವುದರಿಂದ ಇವುಗಳ ನಡುವೆ ‘ಪಟ್ಟಿ’ ಮತ್ತು ‘ಪಲ್ಲಿ’ ಈ ಶಬ್ದಗಳನ್ನು ತರುವುದರ, ತಂದು ತೊಡಕನ್ನು ಹೆಚ್ಚಿಸುವ ಅವಶ್ಯಕತೆಯೂ ಸಹ ಇಲ್ಲ. ‘ಪಡು,’ ‘ಪಾಡಿ’-ಎಷ್ಟು ದ್ರಾವಿಡ ಭಾಷೆಗಳಲ್ಲಿ ಬರುತ್ತದೆಂಬುದಕ್ಕೆ “A Drawidian Etymological Dictionary-by, T. Burrow ಹಾಗೂ M. B. Emeneon” ನೋಡಬಹುದು ‘ಪಾಲಿ’ಯನ್ನು ‘ಪಾಳಿ’. ಎಂದೂ ಬರೆದಿರುವುದನ್ನು ‘ಪಾಲಿ’ ಭಾಷೆಯ ಶಬ್ದಕೋಶದಲ್ಲಿಯೇ ಕಾಣಬಹುದು. pali-English Dictionery ನೋಡಿ.

# ಶ್ರೀ ಜ.ಚ.ನಿ. ಅವರ ಸಾಹಿತ್ಯ ಸಂಸೃಷ್ಟಿ

| ಗ್ರಂಥದ ಹೆಸರು | ಪ್ರಕಾಶನ | ವರ್ಷ | ಆಕಾರ | | ಪುಟ | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|---|
| 1 ಅಕ್ಕನ ಬಾಳು | ಶ್ರೀ ಜ. ಚ. ನಿ. | | ಕ್ರೌನ್ | 8/1 | | 1–50 | ಸಮೀಕ್ಷಾತ್ಮಕ | 3000 | |
| 2 ಅಕ್ಕನ ವಚನಗಳು | ಪುಸ್ತಕ ಭಂಡಾರ | | ,, | 8/1 | 80 | 0–75 | ಸಂಪಾದನ | 1000 | |
| 3 ಅಕ್ಕನ ಲಾವಣಿ | ,, ,, | 1938-62 | ,, | 8/1 | 8 | 0–06 | ಲಾವಣಿ | 15000 (12 ಆವೃತ್ತಿಗಳು) | ಭಕ್ತರಿಂದ |
| 4 ಅಣ್ಣನ ಬದುಕು | ,, | 1950 | ,, | 8/1 | 250 | 2–50 | ಸಮೀಕ್ಷಾತ್ಮಕ | 2000 | ಶ್ರೀಮಂತ ಸಿದ್ದಪ್ಪನವರು ಪಂಪಣ್ಣ ಶೆಟ್ಟರು ಕೊಪ್ಪಳ |
| 5 ಅಭಯವಾಣಿ-೧ | ಭ್ರಮರಾಂಭ ಬಳಗ | 1962 | ಡೆಮ್ಮಿ | 16/1 | 188 | 1–00 | ವಚನಸಾಹಿತ್ಯ | 1000 | ಭ್ರಮರಾಂಬ ಬಳಗ ಅಕ್ಕಿಪೇಟೆ, ಬೆಂಗಳೂರು |
| 6 ಅಭಯವಾಣಿ-೨ | ಶ್ರೀ ಜ. ಚ. ನಿ. ಪುಸ್ತಕ ಭಂಡಾರ | 1966 | ,, | 16/1 | 200 | 1–50 | ,, | 1000 | ಶ್ರೀ ಅಪ್ಪಯ್ಯಣ್ಣನವರು ವಿಜಯಪುರ, ಬೆಂಗಳೂರು ಜಿಲ್ಲೆ |
| 7 ಅಲ್ಲಯ್ಯನ ಬೆಳಕು | ,, | 1952 | ಕ್ರೌನ್ | 8/1 | 152 | 1–50 | ಸಮೀಕ್ಷಾತ್ಮಕ | 1000 | ಶ್ರೀ ಬಸಪ್ಪಾಜಿಯವರು, ಸಿವಿಲ್ ಸಪ್ಲೈಸ್ ಎನ್‌ಫೋರ್ಸ್‌ಮೆಂಟ್ ಆಫೀಸರ್, ಬೆಂಗಳೂರು |
| 8 ಅಷ್ಟಾವರಣ | [1] ಶಿವಾದ್ವೈತ ತತ್ತ್ವಪ್ರಚಾರ ಸಮಿತಿ ಗಿರಿಯಾಪುರ | 1954 | ,, | 16/1 | 132 | 0–50 | ಸಿದ್ಧಾಂತ | 1000 | [1] — |
| | [2] ಶ್ರೀ ಜ. ಚ. ನಿ. | 1962 | | | | | | 1000 | [2] ಶ್ರೀಮಂತ ಯಜಮಾನ್ ದೊಡ್ಡಪ್ಪನವರು, ನಾಗರಾಳ, ಹುನಗುಂದ |
| 9 ಆಯ್ದಕ್ಕಿ ಮಾರಯ್ಯ | ಪುಸ್ತಕ ಭಂಡಾರ | 1959 | ,, | 8/1 | 40 | 0–50 | ನಾಟಕ | 1000 | — |

| | ಗ್ರಂಥದ ಹೆಸರು | ಪ್ರಕಾಶನ – | ವರ್ಷ | ಆಕಾರ– | ಪುಟ | | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|---|---|
| 21 | ಗುರು ಗೀತಾಂಜಲಿ | ಶ್ರೀ ಜ.ಚ.ನಿ. ಪುಸ್ತಕ ಭಂಡಾರ | 1965 | ಕ್ರೌನ್ | 8/1 | 126 | 2–00 | ಕವನ | 1000 | ಭ್ರಮರಾಂಬಾ ಬಳಗ ಮಲ್ಲೇಶ್ವರಂ, ಬೆಂಗಳೂರು |
| 22 | ಗುರುವಿನ ಗೆಲವು | ,, | 1946 | ,, | 8/1 | 30 | 0–50 | ನಾಟಕ | 2000 | ಹಿಂದೂಪುರದ ವೀರಶೈವಮಂಡಳಿ |
| 23 | ಚಿತ್ಕಳಾಮೂರ್ತಿ ಚಂದ್ರಗುಂಡ ಶಿವಾಚಾರ್ಯರು | ,, | 1964 | ,, | 8/1 | 124 | 1–50 | ಚಾರಿತ್ರಿಕ | 1000 | ಗುರುಸೇವಾಧುರೀಣ ಶ್ರೀ ಬಿ. ಎಸ್. ಶಂಕರಪ್ಪಶೆಟ್ಟರ ಬೆಂಗಳೂರು |
| 24 | ಚಂದ್ರಾವತಿ | ,, | 1955 | ,, | 8/1 | 51 | 0–50 | ಖಂಡಕಾವ್ಯ | 1000 | ಸಂಸ್ಥಾನದಿಂದ |
| 25 | ಜೀವನ ಸಿದ್ಧಾಂತ [ಭಕ್ತ ಸಂಪುಟ] | ,, | 1967 | ,, | 8/1 | 1000 | 10–50 | ಸಿದ್ಧಾಂತ | 1500 | ಭ್ರಮರಾಂಬಾಬಳಗ, ಅಕ್ಕಿಪೇಟೆ ಬೆಂಗಳೂರು |
| 26 | ದೇವದೃಷ್ಟಿ | ,, | 1964 | ,, | 8/1 | 195 | 2–50 | ಪ್ರಬಂಧ | 1000 | ಶ್ರೀ ಸಿ. ಎಸ್. ಶಂಕರಪ್ಪನವರು ಬೆಂಗಳೂರು |
| 27 | ದೇವರದಾಸಿಮಾರ್ಯ ಪ್ರಶಸ್ತಿ | ,, | 1953 | ಡೆಮ್ಮಿ | 8/1 | 412 | 5–00 | ಸಂಪಾದನ | 1000 | ದಾಸಿಮಾರ್ಯ ಸ್ಮಾರಕೋತ್ಸವ ಗ್ರಂಥ ಪ್ರಕಟನ ಶಾಖೆ |
| 28 | ದೃಷ್ಟಿದರ್ಶನ | ,, | 1967 | ಕ್ರೌನ್ | 8/1 | 250 | 2–00 | ಪ್ರಬಂಧ | 1000 | ಶ್ರೀ ಮಲ್ಲಪ್ಪಕೋರಿ, ಶಿರೂರು |
| 29 | ನವಲಿಂಗ ಸಾಹಿತ್ಯ | ,, | 1963 | ,, | 8/1 | 114 | 1–50 | ದಾರ್ಶನಿಕ | 1000 | ಶ್ರೀ ಚ.ಮ. ಕೋರಿ ಬಿಜಾಪುರ |
| 30 | ನಾನು–ನೀನು | ,, | 1951-52 | ,, | 16/1 | 48 | 0–20 | ಸಿದ್ಧಾಂತ | 3000 | — |
| 31 | ನಿಜಸುಖಿ ಅಪ್ಪಣ್ಣ | ,, | 1964 | ,, | 8/1 | 80 | 0–75 | ಚಾರಿತ್ರಿಕ | 1000 | ಶಿವೈಕ್ಯ ಜಿ. ಪೈಲಾರಪ್ಪನವರ ಮಕ್ಕಳು, ಬೆಂಗಳೂರು |

| ಗ್ರಂಥದ ಹೆಸರು | ಪ್ರಕಾಶನ | ವರ್ಷ | ಆಕಾರ | ಪುಟ | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|
| 32 ನಿವೇದನ | ಶ್ರೀ ಜ. ಚ. ನಿ. ಪುಸ್ತಕ ಭಂಡಾರ | 1965 | ಕ್ರೌ 8/1 | 96 | 2-00 | ಕವನ | 1000 | ಭ್ರಮರಾಂಬಾ ಬಳಗ ಅಕ್ಕಿಪೇಟೆ ಬೆಂಗಳೂರು |
| 33 ಪರಮಹಂಸ | ,, | 1956 | ,, 16/1 | 60 | 0-20 | ಸಿದ್ಧಾಂತ | 1000 | — |
| 34 ಪಂಚಾಚಾರ | [1] ಶಿವಾದ್ವೈತ ತತ್ತ್ವ ಪ್ರಚಾರ ಸಮಿತಿ ಗಿರಿಯಾಪುರ | 1954 | ,, 16/1 | 126 | 0-35 | ಸಿದ್ಧಾಂತ | 1000 | [1] — |
| | [2] ಶ್ರೀ ಜ. ಚ. ನಿ. ಪುಸ್ತಕ ಭಂಡಾರ | 1962 | | | | | | [2] ಗುರುಸೇವಾಧುರೀಣ ಶ್ರೀಮಂತ ಸಂಗಣ್ಣ ಪಂಪಣ್ಣ ಗಡಾದಶೆಟ್ಟರು, ಕೊಪ್ಪಳ |
| 35 ಪ್ರತಿಭಾಸಿದ್ಧರು ಪಂಡಿತಾರಾಧ್ಯರು | ,, ,, | 1966 | ,, 8/1 | 104 | 2-00 | ಚಾರಿತ್ರಿಕ | 1000 | ಶ್ರೀ ಪರಪ್ಪನವರು ಶ್ರೀಮತಿ ಶಿವಲಿಂಗಮ್ಮನವರು ಬೆಂಗಳೂರು |
| 36 ಬಸವಗೀತೆ | ಬಸವ ಸಮಿತಿ ಬೆಂಗಳೂರು | 1967 | ,, 8/1 | 500 | | ಸಂಪಾದನ | | ಬರಲಿದೆ. |
| 37 ಬಿಲ್ವ ಬಿನ್ನಾಣ | ಶ್ರೀ ಜ. ಚ. ನಿ. ಪುಸ್ತಕ ಭಂಡಾರ | 1963 | ,, 8/1 | 60 | 0-75 | ವಿಶ್ಲೇಷಣ | 1000 | ಶ್ರೀ ಹೆಚ್.ಎಂ. ಮುದ್ದವೀರಯ್ಯ ಶ್ರೀ ವೀರಣ್ಣಾರಾಧ್ಯರು, ಹೊನ್ನೇನಹಳ್ಳಿ ಕಡೂರು ತಾ\|\| |
| 38 ಬೇವು-ಬೆಲ್ಲ | ,, | 1959 | ,, 16/1 | 30 | 0-06 | | 1000 | — |
| 39 ಭಕ್ತಭೂಮಿಕೆ | — | — | — | | — | | — | ಬರಲಿದೆ- |
| 40 ಭಾವಗೀತಾಂಜಲಿ | ,, | 1967 | ,, 16/1 | | 1-00 | ಕವನ | 1000 | ಅಕ್ಕನ ಬಳಗ ವಿಜಯಪುರ. |

| | ಗ್ರಂಥದ ಹೆಸರು | ಪ್ರಕಾಶನ | ವರ್ಷ | ಆಕಾರ | ಪುಟ | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|---|
| 41 | ಮಣಿಕಾಂತಿ | ಶ್ರೀ ಶಿವಶಂಕರಪ್ಪ ಶ್ರೀ ಶಿವಲಿಂಗಪ್ಪ ಚಿತ್ತರಗಿ, ನಾಲತವಾಡ ಬಾಗಲಕೋಟೆ | 1951 | ಕ್ರೌ 8/1 | 195 | 2-00 | ಅನುವಾದ | 2000 | ಶ್ರೀ ಶಿವಶಂಕರಪ್ಪ, ಶಿವಲಿಂಗಪ್ಪ ಚಿತ್ತರಗಿ, ನಾಲತವಾಡ |
| 42 | ಮಣಿ ವಚನಗಳು | ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ ೩೦೦೦ ಮಠ, ಹುಬ್ಬಳ್ಳಿ | 1964 | ,, 8/1 | 430 | 4-00 | ,, | 1000 | ಜಗದ್ಗುರು ಮೂರುಸಾವಿರ ಮಠ ಹುಬ್ಬಳ್ಳಿ |
| 43 | ಮಣಿಮುಕುರಂ | ಶ್ರೀ ಜ. ಚ. ನಿ ಪುಸ್ತಕ ಭಂಡಾರ | 1956 | ,, 8/1 | 316 | 3-00 | ದಾರ್ಶನಿಕ ಮಹಾಕಾವ್ಯ | 1000 | ಧರ್ಮ ಧುರೀಣ ಶ್ರೀಮಂತ ಶಿ.ಸಂ. ಹೇರಲಗಿ, ಬಿಜಾಪುರ |
| 44 | ಮಹಾದೇವಿಯಮ್ಮನ ವಚನಗಳು | ,, | 1954 | ,, 8/1 | 80 | 0-75 | ಸಂಪಾದನ | | — |
| 45 | ಮುಪ್ಪಿನಾರ್ಯರ ಭಾವಪಾತ್ರಗಳು | ,, | 1948-53 | ,, 8/1 | 108 | 1-00 | ವಿಶ್ಲೇಷಣ | 1000 | ಶ್ರೀಮಂತ ಯಜಮಾನ್ ದೊಡ್ಡಪ್ಪ ನಾಗರಾಳ, ಹುನಗುಂದ |
| 46 | ಯುಗಮಹಿಳೆ ದುಗ್ಗಳೆ | ,, | 1963 | ,, 8/1 | 56 | 1-00 | ಚಾರಿತ್ರಿಕ | 1000 | ಭಕ್ತಿಭೂಷಣ ಜಿ.ಚಂದ್ರಗುಂಡಪ್ಪ ಬೆಂಗಳೂರು |
| 47 | ಯೋಗಿರಾಜ ಪ್ರಭುಕುಮಾರರು | ,, | | ,, 8/1 | | | ,, | 1000 | — |
| 48 | ಯೋಗ – ಕ್ಷೇಮ | ,, | | ,, 8/1 | | | ವಿಶ್ಲೇಷಣ | 1000 | — |
| 49 | ಯೋಗಾಂಗ ತ್ರಿವಿಧಿ | ,, | 1939-56 | ,, 12/1 | 20 | 0-06 | ಸಂಪಾದನ | 2000 | — |

| ಗ್ರಂಥದ ಹೆಸರು | ಪ್ರಕಾಶನ | ವರ್ಷ | ಆಕಾರ-ಪುಟ | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
| --- | --- | --- | --- | --- | --- | --- | --- |
| 50 ರನ್ನಚುಕ್ಕಿ | ಶ್ರೀ ಜ.ಚ.ನಿ. ಪುಸ್ತಕ ಭಂಡಾರ | 1956 | ಕ್ರೌನ್ 8/1 70 | 0–50 | ಕವನ | 1000 | ಶ್ರೀಮತಿ ಪುಟ್ಟಮ್ಮನವರು ಮಲ್ಲೇಶ್ವರಂ ಬೆಂಗಳೂರು |
| 51 ವಚನಾಂಜಲಿ | ,, | 1949 | ,, 8/1 101 | 1–50 | ವಚನ | 1000 | ಶ್ರೀಸಿದ್ದಪ್ಪ ಪಂಪಣ್ಣ ಶೆಟ್ಟರಕೊಪ್ಪಳ |
| 52 ವಚನ ಮಂಜರಿ | ,, | 1951-56 | ,, 8/1 122 | 1–50 | ವಚನ | 1000 | ಮಾಲೂರು ಶ್ರೀ ಶಂಕರಪ್ಪನವರು, ಮತ್ತು ಮಕ್ಕಳು |
| 53 ವಚನ ವಲ್ಲರಿ–೧ | ,, | 1958 | ,, 8/1 109 | 1–00 | ವಚನ | 1000 | ಶ್ರೀಮಂತ ಸಿದ್ದಣ್ಣನವರು ಗಡಾದ ಶೆಟ್ಟರು, ಕೊಪ್ಪಳ |
| 54 ವಚನ ವಲ್ಲರಿ–೨ | ಭ್ರಮರಾಂಬಾ ಬಳಗ | 1963 | ,, 8/1 201 | 3–00 | ,, | 1000 | ಭ್ರಮರಾಂಬಾ ಬಳಗ, ಬೆಂಗಳೂರು |
| 55 ವಿಭೂತಿ [ಪ್ರಶಸ್ತಿ] | ಶಿವಾದ್ವೈತ ತತ್ತ್ವಪ್ರಚಾರ ಸಮಿತಿ ಗಿರಿಯಾಪುರ | 1961 | ಡೆಮ್ಮಿ 8/1 764 | 8–00 | ಸಂಪಾದನ | 2000 | ಭಕ್ತಮಂಡಲಿ |
| 56 ವೇದಾಂತ-ಶಿವಸಿದ್ಧಾಂತ | ,, | 1965 | ,, 8/1 90 | 0–50 | ಸಿದ್ಧಾಂತ | 1000 | ಶಿವಾದ್ವೈತ ತತ್ತ್ವಪ್ರಚಾರ ಸಮಿತಿ ಕೇಂದ್ರ ಗಿರಿಯಾಪುರ |
| 57 ಶಿವಾದ್ವೈತ ದರ್ಶನ | ಶ್ರೀ ಜ. ಚ. ನಿ ಪುಸ್ತಕ ಭಂಡಾರ | 1963 | ಕ್ರೌನ್ 8/1 290 | 4–00 | ದಾರ್ಶನಿಕ | 1000 | ಶ್ರೀಮಾನ್ ಸಂಗಣ್ಣ ಪಂಪಣ್ಣ ಶೆಟ್ಟರು, ಕೊಪ್ಪಳ |

| | ಗ್ರಂಥದ ಹೆಸರು | ಪ್ರಕಾಶನ – ವರ್ಷ | | ಆಕಾರ-ಪುಟ | | | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|---|---|
| 58 | ಶೀಲ ಸಂಪಾದನೆ | ಶಿವಾದ್ವೈತ ತತ್ತ್ವಪ್ರಚಾರ ಕೇಂದ್ರ ಗಿರಿಯಾಪುರ | 1967 | ಕ್ರೌನ್ | 12/1 | 200 | 2-00 | ವಿಶ್ಲೇಷಣ | 1000 | ಲಿಂ॥ ಸಿ. ಪಿ. ಬಸವೇಗೌಡರ ಮಕ್ಕಳು ಚಿಕ್ಕಮಗಳೂರು |
| 59 | ಷಟ್‌ಸ್ಥಲ | 1. ,, | 1955 | ,, | 16/1 | 176 | 0-50 | ಸಿದ್ಧಾಂತ | 1000 | — |
| | | 2. ಶ್ರೀ ಜ. ಚ. ನಿ. ಪುಸ್ತಕ ಭಂಡಾರ | 1962 | | | | | | | ಶ್ರೀಮತಿ ಕರಿಬಸವಮ್ಮನವರು ಪಟ್ಟಣ ಶೆಟ್ಟರು, ಕುಷ್ಟಗಿ |
| 60 | ಸಮ್ಯಜ್ಞಾನಿ ಚೆನ್ನಬಸವಣ್ಣ | ,, | 1950 | ,, | 8/1 | 75 | 0-75 | ಸಮೀಕ್ಷಾತ್ಮಕ | 1000 | — |
| 61 | ಸಂಕ್ಷಿಪ್ತ ಶಿವಪೂಜಾವಿಧಿ | ,, | 1956 | ,, | 8/1 | 92 | 0-50 | ಸಿದ್ಧಾಂತ | 1000 | ಶ್ರೀ ಗಂಟಿ ಚಿಕ್ಕಲಿಂಗಪ್ಪನವರು ಬೆಂಗಳೂರು |
| 62 | ಸಂಸ್ಕಾರ | ,, | 1959 | ,, | 8/1 | 170 | 1-50 | ನಿಬಂಧ | 1000 | — |
| 63 | ಸಂವೇದನ | ಶ್ರೀ ಜ. ಚ. ನಿ. ಪುಸ್ತಕ ಭಂಡಾರ | | ,, | 8/1 | 100 | 1-50 | ಕವನ | 1000 | |
| 64 | ಸಾರಾಯ ಸಂಪತ್ ಚತುಷ್ಟಯ | ಭ್ರಮರಾಂಬಾ ಬಳಗ ಬೆಂಗಳೂರು | 1965 | ,, | 8/1 | 20 | 0-10 | ಸಂವಾದ | 1000 | ಶ್ರೀಮತಿ ಗು. ಶಂಕರಮ್ಮ ಕರಿಬಸವಪ್ಪನವರು |
| 65 | ಸೀಳ್ನುಡಿ | ಶ್ರೀ ಜ. ಚ. ನಿ. ಪುಸ್ತಕ ಭಂಡಾರ | | ,, | 8/1 | 75 | 0-75 | ಕಥನ | 1000 | — |
| 66 | ಸಾಕ್ಷಿನೆ | ,, | 1961 | ,, | 8/1 | 88 | 1-25 | ಕವನ | 1000 | — |

| ಗ್ರಂಥದ ಹೆಸರು | ಪ್ರಕಾಶನ | ವರ್ಷ | ಆಕಾರ | ಪುಟ | ಬೆಲೆ | ರೂಪ | ಪ್ರತಿಗಳ ಸಂಖ್ಯೆ | ಆಶ್ರಯದಾತರು |
|---|---|---|---|---|---|---|---|---|
| 67 ಹೊಗೊನೆ | ಶ್ರೀ ಜ. ಚ. ನಿ ಪುಸ್ತಕ ಭಂಡಾರ | 1959 | ಕ್ರಾ 8/1 | 106 | 1-00 | ಕವನ | 1000 | ಗುರುಸೇವಾಧುರೀಣ ಶ್ರೀ ಪಂಪಣ್ಣಶೆಟ್ಟರು ಕೊಪ್ಪಳ |
| 68 ಹೂ ಬೊಗಸೆ | ,, | 1960 | ,, 8/1 | 90 | 1-50 | ಕವನ (ಶಿವಯೋಗ ಮಂದಿರ ಸುವರ್ಣೋತ್ಸವ ಸ್ಮಾರಕ ಕೃತಿ) | 1000 | ಶ್ರೀಮತಿ ಬಿ. ಎಸ್. ಲಿಂಗಮ್ಮ ಅಲಸೂರು |
| 69 ಹೆಮ್ಮೆಗಳು | ,, | 1948 | ,, 8/1 | 53 | 0-62 | ವಿಶ್ಲೇಷಣ | 1000 | ಶ್ರೀಮಲ್ಲಿಕಾರ್ಜುನಗೌಡರು ಅಡ್ನೂರು |
| 70 ಹೊನ್ನ ಹಕ್ಕಿ | ,, | 1952 | ,, 8/1 | 94 | 1-25 | ಕವನ | 1000 | ಶ್ರೀಮಾನ್ ಕೆ. ಜಿ. ಬಸಪ್ಪನವರು ಕದಿರೇನಹಳ್ಳಿ, ಗೌರಿಬಿದನೂರು ತಾಲ್ಲೂಕ್ |
| 71 ಹೊಳಹು-ಸುಳುಹು | 'ಭವತಾರಿಣಿ' 52-ಚೌಳುಬೀದಿ ಬೆಂಗಳೂರು-2 | 1967 | ,, 12/1 | 120 | 1-50 | ವಿಶ್ಲೇಷಣ (ನವ್ಯಪ್ರಯೋಗ) | 1000 | ಚ. ಸುಂದರೇಶನ್, ಎಂ. ಎ. ಭವತಾರಿಣಿ 52, ಚೌಳುಬೀದಿ ಬೆಂಗಳೂರು-2 |

## ಶುಭ ಸಂದೇಶ

ಇವರು ತಮ್ಮ ಪ್ರತಿಭಾಶಕ್ತಿಯಿಂದ ಸೃಜಿಸಿದ ಅನೇಕ ಗ್ರಂಥರತ್ನಗಳ ಒಂದು ಮಾಲೆಯನ್ನು ಕನ್ನಡ ಸರಸತಿಗೆ ಕೊರಳ ಕಾಣಿಕೆಯಾಗಿ ಸಲ್ಲಿಸಿದ್ದಾರೆ. ನವರಸ ಭರಿತವಾದ ಕಾವ್ಯ ಝರಿಯು,ಇವರ ಹೃದಯದಿಂದ ಪುಟಿದು-ಹರಿದು ಬರುತ್ತಿದೆ. ಈ ಝರಿಯಲ್ಲಿ ಮೀಯದ ಕಬ್ಬಿಗರು ಇಲ್ಲವೆಂದೇ ಹೇಳಿದರೆ ಅತಿಶಯವೆನಿಸಲಾರದು. ಇವರು ಉಪನಿಷತ್ ಯುಗದಿಂದ ವಚನಯುಗದವರೆಗಿನ ಜ್ಞಾನವೆಲ್ಲವನ್ನೂ ಅಳವಡಿಸಿಕೊಂಡು ಅದನ್ನು ಈಗಿನ ಯಂತ್ರಯುಗಕ್ಕೆ ಸುಸಂಬದ್ಧವಾಗುವಂತೆ ತಮ್ಮದೇ ಆದ ಹೊಸ ಹಾದಿಯಲ್ಲಿ ಕನ್ನಡ ಸಾಹಿತ್ಯ ದೇವಿಯನ್ನು ಮುನ್ನಡೆಸಿದ್ದಾರೆ.

ಮರಳು ಗಾಡಿನಲ್ಲಿ ಓಯಾಸಿಸ್ (oasis) ಇದ್ದಂತೆ ಇಂದಿನ ಅನಿರ್ದಿಷ್ಟ ಜೀವನಕ್ಕೆ, ಇಂತಹ ಅಂತರಾಳದಿಂದಿಳಿದ ಅನುಭವ ಸಾಹಿತ್ಯದ ಅವಶ್ಯಕತೆ ತುಂಬಾ ಇದೆಯೆಂದು ನಾನಿಲ್ಲಿ ಪ್ರಸ್ತಾಪಿಸದೆ ಇರಲಾರೆವು. ನಮ್ಮ ಜನತೆ ಅವರ ರಜತೋತ್ಸವವನ್ನು ಆಚರಿಸುತ್ತಿರುವದು ಎಲ್ಲ ಬಗೆಯ ಔಚಿತ್ಯ ಪೂರ್ಣವಾಗಿದೆ. ಅವರ ಈ ಬೆಳ್ಳಿಹಬ್ಬದ ಬೆಳಗಿನ ಸಮಯದಲ್ಲಿ ನಾವು ನಮ್ಮ ಶುಭಾಶಯಗಳನ್ನು ಕೋರುತ್ತಿದ್ದೇವೆ.

**ಶ್ರೀ ಜಗದ್ಗುರು ಮೂರುಸಾವಿರ ಮಹಾಸಂಸ್ಥಾನ**
**ಮಠ ಹುಬ್ಬಳ್ಳಿ**